

ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಪದ್ಮ ಮಹಾಪುರಾಣ ಭಾಗ-4

**ಉತ್ತರಖಂಡ, ಕ್ರಿಯಾಯೋಗಸಾರ ಖಂಡ**


ಅನುವಾದ-ಲೇಖಕರು ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ



-: ಪ್ರಕಾಶಕರು :-

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 22956505, 22956573

ಫ್ಯಾಕ್ಸ್ : 0091-80-22956570

PADMA MAHAPURANA Part - 4 of Bhagavan Sri Vedavyasa Maharshi, edited and translated in to Kannada by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveswara Nagar, Shanti Colony, Hubli-580032 Ph : (0836) 2250250

First Edition : 1967

Second Edition : 2006

No. of Pages : xiii + 573

No. of Copies : 1,000



Price : Rs. 185 = 00

Printed at : **SRI VENKATESHWARA PRINTERS**
No. 3, Yellappa Road, Susheela Road Cross
Chickmavalli, Lalbagh Crumbigal Road Cross
BANGALORE-560 004
Phone : 26573001

# ಪ್ರಸ್ತಾವನೆ

ಪುರಾಣಗಳು ಭಾರತೀಯ ಸಂಸ್ಕೃತಿಯ ಅಮೂಲ್ಯ ನಿಧಿ. ಸನಾತನ ಧರ್ಮದ ಆಚಾರ ವಿಚಾರಗಳ ಆಗರ. ಹಿಂದೂದೇಶದ ಅಂದಿನ ಜನಜೀವನಕ್ಕೆ ಹಿಡಿದ ಕನ್ನಡಿ. ನಮ್ಮ ನಾಡಿನ ಹಿರಿಯರು ಬಾಳಿ ಬದುಕಿದ ಬಗೆಯನ್ನು ತಿಳಿಸಿ ಮುಂದಾದರೂ ಮಾನವರ ಜೀವನರಥವು ನ್ಯಾಯನೀತಿಗಳ ಆದರ್ಶಪಥದಲ್ಲಿ ಹೇಗೆ ಮುಂದುವರಿಯ ಬೇಕೆಂಬುದನ್ನು ಈ ಪುರಾಣಗಳು ತಿಳಿಸಿಕೊಡುತ್ತವೆ. ಹದಿನೆಂಟು ಪುರಾಣಗಳಲ್ಲಿ ಗುಣಗಾತ್ರಗಳಲ್ಲಿ ಅತಿದೊಡ್ಡದಾದ ಸ್ಕಂದ ಪುರಾಣ ಬೃಹತ್ತಮ. ಅದರನಂತರ ಪದ್ಮಪುರಾಣವೇ ದೊಡ್ಡದಾಗಿ ಗಾತ್ರದಲ್ಲಿ ಬೃಹತ್ತರವೂ ಗುಣದಿಂದ ಮಹತ್ತರವೂ ಎನಿಸಿದೆ. ಇದರ ಗ್ರಂಥ ಸಂಖ್ಯೆ ಐವತ್ತೈದು ಸಾವಿರದಷ್ಟಿದೆ.

''ಪದ್ಮಂ ತತ್ ಪಂಚಪಂಚಾಶತ ಸಹಸ್ರಾಣೀಹ ಪಠ್ಯತೇ''

ಎಂಬ ವಚನಾನುಸಾರ ಇದರ ಶ್ಲೋಕ ಸಂಖ್ಯೆ ಅರ್ಧ ಲಕ್ಷಕ್ಕೂ ಮಿಕ್ಕಿದೆ. ಇದರಲ್ಲಿ ಸೃಷ್ಟಿ ಖಂಡ, ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ, ಉತ್ತರಖಂಡ ಎಂದು ಐದುಖಂಡ ಗಳಿವೆ. ಇದರಲ್ಲಿ ಮೊದಲನೆಯದಾದ ಸೃಷ್ಟಿಖಂಡದಲ್ಲಿ ಐದು ಪರ್ವಗಳಿವೆ. ಇವುಗಳಲ್ಲಿ ಮೊದಲಿನ ನಾಲ್ಕು ಖಂಡಗಳು ಎರಡು ಸಂಪುಟಗಳಲ್ಲಿ ಮುದ್ರಿಸಿದ್ದೇವೆ. ಈಗ ಐದನೆಯ ಉತ್ತರಖಂಡದ ಅನುವಾದವನ್ನು ಕನ್ನಡ ಪದ್ಮಪುರಾಣದ ಮೂರನೇಯ ಸಂಪುಟದಲ್ಲಿ ಮಾಡಿಕೊಡಲಾಗಿದೆ. ಉತ್ತರಖಂಡವು ಮತ್ತು (ಕೊನೆಯ)ಕ್ರಿಯಾಯೋಗಸಾರ ಖಂಡವು ದೊಡ್ಡದಿದ್ದು ಮುಂದಿನ ನಾಲ್ಕನೇಯ ಸಂಪುಟದಲ್ಲಿ ಪೂರ್ಣಗೊಳ್ಳುವುದು.

## ಉತ್ತರ ಖಂಡದಲ್ಲಿ

ಶ್ರೀ ವೇದವ್ಯಾಸ ಪ್ರಣೀತವಾದ ಹದಿನೆಂಟು ಪುರಾಣಗಳಲ್ಲಿ ಪದ್ಮಪುರಾಣ ವಿಶಿಷ್ಟ ಹಾಗೂ ಶ್ರೇಷ್ಠ. ಬಗೆಬಗೆಯ ನೀತಿಬೋಧಕವಾದ ನಿದರ್ಶನ ಹಾಗೂ ಬೋಧಪ್ರದವಾದ ಅನೇಕ ಆಖ್ಯಾನ ಉಪಾಖ್ಯಾನಗಳ ಮುಖಾಂತರ ಜನರಲ್ಲಿ ಭಕ್ತಿಭಾವವನ್ನು ಬೆಳೆಸಿ ನೈತಿಕ ನೆಲೆಗಟ್ಟಿನ ಮೇಲೆ ಧರ್ಮಪ್ರಧಾನವಾದ ಸುಂದರ ಬಾಳಿನ ಹಂದರವನ್ನು ಹಬ್ಬಿಸುವಲ್ಲಿ ಈ ಪುರಾಣವು ಯಶಸ್ವಿಯಾಗಿದೆ. ಪದ್ಮಪುರಾಣದ ಈ ಉತ್ತರಖಂಡ- ಕ್ರಿಯಾಯೋಗಸಾರ ಖಂಡದಲ್ಲಿ ಅನೇಕಾನೇಕ ತೀರ್ಥಕ್ಷೇತ್ರಗಳ ಪ್ರಭಾವ ಹಾಗೂ ಮಾಹಾತ್ಮ್ಯದ ನಿರೂಪಣೆ ಯಲ್ಲದೆ, ಭಗವದ್ಗೀತೆ ಹಾಗೂ ಭಾಗವತದಂಥ ಭಾರತೀಯ ಸಾರಸ್ವತ ನಿಧಿಯ ಪ್ರಭಾವ ಪರಿಚಯವನ್ನು ಕೂಡ ಬಗೆಬಗೆಯ ಅನುಭವ ಆವಿಷ್ಕಾರದೊಂದಿಗೆ ಹೃದ್ಯವಾಗಿ ನಿರೂಪಿಸಲಾಗಿದೆ.

ಪರ್ವತಾಖ್ಯಾನ, ಜಾಲಂಧರನ ಕಥೆ, ಶ್ರೀಶೈಲಾದಿಕ್ಷೇತ್ರ, ಸಮುದ್ರ, ಗಂಗಾ ಪ್ರಯಾಗ, ಕಾಶಿ, ಗಯಾ ಮುಂತಾದ ತೀರ್ಥಕ್ಷೇತ್ರಗಳ ಬಣ್ಣನೆ, ಇಪ್ಪತ್ತನಾಲ್ಕು ಏಕಾದಶೀ ವ್ರತಗಳ ಮಹಿಮೆ ವರ್ಣನೆ, ವಿಷ್ಣುಧರ್ಮ, ವಿಷ್ಣು ಸಹಸ್ರನಾಮ, ಕಾರ್ತಿಕ ವ್ರತ, ಮಾಘಸ್ನಾನ, ನರಸಿಂಹವೃತ್ತಾಂತ, ವಿಷ್ಣು ಮತ್ತು ಶಿವರ ಪೂಜಾದಿಗಳು, ವಿಷ್ಣು ಮತ್ತು ರಾಮಸಹಸ್ರನಾಮಗಳಂತಹ ಸಹಸ್ರನಾಮಗಳ ಮಹಿಮೆ ಕರ್ಮ ಮತ್ತು ಅದರ ಫಲ ದೇವಶರ್ಮಾಖ್ಯಾನ, ಗೀತಾ ಮಹಾತ್ಮ್ಯ, ಭಾಗವತ ಮಹಾತ್ಮ್ಯ, ಮಂತ್ರರತ್ನಾಭಿಧಾನ, ಮತ್ಸ್ಯಾದಿ ದಶಾವತಾರ ಕಥಾ, ರಾಮನಾಮ ಮಹಾತ್ಮ್ಯ, ಭೃಗುಕೃತ ವಿಷ್ಣು ವೈಭವ ಪರೀಕ್ಷಾ ಮುಂತಾಗಿ ಅನೇಕ ವಿಷಯ ವಿಶೇಷಗಳು ಪ್ರತಿಪಾದಿತವಾಗಿವೆ.

ಪದ್ಮಪುರಾಣದ ಕೊನೆಯ ಭಾಗವನ್ನು ಈಗ ವಾಚಕರ ಮುಂದೆ ಇರಿಸುತ್ತಿದ್ದೇವೆ. ಇದರಲ್ಲಿ ಶ್ರೀ ನೃಸಿಂಹ, ವಾಮನ, ಪರಶುರಾಮ, ರಾಮಕೃಷ್ಣ ಚರಿತ್ರೆಗಳಲ್ಲದೇ ಅನೇಕ

ಸಾಮಾನ್ಯ ಜನರ ಆಖ್ಯಾನಗಳೂ ಬಂದಿರುತ್ತವೆ. ಪ್ರಾಚೀನಕಾಲದಲ್ಲಿ ಬೇಡ ಅಂತ್ಯಜ, ಶೂದ್ರ, ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಮುಂತಾದ ಬೇರೆ ಬೇರೆ ಜಾತಿ ಜನಾಂಗದವರೂ ಕೂಡ ಜ್ಞಾನ, ಭಕ್ತಿ, ವೈರಾಗ್ಯ, ನೀತಿ, ನಿಯಮ, ನಿಯತ್ತು, ಪ್ರಾಮಾಣಿಕತೆ, ಸಂಯಮಮಯವಾದ ಅಧ್ಯಾತ್ಮಿಕ ಪ್ರಪಂಚದ ಜೀವನಮೌಲ್ಯಗಳಿಗೆ ಹೇಗೆ ಸರಿಯಾಗಿ ಸ್ಪಂದಿಸುತ್ತಿದ್ದರು ಎಂಬುದಕ್ಕೆ ಇದರಲ್ಲಿ ಹೇರಳವಾಗಿ ದೃಷ್ಟಾಂತಗಳು ದೊರಕುತ್ತವೆ. ವೇಶ್ಯೆಯರ ಬಾಳಿನಗೋಳಿನ ಕಥೆ ವ್ಯಥೆಗಳಲ್ಲಿಯೂ, ದರೋಡೆ ಕೋರರ ಪ್ರಾಣಾಂತಿಕ ದುಃಸಾಹಸ ದಲ್ಲಿಯೂ, ಪಶು ಪಕ್ಷಿ ಪ್ರಾಣಿವರ್ಗದ ನೋವು ನರಳಾಟಗಳಲ್ಲಿಯೂ ಸೂಕ್ಷ್ಮ ದುಃಖದ ಕ್ಷೀಣ ಧ್ವನಿಯನ್ನು ಗುರುತಿಸಿ ಅದಕ್ಕೆಲ್ಲ ಅಧ್ಯಾತ್ಮಿಕ ಪರಿಹಾರವನ್ನು ಈ ಪುರಾಣ ಒದಗಿಸುತ್ತದೆ.

ಬೆಂದೊಡಲಿನ, ನೊಂದಜೀವಗಳ, ಪತಿತ ದಲಿತರ ಕಣ್ಣೀರನ್ನು ಒರಿಸಲು ಈ ಪುರಾಣದ ಹಿರಯ ಜೀವಗಳು ಹೆಣಗುತ್ತಿರುವದನ್ನು ಈ ಗ್ರಂಥದುದ್ದಕ್ಕೂ ನಾವು ಕಾಣಬಹುದು. ಈ ಸಮಗ್ರ ಪದ್ಮ ಪುರಾಣದಲ್ಲಿ ಅಲ್ಲಲ್ಲಿ ಸಮಾಜದ ಕೆಳಮಟ್ಟದಲ್ಲಿದ್ದ ಕಳ್ಳ, ಕೊಲೆಗಡಕ, ವೇಶ್ಯೆ, ಅಸ್ಪೃಶ್ಯ, ದಲಿತ, ಪತಿತ, ದುಃಖಿತರ ಸಂತಪ್ತ ಜೀವನವನ್ನು ನೀತಿಯ ನೆಲಗಟ್ಟಿನ ಮೇಲೆ ಗಟ್ಟಿಯಾಗಿ ನಿಲ್ಲಿಸಿ ಆ ಒಡೆದ ಬಾಳಿನಲ್ಲಿಯೂ ಭಕ್ತಿ ಪ್ರೀತಿ ಮಿಡಿಯುವಂತೆ ಮಾಡಿ ಭುಕ್ತಿ ಮುಕ್ತಿ ಎರಡೂ ಎಲ್ಲರಿಗೂ ಎಟುಕುವಂತೆ ಮಹಾ ಪ್ರಯತ್ನ ಪರಂಪರೆ ಕಂಡು ಬರುತ್ತದೆ. ಮುಖ್ಯವಾಗಿ ಈ ಪದ್ಮ ಪುರಾಣವು ವೈಷ್ಣವ ಪುರಾಣವಾಗಿದೆ. ಇದರ ಬಹು ಭಾಗವು ಶ್ರೀವಿಷ್ಣುವಿನ ಪರಮೋತ್ಕರ್ಷವನ್ನು ಅನೇಕ ಆಖ್ಯಾನ ಉಪಾಖ್ಯಾನ ಸಂವಾದ ಉಪದೇಶ ಮುಂತಾದವುಗಳಿಂದ ಪ್ರತಿಪಾದಿಸಲಿಕ್ಕಾಗಿಯೇ ಹೊರಟಿದೆ. ಅನೇಕ ಸಂದರ್ಭದಲ್ಲಿ ಮಹಾದೇವರ ಹಾಗು ಬ್ರಹ್ಮದೇವರ ಮಹಾ ಮಹಿಮೆಗಳೂ ಚೆನ್ನಾಗಿಯೇ ಪ್ರತಿಪಾದಿಸಲ್ಪಟ್ಟಿವೆ. ಅನೇಕ ಸಂದರ್ಭ ಗಳಲ್ಲಿ ಸ್ಪಷ್ಟ ವಚನಗಳಿಂದ ಒಬ್ಬನೇ ಪರಮಾತ್ಮನು. ಬ್ರಹ್ಮ, ಶಿವ, ಹರಿರೂಪಿಯಾಗಿ ಅವರವರಲ್ಲಿ ನಿಂತು ಸೃಷ್ಟಿ ಸ್ಥಿತಿ ಸಂಹಾರಾದಿ ಕಾರ್ಯಗಳನ್ನು ಮಾಡುವನೆಂದು ಹೇಳಲಾಗಿದೆ.

ಈ ಐದುಖಂಡಗಳನ್ನು ನಾಲ್ಕು ಭಾಗಗಳಲ್ಲಿ ಇತ್ತೀಚಿಗೆ ಅಂದರೆ ೨೦೦೬ನೇ ಇಸವಿಯಲ್ಲಿ ದ್ವಿತೀಯ ಮುದ್ರಣ ಮಾಡಿ ಪ್ರಕಟಿಸಿದ್ದೇವೆ. ಅದರಲ್ಲಿ ಪದ್ಮಮಹಾಪುರಾಣ ಭಾಗ-೧ ಸೃಷ್ಟಿಖಂಡ, ಭಾಗ-೨ರಲ್ಲಿ ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ, ಭಾಗ-೩ರಲ್ಲಿ ಉತ್ತರಖಂಡ ಶುರುವಾಗಿ ಪದ್ಮಮಹಾಪುರಾಣ ಭಾಗ-೪ರಲ್ಲಿ ಉತ್ತರಖಂಡ ಸಂಪೂರ್ಣವಾಗುವುದರೊಂದಿಗೆ ವೇದವ್ಯಾಸರಚಿತ ಬೃಹತ್ ಪದ್ಮಮಹಾಪುರಾಣ ಕನ್ನಡಾನುವಾದವು ಭಾಗ-೧, ಭಾಗ-೨, ಭಾಗ-೩, ಭಾಗ-೪ ಒಟ್ಟು ನಾಲ್ಕು ಭಾಗದಲ್ಲಿ ಹಾಗೂ ಕ್ರಿಯಾಯೋಗಸಾರ ಖಂಡ ಸಂಪೂರ್ಣವಾಗಿ ಮುದ್ರಣಗೊಂಡಿದೆ. (ಈ ಹಿಂದೆ ಈ ಐದು ಖಂಡಗಳೂ ಒಟ್ಟು ಏಳು ಭಾಗದಲ್ಲಿ ಮುದ್ರಣವಾಗಿದ್ದು ಸರಿಯಷ್ಟೆ. ಈ ಹಿಂದೆ ಏಳುಭಾಗದಲ್ಲಿ ಮುದ್ರಣವಾಗಿದ್ದನ್ನೇ, ಒಂದರಕ್ಷರವೂ ಬಿಡದಂತೆ ಯಥಾವತ್ತಾಗಿ ಕಂಪ್ಯೂಟರ್ ಅಕ್ಷರ ಜೋಡಣೆ ತಾಂತ್ರಿಕತೆ ಹಾಗೂ ಮುದ್ರಣಕಾರರಾದ ಚಿರಂಜೀವಿ ಶ್ರೀವೆಂಕಟೇಶ್ವರ ಪ್ರಿಂಟರ್ಸ್ ಮಾಲೀಕರಾದ ಕೆ.ವಿ. ಸತ್ಯನಾರಾಯಣರವರ ಶ್ರದ್ಧೆ ಹಾಗೂ ಅವರ ತಂದೆಯವರಿಂದ ಕಲಿತ ಮುದ್ರಣ ಕೌಶಲ್ಯದ ಅಪಾರ ಜ್ಞಾನ ಹಾಗೂ ಆಸಕ್ತಿಯಿಂದ ಬರೀ ನಾಲ್ಕು ಭಾಗಗಳಲ್ಲೇ ಮುದ್ರಣ ಪೂರ್ಣಗೊಳಿಸಲಾಗಿದೆ)

ಹುಬ್ಬಳ್ಳಿ — ಮಹಾಮಹೋಪಾಧ್ಯಾಯ

ದಿನಾಂಕ 24 – 2 – 2006 — ಪಂ. ಪಂಢರೀನಾಥಾಚಾರ್ಯಗಲಗಲಿ

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತು ಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಹಾಗೂ ಸ್ವತಃ ಕವಿ ಪಂಡಿತರಾದ ಶ್ರೀಹರಿಖೋಡೆಯವರು. ಹತ್ತು ಸಾವಿರ ಸಿರಿವಂತರಲ್ಲಿ ಒಬ್ಬರಿಗೂ ಇರದಿರುವ ವಾಕ್‌ಚಾತುರ್ಯ, ಕವಿತ್ವಕೌಶಲ್ಯ ಇವರ ಸೊತ್ತಾಗಿದೆ. ಇವರು ಒಂದು ಗಾಯತ್ರೀ ಹೋಮ ಮಾಡಿಸಿದರೆ ಅದೊಂದು ಅಭೂತ ಪೂರ್ವವಾದ '**ನ ಭೂತೋ ನ ಭವಿಷ್ಯತಿ**' ಎನ್ನುವಂಥ ಮಹಾಕಾರ್ಯವಾಗಿತ್ತು. ಅದರ ವೈಭವ ಪೂರ್ಣವಾದ ಆಚರಣೆಯ ನೆನಪು ಬೆಂಗಳೂರು ನಾಗರಿಕರಲ್ಲಿ ಹಚ್ಚಹಸಿರಾಗಿಯೇ ಇದೆ.

ಮುಖ್ಯವಾಗಿ ವಿಷ್ಣು, ವರಾಹ, ಕೂರ್ಮಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದಾರಪರ್ವತವನ್ನು ಹೊತ್ತಂತೆ, ಶ್ರೀಹರಿಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನೆ ಅನುವಾದನ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದಾರೆ.

ಶ್ರೀಹರಿಖೋಡೆಯವರ ಇನ್ನೊಂದು ಅಪೂರ್ವವಾದ ವೈಶಿಷ್ಟ್ಯ, ಅವರೊಬ್ಬ ಶ್ರೀಹರಿಯ ಪರಮಭಕ್ತರು, ಮಹಾಕವಿಗಳು. ದೇವರ ಮೇಲೆ ಅವರು ಭಾವಪೂರ್ಣವಾದ ಅನೇಕ ಹಾಡುಗಳನ್ನು, ಸುಶ್ರಾವ್ಯವಾದ ಕಾವ್ಯಗಳನ್ನೂ ಸ್ವಂತ ರಚಿಸಿದ್ದಾರೆ. ಶ್ರೀಹರಿಯ ಅಂಕಿತದಿಂದ ಅಲಂಕೃತವಾದ ಈ ಪದ್ಯಗಳು ಪುರಂದರದಾಸ, ಕನಕದಾಸ, ಜಗನ್ನಾಥದಾಸ ರಂಥ ದಾಸಕೂಟ ಧುರೀಣರ ಭಕ್ತಿಪರ ಹಾಡುಗಬ್ಬಗಳ ಹೆದ್ದಾರಿಯಲ್ಲಿ ಇರಿಸಿದ ಹೆಜ್ಜೇನಿನ ಹೆಜ್ಜೆಗಳಾಗಿವೆ. ಅನುಭವಿ ಸಂತ ಶರೀಫಸಾಹೇಬರ ಪ್ರಭಾವಲಯದ ಪ್ರಭಾವಿ ಪರಿಧಿಯಲ್ಲಿ ಚಂಕ್ರಮಣ-ಸಂಕ್ರಮಣ ಗೈಯುವ ಶ್ರೀಹರಿಖೋಡೆಯವರ ಆಡುನುಡಿಯ ತಾಳಲಯ ಬದ್ಧವಾದ ಹಾಡುಗಳು ಕೇಳುಗರ ಹೃದಯನಾಡಿಗಳನ್ನು ಮಿಡಿಯುತ್ತವೆ.

ಸ್ವತಃ ಸಿವಿಲ್ ಇಂಜನಿಯರಿಂಗ್ ವ್ಯಾಸಂಗಮಾಡಿರುವ ಶ್ರೀಹರಿಖೋಡೆಯವರೇ ಬೆಂಗಳೂರಿನಲ್ಲಿ ಅತ್ಯಾಧುನಿಕ ಕಂಪ್ಯೂಟರ್ ಭವನವನ್ನು ನಿರ್ಮಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿನ ಕಂಪ್ಯೂಟರ್ ಭವನಗಳಿಗೆ ಸ್ವತಃ ಭೇಟಿ ಮಾಡಿ, ಆ ಎಲ್ಲಾ ಭವನಗಳ ವಿನ್ಯಾಸ ದಲ್ಲಿನ ನ್ಯೂನತೆಗಳನ್ನು ಪರಿಶೀಲಿಸಿ, ಮನಗಂಡು ಹಾಗೂ ಅನುಕೂಲತೆಗಳನ್ನು ಮೆಚ್ಚಿ ಆಯಾ ಕಂಪ್ಯೂಟರ್ ಭವನಗಳ ಪಾಶ್ಚಾತ್ಯ ವಿನ್ಯಾಸಕರಲ್ಲಿ ಕೂಲಂಕುಷವಾಗಿ ಚರ್ಚಿಸಿ,

ಶ್ರೀಹರಿಖೋಡೆಯವರೇ ವಿನ್ಯಾಸಮಾಡಿರುವ ಹಾಗೂ ತಾವೇ ಖುದ್ದು ನಿಂತು ಕಟ್ಟಿಸಿರುವ ಖೋಡೇ ಕಾಂಟ್ಯಾಕ್ಟ್ ಸೆಂಟರ್ ಎಂಬ ಕಂಪ್ಯೂಟರ್ ಭವನದಲ್ಲಿ ಒಂದು ಸಾವಿರ ಕಂಪ್ಯೂಟರ್ ಇಂಜನಿಯರುಗಳು, ವಿಜ್ಞಾನಿಗಳು ಅಹೋರಾತ್ರಿ ಕೆಲಸ ಮಾಡುತ್ತಿದ್ದಾರೆ. ಅದಕ್ಕಾಗಿ ನಮ್ಮ ಹಾಗೂ ಅವರ ಕುಲಸ್ವಾಮಿಯಾದ ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆಯುಷ್ಯ, ಆರೋಗ್ಯ, ಐಶ್ವರ್ಯ, ವಿಜಯ ವೀರ್ಯ ಸೌಭಾಗ್ಯಗಳನ್ನು ದಯಪಾಲಿಸಿ ಉತ್ತರೋತ್ತರ ಉತ್ಕರ್ಷವನ್ನೂ ಶ್ರೇಯಸ್ಸನ್ನೂ ಕೊಟ್ಟು ಕರುಣೆಯಿಂದ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ಪದ್ಮಪುರಾಣ ಗ್ರಂಥದ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ **ಶ್ರೀ ವೆಂಕಟೇಶ್ವರ ಪ್ರಿಂಟರ್ಸ್**, 3, ಯಲ್ಲಪ್ಪರಸ್ತೆ, ಚಿಕ್ಕಮಾವಳ್ಳಿ, ಸುಶೀಲ ರಸ್ತೆ, ಬೆಂಗಳೂರು-4 ಇದರ ಮಾಲೀಕರಾದ **ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ** ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತೆಂಟು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಈ ಹಿಂದೆ ಅಕ್ಷರಜೋಡಣೆ ವಿಧಾನದಿಂದ ಮುದ್ರಣಗೊಂಡ ಐದು ಖಂಡಗಳನ್ನೊಳಗೊಂಡ (ಸೃಷ್ಟಿಖಂಡ, ಭೂಮಿಖಂಡ, ಸ್ವರ್ಗಖಂಡ, ಪಾತಾಳಖಂಡ, ಉತ್ತರಖಂಡ) ಏಳು ಸಂಪುಟಗಳನ್ನೂ ಯಥಾವತ್ತಾಗಿ ಒಂದಕ್ಷರವೂ ಬಿಡದೆ ಕಂಪ್ಯೂಟರ್ ಅಕ್ಷರ ಜೋಡಣೆ ತಾಂತ್ರಿಕತೆ ಹಾಗೂ ಅವರ ತಂದೆಯವರಿಂದ ಕಲಿತ ಮುದ್ರಣ ಕೌಶಲ್ಯದ ಅಪಾರ ಜ್ಞಾನ, ಆಸಕ್ತಿಯಿಂದ ನಾಲ್ಕು ಸಂಪುಟಗಳಲ್ಲೇ ಈ ಪದ್ಮಮಹಾಪುರಾಣವನ್ನು ಪೂರ್ಣಗೊಳಿಸಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜನಗರ, ಬೆಂಗಳೂರು ರವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀ ಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕಾಪಾಡಲಿ ಎಂದು ಆಶಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ

ಹುಬ್ಬಳ್ಳಿ — ಪಂ. ಪಂಢರೀನಾಥಾಚಾರ್ಯಗಲಗಲಿ

ದಿನಾಂಕ 24 – 2 – 2006 — ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

# ಪದ್ಮ ಪುರಾಣ ಭಾಗ - ೪

## ಉತ್ತರಖಂಡ, ಕ್ರಿಯಾಯೋಗಸಾರ ಖಂಡ

## ವಿಷಯಾನುಕ್ರಮಣಿಕೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ ಪುಟಸಂಖ್ಯೆ

ಅಧ್ಯಾಯ

# ಕ್ರಿಯಾಯೋಗಸಾರ

ಪುಟಸಂಖ್ಯೆ



—○—

ಶ್ರೀ

# ಪುರಾಣ ಪ್ರಜ್ಞೆ

ಭಾರತೀಯ ಸಂಸ್ಕೃತಿಯ ಸಂಕೇತವಾಗಿ ಇಂದಿಗೂ ಅಳಿಯದೆ ಉಳಿದಿರುವ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಪುರಾಣಗಳಿಗೆ ಪ್ರಧಾನ್ಯವಿದೆ. ಭಾರತೀಯ ಸಂಸ್ಕೃತಿ ಬೆಳೆದು ಮಹಾವಟವೃಕ್ಷವಾಗಿ ನೆರಳು ನೀಡುತ್ತಿರುವ ಕಥೆ ಈ ಪುರಾಣಗಳಿಂದ ಚೆನ್ನಾಗಿ ತಿಳಿದುಬರುತ್ತದೆ. ಭಾರತೀಯರ ಜನಜೀವನದ ಪ್ರತಿಬಿಂಬವೇ ಈ ಪುರಾಣಗಳು.

ವೇದಗಳನ್ನು ಬಿಟ್ಟರೆ ಪುರಾಣಗಳಿಗೆ ಹೆಚ್ಚುಮಹತ್ವ. ಇದಕ್ಕೆ 'ಪಂಚಮವೇದ' ಎಂದೂ ಕರೆಯುತ್ತಾರೆ. ಶ್ರುತಿ, ಸ್ಮೃತಿ ಮತ್ತು ಇತಿಹಾಸಗಳಿಗೆ ಧರ್ಮಾದಿ ವಿಷಯಗಳ ವರ್ಣನೆ ಮತ್ತು ನಿರೂಪಣೆಯಲ್ಲಿ ಸಮಸಮವಾಗಿ ತೂಗುವ, ಸತ್ಯ, ತತ್ವ ಮತ್ತು ಮಹತ್ವವೇನೆ ಇದ್ದರೂ ಆದ ಪುರಾಣಗಳಿಂದ ಬರುತ್ತದೆ.

ಅಮರಸಿಂಹನ ನಾಮಲಿಂಗನುಶಾಸನದಲ್ಲಿ ಪುರಾಣದಲ್ಲಿರುವುದನ್ನು ಈ ರೀತಿ ಹೇಳುತ್ತಾರೆ.

**''ಆಖ್ಯಾಯಿಕೋಪಲಬ್ದಾರ್ಥಾಪುರಾಣ ಪಂಚಲಕ್ಷಣಂ,**
**ಸ್ವರ್ಗಶ್ಚ ಪ್ರತಿಸ್ವರ್ಗಶ್ಚ ವಂಶೋಮನ್ವಂತರಾಶಿ ಚ**
**ವಂಶಾನುಚರಿತಂ ಚೈವ ಪುರಾಣಂ ಪ್ರಂಚಲಿಪುಣಂ''**

ಒಟ್ಟು ಹದಿನೆಂಟು ಪುರಾಣಗಳು, ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ವರಾಹ, ಲಿಂಗ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಇವುಗಳು ನಾಲ್ಕು ಲಿಪಿ ಶ್ಲೋಕಗಳಲ್ಲಿ ಬಂದಿವೆ.

ಪ್ರಸ್ತುತ ಪಂಡಿತ ಪಂಢರೀನಾಥಾಚಾರ್ಯ ಗಲಗಲಿಯವರು ಬಹುಶ್ರಮದಿಂದ ಈ ಪುರಾಣಗಳನ್ನು ಲೇಖಾನುವಾದ ಮಾಡಿದ್ದಾರೆ. ಭಾರತದೇಶದ, ವಿಶೇಷವಾಗಿ ಕರ್ನಾಟಕದ ಜನತೆಯ ಮನೆ-ಮನದಲ್ಲಿ ಅವರು ಪ್ರಾಥಸ್ಮರಣೀಯರು.

ಆದ್ದರಿಂದ ಈ ಎಲ್ಲಾ ಹದಿನೆಂಟುಪುರಾಣಗಳನ್ನು ಪಠಿಸಿ, ಕೇಳಿ, ಮನನ ಮಾಡಿಕೊಂಡು ಬಾಳನ್ನು ಸಾರ್ಥಕಗೊಳಿಸಿಕೊಳ್ಳೋಣ. ಹಾಗೆಯೇ. ''ಅಬ್ಧಿಗೆ ಅತಿ ಮಿತಿಯುಂಟು, ಆದರೆ ಬುದ್ಧಿಗೆ ಮಿತಿಯಿಲ್ಲ.'' ಆದ್ದರಿಂದ ಪ್ರಜ್ಞರು, ಬಲ್ಲವರು ಈ ಪುರಾಣಗಳಲ್ಲಿ ಬರುವ, ವಸ್ತು, ಪಾತ್ರ, ಶೈಲಿ, ನಿರೂಪಣೆ ಮತ್ತು ಭಾಷೆಯ ಬಗ್ಗೆ ತಮ್ಮ ಅಭಿಪ್ರಾಯ ಮತ್ತು ಲೋಪದೋಷ, ಜಿಜ್ಞಾಸೆಗಳೇನಾದರೂ ಕಂಡು ಬಂದಲ್ಲಿ ಅದನ್ನು ತಮ್ಮ ಪ್ರತಿಯಲ್ಲಿ ತಿದ್ದಿ ತಿಳಿಸಿದರೆ ಆದರಬದಲು ತಮ್ಮಗೆ ಮತ್ತೊಂದು ಶುದ್ಧಪ್ರತಿಯನ್ನು ನೀಡಲಾಗುವುದು. ಹಾಗೂ ತಾವು ತೋರಿಸಿದ ಲೋಪ- ದೋಷಗಳನ್ನು ಪರಿಷ್ಕರಿಸಿ ದ್ವಿತೀಯ ಮುದ್ರಣದಲ್ಲಿ ಅಳವಡಿಸಿ ಕೊಳ್ಳಲು ಸಂಪಾದಕ ವರ್ಗವು ಸದಾ ಸಿದ್ಧವಿದೆ. ದ್ವಿತೀಯಮುದ್ರಣದ ನಂತರ ತಮಗೆ ಉಡುಗೊರೆಯ ಜೊತೆ ನೂತನ ಪರಿಷ್ಕರಿಸಿದ ಪ್ರತಿಯನ್ನೂ ಸಹ ನೀಡಲಾಗುವುದು. ತಮ್ಮ ಅಭಿಪ್ರಾಯವನ್ನು ಅತ್ಯಂತ ಆದರದಿಂದ ಸ್ವಾಗತಿಸುತ್ತೇವೆ. ದಯವಿಟ್ಟು ಈ ಅನಂತಸಾಗರ ಪುರಾಣಪ್ರಜ್ಞಾ ಕೈಂಕರ್ಯದಲ್ಲಿ ತಮ್ಮ ಪಾಂಡಿತ್ಯವನ್ನು ವಿನಿಯೋಗಿಸಿ. ಹಾಗೂ ದ್ವಿತೀಯ ಮುದ್ರಣವು ಇನ್ನೂ ಉತ್ತಮವಾಗಿ ಹೊರತರಲು ತಮ್ಮೆಲ್ಲರ ಸಹಕಾರ ಅಗತ್ಯ.

**ಕೆ.ಎಲ್. ಶ್ರೀಹರಿ ಖೋಡೆ**
ಪ್ರಕಾಶಕರು, ಖೋಡೆ ಫೌಂಡೇಶನ್,
ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ,
ಶೇಷಾದ್ರಿ ರಸ್ತೆ, ಗಾಂಧಿನಗರ,
ಬೆಂಗಳೂರು-560 009

॥ ಶ್ರೀ ವೇದವ್ಯಾಸಾಯ ನಮಃ ॥

# ಪದ್ಮ ಮಹಾಪುರಾಣ ಭಾಗ - ೪

# ಉತ್ತರ ಖಂಡ

## ಉತ್ತರಾರ್ಧ

## ಪುಷ್ಕರವೇ ಮೊದಲಾದ ಬೇರೆ ಬೇರೆ ತೀರ್ಥ ಮಾಹಾತ್ಮ್ಯ

ಅಧ್ಯಾಯ - ೧೩೦

**ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇತ್ ॥**

ಸಮುದ್ರದ ನೀರಿನಲ್ಲಿ ಪವಡಿಸಿದ. ಎಲ್ಲ ಸದ್ಗುಣಗಳಿಗೆ ಆಶ್ರಯನಾದ ಲಕ್ಷ್ಮೀಪತಿಯಾದ ನಾರಾಯಣ ದೇವರನ್ನು ವಂದಿಸಿ, ಅನಂತರ ವಾಯುದೇವರನ್ನೂ, ಶೇಷದೇವರನ್ನೂ ನಮಿಸಿ, ಮಹಾಲಕ್ಷ್ಮೀದೇವಿಯನ್ನು ಸ್ಮರಿಸಿ ವಿದ್ಯಾಧಿದೇವತೆಯಾದ ಸರಸ್ವತೀದೇವಿಗೆ ಪ್ರಣಾಮಗೈದು ಅನಂತರ ವೇದವ್ಯಾಸ ದೇವರನ್ನು ನಮಸ್ಕರಿಸಿ ಪುರಾಣವನ್ನು ಪಠಿಸಬೇಕು.

**ಪಾರ್ವತಿ:-** ಭೂಮಂಡಲದಲ್ಲಿ ಇರುವ ಎಲ್ಲ ದ್ವೀಪಗಳಿಗೆ ಅಧಿರಾಜನನ್ನಾಗಿ ಬ್ರಹ್ಮದೇವರು ಈ ಜಂಬೂದ್ವೀಪದಲ್ಲಿ ನಿರ್ಮಿಸಿದ್ದಾರೆ. ಈ ಜಂಬೂದ್ವೀಪದಲ್ಲಿ ಯಾವ ಯಾವ ತೀರ್ಥಗಳು ಇರುತ್ತವೆ? ಮತ್ತು ಈ ಜಂಬೂದ್ವೀಪದಲ್ಲಿ ಇರುವ ಒಟ್ಟು ತೀರ್ಥಗಳು ಎಷ್ಟು? ಇದೆಲ್ಲವನ್ನೂ ತಾವು ನನ್ನ ಮೇಲೆ ದಯೆಟ್ಟು ತಿಳಿಸಿರಿ.

**ಮಹಾದೇವ:-** ಜಗತ್ತಿನಲ್ಲಿಯ ಏಳು ಲೋಕಗಳಲ್ಲಿ ಶ್ರೀ ಮಹಾವಿಷ್ಣುವೇ ಸರ್ವಾಂತರ್ಯಾಮಿಯಾಗಿ ಸರ್ವಭೂತಗಳಲ್ಲಿಯೂ ಇರುತ್ತಾನೆ ಎಂದು ತಿಳಿದುಕೊಳ್ಳಬೇಕು. ದೇವದೇವೋತ್ತಮನಾದ ಆ ಶ್ರೀಹರಿಯೇ ಈ ಜಂಬೂದ್ವೀಪದಲ್ಲಿ ತೀರ್ಥರೂಪದಿಂದ ಸನ್ನಿಹಿತನಾಗಿದ್ದಾನೆ. ಶ್ರೀಹರಿಯ ವಿಶೇಷ ಸನ್ನಿಧಾನದಿಂದ ಪರಮಪಾವನವಾದ ಅಂಥ ನೂರಎಂಟು ತೀರ್ಥಗಳ ಹೆಸರು ಮಹಿಮೆ ಪ್ರಭಾವಗಳನ್ನು ಹೇಳುತ್ತೇನೆ ಕೇಳು.

ಈ ದ್ವೀಪದಲ್ಲಿಯ ಅನೇಕಾನೇಕ ತೀರ್ಥಗಳಲ್ಲಿ ಅತ್ಯಂತ ಮಹತ್ವದ ಮೊಟ್ಟ ಮೊದಲನೆಯ ತೀರ್ಥವೆಂದರೆ ಪುಷ್ಕರ ತೀರ್ಥ. ಸರ್ವಶ್ರೇಷ್ಠವಾದ ಕ್ಷೇತ್ರ ಎಂದರೆ ಪುಷ್ಕರ ಕ್ಷೇತ್ರ. ಎರಡನೆಯ ತೀರ್ಥಕ್ಷೇತ್ರ ಎಂದರೆ ಕಾಶಿ. ಮೂರನೆಯದೇ ನೈಮಿಷಾರಣ್ಯ. ನಾಲ್ಕನೆಯದೇ ತೀರ್ಥರಾಜ ಎಂದು ಹೆಸರಾದ ಪ್ರಯಾಗ. ಈ ಪ್ರಯಾಗತೀರ್ಥ ಎಲ್ಲ ತೀರ್ಥಗಳಲ್ಲಿ ಅತ್ಯುತ್ತಮ. ಗಂಧಮಾದನ ಬೆಟ್ಟದ ಮೇಲಿರುವ ಕಾರ್ಮುಕತೀರ್ಥವು

ಐದನೆಯದು. ಕೈಲಾಸಪರ್ವತದಲ್ಲಿದ್ದ ಮಾನಸತೀರ್ಥ ಆರನೆಯದು. ಅದರ ಪರ್ವತದಲ್ಲಿದ್ದ ವಿಶ್ವಕಾಯತೀರ್ಥ ಏಳನೆಯದು. ಮಂದರ ಕಂದರದಲ್ಲಿರುವ ಗೌತಮ ತೀರ್ಥವೇ ಎಂಟನೆಯ ತೀರ್ಥ. ಮದೋತ್ಕಟ ಒಂಬತ್ತನೆಯ ತೀರ್ಥ. ರಥಚೈತ್ರ ಹತ್ತನೆಯ ತೀರ್ಥ, ಕಾನ್ಯಕುಬ್ಜದಲ್ಲಿರುವ ವಾಮನತೀರ್ಥವು ಹನ್ನೊಂದನೆಯದು. ಮಲಯ ದೇಶದಲ್ಲಿರುವ ಕುಬ್ಜಾಮ್ರಕ ಹನ್ನೆರಡನೆಯದು ಹಿಮಾಚಲದಲ್ಲಿರುವ ಕೇದಾರವು ಹದಿಮೂರನೆಯದು. ಗೋಕರ್ಣದಲ್ಲಿರುವ ಗೋಪಕ ತೀರ್ಥ ಹದಿನಾಲ್ಕನೆಯದು. ಹಿಮಗರಿಯಲ್ಲಿರುವ ಸ್ಥಾನೇಶ್ವರತೀರ್ಥ ಹದಿನೈದನೆಯದು. ಹದಿನಾರನೆಯ ತೀರ್ಥ ಶ್ರೀಶೈಲದಲ್ಲಿರುವ ಮಾಧವತೀರ್ಥ. ಹೀಗೆಯೇ ಭದ್ರೇಶ್ವರದಲ್ಲಿ ಭದ್ರತೀರ್ಥ. ವಾರಾಹ ಕ್ಷೇತ್ರದಲ್ಲಿ ವಿಜಯ ತೀರ್ಥ, ವೈಷ್ಣವಾಚಲದಲ್ಲಿ ವೈಷ್ಣವತೀರ್ಥ, ರುದ್ರಕೋಟದಲ್ಲಿ ರೌದ್ರತೀರ್ಥ, ಕಾಲಂಜರದಲ್ಲಿ ಪೈತ್ರ್ಯ ತೀರ್ಥ, ಕಂಪಿಲದಲ್ಲಿ ಕಾಂಪಿಲ್ಯ. ಮುಕುಟದಲ್ಲಿ ಕರ್ಕೋಟಕ, ಗಲ್ಲಿಕಾನದಿಯಲ್ಲಿ ಶಾಲಿಗ್ರಾಮತೀರ್ಥ, ನರ್ಮದಾ ನದಿಯಲ್ಲಿ ಶಿವತೀರ್ಥ, ಮಾಯಾವತಿಯಲ್ಲಿ ವಿಶ್ವರೂಪತೀರ್ಥ, ರೈವತಗಿರಿಯಲ್ಲಿ ಉತ್ಪಲಾಕ್ಷತೀರ್ಥ ಮತ್ತು ಸಹಸ್ರಾಕ್ಷತೀರ್ಥ, ಗಂಗೆಯಲ್ಲಿ ಪಿತೃತೀರ್ಥ, ವಿಷ್ಣುಪಾದೋದಕತೀರ್ಥ, ವಿಪಾಶಾದಲ್ಲಿ ಪಿಪಾಪತೀರ್ಥ, ಪಾಟಲದಲ್ಲಿ ಪುಂಡ್ರವರ್ಧನತೀರ್ಥ, ಸುಪಾರ್ಶ್ವದಲ್ಲಿ ನಾರಾಯಣತೀರ್ಥ, ತ್ರಿಕೂಟದಲ್ಲಿ ವಿಷ್ಣುಮಂದಿರತೀರ್ಥ, ವಿಪುಲದಲ್ಲಿ ವಿಪುಲತೀರ್ಥ, ಮಲಯಾಚಲದಲ್ಲಿ ಕಲ್ಯಾಣತೀರ್ಥ, ಕುರುದೇಶದಲ್ಲಿ ಕೋಟತೀರ್ಥ, ಗಂಧಮಾದನದಲ್ಲಿ ಸುಂಗಧ ತೀರ್ಥ, ಕುಬ್ಜಾಮ್ರಕದಲ್ಲಿ ತ್ರಿಸಂಧ್ಯತೀರ್ಥ, ಹರಿದ್ವಾರದಲ್ಲಿ ಹರಿಪ್ರಿಯಾತೀರ್ಥ, ವಿಂಧ್ಯಗಿರಿಯಲ್ಲಿ ಶೈಲತೀರ್ಥ, ಸಹ್ಯಾದ್ರಿಯಲ್ಲಿ ಸಾಯಕತೀರ್ಥ, ಚಂದ್ರದೇಶದಲ್ಲಿ ಚಾಂದ್ರತೀರ್ಥ, ಮತ್ತು ರಮಣತೀರ್ಥ, ಕಾಲಿಂದಿಯಲ್ಲಿ ಮೃಗತೀರ್ಥ, ಕರವೀರದಲ್ಲಿ ಕುರೂದ್ಭವತೀರ್ಥ, ವಿನಾಯಕ ಪರ್ವತದಲ್ಲಿ ಉಮಾತೀರ್ಥ, ಭಾಸ್ಕರದೇಶದಲ್ಲಿ ಆರೋಗ್ಯ ತೀರ್ಥ, ಮಹಾಕಾಲದಲ್ಲಿ ಮಹೇಶ್ವರತೀರ್ಥ, ವಿಂಧ್ಯ ಕೊಳ್ಳದಲ್ಲಿ ಅಮೃತತೀರ್ಥ, ಮಂಡಪದಲ್ಲಿ ವಿಶ್ವರೂಪ, ಈಶ್ವರಪುರದಲ್ಲಿ ಸ್ವಾರಾತೀರ್ಥ, ಪ್ರಚಂಡಾ ನದಿಯಲ್ಲಿ ವೈಗಲೇಯತೀರ್ಥ, ಅಮರಕಂಟಕದಲ್ಲಿ ಚಾಂಡಿಕತೀರ್ಥ, ಪ್ರಭಾಸಕ್ಷೇತ್ರದಲ್ಲಿ ಸೋಮೇಶ್ವರತೀರ್ಥ, ಪುಷ್ಕರ ಕ್ಷೇತ್ರದಲ್ಲಿ ಪುಷ್ಕರ ತೀರ್ಥ, ಸರಸ್ವತಿ ನದಿಯಲ್ಲಿ ಪಾರಾವತ ತೀರದಲ್ಲಿ ಸಾರಸ್ವತತೀರ್ಥ, ಮಹಾಪದ್ಮದಲ್ಲಿ ಮಹಾಲಯತೀರ್ಥ, ಪಯೋಷ್ಣಿಯಲ್ಲಿ ಪಿಂಗಲೇಶ್ವರತೀರ್ಥ, ಸಿಂಹಿಕೆಯಲ್ಲಿ ಸಿಂಹಿಕಾತೀರ್ಥ, ಸೌರವದಲ್ಲಿ ಸೂರ್ಯತೀರ್ಥ, ಕೃತ್ತಿಕಾಕ್ಷೇತ್ರದಲ್ಲಿ ಕಾರ್ತಿಕತೀರ್ಥ, ಶಂಕರಗಿರಿಯಲ್ಲಿ ಶಾಂಕರತೀರ್ಥ, ಸುಭದ್ರಾ ಸಿಂಧುನದಿಗಳ ಸಂಗಮದಲ್ಲಿ ಉತ್ಪಲತೀರ್ಥ, ವಿಷ್ಣುಗಿರಿಯಲ್ಲಿ ಗಣಪತಿತೀರ್ಥ, ಜಾಲಂಧರದಲ್ಲಿ ವಿಷ್ಣುಮುಖತೀರ್ಥ, ತಾರದಲ್ಲಿ ತಾರಕ ತೀರ್ಥ, ದೇವದಾರು ವನದಲ್ಲಿ ಪೌಂಡ್ರತೀರ್ಥ, ಕಾಶ್ಮೀರದಲ್ಲಿ ಪೌಷ್ಕತೀರ್ಥ, ಹಿಮಾದ್ರಿಯಲ್ಲಿ ಭೌಮತೀರ್ಥ ಮಾಯಾಪುರದಲ್ಲಿ ಕಪಾಲಮೋಚನತೀರ್ಥ, ಹಿಮಗಿರಿಯಲ್ಲಿ ತುಷ್ಟಿಕ ತೀರ್ಥ, ಪೌಷ್ಟಿಕತೀರ್ಥ, ಶಂಖೋದ್ಧಾರತೀರ್ಥ, ಶಂಖಧಾರಕತೀರ್ಥ, ಪಿಂಡಾರಣ್ಯದಲ್ಲಿ ಪಿಂಡನತೀರ್ಥ, ಸಿದ್ಧದೇಶದಲ್ಲಿ ವೈಖಾನಸತೀರ್ಥ, ಅಚ್ಛೋದದಲ್ಲಿ ವಿಷ್ಣುಕಾಮತೀರ್ಥ, ಉತ್ತರ ತೀರದಲ್ಲಿ ಓಷಾಧಿತೀರ್ಥ, ಕುಶದ್ವೀಪದಲ್ಲಿ ಕುಶೋದಕತೀರ್ಥ, ಹೇಮಕೂಟದಲ್ಲಿ

ಮನ್ಮಥ ತೀರ್ಥ, ಕುಮುದಗಿರಿಯಲ್ಲಿ ಸತ್ಯವಾದನತೀರ್ಥ, ವದಂತಿಯಲ್ಲಿ ಅಶ್ವಕತೀರ್ಥ, ವಿಂದ್ಯಗಿರಿಯಲ್ಲಿ ಮಾತೃಕತೀರ್ಥ, ಚಿತ್ತದಲ್ಲಿ ಬ್ರಹ್ಮಮಯತೀರ್ಥ, ಮುಂತಾಗಿ ನೂರಎಂಟು ತೀರ್ಥಗಳು ಈ ಜಂಬೂದ್ವೀಪದಲ್ಲಿ ಇರುತ್ತವೆ.

ಪ್ರಿಯೆ, ಈ ಎಲ್ಲ ತೀರ್ಥಗಳಿಗಿಂತ ಅತ್ಯಂತ ಶ್ರೇಷ್ಠವಾದ ತೀರ್ಥ ಎಂದರೆ ಶ್ರೀಹರಿಯ ದಿವ್ಯ ನಾಮ. ನಾರಾಯಣನ ನಾಮತೀರ್ಥಕ್ಕೆ ಸಮಾನವಾದ ತೀರ್ಥವು ಈ ವರೆಗೆ ಪ್ರಪಂಚದಲ್ಲಿ ಹಿಂದೆ ಹುಟ್ಟಿಲ್ಲ. ಮುಂದೆ ಹುಟ್ಟುವದಿಲ್ಲ.

ಬ್ರಹ್ಮಹತ್ಯೆಯೇ ಮೊದಲಾದ ಮಹಾಮಹಾ ಪಾಪ ಮಾಡಿದವರೂ ಕೂಡ ಮುಕುಂದನ ನಾಮೋಚ್ಚಾರಣ ಮಾತ್ರದಿಂದ ಪಾಪಮುಕ್ತರು ಆಗುತ್ತಾರೆ. ಕಲಿಯುಗದಲ್ಲಿ ದ್ವಾರಕಾಕ್ಷೇತ್ರವು ಪರಮ ಪವಿತ್ರ. ದ್ವಾರಾವತಿಯಲ್ಲಿ ಇರುವ ಶ್ರೀಕೃಷ್ಣ ಪರಮಾತ್ಮನ ದಿವ್ಯ ವಿಗ್ರಹವನ್ನು ಕಣ್ತುಂಬ ನೋಡಿದವರು ನಿಶ್ಚಿತವಾಗಿಯೂ ಮೋಕ್ಷಗಾಮಿಗಳು ಆಗುತ್ತಾರೆ.

ಪಾರ್ವತಿ, ಇದೀಗ ನಾನು ನಿನಗೆ ಹೇಳಿದ ನೂರೆಂಟು ದಿವ್ಯ ತೀರ್ಥಗಳಲ್ಲಿ ಸ್ನಾನ ಮಾಡಿ ಮಹಾವಿಷ್ಣುವನ್ನು ಪೂಜಿಸಿದವರೂ ಅಡಿಯಿಂದ ಮುಡಿಯವರೆಗೆ ಭಗವನ್ಮೂರ್ತಿಯನ್ನು ನೋಡಿ ನಾಮಸ್ಮರಣೆ ಮಾಡಿದವರೂ ಸರ್ವಪಾಪಗಳಿಂದ ಮುಕ್ತರಾಗಿ ವಿಷ್ಣುಪದವನ್ನು ಹೊಂದುತ್ತಾರೆ. ಈ ನೂರಎಂಟು ತೀರ್ಥನಾಮಗಳ ಪಠಣಪಾರಾಯಣ ಶ್ರವಣ ಮಾಡಿದವರೂ ಸದ್ಗತಿಯನ್ನು ಹೊಂದುತ್ತಾರೆ. ಪಿತೃಕಾರ್ಯಗಳಲ್ಲಿ ಗೋದಾನ, ದೇವಪೂಜೆ, ಶ್ರಾದ್ಧದಾನ ಮೊದಲಾದ ಪುಣ್ಯಕಾರ್ಯಗಳಲ್ಲಿ ಹಾಗೂ ಪ್ರತಿದಿನ ಪ್ರಾತಃಕಾಲದಲ್ಲಿ ಈ ತೀರ್ಥಗಳ ಅಷ್ಟೋತ್ತರ ಶತನಾಮಗಳನ್ನು ಪಠಿಸುವವರೂ ಶ್ರವಣಮಾಡುವವರೂ ಪರಬ್ರಹ್ಮನ ಪರಮಾನುಗ್ರಹಕ್ಕೆ ಪಾತ್ರರಾಗುವರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಪುಷ್ಕರವೇ ಮೊದಲಾದ ಬೇರೆ ಬೇರೆ ತೀರ್ಥ ಮಾಹಾತ್ಮ್ಯ ಎಂಬ ನೂರಮೂವತ್ತನೇಯ ಅಧ್ಯಾಯ ಮುಗಿದುದು*



## ವೇತ್ರವತಿಯ ಮಹಿಮೆ

ಅಧ್ಯಾಯ - ೧೩೧

**ಮಹಾದೇವ:-** ಸುಂದರಿ, ವೇತ್ರವತಿಯ ಮಹಿಮೆಯನ್ನು ಹೇಳುತ್ತೇನೆ ಕೇಳು. ಈ ವೇತ್ರವತಿ ನದಿಯಲ್ಲಿ ಸ್ನಾನಮಾಡಿದವರು ಪಾಪಮುಕ್ತರಾಗಿ ಪ್ರಳಯಕಾಲ ಪರ್ಯಂತ ಊರ್ಧ್ವಲೋಕಗಳಲ್ಲಿ ವಾಸಮಾಡುತ್ತಾರೆ.

ಪೂರ್ವಕಾದಲ್ಲಿ ವೃತ್ತಾಸುರನು ಮಹಾಗಂಭೀರ ಎಂಬ ಹೆಸರಿನ ಹೆಬ್ಬಾವಿಯನ್ನು ನಿರ್ಮಿಸಿದ್ದ. ಆ ವಿರಾಡ್ವಾಪಿಯಿಂದ ಹೊರಹೊಮ್ಮಿ ಬಂದಿತು ಈ ವೇತ್ರವತೀ ನದಿ. ಚಂಪಕ ನಗರದಲ್ಲಿ ವಿದಾರುಣ ಎಂಬ ದುಷ್ಟ ಭ್ರಷ್ಟನಾದ ಪಾಪಿಷ್ಠ ದೊರೆ ಇದ್ದ. ಶ್ರೀಹರಿಯನ್ನು ಹಗಲಿರುಳು ಹಳಿದು ಹೀಗಳಿಯುತ್ತಲಿರುವ ಆ ರಾಜನು ಕೊಂದ ಬ್ರಾಹ್ಮಣರಿಗೆ ಲೆಕ್ಕ ಇಲ್ಲ. ಹಾಳು ಮಾಡಿದ ಪುಣ್ಯಾಶ್ರಮಗಳಿಗೆ ಸಂಖ್ಯೆ ಇಲ್ಲ. ಅವನು ಕೆಡಿಸಿದ ಸ್ತ್ರೀಯರಿಗೆ ಎಣಿಕೆ ಇಲ್ಲ. ಯಾವಾಗಲೂ ದುಶ್ಶಾಸ್ತ್ರಗಳಲ್ಲಿ ಆಸಕ್ತಿ ಆ ಪಾಪಿ ಭೂಪಾಲಗೆ. ದಯಾರಹಿತನಾದ ಆ ಕ್ರೂರ ಕರಾಲ ರಾಜ ಸಾಕ್ಷಾತ್ ಅಧರ್ಮದ

ಸ್ವರೂಪನೇ ಆಗಿದ್ದ. ಅವನ ದೇವದ್ರೋಹ, ಧರ್ಮದ್ವೇಷ ಹಾಗೂ ಬ್ರಾಹ್ಮಣನಿಂದೆ ಮುಂತಾದ ಪಾಪಗಳ ಫಲವಾಗಿ ಮೈತುಂಬ ಕುಷ್ಠರೋಗ ತಗಲಿತ್ತು.

ಒಂದು ದಿನ ಆ ರಾಜನು ಬೇಟೆಯ ಭರದಲ್ಲಿ ಕ್ರೂರ ಪ್ರಾಣಿಗಳನ್ನು ಕೊಲ್ಲುತ್ತ ದಣಿದು ಬಾಯಾರಿ ಬಸವಳಿದು ಬೆಂಡಾಗಿ ಬೆಂಗಾಡಿನಲ್ಲಿ ಹರಿಯುತ್ತಲಿರುವ ವೇತ್ರವತೀ ನದಿಯ ತೀರಕ್ಕೆ ಬಂದ. ಕುದುರೆಯಿಂದ ಇಳಿದು ಕೆಳಗೆ ಬಂದ. ವೇತ್ರವತಿಯ ತಣ್ಣೀರಿನಲ್ಲಿ ಮಿಂದ. ಯಥೇಚ್ಛವಾಗಿ ನೀರನ್ನು ಕುಡಿದ.

ಪವಿತ್ರವಾದ ವೇತ್ರವತಿಯ ನೀರಿನಲ್ಲಿ ಸ್ನಾನಪಾನ ಮಾಡಿದ್ದರಿಂದ ಅಡಿಯಿಂದ ಮುಡಿಯವರೆಗೆ ಅವನ ಇಡಿಯ ದೇಹವನ್ನೆಲ್ಲ ವ್ಯಾಪಿಸಿದ ಕುಷ್ಠರೋಗವು ಬಿಟ್ಟು ಹೋಯಿತು. ಅವನ ಬುದ್ಧಿಯಲ್ಲಿಯ ಕಾಲುಷ್ಯ ಮನಸ್ಸಿಲ್ಲಿಯ ದುರ್ಭಾವನೆಯ ವಿಚಾರ ಗಳೆಲ್ಲವೂ ಅಳಿದುಹೋದವು. ಮನಸ್ಸು ತಿಳಿಯಾಯಿತು. ದೇಹಕಾಂತಿ ಕಮನೀಯವಾಗಿ ಕಂಗೊಳಿಸತೊಡಗಿತು. ಶ್ರೀಹರಿಯಲ್ಲಿ ಸಾತಿಶಯ ಭಕ್ತಿ ಅಂಕುರಿಸಿತು ಅವನ ಹೃದಯದಲ್ಲಿ.

ಅಂದಿನಿಂದ ಅವನು ಅದೇ ವೇತ್ರವತಿ ನದೀ ತೀರದಲ್ಲಿ ನೆಲೆಸಿ ಪ್ರತಿದಿನವೂ ತಪ್ಪದೇ ಪ್ರಾತಃಸ್ನಾನ ಹರಿಪೂಜೆಗಳನ್ನು ಮಾಡುತ್ತಲಿದ್ದ ಅದರಿಂದ ಅವನ ದೇಹದಲ್ಲಿಯ ರೋಗರುಜಿನ, ವೈರೂಪ್ಯ, ವಿಕಾರಗಳೆಲ್ಲವೂ ನಷ್ಟವಾಗಿ ಮನ್ಮಥನಂಥ ಸುಂದರವಾದ ಆಕಾರವು ಪ್ರಾಪ್ತವಾಗಿ ಅವನೊಬ್ಬ ಮನ್ಮಥನಂತೆ ಶೋಭಿಸತೊಡಗಿದ. ಈ ಲೋಕದಲ್ಲಿ ಬದುಕಿ ಇರುವವರೆಗೆ ಅನೇಕಾನೇಕ ಯಜ್ಞಗಳನ್ನು ನೆರವೇರಿಸಿದ. ಬ್ರಾಹ್ಮಣರಿಗೆ ಹಿಡಿಹಿಡಿಯಾಗಿ ದಕ್ಷಿಣೆಗಳನ್ನು ನೀಡಿದ. ಕೊನೆಗೆ ಮುಪ್ಪಿನ ಕಾಲದಲ್ಲಿ ಶ್ರೀಹರಿಯನ್ನು ಧ್ಯಾನಮಾಡುತ್ತ ಕಾಲಪ್ರಾಪ್ತದ ಮರಣವನ್ನು ಹೊಂದಿದ. ವಿಷ್ಣುಪಾದವನ್ನು ಸೇರಿದ.

ದೇವಿ, ಇದನ್ನೆಲ್ಲ ತಿಳಿದು ವೇತ್ರವತೀ ತರಂಗಿಣಿಯಲ್ಲಿ ಪ್ರಾತಃಕಾಲದಲ್ಲಿ ಸ್ನಾನಮಾಡಿದ ಬ್ರಾಹ್ಮಣ. ಶೂದ್ರ, ವೈಶ್ಯ, ಕ್ಷತ್ರಿಯ ಯಾರೇ ಇರಲಿ ಪಾಪಗಳ ಬಂಧನದಿಂದ ಬಿಡುಗಡೆ ಹೊಂದಿ, ದಿವ್ಯಗತಿಯನ್ನು ಹೊಂದುತ್ತಾರೆ. ಸಾಭ್ರಮತಿ ಮತ್ತು ವೇತ್ರವತೀ ಈ ಎರಡು ನದಿಗಳ ಹೃದಯಂಗಮವಾದ ಸಂಗಮದ ತೀರ್ಥದಲ್ಲಿ ಕಾರ್ತೀಕ ಅಥವಾ ಮಾಘ ಮಾಸದಲ್ಲಿ ಸ್ನಾನಮಾಡಿದ ಚಂಡಾಲ, ವೇದನಿಂದಕ, ಬ್ರಾಹ್ಮಣ ಹಂತಕ ಪಂಚಮಹಾಪಾಪ ಮಾಡಿದ ಮಹಾಪಾತಕಿ ಕೂಡ ಮುಕ್ತನಾಗುತ್ತಾನೆ. ಈ ಸಂಗಮದ ರಂಗಸ್ಥಳದಲ್ಲಿಯೇ ಹಿಂದೆ ಬ್ರಹ್ಮದೇವರು ಅನೇಕ ಯಜ್ಞಗಳನ್ನು ಆಚರಿಸಿದ್ದಾರೆ. ಈ ವೇತ್ರವತಿಯು ಎರಡನೆಯ ಗಂಗೆ ಎಂದು ಪ್ರಸಿದ್ಧವಾಗಿದೆ. ಸೂರ್ಯವಂಶ ಚಂದ್ರವಂಶದಲ್ಲಿ ಜನಿಸಿದ ಅನೇಕ ರಾಜರು ಇದರಲ್ಲಿ ಮಿಂದು ಮೋಕ್ಷ ಹೊಂದಿದ್ದಾರೆ. ಈ ನದಿಯ ದರ್ಶನದಿಂದ ದುಃಖ ಪರಿಹಾರ. ಸ್ಪರ್ಶನದಿಂದ ಮನಸ್ಸಿನಿಂದ ಮಾಡಿದ ಪಾಪಗಳೆಲ್ಲವೂ ದೂರವಾಗುವವು. ಸ್ನಾನಮಾಡಿದರಂತೂ ಮೋಕ್ಷವೇ ಕರತಾಲಮಲಕ. ಪೃಥ್ವಿಯಲ್ಲಿ ಇರುವ ತೀರ್ಥಗಳೆಲ್ಲವೂ ಹಾಗೂ ಹರಿಹರ ಬ್ರಹ್ಮಾದಿಗಳು ಈ ಪವಿತ್ರವಾದ ವೇತ್ರವತೀ ನದಿಯಲ್ಲಿ ನೆಲೆಸಿರುತ್ತಾರೆ. ಅದರಲ್ಲಿ ಒಪ್ಪತ್ತು, ಎರಡು ಹೊತ್ತು ಅಥವಾ ಮೂರು ಹೊತ್ತು ಸ್ನಾನ ಮಾಡಿದವರು ಮುಕ್ತರಾದಂತೆಯೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ವೇತ್ರವತಿಯ ಮಹಿಮೆ ಎಂಬ ನೂರ ಮೂವತ್ತೊಂದನೇಯ ಅಧ್ಯಾಯ ಮುಗಿದುದು*

**ಮಹಾದೇವ:-** ದೇವಿ, ಸಾಭ್ರಮತಿ ನದಿಯ ಮಹಿಮೆಯನ್ನು ಯಥಾಸ್ಥಿತವಾಗಿ ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಮಹರ್ಷಿ ಕಶ್ಯಪರು ಬಗೆ ಬಗೆಯ ಮರಬಳ್ಳಿಗಳಿಂದ ನಿಬಿಡವಾದ ಸಾನುಕಾನುಗಳಿಂದ ರಮಣೀಯವಾದ ಅರ್ಬುದಾ ಪರ್ವತದಲ್ಲಿ ಸರಸ್ವತೀ ನದಿಯ ತೀರದಲ್ಲಿ ಘೋರವಾದ ತಪಸ್ಸನ್ನು ಆಚರಿಸಿದರು. ಒಂದು ದಿನ ಆ ಮಹಾ ಮಹರ್ಷಿಗಳು ನೈಮಿಷಾರಣ್ಯಕ್ಕೆ ತೆರಳಿದರು. ಅಲ್ಲಿ ನೆರೆದ ಶೌನಾಕಾದಿ ಋಷಿಗಳ ಜೊತೆಗೆ ಪುಣ್ಯಕರವಾದ ಭಗವತ್ಕಥಾಲಾಪವನ್ನು ಮಾಡಿದರು. ಒಂದು ದಿನ ನೈಮಿಷಾರಣ್ಯ ನಿವಾಸಿಗಳಾದ ಋಷಿಮುನಿಗಳು ತಪೋವೃದ್ಧರೂ ಜ್ಞಾನವೃದ್ಧರೂ ಆದ ಕಶ್ಯಪ ಮಹರ್ಷಿಗಳಿಗೆ ಬಿನ್ನವಿಸಿದರು.

**ಋಷಿಗಳು:-** ಪೂಜ್ಯರೇ, ತಾವು ನಮ್ಮೆಲ್ಲರಿಗೂ ಅತ್ಯಂತ ಪ್ರಿಯವಾದ ಒಂದು ಕಾರ್ಯವನ್ನು ಮಾಡಬೇಕು. ನಿಮ್ಮ ತಪಃಪ್ರಭಾವದಿಂದ ದೇವನದಿಯಾದ ಗಂಗೆಯನ್ನು ಇಲ್ಲಿಗೆ ಕರೆತರಬೇಕು. ನೀವು ಕರೆತಂದ ಆ ಗಂಗಾನದಿಗೆ ನಾವು ಕಾಶ್ಯಪಿ ಎಂದು ನಿಮ್ಮ ಹೆಸರನ್ನೇ ಇಡುತ್ತೇವೆ.

ನೈಮಿಷಾರಣ್ಯದಲ್ಲಿ ಜ್ಞಾನಕಾರ್ಯಕ್ಕಾಗಿ ವಾಸ್ತವ್ಯ ಹೂಡಿದ ಆ ಮುನಿಮಂಡಲದ ಬಿನ್ನಹವನ್ನು ಒಪ್ಪಿಕೊಂಡರು ಕಶ್ಯಪ ಮಹರ್ಷಿಗಳು. ಸುರಸರಿತೆಯಾದ ಆ ಗಂಗೆಯನ್ನು ಈ ನೈಮಿಷಾರಣ್ಯಕ್ಕೆ ಕರೆತರುತ್ತೇನೆ ಎಂದು ಅವರಿಗೆಲ್ಲ ಆಶ್ವಾಸನೆಯನ್ನು ಇತ್ತು ಆ ಬ್ರಹ್ಮವೃಂದಕ್ಕೆ ವಂದಿಸಿ ಮತ್ತೆ ಅರ್ಬುದಾರಣ್ಯಕ್ಕೆ ಆಗಮಿಸಿದರು. ಸರಸ್ವತಿ ತೀರದಲ್ಲಿ ನಿಂತು ನನ್ನನ್ನು ಅರ್ಥಾತ್ ಮಹಾದೇವನನ್ನು ಕುರಿತು ದಾರುಣವಾದ ತಪಸ್ಸನ್ನು ಆಚರಿಸಿದರು. ಕಶ್ಯಪ ಮಹರ್ಷಿಗಳ ಕಠಿಣಾತ್ಕಠಿಣತರವಾದ ಕಷ್ಟನಿಷ್ಠುರ ತಪೋನುಷ್ಠಾನದಿಂದ ನಾನು ಪರಿತುಷ್ಟನಾದೆ. ನನ್ನ ಪ್ರತ್ಯಕ್ಷ ದರ್ಶನವನ್ನೂ ಅನುಗ್ರಹಿಸಿದೆ. ಬೇಕಾದ ವರ ಬೇಡಿಕೋ ಎಂದು ಅನುಗ್ರಹಪೂರ್ವಕವಾಗಿ ಹೇಳಿದೆ.

**ಕಶ್ಯಪ:-** ದೇವದೇವೋತ್ತಮನಾದ ಜಗದೀಶ ! ನೀನು ಸರ್ವ ಸಮರ್ಥ ನಾನು ಬೇಡಿದ ಬಯಸಿದ ವರವನ್ನು ನೀಡುವ ಶಕ್ತಿಸಾಮರ್ಥ್ಯಗಳು ನಿನ್ನಲ್ಲಿ ಇದ್ದುದು ನಾನು ಬಲ್ಲೆ. ಈಗ ನೀನು ನನಗಾಗಿ ನಿನ್ನ ತಲೆಯ ಮೇಲೆ ಜಟಾಜೂಟದಲ್ಲಿರುವ ಪರಮಪವಿತ್ರ ಪಯಸ್ವಿನಿಯಾದ ಗಂಗೆಯನ್ನು ನನಗೆ ಕರುಣಿಸು. ನಿನಗೆ ನನ್ನ ಅನಂತ ವಂದನೆಗಳು.

ದೇವಿ ! ಆ ಕಶ್ಯಪ ಮಹರ್ಷಿಯ ಮಾತಿಗೆ ನಾನು "ತಥಾಸ್ತು" ಎಂದು ಹೇಳಿದೆ. ನನ್ನ ಮುಡಿಯ ಜಡೆಯಲ್ಲಿ ಅಡಗಿದ ಗಂಗೆಯನ್ನು ನನ್ನ ಒಂದು ಕೂದಲವನ್ನು ಸಡಿಲಿಸಿ ಗಂಗೆಯ ಒಂದು ಕವಲನ್ನು ಅವನಿಗೆ ಕೊಟ್ಟು ಕರುಣಿಸಿದೆ. ನನ್ನ ಶಿಥಿಲಿತವಾದ ಕೇಶಾವಕಾಶದಿಂದ ಜನಿಸಿದ ನವ್ಯ ಗಂಗಾತರಂಗಿಣಿಯನ್ನು ಆನಂದದಿಂದ ಕರೆದುಕೊಂಡು ಆ ಕಶ್ಯಪ ಮಹರ್ಷಿಯು ಸ್ವಸ್ಥಾನಕ್ಕೆ ತೆರಳಿದ. ಕೇಶರಂಧ್ರ ಎಂಬ ತೀರ್ಥದ ತಡಿಯಲ್ಲಿಯೇ ಆ ಕಶ್ಯಪನ ಅವಾಸ. ಅಲ್ಲಿಗೆ ಕಶ್ಯಪಿ ಎಂದು ಹೆಸರಾದ ಆ ದೇವನದಿಯನ್ನು ಕರೆತಂದು ಎಲ್ಲ ಮುನಿ

ಗಳೊಂದಿಗೆ ಅವಳ ಪೂಜೆ ಮಾಡಿದ. ಆ ಕಾಶ್ಯಪಿಯ ದರ್ಶನ ಮಾತ್ರದಿಂದಲೇ ಬ್ರಹ್ಮಹತ್ಯೆ ಮೊದಲಾದ ಮಹಾಪಾತಕಗಳೂ ಉಳಿದ ಎಲ್ಲ ಉಪಪಾತಕಗಳೂ ತೊಳೆದುಹೋಗುತ್ತವೆ.

**ಪಾರ್ವತಿ:-** ಈ ಕಾಶ್ಯಪಿ ನದಿಯಲ್ಲಿ ಸ್ನಾನ ಮಾಡುವದರಿಂದ ಎಂಥ ಪುಣ್ಯ ಬರುತ್ತದೆ? ಇದನ್ನು ನನಗೆ ಹೇಳು. ಈ ವಿನೂತನ ಭಾಗೀರಥಿಯ ದರ್ಶನದಿಂದ ಯಾವ ಪುಣ್ಯ? ಸ್ಪರ್ಶನದಿಂದ ಯಾವ ಫಲ? ಸ್ನಾನಪಾನಗಳಿಂದ ಯಾವ ಸುಕೃತ ವಿಶೇಷ? ಅದರ ಮಹಿಮೆ ಏನು? ಇದೆಲ್ಲವನ್ನೂ ತಾವು ನನಗೆ ನಿರೂಪಿಸಿರಿ.

**ಮಹಾದೇವ:-** ಸತೀಮಣಿ, ಶ್ರೀವಿಷ್ಣುವಿನ ಪ್ರಸಾದದಿಂದ ನಾನು ಅನೇಕಾನೇಕ ತೀರ್ಥಕ್ಷೇತ್ರಗಳ ಮಹಿಮೆಯನ್ನು ಕೇಳಿ ತಿಳಿದಿದ್ದೇನೆ. ಅದನ್ನು ಹೇಳುತ್ತೇನೆ ಕೇಳು. ಸಾಕ್ಷಾತ್ತಾಗಿ ಸಮುದ್ರಕ್ಕೆ ಹೋಗಿ ಕೂಡುವ ನದಿಗಳು ಮಹಾನದಿಗಳು ಎನಿಸಲ್ಪಡುತ್ತವೆ. ಗಂಗಾ, ಯಮುನಾ, ರೇವಾ, ತಾಪಿ, ಗೋದಾವರಿ, ತುಂಗಭದ್ರಾ, ಕೌಶಿಕಿ, ಕಲ್ಕಿಕಾ, ಕಾವೇರಿ, ವೈದಿಕಾ, ಭದ್ರಾ, ಸರಯೂ, ಮುಂತಾದವುಗಳೆಲ್ಲ ಮಹಾನದಿಗಳು. ಇವಲ್ಲದೇ ಇನ್ನೂ ಅನೇಕ ಸಮುದ್ರಗಾಮಿನಿಯಾದ ನದಿಗಳು ಪಾಪಪರಿಹಾರಕ ಆಗಿರುತ್ತವೆ. ಇವೆಲ್ಲವೂ ದಿವ್ಯ ತೀರ್ಥಗಳು. ಪ್ರಯಾಗ, ಕಾಶಿ, ಪುಷ್ಕರ, ನೈಮಿಷಾರಣ್ಯ, ಅಮರಕಂಟಕ, ದ್ವಾರಕಾ, ಅರ್ಬುದಾರಣ್ಯ ಮುಂತಾದವುಗಳು ಭೂಮಂಡಲದಲ್ಲಿ ಇರುವ ದಿವ್ಯ ಕ್ಷೇತ್ರಗಳು ಎಂದು ನಾನು ವಿಷ್ಣುವಿನ ಮುಖದಿಂದ ಕೇಳಿದ್ದೇನೆ.

ಪೂರ್ವಕಾಲದಲ್ಲಿ ಭಗೀರಥನು ಯಾಚನೆ ಮಾಡಿದ್ದರಿಂದ ಅವನಿಗೆ ನಾನು ನನ್ನ ಜಟಾಜೂಟದಲ್ಲಿ ಧರಿಸಿದ ಈ ದೇವಗಂಗೆಯನ್ನು ಕೊಟ್ಟು ಕರುಣಿಸಿದೆ. ಅನಂತರ ಋಷಿಮುನಿಗಳ ಬಿನ್ನಹ ಮನ್ನಿಸಿ ಮತ್ತೊಮ್ಮೆ ಅದೇ ಸುರಸುತೆಯನ್ನು ಮತ್ತೆ ಕೊಟ್ಟೆ. ಕಶ್ಯಪನಿಗೆ ನಾನು ಕೊಡಮಾಡಿದ ಆ ಗಂಗೆಗೆ ಕಾಶ್ಯಪಿ ಎಂದು ಹೆಸರು ಬಂದಿದೆ. ಈ ಗಂಗೆಗೆ ಯುಗಾನುಸಾರವಾಗಿ ಬೇರೆ ಬೇರೆ ನಾಮಗಳು ಬಂದಿರುತ್ತವೆ. ಕೃತಯುಗದಲ್ಲಿ ಕೃತಪತಿ ಎಂದೂ, ತ್ರೇತಾಯುಗದಲ್ಲಿ ಗಿರಿಕರ್ಣಿಕಾ ಎಂದೂ, ದ್ವಾಪರದಲ್ಲಿ ಚಂದನಾ ಎಂದೂ ಕಲಿಯುಗದಲ್ಲಿ ಸಾಭ್ರಮತಿ ಎಂದೂ ಈ ಕಾಶ್ಯಪ ನದಿಗೆ ಹೆಸರು ಬಂದಿರುತ್ತದೆ. ಹೀಗೆ ಯುಗಕ್ಕೊಂದು ಬಗೆಯಾಗಿ ಹೊಸ ಹೊಸ ಹೆಸರನ್ನು ಹೊತ್ತು ಹರಿಯುವ ಹರನ ಜಟಾಮಂಡಲದಿಂದ ಹೊರಹೊಮ್ಮಿದ ಈ ದೇವಗಂಗೆಯಲ್ಲಿ ಅನುದಿನವೂ ಸ್ನಾನಮಾಡಿದ ಮಾನವರು ಪಾಪಮುಕ್ತರೂ, ಸಂಸಾರ ಮುಕ್ತರೂ ಆಗುತ್ತಾರೆ. ಸರಸ್ವತೀ ನದಿಯ ಪ್ರಕ್ಷಾವತರಣ ತೀರ್ಥದಲ್ಲಿಯೂ ಕೇದಾರ ಕುರುಕ್ಷೇತ್ರ ಮುಂತಾದ ಕಡೆಗಳಲ್ಲಿಯೂ ಸ್ನಾನ ಮಾಡುವದರಿಂದ ಬರುವ ಪುಣ್ಯಫಲವು ಈ ಸಾಭ್ರಮತಿಯ ತೀರದ ಪರಿಸರದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಅನೇಕಾನೇಕ ಮಹರ್ಷಿಗಳೂ ಬ್ರಹ್ಮರ್ಷಿಗಳೂ ತೀರ್ಥಯಾತ್ರೆಯ ನಿಮಿತ್ತವಾಗಿ ಬಂದು ಇಲ್ಲಿಯ ಪಾವನ ಜಲದಲ್ಲಿ ಮಿಂದು ಅನಂತರ ಈ ನದಿಯನ್ನು ಬಿಟ್ಟುಹೋಗಲು ಮನಸ್ಸು ಬಾರದೇ ಇಲ್ಲಿಯೇ ವಾಸಮಾಡಿ ಬಿಟ್ಟಿದ್ದಾರೆ. ಕಾರ್ತಿಕ ಮಾಸದಲ್ಲಿ ಸ್ನಾನ ಮಾಡಿದ್ದಕ್ಕಾಗಿ ಎಲ್ಲ ದೇವತೆಗಳೂ ಮುನಿಗಳೂ ಇಲ್ಲಿಗೆ ಬಂದು ಶ್ರಾದ್ಧ, ಬ್ರಹ್ಮಭೋಜನ, ದಾನ, ಧರ್ಮ, ಯಜ್ಞ, ದಕ್ಷಿಣಾ ಪ್ರದಾನಾದಿ ಪುಣ್ಯಕರ್ಮಗಳನ್ನು ಆಚರಿಸಿ ಧನ್ಯರಾಗುತ್ತಾರೆ. ಯಮಕ್ರೀತ, ರೈಭ್ಯ, ಕಕ್ಷೀವಂತ, ಉಶೀಜ, ಭೃಗು, ಅಂಗಿರಸ, ಕಣ್ವ, ಮೇಧಾವಿ ಪುನರ್ವಸು ಮುಂತಾದ ಮುನಿಮಹರ್ಷಿಗಳೆಲ್ಲರೂ ಈ ಸಾಭ್ರಮತಿ ನದಿಯ ಮೂಡಲ ನಿಟ್ಟಿನಲ್ಲಿ ಪರ್ಣಕುಟೀರಗಳನ್ನು ಕಟ್ಟಿಕೊಂಡು

ನೆಲೆಸಿದ್ದಾರೆ. ಉತ್ತರ ತೀರದಲ್ಲಿ ಮಣಿಮಂತ, ಸುಬಂಧು, ದತ್ತಾತ್ರೇಯ, ಶಖಿ, ದೀರ್ಘತಮ, ಗೌತಮ, ಕಶ್ಯಪ, ಶ್ವೇತಕೇತು, ಕಹೋಡ, ಪುಲಹ, ದೇವಲ, ವಿಶ್ವಾಮಿತ್ರ, ಭರದ್ವಾಜ, ಋಚೀಕಪುತ್ರ, ಗರ್ಗ ಉದ್ದಾಲಕ ಮುಂತಾದ ಋಷಿಗಳು ನೆಲೆಸಿದ್ದಾರೆ. ಇದಲ್ಲದೇ ದೇವಶರ್ಮ, ಧೌಮ್ಯ, ಆಸ್ತಿಕ, ಲೋಮಶ, ನಾಭಿಕೇತು, ಲೋಮಹರ್ಷಣ, ಉಗ್ರಶವ ಭಾರ್ಗವ, ಶ್ರವಣ, ವಾಲಖಿಲ್ಯ ಮುಂತಾದ ಋಷಿಪುಂಗವರೆಲ್ಲರೂ ಕಾರ್ತಿಕ, ಮಾಘ, ವೈಶಾಖಾದಿ ಪುಣ್ಯಮಾಸಗಳಲ್ಲಿ ಬಂದು, ಇಲ್ಲಿಯ ತೀರದಲ್ಲಿ ನಿಂತು, ಪ್ರತಿನಿತ್ಯ ಸ್ನಾನಮಾಡಿ ಧನ್ಯರಾಗುತ್ತಾರೆ. ನಿರಾಹಾರದಿಂದ ಇದ್ದು ಶ್ರೀಹರಿಯ ನಿತ್ಯನಿರಂತರ ಆರಾಧನೆಯನ್ನು ಮಾಡಿ ಜನ್ಮವನ್ನು ಸಾರ್ಥಕ ಮಾಡಿಕೊಳ್ಳುತ್ತಾರೆ.

ಶ್ರಾದ್ಧವನ್ನು ಮಾಡಬಯಸುವವರೆಲ್ಲರೂ ಅವಶ್ಯವಾಗಿ ಹೋಗಲೇಬೇಕಾದ ಪಿತೃತೀರ್ಥ ಎಂದು ಪ್ರಸಿದ್ಧವಾದ ಗಯಾ ತೀರ್ಥವೂ, ನನ್ನ ನಿತ್ಯ ನಿವಾಸದಿಂದ ಅವಿಮುಕ್ತ ಕ್ಷೇತ್ರವೆಂದು ಹೆಸರಾದ ವಾರಣಾಸಿಯೂ, ತೀರ್ಥರಾಜವಾದ ಪ್ರಯಾಗವೂ. ಎಲ್ಲ ತೀರ್ಥಗಳಿಂದ ಒಡಗೂಡಿಕೊಂಡು ಸಾಭ್ರಮತಿ ನದಿಯ ನೀರಿನಲ್ಲಿ ಬಂದು ನಿಂತುಕೊಂಡು ಸನ್ನಿಹಿತವಾಗಿರುತ್ತದೆ. ಇದರಂತೆ ಬಿಂದುಮಾಧವ, ವಟೇಶ್ವರ, ದಶಾಶ್ವಮೇಧ, ಗಂಗಾದ್ವಾರ, ಕೇದಾರ, ಗಂಗಾಸಾಗರ, ಬ್ರಹ್ಮಸರ, ಶತದ್ರು, ನೈಮಿಷ, ಮುಂತಾದ ಎಲ್ಲ ತೀರ್ಥಕ್ಷೇತ್ರಗಳೂ ನನ್ನ ಅಪ್ಪಣೆಯಿಂದ ಸಾಭ್ರಮತಿಯ ನೀರಿನಲ್ಲಿ ನಿತ್ಯ ವಾಸಮಾಡುತ್ತವೆ. ಆದ್ದರಿಂದ ಈ ಸಾಭ್ರಮತೀ ನದೀ ತೀರದಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧವನ್ನು ಮಾಡಿದರೆ ಬೇರೆಕಡೆ ಕೋಟಿ ಶ್ರಾದ್ಧ ಮಾಡಿದಷ್ಟು ಪುಣ್ಯಫಲವು ಪ್ರಾಪ್ತವಾಗುತ್ತದೆ. ಅದರಲ್ಲಿಯೂ ಈ ಸಾಭ್ರಮತೀ ನದೀ ತೀರದಲ್ಲಿರುವ ಪಾಟಲವಾಡವೆಂಬ ನಗರಕ್ಕೆ ಬಂದು ಅಲ್ಲಿ ಸ್ನಾನ ದಾನಾದಿಗಳನ್ನು ಮಾಡಿದವರು ವಿಷ್ಣುಲೋಕವನ್ನು ಹೊಂದುತ್ತಾರೆ. ಜಂಬೂದ್ವೀಪದಲ್ಲಿರುವ ನೀಲಕಂಠ ತೀರ್ಥ, ನಂದಹೃದ ತೀರ್ಥ, ರುದ್ರಹೃದ ತೀರ್ಥ, ರುದ್ರಮಹಾಲಯ, ಮಂದಾಕಿನಿ, ಅಚ್ಛೋದ, ಧೂಮ್ರಾ, ಅಮಿತ್ರಪದ, ವೈಜನಾಥ, ವಿಪ್ರಾನದಿ, ಮಹಾಕಾಲ, ಕಾಲಂಜರ, ಗಂಗೋದ್ಭೂತ, ಹರೋದ್ಭೇದ, ನರ್ಮದಾ, ಓಂಕಾರ ಕ್ಷೇತ್ರ, ಬ್ರಹ್ಮತೀರ್ಥ ಮುಂತಾದ ಎಲ್ಲ ತೀರ್ಥ ಕ್ಷೇತ್ರಗಳು ಸಾಭ್ರಮತಿ ನದಿಯ ತೀರ್ಥದಲ್ಲಿ ಬ್ರಹ್ಮಾದಿ ದೇವತೆಗಳೊಂದಿಗೆ ಗುಪ್ತವಾಗಿರುತ್ತವೆ. ಓಂಕಾರ, ಪಿತೃ ತೀರ್ಥ, ಕಾವೇರಿ, ಕಪಿಲಾ, ಚಂಡವೇಗ, ಅಮರಕಂಟಕ, ಮುಂತಾದ ಎಲ್ಲ ತೀರ್ಥಗಳೂ ಸಾಭ್ರಮತೀ ವಾರ್ತಘ್ನೀ ಸಂಗಮ ಸ್ಥಳದಲ್ಲಿ ಗಣೇಶ್ವರ ಮೊದಲಾದ ಶಿವಗಣಗಳಿಂದ ತಂದು ಪ್ರತಿಷ್ಠಾಪಿಸಲ್ಪಟ್ಟಿರುತ್ತವೆ.

ಈ ಎಲ್ಲ ತೀರ್ಥವೃಂದಗಳ ಮಹಿಮೆಯನ್ನು ವಿಸ್ತಾರವಾಗಿ ಬೃಹಸ್ಪತಿಯೂ ಕೂಡ ಬಣ್ಣಿಸಲಾರ ಇವೆಲ್ಲವೂ ಬಾಹ್ಯ ತೀರ್ಥಗಳು. ಇವುಗಳಿಗಿಂತ ಮಹತ್ವದ್ದಾದ ಮುಖ್ಯ ತೀರ್ಥಗಳೆಂದರೆ ಅಂತರಂಗ ತೀರ್ಥಗಳು.

**ಸತ್ಯಂ ತೀರ್ಥಂ ದಯಾತೀರ್ಥಂ ತೀರ್ಥಮಿಂದ್ರಿಯ ನಿಗ್ರಹಃ ।**

ಸತ್ಯವನ್ನು ಮಾತನಾಡುವದು ಒಂದು ತೀರ್ಥ, ಪ್ರಾಣಿದಯೆ ಇನ್ನೊಂದು ತೀರ್ಥ. ಇಂದ್ರಿಯನಿಗ್ರಹ ಮೂರನೆಯ ತೀರ್ಥ. ಆದುದರಿಂದ ಮನುಷ್ಯರು ಸರ್ವ ಪ್ರಯತ್ನದಿಂದ ಈ ಎಲ್ಲ ಬಾಹ್ಯತೀರ್ಥ ಹಾಗೂ ಅಂತರಂಗಿಕ ತೀರ್ಥಗಳಲ್ಲಿ ಸ್ನಾನಮಾಡಿ ಪೂತಾತ್ಮರಾಗಬೇಕು.

ದಿನದಲ್ಲಿ ಪ್ರಾತಃಕಾಲವು ಮೂರು ಮುಹೂರ್ತಗಳವರೆಗೆ ಇರುತ್ತದೆ. ಅನಂತರದ ಮೂರು ಮುಹೂರ್ತಗಳು ಸಂಗವ ಎನಿಸುತ್ತದೆ. ಈ ಪ್ರಾತಃಕಾಲ ಹಾಗೂ ಸಂಗವ ಕಾಲದಲ್ಲಿ ಸ್ನಾನದಾನ, ದೇವತಾರ್ಚನೆ, ಅಧ್ಯಯನ, ಅಧ್ಯಾಪನೆಗಳನ್ನು ಮಾಡುವವರು ದೇವತೆಗಳಿಗೆಲ್ಲ ಅತ್ಯಂತ ಪ್ರೀತಿಪಾತ್ರ. ಸಂಗವದ ಅನಂತರದಲ್ಲಿ ಮೂರು ಮುಹೂರ್ತಗಳು ಮಧ್ಯಾಹ್ನ ಎನಿಸುತ್ತವೆ. ಅನಂತರ ಮೂರು ಮುಹೂರ್ತಗಳು ಅಪರಾಹ್ನಕಾಲ. ಇದು ಪಿತೃಗಳಿಗೆ ಅತ್ಯಂತ ಪ್ರೀತಿಕಾರಕ. ಈ ಕಾಲದಲ್ಲಿ ಸ್ನಾನ, ಪಿತೃತರ್ಪಣ, ಪಿಂಡಪ್ರದಾನಾದಿಗಳನ್ನು ಮಾಡಬೇಕು. ಅನಂತರದ ಮೂರು ಮುಹೂರ್ತಗಳು ಸಾಯಾಹ್ನ ಎನಿಸುತ್ತವೆ. ಇದು ರಾಕ್ಷಸಿ ಮುಹೂರ್ತ. ಈ ಕಾಲದಲ್ಲಿ ಶ್ರಾದ್ಧಾದಿಗಳನ್ನು ಮಾಡಬಾರದು. ಹೀಗೆ ಹಗಲು ಹೊತ್ತು ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ನ, ಸಾಯಾಹ್ನ ಎಂಬ ಮೂರು ಮುಹೂರ್ತಗಳ ಐದು ಕಾಲಗಳು ಕೂಡಿ ಒಂದು ದಿನದ ಹಗಲು ಹೊತ್ತಿನಲ್ಲಿ ಹದಿನೈದು ಮುಹೂರ್ತಗಳು ಇರುತ್ತವೆ. ಈ ಹದಿನೈದು ಮುಹೂರ್ತದ ಕಾಲಕ್ಕೆ ಕುತುಬಕಾಲ ಎಂದು ಹೇಳುವರು. ಇದು ಮಧ್ಯಾಹ್ನದ ಕೊನೆಯ ಭಾಗ. ಸೂರ್ಯನು ಈ ಕಾಲದಲ್ಲಿ ಇಳಿಮುಖನಾಗುತ್ತಾನೆ. ಈ ಸಂದರ್ಭದಲ್ಲಿ ಪಿತೃಗಳಿಗೆ ಪಿಂಡಪ್ರದಾನ ಮಾಡುವದರಿಂದ ಅನಂತ ಪುಣ್ಯ.

**ಮಧ್ಯಾಹ್ನಂ ಖಡ್ಗ ಪಾತ್ರಂ ಚ ತಥಾ ನೇಪಾಲ ಕಂಬಲಃ ।**
**ರೂಪ್ಯಂ ದರ್ಭಾಸ್ತಥಾ ಗಾವೋ ದೌಹಿತ್ರಂ ಕುತುಪಾಸ್ತ್ವಿಲಾಃ ॥**

ಮಧ್ಯಾಹ್ನಕಾಲ, ಖಡ್ಗಪಾತ್ರ, ನೇಪಾಲಕಂಬಳಿ, ಬೆಳ್ಳಿ, ದರ್ಭೆ, ಹಸು, ದೌಹಿತ್ರ (ಮಗಳ ಮಗ) ಮತ್ತು ಎಳ್ಳು ಇವು ಕುತುಪ ಎಂದು ಕರೆಯಲ್ಪಡುತ್ತದೆ. ಇವೆಲ್ಲವೂ ಶ್ರಾದ್ಧಕ್ಕೆ ಅತ್ಯಾವಶ್ಯಕ.

**ಪಾಪಂ ಕುಚ್ಛಿತ ಮಿತ್ಯಾಹುಃ ತಸ್ಯ ಸಂತಾಪಕಾರಕಃ ।**
**ಅಷ್ಟಾ ವೇತೇ ಯತಸ್ತಸ್ಮಾತ್ ಕುತಪಾ ಇತಿ ವಿಶ್ರುತಾಃ ॥**

'ಕು' ಎಂದರೆ ಪಾಪ. ಇದನ್ನು 'ತಪ' ಎಂದರೆ ಸುಟ್ಟು ನಾಶಮಾಡುವ ಮೇಲಿನ ಶ್ಲೋಕದಲ್ಲಿ ಹೇಳಿದ ಎಂಟು ಪದಾರ್ಥಗಳು ಕುತುಪ ಎಂದು ಕರೆಯಲ್ಪಡುತ್ತವೆ. ಈ ಕುತುಪಕಾಲದ ಅನಂತರ ನಾಲ್ಕು ಐದು ಮುಹೂರ್ತಗಳಕಾಲ ಶ್ರಾದ್ಧಕ್ಕೆ ನಿಷಿದ್ಧವಾಗಿರುತ್ತದೆ.

**ವಿಷ್ಣೋರ್ದೇಹಾತ್ ಸಮುದ್ಭೂತಾಃ ಕುಶಾಃ ಕೃಷ್ಣ ತಿಲಾಃ ಸ್ಮೃತಾಃ ।**
**ಶ್ರಾದ್ಧಸ್ಯ ರಕ್ಷಣಾರ್ಥಾಯ ಏವಮಾಹುರ್ದಿವೌಕಸಃ ॥**

ದರ್ಭೆ ಮತ್ತು ಕರಿ ಎಳ್ಳುಗಳು ವಿಷ್ಣುದೇಹದಿಂದ ಜನಿಸಿರುತ್ತವೆ. ಆದುದರಿಂದ ಇವು ಪರಮ ಪವಿತ್ರ. ಈ ಕಾರಣದಿಂದ ಮಾನವರು ಸಾಭ್ರಮತೀ ನದೀ ತೀರಕ್ಕೆ ಬಂದು, ಇಲ್ಲಿಯ ನೀರಿನಲ್ಲಿ ಮಿಂದು, ತೀರದಲ್ಲಿ ನಿಂದು ಪಿತೃಗಳನ್ನು ಉದ್ದೇಶಿಸಿ ಕರಿ ಎಳ್ಳು ಕೈಯಲ್ಲಿ ಹಿಡಿದು, ದರ್ಭವನ್ನು ಬೆರಳಲ್ಲಿ ಇಟ್ಟುಕೊಂಡು ನೀರಿನಿಂದ ತರ್ಪಣವನ್ನು ಕೊಡಬೇಕು. ಇದರಿಂದ ಶ್ರಾದ್ಧಘಾತವು ಆಗುವದಿಲ್ಲ.

ಪಾರ್ವತಿ ! ಈ ಕಶ್ಯಪಮುನಿಯು ನನ್ನ ಭಕ್ತ. ನನಗೆ ಪರಮ ಪ್ರೀತ್ಯಾಸ್ಪದ. ಆದ್ದರಿಂದ ನಾನು ಈ ಕಶ್ಯಪ ಮುನಿಗೆ ನನ್ನ ತಲೆಯ ಕೂದಲನ್ನು ಸಡಿಲಿಸಿ ಸಾಭ್ರಮತಿ ಎಂಬ ಹೆಸರಿನ ಪಾವನ ಗಂಗೆಯನ್ನೇ ನೀಡಿದ್ದೇನೆ. ಈ ಸಾಭ್ರಮತಿ ನದಿಯ ಬ್ರಹ್ಮಚಾರಿ ತೀರ್ಥದಲ್ಲಿ ನನ್ನ

ಆತ್ಮವನ್ನೇ ಇಟ್ಟಿದ್ದೇನೆ. ಬ್ರಹ್ಮಚಾರೀಶ ಎಂಬ ಹೆಸರಿನಿಂದ ಲೋಕಹಿತಕ್ಕಾಗಿ ಸನ್ನಿಹಿತನಾಗಿದ್ದೇನೆ. ಬ್ರಹ್ಮಚಾರೀಕ ಎಂಬ ಹೆಸರಿನಿಂದ ಲೋಕಹಿತಕ್ಕಾಗಿ ಸನ್ನಿಹಿತನಾಗಿದ್ದೇನೆ. ಸಾಭ್ರಮತಿ ತೀರದಲ್ಲಿರುವ ಈ ಬ್ರಹ್ಮಚಾರೀಶನನ್ನು ಭಕ್ತಿಯಿಂದ ಪೂಜೆ ಮಾಡಿದವರ ರೋಗ ರುಜಿನಗಳನ್ನು ನಾನು ತತ್‌ಕ್ಷಣದಲ್ಲಿ ಕಳೆಯುತ್ತೇನೆ. ಈ ನದಿಯ ತೀರದಲ್ಲಿ ನಿರಾಹಾರನಾಗಿದ್ದು ಇಂದ್ರಿಯಗಳನ್ನೆಲ್ಲ ಗೆದ್ದು ರಾತ್ರಿ ಕಾಲದಲ್ಲಿ ನನ್ನನ್ನು ಯಾರು ಭಕ್ತಿಯಿಂದ ಪೂಜೆ ಮಾಡುವರೋ ಅವರಿಗೆ ನಾನು ನನ್ನ ಪ್ರತ್ಯಕ್ಷ ದರ್ಶನವನ್ನು ಮಾಡಿಸುತ್ತೇನೆ. ಬೇಡಿದ ವರವನ್ನು ನೀಡುತ್ತೇನೆ. ನನ್ನ ಸ್ಥಾನಕ್ಕೆ ಬಂದವರ ಹಾಗೂ ದರ್ಶನಮಾಡಿದವರ ಎಂಬತ್ತು ನಾಲ್ಕು ವಿಧವಾದ ವ್ಯಾಧಿಗಳನ್ನು ನಾನು ಕಳೆದು ದೂರಮಾಡುತ್ತೇನೆ. ಈ ಸ್ಥಾನದಲ್ಲಿ ನಾನು ನಿತ್ಯವೂ ಸನ್ನಿಹಿತವಾಗಿದ್ದರೂ ನನ್ನ ಲಿಂಗವು ಮಾತ್ರ ಕಾಣುವದಿಲ್ಲ. ಆದರೆ ಅದು ನನ್ನ ಸ್ಥಾನ. ನಾನು ಅಲ್ಲಿ ಯಾವಾಗಲೂ ಇರುತ್ತೇನೆ ಎಂಬುವದರಲ್ಲಿ ಸಂದೇಹವಿಲ್ಲ. ಲಿಂಗವಿಲ್ಲದೇ ನಾನು ಗುಪ್ತ ಗೂಢವಾಗಿ ಇರುವ ಈ ಸ್ಥಾನಕ್ಕೆ ಬ್ರಹ್ಮಚಾರೀಶ ಸ್ಥಾನ ಎಂದು ಲೋಕದಲ್ಲಿ ಪ್ರಸಿದ್ಧಿಯಾಗುವದು. ಈ ಹೆಸರು ಬರಲು ಕಾರಣವನ್ನು ಹೇಳುತ್ತೇನೆ ಕೇಳು.

ಪೂರ್ವ ಕಾಲದಲ್ಲಿ ಸೂರ್ಯವಂಶದಲ್ಲಿ ಬ್ರಹ್ಮದತ್ತ ಎಂಬ ಹೆಸರಿನ ರಾಜನು ಈ ಸಾಭ್ರಮತಿ ನದೀತೀರದಲ್ಲಿ ನಿಂತು ಘೋರ ತಪಸ್ಸನ್ನು ಮಾಡಿದ. ಮಾಸೋಪವಾಸಾದಿ ಅನೇಕ ಕಠಿಣ ವ್ರತಗಳನ್ನು ಆಚರಿಸಿದ. ಬೇಸಿಗೆಯಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ತಪಂಗೈದ. ಎಲ್ಲ ವಿಧವಾದ ವ್ರತ, ನಿಯಮ, ಜಪ, ತಪಸ್ಸುಗಳನ್ನು ಅನೂಚಾನವಾಗಿ ಆಚರಿಸಿದ. ನಾನು ಅವನಿಗೆ ಪ್ರತ್ಯಕ್ಷ ಗೋಚರನಾಗಿ ಬೇಕಾದ ವರಬೇಡು ಎಂದು ಹೇಳಿದೆ.

**ಬ್ರಹ್ಮದತ್ತ:-** ದೇವೋತ್ತಮನಾದ ಮಹಾದೇವ ! ನೀನು ನನ್ನ ಹೆಸರಿನಿಂದ ಭೂಮಿಯಲ್ಲಿ ಇಳಿದು ಬಂದು ನಾನು ತಪಸ್ಸು ಮಾಡಿದ ಈ ಸ್ಥಾನದಲ್ಲಿ ನಿರಂತರ ನೆಲೆಸಿ ನಿಲ್ಲು.

ಆ ಭಕ್ತನಾದ ಬ್ರಹ್ಮದತ್ತನ ಮಾತನ್ನು ಮನ್ನಿಸಿ ನಾನು ಅಲ್ಲಿ ನೆಲೆನಿಲ್ಲಲು ಒಪ್ಪಿದೆ. ಮತ್ತು ಆ ಮಹಾರಾಜನಿಗೆ ಅವನ ಅಪೇಕ್ಷಿತವಾದ ವರವನ್ನು ನೀಡಿದೆ. ಆ ವರವನ್ನು ಅನುಸರಿಸಿ ನಾನು ಈಗ ಬ್ರಹ್ಮಚಾರೀಶ ಎಂಬ ಹೆಸರಿನಿಂದ ಅಲ್ಲಿ ನಿತ್ಯ ಸನ್ನಿಹಿತನಾಗಿದ್ದೇನೆ. ಇಲ್ಲಿಗೆ ಬಂದು ಕಲಿಯುಗದಲ್ಲಿ ಯಾವ ಜನರು ನಿರಾಹಾರರಾಗಿ ನಿಂತು ರುದ್ರ ಜಪ ಮುಂತಾದವುಗಳನ್ನು ಮಾಡುವರೋ ಅವರಿಗೆ ನಾನು ಸ್ತ್ರೀ ಸೌಖ್ಯವನ್ನು, ಪುತ್ರ ಸೌಖ್ಯವನ್ನೂ, ಕೀರ್ತಿಯನ್ನೂ, ಕಲ್ಯಾಣವನ್ನೂ ಕೊಟ್ಟು ಅನುಗ್ರಹಿಸುತ್ತೇನೆ. ಇದರಲ್ಲಿ ಸಂದೇಹವಿಲ್ಲ.

ಇದಾದ ಬಳಿಕ ಆ ಬ್ರಹ್ಮದತ್ತ ಮಹಾರಾಜನು ಮತ್ತೊಂದು ಎಲ್ಲರಿಗೂ ಗೋಚರವಾಗುವಂತೆ ಗಂಗಾಧರ ಎಂಬ ಹೆಸರಿನಿಂದ ಒಂದು ಶಿವಲಿಂಗವನ್ನು ಸ್ಥಾಪನೆಮಾಡಿ ಐದು ದಿನ ಇದ್ದು ಪೂಜೆ ಮಾಡಿ ತನ್ನ ರಾಜ್ಯಕ್ಕೆ ಹೊರಟು ಹೋದ. ಹತ್ತುಸಾವಿರ ವರ್ಷ ವೈಭವದಿಂದ ರಾಜ್ಯವಾಳಿ ಕೊನೆಗೆ ಬ್ರಹ್ಮಲೋಕಕ್ಕೆ ಪ್ರಯಾಣ ಮಾಡಿದ.

ದೇವಿ ! ಈಗ ಈ ಸಾಭ್ರಮತಿ ನದಿಯ ತೀರದಲ್ಲಿ ನನ್ನ ಹೆಸರಿನಿಂದ ಎರಡು ಸ್ಥಾನಗಳು ಪ್ರಸಿದ್ಧವಾಗಿರುತ್ತವೆ. ಒಂದು ಲಿಂಗವಿಲ್ಲದ ಬ್ರಹ್ಮಚಾರೀಶ ಎಂಬ ನನ್ನ ಸ್ಥಾನ. ಎರಡನೆಯದು ಬ್ರಹ್ಮದತ್ತ ರಾಜನು ಲಿಂಗರೂಪದಿಂದ ಸ್ಥಾಪನೆ ಮಾಡಿದ ಗಂಗಾಧರ ಲಿಂಗ. ಈ ಎರಡೂ ಸ್ಥಾನಗಳಲ್ಲಿ ನನ್ನ ಸನ್ನಿಧಾನವಿದ್ದರೂ ಭಕ್ತರು ಗಂಗಾಧರ ಲಿಂಗದ ಬಳಿಗೆ ಹೋಗಿ ರುದ್ರಾಭಿಷೇಕ, ಪುಷ್ಪಾರ್ಚನೆ, ಧೂಪ ದೀಪ, ನೈವೇದ್ಯ, ಬಿಲ್ವಪತ್ರಿ,

ಚಂದನಾದಿಗಳಿಂದ ಪೂಜೆ ಮಾಡಿದವರು ನನ್ನ ಪರಮಾನುಗ್ರಹಕ್ಕೆ ಪಾತ್ರರಾಗುತ್ತಾರೆ, ಮತ್ತು ನನ್ನ ಲೋಕಕ್ಕೆ ಬರುತ್ತಾರೆ. ಈ ಗಂಗಾಧರ ಲಿಂಗದ ದರ್ಶನದಿಂದ ರೋಗನಾಶ, ಪೂಜೆಯಿಂದ ಆಯುಷ್ಯ ವೃದ್ಧಿ. ರುದ್ರಾಭಿಷೇಕದಿಂದ ಮೋಕ್ಷ. ಧ್ಯಾನದಿಂದ ಶಿವಸಾರೂಪ್ಯ.

ಸುಂದರಿ! ಈ ಸಾಭ್ರಮತಿ ತೀರದಲ್ಲಿ ರಾಜಖಡ್ಗ ಎಂಬ ತೀರ್ಥವು ಇರುತ್ತದೆ. ಅದರ ಸಮಾಚಾರವನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಸೂರ್ಯವಂಶದಲ್ಲಿ ವೈಕರ್ತನ ಎಂಬ ಒಬ್ಬ ಅರಸನು ಇದ್ದ. ಅವನು ಮಹಾಪಾಪಿಷ್ಠ. ಬ್ರಾಹ್ಮಣನಿಂದಕ, ಗುರುದ್ರೋಹಿ, ಪರಸ್ತ್ರೀ ಲಂಪಟ, ವಿಷ್ಣುದ್ವೇಷಿ, ಮೇಲೆ ಪ್ರಜಾಪೀಡಕ. ಇಂಥ ಮಹಾದುಷ್ಟನಾದ ಆ ರಾಜನು ತನ್ನ ಅತ್ಯುತ್ಕಟವಾದ ಪಾಪದ ಫಲವಾಗಿ ಕುಷ್ಠರೋಗಿಷ್ಟನಾದ. ಮೈತುಂಬಾ ಆ ಭೀಕರವಾದ ರೋಗವು ವ್ಯಾಪಿಸಿ ಬಲಿತು ನಿಂತಿತು. ಆಗ ರಾಜನಿಗೆ ಭಯಂಕರ ಚಿಂತೆ. ತನಗೆ ತಗಲಿದ ಈ ಭಯಂಕರವಾದ ಬೇನೆಯಿಂದ ಬಿಡುಗಡೆ ಹೊಂದುವ ಬಗೆ ಯಾವದು? ಎಂಬುದನ್ನು ತಿಳಿಯದೇ ಚಿಂತೆಯಲ್ಲಿ ಬೆಂದುಹೋದ. ಕಿಂಕರ್ತವ್ಯಮೂಢನಾಗಿ ಹಗಲಿರುಳು ಚಿಂತೋದ್ಭ್ರಾಂತಿ ಸಂತಾಪಗಳಿಂದ ಕೊರಗಿ ಸೊರಗಿ ಸವೆದ.

ಮುಂದೆ ಒಂದಾನೊಂದು ದಿನ ದೈವಯೋಗದಿಂದ ಅವನು ಬೇಟೆಯಾಡಲಿಕ್ಕೆ ಅರಣ್ಯಕ್ಕೆ ತೆರಳಿದ. ಅನೇಕ ಕ್ರೂರ ಪ್ರಾಣಿಗಳನ್ನು ಖಡ್ಗದಿಂದ ಕೊಚ್ಚಿ ಕಡಿದು ಕೊಂದು ಕೆಡವಿದ. ಮಧ್ಯಾಹ್ನದ ವರೆಗೆ ಬೇಟೆಯ ಹುಚ್ಚಿನಲ್ಲಿ ವನದಲ್ಲಿ ತಿರುಗಿದ. ಹರಿಕೋರೆಗಳಲ್ಲಿ ಅಂಡಲೆದ. ಆ ಬೆಂಗಾಡಿನಲ್ಲಿ ಕಾಡು ಮಿಕಗಳ ಹಿಂದೆ ಓಡಿಓಡಿ ದಮ್ಮನೆ ದಣಿದ. ಬಿಸಿಲಿಗೆ ಬಸವಳಿದು ಬಾಯಾರಿಕೆಯಿಂದ ಬಳಲಿ ಬೆಂಡಾದ. ಅತ್ತಿತ್ತ ನೀರನ್ನು ಹುಡುಕುತ್ತ ಕಾಡಿನ ಗೂಡಿನಲ್ಲಿ ಅಲೆಯುತ್ತ ಇರುವಾಗ ಅವನಿಗೆ ವನಗರ್ಭದಲ್ಲಿ ಹರಿಯುತ್ತಿರುವ ಸಾಭ್ರಮತಿಯು ಗೋಚರಿಸಿತು. ಧಾವಿಸಿ ಬಂದು ಆ ನದೀ ನೀರಿನಲ್ಲಿ ಮಿಂದ, ಯಥೇಚ್ಛವಾಗಿ ನೀರು ಕುಡಿದ. ಆ ನದಿಯಲ್ಲಿ ಸ್ನಾನ ಜಲಪಾನ ಮಾತ್ರದಿಂದಲೇ ಅವನ ಶರೀರಕ್ಕೆ ಅಂಟಿದ ಕುಷ್ಠರೋಗವು ತತ್ಕ್ಷಣವೇ ತೊಲಗಿ ಹೋಯಿತು. ದೇಹ ದಿವ್ಯತೆಯನ್ನು ಪಡೆಯಿತು. ಸುಂದರವಾದ ಆ ದೇಹದಲ್ಲಿ ಕಳೆ ಕಾಂತಿಗಳು ಸೂಸಿದವು. ಅಪ್ಸರಾ ಸೌಂದರ್ಯವು ಒಮ್ಮೆಲೆ ಅವನ ಕಾಯದಲ್ಲಿ ಕಳಕಳಿಸತೊಡಗಿತು. ಹೀಗೆ ದಿವ್ಯ ರೂಪವನ್ನು ಹೊಂದಿ ಆ ತೊರೆಯ ತೀರದಲ್ಲಿರುವ ಈಶ್ವರನ ಪೂಜೆಯನ್ನು ಮಾಡಿ ಮಹಾರಾಜ ವೈಕರ್ತನು ತನ್ನ ರಾಜಧಾನಿಗೆ ತೆರಳಿದ. ಅಲ್ಲಿ ಬಹುಕಾಲ ರಾಜ್ಯಸುಖವನ್ನು ಅನುಭವಿಸಿದ. ಅನಂತರ ಪರಮ ಗತಿಯನ್ನ ಐದಿದ. ಅಂದಿನಿಂದ ಈ ತೀರ್ಥಕ್ಕೆ ರಾಜಖಡ್ಗ ಎಂದು ಹೆಸರು ಬಂದಿತು ಅಲ್ಲಿ ಇರುವ ಶಿವಲಿಂಗವು ವಿಶ್ವೇಶ್ವರ ಎಂದು ಪ್ರಸಿದ್ಧವಾಗಿದೆ ಕಲಿಯುಗದಲ್ಲಿ, ಕೃತಯುಗದಲ್ಲಿ ಇದೇ ಶಿವಲಿಂಗಕ್ಕೆ ಸತ್ಯೇಶ್ವರ, ತ್ರೇತಾಯುಗದಲ್ಲಿ ಭುವನೇಶ್ವರ, ದ್ವಾಪರಯುಗದಲ್ಲಿ ರಾಜೇಶ್ವರ ಎಂದೂ, ಕಲಿಯುಗದಲ್ಲಿ ವಿಶ್ವೇಶ್ವರ ಎಂದೂ ಕರೆಯುತ್ತಾರೆ. ಇದರ ಮುಂದಿರುವ ತೀರ್ಥಕ್ಕೆ ರಾಜಖಡ್ಗೇಶ್ವರ ಎಂದು ಸಂಜ್ಞೆಯು ಬಂದಿದೆ. ಇಲ್ಲಿ ಸ್ನಾನ, ದಾನ, ಜಲಪಾನ ಪಿತೃಗಳಿಗೆ ಪಿಂಡಪ್ರದಾನಾದಿಗಳನ್ನು ಮಾಡಿದವರು ಬ್ರಹ್ಮಹತ್ಯಾದಿ ಮಹಾಪಾಪಗಳನ್ನು ಮಾಡಿದ್ದರೂ ಅವುಗಳಿಂದ ಮುಕ್ತರಾಗಿ ಶಿವನ ಸನ್ನಿಧಿಯನ್ನು ಸೇರುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಸಾಭ್ರಮತಿಯ ಮಾಹಾತ್ಮ್ಯ ವರ್ಣನೆ ಎಂಬ ನೂರಮೂವತ್ತೆರಡನೆಯ ಅಧ್ಯಾಯ ಮುಗಿದುದು*

**ಪಾರ್ವತಿ:-** ಸಾಭ್ರಮತೀ ನದಿಯು ನಂದಿ ಕುಂಡದಿಂದ ಹೊರಹೊಮ್ಮಿ ಯಾವ ಯಾವ ದೇಶಗಳನ್ನು ಪವಿತ್ರಗೊಳಿಸಿದಳು? ಇದನ್ನು ನನಗೆ ತಿಳಿಸು. ಅರ್ಬುದ ಪರ್ವತವನ್ನು ದಾಟಿ ಎಷ್ಟು ತೀರ್ಥಗಳನ್ನು ಎಲ್ಲಿ ನಿರ್ಮಿಸಿದಳು?

ಇದನ್ನು ವಿಸ್ತಾರವಾಗಿ ನನಗೆ ನಿರೂಪಿಸು. ಈ ರೀತಿಯಾಗಿ ಪಾರ್ವತಿಯು ಪ್ರಶ್ನೆಯನ್ನು ಮಾಡಿದ ಬಳಿಕ ಪರಮೇಶ್ವರನು ಪ್ರಸನ್ನನಾಗಿ ಜಗನ್ಮೋಹಿನಿಯಾದ ಆ ತನ್ನ ಮನದನ್ನೆಗೆ ವಾತ್ಸಲ್ಯದಿಂದ ನುಡಿದ.

**ಮಹಾದೇವ:-** ಸಾಭ್ರಮತಿಯು ನಂದಿ ತೀರ್ಥದಿಂದ ಹೊರಬಿದ್ದು ಹರಿದ ಬಳಿಕ ಋಷಿಗಳ ಪ್ರಾರ್ಥನೆಯಿಂದ ಮೊಟ್ಟಮೊದಲು ಕಪಾಲಮೋಚನ ಎಂಬ ತೀರ್ಥವು ನಿರ್ಮಿತವಾಯಿತು. ಈ ಪರಮಪಾವನವಾದ ಕಪಾಲಮೋಚನ ತೀರ್ಥದಲ್ಲಿ ನಾನು ನನ್ನ ಕೈಗೆ ಅಂಟಿಕೊಂಡ ಬ್ರಹ್ಮಕಪಾಲವನ್ನು ತ್ಯಜಿಸಿದೆ. ಆದುದರಿಂದಲೇ ಇದು 'ಪವಿತ್ರ ಕಪಾಲಮೋಚನ ತೀರ್ಥ'ವೆಂದು ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಪಡೆಯಿತು. ಕಪಾಲಕುಂಡ, ಕಪಾಲಮೋಚನ ತೀರ್ಥ ಮತ್ತು ತೀರ್ಥರಾಜ ಎಂಬ ಹೆಸರುಗಳಿಂದ ಪ್ರಖ್ಯಾತವಾದ ಈ ತೀರ್ಥದಲ್ಲಿ ಎಲ್ಲ ದೇವಾಧಿದೇವತೆಗಳೂ, ನಾಗರೂ, ಗಂಧರ್ವರೂ, ಕಿನ್ನರರೂ ವಾಸಮಾಡಿದ್ದಾರೆ. ಮೂರು ಲೋಕದಲ್ಲಿ ಮಿಶ್ರುತವಾದ ಈ ಕಪಾಲಮೋಚನ ತೀರ್ಥವು ಜ್ಞಾನಪ್ರದವೂ ಮುಕ್ತಿದಾಯಕವೂ ಆಗಿರುತ್ತದೆ. ಈ ತೀರ್ಥದಲ್ಲಿ ಸ್ನಾನಮಾಡಿ ಶುಚಿರ್ಭೂತನಾಗಿ ಈ ಕಪಾಲೇಶನನ್ನು ಪೂಜೆಮಾಡಬೇಕು. ಒಂದು ರಾತ್ರಿ ಉಪವಾಸ ಮಾಡಿ ಶ್ರೀಹರಿಯ ಅರ್ಚನೆ ಮಾಡಿ, ಬ್ರಾಹ್ಮಣಭೋಜನ ಮಾಡಿಸಬೇಕು. ಇಲ್ಲಿ ವಸ್ತ್ರದಾನ ಮಾಡಿದವರು ಅಗ್ನಿಹೋತ್ರ ಯಾಗ ಮಾಡಿದ ಫಲವನ್ನು ಹೊಂದುವನು. ಇಲ್ಲಿ ದರ್ಶನ ವ್ರತವನ್ನು ಮಾಡಿದವನು, ದೇಹತ್ಯಾಗವನ್ನು ಮಾಡಿದವನು ನಿಶ್ಚಿತವಾಗಿಯೂ ಶಿವಲೋಕವನ್ನು ಪಡೆಯುವನು.

ಪೂರ್ವಕಾಲದಲ್ಲಿ ಈ ತೀರ್ಥದಲ್ಲಿ 'ಸೌದಾಸ' ಎಂಬ ಮಹಾರಾಜನು ಸ್ನಾನ ಮಾಡಿ ತನ್ನ ಬ್ರಹ್ಮಹತ್ಯಾ ಪಾಪವನ್ನು ಕಳೆದುಕೊಂಡ ಮತ್ತು ದಿವ್ಯಜ್ಞಾನ ಪಡೆದ. ಭಗೀರಥನ ವಂಶದಲ್ಲಿ ಸುದಾಸನೆಂಬ ರಾಜರ್ಷಿ ಆಗಿಹೋದ. ಆತನ ಮಗ ಮಿತ್ರಸಹನು ಸೌದಾಸನೆಂಬ ಹೆಸರಿನಿಂದ ವಿಶ್ರುತನಾಗಿದ್ದನು. ಸೌದಾಸನಿಗೆ ವಶಿಷ್ಠನ ಶಾಪದಿಂದ ರಾಕ್ಷಸೀ ಶರೀರವು ಪ್ರಾಪ್ತವಾಗಿತ್ತು.

ಆಗ ರಾಕ್ಷಸಭಾವವನ್ನು ಹೊಂದಿದ್ದರೂ ಆ ಸೌದಾಸನು ತನ್ನ ಸುದೈವದಿಂದ ಈ ಪವಿತ್ರ ಸಾಭ್ರಮತೀ ತೀರಕ್ಕೆ ಆಕಸ್ಮಾತ್ತಾಗಿ ಬಂದು ಅಲ್ಲಿ ಸ್ನಾನ ಮಾಡಿ, ತನ್ನ ಘೋರ ರೂಪದಿಂದ ಮುಕ್ತನಾಗಿ ದಿವ್ಯಗತಿಯನ್ನು ಹೊಂದಿದ. ಈ ನಂದಿತೀರ್ಥದಲ್ಲಿ ಗಂಗಾ, ಯಮುನಾ, ಗೋದಾವರೀ, ಸರಸ್ವತೀ ಮುಂತಾದ ಪುಣ್ಯತೀರ್ಥಗಳು ಸರ್ವದಾ ವಾಸಮಾಡಿರುತ್ತವೆ. ಈ ನಂದಿತೀರ್ಥದ ದಂಡೆಯ ಮೇಲೆ ಕೆಲದಿನ ಇದ್ದು ಸ್ನಾನಮಾಡಿ, ಕಪಾಲತೀರ್ಥದಲ್ಲೂ ಸ್ನಾನಮಾಡಿ, ಕಪಾಲೇಶನನ್ನು ಪೂಜಿಸಿ, ಗೋದಾನ, ಭೂದಾನ,

ಶಯ್ಯಾದಾನ, ಹಾಗೆಯೇ ಕನ್ಯಾದಾನ ಮಾಡಿದವರು ಸಕಲ ಪಾಪಗಳಿಂದ ಮುಕ್ತರಾಗಿ ಸದ್ಗತಿಯನ್ನು ಹೊಂದುತ್ತಾರೆ. ಈ ನಂದಿತೀರ್ಥದಲ್ಲಿ ಸ್ನಾನಮಾಡಿ ಭಕ್ತಿಯಿಂದ ಈಶನ ಆರಾಧನೆ ಮಾಡುವದರಿಂದ ಸಂಪಾದಿತವಾಗುವಷ್ಟು ಪುಣ್ಯವು ಬೇರೆ ಯಾವ ತೀರ್ಥಸ್ನಾನದಿಂದಲೂ ಬರಲಾರದು. ಸಾಭ್ರಮತಿಯಲ್ಲಿ ಅವಗಾಹನೆಯಿಂದ ಸ್ನಾನಮಾಡಿದವರು ಶುದ್ಧವಾಗುತ್ತಾರಲ್ಲದೇ. ಈ ಸ್ನಾನಮಾಡಿದವರನ್ನು ಸ್ಪರ್ಶಿಸಿದವರೂ ಶುದ್ಧರಾಗುತ್ತಾರೆ. ಇಲ್ಲಿ ಶ್ರಾದ್ಧಾದಿ ಪಿತೃಕಾರ್ಯಗಳನ್ನು ಮಾಡಿದವರು ತಮ್ಮ ಪಿತೃಗಳೊಂದಿಗೆ ದಿವ್ಯ ಲೋಕಗಳನ್ನು ಹೊಂದುತ್ತಾರೆ. ಈ ಅಖ್ಯಾನವನ್ನು ಕೇಳಿದವರು ಸರ್ವಪಾಪಗಳಿಂದ ಮುಕ್ತರಾಗುತ್ತಾರೆ. ಕರ್ಮಣಾ, ವಾಚಾ, ಮನಸಾ ಮಹೇಶ್ವರನನ್ನು ಸ್ತುತಿಸಿದವರು ದುಃಖಾದಿ ಕ್ಲೇಶಗಳಿಂದ ಅಸ್ಪೃಷ್ಟರಾಗುಳಿಯುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ನಂದೀ ತೀರ್ಥದ ಮಹಿಮೆ ಎಂಬ ನೂರಮೂವತ್ತಮೂರನೇಯ ಅಧ್ಯಾಯ ಮುಗಿದುದು*



## ವಿಕೀರ್ಣ ತೀರ್ಥದ ಮಹಿಮೆ — ಅಧ್ಯಾಯ - ೧೩೪

**ಮಹಾದೇವ:-** ನಂದಿ ಪ್ರದೇಶದಿಂದ ಆ ಸಾಭ್ರಮತೀ ನದಿಯು ಎಲ್ಲ ವಿಪ್ರರ್ಷಿಗಳಿಂದಲೂ ಸೇವಿತಗೊಂಡು ವಿಕೀರ್ಣ ಎಂಬ ವನಪ್ರದೇಶಕ್ಕೆ ಹರಿದು ಬಂದಿತು. ಅತ್ಯಂತ ವೇಗವಾಗಿ ಹರಿಯುವ ಈ ನದಿಗೆ ಪರ್ವತಪ್ರದೇಶಗಳು ತಡೆನೀಡಿದ ಪರಿಣಾಮವಾಗಿ, ಆ ನದೀಪ್ರವಾಹವು ಏಳು ಭಾಗವಾಗಿ ತಕ್ಷಣ ಸಮುದ್ರಗಾಮಿನಿಯಾಗಿ ಹರಿಯಿತು. ಈ ಸಾಭ್ರಮತೀ ನದಿಯ ಏಳು ಕವಲುಗಳೂ ಪರಮ ಪುಣ್ಯಕರವಾದ ಸಪ್ತಸ್ರೋತಸ್ವಿನೀ ನದಿಗಳೆಂದು ಪ್ರಸಿದ್ಧವಾಗಿವೆ. ಅವುಗಳಲ್ಲಿ ಮೊದಲನೆಯದಕ್ಕೆ ಸಾಭ್ರಮತೀ ಎಂದೇ ಹೆಸರು. ಎರಡನೆಯ ಜಲಪ್ರವಾಹವು **'ಸೇಟಿಕಾ'** ಎಂದೂ ಮೂರನೆಯ ಜಲಪ್ರವಾಹವು **ವಲ್ಕಿನೀ** ಎಂದೂ, ನಾಲ್ಕನೆಯದು **ಹಿರಣ್ಮಯೀ** ಎಂದೂ ಐದನೆಯದು ಹಸ್ತಿಮತೀ ಎಂದೂ ಹಾಗೂ ಆರನೆಯ ಜಲವೇಣಿಯು **ವೇತ್ರವತೀ** ಎಂದೂ ಹೆಸರು ಪಡೆದಿದೆ. ಹಿಂದೆ ವೃತ್ರಾಸುರನು ಒಂದು ದೊಡ್ಡದಾದ ಕೂಪವನ್ನು ನಿರ್ಮಿಸಿದ. ಆ ಕೂಪದಿಂದ ಹೊರಹೊಮ್ಮಿ ಹರಿದು ಬಂದಿದ್ದರಿಂದ (ಈ ಆರನೆಯ ಜಲಪ್ರವಾಹವು) ವೇತ್ರವತೀ ಎಂಬ ಹೆಸರಿನಿಂದ ಜಗತ್ತಿನಲ್ಲಿ ಪ್ರಖ್ಯಾತವಾಯಿತು. ಸಾಭ್ರಮತಿ ನದಿಯ ಏಳನೆಯ ಪ್ರವಾಹವೇ **ಭದ್ರಾಮುಖೀ** ಎಂಬ ಹೆಸರಿನಿಂದ ಲೋಕಪಾವನೆಯಾಗಿ ಹರಿದು ಹೊಮ್ಮಿದೆ. ಹೀಗೆ ಸಾಭ್ರಮತಿಯು ತನ್ನ ಏಳು ಕವಲು ಪ್ರವಾಹಗಳಿಂದ ಬೇರೆ ಬೇರೆ ಪ್ರದೇಶಗಳನ್ನೂ ಜಾನಪದಗಳನ್ನೂ ಪವಿತ್ರಗೊಳಿಸಿ **ಸಪ್ತಸ್ರೋತಾ, ಅಥ ಸಪ್ತಸ್ರೋತಸ್ವಿನೀ** ಎಂದು ಪ್ರತಿಷ್ಠೆಯನ್ನು ಪಡೆದಿದ್ದಾಳೆ. ಅವುಗಳಲ್ಲಿ ತನ್ನ ಪ್ರಥಮ ಜಲಪ್ರವಾಹದಿಂದ ಹರಿದು ಬಂದ ಸಾಭ್ರಮತಿಯು ವಿಕೀರ್ಣತೀರ್ಥ ಎಂಬಲ್ಲಿ ಪ್ರವಹಿಸಿದ್ದಾಳೆ. ಆ ವಿಕೀರ್ಣವನದಲ್ಲಿ ಪ್ರವಹಿಸಿದ ಸಾಭ್ರಮತಿಯ ಸನ್ನಿಧಾನದಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧಮಾಡಿದವರು ಗಯಾದಲ್ಲಿ ಪಿಂಡಪ್ರದಾನ ಮಾಡಿದರೆ ಬರುವ ಫಲಕ್ಕೆ ಸಮನಾದ ಫಲವನ್ನು ಹೊಂದುವರು.

ಈ ವಿಕೀರ್ಣ ತೀರ್ಥದಲ್ಲಿ ಶ್ರಾದ್ಧಾದಿಗಳನ್ನು ಮಾಡಿದರೆ ಲುಪ್ತಪಿಂಡೋದಕರಾದ ಎಲ್ಲ ಪಿತೃಗಳೂ ಉದ್ಧೃತರಾಗುತ್ತಾರೆ. ಇಲ್ಲಿ ಶ್ರಾದ್ಧ ಮಾಡಿದರೆ 'ಗಾಣಪತ್ಯ' ಎಂಬ ಅಧಿಕಾರ ಸ್ಥಾನವೂ ದೊರಕುತ್ತದೆ. ಆದುದರಿಂದ ಸಪ್ತರ್ಷಿಗಳ ಉದ್ಭವಕ್ಕೆ ಕಾರಣವಾದ ಈ ಸಾಭ್ರಮತೀ ನದೀ ಶಾಖೆಗಳಲ್ಲಿ ಹರಿದು ಹೊಮ್ಮಿದ ಪುಣ್ಯ ಪಯಸ್ವಿನೀ ಪ್ರವಾಹದಲ್ಲಿ ಸ್ನಾನ ಮಾಡಿದವರು ಋಷಿಲೋಕವನ್ನು ಹೊಂದುತ್ತಾರೆ. ಇದು ಎಲ್ಲ ತೀರ್ಥಗಳಲ್ಲಿ ಶ್ರೇಷ್ಠವಾದ ತೀರ್ಥ. ಇಲ್ಲಿ ಕಲಿಯುಗದಲ್ಲಿ ಸ್ನಾನ ಮಾಡಿದ ಮಾನವರು ಪುಣ್ಯಭಾಗಿಗಳಾಗುತ್ತಾರೆ. ಇದು ಗಯಾತೀರ್ಥಕ್ಕೆ ಸಮಾನವಾದ ತೀರ್ಥ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ವಿಕೀರ್ಣ ತೀರ್ಥದ ಮಹಿಮೆ ಎಂಬ ನೂರಮೂವತ್ತಾನಾಲ್ಕನೇಯ ಅಧ್ಯಾಯ ಮುಗಿದುದು*



## ಶ್ವೇತಾ ತೀರ್ಥದ ಮಹಾತ್ಮ್ಯ ವರ್ಣನೆ | ಅಧ್ಯಾಯ - ೧೩೫

ಈ ವಿಕೀರ್ಣ ತೀರ್ಥದ ಅನಂತರ **'ಶ್ವೇತೋದ್ಭವ'** ಎಂಬ ತೀರ್ಥವಿರುತ್ತದೆ. ಅಲ್ಲಿ ನನ್ನ ಬೆನ್ನಿಗೆ ಹತ್ತಿದ ಅಂದರೆ ಮಹಾದೇವರ ಪೃಷ್ಠಲಗ್ನವಾದ ಭಸ್ಮದಿಂದ ಒಂದು ನದಿಯು ಉತ್ಪನ್ನವಾಗಿರುತ್ತದೆ. ಅದಕ್ಕೆ 'ಶ್ವೇತಾನದೀ' ಎಂದು ಹೆಸರು. ಮೂರು ಲೋಕಗಳಲ್ಲಿಯೇ ಪ್ರಖ್ಯಾತವಾದ 'ಸರ್ವ ಪಾಪ ಪ್ರಣಾಶಿನೀ' ಇದಾಗಿದೆ. ಮಹಾದೇವರ ಅಂಗಾಂಗಳ ಭಸ್ಮದ ಸಂಯೋಗದಿಂದ ಜನಿಸಿದ್ದರಿಂದ ಎಲ್ಲ ದೇವಾಧಿದೇವತೆಗಳೂ ಈ ನದಿಯನ್ನು ಗೌರವಿಸುತ್ತಾರೆ. ಮಾನಿಸುತ್ತಾರೆ. ಈ ಪವಿತ್ರ ಜಲದಲ್ಲಿ ಸ್ನಾನ ಮಾಡಿ ಶುಚಿಭೂರ್ತರಾಗಿ ಮೂರು ರಾತ್ರಿ ಉಪವಾಸ ಮಾಡಿ ಮಹಾಕಾಲೇಶ್ವರನ ದರ್ಶನವನ್ನು ತೆಗೆದುಕೊಂಡವರು ರುದ್ರಲೋಕಕ್ಕೆ ಪ್ರಯಾಣಿಸುತ್ತಾರೆ. ಶ್ವೇತಗಂಗಾ ಎಂದು ಹೆಸರಾದ ಈ ಸಾಭ್ರಮತೀ ನದಿಯ ಕವಲುನದೀ ಸಂಗಮದಲ್ಲಿ ನಾನು ಯಾವಾಗಲೂ ಸನ್ನಿಹಿತನಾಗಿರುತ್ತೇನೆ. ಆದುದರಿಂದ ಇಂಥ ಪವಿತ್ರ ಕ್ಷೇತ್ರದಲ್ಲಿ ಧೂಪ, ದೀಪಗಳಿಂದ ಪೂಜೆಗೈದು, ಪುಷ್ಪಾದಿಗಳಿಂದ ಅಲಂಕರಿಸಿ ನೀರಾಜಿನ ಬೆಳಗಿ ಈಶ್ವರನನ್ನು ಆರಾಧಿಸಿದ ನರಶ್ರೇಷ್ಠರು ಅನಂತ ಫಲವನ್ನು ಹೊಂದುತ್ತಾರೆಂಬುದು ಖಚಿತ. ಬಿಲ್ವದಳಗಳನ್ನು ಆಯ್ದು ಶಿವನ ಮೇಲೆ ಭಕ್ತಿಯಿಂದ ಸಮರ್ಪಿಸಿ ಆರಾಧಿಸಿದವರು ಶಿವಸಾನ್ನಿಧ್ಯವನ್ನು ಸೇರುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಶ್ವೇತಾ ತೀರ್ಥದ ಮಹಾತ್ಮ್ಯ ವರ್ಣನೆ ಎಂಬ ನೂರಮೂವತ್ತೈದನೇಯ ಅಧ್ಯಾಯ ಮುಗಿದುದು*



## ಗಣ ತೀರ್ಥದ ಮಾಹಾತ್ಮ್ಯ

**ಅಧ್ಯಾಯ - ೧೩೬**

**ಮಹಾದೇವ:-** ಯಾತ್ರಿಕನು ಶ್ವೇತಾ ತೀರ್ಥದ ಅನಂತರ ಗಣ ತೀರ್ಥಕ್ಕೆ ಯಾತ್ರೆ ಬೆಳೆಸಬೇಕು. ಈ ಗಣ ತೀರ್ಥಕ್ಕೆ ತ್ರಿವಿಷ್ಟಪ ಎಂದೂ ಹೆಸರಿದೆ. ಚಂದನಾ ತಟದಲ್ಲಿರುವ ಈ ತ್ರಿವಿಷ್ಟಪದಲ್ಲಿ ಹುಣ್ಣಿಮೆ ದಿನ ಸ್ನಾನ ಮಾಡಿ ಭಗವತ್ಪೂಜೆಗೈದವರು ಬ್ರಹ್ಮಹತ್ಯಾದಿ ಪಾಪಗಳಿಂದಲೂ ಮುಕ್ತರಾಗುತ್ತಾರೆ. ಇಲ್ಲಿ ನಾಲ್ಕು ತಿಂಗಳ ಕಾಲ ಅದರಲ್ಲಿಯೂ ಚಾತುರ್ಮಾಸ್ಯ ಕಾಲ ಈ ಗಣತೀರ್ಥದಲ್ಲಿ ಸ್ನಾನ ಮಾಡಿ ಶ್ರಾವಣಮಾಸದ ಕೃಷ್ಣಾಷ್ಟಮೀ ದಿನ ಉಪವಾಸ ಮಾಡಿ ಬಕುಲಾಸಂಗಮದಲ್ಲಿ ಅವಗಾಹನ ಸ್ನಾನಗೈದು ಶ್ರೀಕೃಷ್ಣನನ್ನು ಪೂಜಿಸಿದವನು ಸ್ವರ್ಗಲೋಕಕ್ಕೆ ಪಯಣ ಬೆಳೆಸುತ್ತಾನೆ. ಈ ತೀರ್ಥದಲ್ಲಿ ಸ್ನಾನಮಾಡಿ ಬಕುಲೇಶ್ವರನ ದರ್ಶನ ತೆಗೆದುಕೊಂಡು ಗಣೇಶ್ವರನ ಪೂಜೆಯನ್ನು ಮಾಡಿದವನು ಶಿವಗಣಗಳ ಅಧಿಪತಿಯಾಗುತ್ತಾನೆ. ಇಲ್ಲಿ ನಿಂತು ನಿರಾಹಾರರಾಗಿ ಇಂದ್ರಿಯಗಳನ್ನೆಲ್ಲ ನಿಗ್ರಹಿಸಿ, ಗಣಪತಿಯ ಮಂತ್ರಗಳನ್ನು ಜಪಿಸಿದವನು ಸಕಲ ಭೋಗಭಾಗ್ಯಗಳನ್ನು ಪಡೆಯುತ್ತಾನೆ. ಇದರಲ್ಲಿ ಸಂದೇಹವೇ ಇಲ್ಲ.

ಹಿಂದೆ ಸೋಮವಂಶದಲ್ಲಿ ಜನಿಸಿದ ವಿಶ್ವದತ್ತ ಎಂಬ ಮಹಾರಾಜನು ಇಲ್ಲಿಗೆ ಬಂದು, ಈ ತೀರ್ಥದಲ್ಲಿ ಮಿಂದು, ಅದ್ಭುತವಾದ ತಪಸ್ಸನ್ನು ಮಾಡಿ, ಗಣೇಶನ ಪ್ರಸಾದದಿಂದ ಗಣಾಧಿಪತಿಯಾಗಿ ಧನ್ಯನಾದ. ಆದುದರಿಂದ ವಶಿಷ್ಠ, ವಾಮದೇವ, ಕಹೋಡ, ಕೌಷೀತಕ, ಭಾರದ್ವಾಜ, ಅಂಗಿರಸ, ವಿಶ್ವಾಮಿತ್ರ, ವಾಮನ ಮುಂತಾದ ಅನೇಕಾನೇಕ ಮುನಿಗಳು ಇಲ್ಲಿಗೆ ಆಗಮಿಸಿ ಶ್ರೀ ಗಣೇಶನ ಪ್ರಸಾದದಿಂದ ಧನ್ಯರಾಗಿ ತಮ್ಮ ಜನ್ಮವನ್ನು ಸಾರ್ಥಕಗೊಳಿಸಿಕೊಂಡಿದ್ದಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಗಣ ತೀರ್ಥದ ಮಾಹಾತ್ಮ್ಯ ಎಂಬ ನೂರಮೂವತ್ತಾರನೇಯ ಅಧ್ಯಾಯ ಮುಗಿದುದು*



## ಅಗ್ನಿಪಾಲೇಶ್ವರಾದಿ ತೀರ್ಥಗಳ ಮಹಿಮಾ ವರ್ಣನೆ

**ಅಧ್ಯಾಯ - ೧೩೭**

**ಮಹಾದೇವ:-** ಸಾಭ್ರಮತಿಯ ಉತ್ತರ ತೀರದಲ್ಲಿ ಅಗ್ನಿತೀರ್ಥ ಎಂಬ ಸುಪ್ರಸಿದ್ಧವಾದ ಒಂದು ತೀರ್ಥವಿರುತ್ತದೆ. ಇಲ್ಲಿ ಸಾಕ್ಷಾತ್ ಚಂಡೀದೇವಿಯು ಪ್ರತಿಷ್ಠಿತಳಾಗಿರುತ್ತಾಳೆ. ಇದಕ್ಕೆ ಅಗ್ನಿ ಪಾಲೇಶ್ವರ ತೀರ್ಥ ಎಂದು ಹೆಸರು ಬಂದಿದೆ. ಇಲ್ಲಿ ಯೋಗಮಾತೃಕೆಯರ ಸರ್ವಸಿದ್ಧಿ ವಿಧಾಯಕವಾದ ಒಂದು ಪೀಠವು ಇರುತ್ತದೆ. ದೇವತಾಕಾರ್ಯವನ್ನು ಸಾಧಿಸಲಿಕ್ಕಾಗಿ ಮಾತೃಗಣದ ಎಲ್ಲಾ ಮಾತೆಯರೂ ಮಹಾಪ್ರಯತ್ನಪೂರ್ವಕವಾಗಿ ಲೋಕದ ಅನುಗ್ರಹಕ್ಕಾಗಿ ಇಲ್ಲಿ ಬಂದು ನೆಲೆಸಿದ್ದಾರೆ. ಈ ತೀರ್ಥಕ್ಕೆ ಬಂದು ಮೂರು ರಾತ್ರಿ ಉಪವಾಸಮಾಡಿ ಈ ತೀರ್ಥದಲ್ಲಿ ಸ್ನಾನಗೈದು ಚಂಡಿಕೇಶ್ವರನ ದರ್ಶನವನ್ನು ತೆಗೆದುಕೊಳ್ಳಬೇಕು. ಸಾಭ್ರಮತಿಯಲ್ಲಿ ಸ್ನಾನಮಾಡಿ ಮಾತೃತೀರ್ಥದ ದಂಡೆಯ ಮೇಲೆ ಸಮಾಧಿವಿಧಿಯಿಂದ ಮಾತೃಕಾಗಣದ ಹಾಗೂ

ಪರಮೇಶ್ವರನ ಧ್ಯಾನಮಾಡಿದವರು ಸಹಸ್ರ ಗೋದಾನ ಮಾಡಿದ ಪುಣ್ಯವನ್ನು ಹೊಂದುತ್ತಾರೆ. ಅಗ್ನಿತೀರ್ಥದಲ್ಲಿ ಸ್ನಾನಮಾಡಿ ಚಾಮುಂಡಾದೇವಿಯ ದರ್ಶನಮಾಡಿದ ಮಾನವರಿಗೆ ಯಾವ ಭೂತ-ಪ್ರೇತ, ಪಿಶಾಚಾದಿಗಳ ಭಯವು, ಎಂದಿಗೂ ಇರುವದಿಲ್ಲ. ಇದೇ ಸ್ಥಳದಲ್ಲಿ ಗೋಖುರಾ, ಎಂಬ ನದಿಯು ಸಾಭ್ರಮತೀನದಿಯೊಂದಿಗೆ ಸಂಗಮಿಸಿದೆ. ಈ ಗೋಖುರಾ, ಸಾಭ್ರಮತೀ ನದಿಗಳ ಸಂಗಮ ರಂಗಸ್ಥಳದಲ್ಲಿ ಸಹಸ್ರಾರು ತೀರ್ಥಗಳು ಸನ್ನಿಹಿತವಾಗಿರುತ್ತವೆ. ತಿಲಚೂರ್ಣದಿಂದ ಶ್ರಾದ್ಧಮಾಡಿ, ಪಿಂಡಪ್ರದಾನ, ಬ್ರಾಹ್ಮಣಭೋಜನ ಮಾಡಿಸಿದವರು, ಅಕ್ಷಯಸ್ಥಾನವನ್ನು ಹೊಂದುತ್ತಾರೆ.

ಈ ವಿಷಯದಲ್ಲಿ ನಿನಗೋಸ್ಕರ ಒಂದು ಇತಿಹಾಸವನ್ನು ಉಲ್ಲೇಖಿಸುತ್ತೇನೆ, ಕೇಳು. ಪೂರ್ವಕಾಲದಲ್ಲಿ ಕುಕರ್ದಮನೆಂಬ ಒಬ್ಬ ಪಾಪಿಷ್ಠನಾದ ದುರಾತ್ಮರಾಜನು ಇದ್ದ. ಬ್ರಾಹ್ಮಣರ ನಿಂದೆಯೇ ಅವನ ಉದ್ಯೋಗ. ಅನೇಕ ಗೋಗಳನ್ನು ಅವನು ಕೊಂದುಹಾಕಿದ್ದ; ಬಾಲಕರನ್ನು ವಧಿಸಿದ್ದ. ಪಿಂಡಾರವೆಂದು ಹೆಸರುಳ್ಳ ರಾಜ್ಯದಲ್ಲಿ ಆ ರಾಜನು ತನ್ನ ದುರಾಡಳಿತವನ್ನು ಬಹುಕಾಲ ನಡೆಸಿದ. ಕರ್ಮ ಧರ್ಮ ಸಂಯೋಗದಿಂದ ಆ ರಾಜನಿಗೆ ಆಕಸ್ಮಿಕ ಮರಣವು ಪ್ರಾಪ್ತವಾಯಿತು. ಯಾವಜ್ಜನ್ಮ ಮಾಡಿದ ದುರಾಚಾರ, ಅನಾಚಾರ, ಬ್ರಹ್ಮದ್ವೇಷ, ಬ್ರಾಹ್ಮಣದ್ವೇಷಗಳಿಂದ ಆ ರಾಜನು ಅಂತರ ಪಿಶಾಚಿಯಾಗಿ ಕ್ರೂರನಾದ ಪ್ರೇತರೂಪದಿಂದ ತಿರುಗಾಡತೊಡಗಿದ. ಒಣಗಿದ ಮುಖ, ವಿಕಾರವಾದ ದೇಹ, ಕರ್ಕಶ ಧ್ವನಿ, ಮುಳ್ಳಿನಂಥ ಕೂದಲು, ಯಾವಾಗಲೂ ಹಸಿವು, ನಿರಂತರ ನೀರಡಿಕೆ, ಎಂದೂ ಹಿಂಗದ ಕಸಿವಿಸಿಗಳಿಂದ ಪೀಡಿತನಾಗಿ ಎಲ್ಲೆಲ್ಲಿಯೂ ತಿರುಗುತ್ತಲಿದ್ದ. ಈ ಪ್ರೇತರಾಜನ ಬೆನ್ನು ಹಿಂದೆ ಹನ್ನೊಂದು ಮತ್ತೆ ಬೇರೆ ಬೇರೆ ಪ್ರೇತಗಳು ಅನುಚರರಾಗಿ ಸೇರಿಕೊಂಡವು. ಎಲ್ಲ ಪ್ರೇತಗಳಿಂದ ಕೂಡಿಕೊಂಡು ಹಸಿವೆ, ನೀರಡಿಕೆ, ಸಂಕಟಗಳಿಂದ ಹಿಂಸಿತನಾಗಿ ಭೀಕರವಾಗಿ ಆರ್ತನಾದ ಮಾಡುತ್ತ ವನ-ವನಾಂತರಗಳಲ್ಲಿ ಗಂಪುಗೂಡಿ ತಿರುಗುತ್ತಲಿದ್ದ. ಕ್ಷುಧಾಬಾಧೆಯನ್ನು ತಾಳಲಾರದೇ ಎಲ್ಲ ಪಿಶಾಚಿಗಳೂ ಕೆಟ್ಟಧ್ವನಿಯಿಂದ ವಿಕಾರವಾಗಿ ರೋದಿಸುತ್ತಿದ್ದವು. ಹೀಗೆ ಎಲ್ಲವೂ ಕೂಡಿ ಘೋರಾರಣ್ಯದಲ್ಲಿ ತಿರುಗುವಾಗ ದುರ್ದೈವದಿಂದ ಪ್ರೇತಪರಿವಾರಕ್ಕೆ ಎಲ್ಲಿಯೂ ನೀರು ದೊರಕಲಿಲ್ಲ. ಅನ್ನವೂ ಕೂಡ ಲಭಿಸಲಿಲ್ಲ. ಹಸಿದು, ಬಸವಳಿದು ಕಂಗೆಟ್ಟ ಆ ಪ್ರೇತಗಳು ದಾರಿಯಲ್ಲಿ ದೊರೆತ ಶವಗಳ ಮಾಂಸವನ್ನು ತಿಂದು ರಕ್ತವನ್ನು ಕಡಿದು ತಮ್ಮ ಎಂದಿಗೂ ಅರದ ನೀರಡಿಕೆಯನ್ನೂ ಹಸಿವೆಯನ್ನೂ, ತಣಿಸಿಕೊಳ್ಳಲು ವ್ಯರ್ಥ ಪ್ರಯತ್ನ ಮಾಡುತ್ತಲಿದ್ದವು. ಹೀಗೆ ವನ-ವನ ಅಲೆಯುತ್ತಲಿರುವಾಗ ಆ ಪ್ರೇತಪರಿವಾರದೊಂದಿಗೆ ಕುಕರ್ದಮರಾಜನು ಗುರುಗಳ ಆಶ್ರಮಕ್ಕೆ ಬಂದ. ಅವನ ಗುರ್ವಾಶ್ರಮಾಗಮನವು ಅವನ ಜನ್ಮಾಂತರ ಪುಣ್ಯದ ಫಲವಾಗಿಯೇ ಅವನಿಗೆ ಒದಗಿ ಬಂದಿತ್ತು.

**ಪಾರ್ವತಿ:-** ಪ್ರಭು, ವಿಶ್ವೇಶ್ವರ, ಇಂಥ ಪಾಪಿಷ್ಠನಾದ ಆ ಪ್ರೇತರಾಜನಿಗೆ ಬ್ರಾಹ್ಮಣರ ಹಿಂಸೆಯನ್ನು ಸದಾಸರ್ವದಾ ಮಾಡುತ್ತಲಿರುವ ಆ ದುಷ್ಟಾತ್ಮನಿಗೆ ಆ ಗುರುಗಳ ಸಹವಾಸ ಮತ್ತು ಸಂಗ ಹೇಗೆ ಲಭಿಸಿತು?

**ಮಹಾದೇವ:-** ಈ ಕುಕರ್ದಮರಾಜನು ಇದರ ಹಿಂದಿನ ಜನ್ಮದಲ್ಲಿ ವೇದಾಧ್ಯಯನ ಸಂಪನ್ನನಾದ ಒಬ್ಬ ಸದಾಚಾರೀ ಬ್ರಾಹ್ಮಣನಾಗಿದ್ದ. ಅವನು ತನ್ನ ಜನ್ಮದಲ್ಲಿ ಒಂದು

ದಿನವೂ ದೇವರ ಪೂಜೆಯನ್ನು ಬಿಡಲಿಲ್ಲ. ಅತಿಥಿಗಳ ಪೂಜೆಯನ್ನು ತಪ್ಪಿಸಲಿಲ್ಲ. ಪ್ರತಿದಿನವೂ ಮಧ್ಯಾಹ್ನದವರೆಗೆ ದಾರಿನೋಡಿ ಬಂದ ಅತಿಥಿಗಳನ್ನು ಮನೆಗೆ ಕರೆದೊಯ್ದು ಅವರಿಗೆ ಯಥೇಚ್ಛ ಭೋಜನ ಮಾಡಿಸಿದ ನಂತರವೇ ತಾನು ಊಟ ಮಾಡುತ್ತಿದ್ದ. ಈ ಪುಣ್ಯದ ಪ್ರಭಾವದಿಂದ ಆ ಬ್ರಾಹ್ಮಣ ಮುಂದಿನ ಜನ್ಮದಲ್ಲಿ ಪಿಂಡಾರವೆಂಬ ಪಟ್ಟಣದಲ್ಲಿ ಕುಕರ್ದಮ ರಾಜನಾಗಿ ಜನಿಸಿದ. ಪೂರ್ವಜನ್ಮದ ಪುಣ್ಯದಿಂದ ಅತಿಥಿಸತ್ಕಾರದಿಂದ, ಮಹಾದೇವರ ಪೂಜೆಯಿಂದ ರಾಜನ ಜನ್ಮ ಬಂದಿತು. ರಾಜನ ಜನ್ಮ ಬಂದ ಬಳಿಕ ಅಧಿಕಾರ, ಐಶ್ವರ್ಯ, ಸ್ಥಾನ, ಮಾನಗಳಿಂದ ಆ ರಾಜನ ತಲೆ ತಿರುಗಿ ಹೋಯಿತು. ಅಹಂಕಾರ ಅವನ ಮೇಲೆ ಸವಾರಿ ಮಾಡಿತು. ಅವನ ಸದ್ಬುದ್ಧಿ ಮಾಯವಾಯಿತು. ದುರ್ದೈವದಿಂದ ಬ್ರಹ್ಮದ್ವೇಷವೂ ಪ್ರಾರಂಭವಾಯಿತು. ಕಂಡಕಂಡಲ್ಲೆಲ್ಲ ಬ್ರಾಹ್ಮಣಹಿಂಸೆ ದೇವದ್ವೇಷ, ಧರ್ಮದ್ರೋಹ ಇವು ಅವನ ನಿತ್ಯ ವ್ಯವಸಾಯವೇ ಆಯಿತು. ಹೀಗೆ ಪಾಪ ಅತಿರೇಕವಾದುದರಿಂದ ಅವನು ಮರಣಹೊಂದಿ ಪ್ರೇತರಾಜನಾದ. ಆದರೆ ಅವನು ಜನ್ಮಾಂತರದಲ್ಲಿ ಮಾಡಿದ, ಬ್ರಾಹ್ಮಣ ಜನ್ಮದಲ್ಲಿ ಅವನು ಆಚರಿಸಿದ ಈಶ್ವರಪೂಜೆ, ದೊಡ್ಡವರ ಸೇವೆ ಇದಾವುದೂ ವ್ಯರ್ಥವಾಗಲಿಲ್ಲ. ಆ ಎಲ್ಲ ಪುಣ್ಯಗಳೂ ಒದಗಿಬಂದು ಅವನಿಗೆ ಈ ಪ್ರೇತಜನ್ಮದಲ್ಲಿ ಗುರುಗಳ ಸಹವಾಸವನ್ನು ಮಾಡಿಸಿದವು. ಪೂರ್ವಜನ್ಮದ ಪುಣ್ಯದಿಂದ ಅವನು ಗುರುಗಳ ಆಶ್ರಮಕ್ಕೆ ಪರಿವಾರದೊಂದಿಗೆ ಆಗಮಿಸಿದ. ಆ ಪುಣ್ಯಾಶ್ರಮದಲ್ಲಿ ಕಹೋಡಾ ಎಂಬ ಮಹಾನುಭಾವರಾದ ತಪಸ್ವೀ ಮುನಿಗಳು ವಾಸಮಾಡಿದ್ದರು. ಆ ಮಹರ್ಷಿಗಳು ಶುಷ್ಕಮುಖದ ಒಣದೇಹದ ವಿಕರಾಳ ಆಕಾರದ, ಹೂತುಹೋದ ಕಣ್ಣಿನ ಈ ವಿಲಕ್ಷಣ ಪ್ರೇತರಾಜನನ್ನು ಕಂಡು ಅವನ ಗುರುತು ಹತ್ತಿ ನುಡಿದರು.

**ಕಹೋಡ:-** ಕುಕರ್ದಮ ! ನೀನು ಇಂಥಾ ಪ್ರೇತ ಜನ್ಮವನ್ನು ಏಕೆ ಹೊಂದಿದೆ? ನೀನು ನಮಗೆಲ್ಲ ಯಜಮಾನ ಹಾಗೂ ರಾಜ. ನಾನು ಈ ಮನೋಹರವಾದ, ಅಷ್ಟೇ ಅದ್ಭುತವಾದ ಅಗ್ನಿಪಾಲೇಶ್ವರ ತೀರ್ಥದಲ್ಲಿ ತಪೋನುಷ್ಠಾನಕ್ಕಾಗಿ ನಿಂತಿದ್ದೇನೆ. ಇಲ್ಲಿ ನಿಂತು ಈ ತೀರ್ಥದಲ್ಲಿ ಪ್ರತಿನಿತ್ಯ ಸ್ನಾನಮಾಡಿ ದೇವರ ಧ್ಯಾನ, ಜಪ, ತಪ, ಅನುಷ್ಠಾನ ಮಾಡುತ್ತಲಿದ್ದೇನೆ. ನಿನಗೆ ಇಂಥ ಭಯಂಕರವಾದ ದುಷ್ಟ, ಹೇಯ ಜನ್ಮ ಹೇಗೆ ಬಂದವು ? ಇದಕ್ಕೆ ಕಾರಣವೇನು?

**ಪ್ರೇತ:-** ಪೂಜ್ಯರೇ, ನಾನು ಪೂರ್ವಜನ್ಮದಲ್ಲಿ ಪಿಂಡಾರವೆಂಬ ಪಟ್ಟಣದಲ್ಲಿ ಕುಕರ್ದಮನೆಂಬ ಹೆಸರಿನ ಮಹಾರಾಜನಾಗಿದ್ದೆ. ನಾನು ಕಣ್ಣಿಗೆ ಕಂಡ ಬ್ರಹ್ಮಜ್ಞಾನಿಗಳೆಲ್ಲರನ್ನೂ ಹಿಂಸೆಮಾಡಿದೆ. ಬದುಕಿರುವವರೆಗೂ ಒಂದೂ ಸತ್ಯ ವಚನ ನುಡಿಯಲಿಲ್ಲ. ಪ್ರಜೆಗಳನ್ನು ಯಾವಾಗಲೂ ಪೀಡಿಸುತ್ತಲೇ ಇದ್ದೆ. ಪ್ರಾಣಿಗಳ ಹಿಂಸೆ ಪದೇ ಪದೇ ನನ್ನಿಂದ ನಡೆಯುತ್ತಿತ್ತು. ಆಕಳುಗಳಿಗಂತೂ ನನ್ನಿಂದ ಸಾಕಷ್ಟು ಹಿಂಸೆ, ಪೀಡೆಗಳು ಆಗಿವೆ. ಸ್ನಾನವನ್ನಂತೂ ನನ್ನ ಆಯುಷ್ಯದಲ್ಲೇ ನಾನು ಮಾಡಲಿಲ್ಲ. ಆ ಕಾಲದಲ್ಲಿ ಬದುಕಿದ್ದ ಎಲ್ಲ ಸಜ್ಜನರನ್ನೂ ನಾನು ನಿಂದಿಸುತ್ತಿದ್ದೆ. ವಿಷ್ಣು ವೈಷ್ಣವರ ನಿಂದೆಯಂತೂ ನನ್ನ ಜೀವನದ ಗುರಿಯೇ ಆಗಿದ್ದಿತು. ಅನೇಕ ವೇಶ್ಯಾಸ್ತ್ರೀಯರೊಂದಿಗೆ ನನ್ನ ನಿತ್ಯ ಸಹವಾಸ ಮತ್ತು ನನ್ನ ಆಹಾರದಲ್ಲೂ ಯಾವುದೇ ವಿಧಿ ನಿಷೇಧಗಳಿರಲಿಲ್ಲ. ಕಂಡಲ್ಲಿ ಕಂಡದ್ದನ್ನು

ತಿನ್ನುತ್ತಲಿದ್ದೆ. ಮಡಿ-ಮೈಲಿಗೆಗಳ ವಿಚಾರೇ ನನಗಿರಲಿಲ್ಲ. ಆ ಭಯಂಕರವಾದ ಪಾಪದಿಂದ ಅತ್ಯುತ್ಕಟವಾದ ನನ್ನ ವಿಶಿಷ್ಟ ದುಷ್ಕೃತ್ಯಗಳ ಪರಿಣಾಮವಾಗಿ ನಾನು ಪ್ರೇತಯೋನಿಯನ್ನು ಹೊಂದಿ ಈಗ ದುಃಖಪಡುತ್ತಲಿದ್ದೇನೆ. ಈ ಜನ್ಮದಲ್ಲಿ ನನಗೆ ಯಾರೂ ತಂದೆ-ತಾಯಿ ಬಂಧು-ಬಳಗ ಆಪ್ತರು-ಇಷ್ಟರು. ಮಿತ್ರರು, ಹಿತೈಷಿಗಳಾರೂ ಇರುವದಿಲ್ಲ. ಹೇಗಾದರೂ ನನ್ನನ್ನು ಈ ಘೋರವಾದ ಜನ್ಮದಿಂದ ಪಾರುಮಾಡಿರಿ ಪೂಜ್ಯರೇ!

**ಕಹೋಡ** :-ರಾಜಶ್ರೇಷ್ಠ, ಗಾಬರಿಯಾಗಬೇಡ. ನಾನು ನಿನಗೆ ಈ ಘೋರಜನ್ಮದಿಂದ ಬಿಡುಗಡೆಯಾಗುವಂತೆ ಈಗಲೇ ಮಾಡುತ್ತೇನೆ. ಈ ವಿಷಯದಲ್ಲಿ ನಿನಗೆ ತಿಲಮಾತ್ರವೂ ಸಂದೇಹ ಬೇಡ. ನೀನು ಮಾತ್ರವಲ್ಲ ನಿನ್ನ ಹನ್ನೊಂದು ಜನ ಅನುಚರ ರಾಕ್ಷಸರೂ ಮುಕ್ತಿಹೊಂದುವ ಉಪಾಯವೊಂದನ್ನು ಹೇಳುವೆ ಕೇಳು. ನೀವೆಲ್ಲರೂ ಈ ದಿವ್ಯವಾದ ತೀರ್ಥದಲ್ಲಿ ಸ್ನಾನ ಮಾಡಿರಿ. ನಿಮ್ಮ ಕಡೆಯಿಂದ ನಾನು ಪಿತೃಕಾರ್ಯಗಳನ್ನು ಮಾಡಿಸುತ್ತೇನೆ.

**ನ ಮಾಸಂ ನ ತಿಥಿರ್ದೇವೀ ತೀರ್ಥೇ ಗತ್ವಾ ಪುನಃ ಪುನಃ ।**
**ಕರ್ತವ್ಯಂ ಶ್ರಾದ್ಧಕರ್ಮಾದಿ ಬ್ರಹ್ಮಣೋಕ್ತಂ ಪುರಾ ಮಮ ॥**

ಪವಿತ್ರವಾದ ತೀರ್ಥಗಳಿಗೆ ಹೋದಾಗ ಮಾಸ, ತಿಥಿ, ಕಾಲ, ಯಾವುದನ್ನೂ ನೋಡುವ ಕಾರಣವಿಲ್ಲ. ತೀರ್ಥದರ್ಶನವಾದ ಕೂಡಲೇ ಶ್ರಾದ್ಧಕರ್ಮವನ್ನು ಮಾಡಲೇಬೇಕು. ಒಮ್ಮೆ ಮಾಡಿದರೂ ಸಹ ಮತ್ತೆ ಹೋದರೆ ಮತ್ತೆ ಮಾಡಬೇಕು. ಎಷ್ಟು ಸಲ ಹೋದರೂ ಶ್ರಾದ್ಧಾದಿ ಪಿತೃಕಾರ್ಯವನ್ನು ಕ್ಷೇತ್ರಗಳಲ್ಲಿ ಮಾಡಲೇಬೇಕು. ಎಂದು ಪೂರ್ವ ಕಾಲದಲ್ಲಿ ಬ್ರಹ್ಮದೇವರು ನನಗೆ ಹೇಳಿದ್ದಾರೆ.

ಈ ವಚನವನ್ನು ಆ ಕಹೋಡ ಮುನಿಯು ಪ್ರೇತರಾಜನಾದ ಆ ಕುಕರ್ದಮನಿಗೆ ಮತ್ತು ಅವನ ಅನುಚರರಾದ ಹನ್ನೊಂದು ಜನ ಪ್ರೇತಪರಿವಾರಕ್ಕೂ ಹೇಳಿ, ದಿವ್ಯವಾದ ಅಗ್ನಿಪಾಲಕುಂಡದಲ್ಲಿ ಅವರೆಲ್ಲರಿಗೂ ಸ್ನಾನ ಮಾಡಿಸಿದ. ಅನಂತರ ಅಲ್ಲಿ ಪ್ರತಿಷ್ಠಿತನಾದ ಚಂಡೀಶ್ವರನ ಆರಾಧನೆಯನ್ನು ಅವರ ಕಡೆಯಿಂದ ಮಾಡಿಸಿ ಶ್ರಾದ್ಧಾದಿ ಕರ್ಮಗಳನ್ನು ಆಚರಿಸಲು ಹೇಳಿ ಅವರೆಲ್ಲರ ಪ್ರೇತ ಜನ್ಮವು ದೂರವಾಗುವಂತೆ ಮಾಡಿದ. ಕಹೋಡ ಮುನಿಯ ಅನುಗ್ರಹದಿಂದ ಕುಕರ್ದಮ ಸಹಿತ ಆ ಎಲ್ಲ ಪ್ರೇತಗಳು ಅತ್ಯಂತ ನಿಂದ್ಯವಾದ ತಮ್ಮ ಜನ್ಮವನ್ನು ನೀಗಿದವು. ದಿವ್ಯ ದೇಹವನ್ನು ಪಡೆದವು. ಉದ್ಧಾರವನ್ನು ಹೊಂದಿದವು. ಸ್ವರ್ಗಲೋಕದಿಂದ ತಮ್ಮನ್ನು ಕರೆಯಲು ಬಂದ ದಿವ್ಯ ವಿಮಾನವನ್ನು ಆರೋಹಣ ಮಾಡಿದವು. ಅನಂತರ ಸ್ವರ್ಗಲೋಕಕ್ಕೆ ತೆರಳಿ, ದೇವತೆಗಳ ಗೌರವಾದರಗಳನ್ನು ಪಡೆದು ನನ್ನ ಶಿವಪುರಿಗೆ ಪ್ರಾಪ್ತರಾದರು. ಆದುದರಿಂದ ಗೋಖುರಾ ಮತ್ತು ಸಾಭ್ರಮತೀ ಸಂಗಮ ತೀರ್ಥದಲ್ಲಿ ಸ್ನಾನ, ದಾನ, ಮಾಡಿದ ಮನುಷ್ಯರು ಸ್ವರ್ಗಾದಿ ದಿವ್ಯಸ್ಥಾನಗಳನ್ನೂ, ಅಕ್ಷಯ ಪುಣ್ಯವನ್ನೂ, ಕೋಟಿಯಜ್ಞಮಾಡಿದ ಫಲವನ್ನೂ ಹೊಂದುತ್ತಾರೆ. ಕಪಾಲೇಶ್ವರನ ಸನ್ನಿಧಾನದಿಂದ ಪರಮ ಪವಿತ್ರವಾದ ಈ ಅಗ್ನಿ ತೀರ್ಥದಲ್ಲಿ ಸ್ನಾನ, ದಾನ, ಧ್ಯಾನಗಳು ಮುಕ್ತಿಗೆ ಕಾರಣವಾಗಿರುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಅಗ್ನಿಪಾಲೇಶ್ವರಾದಿ ತೀರ್ಥಗಳ ಮಹಿಮಾ ವರ್ಣನೆ ಎಂಬ ಒಂದುನೂರ ಮೂವತ್ತೇಳನೇಯ ಅಧ್ಯಾಯ ಮುಗಿದುದು*

—o—

## ಹಿರಣ್ಯಸಂಗಮ ತೀರ್ಥದ ಮಹಿಮೆ

ಅಧ್ಯಾಯ - ೧೩೮

**ಮಹಾದೇವ:-** ದೇವಿ, ಹಿರಣ್ಯಾಸಂಗಮ ತೀರ್ಥದ ಮಹಿಮೆಯನ್ನು ಹೇಳುವೆ ಕೇಳು. ಸಾಭ್ರಮತೀ ನದಿಯು ಯಾವಾಗ ಏಳು ಕವಲು ನದಿಯಾಗಿ ಹರಿದಳೋ, ಆಗ ಸಪ್ತಸ್ರೋತಾ ಎಂಬ ಹೆಸರು ಅವಳಿಗೆ ಬಂದಿತು. ಆ ಏಳನೆಯ ಜಲಪ್ರವಾಹಕ್ಕೆ ಹಿರಣ್ಯಸ್ರೋತಾ ಎಂದು ಹೆಸರು ಬಂದಿರುತ್ತದೆ. ಈ ಹಿರಣ್ಯಸ್ರೋತ ಎಂಬ ತೀರ್ಥದಲ್ಲಿ ಪಾಪೀ ಮನುಷ್ಯನು ಸ್ನಾನ ಮಾಡಿದರೆ ಸದ್ಗತಿಯನ್ನು ಹೊಂದುತ್ತಾನೆ. ಋಕ್ಷು ಮತ್ತು ಮಂಜುಮ ಎಂಬ ನದಿಗಳ ಮಧ್ಯದಲ್ಲಿ ಸತ್ಯವಾನ್ ಎಂಬ ಪರ್ವತವಿರುತ್ತದೆ. ಅದರ ಪೂರ್ವ ದಿಕ್ಕಿನಲ್ಲಿ ಹಿರಣ್ಯಸಂಗಮ ಎಂಬ ಮಹಾ ತೀರ್ಥವಿರುತ್ತದೆ. ಆ ತೀರ್ಥದಲ್ಲಿ ಸ್ನಾನಮಾಡಿ ಆ ನೀರನ್ನು ಪಾನಮಾಡಿದರೆ ಸದ್ಗತಿಯನ್ನು ಹೊಂದುವಲ್ಲಿ ಸಂದೇಹವಿಲ್ಲ. ಅನಂತರ ಆ ವನಸ್ಥಲಿಯಲ್ಲಿರುವ ಶ್ರೀನಾರಾಯಣನ ದರ್ಶನ ತೆಗೆದುಕೊಂಡು ಹಿರಣ್ಯಾಸಂಗಮೇಶ್ವರನಾದ ಶಿವನನ್ನು ಪೂಜಿಸಬೇಕು. ಇದೇ ಸ್ಥಳದಲ್ಲಿ ಪೂರ್ವಕಾಲದಲ್ಲಿ ನರನಾರಾಯಣರು ತಪಸ್ಸನ್ನು ಮಾಡಿದರು. ಅಪ್ಸರಾಸ್ತ್ರೀಯರಲ್ಲಿಯೇ ರತ್ನದಂತಿರುವ ಊರ್ವಶಿಯು ನಾರಾಯಣನ ಉತ್ಸಂಗದಿಂದ ಹುಟ್ಟಿದ್ದು ಇದೇ ಸ್ಥಳದಲ್ಲಿ. ವಶಿಷ್ಠ, ವಾಲಖಿಲ್ಯ ಮೊದಲಾದ ಮುನಿಗಳು ಈ ಹಿರಣ್ಯ ಸಂಗಮದಲ್ಲಿಯೇ ನಿಂತು ಸ್ನಾನ ಮಾಡಿ ತಪಸ್ಸನ್ನು ಆಚರಿಸಿದರು. ಈ ಹಿರಣ್ಯಾ ಸಂಗಮದಲ್ಲಿ ಸ್ನಾನ ಮಾಡುವದರಿಂದ ಯಾತ್ರಿಕರು ಬಂಗಾರದ ಬಣ್ಣದ ದೇಹವನ್ನು ಹೊಂದುತ್ತಾರೆ. ಪೂರ್ವಕಾಲದಲ್ಲಿ ಹಿರಣ್ಯಾಕ್ಷನೆಂಬ ದೈತ್ಯನು ಇಲ್ಲಿ ನಿಂತು ಮಹಾ ತಪಸ್ಸನ್ನು ಮಾಡಿದ ಅವನ ದೇಹ ಸುವರ್ಣವರ್ಣದ್ದಾಗಿ ಕಂಗೊಳಿಸಿತು. ಇದರಿಂದ ಅವನಿಗೆ ಹಿರಣ್ಯಾಕ್ಷ ಎಂಬ ಹೆಸರು ಬಂದಿತು. ಜನಮೇಜಯ ಮಹಾರಾಜನು ಈ ಹಿರಣ್ಯಾ ಸಂಗಮ ತೀರ್ಥದಲ್ಲಿ ಸ್ನಾನಮಾಡಿ ತನ್ನ ಬ್ರಹ್ಮಹತ್ಯಾ ಪಾಪವನ್ನು ಕಳೆದುಕೊಂಡ. ವಿಶ್ವಾಮಿತ್ರ ಮಹರ್ಷಿಗಳು ಇಲ್ಲಿ ಸ್ನಾನ, ದಾನ, ದೈವಧ್ಯಾನಗಳನ್ನು ಮಾಡಿ ಉತ್ತಮ ಗತಿಯನ್ನು ಹೊಂದಿದರು. ಇಲ್ಲಿ ಸ್ನಾನ ಮಾಡಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಲ್ಲರೂ ನನ್ನ ಶಿವಾಲಯವನ್ನು ಕುರಿತು ಬರುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಹಿರಣ್ಯಸಂಗಮ ತೀರ್ಥದ ಮಹಿಮೆ ಎಂಬ ನೂರ ಮೂವತ್ತೆಂಟನೇಯ ಅಧ್ಯಾಯ ಮುಗಿದುದು*



## ಮಧುರಾ ಮೊದಲಾದ ತೀರ್ಥಗಳ ಮಾಹಾತ್ಮ್ಯ ವರ್ಣನೆ

ಅಧ್ಯಾಯ - ೧೩೯

**ಮಹಾದೇವ:-** ದೇವಿ, ಹಿರಣ್ಯಾಸಂಗಮದ ಅನಂತರ ಈ ಸಾಭ್ರಮತೀ ನದಿಗೆ ಧರ್ಮಾವತೀ ಎಂಬ ನದಿಯ ಸಂಗಮವೂ ಆಗಿರುತ್ತದೆ. ಇಲ್ಲಿ ಸ್ನಾನ ಮಾಡಿದ ಮನುಷ್ಯನು ಸ್ವರ್ಗಲೋಕವನ್ನು ನಿಶ್ಚಿತವಾಗಿಯೂ ಹೊಂದುತ್ತಾನೆ. ಇಲ್ಲಿ ಶ್ರಾದ್ಧ ಮಾಡಿದವರು ಪಿತೃಋಣದಿಂದ ಮುಕ್ತರಾಗುತ್ತಾರೆ. ಇದರಿಂದ ಮುಂದೆ ತುಸು ಅಂತರದಲ್ಲಿ ಮಧುರಾ ತೀರ್ಥವೆಂಬ ಪುಣ್ಯತೀರ್ಥವು ಇರುತ್ತದೆ. ಅದರಲ್ಲಿ ಸ್ನಾನಮಾಡಿ ಮಧುಸೂದನನ ದರ್ಶನವನ್ನು ತೆಗೆದುಕೊಳ್ಳಬೇಕು. ಹಿಂದೆ ದ್ವಾಪರ ಯುಗದಲ್ಲಿ ಶ್ರೀಕೃಷ್ಣ ಪರಮಾತ್ಮನು ಜರಾಸಂಧನ ಹೆದರಿಕೆಯಿಂದಲೋ ಏನೋ ಎಂಬುವಂತೆ ಇಲ್ಲಿ ಆಶ್ರಯವನ್ನು ಪಡೆದಿದ್ದ. ಕಂಸನನ್ನು ಕೊಂದ ಬಳಿಕ ಕುಶಸ್ಥಲಿಗೆ ಪ್ರಯಾಣ ಮಾಡುವಾಗ ಕೃಷ್ಣ ಪರಮಾತ್ಮನು ಇಲ್ಲಿಗೆ ಬಂದು ಏಳು ದಿವಸಗಳವರೆಗೆ ಇಲ್ಲಿಯ ಚಂದನಾ ತಟದಲ್ಲಿ ವೃಷ್ಣಿ, ಅಂಧಕ, ಭೋಜ, ಮೊದಲಾದ ಯಾದವ ಪುಂಗವರೊಂದಿಗೆ ವಾಸಮಾಡಿದ. ಇಲ್ಲಿ ಸ್ನಾನಮಾಡಿದ. ಮಧುರಾದಿತ್ಯ ಎಂಬ ತನ್ನ ಮೂರ್ತಿಯನ್ನು ಸ್ಥಾಪನೆಗೈದ. ಮತ್ತು ಆ ಮಧುರಾದಿತ್ಯ ದೇವರ ಪೂಜೆಗಾಗಿ ಹದಿನೆಂಟು ಸಾವಿರ ಬ್ರಾಹ್ಮಣ ಕುಟುಂಬಗಳನ್ನು ಇಲ್ಲಿ ನೆಲೆಸುವಂತೆ ಮಾಡಿದ. ಇಂಥ ಪುಣ್ಯಸ್ಥಳಕ್ಕೆ ಬಂದು ಸ್ನಾನಮಾಡಿ ಬಗೆಬಗೆಯ ದಾನ ನೀಡಿ ಭಗವದಾರಾಧನೆ ಗೈಯ್ದವರು ಸಹಸ್ರ ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯವನ್ನು ಪಡೆಯುತ್ತಾರೆ. ಜರಾಸಂಧನಿಂದ ನಿಮಗೆ ಯಾವ ಭಯವೂ ಬಾರದಂತೆ ನೋಡಿಕೊಳ್ಳುತ್ತೇನೆ. ಎಂದು ಆ ತೀರ್ಥವಾಸಿಗಳಿಗೆ ಅಭಯಪ್ರದಾನ ಮಾಡಿ ದ್ವಾರಕಾ ಪಟ್ಟಣಕ್ಕೆ ಇಲ್ಲಿಂದ ಪಯಣ ಬೆಳೆಸಿದ.

ಈ ಪರಮ ಪವಿತ್ರವಾದ ಮಧುರಾ ತೀರ್ಥದಲ್ಲಿ ಸ್ನಾನಮಾಡಿ ಮಧುರಾರ್ಕನ ಪೂಜೆಗೈದು ಮಾಘಶುಕ್ಲ ಸಪ್ತಮಿಯದಿನ ಕಪಿಲಾ ಗೋದಾನ ಮಾಡಿದವರು ಸರ್ವಸೌಖ್ಯಗಳನ್ನು ಇಹದಲ್ಲಿ ಅನುಭವಿಸಿ, ನಂತರ ಆದಿತ್ಯಲೋಕವನ್ನು ಕುರಿತು ಪ್ರಯಾಣ ಮಾಡುತ್ತಾರೆ. ಆದಿತ್ಯಲೋಕದಲ್ಲಿ ಸೂರ್ಯನಾರಾಯಣನ ಪರಮಾನುಗ್ರಹದಿಂದ ಸುಖಾನುಭವ ಹೊಂದುತ್ತಾರೆ. ಸುಂದರಿ, ನಿನಗೆ ಈ ವಿಷಯದಲ್ಲಿ ಒಂದು ಹಿಂದಿನ ಇತಿಹಾಸವನ್ನು ಹೇಳುವೆ ಕೇಳು. ಪೂರ್ವಕಾಲದಲ್ಲಿ ಮಾಂಡವ್ಯ ಋಷಿಗಳು ಗಂಗಾದ್ವಾರದಲ್ಲಿ ಉಗ್ರವಾದ ತಪಸ್ಸನ್ನು ಆಚರಿಸುತ್ತಲಿದ್ದರು. ಕೇವಲ ಒಣಗಿದ ತರಗೆಲೆಗಳನ್ನು ತಿಂದು ಹಲವಾರು ವರ್ಷ ತಪಸ್ಸನ್ನು ಆಚರಿಸಿದ್ದರು. ಕೆಲದಿನ ಹಣ್ಣು, ಕೆಲದಿನ ಗೆಡ್ಡೆ ಗೆಣಸು, ಮತ್ತೆ ಎಷ್ಟೋ ದಿನಗಳವರೆಗೆ ಬರೀ ಗಾಳಿ ಮತ್ತೆ ಹಲವಾರು ದಿನ ನಿರಾಹಾರರಾಗಿಯೂ ಆ ಮಹಾನುಭಾವರಾದ ಮಹರ್ಷಿಗಳು ತಪಸ್ಸನ್ನು ಮುಂದುವರೆಸಿದರು. ಹಿಂದೆ ಆ ಭಾಗದಲ್ಲಿ ಆ ಕಾಲದಲ್ಲಿ ವಿಶ್ವಮೋಹನ ಎಂಬ ರಾಜನು ರಾಜ್ಯವನ್ನು ಆಳುತ್ತಲಿದ್ದ. ಆ ವಿಶ್ವಮೋಹನನಿಗೆ ಸೋಮಚಂದ್ರ ಎಂಬ ಪ್ರಖ್ಯಾತನಾದ ಪರಾಕ್ರಮಶಾಲಿಯಾದ ಮಗನು ಇದ್ದ. ಒಂದು ದಿನ ಆ ಸೋಮಚಂದ್ರನು ತನ್ನ ಚತುರಂಗ

ಸೈನ್ಯವನ್ನು ತೆಗೆದುಕೊಂಡು ಬೇಟೆಯಾಡಲು ಗೊಂಡಾರಣ್ಯಕ್ಕೆ ತೆರಳಿದ್ದ. ಅಲ್ಲಿ ಅನೇಕ ಕ್ರೂರವಾದ ಶ್ವಾಪದಗಳನ್ನು ತನ್ನ ಆಯುಧದಿಂದ ಕತ್ತರಿಸಿ ಹಾಕಿದ. ಕ್ಷತ್ರಿಯ ರಾಜನಾದ ಆ ಸೋಮಚಂದ್ರನಿಗೆ ಹುಲಿ, ಸಿಂಹ, ಮದ್ದಾನೆ ಮುಂತಾದ ಕ್ರೂರ ಪ್ರಾಣಿಗಳನ್ನು ಕೊಲ್ಲುವದರಲ್ಲಿಯೇ ಅಮಿತ ಆನಂದ.

ಹೀಗೆ ಬೇಟೆಯ ನಾದದಲ್ಲಿ ಕ್ರೀಡಾರಸದಿಂದ ಆ ರಾಜನು ಆ ವನಪ್ರಾಂತದಲ್ಲಿ ಮೃಗಯಾವ್ಯಾಪಾರ ಮಾಡುತ್ತಲಿರುವಾಗಲೇ ಕತ್ತಲೆಯಾಯಿತು. ಅಂದಿನ ರಾತ್ರಿ ಸೋಮಚಂದ್ರನು ತನ್ನ ಪರಿವಾರದೊಂದಿಗೆ ಆ ಘೋರಾರಣ್ಯದಲ್ಲಿಯೇ ರಾತ್ರಿ ಕಳೆದು ಬೆಳಗಾಗ ಬಂದಾಗ ಬ್ರಾಹ್ಮಮುಹೂರ್ತದಲ್ಲಿ ಒಮ್ಮೆಲೇ ಯಾವನೋ ಒಬ್ಬ ಚತುರನಾದ ಚೋರ ಬಂದು ಮಹಾರಾಜನ ಕುದುರೆಯನ್ನು ಕದ್ದು ತೆಗೆದುಕೊಂಡು ಓಡಿದ. ಆಗ ರಾಜನ ಅಂಗರಕ್ಷಕರು ಯಾರೋ ಕಳ್ಳರು ಕುದುರೆಯನ್ನು ಕದ್ದು ತೆಗೆದುಕೊಂಡು ಹೋಗಿದ್ದಾರೆ. ಹಿಡಿಯಿರಿ ಕಳ್ಳನನ್ನು, ಹೊಡೆಯಿರಿ ಚೋರನನ್ನು ಎಂದು ಕೂಗುತ್ತ ಓಡಾಡತೊಡಗಿದರು. ಮಹಾರಾಜರು ತಮ್ಮನ್ನು ದಂಡಿಸುವರೆಂಬ ಹೆದರಿಕೆಯಿಂದ ಅಲ್ಲಿ ಇದ್ದ ಪರಿವಾರದವರೆಲ್ಲರೂ ಕುದುರೆ ಹುಡುಕಲು ದಶದಿಕ್ಕುಗಳಿಗೂ ಓಡಿದರು. ವನಪ್ರಾಂತದ ಸುತ್ತುಮುತ್ತು ಎಲ್ಲ ಕಡೆಗೂ ಹುಡುಕಿದರು. ಹೀಗೆ ಅವರು ಕುದುರೆಯ ಕಳ್ಳನನ್ನೂ ಹಾಗೂ ಕುದುರೆಯನ್ನೂ ಅರಸುತ್ತ ಮಾಂಡವ್ಯ ಋಷಿಗಳು ತಪೋನುಷ್ಠಾನ ಕೈಗೊಂಡಿದ್ದ ಹರಿದ್ವಾರಕ್ಕೆ ಬಂದರು. ಆ ಗಂಗಾದ್ವಾರದ ದಿವ್ಯ ಪುಣ್ಯಕ್ಷೇತ್ರದಲ್ಲಿ ಗಂಗಾ-ಯಮುನಾ ಸಂಗಮದ ಪಾವನಸ್ಥಳದಲ್ಲಿ ಮಹರ್ಷಿಗಳಾದ ಮಾಂಡವ್ಯರು ತಮ್ಮ ಉಗ್ರವಾದ ತಪಸ್ಸನ್ನು ಏಕಾಗ್ರ ಮನಸ್ಸಿನಿಂದ ಅವ್ಯಗ್ರಚಿತ್ತದಿಂದ ಮಾಡುತ್ತ ಕುಳಿತುಕೊಂಡಿದ್ದರು. ತಪಸ್ಸಮಾಧಿಲೀನರಾದ ಆ ಋಷಿಗಳು ಕಣ್ಣು ಮುಚ್ಚಿಕೊಂಡು ಕುಳಿತದ್ದನ್ನು ರಾಜದೂತರು ನೋಡಿದರು. ಅವರ ಹಿಂದೆ ನಿಜವಾದ ಕುದುರೆಯ ಕಳ್ಳರು ಆ ಕುದುರೆಯನ್ನೂ ಬಿಟ್ಟು ಓಡಿಹೋಗಿದ್ದರು. ರಾಜನ ಪ್ರೀತಿಯ ಕುದುರೆಯು ಮುನಿಗಳ ಬೆನ್ನ ಹಿಂದೆ ಸುಖವಾಗಿ ಎಳೆ ಹುಲ್ಲನ್ನು ಮೇಯುತ್ತಿತ್ತು. ಅದನ್ನು ಕಂಡ ರಾಜದೂತರು ಈ ಮಾಂಡವ್ಯಮುನಿಯೇ ಕುದುರೆಯನ್ನು ಕದ್ದು ತನ್ನ ಬೆನ್ನ ಹಿಂದೆ ಮೇಯಲು ಬಿಟ್ಟು ನಾವು ಬಂದದ್ದನ್ನು ಕಂಡು ಕಣ್ಣುಮುಚ್ಚಿ ಕುಳಿತುಬಿಟ್ಟಿದ್ದಾನೆ ಎಂದು ತಿಳಿದರು. ಅದರಂತೆ ಅವರು ಆ ಮುನಿಯನ್ನೂ ಹಾಗೂ ಕುದುರೆಯನ್ನೂ ಎರಡನ್ನೂ ಬಂಧನಗೈದು ಹಿಡಿದು ರಾಜನಲ್ಲಿಗೆ ಕರೆದೊಯ್ದರು. ಮಹಾರಾಜ! ಕುದುರೆಯನ್ನು ಕದ್ದ ಕಳ್ಳ, ಕುದುರೆ ಎರಡೂ ದೊರೆತಿವೆ. ಅವೆರಡನ್ನೂ ನಾವು ನಿನ್ನಲ್ಲಿಗೆ ಕರೆತಂದಿದ್ದೇವೆ. ಮುಂದೆ ಏನು ಮಾಡಬೇಕು ? ಎಂದು ಕೇಳಿದರು.

ಕುದುರೆಯ ಕಳ್ಳರು ತನ್ನದೂತರ ಕೈಯಲ್ಲಿ ಸಿಕ್ಕದ್ದನ್ನು ಕೇಳಿ ಯಾವ ವಿಚಾರವನ್ನೂ ಮಾಡದೇ ಆ ಅಶ್ವಚೋರನನ್ನು ಶೂಲಕ್ಕೆ ಏರಿಸಿ ಎಂದು ಅಪ್ಪಣೆ ನೀಡಿದ. ರಾಜಾಜ್ಞೆಯಂತೆ ರಾಜಭಟರು ಮಾಂಡವ್ಯಮುನಿಯನ್ನು ಶೂಲಕ್ಕೆ ಹಾಕಿದರು. ಇಷ್ಟೆಲ್ಲ ಗೊಂದಲ ಗಡಿಬಿಡಿ ಆದರೂ ಮಾಂಡವ್ಯಮುನಿಗೆ ಬಾಹ್ಯ ಪ್ರಜ್ಞೆಯೇ ಇಲ್ಲ. ಅಸಂಪ್ರಜ್ಞಾತ ಸಮಾಧಿ ಅವಸ್ಥೆಯಲ್ಲಿ ಭಗವಂತನ ಧ್ಯಾನೈಕದಾನಲೀನಮಾನಸಾರಗಿ ಕುಳಿತ ಆ ಮಹಾಮುನಿಗಳಿಗೆ ರಾಜಭಟರ ಅಬ್ಬರಗಳನ್ನು ತಮ್ಮ ತಪೋನುಷ್ಠಾನದಲ್ಲಿ ಗಮನಿಸಲು

ಸಾಧ್ಯವಾಗಲೇ ಇಲ್ಲ. ಅವರು ತಪೋನುಷ್ಠಾನ ತತ್ಪರರಾಗಿದ್ದರು. ರಾಜದೂತರು ಹೊತ್ತುಕೊಂಡು ರಾಜಧಾನಿಗೆ ಒಯ್ದುದ್ದು ತಿರುಗಿ ಕರೆತಂದು ಶೂಲಕ್ಕೆ ಏರಿಸಿದ್ದು, ಯಾವುದೂ ಬೋಧವಿಲ್ಲ. ಶೂಲದಲ್ಲಿ ಅವರನ್ನು ಸಿಕ್ಕುಹಾಕಿದ ಬಳಿಕ ಕೆಲಕಾಲದ ನಂತರ ಅವರು ತಮ್ಮ ಅಸಂಪ್ರಜ್ಞಾತ ಸಮಾಧಿ ಇಳಿದು ಪ್ರಪಂಚ ಪರಿಜ್ಞಾನಕ್ಕೆ ಮರಳಿದರು. ಎಚ್ಚರವಾದಾಗ ತಮ್ಮ ದೇಹ ಶೂಲದ ತುದಿಯಲ್ಲಿ ನೇತಾಡುತ್ತಲಿತ್ತು. ಇದು ಹೀಗೆ ಏಕೆ ಆಯಿತು? ಎಂದು ಆ ಮಹಾಮುನಿಗಳು ಅಂತರ್ದೃಷ್ಟಿಯಿಂದ ವಿಚಾರಿಸಿದರು. ನಿಜವಾಗಿಯೂ ಆ ಮುನಿಗಳು ತ್ರಿಕಾಲಜ್ಞಾನಿಗಳು. ತಮ್ಮ ಈ ಘೋರಶಿಕ್ಷೆ ಸಾಕ್ಷಾತ್ ಯಮಧರ್ಮನ ನಿರ್ದೇಶದಂತೆಯೇ ಪ್ರಾಪ್ತವಾಗಿದೆಯೆಂದು ಅವರಿಗೆ ತಿಳಿದು ಹೋಯಿತು. ಕೂಡಲೇ ಅವರು ಸೂಕ್ಷ್ಮರೂಪದಿಂದ ತಮ್ಮ ಯೋಗಶಕ್ತಿಯಿಂದ ಯಮನ ಸಂಯಮಿನೀ ಪುರಕ್ಕೆ ತೆರಳಿದರು. ಅವನನ್ನು ಕುರಿತು ಪ್ರಶ್ನಿಸಿದರು.

**ಮಾಂಡವ್ಯ:-** ಯಮಧರ್ಮ ! ನೀನು ಜಗತ್ತಿನಲ್ಲಿ ಧರ್ಮರಾಯ ಎಂದೇ ಪ್ರಖ್ಯಾತನಾಗಿರುವಿ. ವೇದಗಳು ಶಾಸ್ತ್ರಗಳೆಲ್ಲ ನಿನ್ನನ್ನು ಧರ್ಮ ಎಂದೇ ಹೊಗಳುತ್ತಲಿವೆ. ಹೀಗೆ ಧರ್ಮದ ನಿಯಾಮಕ ಹಾಗೂ ಶಾಸಕನೂ ಆದ ನೀನು ನನ್ನ ಶೂಲಾರೋಪಣದ ಶಾಸನವನ್ನು ಏಕೆ ಅನುಷ್ಠಾನಕ್ಕೆ ತಂದಿರುವೆ? ನನ್ನನ್ನು ಶೂಲಕ್ಕೇರಿಸುವಂಥ ಪಾಪವನ್ನು ನಾನೇನು ಮಾಡಿದ್ದೆ? ನನ್ನಿಂದ ಈ ಜನ್ಮದಲ್ಲೇ ಆಗಲಿ, ಕಳೆದ ಜನ್ಮದಲ್ಲೇ ಆಗಲಿ ಶೂಲಾರೋಪಣಕ್ಕೆ ಕಾರಣವಾದ ಏನಾದರೂ ಘಟಿಸಿದ್ದರೆ ಅದನ್ನು ಹೇಳು.

**ಯಮಧರ್ಮ:-** ದ್ವಿಜಶ್ರೇಷ್ಠ ! ನನ್ನ ಮೇಲೆ ಕೃಪೆ ಮಾಡು. ನೀನು ಜನ್ಮಾಂತರದಲ್ಲಿ ಮಾಡಿದ ಪಾಪ ಏನೆಂಬುದನ್ನು ಈಗ ನಾನು ಹೇಳುತ್ತೇನೆ. ಕಳೆದ ಜನ್ಮದಲ್ಲಿ ನೀನು ಬಾಲಕನಾಗಿದ್ದಾಗ ಒಂದು ಮಹಾಪಾಪವನ್ನು ಮಾಡಿದೆ. ಒಂದಾನೊಂದು ದಿನ ನೀನು ಹಿಂದಿನ ಜನ್ಮದಲ್ಲಿ ಒಂದು ಅರಣ್ಯಕ್ಕೆ ತೆರಳಿದ್ದೆ. ಅದೊಂದು ನಿರ್ಜನ ವನ. ಅಲ್ಲಿ ನೀನು ಶಲಭಲ ಎಂಬ ಒಂದು ದೀಪದ ಹುಳಕ್ಕೆ ಸೂಜಿ ಚುಚ್ಚಿ ನೋವುಮಾಡಿದೆ. ಜನ್ಮಾಂತರದಲ್ಲಿ ಒಂದು ನಿರಪರಾಧಿಯಾದ ಕೀಟಕ್ಕೆ ನೀನು ಸೂಜಿ ಚುಚ್ಚಿದ್ದರಿಂದ ಈಗ ಶೂಲಾರೋಪಣಕ್ಕೆ ಗುರಿಯಾಗಬೇಕಾಯಿತು. ರಾಜನು ಆ ನಿನ್ನ ಹಿಂದಿನ ಅಪರಾಧಕ್ಕಾಗಿ ಈಗ ನನ್ನಿಂದ ಪ್ರೇರಿಸಲ್ಪಟ್ಟು ನಿನ್ನನ್ನು ಶೂಲದ ತುದಿಯಲ್ಲಿ ಸಿಕ್ಕುವಂತೆ ಮಾಡಿದ್ದಾನೆ. ಮನುಷ್ಯನು ಹಿಂದೆ ಮಾಡಿದ ಕರ್ಮಗಳ ಶುಭಾಶುಭ ಫಲವನ್ನು ಈ ಜನ್ಮದಲ್ಲಿ ಅವಶ್ಯವಾಗಿ ಅನುಭವಿಸಲೇ ಬೇಕು.

ಯಮಧರ್ಮನ ಈ ಮಾತುಗಳನ್ನು ಕೇಳಿ ಮಾಂಡವ್ಯ ಮುನಿಯ ಕಣ್ಣುಗಳು ಕೋಪದಿಂದ ಕೆಂಪಡರಿದವು. ಸಿಟ್ಟಿನಿಂದ ಸಿಡಿದು ನುಡಿದ, ಚಂಡಕೋಪನಾದ ಆ ಮಾಂಡವ್ಯಮುನಿ. ಪಾಪಿಷ್ಠನಾದ ಯಮಧರ್ಮ ! ನಾನು ಜನ್ಮಾಂತರದಲ್ಲಿ ಏನು ಅಂಥ ಮಹಾಪಾಪ ಮಾಡಿದ್ದೇನೆ? ಬಾಲಕನಾಗಿದ್ದಾಗ ಏನೂ ತಿಳಿಯದ ಅವಸ್ಥೆಯಲ್ಲಿ ಮಾಡಿದ ಅತ್ಯಲ್ಪ ಅಪರಾಧಕ್ಕಾಗಿ ನನಗೆ ಇಂಥ ಘೋರ ಶೂಲಾರೋಪಣ ಶಿಕ್ಷೆಯೇ? ಹದಿನಾಲ್ಕು ವರ್ಷ ವಯಸ್ಸಿನವರೆಗೆ ಮಕ್ಕಳು ಮಾಡಿದ ಕರ್ಮಗಳಿಗೆ ಪಾಪಲೇಪವಿಲ್ಲ ಎಂಬ ಶಾಸ್ತ್ರವಿಧಿಯನ್ನು ಮರೆತುಬಿಟ್ಟೆಯಾ? ಧರ್ಮಾಧರ್ಮ ವಿಚಾರಮಾಡದೇ ನಾನು ಶೂಲಾಗ್ರದಲ್ಲಿ ಸಿಲುಕಿ ಬಳಲುವಂತೆ ಮಾಡಿದ ನೀನು ಚಂದ್ರವಶದಲ್ಲಿ ಶೂದ್ರನಾಗಿ ಜನಿಸು.

ಮಾಂಡವ್ಯ ಮಹರ್ಷಿಯ ಈ ಶಾಪದಿಂದ ಯಮಧರ್ಮನು ಮುಂದೆ ಕೌರವ ವಂಶದಲ್ಲಿ ವಿದುರ ಎಂಬ ಪರಮ ವಿಷ್ಣುಭಕ್ತನಾದ ಶೂದ್ರನಾಗಿ ಹುಟ್ಟಿದ. ಮುಂದೆ

ದೊಡ್ಡವನಾದ ಬಳಿಕ ಕೊನೆಗಾಲದಲ್ಲಿ ಈ ಸಾಭ್ರಮತೀ ನದಿಯು ಧರ್ಮಾವತೀ ನದಿಯೊಂದಿಗೆ ಸಂಗಮಿಸಿದ ಪುಣ್ಯಸ್ಥಲಕ್ಕೆ ಆಗಮಿಸಿದ. ಇಲ್ಲಿ ಸ್ನಾನಮಾಡಿ ಶ್ರೀಹರಿಯನ್ನು ಆರಾಧಿಸಿ ಆ ಜನ್ಮದಿಂದ ಉದ್ಧೃತನಾದ. ಆದುದರಿಂದ ದೇವಿ, ಸಾಭ್ರಮತಿಯ ಈ ಸಂಗಮತೀರ್ಥದಲ್ಲಿ ಸ್ನಾನಮಾಡಿ ಪುಣ್ಯಕರ್ಮ ಮಾಡಿದವರು ಪರಮಪದನ್ನೈದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಮಧುರಾ ಮೊದಲಾದ ತೀರ್ಥಗಳ ಮಾಹಾತ್ಮ್ಯ ವರ್ಣನೆ ಎಂಬ ಮೂವತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ಕಂಬು, ಕಪೀಶ್ವರ ತೀರ್ಥಗಳ ಮಹಿಮೆ

**ಅಧ್ಯಾಯ - ೧೪೦**

**ಮಹಾದೇವ:-** ಕಂಬುತೀರ್ಥ ಪರಮಪವಿತ್ರ. ಅಲ್ಲಿ ಮೈತೊಳೆದು ಪಿತೃತರ್ಪಣ ನೀಡಬೇಕು. ನಾರಾಯಣನನ್ನು ಪೂಜಿಸಬೇಕು. ದೇವತೆಗಳಿಗೂ ದೇವನಲ್ಲವೇ ಆ ಶ್ರೀಹರಿ ? ಜ್ಞಾನಿಗಳಿಗೆ ಆ ತೀರ್ಥದ ತಡಿಯಲ್ಲಿ ದಾನ ನೀಡಿದ ನರನು ಹರಿಮಂದಿರಕ್ಕೆ ಪಯಣ ಬೆಳೆಸುವನು. ಹಿಂದಿನ ಯುಗದಲ್ಲಿ ರಾಜರ್ಷಿಯಾದ ವಿಶ್ವಾಮಿತ್ರನು ಸಂತತಿಯ ಸಲುವಾಗಿ ಈ ಕಂಬು ತೀರ್ಥದ ಬಳಿಯಲ್ಲಿ ಬಂದು ನಿಂತು, ನಿರಾಹಾರಿಯಾಗಿ ವಿಷ್ಣುಧ್ಯಾನಗೈಯುತ್ತ ತಪಸ್ಸು ಮಾಡಿದ. ಅದರಿಂದ ಅವನಿಗೆ ಒಳ್ಳೆ ಸಂತಾನ ಪ್ರಾಪ್ತಿಯಾಯಿತು. ಆದುದರಿಂದ ಒಳ್ಳೆ ಸಂತಾನ ಹಾಗೂ ಪ್ರಜಾ ಜನರ ಅನುರಾಗವನ್ನು ಬಯಸುವ ರಾಜನೂ ಸತ್ಸಂತಾನವನ್ನು ಬಯಸುವ ಶ್ರೀಸಾಮಾನ್ಯರೂ ಈ ಕಂಬುತೀರ್ಥದಲ್ಲಿ ಸ್ನಾನ ಮಾಡಬೇಕು.

### ಕಪೀಶ್ವರ ತೀರ್ಥ

ಕಂಬುತೀರ್ಥದ ಮುಂದೆ ಇರುವ ಕಪೀಶ್ವರ ತೀರ್ಥ ಮಹಾಪಾತಕನಾಶಕ. ಹಿಂದೆ ರಾಮನು ರಾವಣನನ್ನು ಹಣಿಯಬೇಕೆಂದು ಹೊರಟಾಗ ಸಾಗರಕ್ಕೆ ಸೇತುವೆಯನ್ನು ಕಟ್ಟಬೇಕಾಯಿತು. ಆಗ ಕಪಿವೀರರು ದೊಡ್ಡ ದೊಡ್ಡ ಬೆಟ್ಟಗಳನ್ನು ಎತ್ತಿತಂದು ಒಟ್ಟಿದರು. ಕಡಲಿನ ನಟ್ಟನಡುವೆ. ಆ ಸಂದರ್ಭದಲ್ಲಿ ವಾನರ ವೀರರು ಇಲ್ಲಿಗೂ ಬಂದು ಇಲ್ಲಿ ಇರುವ ಬಾನುದ್ದ ಬೆಳೆದು ನಿಂತ ಬೃಹತ್ ಬೆಟ್ಟವೊಂದನ್ನು ಎತ್ತಿಕೊಂಡು ಒಯ್ದರು. ಆ ಗಿರಿಯನ್ನು ಕಿತ್ತಿದ ಬಳಿಕ ನೆಲದಲ್ಲಿ ಉಂಟಾದ ದೊಡ್ಡ ತಗ್ಗಿನಲ್ಲಿ ಕಪೀಶ್ವರಾದಿತ್ಯ ತೀರ್ಥದಲ್ಲಿ ಚೈತ್ರ ಶುದ್ಧ ಅಷ್ಟಮಿಯ ದಿನ ಸ್ನಾನಮಾಡಿದವರ ಬ್ರಹ್ಮಹತ್ಯಾ ಪಾಪವು ಬಿಟ್ಟು ಹೋಗುವದು. ಹನುಮಂತನೇ ಮೊದಲಾದ ಪ್ಲವಂಗಪುಂಗವರು ಇಲ್ಲಿ ಮೂರು ದಿನ ತಂಗಿ ಈ ಕಪೀಶ್ವರಾದಿತ್ಯ ತೀರ್ಥದಲ್ಲಿ ಮಿಂದು ಇದರ ಮಹಿಮೆಯನ್ನು ಹೆಚ್ಚಿಸಿದರು. ಇಲ್ಲಿ ಸ್ನಾನಮಾಡಿ, ಕಪೀಶ್ವರಾದಿತ್ಯನನ್ನು ಪೂಜಿಸಿದವರು ಸೌಂದರ್ಯವನ್ನೂ, ಸೌಭಾಗ್ಯವನ್ನೂ, ವಿವಿಧ ಭೋಗೋಪಭೋಗಗಳನ್ನೂ ಪಡೆಯುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಕಂಬು, ಕಪೀಶ್ವರ ತೀರ್ಥಗಳ ಮಹಿಮೆ ಎಂಬ ನೂರನಲವತ್ತನೇಯ ಅಧ್ಯಾಯ ಮುಗಿದುದು*

—o—

**ಮಹಾದೇವ:-** ಅನಂತರ ಏಕಧಾರ ತೀರ್ಥಕ್ಕೆ ಪಯಣಿಸಬೇಕು. ಅದು ಪರಮಪಾವನ. ಅಲ್ಲಿ ಒಂದು ದಿನ ಉಪವಾಸವಿದ್ದು ಆ ಏಕಧಾರದಲ್ಲಿ ಸ್ನಾನಮಾಡಿ, ಏಕ ದಿನ ವಾಸಮಾಡಿ, ಏಕೈಕ ದೇವೋತ್ತಮನಾದ ಶ್ರೀಹರಿಯನ್ನು ಸೇವಿಸಿದವನು ನೂರು ಕುಲಗಳನ್ನು ಉದ್ಧರಿಸುತ್ತಾನೆ. ಇದರ ಮುಂದೆ ಸಪ್ತಧಾರ ಎಂಬ ತೀರ್ಥ. ಸಪ್ತರ್ಷಿಗಳು ಇದಕ್ಕೆ ಇಟ್ಟ ಹೆಸರು ಸಪ್ತಸಾರಸ್ವತ ಎಂದು. ತ್ರೇತಾಯುಗದಲ್ಲಿ ಇದನ್ನು ಮಂಕಿ ತೀರ್ಥ ಎಂದು ಹೆಸರಿಸಲಾಗಿತ್ತು. ಆದರೆ ದ್ವಾಪರಯುಗದಲ್ಲಿ ತೀರ್ಥಯಾತ್ರೆಗೆ ಎಂದು ಬಂದ ಪಂಚಪಾಂಡವರು ಇದರ ಹೆಸರನ್ನು ಮತ್ತೆ ಮೊದಲಿನಂತೆ ಸಪ್ತಧಾರ ಎಂದೇ ಪರಿವರ್ತಿಸಿದರು. ಈ ಮಂಕಿ ತೀರ್ಥಕ್ಕೆ ಸಪ್ತಧಾರಾ, ಸಪ್ತಸಾರಿಸ್ವತ ಎಂಬ ಹೆಸರುಗಳು ಮತ್ತೆ ಮತ್ತೆ ಅವೃತ್ತವಾಗಲು ಒಂದು ಮಹತ್ತರ ಕಾರಣ ಉಂಟು. ಸುರಲೋಕದ ನದಿಯಾದ ಗಂಗೆ ಬ್ರಹ್ಮಸದನದಲ್ಲಿ ಆಕಾಶದಿಂದ ಉದುರಿ ಬಿದ್ದ ಬಳಿಕ ಏಳು ಧಾರೆಯಾಗಿ ಪ್ರವಹಿಸಿರುವಳಷ್ಟೇ, ಸೀತಾ, ಅಲಕನಂದಾ, ಚಕ್ಷು, ಭದ್ರಾ ಹೀಗೆ ನಾಲ್ಕು ಧಾರೆಯಾಗಿ ಮೊದಲು ಗಿರಿಧರೆಗಳಲ್ಲಿ ಧೀಂಕಿಟ್ಟು ಹೊಮ್ಮಿ ಹರಿದ ಬಳಿಕ ಅದೇ ದೇವನದಿಯು ಗಂಗಾ, ಗೋದಾವರಿ, ಸಾಭ್ರಮತಿ ಎಂದು ಬಗೆಬಗೆಯ ರೂಪಗಳನ್ನು ಧರಿಸಿ ಬೇರೆಬೇರೆ ಭೂಭಾಗಗಳನ್ನು ತನ್ನ ಪ್ರವಾಹದಿಂದ ಪಾವನಗೊಳಿಸಿದಳು. ಗಂಗಾನದಿಯ ಈ ಸಪ್ತಸ್ತೋತ್ರಗಳೆಲ್ಲವೂ ಈ ಮಂಕಿ ತೀರ್ಥದಲ್ಲಿ ಅಂತಃಪ್ರವಾಹ ರೂಪದಿಂದ ಇದರಲ್ಲಿ ಸೇರಿಕೊಂಡಿರುವದರಿಂದ ಇದಕ್ಕೆ ಸಪ್ತಧಾರಾ, ಸಪ್ತಸಾರಸ್ವತ ಎಂದು ಮಹರ್ಷಿಗಳು ಹೆಸರನ್ನು ಇಟ್ಟಿದ್ದಾರೆ.

ತ್ರೇತಾಯುಗದಲ್ಲಿ ಇದಕ್ಕೆ ಮಂಕಿತೀರ್ಥ ಎಂದು ಹೆಸರು ಬರಲು ಕಾರಣ ಹೇಳುತ್ತೇನೆ ಕೇಳು. ಮಂಕಿಮುನಿಯು ಪುರಾಣಪ್ರಸಿದ್ಧ ವಿಷ್ಣುಭಕ್ತ. ವೇದಶಾಸ್ತ್ರಗಳಲ್ಲಿ ಪರಿನಿಷ್ಠಿತ ಪಂಡಿತ. ಅವನಿಗೆ ಸುರೂಪಾ, ವಿಶ್ವರೂಪಾ ಎಂದು ಇಬ್ಬರು ಮಡದಿಯರು. ಇಬ್ಬರು ಬಾರ್ಯೆಯರನ್ನು ಮಾಡಿಕೊಂಡರೂ ಒಬ್ಬ ಮಗನೂ ಅವರಿಗೆ ಜನಿಸಲಿಲ್ಲ ಚಿಂತೆ ಸಂತಾಪವಾಗಿ ಸುಡತೊಡಗಿತು ಅವನ ಅಂತರಂಗವನ್ನು. ಏನು ಮಾಡಬೇಕು ತಿಳಿಯದಾಯಿತು ಆ ಮಂಕಿಮುನಿಗೆ. ಸಂತಾನದ ಚಿಂತೆಯಿಂದ ಮಂಕುಗವಿದ ಆ ಮಂಕಿಮುನಿಯು ಕಿಂಕರ್ತವ್ಯಮೂಢನಾಗಿ ಕೊನೆಗೆ ತನ್ನ ಗುರುಗಳ ಚರಣವನ್ನೇ ಶರಣುಹೋದ. ತನಗೆ ಒಳ್ಳೇ ಪುತ್ರನು ಜನಿಸಲು ಏನಾದರೂ ಉಪಾಯವನ್ನು ಹೇಳಿರಿ ಎಂದು ಕೇಳಿಕೊಂಡ. ಮಂಕಿಗೆ ಜ್ಞಾನ ವಿಜ್ಞಾನವನ್ನೆಲ್ಲ ಬೋಧಿಸಿದ ಗುರುಗಳು ಸಾಭ್ರಮತಿ ನದಿಯಲ್ಲಿ ಸ್ನಾನಮಾಡಿ ದೇವತಾರಾಧನೆ ಮಾಡು ಎಂದು ಉಪದೇಶಿಸಿದರು.

ಗುರುವಿನ ಅಣತಿಯನ್ನು ತಲೆಯಲ್ಲಿ ಹೊತ್ತು ಸಾಭ್ರಮತಿ ತೀರಕ್ಕೆ ಆಗಮಿಸಿದ ಮಂಕಿ. ಅಲ್ಲಿಯ ಗಂಗಾಜಲದಲ್ಲಿ ಮಿಂದು ಶ್ರೀಹರಿಯ ಆರಾಧನೆಗೈದ. ನಾಲ್ಕು ವರ್ಷ ಈ ಹೊಳೆಯ ತಡಿಯಲ್ಲಿ ನಿಂತು ತಪಂಗೈದ ತ್ರೇತಾಯುಗದಲ್ಲಿ. ಈ ತೀರ್ಥಸ್ನಾನದ ಪುಣ್ಯಪ್ರಭಾವದಿಂದ ಒಳ್ಳೆ ಸಂತಾನವಾಯಿತು ಮಂಕಿ ಮುನಿಗೆ. ಹೀಗೆ ಸಾಭ್ರಮತಿಯ ಸ್ನಾನದಿಂದ ಸತ್ಸಂತಾನ, ಸೌಭಾಗ್ಯ ಪಡೆದು ಮಂಕಿಯು ಮುಂದೆ ನನ್ನ ಲೋಕವನ್ನು ಐದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಸಪ್ತಧಾರಾ ತೀರ್ಥ ಮಹಿಮೆ ಎಂಬ ನೂರನಲವತ್ತೊಂದನೇಯ ಅಧ್ಯಾಯ ಮುಗಿದುದು*

## ಬ್ರಹ್ಮವಲ್ಯಾದಿ ನಾನಾ ತೀರ್ಥಗಳ ಮಹಿಮೆ



**ಮಹಾದೇವ:-** ಸುರೇಶ್ವರಿ ! ಮಂಕಿತೀರ್ಥದ ಅನಂತರ ಬ್ರಹ್ಮವಲ್ಲಿ ತೀರ್ಥಕ್ಕೆ ಹೋಗಬೇಕು. ಬ್ರಹ್ಮವಲ್ಲಿ ಒಂದು ಚಿಕ್ಕ ತೊರೆ. ಈ ತೊರೆ ಸಾಭ್ರಮತಿ ತರಂಗಿಣಿಯೊಂದಿಗೆ ಸಂಗಮಿಸಿದ ಪುಣ್ಯಸ್ಥಳವು ಬ್ರಹ್ಮತೀರ್ಥ ಎಂದು ಹೆಸರಾಗಿದೆ. ಈ ಬ್ರಹ್ಮತೀರ್ಥದಲ್ಲಿ ಸ್ನಾನ, ದಾನ, ಪಿಂಡಪ್ರದಾನ, ಗೋದಾನ, ಭೂದಾನ, ಅನ್ನದಾನಾದಿಗಳನ್ನು ಮಾಡಿದವರು ವಿಷ್ಣುಲೋಕವನ್ನು ಹೊಂದುತ್ತಾರೆ. ಸನಕ ಸನಂದನಾದಿಮುನಿಗಳು ಪೂರ್ವದಲ್ಲಿ ಇಲ್ಲಿ ತಪೋನುಷ್ಠಾನಗೈದು ಬ್ರಹ್ಮಲೋಕವನ್ನು ಹೊಂದಿದರು. ಇದರ ಮುಂದೆ ಖಂಡತೀರ್ಥ ಎಂದು ಹೆಸರಾದ ವೃಷತೀರ್ಥಕ್ಕೆ ಹೋಗಬೇಕು. ಖಂಡ ಎಂದು ಹೆಸರಾದ ಯಮಧರ್ಮನು ಲೋಕಮಾತೆಯರಾದ ಗೋಗಳ ಶಾಪವನ್ನು ಈ ತೀರ್ಥ ಸ್ನಾನದ ಮುಖಾಂತರ ಮೋಚನ ಮಾಡಿದ್ದರಿಂದ ಇದಕ್ಕೆ ಖಂಡ ತೀರ್ಥ ಎಂದು ಹೆಸರು ಬಂದಿದೆ.

**ಪಾರ್ವತಿ:-** ಲೋಕಪೂಜ್ಯರಾದ ಗೋಮಾತೆಯರಿಗೆ ಯಾರು ಶಾಪಕೊಟ್ಟರು? ಅವೇಕೆ ತಮ್ಮ ಗೋ ಲೋಕದಿಂದ ಪರಿಭ್ರಷ್ಟರಾಗಿ ನೆಲಕ್ಕೆ ಉರುಳಿಬಿದ್ದವು? ಇದನ್ನೆಲ್ಲ ಹೇಳಿರಿ.

**ಮಹಾದೇವ:-** ಹಿಂದೆ ಗೋ ಲೋಕದಲ್ಲಿ ಹಸುಗಳು ಹೋರಿಯೊಂದಿಗೆ ಪ್ರೀತಿಯಿಂದ ಕ್ರೀಡಿಸುತ್ತಲಿದ್ದವು. ಆಗ ಆ ಹಸು ಹಾಗೂ ಹೋರಿಗಳು ವಿಸರ್ಜಿಸಿದ ಹೊಲಸು ಮಹಾದೇವರ ತಲೆಯ ಮೇಲೆ ಬಿದ್ದಿತು. ತನ್ನ ಮಸ್ತಕದ ಮೇಲೆ ಬಿದ್ದ ಈ ಗೋಮಯ ಗೋಮೂತ್ರವನ್ನು ಕಂಡು ಕೆಂಡವಾದ. ಮೊದಲೇ ಚಂಡ ಸ್ವಭಾವದ ಆ ಖಂಡ ಪರಶು ಹಸುಗಳಿಗೆ ಹಿಡಿ ಶಾಪ ಹಾಕಿದ. ''ನೀವು ಗೋ ಲೋಕದಿಂದ ಉರುಳಿ ಅರಿವುಗೆಟ್ಟು ನೆಲದ ಮೇಲೆ ಬೀಳಿರಿ'' ಎಂದು

ಶಂಕರನಿಂದ ಶಪಿತವಾದ ಆ ಹಸುಗಳು ಚರಾಚರ ಗುರುವಾದ ಆ ಹರನಲ್ಲಿ ಮೊರೆಯಿಟ್ಟವು. ''ಸ್ವಾಮಿ, ನಾವು ಮತ್ತೆ ಶಾಪಮುಕ್ತರಾಗಿ ಈ ಗೋ ಲೋಕಕ್ಕೆ ಬರುವದು ಎಂತು? ಮತ್ತು ಎಂದು? ಆಗ ಮಹಾದೇವನಾದ ನಾನು ಅವುಗಳಿಗೆ ಬ್ರಹ್ಮವಲ್ಲೀ ಸಮೀಪದಲ್ಲಿ ಇರುವ ಸಾಭ್ರಮತೀ ನದಿಯ ಖಂಡ ತೀರ್ಥದಲ್ಲಿ ನೀವು ಸ್ನಾನಮಾಡಿದರೆ ಶಾಪದಿಂದ ಮುಕ್ತರಾಗುವಿರಿ.'' ಎಂದು ಹೇಳಿದೆ.

ಶಿವನ ಮಾತಿನಂತೆ ಈ ಎಲ್ಲ ಗೋವುಗಳು ಸಾಭ್ರಮತಿ ನದಿಯ ಬ್ರಹ್ಮವಲ್ಲಿಯ ಬಳಿಯ ಖಂಡ ತೀರ್ಥದಲ್ಲಿ ಸ್ನಾನಮಾಡಿ ಶಾಪಮುಕ್ತವಾಗಿ ಗೋಲೋಕಕ್ಕೆ ತೆರಳಿದವು. ಗೋಗಳು ಅಲ್ಲಿ ಸ್ನಾತಪೂತವಾಗಿ ಗೋ ಲೋಕಕ್ಕೆ ಹೋದ ಬಳಿಕ ಅದಕ್ಕೆ ಗೋ ಹ್ರದ ಎಂದು ಹೆಸರು ಬಂದಿತು. ಈ ಗೋ ಹ್ರದದಲ್ಲಿ ಸ್ನಾನಮಾಡಿ ಗೋವುಗಳನ್ನು ಎತ್ತನ್ನೂ ಪೂಜ್ ಒಂದು ಬಂಗಾರದ ಹಸುವನ್ನು ಮಾಡಿಸಿ ದಾನಕೊಟ್ಟವರು ಹದಿನಾಲ್ಕು ಇಂದ್ರರು ಸ್ವರ್ಗ ಸಾಮ್ರಾಜ್ಯವನ್ನು ಆಳುವ ವರೆಗೆ ಸ್ವರ್ಗಲೋಕದಲ್ಲಿ ನೆಲೆಸುವರು. ಆ ಖಂಡ ತೀರ್ಥದ ದಂಡೆಯ ಮೇಲೆ ನೆಲ್ಲಿ ಗಿಡಗಳನ್ನು ಹಚ್ಚಿದವರು ಹರಿಲೋಕವನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಬ್ರಹ್ಮವಲ್ಯಾದಿ ನಾನಾ ತೀರ್ಥಗಳ ಮಹಿಮೆ ಎಂಬ ನೂರನಲವತ್ತೆರಡನೇಯ ಅಧ್ಯಾಯ ಮುಗಿದುದು*

**ಮಹಾದೇವ:-** ಅನಂತರ ಹಸ್ತಿಮತಿ ಮತ್ತು ಸಾಭ್ರಮತಿ ನದಿಗಳ ಸಂಗಮದ ಪುಣ್ಯ ಸ್ಥಳದಲ್ಲಿರುವ ಸಂಗಮೇಶ್ವರ ತೀರ್ಥಕ್ಕೆ ಹೋಗಬೇಕು. ಕೌಂಡಿಣ್ಯ ಮುನಿಯ ಶಾಪದಿಂದ ಹಿಂದೆ ಹಸ್ತಿಮತಿ ನದಿಯು ಒಣಗಿ ಇಂಗಿ ಹೋಯಿತು. ಆಗ ಅದಕ್ಕೆ ಬಹಿಶ್ಚರ್ಯಾ ಎಂದು ಹೆಸರು. ಈ ಹಸ್ತಿಮತಿ ಮತ್ತು ಸಾಭ್ರಮತಿ ನದಿಗಳ ಸಂಗಮ ಸ್ಥಾನದಲ್ಲಿ ಕೌಂಡಿಣ್ಯ ಋಷಿ ಮಹಾತಪಸ್ಸನ್ನು ಕೈಕೊಂಡ. ಅದರಂತೆ ಹಸ್ತಿಮತಿ ನದೀ ತೀರದಲ್ಲಿ ಬಹು ವರ್ಷಗಳ ಕಾಲ ನಿಂತು ಅನೇಕ ವರ್ಷಗಳ ಕಾಲ ತಪಸ್ಸು ಮಾಡಿದ ಆ ಮಹಾಮುನಿ. ಒಂದು ದಿನ ಮಳೆಗಾಲ, ಮುಗಿಲ ತುಂಬ ಮೋಡಗಳ ಗುಡುಗಾಟ, ಬಿರುಗಾಳಿಯ ಬೊಬ್ಬಾಟ. ಕ್ಷಣಾರ್ಧದಲ್ಲಿ ಧಾರಾಕಾರವಾಗಿ ಜಲವೃಷ್ಟಿ. ಸಂತತ ಸುರಿಯುವ ನಿರಂತರ ಜಲಧಾರೆಗಳಿಂದ ಹಸ್ತಿಮತಿಗೆ ಜಲಪೂರ ನುಗ್ಗಿ ಹರಿಯುವ ಆ ಹಸ್ತಿಮತಿಯ ಭೀಷ್ಮಪ್ರವಾಹದಲ್ಲಿ ಕೌಂಡಿಣ್ಯ ಋಷಿಯ ಆಶ್ರಮವೂ, ಪರ್ಣಕುಟೀರದಲ್ಲಿಯ ಹಣ್ಣು, ಕಾಯಿ, ದರ್ಭೆ, ಗಡ್ಡೆ, ಗೆಣಸು, ಸಮಿಧ ಮುಂತಾದ ಎಲ್ಲ ವಸ್ತುಗಳೂ ನೀರಗುಂಟ ಹರಿದು ಹೋದವು. ಮುಂದೇನು ಎಂಬ ಚಿಂತೆ ಕೌಂಡಿಣ್ಯ ಮುನಿಯ ಮುಂದೆ ಧುತ್ತೆಂದು ಬಂದು ನಿಂತಿತು. ತನ್ನ ಅಮೂಲ್ಯವಾದ ಕೈಬರಹದ ತಾಡವಾಲೆಯ ಗ್ರಂಥಗಳೆಲ್ಲವೂ ಹಸ್ತಿಮತಿಯ ವಾರಿಪೂರದಲ್ಲಿ ತೇಲಿಹೋದದ್ದರಿಂದ ಬಹಳ ಕೆಡಕೆನಿಸಿ ವಿಪರೀತ ಕೋಪ ಬಂದಿತು ಆ ಮುನಿಗೆ. ಅವನು ಆ ನದಿಗೆ "ನಿನ್ನ ಪಾತ್ರದಲ್ಲಿಯ ನೀರೆಲ್ಲವೂ ಒಣಗಿ ಹೋಗಲಿ" ಎಂದು ಶಪಿಸಿದ. ಹೀಗೆ ಹಸ್ತಿಮತಿಗೆ ಶಾಪಕೊಟ್ಟು ಅನಂತರ ತಾನು ಬದುಕಿರುವವರೆಗೆ ಸಾಧನಾನುಷ್ಠಾನ ಮಾಡಿ ತಾನು ವಿಷ್ಣುಲೋಕಕ್ಕೆ ತೆರಳಿದ. ಇಂದಿಗೂ ಆ ಐತಿಹಾಸಿಕ ಘಟನೆಗೆ ಸಾಕ್ಷಿಯಾಗಿ ಕೌಂಡಿಣ್ಯ ಮುನಿಯು ಪೂಜಿಸಿ ಆರ್ಚಿಸಿ ಸಿದ್ಧಿ ಪಡೆದ ಸಂಗಮೇಶ್ವರ ಲಿಂಗವೂ ಸಂಗಮೇಶ್ವರ ತೀರ್ಥವೂ ಅಲ್ಲಿಯೇ ಇರುತ್ತವೆ. ಆದರೆ ಅಂದು ತುಂಬಿ ಹರಿಯುತ್ತಿದ್ದ ಹಸ್ತಿಮತಿ ಮಾತ್ರ ಋಷಿಶಾಪದಿಂದ ಶುಷ್ಕವಾಗಿ ಒಣಗಿದ ನದೀ ಪಾತ್ರವು ನೀರಿಲ್ಲದೇ ರಣಭೂಮಿಯಂತೆ ಕಾಣುತ್ತಿತ್ತು. ಈ ಸಂಗಮೇಶ್ವರ ತೀರ್ಥದಲ್ಲಿ ಸ್ನಾನಮಾಡಿದವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಸೋಮೇಶ್ವರ ತೀರ್ಥ ಮಹಿಮೆ ಎಂಬ ನೂರ ನಲವತ್ತಮೂರನೇಯ ಅಧ್ಯಾಯ ಮುಗಿದುದು*

—o—

## ರುದ್ರ ತೀರ್ಥ ಮಹಿಮೆ

ಅಧ್ಯಾಯ - ೧೪೪

**ಮಹಾದೇವ:-** ಯಾತ್ರಿಕನು ಸಂಗಮೇಶ್ವರ ತೀರ್ಥದ ಅನಂತರ ಸಾಕ್ಷಾತ್ ರುದ್ರ್ರೇದವರೇ ನಿರ್ಮಿಸಿದ ರುದ್ರ ಮಹಾತೀರ್ಥಕ್ಕೆ ಹೋಗಬೇಕು. ನಾನು ಒಮ್ಮೆ ಕೈಲಾಸ ಪರ್ವತದಲ್ಲಿ ಕುಳಿತಾಗ ವಿಚಾರ ಮಾಡಿದೆ. "ನಾನು ಲೋಕಹಿತಕ್ಕಾಗಿ ನನ್ನ ಕೇಶಪಾಶದಲ್ಲಿಯ ಒಂದು ರೋಮವನ್ನು ಶಿಥಿಲಗೊಳಿಸಿ ಹೊರಹೊಮ್ಮಿಸಿದ ಸಾಭ್ರಮತಿಯು ಲೋಕದಲ್ಲಿ ಹೇಗೆ ಹರಿದಿದ್ದಾಳೆ? ಮಹಾಗಂಗಾ ಪ್ರವಾಹದಂತೆ ಇವಳೂ ಕೂಡ ಜನರನ್ನು ಪವಿತ್ರಗೊಳಿಸುತ್ತ ಇರುವದನ್ನು ನನ್ನ ಕಣ್ಣಿನಿಂದಲೇ ನೋಡಿ ಬರಬೇಕು" ಎಂದು. ಹೀಗೆ ತಲೆಯಲ್ಲಿ ವಿಚಾರ ಬಂದಕೂಡಲೇ ನಾನು ಹೊರಟೆ. ಸಾಭ್ರಮತಿಯು ಹರಿಯುವಲ್ಲಿಗೆ ಬಂದೆ. ಕಣ್ತುಂಬಾ ಅವಳ ಹರಿತ ಮೊರೆತಗಳನ್ನು ಕಂಡು ಕೇಳಿದೆ. ಇವಳೂ ಒಂದು ಮಹಾಗಂಗೆಯೇ. ನನ್ನ ಕೇಶಕಲಾಪವನ್ನು ಸಡಿಲಗೊಳಿಸಿ ಇವಳನ್ನು ಹುಟ್ಟಿಸಿ ನಾನು ಹರಿಯ ಬಿಟ್ಟದ್ದು ಸಾರ್ಥಕವಾಯಿತು. ಇವಳಲ್ಲಿ ಸ್ನಾನಪಾನಮಾಡಿ ಸಹಸ್ರಾರು ಜನರು ಪಾವನರಾಗುತ್ತಿದ್ದಾರೆ. ಎಂದು ತೃಪ್ತಿಪಟ್ಟೆ. ನಾನು ಸ್ವಯಂ ಆ ಸಾಭ್ರಮತಿಯ ನೀರಿನಲ್ಲಿ ಸ್ನಾನಮಾಡಿ ಕೆಲಕಾಲ ತೀರದಲ್ಲಿ ವಾಸಮಾಡಿ ಅನಂತರ ಕೈಲಾಸಕ್ಕೆ ತೆರಳಿದೆ. ಅಂದಿನಿಂದ ನಾನು ಕೆಲಸಮಯ ತಂಗಿದ ಆ ತಾಣವು ರುದ್ರಮಹಾಲಯ ಎಂಬ ದಿವ್ಯಕ್ಷೇತ್ರ ಎನಿಸಿತು. ನಾನು ಸ್ನಾನಮಾಡಿದ ಆ ಸಾಭ್ರಮತಿಯ ನೀರಿನ ಪ್ರವಾಹ ರುದ್ರ ಮಹಾತೀರ್ಥ ಎನಿಸಿತು. ಇದು ಕೇದಾರತೀರ್ಥಕ್ಕೆ ಸಮಾನವಾದ ತೀರ್ಥ. ಕಾರ್ತೀಕ ಹಾಗೂ ವೈಶಾಖ ಮಾಸಗಳಲ್ಲಿ ಇಲ್ಲಿ ಸ್ನಾನಮಾಡಿದವರು ಸಂಸಾರಕ್ಕೆ ಮರಳಿ ಬರುವದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ರುದ್ರ ತೀರ್ಥ ಮಹಿಮೆ ಎಂಬ ನೂರ ನಲವತ್ತನಾಲ್ಕನೇಯ ಅಧ್ಯಾಯ ಮುಗಿದುದು*



## ಖಡ್ಗ ತೀರ್ಥದ ಮತ್ತು ಮಾಲಾರ್ಕ ತೀರ್ಥಗಳ ಮಹಿಮೆ

**ಅಧ್ಯಾಯ - ೧೪೫**

**ಮಹಾದೇವ:-** ದೇವಿ ! ಇದರ ಮುಂದಿನ ಖಡ್ಗ ತೀರ್ಥದಲ್ಲಿ ಸ್ನಾನಮಾಡಿ ಖಡ್ಗಧಾರೇಶ್ವರನನ್ನು ಕಾರ್ತಿಕ ಹಾಗೂ ವೈಶಾಖ ಮಾಸಗಳಲ್ಲಿ ಧೂಪ, ದೀಪ, ಬಿಲ್ವಪತ್ರಿ, ಫಲಪುಷ್ಪ, ಸಮರ್ಪಣ, ನೈವೇದ್ಯ ಮಂಗಳಾರತಿ ಮೊದಲಾದವುಗಳಿಂದ ಪೂಜೆಮಾಡಿದವರು ಪುತ್ರಪೌತ್ರ, ಧನಧಾನ್ಯ, ಮುಂತಾದವುಗಳನ್ನು ಇಹಲೋಕದಲ್ಲಿ ಪಡೆದು ಸದ್ಗತಿಯನ್ನು ಹೊಂದುತ್ತಾರೆ.

ಇದೇ ಸಾಭ್ರಮತಿ ನದಿಯ ತೀರದಲ್ಲಿ ಗಯಾ ತೀರ್ಥಕ್ಕಿಂತ ಶ್ರೇಷ್ಠವಾದ ಚಿತ್ರಾಂಗವದನ ಎಂಬ ಮಾಲಾರ್ಕಾಧಿಷ್ಠಿತವಾದ ತೀರ್ಥವು ಇರುತ್ತದೆ. ಇಲ್ಲಿ ಸುತ್ತುಮುತ್ತು ಕಲ್ಪವೃಕ್ಷ, ಪಾರಿಜಾತ, ಮಾವು, ಜಂಬು, ಜಂಬೀರ, ಕದಂಬ, ಅರಳಿ, ಆಲ, ನಿಂಬ ಮೊದಲಾದ ಹಲವಾರು ಬಗೆಯ ಹೆಮ್ಮರಗಳು ಒಂದಕ್ಕೊಂದು ಹತ್ತಿ ಹೆಣೆದುಕೊಂಡು ಒಂದಕ್ಕೊಂದು ಹೊಂದಿಕೊಂಡು ನಿಬಿಡವಾಗಿ ನಿಂತು ಕೊಂಡಿವೆ. ಈ ಚಿತ್ರಾಂಗವದನದ ತೀರ್ಥದಲ್ಲಿ ವನಮಾಲೆಯ ಮಧ್ಯದಲ್ಲಿ ಪ್ರತಿಷ್ಠಿತನಾಗಿದ್ದಾನೆ ಸೂರ್ಯ. ಆದುದರಿಂದ ಅವನಿಗೆ ಮಾಲಾರ್ಕ ಎಂಬ ಹೆಸರು ಬಂದಿದೆ. ಇದೇ ಕಾರಣದಿಂದಾಗಿ ಈ ಚಿತ್ರಾಂಗವದನ ತೀರ್ಥವು ಮಾಲಾರ್ಕ ತೀರ್ಥವೆಂದೇ ಲೋಕದಲ್ಲಿ ಖ್ಯಾತಿಯನ್ನು ಹೊಂದಿದೆ. ಇಲ್ಲಿ ಬಂದು ಇಲ್ಲಿಯ ತೀರ್ಥದಲ್ಲಿ ಮಿಂದು ಈ ಅರ್ಕದೇವನನ್ನು ಸೇವೆಮಾಡಿದವರ ಕುಷ್ಠವೇ ಮೊದಲಾದ ಚರ್ಮರೋಗಗಳು ತರ್ತಕ್ಷಣದಲ್ಲಿ ನಷ್ಟವಾಗುತ್ತವೆ. ವೇದೋಕ್ತ ವಿಧಿಯಿಂದ ಯಾವ ನಾರಿಯು ಈ ಮಾಲಾರ್ಕನನ್ನು ಸೇವಿಸುವಳೋ ಅವಳು ಬಂಜೆಯಾಗಿದ್ದರೆ ಮುತ್ತಿನಂಥ ಪುತ್ರರತ್ನವನ್ನು ಹೆತ್ತು ಮಾತೃಗೌರವವನ್ನು ಹೊಂದುತ್ತಾಳೆ. ಸೂರ್ಯ ಭಕ್ತರಾದವರು ಇಲ್ಲಿಗೆ ಬಂದು ಸ್ನಾನ, ಪೂಜೆ, ಜಪ, ಸ್ವಾಧ್ಯಾಯ, ದೇವತಾರ್ಚನ ಹಾಗೂ ಸೂರ್ಯವ್ರತ ಮುಂತಾದವುಗಳನ್ನು ಮಾಡಿದವರು ಭವಬಂಧನದಿಂದ ಬಿಡುಗಡೆ ಹೊಂದಿ ಸೂರ್ಯಲೋಕಕ್ಕೆ ಪ್ರಯಾಣಿಸುವರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಖಡ್ಗ ತೀರ್ಥದ ಮತ್ತು ಮಾಲಾರ್ಕ ತೀರ್ಥಗಳ ಮಹಿಮೆ ಎಂಬ ನೂರ ನಲವತ್ತೈದನೇಯ ಅಧ್ಯಾಯ ಮುಗಿದುದು*

—o—

## ಚಂದನೇಶ್ವರ ಮಾಹಾತ್ಮ್ಯ

ಅಧ್ಯಾಯ - ೧೪೬

**ಮಹಾದೇವ:-** ಅನಂತರ ಯಾತ್ರಿಕರು ಚಂದನೇಶ್ವರ ತೀರ್ಥಕ್ಕೆ ಪಯಣಿಸಬೇಕು. ಕುರುಪಾಂಡವರ ಯುದ್ಧದಲ್ಲಿ ಭೀಮ ತನ್ನ ಪ್ರತಿಜ್ಞಾಪಾಲನೆಗಾಗಿ ದುಶ್ಶಾಸನನ ಕರುಳನ್ನು ಬಗೆದ. ನೆತ್ತರವನ್ನು ತನ್ನ ಕೆಂದುಟಿಯ ತಟದವರೆಗೂ ಒಯ್ದ. ಅವನ ರಕ್ತವನ್ನು ಪಾನಮಾಡಿದಂತೆ ಮಾಡಿ ತನ್ನ ರಕ್ತಸಿಕ್ತವಾದ ಬೆರಳುಗಳಿಂದ ದ್ರೌಪದಿಯ ಕುರುಳುಗಳನ್ನು ಹೆಣೆದು ಹೆರಳುಹಾಕಿ ತನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದ. ಅನಂತರ ದುರ್ಯೋಧನನ ತೊಡೆಯನ್ನು ಒಡೆದು, ನೂರು ಜನ ಕೌರವ ಕುಮಾರರನ್ನೆಲ್ಲ ಕೊಂದುಹಾಕಿ ಬ್ರಾಹ್ಮಣನಿಗೆ ದಾನದಕ್ಷಿಣ ನೀಡಿ ತೀರ್ಥಯಾತ್ರೆಗೆ ಹೊರಟ ಸೋದರರೊಂದಿಗೆ. ಅಪರ ಗಂಗೆಯೆಂದು ಪ್ರಸಿದ್ಧಳಾದ ಸಾಭ್ರಮತಿ ತರಂಗಿಣಿಯ ತೀರಕ್ಕೆ ಬಂದ. ಹಿಂದೆ ವೃಂದಾರಕ ಲೋಕದಿಂದ ತಂದ ಚಂದನ ವೃಕ್ಷವು ಇಲ್ಲಿಯ ಪುಣ್ಯ ತೀರ್ಥದ ಪ್ರಭಾವದಿಂದ ಶಿವಲಿಂಗವಾಗಿ ಮಾರ್ಪಟ್ಟಿದೆ. ಇಲ್ಲಿಗೆ ಬಂದು ಈ ಸಾಭ್ರಮತಿಯ ಚಂದನ ತೀರ್ಥದಲ್ಲಿ ಮಿಂದು, ಚಂದನೇಶ್ವರನನ್ನು ಪೂಜೆಮಾಡಿದವರು ಶಿವಲೋಕಗಳನ್ನು ಸಾರುತ್ತಾರೆ. ಪೂರ್ವಕಾಲದಲ್ಲಿ ಕೈವರ್ತಕ ಎಂಬ ದೊರೆಯು ಈ ತೀರ್ಥದಲ್ಲಿ ಸ್ನಾನಮಾಡಿ ಶಂಕರನ ಧ್ಯಾನಗೈದು, ಶಿವಲೋಕವನ್ನು ಹೊಂದಿದ. ಇಲ್ಲಿ ಸ್ನಾನಮಾಡಿ ಅರ್ಘ್ಯ ನೀಡಿ, ದೇವರ ಪೂಜೆಗೈದು, ದಾನಧರ್ಮಾದಿ ಪುಣ್ಯಕರ್ಮಗಳನ್ನು ಆಚರಿಸಿದವರು ಸರ್ವಪಾಪಗಳಿಂದ ಮುಕ್ತರಾಗಿ ಉತ್ತಮ ಲೋಕವನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಚಂದನೇಶ್ವರ ಮಾಹಾತ್ಮ್ಯ ಎಂಬ ನೂರ ನಲವತ್ತಾರನೇಯ ಅಧ್ಯಾಯ ಮುಗಿದುದು*



## ಜಾಂಬವಂತ ತೀರ್ಥ

ಅಧ್ಯಾಯ - ೧೪೭

**ಮಹಾದೇವ:-** ಇದರ ಮುಂದೆ ಇರುವ ಜಾಂಬವಂತ ತೀರ್ಥವು ಪಾಪಗಳ ಮೊತ್ತಗಳನ್ನೆಲ್ಲ ಕತ್ತರಿಸಿ ಹಾಕಲು ಸಮರ್ಥ. ಇದೊಂದು ಕಲಿಕಾಲದಲ್ಲಿ ಸ್ವರ್ಗಕ್ಕೆ ಇಟ್ಟ ಏಣಿ, ಹಿಂದೆ ತ್ರೇತಾಯುಗದಲ್ಲಿ ಶ್ರೀರಾಮನು ಸಂಹರಿಸಿದ ರಾವಣನನ್ನು. ಆ ರಾವಣವಧ ವಾರ್ತೆ ವಿಶ್ವಕ್ಕೆಲ್ಲ ಕೇಳುವಂತೆ ಮೊಟ್ಟಮೊದಲು ನಗಾರಿ ಹೊಡೆದವ ಜಾಂಬುವಂತ. ಜಾಂಬುವಂತನು ರಾವಣ ಮರಣದ ನಿಮಿತ್ತ ಭೇರಿಯನ್ನು ಬಾರಿಸಿ ಇಲಿಗೆ ಬಂದು ಸ್ನಾನಮಾಡಿ ತನ್ನ ಹೆಸರಿನಿಂದ ಒಂದು ಲಿಂಗವನ್ನು ಪ್ರತಿಷ್ಠೆಗೈದ. ಅದಕ್ಕೆ ಜಾಂಬವಂತೇಶ್ವರ ಎಂದು ಹೆಸರು.

ಪಾರ್ವತಿ ! ನಾನು ಬೇರೆ, ರಾಮ ಬೇರೆ ಅಲ್ಲ. ಅತಿಶಯವಾದ ಭಕ್ತಿಯಿಂದ ನಾನು ಆ ಭಗವಂತನೊಂದಿಗೆ ತಾದಾತ್ಮ್ಯವನ್ನು ಹೊಂದಿದಂತೆ ಆಗಿದ್ದೇನೆ.

**ರಾಮ ರಾಮೇತಿ ರಾಮೇತಿ ಮನಸಾಯೇ ಜಪಂತಿ ಚ ।**
**ತೇಷಾಂ ಸರ್ವಾರ್ಥ ಸಿದ್ಧಿಶ್ಚ ಭವಿಷ್ಯತಿ ಯುಗೇ ಯುಗೇ ॥**

ರಾಮ ರಾಮ ಎಂದು ಯಾರು ಮನಸ್ಸಿನಿಂದ ನೆನೆಯುತ್ತಾರೋ ಅವರು ಯುಗ ಯುಗಾಂತರಗಳ ವರೆಗೂ ತಮ್ಮ ಮನಃಕಾಮನೆಗಳನ್ನೆಲ್ಲ ಪೂರ್ಣಮಾಡಿಕೊಂಡು ಸಂತಸದಿಂದ ನಲಿಯುತ್ತಾರೆ.

**ಕಾಶ್ಯಾಂ ಹಿ ನಿವಸನ್ನಿತ್ಯಂ ಶ್ರೀರಾಮಂ ಕಮಲೇಕ್ಷಣಂ ।**
**ಸ್ಮರಾಮಿ ಸತತಂ ದೇವಿ ಭಕ್ತ್ಯಾ ಚ ವಿಧಿಪೂರ್ವಕಂ ॥**

ನಾನು ಕಾಶಿಯಲ್ಲಿ ನಿರತರವೂ ನೆಲೆಸಿ ತಾವರೆಗಣ್ಣಿನ ಶ್ರೀರಾಮನನ್ನು ನಿತ್ಯವೂ ವಿಧಿಪೂರ್ವಕವಾಗಿ ಭಕ್ತಿಯಿಂದ ಸ್ಮರಣೆ ಮಾಡುತ್ತೇನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಜಾಂಬವಂತ ತೀರ್ಥ ಎಂಬ ನೂರ ನಲವತ್ತೇಳನೇಯ ಅಧ್ಯಾಯ ಮುಗಿದುದು*

—o—

## ನಂದಿ ಹಾಗೂ ಬೇಡರಿಗೆ ಶಿವಗಣದಲ್ಲಿ ಸೇರ್ಪಡೆ | ಅಧ್ಯಾಯ - ೧೪೮

**ಮಹಾದೇವ:-** ಇದರ ಮುಂದೆ ಇರುವ ಇಂದ್ರಗ್ರಾಮ ಎಂಬ ತೀರ್ಥದಲ್ಲಿ ಸ್ನಾನಮಾಡಿ ಹಿಂದೆ ಘೋರ ಪಾಪಗಳಿಂದ ಮುಕ್ತನಾದ ದೇವೇಂದ್ರ.

**ಪಾರ್ವತಿ:-** ಇಂದ್ರನಿಗೆ ಏಕೆ ಬಂದಿತು ಅಂಥ ದಾರುಣ ಪಾಪ? ಆ ಪಾಪದಿಂದ ಸುರನಾಥನಿಗೆ ಬಿಡುಗಡೆಯಾದ ಬಗೆ ಎಂತು?

**ಮಹಾದೇವ:-** ಪೂರ್ವಕಾಲದಲ್ಲಿ ದೈತ್ಯೇಂದ್ರನಾದ ನಮುಚಿ ಹಾಗೂ ದೇವೇಂದ್ರನಾದ ಇಂದ್ರರಲ್ಲಿ ಸಂಗ್ರಾಮ. ಅದರ ಮೊದಲು ಒಂದು ಒಪ್ಪಂದ. 'ತಾವು ಒಬ್ಬರನ್ನೊಬ್ಬರು ಶಸ್ತ್ರಾಸ್ತ್ರದಿಂದ ಹೊಡೆಯಬಾರದು' ಎಂದು 'ಶಸ್ತ್ರದಿಂದ ವಧಿಸಬಾರದು' ಎಂಬ ಕರಾರಿಗೆ ಒಳಪಟ್ಟು ಪ್ರಾರಂಭವಾಯಿತು ಆ ದೇವೇಂದ್ರ ದೈತ್ಯೇಂದ್ರರಲ್ಲಿ ಹಣಾಹಣಿ ಹೋರಾಟ. ವೀರಾಗ್ರಣಿಯಾದ ನಮುಚಿಯನ್ನು ಶಸ್ತ್ರ ಹಿಡಿಯದೇ ಅಸ್ತ್ರ ಹಿರಿಯದೆ ಕೊಲ್ಲುವದೆಂತು? ದೊಡ್ಡ ಚಿಂತೆ ಹತ್ತಿತು ಶಚೀಪತಿಗೆ. ಆಗ ಆಕಾಶವಾಣಿಯ ಮುಖಾಂತರ ಆ ಅಮರೇಂದ್ರನಿಗೆ ಆದೇಶ. ''ನೀರಿನ ಮೇಲಿನ ಬುರುಗಿನಿಂದ ಹೊಡೆದು ಹಾಕು ಈ ನಮುಚಿಯನ್ನು'' ಎಂದು.

ಆಕಾಶವಾಣಿಯ ಈ ಅಣತಿಯನ್ನು ತಲೆಯ ಮೇಲೆ ಹೊತ್ತ ಇಂದ್ರ. ಕೇವಲ ನೀರಿನ ಮೇಲಿನ ಫೇನರಾಶಿ (ಬುರುಗು)ಯಿಂದಲೇ ಹೊಡೆದು ಕೊಂದುಹಾಕಿದ ಅಮರಾವತಿಯ ಅರಸ ಆ ಅಸುರ ರಾಜನನ್ನು. ಅನಂತರ ಆ ಸುರನಾಥ ನಮುಚಿಯನ್ನು ಕೊಂದದ್ದರಿಂದ ತನಗೆ ಬಂದ ಪಾಪವನ್ನು ತೊಳೆದುಕೊಳ್ಳಲಿಕ್ಕಾಗಿ ನೇರವಾಗಿ ಸಾಭ್ರಮತಿ ತೊರೆಯ ಉತ್ತರ ತಟಾಕಕ್ಕೆ ಆಗಮಿಸಿದ. ಈ ದೇವನದಿಯ ನಿರ್ಮಲವಾದ ನೀರಿನಲ್ಲಿ ಸ್ನಾನಮಾಡಿದ ಮಾತ್ರದಿಂದ ಆ ಸುರರಾಜನ ಶರೀರವು ಸ್ವಚ್ಛಾಚ್ಛವಾಗಿ ಶುಭ್ರಕಾಂತಿಯಿಂದ ಪೂರ್ಣಚಂದ್ರನಂತೆ ಧವಲ ದೀಪ್ತಿಯಿಂದ ಕಂಗೊಳಿಸತೊಡಗಿತು. ಆಗ ದೇವೇಂದ್ರನು ಧವಲೇಶ್ವರ ಎಂಬ ಲಿಂಗವನ್ನು ಅಲ್ಲಿ ತನ್ನ ಕೈಯಿಂದಲೇ ಪ್ರತಿಷ್ಠಾಪಿಸಿದ. ಇಂದ್ರ ತೀರ್ಥ ಎಂದೂ ಕರೆಯುತ್ತಾರೆ ಆ ಪುಣ್ಯ ತೀರ್ಥವನ್ನು. ಹುಣ್ಣಿಮೆ ಅಮಾವಾಸ್ಯೆ, ಸ್ಪರ್ಶ, ಗ್ರಹಣ, ಸಂಕ್ರಮಣ ಮುಂತಾದ ಪುಣ್ಯಕಾಲಗಳಲ್ಲಿ ಈ ಇಂದ್ರ ತೀರ್ಥದಲ್ಲಿ ಸ್ನಾನಮಾಡಿ

ಶ್ರಾದ್ಧಮಾಡಿದರೆ ಪಿತೃಗಳಿಗೆ ಹನ್ನೆರಡು ವರ್ಷ ಪರಿತೃಪ್ತಿ ಉಂಟಾಗುವದು. ಇಲ್ಲಿ ಒಬ್ಬ ಬ್ರಾಹ್ಮಣನ ಭೋಜನ ಮಾಡಿಸುವದರಿಂದ ಸಾವಿರ ಬ್ರಾಹ್ಮಣರ ಭೋಜನ ಮಾಡಿಸಿದ ಪುಣ್ಯ ಬರುವದು. ಇಲ್ಲಿಯ ಇಂದ್ರ ತೀರ್ಥದಲ್ಲಿ ಸ್ನಾನಮಾಡಿ ದೂರ್ವಾ, ಬಿಲ್ವ, ಎಕ್ಕೆಯ ಹೂ, ಕಮಲ, ಶ್ವೇತಾರ್ಕ ಮೊದಲಾದವುಗಳಿಂದ ಇಲ್ಲಿಯ ಧವಲೇಶ್ವರನನ್ನು ಪೂಜೆಮಾಡಿದವರು ಇಷ್ಟಾರ್ಥಗಳನ್ನೆಲ್ಲ ಪಡೆಯುತ್ತಾರೆ. ಈ ಶಿವಲಿಂಗಕ್ಕೆ ಕೃತಯುಗದಲ್ಲಿ ನೀಲಕಂಠ, ತ್ರೇತಾಯುಗದಲ್ಲಿ ಹರ ಅಥವಾ ಪ್ರಭು, ದ್ವಾಪರದಲ್ಲಿ ಶರ್ವ ಮತ್ತು ಕಲಿಯುಗದಲ್ಲಿ ಧವಲೇಶ್ವರ ಎಂದೂ ಯುಗಾನುಗುಣವಾದ ಹೆಸರುಗಳು ಬರುತ್ತವೆ.

ಸುರೇಶ್ವರಿ! ಪೂರ್ವಕಾಲದಲ್ಲಿ ಈ ಇಂದ್ರಗ್ರಾಮದಲ್ಲಿ ನಂದಿ, ಎಂಬ ಹೆಸರಿನ ಒಬ್ಬ ವೈಶ್ಯನಿದ್ದ. ಪರಮ ಶಿವಭಕ್ತ ಆ ನಂದಿ. ಪ್ರತಿದಿನವೂ ಪಂಚ-ಪಂಚ ಉಷಃಕಾಲದಲ್ಲಿ ಎದ್ದು ಶಿವೈಕನಿಷ್ಠವಾದ ಆ ನಂದಿಯು ವಿಧಿಪೂರ್ವಕವಾಗಿ ನನ್ನನ್ನು ಪೂಜಿಸುತ್ತಿದ್ದ. ಶಾಸ್ತ್ರೋಕ್ತ ರೀತಿಯಿಂದ ಶಿವಪೂಜೆ ಗೈದು ತಪ್ಪದೇ ಶಿವಸಹಸ್ರನಾಮ ಪಠಿಸಿ ಪುಷ್ಪಾರ್ಚನೆ ಮಾಡುತ್ತಿದ್ದ.

ಒಂದು ದಿನ ಬೇಟೆಯ ನಾದವುಳ್ಳ ಓರ್ವ ಕ್ರೂರ ಬೇಡ ಸಾಭ್ರಮತಿ ತೊರೆಯ ತೀರಕ್ಕೆ ಬಂದ. ಆ ತರಂಗಿಣಿಯ ತೀರಗುಂಟ ಬಾನುದ್ದ ಬೆಳೆದುನಿಂತ ಆ ಬೆಂಗಾಡಿನಲ್ಲಿ ಅನೇಕ ಹಿಂಸ್ರಮೃಗಗಳನ್ನು ಕೊಚ್ಚಿ ಕಡಿದು ಹಾಕಿದ ಆ ಬೇಡ. ಬೇಟೆಯ ನಿಮಿತ್ತದಿಂದ ಹಿಂಸ್ರಪಶುಗಳನ್ನೆಲ್ಲ ಸವರಿ ಹಾಕಿದ. ಬೇಟೆಯ ಹೂಟದಿಂದ ಆ ಅಡವಿಯ ತುಂಬಾ ಓಡಾಡಿ, ಶಸ್ತ್ರಾಸ್ತ್ರಗಳನ್ನು ತೂರಾಡಿ, ಪ್ರಾಣಿಗಳನ್ನೆಲ್ಲ ಈಡಾಡಿ ಧವಲೇಶ್ವರ ಲಿಂಗವಿದ್ದಲ್ಲಿಗೆ ಬಂದ. ಬಗೆಬಗೆಯ ಹೂಗಳಿಂದ ಪುಷ್ಪಾರ್ಚನೆ ಮಾಡಿದ್ದರಿಂದ ಆ ಧವಲೇಶ್ವರ ಲಿಂಗವು ಕುಸುಮಾಲಂಕೃತವಾಗಿ ಕಂಗೊಳಿಸಿತು.

ಅದನ್ನು ನೋಡಿದ ಕೂಡಲೇ ಆ ಬೇಡನು ಅಲ್ಲಿಯೇ ಇರುವ ಇಂದ್ರತೀರ್ಥದಲ್ಲಿ ಸ್ನಾನಮಾಡಿದ. ಬಾಯ್ತುಂಬ ನೀರನ್ನು ತುಂಬಿಕೊಂಡ. ಒಂದು ಕೈಯಿಂದ ಬಿಲ್ವಪತ್ರೆಯನ್ನೂ ಇನ್ನೊಂದು ಕೈಯಿಂದ ಚಿಗರೆಯ ಮಾಂಸವನ್ನೂ ಹಿಡಿದುಕೊಂಡು ಲಿಂಗವಿರುವಲ್ಲಿಗೆ ಬಂದ. ನಂದಿವೈಶ್ಯನು ಏರಿಸಿದ ಬಗೆಬಗೆಯ ಹೂಗಳೆಲ್ಲವೂ ಆ ಧವಲೇಶ್ವರಲಿಂಗದ ಮೇಲೆ ಅಂದವಾಗಿ ಒಪ್ಪುತ್ತಿದ್ದವು.

ಆ ಕ್ರೂರ ಕಿರಾತನು ಅಲ್ಲಿಗೆ ಬಂದು ನಂದಿ ವೈಶ್ಯನು ಏರಿಸಿದ ಹೂಗಳನ್ನೆಲ್ಲತೆಗೆದು ದೂರ ಚೆಲ್ಲಿದ. ತಾನು ಬಾಯಲ್ಲಿ ತುಂಬಿಕೊಂಡು ಬಂದ ನೀರನ್ನು ಲಿಂಗದ ಮೇಲೆ ಉಗುಳಿ ಅಭಿಷೇಕ ಮಾಡಿದ ಬಿಲ್ವಪತ್ರಿಯನ್ನು ಆ ಧವಲೇಶ್ವರನಿಗೆ ಅರ್ಪಿಸಿದ. ಇನ್ನೊಂದು ಕೈಯಲ್ಲಿ ತಂದ ಚಿಗರೆಯ ಮಾಂಸವನ್ನು ನೈವೇದ್ಯ ತೋರಿಸಿದ. ಅನಂತರ ಆ ಧವಲೇಶ್ವರನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕೈ ಮುಗಿದು ಹೇಳಿದ.

**ಕಿರಾತ:-** ಪ್ರಭು, ಇಂದಿನಿಂದ ನೀನು ಒಡೆಯ. ನಾನು ನಿನ್ನ ಕಿಂಕರ. ಇಂದಿನಿಂದ ನಾನು ಪ್ರತಿದಿನವೂ ನಿನ್ನ ಪೂಜೆಯನ್ನು ತಪ್ಪದೇ ಮಾಡುತ್ತೇನೆ. ನೀನು ದಯವಿಟ್ಟು ಈ ಭಕ್ತನ ಸೇವೆಯನ್ನು ಪರಿಗ್ರಹಿಸು.

ಹೀಗೆ ಹೇಳಿ ಆ ಕಿರಾತ ಅಲ್ಲಿಂದ ಹೊರಟು ಹೋದ. ಮರುದಿನ ಬೆಳಗ್ಗೆ ನಂದಿಯು ಪುಷ್ಪಾರ್ಚನೆಗೆ ಎಂದು ಧವಲೇಶ್ವರ ದೇವಸ್ಥಾನಕ್ಕೆ ಆಗಮಿಸಿದ. ಹಿಂದಿನ ದಿನ ಅವನು

ಪುಷ್ಪಾರ್ಚನೆಮಾಡಿ ಏರಿಸಿದ ಒಂದು ಹೂವೂ ಶಿವಲಿಂಗದ ಮೇಲೆ ಇರಲಿಲ್ಲ. ಇದಲ್ಲದೇ ಶಿವನ ಪಕ್ಕದಲ್ಲಿಯೇ ಮಾಂಸದ ತುಂಡು, ಎಂಜಲನೀರು ಉಗುಳಿದ ನೀರನ ನಡುನಡುವೆ ಅಗಳು. ಶುಭ್ರವಾದ ಶಿವಲಿಂಗದ ಸಮೀಪದಲ್ಲಿ ಈ ಎಲ್ಲ ಹೊಲಸು ಮಾಸಖಂಡಗಳನ್ನು ನೋಡಿ ನಂದಿಗೆ ಬಹಳ ಚಿಂತೆಯಾಯಿತು. ಪವಿತ್ರವಾದ ಲಿಂಗದ ಸನ್ನಿಧಾನದಲ್ಲಿ ಇಂಥ ಅಪವಿತ್ರವಾದ ವಸ್ತುಗಳನ್ನು ತಂದು ಒಟ್ಟಿದವನು ಯಾರು? ಎಂದು ಸಿಟ್ಟೂ ಬಂದಿತು. ಕೊನೆಗೆ ಯಾರು ಎಂಬುದು ಗೊತ್ತಾಗದೇ ಅವನು ತಾನೇ ನೀರು ತಂದು ಅದನ್ನೆಲ್ಲ ಸ್ವಚ್ಛವಾಗಿ ತೊಳೆದ. ಹೊಲಸನ್ನೆಲ್ಲ ಬಳೆದ. ಅನಂತರ ಮನೆಗೆ ಬಂದು ತನ್ನ ಪುರೋಹಿತನಿಗೆ ಹೇಳಿದ. ಆ ಪುರೋಹಿತನಿಗೂ ಅತ್ಯಾಶ್ಚರ್ಯ. ಮರುದಿನ ನಂದಿ ಆ ಪುರೋಹಿತ ಇಬ್ಬರೂ ಕೂಡಿಯೇ ಬಂದರು ಆ ಧವಲೇಶ್ವರ ದೇವಸ್ಥಾನಕ್ಕೆ. ಆಗ ಪುರೋಹಿತನು ವೇದೋಕ್ತ ವಿಧಿಯಿಂದ ಆ ಧವಲೇಶ್ವರನಿಗೆ ಅಭಿಷೇಕಮಾಡಿ, ಪಂಚಾಮೃತ ದಿಂದ ವಿಧಿಪೂರ್ವಕವಾಗಿ ಪೂಜೆಮಾಡಿದರು ನಂದಿಯೊಡನೆ ಕೂಡಿ, ಅನೇಕ ಪುಷ್ಪಗಳನ್ನೂ ಬಗೆಬಗೆಯ ರತ್ನಗಳನ್ನೂ ಆ ಶಿವಲಿಂಗಕ್ಕೆ ಏರಿಸಿದರು. ಆರು ಘಂಟೆಗಳ ಕಾಲ ಆ ನಂದಿ ವೈಶ್ಯನು ಆ ಮುಕ್ಕಣ್ಣನನ್ನು ಬಗೆಬಗೆಯ ಮಂತ್ರಗಳಿಂದ ಸ್ತೋತ್ರಮಾಡುತ್ತ ನಿಂತುಕೊಂಡ.

ಅಷ್ಟರಲ್ಲಿ ಅಲ್ಲಿಗೆ ಆಗಮಿಸಿದ ಮುನ್ನಾದಿನ ಮಹಾದೇವನಿಗೆ ಮಾಂಸವನ್ನರ್ಪಿಸಿದ ಕಿರಾತ. ಅವನನ್ನು ಕಂಡಕೂಡಲೇ ನಂದಿಯು ಹೆದರಿ ಅಲ್ಲಿಯೇ ಮರೆಯಲ್ಲಿ ಅವಿತುಕೊಂಡ. ಪುರೋಹಿತನೂ ದೇವಾಲಯದ ಹಿಂಬದಿಯಲ್ಲಿ ಅಡಗಿದ. ಆ ಹುಂಬ ಕಿರಾತನು ಆ ವೈಶ್ಯ ಪುರೋಹಿತರು ಕೂಡಿ ಮಾಡಿದ ಧವಲೇಶ್ವರನ ಪೂಜೆಯ ಅಲಂಕಾರವನ್ನೆಲ್ಲ ಕಾಲಿನಿಂದ ಒದ್ದು ತುಳಿದುಹಾಕಿದ. ಅನಂತರ ತಾನು ಸ್ನಾನಮಾಡಿ, ಬಾಯಲ್ಲಿ ತುಂಬಿಕೊಂಡು ಬಂದ ಗಂಡೂಷ ಜಲವನ್ನು ಉಗುಳಿ ಅಭಿಷೇಕ ವಿಧಿಯನ್ನು ಪೂರೈಸಿದ. ಒಂದು ಕೈಯಲ್ಲಿ ತಾನು ತಂದ ಹೂವನ್ನು ಅರ್ಪಿಸಿದ. ಮತ್ತೊಂದು ಕೈಯಲ್ಲಿ ತಂದ ಮಾಂಸವನ್ನು ನೈವೇದ್ಯ ಮಾಡಿ ದಂಡಪ್ರಣಾಮ ಮಾಡಿ ಮನೆಗೆ ಹೋದ.

ಆ ಬೇಡನು ಅಲ್ಲಿಂದ ಹೋದಬಳಿಕ ನಂದಿ ಹಾಗೂ ಪುರೋಹಿತರಿಬ್ಬರೂ ತಾವು ಅವಿತುಕೊಂಡ ಸ್ಥಳದಿಂದ ಹೊರಬಿದ್ದು ಧವಲೇಶ್ವರ ಲಿಂಗದ ಎದುರು ಬಂದರು. ಬೇಡನು ಮಾಡಿದ ಪೂಜೆಯ ಅನಾಹುತ ಕಂಡರು. ದಿಙ್ಮೂಢರಾಗಿ ನಿಂತರು. ಅಂತಪಾರವಿಲ್ಲದಾಯಿತು ಅವರ ಚಿಂತೆಗೆ, ತಲೆತಲೆ ಚಚ್ಚಿಕೊಂಡರೂ ಇವರಿಬ್ಬರಿಗೂ ಏನೂ ತಿಳಿಯಲಿಲ್ಲ. ಮುಂದೆ ಏನು ಮಾಡಬೇಕು ಎಂಬುದು ಹೊಳೆಯಲಿಲ್ಲ. ಆಗ ಅವರಿಬ್ಬರೂ ಆ ದೇಶದಲ್ಲಿ ಇದ್ದ ವೇದ ವಿದ್ವಾಂಸರನ್ನೂ ಶಾಸ್ತ್ರ ಪಾರಂಗತರನ್ನೂ ಆಹ್ವಾನಿಸಿದರು. ಧವಲೇಶ್ವರ ದೇವಸ್ಥಾನದ ದುರವಸ್ಥೆಯನ್ನು ಬಣ್ಣಿಸಿದರು. ಆಗ ಅವರೆಲ್ಲರೂ ಕೂಡಿ ಯೋಚಿಸಿದರು. "ಈ ದುಷ್ಕೃತ್ಯವನ್ನು ನಿಲ್ಲಿಸುವ ಧೈರ್ಯ ಯಾರಿಗೂ ಇಲ್ಲ. ಆ ಬೇಡನಂತೂ ಕ್ರೂರ ರಕ್ಕಸನಂತಿದ್ದಾನೆ. ಮಹಾ ಪರಾಕ್ರಮಿ, ಶಿವಲಿಂಗದ ಸನ್ನಿಧಿಯಲ್ಲಿ ಇಂಥ ಘೋರ ದಾರುಣವಾದ ಅಪವಿತ್ರ ದುಷ್ಕೃತ್ಯಗಳನ್ನು ಮಾಡುವ ಆ ದೈತ್ಯ ಕಿರಾತನನ್ನು ಹೊಡೆಯುವದಾಗಲಿ ತಡೆಯುವದಾಗಲಿ ಯಾರಿಗೂ ಶಕ್ಯವಿಲ್ಲ. ಹಾಗೆಯೇ ಸುಮ್ಮನಿದ್ದರೆ ಅನುದಿನವೂ ಆ ಪಾಪಿಯು ತನ್ನ ಎಂಜಲ ಬಾಯೊಳಗಿನ ಗಂಜಲ ನೀರಿನಿಂದ ರುದ್ರಾಭಿಷೇಕ ಮಾಡಿ, ಮಾಂಸೋಪಹಾರ ನೀಡಿ ರಾಕ್ಷಸ ಪೂಜೆಗೈದು ಈ ಲಿಂಗದಲ್ಲಿ ಶಿವನ ಸನ್ನಿಧಾನವೇ

ಇಲ್ಲದಂತೆ ಮಾಡಿಬಿಡುತ್ತಾನೆ. ಆ ಪಾಪಿಯ ಈ ಘೋರ ಪೂಜೆ ಹೀಗೇ ಮುಂದುವರೆದರೆ ಆ ಲಿಂಗದಲ್ಲಿ ಕ್ಷಣ ಕೂಡ ನಿಲ್ಲಲಾರ ಚಂದ್ರಚೂಡ. ಉಗುಳಿ ಅಭಿಷೇಕ ಮಾಡಿದರೆ ಎಂಥ ದೇವತೆಯಾದರೂ ಆ ಸ್ಥಾನ ಬಿಟ್ಟು ಹೋಗುವದರಲ್ಲಿ ಸಂದೇಹವಿಲ್ಲ'' ಹೀಗೆಲ್ಲ ಆಲೋಚನೆಗೈದು ಆ ವೇದಶಾಸ್ತ್ರ ವಿದ್ವಾಂಸರೂ ಪುರೋಹಿತರೂ ನಂದಿಗೆ ''ಆ ಶಿವಲಿಂಗವನ್ನು ಕಿತ್ತಿ ತಂದು ನಿನ್ನ ಮನೆಯಲ್ಲಿ ಇಟ್ಟು ಪೂಜಿಸು'' ಎಂದು ಹೇಳಿದರು. ಅವರ ಆದೇಶದಂತೆ ನಂದಿಯು ಧವಲೇಶ್ವರನನ್ನು ಎತ್ತಿ ತನ್ನ ಮನೆಗೆ ತಂದ. ಪುರೋಹಿತರ ಸಹಾಯದಿಂದ ತನ್ನ ದೇವರ ಮನೆಯಲ್ಲಿಯೇ ಆ ಲಿಂಗದ ಪ್ರತಿಷ್ಠೆಗೈದ. ಬಂಗಾರದ ಸೋಮಸೂತ್ರವನ್ನು ಮಾಡಿಸಿ ಬಗೆಬಗೆಯ ಉಪಹಾರ, ಉಪಚಾರಗಳಿಂದ ಪೂಜಿಸಿ, ಭೂರಿಭೋಜನ ಮಾಡಿಸಿ ತೃಪ್ತಿಪಟ್ಟ.

ಮರುದಿನ ಯಥಾಪ್ರಕಾರ ಶಿವಮಂದಿರಕ್ಕೆ ಕಿರಾತನ ಆಗಮನ. ಧವಲೇಶ್ವರಲಿಂಗವು ಮಟಮಾಯ. ಆಶ್ಚರ್ಯದ ಆಘಾತ ಆ ಭವಭಕ್ತನಾದ ಬೇಡನಿಗೆ. ಅವನ ಶಿವಭಕ್ತಿಗೆ ಮಹಾಪೂರ. ಶಿವಲಿಂಗದ ಆಕಸ್ಮಿಕ ಮರೆಯಿಂದ ಅಂತರಂಗದ ದುಃಖ ಉಕ್ಕಿ.

''ಶಂಭೋ ! ನೀನು ನನ್ನನ್ನು ತೊರೆದು ಹೋದದ್ದಾದರೂ ಎಲ್ಲಿ? ನನಗೇಕೆ ದರ್ಶನವನ್ನು ನೀನು ಕರುಣಿಸುತ್ತಿಲ್ಲ? ಕೈಲಾಸಪತಿಯೇ, ಕೂಡಲೇ ನನ್ನ ಕಣ್ಣೆದುರು ದಯವಿಟ್ಟು ಕಾಣಿಸಿಕೊಳ್ಳು.ಈಗಲೇ ನೀನು ನನಗೆ ನಿನ್ನ ದರ್ಶನ ಕೊಡದಿದ್ದರೆ ಇಲ್ಲಿಯೇ ಈ ದೇಹವನ್ನು ಬಿಟ್ಟುಬಿಡುತ್ತೇನೆ. ಮಹಾದೇವ ! ಬೇಗ ಬಾ. ಶಂಕರ ! ನನ್ನ ದೃಷ್ಟಿಗೆ ಗೋಚರನಾಗು ಜಗನ್ನಾಥ ! ಅನಾಥನನ್ನಾಗಿ ಮಾಡಬೇಡ ನಿನ್ನ ಈ ಭಕ್ತನನ್ನು. ತ್ರಿಪುರಾಂತಕ ! ಬೇಗ ನಿನ್ನ ದರ್ಶನವನ್ನು ನನಗೆ ನೀಡು. ಇಲ್ಲದ್ದಿದರೆ ನಾನು ಈಗಲೇ ದೇಹಪರಿತ್ಯಾಗ ಮಾಡುತ್ತೇನೆ ನೋಡು.''

ಹೀಗೆ ಭಕ್ತಿಯುಕ್ತವಾದ ಬಿರುನುಡಿಗಳನ್ನಾಡಿ ಭಗವಂತನನ್ನು ಭಕ್ತಿಯಿಂದಲೇ ಆಕ್ಷೇಪಿಸಿ ಆ ಬೇಡ ಒಂದು ಕ್ಷಣ ಕಣ್ಣುಮುಚ್ಚಿ ನಿಂತುಕೊಂಡ. ದರ್ಶನ ಕೊಡು ಎಂದು ಬಗೆಬಗೆಯಾಗಿ ಬೇಡಿಕೊಂಡ. ಶಿವ ಬರಲಿಲ್ಲ. ತನ್ನ ಸಾಕ್ಷಾತ್ ದರ್ಶನವನ್ನು ಕರುಣಿಸಲಿಲ್ಲ. ಕೂಡಲೇ ಕೆರಳಿ ಹೋದ ಕಿರಾತ. ಖಡ್ಗವನ್ನು ಹಿರಿದ ಒರೆಯಿದ. ಇರಿದ ತನ್ನದೇ ಆದ ಹೊಟ್ಟೆಯನ್ನು, ಕಡಿದ ತೋಲಳನ್ನು ಕತ್ತರಿಸಿದ ಹೆಗಲನ್ನು. ತನ್ನ ಹೊಟ್ಟೆಯಲ್ಲಿ ತಾನೇ ಕೈ ಹಾಕಿ ಕರುಳು ಮಾಂಸಗಳನ್ನು ಹೊರತೆಗೆದು ಆ ಧವಲೇಶ್ವರ ಲಿಂಗವನ್ನು ಕಿತ್ತಿದ್ದರಿಂದ ಉಂಟಾದ ತೆಗ್ಗಿನಲ್ಲಿ ಇರಿಸಿದ. ಹಾಗೇ ತೆವಳುತ್ತ ನದಿಯ ವರೆಗೆ ಹೋಗಿ ಬಾಯಲ್ಲಿ ನೀರನ್ನುತುಂಬಿಕೊಂಡು ಬಂದು ಮೊದಲು ಶಿವಲಿಂಗವಿದ್ದ ಆ ಸ್ಥಾನದಲ್ಲಿ ಶಿವಲಿಂಗವನ್ನು ಭಾವಿಸಿ ಆ ಕಲ್ಪಿತ ಶಿವಲಿಂಗದ ಮೇಲೆ (ಆ ತಗ್ಗಿನಲ್ಲಿ) ತನ್ನ ಗಂಡೂಷ ಜಲದಿಂದ ಅಭಿಷೇಕ ಮಾಡಿದ. ಬಿಲ್ವಪತ್ರೆ ಏರಿಸಿ ಸಾಷ್ಟಾಂಗ ನಮಸ್ಕಾರ ಮಾಡಿದ. ಧವಲೇಶ್ವರ ಲಿಂಗವನ್ನು ಕಿತ್ತಿದ್ದರಿಂದ ಉಂಟಾದ ತಗ್ಗಿನಲ್ಲಿ ಕೈಯಾಡಿಸಿ ಆ ಮಣ್ಣನ್ನು ಎತ್ತಿ ತನ್ನ ನೆತ್ತಿಗೆ ಒತ್ತಿಕೊಂಡ ಒಂದು ಕ್ಷಣ ಕಣ್ಣುಮುಚ್ಚಿ ಅನನ್ಯ ಭಕ್ತಿಯಿಂದ ಧ್ಯಾನ ಮಾಡಿದ.

ಅವನ ಅನನ್ಯ ಭಕ್ತಿಯನ್ನು ಕಂಡು ಶಿವ ಅಲ್ಲಿಯೇ ಪ್ರಾದುರ್ಭೂತನಾದ. ಧವಲೇಶ್ವರ ಲಿಂಗ ಇದ್ದ ಆ ತಗ್ಗಿನಲ್ಲಿ ಲಿಂಗದ ಬದಲು ಗಂಗಾಧರ. ಕರ್ಪುರದಂತೆ ಅಚ್ಚ ಬಿಳಿಬಣ್ಣ, ಸುತ್ತಲೂ ಪ್ರಮಥ ಗಣ ತಲೆಯ ಮೇಲೆ ಜಟಾಜೂಟ, ಮುಡಿಯಲ್ಲಿ

ಚಾರುಚಂದ್ರ. ಸುತ್ತಲೂ ಚಲ್ಲುವರಿದ ಚಂದ್ರಜ್ಯೋತ್ಸ್ನೆ. ಜಡೆಮುಡಿಯ ಗುಡಿಯಲ್ಲಿ ಅಡಗಿದರೂ ಗುಡುಗುವ ಗಂಗೆಯ ನಿಶ್ಶಬ್ದ ಪರಿಭ್ರಮಣ. ಆ ಸಾಕ್ಷಾತ್ ವಿರೂಪಾಕ್ಷನೇ ಪ್ರತ್ಯಕ್ಷನಾದದ್ದನ್ನು ಕಂಡು ಆ ಚಂಡ ಕಿರಾತಕ.

ಆ ಕ್ರೂರ ಕಿರಾತನ ಈ ಕ್ರೂರ ಭಕ್ತಿಗೆ ಪ್ರಸನ್ನ ಪರಮೇಶ್ವರ. ಅವನ ಭಕ್ತಿ ವೈವಶ್ಯದಿಂದ ಗದ್ಗದಿತ ಗೌರೀಪತಿ. ಮೆಚ್ಚಿ ಮೊದಲು ಮುಂದೆ ಬಂದ ಮಹಾದೇವ ಆ ಕಿರಾತನನ್ನು ಪ್ರೀತಿಯಿಂದ ಮೈದಡವಿದ. ಕೈಹಿಡಿದು ಕೇಳಿದ. ಅತಃಕರಣದಿಂದ ಹೇಳಿದ.

**ಮಹಾದೇವ:-** ವೀರ ಕಿರಾತ ! ನೀನು ನಿಜವಾದ ನನ್ನ ಭಕ್ತ. ನಿನ್ನ ಈ ಭೀಕರ ಪೂಜೆಯಿಂದ ನಾನು ಪರಿತುಷ್ಟ. ಭಕ್ತಾಗ್ರೇಸರ. ನಿನಗೆ ಬೇಕಾದ ವರ ಕೇಳು. ನೀಡುತ್ತೇನೆ.

**ಕಿರಾತ:-** ಸ್ವಾಮಿ ! ನನಗೆ ಈ ಭಾಗ್ಯವನ್ನು ಕರುಣಿಸು ನೀನು ಪ್ರಸನ್ನನಾಗಿದ್ದರೆ ನನ್ನ ಜನ್ಮ ಜನ್ಮಾಂತರದಲ್ಲಿಯೂ ನೀನೇ ನನ್ನ ಸ್ವಾಮಿಯಾಗು. ನಾನೇ ನಿನ್ನ ದಾಸ ಈ ನಮ್ಮಿಬ್ಬರ ಈಶದಾಸತ್ವವು ಅವಿಚ್ಛಿನ್ನವಾಗಿ ಕೊನೆಯವರೆಗೂ ಉಳಿಯಲಿ. ಶಂಕರನ ಕಿಂಕರತೆಯು ನನ್ನಲ್ಲಿ ಕಲ್ಪಾಂತ ಕಾಲದವರೆಗೂ ಬೆಳೆಯಲಿ.

ಆ ಕಿರಾತನ ಮಾತನ್ನು ಕೇಳಿ ಪರಮಾನಂದ ಚಂದ್ರಚೂಡನಿಗೆ. ಆನಂದದ ಉದ್ರೇಕದಿಂದ ಗೌರೀಪತಿಯು ತಾನೇ ತನ್ನ ಕೈಯಲ್ಲಿಯ ಶಂಖ ಊದಿದ. ಡಮರು ಬಾರಿಸಿದ. ಬಾರಿಸಿದ ಆ ಡಮರು ಧ್ವನಿಯಿಂದ ಹಾಗೂ ಶಂಖದ ಝುಂಕಾರನಾದದಿಂದ ಮೂರು ಲೋಕಗಳೇ ಮುಖರಿತವಾದವು. ಸಹಸ್ರಾರು ದೇವ ದುಂದುಭಿಗಳು ಮೊಳಗಿದವು.

ಆ ಸದ್ದುಗದ್ದಲವನ್ನು ಕೇಳಿ ಓಡಿಬಂದ ನಂದಿ ವೈಶ್ಯ. ಧವಲೇಶ್ವರ ಲಿಂಗವಿದ್ದ ಸ್ಥಳದಲ್ಲಿ ಸಾಕ್ಷಾತ್ ಪರಮೇಶ್ವರ. ಶಿವ ಪ್ರತ್ಯಕ್ಷವಾಗಿ ಬಂದು ನಿಂತಿದ್ದಾನೆ. ಅವನ ಎದುರು ಕೈಮುಗಿದುಕೊಂಡು ಆ ಶಿವನನ್ನು ಅಲ್ಲಿಗೆ ಬರಮಾಡಿದ ಕಿರಾತ. ಅದನ್ನು ನೋಡಿ ಬೆರಗು ಪಡೆದ ನಂದಿಯು ಕೈ ಮುಗಿದು ಕಿರಾತನಿಗೆ ಕೇಳಿಕೊಂಡ. ಬೇಡ ಬಂಧುವೆ, ನೀನು ನನ್ನ ಪರಮ ಭಕ್ತ. ನಿನ್ನ ಭಕ್ತಿಗೆ ಮೆಚ್ಚಿಯೇ ನಾನು (ಶಿವ) ಇಂದು ಇಲ್ಲಿ ಸುವ್ಯಕ್ತ, ಈಗ ನೀನು ದಯವಿಟ್ಟು ನನ್ನ ಒಂದು ಕೆಲಸವನ್ನು ಮಾಡು. ನೀನು ಹರಭಕ್ತ. ನಾನು ನಿನ್ನ ಭಕ್ತ ಭಕ್ತನಾದ ನನ್ನನ್ನು ಪರಿಗ್ರಹಿಸುವಂತೆ ಶಿವನಲ್ಲಿ ನನ್ನ ಪರವಾಗಿ ಪ್ರಾರ್ಥಿಸು.

ಅದನ್ನು ಕೇಳಿ ಆ ಕಿರಾತನು ನಂದಿಯನ್ನು ಕೈಹಿಡಿದು ಶಿವನ ಬಳಿ ಕರೆದುಕೊಂಡು ಹೋದ. ಅದನ್ನು ನೋಡಿ ಶಂಭು ನಗುತ್ತ ಇವನು ಯಾರು? ಎಂದು ಕೇಳಿದ.

**ಕಿರಾತ:-** ಸ್ವಾಮಿ ! ಇವನು ನಿನ್ನ ಅವಿಚ್ಛಿನ್ನ ಭಕ್ತ. ನನ್ನ ಅಭಿನ್ನ ಮಿತ್ರ. ಅನುದಿನವೂ ಇವನು ನಿನ್ನ ಪೂಜಾ ತತ್ಪರ. ಪ್ರತಿದಿನವೂ ಇವನಿಂದ ನಿನ್ನ ಲಿಂಗಕ್ಕೆ ಪುಷ್ಪಾರ್ಚನೆ, ಮಾಣಿಕ್ಯ ಪೂಜೆ, ರತ್ನಾರಾಧನೆಗಳು ತಪ್ಪದೇ ನಡೆಯುತ್ತಲಿದೆ. ಈ ನಂದಿಯ ಸರ್ವಸ್ವವೂ ಶಿವಾರ್ಪಿತ. ಮಹಾದೇವನಿಗೆ ಮೀಸಲಾದ ಈ ಜೀವನವನ್ನು ನಿನ್ನ ಆತ್ಮೀಯ ಎಂದು ಪರಿಗ್ರಹಿಸು.

**ಮಹಾದೇವ:-** ಕಿರಾತ, ಈ ನಂದಿ ವೈಶ್ಯ ನನ್ನ ಅವಿಚ್ಛಿನ್ನ ಭಕ್ತ ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ನೀನೂ ಅದರಂತೆ ನನ್ನ ಪರಮಭಕ್ತ. ನೀವಿಬ್ಬರೂ ಇನ್ನು ಮೇಲೆ ನನ್ನ ಪ್ರೀತಿಯ ಪಾರ್ಷದರಾಗಿ ನನ್ನ ಅಕ್ಕಪಕ್ಕದಲ್ಲಿ ನಿಂತು ಸೇವೆಗೈಯಿರಿ. ನಿಮ್ಮಿಬ್ಬರನ್ನೂ ನಾನು ನನ್ನ ಪ್ರಮಥಗಣದ ಅಧೀಶ್ವರನನ್ನಾಗಿ ನಿಯಮಿಸಿದ್ದೇನೆ.

ಪರಮೇಶ್ವರನು ಹೀಗೆ ನುಡಿಯುವದೇ ತಡ. ಅಲ್ಲಿಗೆ ಆಗಮಿಸಿದವು ಕೈಲಾಸದಿಂದ ಎರಡು ವರ ವಿಮಾನಗಳು. ಇವರಿಬ್ಬರನ್ನೂ ಹೊತ್ತುಕೊಂಡು ಕೈಲಾಸದ ಕಡೆಗೆ ಹಾರಿದವು ಅವೆರಡೂ ವಿಮಾನಗಳು. ಕೈಲಾಸಕ್ಕೆ ಹೋದ ಬಳಿಕ ಪಾರ್ವತಿಯು ಪರಮೇಶ್ವರನ ಇಂಗಿತವನ್ನು ತಿಳಿದು ನಂದಿ ಹಾಗೂ ಕಿರಾತ ಇಬ್ಬರಿಗೂ ಕದಲಾರತಿ ಎತ್ತಿ ಸ್ವಾಗತಿಸಿ ಮನೆ ಒಳಗೆ ಕರೆದುಕೊಂಡು ಹೋದಳು.

ಶಿವ ಪಾರ್ವತಿಯರು ತೋರಿದ ಪುತ್ರ ವಾತ್ಸಲ್ಯವನ್ನು ಕಂಡು ಸುಪ್ರೀತರಾದ ಅವರಿಬ್ಬರೂ ಜಗತ್ತಿಗೆ ತಾಯಿ ತಂದೆಯರಾದ ಅವರಿಬ್ಬರನ್ನೂ ಪ್ರಣಮಿಸಿ ಸ್ವಾಮಿ! ನಮಗೆ ನಿನ್ನ ಮನೆಯ ಬಾಗಿಲನ್ನು ಕಾಯುವ ಹಾಗೂ ಸದಾ ನಿನ್ನ ಸೇವೆ ಮಾಡುವ ಸದವಕಾಶ ಕೊಟ್ಟು ಕರುಣಿಸು ಎಂದರು. ತಥಾಸ್ತು ಎಂದ ಭವಾನೀಪತಿ. ಅಂದಿನಿಂದ ನಂದಿ ವೈಶ್ಯ ಹಾಗೂ ಆ ಮಹಾಕಾಲ ಎಂಬ ಕಿರಾತ ಇಬ್ಬರೂ ಪರಮೇಶ್ವರನ ಪರಮ ಪ್ರೀತ್ಯಾಸ್ಪದ ಪಾರ್ಷದರಾಗಿ ಶಿವಸದನದ ದ್ವಾರಪಾಲಕರಾಗಿ ಕೈಲಾಸದಲ್ಲಿಯೇ ನೆಲೆನಿಂತರು.

ಈ ಧವಲೇಶ್ವರನ ದಿವ್ಯದರ್ಶನ, ಇಲ್ಲಿಯ ತೀರ್ಥದಲ್ಲಿ ಸ್ನಾನ, ದಾನ, ದೇವತಾರ್ಚನ ಮುಂತಾದವುಗಳಿಂದ ಭಕ್ತರು ನಂದಿ ವೈಶ್ಯ ಹಾಗೂ ಮಹಾಕಾಲ ಕಿರಾತರಂತೆ ಶಿವಸಾರೂಪ್ಯವನ್ನು ಹೊಂದಿ ಪರಮ ಗತಿಯನ್ನು ಐದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ನಂದಿ ಹಾಗೂ ಬೇಡರಿಗೆ ಶಿವಗಣದಲ್ಲಿ ಸೇರ್ಪಡೆ ಎಂಬ ನೂರನಲವತ್ತೆಂಟನೇಯ ಅಧ್ಯಾಯ ಮುಗಿದುದು*



## ಬಾಲಾವತಿಯ ವೃತ್ತಾಂತ — ಅಧ್ಯಾಯ - ೧೪೯

**ಮಹಾದೇವ:-** ಸಾಭ್ರಮತಿಯ ತೀರದಲ್ಲಿ ಬಾಲಾಪ ಎಂಬ ತೀರ್ಥ ಇದೆ. ಭಕ್ತಿಪ್ರದ ಎಂದು ಅದರ ಪ್ರಸಿದ್ಧಿ. ಮುಕ್ತಿಪ್ರದ ಎಂದೂ ಪ್ರಖ್ಯಾತಿ. ಆ ತೀರ್ಥದ ತಡಿಯಲ್ಲಿ ಹಿಂದೆ ಕಣ್ವ ಋಷಿಯ ಮಗಳಾದ ಬಾಲಾವತಿಯು ತಪಸ್ಸನ್ನು ಆಚರಿಸಿದಳು. ಅವಳು ರೂಪದಲ್ಲಿ ರತಿ. ಗುಣದಲ್ಲಿ ಸತಿ. ಬ್ರಹ್ಮಚಾರಿಣಿಯಾದ ಅವಳು ಬಗೆಬಗೆಯ ಪೂಜೆ ಉಪವಾಸಗಳಿಂದ ಸೂರ್ಯನನ್ನು ಆರಾಧಿಸಿದಳು. ಮುಗಿಲು ಮಂಟಪದ ಮಣಿಯಾದ ಸೂರ್ಯನೇ ತನಗೆ ಪತಿಯಾಗಬೇಕೆಂಬ ಹಿರಿಯಾಸೆಯನ್ನು ಹೃದಯದಲ್ಲಿ ಹೊತ್ತು ಚಿರಕಾಲ ತಪಿಸಿದಳು ತಪಸ್ಸನ್ನು ಆ ಚಿಗರೆಗಂಗಳ ಚೆಲುವೆ. ಅವಳ ಶೀಲ, ಸದಾಚಾರ, ತಪಸ್ಸು, ವ್ರತಚರ್ಯೆ, ಬ್ರಹ್ಮಚರ್ಯೆ, ನಿರತಿಶಯ ಭಕ್ತಿ ಮುಂತಾದ ಸದ್ಗುಣಗಳಿಂದ ಪರಮ ಪ್ರೀತನಾದ ಭಗವಾನ್ ಭಾಸ್ಕರ.

ಒಬ್ಬ ಋಷಿಯ ವೇಷಧರಿಸಿ ಅವಳ ಆಶ್ರಮದಲ್ಲಿ ದೇವದೇವನಾದ ದಿವಾಕರ ಕಾಲು ಇರಿಸಿದ. ಬ್ರಹ್ಮವರ್ಚಸ್ವಿಯಾದ ಆ ವಿಪ್ರಶ್ರೇಷ್ಠರನ್ನು ಕಂಡು ಬಾಲಾವತಿಯು ಎದ್ದು ನಿಂತು ಸಂಭ್ರಮದಿಂದ ಸ್ವಾಗತಿಸಿದಳು. ಅರ್ಘ್ಯಪಾದ್ಯಾದಿಗಳಿಂದ ಉಪಚರಿಸಿ ಆಸನವಿತ್ತು ಬಿನ್ನವಿಸಿದಳು.

**ಬಾಲಾವತಿ:-** ಮುನಿಪುಂಗವರೇ, ತಮ್ಮ ಅಪ್ಪಣೆಯೇನು? ನಾನು ಈ ದೇಹವೊಂದನ್ನು ಬಿಟ್ಟು ನೀವು ಏನು ಕೇಳಿದರೂ ಕೊಡಲು ಸಿದ್ಧ. ಈ ನನ್ನ ಶರೀರ ಮಾತ್ರ ಸೂರ್ಯದೇವನಿಗೆ ಅರ್ಪಿತ. ನಾನು ಸೂರ್ಯನ ಭಕ್ತಳು. ಸೂರ್ಯನಲ್ಲೇ ಅನುರಕ್ತಳು. ಅವನ ಹೊರತು ಬೇರೆ ಯಾರಿಗೂ ನನ್ನ ಕೈಯನ್ನು ಕೊಡಲಾರೆ. ಈ ಕಾಯವನ್ನು ಒಪ್ಪಿಸಲಾರೆ. ನಾನು ಈಗ ಆಚರಿಸುವ ವ್ರತ ಕೈಕೊಂಡ ತಪಸ್ಸು ಎಲ್ಲವೂ ಆ ದಿವಾಕರನನ್ನು ಮೆಚ್ಚಿಸುವದಕ್ಕಾಗಿಯೇ. ಈ ನನ್ನ ದೇಹವೊಂದನ್ನು ಬಿಟ್ಟು ನೀವು ಏನು ಬೇಡಿದರೂ ತಮಗೆ ನೀಡುತ್ತೇನೆ.

ಆಗ ಅಲ್ಲಿಗೆ ಬಂದ ಆ ಬ್ರಾಹ್ಮಣ ಶ್ರೇಷ್ಠನು ಬಾಲಾವತಿಯ ನಿಯಮ ನಿಷ್ಠೆಯ ನಿಷ್ಠುರ ನುಡಿಗಳನ್ನು ಆಲಿಸಿ ಅಂತರಂಗದಲ್ಲಿಯೇ ಸುಪ್ರೀತನಾದ.

**ವಿಪ್ರಶ್ರೇಷ್ಠ:-** ಕಲ್ಯಾಣಿ ! ಸೂರ್ಯನೊಡನೆ ಶಾರೀರಿಕ ಸಂಬಂಧವನ್ನು ಬೆಳೆಸಲಿಕ್ಕಾಗಿ ನೀನು ಇಂಥ ಉಗ್ರತಪಸ್ಸು ಕೈಕೊಂಡದ್ದು ಯುಕ್ತವೇ. ಈ ಜಗತ್ತಿನಲ್ಲಿ ತಪಸ್ಸಿನಿಂದ ಎಲ್ಲವೂ ದೊರಕುತ್ತದೆ. ತಪಸ್ಸಿನ ಮೇಲೆಯೇ ಎಲ್ಲವೂ ನಿಂತಿದೆ. ಶುಭಾಂಗಿ ! ತಪಸ್ಸಿನಿಂದ ದೇವತ್ವವನ್ನೂ ಕೂಡ ಪಡೆಯಬಹುದು. ಮೋಕ್ಷದ್ವಾರದ ಬಾಗಿಲನ್ನು ತೆರೆಯುವ ಬೀಗದ ಕೈಯೇ ತಪಸ್ಸು. ನಾನು ತಂದ ಈ ಐದು ಬೋರೆಕಾಯಿಗಳನ್ನು ನೀನು ತೆಗೆದುಕೊ, ಈ ಐದೂ ಕಾಯಿಗಳನ್ನೂ ಚೆನ್ನಾಗಿ ಕುದಿಸು. ಮೆತ್ತಗಾಗುವಂತೆ ಬೇಯಿಸು ಬೆಂಕಿಯ ಮೇಲೆ.

ಹೀಗೆ ಹೇಳಿ ಆ ಬ್ರಾಹ್ಮಣನು ಅಲ್ಲಿಯೇ ಸಮೀಪದ ಇಂದ್ರಗ್ರಾಮದಲ್ಲಿ ನಿಂತುಕೊಂಡ. ಬಾಲಾವತಿಯ ಭಾವವನ್ನು ಪರೀಕ್ಷಿಸಬೇಕೆಂದು ಬೋರೆಮರಗಳ ಒಂದು ಉಪವನವನ್ನು ಅಲ್ಲಿಯೇ ಸಮೀಪದಲ್ಲಿ ಇಂದ್ರಗ್ರಾಮ ಊರ ಹೊರಗೆ ನಿರ್ಮಿಸಿದ. ಅದರ ಮಧ್ಯದಲ್ಲಿ ದಟ್ಟವಾದ ಮರದ ನೆರಳಿನಲ್ಲಿ ಬಾಲಾವತಿಯ ಭಾವ ಪರೀಕ್ಷೆಗಾಗಿ ಹೊಂಚಿಕೊಂಡು ಕುಳಿತ.

ಇತ್ತ ಆಶ್ರಮದ ಒಳಗೆ ಬಾಲಾವತಿಯು ಆ ಬ್ರಾಹ್ಮಣನು ಕೊಟ್ಟ ಐದು ಬೋರೆಹಣ್ಣುಗಳನ್ನು ಒಲೆಯ ಮೇಲೆ ಇಟ್ಟು ಕುದಿಸತೊಡಗಿದಳು. ಕಬ್ಬಿಣದಂತೆ ಕಠೋರವಾದ, ಕಲ್ಲಿನಂತೆ ಬಿರುಸಾದ ಆ ಬೋರೆಹಣ್ಣುಗಳನ್ನು ಒಲೆಯ ಮೇಲೆ ಇಟ್ಟು ಬೆಂಕಿಯನ್ನು ಪುಟಮಾಡಿ ಎಷ್ಟು ಬೇಯಿಸಿದರೂ ಅವು ಬೇಯಲಿಲ್ಲ. ಹೊರೆ ಹೊರೆಯಾಗಿ ಕಟ್ಟಿಗೆಗಳನ್ನು ಹಚ್ಚಿ ಉರಿಸಿದಳು. ರಾಶಿರಾಶಿಯಾಗಿ ಬೂದಿ ಬಿದ್ದಿತು. ಆಶ್ರಮದ ಸುತ್ತಲೂ ಇರುವ ಒಣ ತರಗೆಲೆಗಳನ್ನೂ, ಶುಷ್ಕಕಾಷ್ಠಗಳನ್ನೂ, ಒಣಗಿದ ಮರಬಳ್ಳಿಗಳನ್ನೂ, ಕುಳ್ಳು ಕಟ್ಟಿಗೆಗಳನ್ನೂ ಆರಿಸಿತಂದು ಒಲೆಗೆ ಹಚ್ಚಿ ಉರಿಸಿ ಅಗ್ನಿಯನ್ನು ಉಜ್ವಲವಾಗಿ ಬೆಳಗಿಸಿ ಆ ಬೋರೆಕಾಯಿಗಳನ್ನು ಬೇಯಿಸಬೇಕು ಎಂದು ಪ್ರಯತ್ನಿಸಿದಳು. ಇವಳು ಹಚ್ಚಿದ ಸೌದೆ ಹಾಗೂ ಶುಷ್ಕ ಮರಬಳ್ಳಿಗಳೆಲ್ಲವೂ ಸುಟ್ಟು ಬೂದಿಯಾದವು. ಆಶ್ರಮದ ಸುತ್ತಮುತ್ತಲಿನ ಮರಬಳ್ಳಿ ಒಣಹುಲ್ಲು, ಒಣಗಿದ ದೊಡ್ಡ ದೊಡ್ಡ ಹೆಮ್ಮರಗಳ ಕಟ್ಟಿಗೆಗಳನ್ನು ಕಡಿದು ಆಯ್ದುತಂದು ಆ ಐದು ಬೋರೆಹಣ್ಣುಗಳನ್ನು ಹೇಗಾದರೂ ಮಾಡಿ ಬೇಯಿಸಿ ತೆಗೆಯಬೇಕೆಂದು ಶತಪ್ರಯತ್ನ ಮಾಡಿದಳು. ಇಷ್ಟು ಶತಪ್ರಯತ್ನ ಮಾಡಿದರೂ ಒಲೆಯ ಮೇಲೆ ಇಟ್ಟ ಬೋರೆಹಣ್ಣುಗಳು ಕುದಿಯಲೂ ಇಲ್ಲ, ಬೇಯಲೂ ಇಲ್ಲ, ಮೆತ್ತಗಾಗಲೂ

ಇಲ್ಲ. ಹೀಗೆ ಬಹಳ ಕಾಲ ಕಳೆಯಿತು. ಆ ವನಪ್ರದೇಶದ ಕಾಷ್ಠ ಸಂಚಯದಲ್ಲಿ ಭೂಯಿಷ್ಠವಾದ ಭಾಗವು ಉರಿದು ಬೂದಿಯಾಯಿತು.

ಕೊನೆಗೆ ಆ ಬಾಲಾವತಿಯು ಬೇರೆ ಉಪಾಯ ಕಾಣದೇ ತನ್ನ ಕೋಮಲವಾದ ಕಾಲನ್ನೇ ಒಲೆಯಲ್ಲಿ ಕಟ್ಟಿಗೆಗಳೊಂದಿಗೆ ಇಟ್ಟು ಸುಟ್ಟು ಬೇಯಿಸ ತೊಡಗಿದಳು. ಒಂದುಕಾಲು ಸುಟ್ಟು ಕರಕಾದ ಕೂಡಲೇ ಹೊರಳಿ ಇನ್ನೊಂದು ಕಾಲನ್ನು ಇಟ್ಟು ಅಗ್ನಿಯಲ್ಲಿ ಮೇಲೆ ಕೆಳಗೆ ಹಿಡಿದು ಬೋರೆ ಫಲಗಳನ್ನು ಕುದಿಸಲು ಹವಣಿಸಿದಳು.

ಅವಳು ಭಕ್ತ್ಯುದ್ರೇಕದಿಂದ ಮಾಡುವ ಪಾದದಹನವನ್ನು ನೋಡಿ ಪರಮ ಪ್ರೀತನಾದ ಅವಳ ಇಷ್ಟದೇವನಾದ ದಿವಾಕರ. ಕೂಡಲೇ ಅವನು ತನ್ನ ನಿಜರೂಪದಿಂದ ಆ ಕನ್ಯೆಯ ಬಳಿಗೆ ಬಂದ. ತನ್ನ ನಿಜವಾದ ಸೂರ್ಯಸ್ವರೂಪದಿಂದಲೇ ಪ್ರತ್ಯಕ್ಷವಾಗಿ ಅವಳ ಕಣ್ಣೆದುರು ಬಂದು ಸ್ವಯಂ ಸಾಕ್ಷಾತ್ ಜ್ಯೋತಿ ರೂಪದಿಂದ ನಿಂತು ಮಾತನಾಡಿದ.

**ದಿವಾಕರ:-** ಬಾಲೆ ! ನಿನ್ನ ಈ ಅತ್ಯುಗ್ರವಾದ ತಪಸ್ಸಿನಿಂದ ನಾನು ಸುಪ್ರೀತ. ನಿನ್ನ ಈ ವ್ರತಚರ್ಯೆ, ತಪಶ್ಚರ್ಯೆ, ಅತಿಥಿಸತ್ಕಾರ ಮುಂತಾದ ಗುಣಗಳಿಗಾಗಿ ನಾನು ಲುಬ್ಧನಾಗಿದ್ದೇನೆ. ನಿನ್ನ ಇಷ್ಟಾರ್ಥಗಳೆಲ್ಲವೂ ಪೂರ್ಣವಾಗಲಿ. ಈ ತೀರ್ಥದ ದಂಡೆಯ ಮೇಲೆ ಇಷ್ಟು ದಿನ ತಪಸ್ಸು ಮಾಡಿದ ನೀನು ನನ್ನ ಮಡದಿಯಾಗಿ ಸೂರ್ಯಮಂಡಲದಲ್ಲಿ ನನ್ನೊಡನೆ ಇದ್ದುಬಿಡು. ಸಾಭ್ರಮತಿ ತಟಾಕದಲ್ಲಿ ಇರುವ ಈ ತೀರ್ಥವು ಮುಂದೆ ಬಾಲಾಪ ತೀರ್ಥ ಎಂತಲೂ ಇದನ್ನು ಕರೆಯುವರು. ಇಲ್ಲಿ ಮೂರು ರಾತ್ರಿ ಇದ್ದು ಉದಯೋನ್ಮುಖನಾದ ಹೊಂಬಣ್ಣದ ಅಂಬರಮಣಿಯ ದರ್ಶನ ಮಾಡಿಕೊಂಡವರು ಸೂರ್ಯಲೋಕವನ್ನು ಹೊಂದುತ್ತಾರೆ. ರವಿವಾರ, ಸಂಕ್ರಮಣ, ವಿಶೇಷವಾಗಿ ಸಪ್ತಮಿತಿಥಿ, ಗ್ರಹಣ ಮುಂತಾದ ಸಂದರ್ಭದಲ್ಲಿ ಈ ಬಾಲಾ ತೀರ್ಥದಲ್ಲಿ ಸ್ನಾನಮಾಡಿ ದೇವತೆಗಳಿಗೆ ತರ್ಪಣ ನೀಡಿ ಬೆಲ್ಲದ ಹಸುವನ್ನು ಮಾಡಿ ಬ್ರಾಹ್ಮಣರಿಗೆ ದಾನ ಕೊಡಬೇಕು. ಹಾಗೂ ಕರವೀರ, ಮತ್ತು ಜಪಾಪುಷ್ಪಗಳಿಂದ ಹೊಂಬಣ್ಣದ ರವಿಯನ್ನು ಪೂಜಿಸಿ ಕೆಂಬಣ್ಣದ ಗೋವನ್ನು ದಾನ ಕೊಟ್ಟರೆ ಆದಿವ್ಯಾಧಿಗಳಿಂದ ಮುಕ್ತನಾಗಿ ಮಾನವನು ಸದ್ಗತಿಯನ್ನು ಹೊಂದುತ್ತಾನೆ. ಹೀಗೆ ಹೇಳಿ ಸೂರ್ಯನು ಬಾಲಾವತಿಯನ್ನು ಪಾಣಿಗ್ರಹಣಮಾಡಿ ತನ್ನ ಲೋಕಕ್ಕೆ ಕರೆದೊಯ್ದ.

## ಕೋಣವು ಕಾನ್ಯಕುಬ್ಜದ ದೊರೆ ಆಯಿತು.

**ಮಹಾದೇವ:-** ತೇಜಸ್ವಿನಿಯಾದ ಪಾರ್ವತಿ ! ಈ ತೀರ್ಥದ ಇನ್ನೊಂದು ಮಾಹಾತ್ಮ್ಯವನ್ನು ಹೇಳುತ್ತೇನೆ ಕೇಳು. ಹಿಂದೆ ಇಲ್ಲಿ ಒಬ್ಬ ವ್ಯಾಪಾರಸ್ಥನಿದ್ದ. ಅವನು ತನ್ನ ಮನೆಯಲ್ಲಿ ಇದ್ದ ಒಂದು ಕೋಣದಿಂದ ಹತ್ತು ಎತ್ತುಗಳು ಹೊರಲಾರದ್ದು ಭಾರವನ್ನು ಎಳೆಸಿ ಅದನ್ನು ಹಿಂಸಿಸುತ್ತಿದ್ದ. ಕಲ್ಲು, ಕಟ್ಟಿಗೆ, ಕಾಳು ಕಡ್ಡಿ, ಕಬ್ಬಿಣ ಮುಂತಾದ ಭಾರಭೂತವಾದ ಪದಾರ್ಥಗಳನ್ನು ಹೊರಲಿಕ್ಕೆ ತನ್ನ ಕೋಣವನ್ನು ಬಾಡಿಗೆಗೆ ಕೊಟ್ಟು ಹೇರಳವಾದ ಹಣವನ್ನು ಸಂಪಾದಿಸುತ್ತಿದ್ದ. ಹೀಗೆ ವಿಪರೀತವಾಗಿ ಭಾರವನ್ನು ಹೊತ್ತು ಹೊತ್ತು ಮುಪ್ಪು ಬಂದಿತು ಆ ಕೋಣಕ್ಕೆ. ಶಕ್ತಿಕುಂದಿತು. ಹೆಗಲು ಹುಣ್ಣು ಆಯಿತು. ಭಾರಹೊರುವದು ಅದರಿಂದ ಆಗದಾಯಿತು. ಆಗ ಆ ವ್ಯಾಪಾರಿಯು ಇಷ್ಟು ದಿನ ದುಡಿಸಿಕೊಂಡ ಆ ಕೋಣವು ನಿರುಪಯುಕ್ತ ಎಂದು ಭಾವಿಸಿ ಮುದಿಕೋಣವನ್ನು ಹೊರಗೆ

ಹಾಕಿದ. ಆಗ ಆ ಕೋಣವು ಆಚೀಚೆ ತಿರುಗುತ್ತ ಬೇಸಿಗೆ ಕಾಲದಲ್ಲಿ ಒಮ್ಮೆ ಈ ಸಾಭ್ರಮತಿಗೆ ಬಂದಿತು. ಇದರ ನೀರಿನಲ್ಲಿ ಮಿಂದಿತು. ಅದು ತುಸು ಮುಂದೆ ಹೋಗಿ ಕೆಸರಿನಲ್ಲಿ ಹುದುಗಿತು. ಮೇಲೆ ಬರಲು ಪ್ರಯತ್ನಿಸಿದಷ್ಟೂ ಕರ್ದಮದ ಮಧ್ಯದಲ್ಲಿ ಸಿಕ್ಕು ಆಳಕ್ಕೆ ಇಳಿದು ಪ್ರಾಣಬಿಟ್ಟಿತು. ಸಾಭ್ರಮತಿಯ ನೀರಿನಲ್ಲಿ ನೆಂದಿತು. ಅದರ ತೊಗಲು ಕೋಣದ ಮೈಮೂಳೆಗಳೆಲ್ಲವೂ ಆ ತೀರ್ಥೋದಕದಲ್ಲಿ ನೆನೆದು ಪಾವನವಾದವು. ಈ ನೀರಿನ ಪುಣ್ಯ ಪ್ರಭಾವದಿಂದ ಆ ಕಾಡುಕೋಣವು ಮುಂದಿನ ಜನ್ಮದಲ್ಲಿ ಕಾನ್ಯಕುಬ್ಜ ದೊರೆಯ ಮಗನಾಗಿ ಹುಟ್ಟಿತು. ಮುಂದೆ ಅವನೇ ತಂದೆಯ ನಂತರ ಮಹಾರಾಜನಾಗಿ ಕಾನ್ಯಕುಬ್ಜ ಮಹೀಪತಿ ಎಂದು ಮೆರೆದ. ಕಳೆದ ಜನ್ಮದ ನೆನಹು ಅವನಲ್ಲಿ ಅಳಿಯದೇ ಉಳಿದಿತ್ತು. ಹಿಂದಿನ ಜನ್ಮದಲ್ಲಿ ಕೋಣನಾದ ತಾನು ಸಾಭ್ರಮತಿಯ ಪುಣ್ಯೋದಕದಲ್ಲಿ ಮುಳುಗಿ ಸತ್ತದ್ದರಿಂದ ಈಗ ರಾಜರಾಜೇಶ್ವರನಾಗಿ ಮೆರೆಯುವ ಭಾಗ್ಯ ಒದಗಿದೆ ಎಂದು ಅರಿತುಕೊಂಡ. ಮತ್ತು ತಾನು ಕಾನ್ಯಕುಬ್ಜದ ಸಿಂಹಾಸನದಲ್ಲಿ ಮಹಾರಾಜ ಪೀಠದಲ್ಲಿ ಪಟ್ಟಾಭಿಷಿಕ್ತನಾದ ಮರುದಿನವೇ ಧಾವಿಸಿಬಂದ ಈ ಬಾಲಾಪೇಂದ್ರ ತೀರ್ಥಕ್ಕೆ. ಇಲ್ಲಿ ಸ್ನಾನಮಾಡಿದ. ಬಗೆ ಬಗೆಯ ದಾನ ನೀಡಿದ. ಆ ತೀರ್ಥದ ತಡಿಯಲ್ಲಿ ಸ್ಥಾಪನೆಮಾಡಿದ ಒಂದು ಶಿವಲಿಂಗವನ್ನು. ಅವನು ಸ್ಥಾಪನೆ ಮಾಡಿದ ಆ ಲಿಂಗಕ್ಕೆ ಮಹೀಷೇಶ್ವರ ಎಂದು ಹೆಸರು ಬಂದಿತು. ಸಾಭ್ರಮತಿ ನದಿಯು ಇಲ್ಲಿಯವರೆಗೆ ಪೂರ್ವವಾಹಿನಿಯಾಗಿದ್ದು ಇಲ್ಲಿಂದ ಮುಂದೆ ಒಮ್ಮೆಲೆ ಪಡುವಣ ನಿಟ್ಟಿಗೆ ತಿರುಗಿ ಪಶ್ಚಿಮ ವಾಹಿನಿಯಾಗಿ ಹರಿದು ಮೊರೆಯುತ್ತದೆ. ಇಲ್ಲಿ ಸತ್ಪಾತ್ರದಲ್ಲಿ ನೀಡಿದ ದಾನ, ಮಾಡಿದ ಹೋಮ, ಆಚರಿಸಿದ ತಪಸ್ಸು, ಜಪಿಸಿದ ಮಂತ್ರ, ಗೈದ ಶ್ರಾದ್ಧ ಎಲ್ಲವೂ ಅಕ್ಷಯ. ಇಲ್ಲಿ ಬಂದು ಈ ತೀರ್ಥೋದಕದಲ್ಲಿ ಮಿಂದು, ಹಸು, ಹೊಲ, ನೆಲ, ತಿಲ, ಚಿನ್ನ, ಬಡ್ಡಿ, ಕಾಳು, ಹಾಸಿಗೆ, ಆಸನ, ವಾಹನ, ಕೊಡೆ ಮುಂತಾದವುಗಳನ್ನು ದಾನ ನೀಡಿದರು ಪರಮೇಶ್ವರನ ಪ್ರಸಾದಕ್ಕೆ ಪಾತ್ರರಾಗಿ ಜನ್ಮಾಂತರದಲ್ಲಿ ಬಯಸಿದ ಭೋಗಭಾಗ್ಯಗಳನ್ನೆಲ್ಲ ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಬಾಲಾವತಿಯ ವೃತ್ತಾಂತ ಎಂಬ ನೂರ ನಲವತ್ತೊಂಬತ್ತನೇಯ ಅಧ್ಯಾಯ ಮುಗಿದುದು*



## ದುರ್ಧರ್ಷೇಶ್ವರ ಮಾಹಾತ್ಮ್ಯ

ಅಧ್ಯಾಯ - ೧೫೦

**ಮಹಾದೇವ:-** ಇದರ ಮುಂದಿನ ತೀರ್ಥವೇ ದುರ್ಧರ್ಷೇಶ್ವರ ತೀರ್ಥ. ಇದನ್ನು ನೆನೆದ ಮಾತ್ರಕ್ಕೆ ಪಾಪಿಗಳು ಪುಣ್ಯವಂತರಾಗುತ್ತಾರೆ. ಹಿಂದೆ ದೇವ ದಾನವರಲ್ಲಿ ಘನಘೋರ ಯುದ್ಧ ನಡೆಯಿತು. ದೈತ್ಯದಾನವರೆಲ್ಲರೂ ದೇವತೆಗಳ ದಾರುಣವಾದ ಶಸ್ತ್ರಾಸ್ತ್ರದಿಂದ ಹತರಾಗಿ ಧಾರಾತೀರ್ಥದಲ್ಲಿ ದೇಹ ಬಿಟ್ಟರು. ಆಗ ಅಸುರರ ಆಚಾರ್ಯನಾದ ಶುಕ್ಲ ಇಲ್ಲಿಗೆ ಬಂದ. ಸಾಭ್ರಮತಿಯ ತೀರದಲ್ಲಿ ನಿಂತು ಘೋರ ತಪಂಗೈದ. ವಿರೂಪಾಕ್ಷನನ್ನು ಒಲಿಸಿಕೊಂಡು ವರ ಪಡೆದ. ಮೃತ ಸಂಜೀವಿನಿ ವಿದ್ಯೆಯನ್ನು ಪರಮೇಶ್ವನಿಂದ ಕಲಿತ. ಶುಕ್ರಾಚಾರ್ಯ ಸಂಜೀವಿನಿ ವಿದ್ಯೆಯನ್ನು ಪಡೆದ ಈ ತಾಣವು "ಉಶನಸ್ತೀರ್ಥ" ಎಂದು ಪ್ರಸಿದ್ಧವಾಯಿತು. ಶುಕ್ರಾಚಾರ್ಯರಿಗೆ ಉಶನಸ್ ಎಂದೂ ಹೆಸರು ಇದೆ. ಅವರು ಪ್ರತಿಷ್ಠಾಪಿಸಿದ ಲಿಂಗಕ್ಕೆ ದುರ್ಧೇಶ್ವರ ಎಂದು ಹೆಸರು ಬಂದಿತು.

ಪೂರ್ವಕಾಲದಲ್ಲಿ ವೃತ್ರಾಸುರನು ತನ್ನ ಪ್ರಚಂಡ ಪರಾಕ್ರಮದಿಂದ ದೇವತೆಗಳನ್ನೆಲ್ಲ ಸೋಲಿಸಿದ. ಸೋಲನ್ನು ಅನುಭವಿಸಿ ಸುದೈವದಿಂದ ಸಾವಿನಿಂದ ತಪ್ಪಿಸಿಕೊಂಡು ಪಲಾಯನಗೈದ ಪುರಂದರನು ತನ್ನ ಗುರು ಬೃಹಸ್ಪತ್ಯಾಚಾರ್ಯರ ಸಲಹೆಯಂತೆ ಇಲ್ಲಿಗೆ ಬಂದು ದುರ್ಧರ್ಷೇಶ್ವರನ ಸೇವೆಗೈದ. ಆ ಪುರಂದರನ ಪೂಜೆಯಿಂದ ಪರಿತುಷ್ಟನಾದ ಪಶುಪತಿಯು ಪಾಶುಪತಾಸ್ತ್ರವನ್ನು ಕರುಣಿಸಿದ. ಶಿವನು ಕೊಟ್ಟ ಆ ಅಸ್ತ್ರದಿಂದ ದೇವೇಂದ್ರನು ವೃತ್ರಾಸುರನನ್ನು ಕೊಂದು ಕೃತಾರ್ಥನಾದ. ಮಹೇಂದ್ರನಿಗೆ ದಿವ್ಯಾಸ್ತ್ರವನ್ನು ಕರುಣಿಸಿದ ಈ ದುರ್ಧರ್ಷೇಶ್ವರನ ಪೂಜೆ ಹಾಗೂ ಇಲ್ಲಿಯ ಉಶನಸ್ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಪರಮೇಶ್ವರನ ಪ್ರಸಾದ ಪ್ರಾಪ್ತಿಯಾಗುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ದುರ್ಧರ್ಷೇಶ್ವರ ಮಾಹಾತ್ಮ್ಯ ಎಂಬ ನೂರ ಐವತ್ತನೇಯ ಅಧ್ಯಾಯ ಮುಗಿದುದು*



## ಚಂಡ ಕಿರಾತನ ಅಖ್ಯಾನ

ಅಧ್ಯಾಯ - ೧೫೧

**ಮಹಾದೇವ:-** ಪೂರ್ವಕಾಲದಲ್ಲಿ ಮಹಾದೇವರ ಜಟಾಜೂಟದ ಒಂದು ಕೇಶರಂಧ್ರದಿಂದ ಹೊಮ್ಮಿ ಹರಿದ ಸಾಭ್ರಮತಿಯು ಕಶ್ಯಪ ಮುನಿಯ ಬೆನ್ನುಹತ್ತಿ ಪಾತಾಳಗಾಮಿನಿಯಾಗಿ ಪ್ರವಹಿಸಿದಳು. ಅಲ್ಲಿ ಖಡ್ಗಧಾರ ಎಂಬ ಹೆಸರಿನಿಂದ ರುದ್ರದೇವನು ನಿಂತಿದ್ದಾನೆ. ಅಲ್ಲಿಯ ಖಡ್ಗದಾರ ತೀರ್ಥದಲ್ಲಿ ಸ್ನಾನಮಾಡಿ ಖಡ್ಗಧಾರೇಶ್ವರನನ್ನು ಪೂಜಿಸಿದ ಪಾಪಿಗಳೂ ಕೂಡ ಹಿಂದೆ ಸ್ವರ್ಗವನ್ನು ಸೇರಿದ್ದಾರೆ. ಈ ವಿಷಯದಲ್ಲಿ ಹಿಂದಿನ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು.

ಪ್ರಾಚೀನ ಕಾಲದಲ್ಲಿ ಚಂಡ ಎಂಬ ಹೆಸರಿನ ದುಷ್ಟ ಬೇಡ ಇದ್ದ. ಅವನ ಹೆಸರೇ ಸೂಚಿಸುವಂತೆ ಆ ಬೇಡ ಮಹಾಕ್ರೂರ. ದಯಾ, ಮಾಯಾ ಪ್ರೀತಿಗಳಿಗೆ ಅವನ ಹೃದಯದಲ್ಲಿ ಇನಿತೂ ಇಂಬು ಇರಲಿಲ್ಲ. ಅವನನ್ನು ಕಂಡರೆ ಹೆದರುತ್ತಿದ್ದವು ಎಲ್ಲ ಪ್ರಾಣಿಗಳು. ಅವನು ಜಾಲ ಹಾಕಿ ಮೀನು ಮೊಸಳೆಗಳನ್ನು ಕೊಲ್ಲುತ್ತಿದ್ದ. ಖಡ್ಗ, ಭರ್ಚಿ,

ಈಟಿ, ಹಾರೆ ಮುಂತಾದ ಘೋರವಾದ ಆಯುಧಗಳಿಂದ ಪ್ರಾಣಿಗಳನ್ನೂ, ಪುರುಷರನ್ನೂ, ಕಾಡುಮಿಕಗಳನ್ನೂ ವಧಿಸುತ್ತಿದ್ದ. ಬಾಣ ಬಿಟ್ಟು ಮುಗಿಲಲ್ಲಿ ಹಾರುವ ಹಕ್ಕಿಗಳನ್ನೆಲ್ಲ ಕೊಂದು ಹಾಕುತ್ತಿದ್ದ. ಅವನ ಹೆಂಡತಿ ಚಂಡಿ. ಚಂಡನಿಗೆ ತಕ್ಕ ರಕ್ಕಸಿ. ಸ್ವಭಾವದಿಂದಲೂ ಚಂಡಿ. ಸಿಟ್ಟು ಬಂದರೆ, ಚಾಮುಂಡಿ, ಹಿಂಸೆಯಲ್ಲಿ ಭದ್ರಕಾಳಿ, ವ್ಯಭಿಚಾರದಲ್ಲಿ ಪುಂಶ್ಚಲಿ, ಮದ್ಯಮಾಂಸ ಸೇವನೆಯಲ್ಲಿ ತಾಟಕೆ. ಆ ಚಂಡ-ಚಂಡಿಕೆ ಎಂಬ ಕ್ರೂರ ಕಿರಾತ ದಂಪತಿಗಳು ಬಹುಕಾಲ ಪರ್ಯಂತರ ಜಲಚರ, ಖೇಚರ, ಸ್ಥಲಚರ ಪ್ರಾಣಿಗಳಿಗೆಲ್ಲ ಮೃತ್ಯುವಾಗಿ ಭೂಮಂಡಲಕ್ಕೆ ಭಾರವಾಗಿ ಬಾಳಿದರು.

ಒಂದು ದಿನ ರಾತ್ರಿಯ ಸಮಯ. ಒಂದು ಕಾಡುಹಂದಿಯನ್ನು ಕೊಲ್ಲಬೇಕೆಂದು ಚಂಡನು ಬಿಲ್ವ ಗಿಡದ ಮೇಲೆ ಹೊಂಚು ಹಾಕಿಕೊಂಡು ಕುಳಿತಿದ್ದಾನೆ. ಬಿಲ್ಲಿಗೆ ಬಾಣ ಹೂಡಿ ಹೆದೆ ಏರಿಸಿ, ಬೆಳಗಾಗುವರೆಗೆ ಮರದ ಮೇಲೆ ಮರೆಯಾಗಿ ಕಾಯುತ್ತ ಕುಳಿತ. ಆಗ ಮಾಘಮಾಸ, ಕೃಷ್ಣಪಕ್ಷ, ಚತುರ್ದಶಿ ತಿಥಿ. ಎಷ್ಟು ಹೊತ್ತು ಕಾಯ್ದರೂ ಹಂದಿ ಬರಲಿಲ್ಲ. ಮೂಗಿನ ತುದಿಯಲ್ಲಿದ್ದ ಕೋಪ ಮೈಮನಗಳಲ್ಲೆಲ್ಲಾ ವ್ಯಾಪಿಸಿತು ಆ ಚಂಡನಿಗೆ. ಸಿಟ್ಟಿನಿಂದ ತಾನು ಕುಳಿತ ಆ ಬಿಲ್ವವೃಕ್ಷದ ಎಲೆಗಳನ್ನೆಲ್ಲಾ ಕೈಗತ್ತಿಯಿಂದ ತರಿದ. ಆ ಗಿಡದ ಬುಡದಲ್ಲಿಯೇ ಒಂದು ಶಿವಲಿಂಗ. ಇವನು ತರಿದ ಬಿಲ್ವಪತ್ರಿಗಳು ಆ ಲಿಂಗದ ಮೇಲೆಯೇ ಬಿದ್ದವು. ಅನಾಯಾಸವಾಗಿ ಅವನಿಂದ ಅವನಿಗೆ ತಿಳಿಯದೆಯೇ ಶಿವಲಿಂಗಕ್ಕೆ ಬಿಲ್ವಪತ್ರಿಯಿಂದ ಪೂಜೆ ಆಯಿತು. ಆಗಾಗ ಅವನು ಮೇಲಿನಿಂದ ಕೆಳಗೆ ಉಗುಳಿದಾಗ ಆ ಲಿಂಗಕ್ಕೆ ಅಭಿಷೇಕ ಆಯಿತು. ಇಡೀ ದಿನ ಕಾಡುಹಂದಿಯನ್ನು ಹೊಡೆಯಬೇಕು ಎಂಬ ಹೊಂಚಿಕೆಯಲ್ಲಿ ಮರದ ಮೇಲೆಯೇ ಕುಳಿತಿದ್ದರಿಂದ ಅಂದು ಅವನಿಗೆ ಪೂರ್ಣ ಉಪವಾಸ ವಾಗಿದ್ದಿತು. ಹೀಗೆ ಮಾಘಮಾಸ ಕೃಷ್ಣಪಕ್ಷ ಚತುರ್ದಶಿಯ ದಿನ ಪೂರ್ಣ ಉಪವಾಸ ಹಾಗೂ ಚಂದ್ರೋದಯ ಕಾಲದಲ್ಲಿ ಬಿಲ್ವಪತ್ರೆಯಿಂದ ಮಹಾದೇವನಿಗೆ ಪೂಜೆ, ಸ್ನಾನ, ಜಾಗರಣೆ, ಉಪವಾಸ ಎಲ್ಲವೂ ಅವನಿಂದ ಕಾಕತಾಳೀಯವಾಗಿ ಆಚರಿಸಲ್ಪಟ್ಟಿತ್ತು. ಆದರಿಂದ ಅವನ ಪಾಪರಾಶಿಗಳೆಲ್ಲ ಸುಟ್ಟು ಹೋಗಿದ್ದವು. ಅಂತಃಕರಣ ತಿಳಿಯಾಗಿದ್ದಿತು. ಪ್ರಸನ್ನವಾಗಿತ್ತು ಮನಸ್ಸು. ಪ್ರಶಾಂತವಾಗಿತ್ತು ಅಂತರಂಗ. ಅಷ್ಟರಲ್ಲಿಯೇ ಅವನಿಗೆ ಅನ್ನ ತೆಗೆದುಕೊಂಡು ಅವನ ಹೆಂಡತಿ ಚಂಡಿ ಅಲ್ಲಿಗೆ ಬಂದಳು. ತನ್ನ ಗಂಡನಾದ ಚಂಡನನ್ನು ಕೆಕ್ಕರಿಸಿ ನೋಡುತ್ತ ಅವಳು ನುಡಿದಳು.

**ಚಂಡಿ:-** ಮೂರ್ಖನಾದ ಚಂಡ ! ನಿನ್ನೆಯ ದಿನ ನೀನು ಮನೆಗೆ ಬರಲಿಲ್ಲ. ಊಟವನ್ನೂ ಮಾಡಲಿಲ್ಲ. ಇಲ್ಲಿಯೂ ನಿನ್ನ ಪಕ್ಕದಲ್ಲಿ ಮಾಂಸದ ತುಂಡು, ತುಣುಕು ಏನೂ ಕಾಣುವದಿಲ್ಲ. ನಿನ್ನೆ ಇಡಿಯ ದಿನ ಉಪವಾಸ ಇಲ್ಲಿ ಕುಳಿತುಬಿಟ್ಟಿರುವೆ. ನೀನು ಬಾರದ್ದರಿಂದ ನಾವೆಲ್ಲರೂ ಊಟಮಾಡದೇ ಉಪವಾಸದಿಂದ ಸಂಕಟಪಡುತ್ತಿದ್ದೇವೆ. ಈಗಾದರೂ ಬೇಗೆ ಊಟಮಾಡು. ನಿನ್ನಗಾಗಿ ನಾನು ಮಾಂಸವನ್ನು ಬೇಯಿಸಿ ತಂದಿದ್ದೇನೆ. ಮೀನನ್ನು ಕುದಿಸಿ ಬೇರೆ ಬೇರೆ ಭಕ್ಷ್ಯಗಳನ್ನು ಮಾಡಿ ತಂದಿದ್ದೇನೆ. ಕೂಡಲೇ ತೆಗೆದುಕೊಂಡು ತಿನ್ನು.

ಹೆಂಡತಿಯ ಮಾತು ಕೇಳಿ ಆ ಚಂಡ ಕಿರಾತ ಮರ ಬಿಟ್ಟು ಕೆಳಗಿಳಿದ. ಸ್ನಾನ ಮಾಡಲು ಸಾಭ್ರಮತಿ ನದಿಗೆ ಬಂದ. ನೀರಿನಲ್ಲಿ ಇಳಿದು ಅವಗಾಹನೆಗೈದ. ಆದರೆ ಅಷ್ಟರಲ್ಲಿ ಒಂದು

ನಾಯಿ ಬಂದು ಚಂಡಿಯು ತನ್ನ ಗಂಡನಿಗಾಗಿ ಇಟ್ಟ ಮಾಂಸ ಮೀನುಗಳನ್ನೆಲ್ಲ ತಿಂದುಬಿಟ್ಟಿತು. ಆಗ ಚಂಡಿಯು ಕೋಪದಿಂದ ಕೆಂಡದಂತಾಗಿ ಆ ನಾಯಿಯನ್ನು ಹೊಡೆಯ ಹೋದಳು. ಆದರೆ ಚಂಡನು ಅವಳನ್ನು ತಡೆದ ಮತ್ತು ಸೌಮ್ಯವಾಗಿ ನುಡಿದ.

**ಚಂಡ:-** ತಿನ್ನಲಿ ಬಿಡು. ಆ ನಾಯಿಯೂ ಬಹಳ ಹಸಿದಿದೆ.

**ಚಂಡಿ:-** ಮೂರ್ಖ ! ನಾಯಿಯನ್ನು ತಡೆಯದೇ ಬಿಟ್ಟರೆ ಅದು ಎಲ್ಲ ಮತ್ಸ್ಯ, ಮಾಂಸವನ್ನು ತಿಂದುಬಿಡುವದು. ನೀನು ಏನು ತಿನ್ನುವಿ? ನಿನ್ನೆಯಿಂದ ಪೂರ್ಣ ಉಪವಾಸ ಇರುವೆ. ಹಸಿದು ಕಂಗಾಲಾದ ನೀನು ಇದ್ದುದನ್ನೆಲ್ಲ ನಾಯಿಗೆ ನೀಡಿ ನಿನ್ನ ಹೊಟ್ಟೆಗೆ ಕೇರು ಹಾಕಿಕೊಳ್ಳುವೆಯಾ? ನೀನು ಇಷ್ಟು ಬುದ್ಧಿಗೇಡಿ ಹೇಗೆ ಆದೆ? ನಿನಗೆ ನಿನ್ನ ಹೊಟ್ಟೆಯ ಅರಿವು ಇಲ್ಲವೆ? ಹಸಿವೆಯ ಪರಿವೆ ಇಲ್ಲವೆ?

**ಚಂಡ:-** ಹಸಿದ ನಾಯಿಯು ನೀನು ತಂದ ಮತ್ಸ್ಯ ಮಾಂಸವನ್ನು ತಿಂದದ್ದರಿಂದ ನನಗೆ ತೃಪ್ತಿಯಾಗಿದೆ. ನಶ್ವರವಾದ ಈ ಶರೀರವನ್ನು ಪೋಷಿಸುವದು ವ್ಯರ್ಥ. ಮತ್ತು ಅದು ಪ್ರಾಣಿಯ ಸ್ವಾರ್ಥ. ಒಂದಲ್ಲ ಒಂದು ದಿನ ಅಗ್ನಿಯಲ್ಲಿ ಬಿದ್ದು ದಗ್ಧವಾಗಿ ಹೋಗುವ ಅಥವಾ ನೆಲದಲ್ಲಿ ಮಣ್ಣುಗೂಡುವ ಮುಷ್ಟಿಮೇಯವಾದ ಈ ಮೈಗಾಗಿ ಪ್ರಾಣಿಹಿಂಸೆ ಮಾಡುವವರು ಮಹಾಪಾಪಿಗಳು. ಈ ತಮ್ಮ ಕೈಯಿಷ್ಟುವಾದ ಶರೀರ ಪೋಷಣೆಗಾಗಿ ಬೇರೆ ಪ್ರಾಣಿಗಳನ್ನು ಹೊಡೆದು ಮಾಂಸವನ್ನು ತಂದು ತಿಂದು ಸ್ವೇಚ್ಛೆಯಿಂದ ಮೆರೆಯುವವರು ಈ ಲೋಕದಲ್ಲಿ ತಿರಸ್ಕೃತರು. ಸ್ವರ್ಗದಲ್ಲಿ ಬಹಿಷ್ಕೃತರು. ಆದುದರಿಂದ ದುಷ್ಟ ವಿಚಾರವನ್ನು ಬಿಟ್ಟು, ದುರ್ಭಾವನೆಯನ್ನು ನಾಶಮಾಡಿ ಪ್ರಾಣಿಗಳ ಮೇಲೆ ದಯಮಾಡುತ್ತ ನೀನು ಸ್ಥಿರಚಿತ್ತಳಾಗು. ಬಹುಕಾಲ ಈ ಭೂಮಿಯಲ್ಲಿ ಬಾಳಿಬದುಕಿ ಏನು ಪ್ರಯೋಜನ? ಆದುದರಿಂದ ನಾನು ಖಡ್ಗಧಾರ ವ್ರತದಿಂದ ದೇಹವನ್ನು ಕೊನೆಗಾಣಿಸುತ್ತೇನೆ.

ಹೀಗೆ ಹೇಳಿ ಆ ವ್ಯಾಧನು ಖಡ್ಗದಿಂದ ತನ್ನ ದೇಹವನ್ನು ಇರಿದುಕೊಂಡ. ಕೂಡಲೇ ಕೈಲಾಸ ಲೋಕದಿಂದ ವಿಮಾನಗಳು ಬಂದವು. ಅವುಗಳಿಂದ ಇಳಿದು ಬಂದರು ಅಸಂಖ್ಯ ಶಿವದೂತರು ಅವರೆಲ್ಲರ ಕೊರಳಲ್ಲಿಯೂ ರುದ್ರಾಕ್ಷಿಮಾಲೆ, ಪ್ರತಿಯೊಬ್ಬರ ಜಡೆಯ ಮುಡಿಯಲ್ಲಿ ಚಂದ್ರ, ಕೊರಳಲ್ಲಿ ಹಾವಿನಹಾರ. ಮೈಮೇಲೆ ಹುಲಿದೊಗಲು, ಅಚ್ಚಬಿಳಿ ಬಣ್ಣ. ಎಲ್ಲರಿಗೂ ರುದ್ರನಂತಹದೇ ಭೀಷಣ ರಮಣೀಯವಾದ ರೂಪ. ಅವರೆಲ್ಲರಿಗೂ ದೀರ್ಘದಂಡ ಹಾಕಿ "ನೀವು ಯಾರು?" ಎಂದು ಕೇಳಿದ ಆ ಚಂಡ ಕಿರಾತ.

**ಶಿವಗಣ:-** ನಾವು ಶಿವನ ದೂತರು. ನೀನು ಶಿವರಾತ್ರಿಯ ದಿನ ಬೇಟೆಯಾಡಲು ಬಂದು ಶಿವಪೂಜೆ ಮಾಡಿದೆ. ಹಂದಿಯನ್ನು ಹೊಡೆಯುವದಕ್ಕಾಗಿ ಹೊಂಚುಹಾಕಿ ಇಡೀ ದಿನ ಉಪವಾಸ ಕುಳಿತೆ. ಆದರಿಂದ ಶಿವರಾತ್ರಿಯ ಉಪವಾಸವು ನಿನ್ನಿಂದ ಆಚರಿಸಲ್ಪಟ್ಟಿತು. ಹಂದಿ ಬಾರದ್ದರಿಂದ ಕುಪಿತನಾದ ನೀನು ಕೈಕತ್ತಿಯಿಂದ ನೀನು ಕುಳಿತ ಬಿಲ್ವಮರದ ಎಲ್ಲ ಎಲ್ಲೆಗಳನ್ನೆಲ್ಲ ಉದುರಿಸಿದೆ. ಆ ಬಿಲ್ವಪತ್ರಗಳೆಲ್ಲ ಮರದ ಕೆಳಗೆ ಇದ್ದ ಶಿವಲಿಂಗದ ಮೇಲೆ ಬಿದ್ದುದರಿಂದ ಶಿವನಿಗೆ ಬಿಲ್ವಪತ್ರಾರ್ಚನೆಯೂ ನಿನ್ನಿಂದ ಸಂಪನ್ನವಾಯಿತು. ಹಂದಿಗಾಗಿ ಜಪ್ಪಿಸಿ ಎಚ್ಚರದಿಂದಲೇ ಕುಳಿತದ್ದರಿಂದ ಜಾಗರಣೆಯೂ ಮಾಡಲ್ಪಟ್ಟಿತು. ಹೀಗೆ ಬೇಟೆಯ ನಿಮಿತ್ತದಿಂದ ಶಿವರಾತ್ರಿಯ ದಿನ ಉಪವಾಸ, ಜಾಗರ, ಬಿಲ್ವಪತ್ರಾರ್ಚನೆ ಮೂರೂ

ಸಾಧಿಸಿದ್ದರಿಂದ ಮೇಲೆ ಮಹಾದೇವನು ಸುಪ್ರಸನ್ನನಾಗಿ ನಿನ್ನನ್ನು ಮಡದಿಯೊಡನೆ ಕೈಲಾಸಕ್ಕೆ ಕರೆದುಕೊಂಡು ಬರಲು ವಿಮಾನವನನು ಕೊಟ್ಟು ಕಳಿಸಿದ್ದಾನೆ. ಆದುದರಿಂದ ನೀನು ಚಂಡಿಯೊಡನೆ ಈಗಲೇ ಇಲ್ಲಿಂದ ಹೊರಡು. ಈ ವಿಮಾನವನ್ನು ಆರೋಹಣ ಮಾಡು. ಸಕುಟುಂಬವಾಗಿ ಕೈಲಾಸಕ್ಕೆ ಪಯಣಿಸು.

ಹೀಗೆ ಹೇಳಿ ಶಿವಗಣಾಧೀಶರು ಚಂಡನನ್ನು ಅವನ ಹೆಂಡತಿಯೊಂದಿಗೆ ವಿಮಾನದಲ್ಲಿ ಕೈ ಹಿಡಿದು ಕುಳ್ಳಿರಿಸಿದರು. ಎಲ್ಲ ಜನರೂ ನೋಡುನೋಡುತ್ತಿರುವಂತೆಯೇ ಚಂಡ ಚಂಡಿ ದಂಪತಿಗಳು ಕೈಲಾಸ ವಿಮಾನವನ್ನು ಆರೋಹಣ ಮಾಡಿದರು. ದೇವ ದುಂದುಭಿಗಳು ಮೊಳಗಿದವು. ಕೈಲಾಸದ ಕೊಳಲುಗಳು ನುಡಿದವು. ಗಂಧರ್ವರು ಹಾಡಿದರು ಅಪ್ಸರೆಯರು ಕುಣಿದರು. ಅಮರರು ಚಾಮರ ಬೀಸಿದರು.

ಹೀಗೆ ವ್ಯಾಜದಿಂದ ಶಿವರಾತ್ರಿ ಉಪವಾಸ, ಜಾಗರ, ಬಿಲ್ವಪತ್ರಾರ್ಚನೆ ಮಾಡಿದ ಬೇಡ ದಂಪತಿಗಳು ಉದ್ಧಾರ ಹೊಂದಿದರು. ಅಂದ ಬಳಿಕ ಬುದ್ಧಿ ಪೂರ್ವಕವಾಗಿಯೇ ಹೀಗೆ ಶಿವಾರ್ಚನೆ ಮಾಡಿದವರು ಶಿವಲೋಕವನ್ನು ಹೊಂದುವರೆಂದು ಏನು ಹೇಳುವದು?

ಮಾಘ, ವೈಶಾಖ, ಕಾರ್ತಿಕ ಮಾಸಗಳಲ್ಲಿ ವಶಿಷ್ಠ, ವಾಮದೇವ, ಭರದ್ವಾಜ, ಗೌತಮ ಮುಂತಾದ ಮುನಿಗಳು ಇಲ್ಲಿ ಸ್ನಾನ ಮಾಡಲು ಬರುವರು. ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಮಾತ್ರ ಇಲ್ಲಿ ಚಂಡ ಬೇಡನಿಗೆ ಒಲಿದ ಪರಮೇಶ್ವರನ ಲಿಂಗವು ದೃಗ್ಗೋಚರವಾಗುತ್ತದೆ. ಆದರೆ ಕಲಿಯುಗದಲ್ಲಿ ಮಾತ್ರ ನಾನು ಗುಪ್ತನಾಗಿ ಇಲ್ಲಿ ಯಾರಿಗೂ ಕಾಣಿಸುವದಿಲ್ಲ. ಅದಕ್ಕೆ ಕಾರಣ ವಿಶ್ವಾಮಿತ್ರನ ಶಾಪ.

**ಪಾರ್ವತಿ:-** ವಿಶ್ವಾಮಿತ್ರನು ನಿಮಗೆ ಶಾಪಕೊಟ್ಟ ಸಂದರ್ಭ ಯಾವದು? ಅದಕ್ಕೆ ಕಾರಣ ಏನು?

**ಮಹಾದೇವ:-** ಹಿಂದೆ ಒಂದಾನೊಂದು ಸಮಯದಲ್ಲಿ ವಿಶ್ವಾಮಿತ್ರ ಮುನಿಯು ಈ ಸಾಭ್ರಮತಿ ತೀರಕ್ಕೆ ಬಂದು, ಖಡ್ಗಧಾರ ತೀರ್ಥದಲ್ಲಿ ಮಿಂದು, ಶಿವನ ದರ್ಶನ ತೆಗೆದುಕೊಂಡ. ಶಿವಲಿಂಗ ಪೂಜೆಯನ್ನು ಮಾಡಿದ. ಅನಂತರ ಕೈ ಮುಗಿದು ಶಂಕರನ ಪೂಜೆ ಮಾಡುತ್ತ ಅಲ್ಲಿಯೇ ನಿಂತುಕೊಂಡ.

ಅಷ್ಟರಲ್ಲಿ ಒಬ್ಬ ದುಷ್ಟ ಪಾಖಂಡಿ ಅಲ್ಲಿಗೆ ಆಗಮಿಸಿದ. ಶಿವಲಿಂಗದ ಮೇಲೆ ಮಾಂಸವನ್ನು ಇಟ್ಟ. ಅಪವಿತ್ರವಾದ ರಕ್ತ ಬಸಿಯುವ ಆ ಹೊಲಸು ಮಾಂಸವನ್ನು ಮಸ್ತಕದ ಮೇಲೆ ಇಟ್ಟರೂ ಲಿಂಗಾಂತರ್ಗತನಾದ ಗಂಗಾಧರ ಏನೂ ಮಾಡಲಿಲ್ಲ ಆ ಪಾಖಂಡಿಗೆ. ಪಾಪಿಗಳನ್ನು ದಂಡಿಸದಿರುವ ನಿಷ್ಕ್ರಿಯನೂ, ನಿರ್ಬಲನೂ, ಅಪರಾಧ ಸಹಿಷ್ಣುವೂ ಆದ ಮಹಾದೇವನನ್ನು ನೋಡಿ ಕೋಪಬಂದಿತು ವಿಶ್ವಾಮಿತ್ರನಿಗೆ. ಕೂಡಲೇ ''ಯಾರ ಕಣ್ಣಿಗೂ ಕಾಣದಂತಾಗು'' ಎಂದು ಶಾಪ ಚಲ್ಲಿ ಹೊರಟು ಹೋದ. ದೇವಿ ! ಅಂದಿನಿಂದ ನಾನು ಗುಪ್ತನಾಗಿದ್ದೇನೆ ಈ ಖಡ್ಗಧಾರ ತೀರ್ಥದ ತಡಿಯಲ್ಲಿ. ಆದರೂ ಹಿಂದಿನ ಮೂರು ಯುಗಗಳಲ್ಲಿ ನನ್ನ ಶಿವಲಿಂಗವು ಇದ್ದಸ್ಥಳವು ತುಸು ತಗ್ಗಾಗಿ ಇರತ್ತದೆ. ಅದರಲ್ಲಿ ನನ್ನ ಮಣ್ಣಿನ ಮೂರ್ತಿಯನ್ನು ಮಾಡಿ ಕೂಡಿಸಿ ನನ್ನ ಸ್ಥಾನದಲ್ಲಿಯೇ ನನ್ನ ವಿಶೇಷ ಪೂಜೆ ಮಾಡಿದವರ ಪಾಪಗಳೆಲ್ಲವೂ ದೂರ ಓಡಿಹೋಗುತ್ತವೆ. ಕೃತಯುಗದಲ್ಲಿ

ಈ ಶಿವಲಿಂಗಕ್ಕೆ ಮಂದಿರ ಎಂದೂ, ತ್ರೇತಾಯುಗದಲ್ಲಿ ಗೌರವ ಎಂದೂ, ದ್ವಾಪರ ಯುಗದಲ್ಲಿ ವಿಶ್ವವಿಖ್ಯಾತ ಎಂದೂ ಕಲಿಯುಗದಲ್ಲಿ ಖಡ್ಗೇಶ್ವರ ಎಂದೂ ನಾಲ್ಕು ಯುಗಗಳಲ್ಲಿ ನಾಲ್ಕು ಬೇರೆ ಬೇರೆ ಹೆಸರುಗಳು ಬಂದಿರುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಚಂಡ ಕಿರಾತನ ಆಖ್ಯಾನ ಎಂಬ ನೂರ ಐವತ್ತೊಂದನೇಯ ಅಧ್ಯಾಯ ಮುಗಿದುದು*



## ದಧೀಚಿ ವೃತ್ತಾಂತ ದುಗ್ಧೇಶ್ವರ ಮಾಹಾತ್ಮ್ಯ — ಅಧ್ಯಾಯ - ೧೫೨

**ಮಹಾದೇವ:-** ಖಡ್ಗಧಾರೆಯ ದಕ್ಷಿಣ ದಿಕ್ಕಿನಲ್ಲಿ ಇರುವ ದುಗ್ಧೇಶ್ವರ ತೀರ್ಥದಲ್ಲಿ ಸ್ನಾನಮಾಡಿ ದುಗ್ಧೇಶ್ವರನ ಪೂಜೆ ಮಾಡಿದವರು ಪಾಪದಿಂದ ಮುಕ್ತರಾಗುತ್ತಾರೆ. ಇಲ್ಲಿ ಚಂದ್ರಭಾಗಾ ನದಿಯು ಸಾಭ್ರಮತಿಯೊಂದಿಗೆ ಸಂಗಮಿಸಿದೆ. ಇದೇ ಸ್ಥಳದಲ್ಲಿ ಹಿಂದೆ ದಧೀಚಿ ಋಷಿಯು ತಪಸ್ಸನ್ನು ಮಾಡಿದ. ಇಲ್ಲಿಯ ದುಗ್ಧೇಶ್ವರ ತೀರ್ಥದಲ್ಲಿ ಸ್ನಾನಮಾಡಿ ದುಗ್ಧೇಶ್ವರ ಪೂಜೆ, ಜಪ, ದಾನ, ತಪೋನುಷ್ಠಾನಗಳನ್ನು ಮಾಡಿದವರು ಸದ್ಗತಿಯನ್ನು ಹೊಂದುತ್ತಾರೆ.

**ಪಾರ್ವತಿ:-** ದುಗ್ಧೇಶ್ವರ ತೀರ್ಥ ಹಾಗೂ ಲಿಂಗಗಳ ಉತ್ಪತ್ತಿಯ ಕಥೆಯನ್ನು ಹೇಳಿರಿ.

**ಮಹಾದೇವ:-** ಹಿಂದೆ ದೇವಾಸುರ ಸಂಗ್ರಾಮದಲ್ಲಿ ದೇವತೆಗಳು ಸೋತು ಓಡಿದರು. ದಧೀಚಿ ಆಶ್ರಮಕ್ಕೆ ಬಂದರು. ತಮ್ಮ ಆಯುಧಗಳನ್ನೆಲ್ಲ ಆ ಋಷ್ಯಾಶ್ರಮದಲ್ಲಿ ಚೆಲ್ಲಿ ದಿಕ್ಕುದಿಕ್ಕಿಗೆ ಧಾವಿಸಿ ಹೋದರು. ಮುಂದೆ ಕೆಲವೇ ನಿಮಿಷಗಳಲ್ಲಿ ಆಶ್ರಮದ ಹಿಂದೆ ದೈತ್ಯ ಸೈನಿಕರ ಕಲಕಲ ಕೋಲಾಹಲ ಧ್ವನಿಯು ಕೇಳಿ ಬಂದಿತು. ಆಗ ದಧೀಚಿ ಮುನಿಗಳು "ದೈತ್ಯರು ಬಂದು ದೇವತೆಗಳ ಅಸ್ತ್ರಗಳನ್ನು ಕೊಂಡೊಯ್ಯಬಹುದು" ಎಂದು ಹೆದರಿದರು. ಅವಸರದಿಂದ ದೇವತೆಗಳ ಶಸ್ತ್ರಾಸ್ತ್ರಗಳನ್ನೆಲ್ಲ ನೀರಿನಲ್ಲಿ ಕರಗಿಸಿ ಗಟಗಟ ಕುಡಿದುಬಿಟ್ಟರು.

ಹಲವು ಕಾಲ ಕಳೆಯಿತು. ದೇವತೆಗಳು ಅಲ್ಲಿಗೆ ಆಗಮಿಸಿದರು. ತಾವು ಹಿಂದೆ ಆಶ್ರಮದಲ್ಲಿ ಒಗೆದು ಹೋದ ಶಸ್ತ್ರಗಳನ್ನು ತೆಗೆದುಕೊಂಡು ಹೋಗುವ ತವಕ ಆ ಸುರಸತ್ತಮರಿಗೆ. ಅವರ ಜೊತೆಗೆ ಇದ್ದರು ಬೃಹಸ್ಪತ್ಯಾಚಾರ್ಯರು. ಆಶ್ರಮದ ಹೊರ ಅಂಗಳದಲ್ಲಿ ಹಾವು-ಮುಂಗಸಿಗಳು, ಹಸು-ಹುಲಿಗಳು, ನವಿಲು-ಸರ್ಪಗಳು, ಇಲಿ-ಬೆಕ್ಕುಗಳು, ಆನೆ-ಸಿಂಹಗಳು, ಪ್ರೀತಿಯಿಂದ ಒಡನಾಟವಾಡಿಕೊಂಡಿದ್ದವು. ಆ ಪುಣ್ಯಾಶ್ರಮದಲ್ಲಿ ಎಲ್ಲ ಪ್ರಾಣಿಗಳೂ ಜಾತಿದ್ವೇಷವನ್ನು ಮರೆತಿದ್ದವು. ಪ್ರೀತಿ ವಿಶ್ವಾಸದಿಂದ ಸರಸವಾಡುತ್ತಿದ್ದವು.

ಆ ಪುಣ್ಯಾಶ್ರಮದ ನಿರ್ವೈರ ವಾತಾವರಣವನ್ನು ಕಂಡು ಸಂತಸದುಂಬಿದ ದೇವತೆಗಳು ಆಶ್ರಮದ ಬಳಿಗೆ ಬಂದರು. ಚಂದ್ರಭಾಗಾ ಸಾಭ್ರಮತಿ ನದಿಗಳ ಸಂಗಮದ ರಂಗಸ್ಥಳದಲ್ಲಿ ಆ ಪುಣ್ಯಾಶ್ರಮ ಹೃದಯಂಗಮವಾಗಿ ಶೋಭಿಸುತ್ತಿತ್ತು. ಆಶ್ರಮದಲ್ಲಿ ವ್ಯಾಘ್ರಾಸನದಲ್ಲಿ ಸೂರ್ಯನಂತೆ ದೇದಿಪ್ಯಮಾನವಾಗಿ ಕಂಗೊಳಿಸುತ್ತಿದ್ದಾರೆ ದಧೀಚಿ ಮಹರ್ಷಿಗಳು, ಋಷಿಗಳ ಬದಿಯಲ್ಲಿಯೇ ಅವರ ಪತ್ನಿ ಸುವರ್ಚೆಯು

ಕುಳಿತುಕೊಂಡಿದ್ದಳು. ಚತುರ್ಮುಖ ಹಾಗೂ ಸಾವಿತ್ರಿಯರಂತೆ ತೋಭಿಸುವ ಆ ಋಷಿದಂಪತಿಗಳಿಗೆ ದೇವತೆಗಳು ನಮಸ್ಕರಿಸಿದರು ಮತ್ತು ಅಂದರು.

**ದೇವತೆಗಳು:-** ಸ್ವಾಮಿನ್ ! ನಾವು ಈ ಮೊದಲು ನಿಮ್ಮ ಆಶ್ರಮದಲ್ಲಿ ನಮ್ಮ ಶಸ್ತ್ರಾಸ್ತ್ರಗಳನ್ನು ತಂದಿರಿಸಿದ್ದೆವು ನೆನಪಿದೆಯಷ್ಟೆ? ಈಗ ನಮಗೆ ಮತ್ತೆ ಆ ದೈತ್ಯರಿಂದ ಭೀತಿ ಉಂಟಾಗಿದೆ. ದಯವಿಟ್ಟು ನಮ್ಮ ಅಸ್ತ್ರಗಳನ್ನು ನಮಗೆ ಮರಳಿ ಕೊಡಿರಿ.

**ದಧೀಚಿ:-** ನೀವು ಶಸ್ತ್ರ ಇಟ್ಟುಹೋದ ಬಳಿಕ ಇಲ್ಲಿಗೆ ಮರಳಿ ಬೇಗ ಬರಲಿಲ್ಲ. ದೈತ್ಯರು ಬಿಡಲಿಲ್ಲ. ಅವರು ಬಂದು ನಿಮ್ಮ ಅಸ್ತ್ರಗಳನ್ನು ಒಯ್ಯಬಹುದು ಎಂಬ ಹೆದರಿಕೆಯಿಂದ ನಾನು ಅವುಗಳನ್ನು ನೀರಿನಲ್ಲಿ ಕರಗಿಸಿ ಪೂರ್ತಿಯಾಗಿ ಕುಡಿದುಬಿಟ್ಟಿದ್ದೇನೆ.

**ದೇವತೆಗಳು:-** ಮುನಿಶ್ರೇಷ್ಠ ! ಹಾಗಿದ್ದರೆ ನೀವು ನಿಮ್ಮ ದೇಹದ ಮೂಳೆಗಳನ್ನೇ ಕೊಟ್ಟುಬಿಡಿರಿ. ಅವುಗಳಿಂದ ನಾವು ದೈತ್ಯರನ್ನು ಸಂಹರಿಸುತ್ತೇವೆ.

**ದಧೀಚಿ:-** ಆಗಲಿ. ನನ್ನ ಮೂಳೆಗಳನ್ನೇ ನಿಮಗೆ ಕೊಡುವೆನು.

ಹೀಗೆ ಹೇಳಿ ದಧೀಚಿ ಋಷಿಯು ತನ್ನ ಪತ್ನಿಯನ್ನು ಬೇರೆಡೆಗೆ ಕಳಿಸಿದ. ಮತ್ತು ದೇವತೆಗಳಿಗೆ ಹೇಳಿದ. ''ದೇವತೆಗಳೇ ! ನಾನಂತೂ ಕುಡಿದು ಬಿಟ್ಟಿದ್ದೇನೆ ನಿಮ್ಮ ಆಯುಧಗಳನ್ನು, ನೀವು ನನ್ನ ಮೂಳೆಗಳನ್ನು ತೆಗೆದುಕೊಳ್ಳಿರಿ'' ಎಂದು.

**ದೇವತೆಗಳು:-** ಸ್ವಾಮಿ ! ತಾವು ಬದುಕಿ ಇರುವಾಗ ತಮ್ಮ ಮೂಳೆಗಳನ್ನು ನಾವು ತೆಗೆದುಕೊಳ್ಳುವದು ಎಂತು?

**ದಧೀಚಿ:-** ಒಂದು ಕ್ಷಣ ನಿಲ್ಲಿರಿ. ನಾನು ಸ್ವಸಂತೋಷದಿಂದಲೇ ಯೋಗಾಸನದಿಂದ ಪ್ರಾಣತ್ಯಾಗ ಮಾಡುತ್ತೇನೆ.

ಹೀಗೆ ಹೇಳಿ ದಧೀಚಿಗಳು ಯೋಗಾರೂಢರಾದರು. ಯೋಗಬಲದಿಂದ ತಮ್ಮ ಪಾಂಚಭೌತಿಕ ಶರೀರವನ್ನು ತ್ಯಾಗಮಾಡಿ ಬ್ರಹ್ಮಲೋಕವನ್ನು ಕುರಿತು ಪಯಣ ಬೆಳೆಸಿದರು. ಅವರ ದೇಹವು ಹೆಣವಾಗಿ ಬಿದ್ದಿತು.

ಆಗ ಆ ಸುರಾಧೀಶ್ವರರು ''ಮಾಂಸಮೆತ್ತಿದ ಈ ಮುನಿಯ ಮೂಳೆಗಳನ್ನು ಉಪಯೋಗಿಸುವದು ಎಂತು?'' ಎಂದು ಯೋಚಿಸಿದರು. ಅನಂತರ ಕಾಮಧೇನುವನ್ನು ಕರೆದ ಶಚೀಪತಿ. ದಧೀಚಿ ಮುನಿಯ ಎಲವುಗಳನ್ನೆಲ್ಲ ನೆಕ್ಕಿ ಸ್ವಚ್ಛ ಮಾಡಲು ಹೇಳಿದ. ಅದರಂತೆ ಕಾಮಧೇನುವು ಮುನಿಯ ಮೂಳೆಗಳನ್ನೆಲ್ಲ ನೆಕ್ಕಿ ಸ್ವಚ್ಛ ಮಾಡಿತು. ಮುಂದೆ ದೇವತೆಗಳು ಸ್ವಚ್ಛವಾದ ಮುನಿಯ ಅಸ್ಥಿಗಳಿಂದ ಬಗೆ ಬಗೆಯ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸಿಕೊಂಡರು ದೇವ ಬಡಿಗಿಯಿಂದ. ಮುನಿಯ ಮೂಳೆಗಳಿಂದ ನಿರ್ಮಾಣಗೊಂಡ ಅಸ್ತ್ರಗಳಲ್ಲಿ ಬ್ರಹ್ಮಾಸ್ತ್ರವು ಪ್ರಧಾನ ಅಸ್ತ್ರ. ಅನಂತರ ಬಗೆಬಗೆಯ ಶಸ್ತ್ರಾಸ್ತ್ರಗಳನ್ನು ಮಾಡಿಕೊಂಡು ದೇವತೆಗಳು ವೃತ್ರಾಸುರನನ್ನು ಆ ಪುಣ್ಯಾಸ್ತ್ರ ಪ್ರಭಾವದಿಂದ ಗೆದ್ದರು. ದೇವತೆಗಳು ಅತ್ತ ಹೋದ ಬಳಿಕ ಆಶ್ರಮಾಂತರಕ್ಕೆ ದೇವತಾಕಾರ್ಯ ಸಿದ್ಧಿಗಾಗಿ ಹೋದ ಋಷಿಪತ್ನಿ ಸುವರ್ಚೆ ಆಶ್ರಮಕ್ಕೆ ಬಂದಳು.

ಬರುವಷ್ಟರಲ್ಲಿ ದಧೀಚಿಗಳು ಹೆಣವಾಗಿ ಮಲಗಿದ್ದರು. ಅವನ ಮಾಂಸ ಮೂಳೆಗಳೂ ಕೂಡ ಇಲ್ಲದಂತಾಗಿದ್ದವು. ಕೇವಲ ತೊಗಲು, ಮಜ್ಜೆ, ಹೊಟ್ಟೆ, ಕರುಳುಗಳಿಂದ

ಅವಶಿಷ್ಟವಾದ ಋಷಿ ಶರೀರ ಅಲ್ಲಿ ಬಿದ್ದಿತ್ತು. ಅದರಿಂದ ಸಿಟ್ಟು ಬಂದಿತು ಆ ಸತೀ ಶಿರೋಮಣಿಗೆ. ''ನೀವೆಲ್ಲರೂ ಸಂತಾನ ಹೀನರಾಗಿರಿ'' ಎಂದು ಶಾಪ ನೀಡಿದಳು ಮತ್ತು ಇದೇ ಸಾಭ್ರಮತಿ ನದಿಯ ತೀರದಲ್ಲಿರುವ ಅರಳಿ ಗಿಡದ ಅಡಿಯಲ್ಲಿ ಕುಳಿತಳು.

ಆಗ ಅವಳು ತುಂಬು ಗರ್ಭಿಣಿ. ಆದರೂ ಪತಿ ಇಲ್ಲದೇ ಬದುಕುವದೇ ಅಶಕ್ಯ ಎನಿಸಿತವಳಿಗೆ. ಬದುಕಿ ಪತಿಯ ವಿರಹದ ಬೆಂಕಿಯಲ್ಲಿ ಬೇಯುವದಕ್ಕಿಂತ ಅವನ ಜೊತೆಗೆ ಅವನ ಚಿಂತೆಯಲ್ಲಿಯೇ ಅವನ ದೇಹದೊಡನೆ ಬೆಂದು ಹೋಗುವದು ಶ್ರೇಯಸ್ಕರ ಮತ್ತು ಹಿತಕರ ಎನಿಸಿತು. ಆದರೆ ಗರ್ಭಿಣಿಯರು ಸಹಗಮನ ಮಾಡಬಾರದು ಎಂಬ ಋಷಿಗಳ ಮಾತು ಒಂದು ಕ್ಷಣ ಅವಳನ್ನು ತಡೆಯಿತು. ತನ್ನ ಸಹಗಮನಕ್ಕೆ ಪ್ರತಿಬಂಧಕವಾಗಿರುವ ತನ್ನ ಗರ್ಭದ ಮೇಲೆ ಸಿಟ್ಟು ಬಂದಿತವಳಿಗೆ. ಅಲ್ಲಿಯೇ ತನ್ನ ಗರ್ಭಕ್ಕೆ ಗುದ್ದಿಕೊಂಡಳು. ಇದರಿಂದ ಅವಳ ಜಠರದಿಂದ ಗರ್ಭವು ಹೊರಬಂದಿತು. ಸಾಕ್ಷಾತ್ ರುದ್ರದೇವರೇ ಅವಳ ಮಗನಾಗಿ ಹುಟ್ಟಿಬಂದಿದ್ದ. ಮುಂದೆ ಪಿಪ್ಪಲಾದ ಎಂಬ ಹೆಸರಿನಿಂದ ಪ್ರಸಿದ್ಧನಾದ.

ತಾಯಿ ಸುವರ್ಚೆಗೆ ಹೀಗೆ ತನ್ನ ಪ್ರಹಾರದಿಂದ ಗರ್ಭಚ್ಯುತನಾದ ಮಗನನ್ನು ಕಂಡು ಕೆಡುಕೆನಿಸಿ ನುಡಿದಳು. ''ನೀನು ಈ ಪಿಪ್ಪಲ ವೃಕ್ಷದ ಹಣ್ಣು ಕಾಯಿ ತಿಂದು ಬದುಕು. ಪಿಪ್ಪಲಾದ ಎಂದೇ ನಿನಗೆ ಹೆಸರಾಗಲಿ. ಈ ಅಶ್ವತ್ಥ ವೃಕ್ಷದಲ್ಲಿಯೇ ಚಿರಕಾಲ ಸನ್ನಿಹಿತನಾಗು. ಅಶ್ವತ್ಥ ನಾರಾಯಣನ ಸೇವೆ ಮಾಡುವವರಿಗೆ ಶೀಘ್ರ ಫಲನೀಡು.''

ಹೀಗೆ ಹೇಳಿ, ಸುವರ್ಚೆಯು ಚಿತಾರೋಹಣ ಮಾಡಿದಳು. ದಧೀಚಿ ಮುನಿಯ ಶವದೊಂದಿಗೆ. ಚಿತಾಗ್ನಿಯಲ್ಲಿ ಬೆಂದು ಊರ್ಧ್ವಲೋಕದಲ್ಲಿ ಮತ್ತೆ ತನ್ನ ಮನದನ್ನನೊಂದಿಗೆ ಮಧುರಮಿಲವನ್ನು ಮರಳಿ ಹೊಂದಿದಳು.

ಅನಂತರ ದೇವತೆಗಳು ದಧೀಚಿ ಮುನಿಯ ಮೂಳೆಗಳಿಂದ ರಚಿತವಾದ ಅಸ್ತ್ರಗಳಿಂದ ದೈತ್ಯರನ್ನು ಗೆದ್ದು ಮತ್ತೆ ದಧೀಚಿಗಳ ಸಾಭ್ರಮತಿ ತೀರದ ಆಶ್ರಮಕ್ಕೆ ಬಂದರು. ದಧೀಚಿ ಋಷಿಗಳು ಪ್ರಾಣಪರಿತ್ಯಾಗ ಮಾಡಿದ ಸ್ಥಳದಲ್ಲಿ ಅವರ ಮೂಳೆಯನ್ನು ನೆಕ್ಕಿದ ಕಾಮಧೇನು ನಿಂತಿತ್ತು. ಅದರ ಕೆಚ್ಚಲಿನಿಂದ ಹಾಲು ಸುರಿಯಿತು. ಆ ಹಾಲಿನಿಂದಲೇ ಒಂದು ಶುಭ್ರವಾದ ಲಿಂಗವು ಉದ್ಭೂತವಾಯಿತು. ಆ ಲಿಂಗವೇ ಸಾಭ್ರಮತಿ ತೀರದಲ್ಲಿ 'ದುಗ್ಧೇಶ್ವರ' ಎಂದು ಪ್ರಸಿದ್ಧವಾಗಿರುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ದಧೀಚಿ ವೃತ್ತಾಂತ ದುಗ್ಧೇಶ್ವರ ಮಾಹಾತ್ಮ್ಯ ಎಂಬ ನೂರಐವತ್ತೆರಡನೇಯ ಅಧ್ಯಾಯ ಮುಗಿದುದು*

—o—

**ಮಹಾದೇವ:-** ದುಗ್ಧೇಶ್ವರ ತೀರ್ಥದ ಪೂರ್ವದಲ್ಲಿ ಚಂದ್ರಭಾಗಾ ನದಿಯು ಸಾಭ್ರಮತಿಗೆ ಬಂದು ಕೂಡುತ್ತದೆ. ಅಲ್ಲಿ ಚಂದ್ರನು ಹಿಂದೆ ತಪಸ್ಸುಮಾಡಿ ಸ್ಥಾಪಿಸಿದ ಲಿಂಗವು ಚಂದ್ರೇಶ್ವರ ಎಂದು ಪ್ರಖ್ಯಾತವಾಗಿದೆ.ಶುಕ್ರಾಚಾರ್ಯರು ಇಲ್ಲಿ ಬಂದು ಬಹುಕಾಲ ತಪಸ್ಸು ಮಾಡಿದ್ದರಿಂದ ಈ ತೀರ್ಥಕ್ಕೆ ಹೆಚ್ಚಿನ ಪಾವಿತ್ರ್ಯ ಬಂದಿತು. ಇಲ್ಲಿ ಸ್ನಾನ, ದಾನ, ಪಿಂಡಪ್ರದಾನಾದಿಗಳನ್ನು ಮಾಡಿದವರು ವಿಷ್ಣುಲೋಕಕ್ಕೆ ಹೋಗುತ್ತಾರೆ. ಇಲ್ಲಿ ಅರಳಿ ಗಿಡವನ್ನು ಹಚ್ಚಿದವರು ಶಿವಪದವನ್ನು ಹೊಂದುತ್ತಾರೆ.

**ಪಿಪ್ಪಲಾದ ತೀರ್ಥ:-** ಹಿಂದೆ ದಧೀಚಿ ಋಷಿಗಳು ಅತ್ಯುಗ್ರವಾದ ತಪಸ್ಸನ್ನು ಆಚರಿಸಿದರು. ಆಗ ಕೋಲಾಸುರ ಎಂಬ ದೈತ್ಯನು ಮೇಲಿಂದ ಮೇಲೆ ಬಂದು ಮುನಿಗಳ ತಪಸ್ಸಿಗೆ ವಿಘ್ನವನ್ನು ಉಂಟುಮಾಡತೊಡಗಿದ. ಅದನ್ನು ಕಂಡು ಋಷಿ ಪುತ್ರನಾದ ಕಹೋಡನು ಒಂದು ಕೃತ್ಯೆಯನ್ನು ನಿರ್ಮಿಸಿ ಅದರಿಂದ ಕೋಲಾಸುರನನ್ನು ಸಂಹಾರ ಮಾಡಿಸಿದ. ಮುಂದೆ ಆ ತೀರ್ಥಕ್ಕೆ ಪಿಪ್ಪಲಾದ ತೀರ್ಥ ಎಂದು ಹೆಸರಾಯಿತು.

**ನಿಂಬಾರ್ಕ ತೀರ್ಥ:-** ಈ ಪಿಪ್ಪಲಾದ ತೀರ್ಥದ ಮುಂದೆ ಪಿಚುಮಂದಾರ್ಕ ತೀರ್ಥ ಇದೆ. ಈ ಸಾಭ್ರಮತಿ ತೀರದಲ್ಲಿ ಬಹು ಪೂರ್ವಕಾಲದ ಹಿಂದೆ ನಡೆದ ಸುರಾಸುರ ಸಂಗ್ರಾಮದಲ್ಲಿ ದೈತ್ಯರಿಗೆ ಗೆಲವು, ದೇವತೆಗಳಿಗೆ ಸೋಲು ಉಂಟಾಯಿತು. ದೈತ್ಯ ವೀರರನ್ನು ಎದುರಿಸಲು ಹೆದರಿದರು ಎಲ್ಲ ಅಮರರು. ಮತ್ತು ದಿಕ್ಕುದಿಕ್ಕಿಗೆ ಚದುರಿದರು. ಅವರಲ್ಲಿ ಕೆಲವರು ಸೂಕ್ಷ್ಮರೂಪ ತೆಗೆದುಕೊಂಡು ಮರಗಳಲ್ಲಿ ಮರೆಯಾದರು. ಬಿಲ್ವಮರದಲ್ಲಿ ಮಹಾದೇವ ಮರೆಯಾದ. ಅರಳಿ ಗಿಡದಲ್ಲಿ ಹರಿ ಅಡಗಿದ. ಶಿರೀಷ ವೃಕ್ಷದಲ್ಲಿ ಇಂದ್ರ ಲೀನನಾದ. ಬೇವಿನ ಮರದಲ್ಲಿ ಸೂರ್ಯ ಅಂತರ್ಹಿತನಾದ. ಮುಂದೆ ಈ ಭಯಂಕರ ಕದನ ಕೋಲಾಹಲವುಂಟುಮಾಡಿ ದೇವತೆಗಳನ್ನು ಓಡಿಸಿದ 'ಕೋಲಾಹಲ' ಎಂಬ ದೈತ್ಯನನ್ನು ಸರ್ವಸಮರ್ಥನಾದ ಶ್ರೀಹರಿಯು ಕೊಂದು ಹಾಕಿದ. ಬಳಿಕ ಬೇರೆ ಬೇರೆ ವೃಕ್ಷಗಳಲ್ಲಿ ಆಶ್ರಯ ಪಡೆದ ದೇವತೆಗಳೆಲ್ಲರೂ ಆಯಾ ವೃಕ್ಷರೂಪರೇ ಆಗಿಬಿಟ್ಟರು. ಅಶ್ವತ್ಥ ವಿಷ್ಣುಮಯ, ಬಿಲ್ಲವು ಶಂಭುರೂಪ. ಬೇವು ಸೂರ್ಯಸ್ವರೂಪವಾಯಿತು.

ಸೂರ್ಯನು ಈ ಬೇವಿನ ಮರದಲ್ಲಿ ಹಿಂದೆ ವಿಶ್ರಾಂತಿ ಹೊಂದಿದ್ದರಿಂದ ಪರಮ ಪವಿತ್ರವಾಗಿ ಸೂರ್ಯರೂಪವನ್ನು ಪಡೆದ ಬೇವಿನಮರವು ಸಾಭ್ರಮತಿಯ ತೀರದಲ್ಲಿ ರೋಗ-ಹರವಾಗಿ ನಿಂತುಕೊಂಡಿದೆ. ಇದರ ಮುಂದೆ ಇರುವ ಪಿಚುಮಂದಾರ್ಕ ತೀರ್ಥವು ಸ್ನಾನ ಮಾಡಿದವರ ರೋಗ ಕಳೆಯುತ್ತದೆ. ಇಲ್ಲಿ ಸ್ನಾನ ಮಾಡಿ

**ಆದಿತ್ಯಂ ಭಾಸ್ಕರಂ ಭಾನುಂ ರವಿಂ ವಿಶ್ವಪ್ರಕಾಶಕಂ ।**
**ತೀಕ್ಷ್ಣಾಂಶುಂ ಚೈವ ಮಾರ್ತಂಡಂ ಸೂರ್ಯಂ ಚೈವ ಪ್ರಭಾಕರಂ ॥**
**ವಿಭಾವಸುಂ ಸಹಸ್ರಾಕ್ಷಂ ತಥಾ ಪೂಷಣ ಮೇವ ಚ ।**

ಎಂಬ ಸೂರ್ಯನ ಹನ್ನೆರಡು ನಾಮಗಳನ್ನು ಪಠಿಸಿದವರು ಸಂತಾನ ಸಂಪತ್ತು ಸೌಭಾಗ್ಯಗಳನ್ನು ಪಡೆಯುತ್ತಾರೆ.

**ಕೋಟರಾ ತೀರ್ಥ ಮಹಿಮೆ:-** ಪೂರ್ವಕಾಲದಲ್ಲಿ ಅನಿರುದ್ಧನು ಉಷಾದೇವಿಯ ಪ್ರೇಮವಶನಾಗಿ ಬಾಣಾಸುರನ ಅಂತಃಪುರದಲ್ಲಿ ಕೈದಿಯಾಗಿ ಇರಬೇಕಾಯಿತು. ಆಗ ಅನಿರುದ್ಧನು ಕೋಟರಾಕ್ಷಿ ದೇವಿಯನ್ನು ಸ್ಮರಣೆ ಮಾಡಿದ ಕೂಡಲೇ ಆ ವೈಷ್ಣವೀ ಶಕ್ತಿಯು ಅನಿರುದ್ಧನ ರಕ್ಷಣೆಗಾಗಿ ಜಾಗರೂಕಳಾದಳು. ಆದುದರಿಂದ ಬಾಣಾಸುರನನ್ನು ಗೆದ್ದು ತಿರುಗಿ ಬರುವಾಗ ಶ್ರೀಕೃಷ್ಣನು ಈ ಸಾಭ್ರಮತಿ ತೀರದಲ್ಲಿ ಅವಳನ್ನು ಪ್ರತಿಷ್ಠಾಪಿಸಿದ. ಅವಳ ಹೆಸರಿನ ಇಲ್ಲಿಯ ಕೋಟರಾ ತೀರ್ಥದಲ್ಲಿ ಸ್ನಾನಮಾಡಿ ಕೃಷ್ಣನಿಂದ ಪ್ರತಿಷ್ಠಾಪಿತವಾದ ಕೋಟರಾಕ್ಷಿಯ ಮುಖವನ್ನು ನೋಡಿದವರು ವಿಪುಲವಾದ ಐಶ್ವರ್ಯವನ್ನು ಹೊಂದುತ್ತಾರೆ.

**ಕೋಟರಾಕ್ಷೀ ವಿಶ್ವರೂಪಾ ಮಹಾಮಾಯಾ ಬಲಾದಿಕಾ ।**
**ತ್ರಿಪುರಾ ತ್ರಿಪುರಘ್ನೀಶ ಶಿವಾವೈ ಶಿವರೂಪಿಣಿ ॥**
**ಕನ್ಯಾ ಸಾರಸ್ವತೀ ಪ್ರೋಕ್ತಾ ದುರ್ಗಾ ದುರ್ಗತಿ ಹಾರಿಣೀ ।**
**ಭೈರವೀ ಭೈರವಾಕ್ಷೀ ಚ ಲಕ್ಷ್ಮೀದೇವಿ ಜನಪ್ರಿಯಾ ॥**

ಅನಿರುದ್ಧನು ಮಾಡಿದ ಈ ಕೋಟರಾಕ್ಷೀ ಸ್ತೋತ್ರವನ್ನು ಪಠಿಸಿದವರು ಎಲ್ಲ ಕಷ್ಟ ಕ್ಲೇಶಗಳಿಂದ ಪಾರಾಗುತ್ತಾರೆ.

**ವಾಮನ ತೀರ್ಥ ಮಾಹಾತ್ಮ್ಯ:-** ಇದರ ಮುಂದೆ ತೀರ್ಥರಾಜ ಎಂದು ಹೆಸರಾದ ವಾಮನ ತೀರ್ಥವು ವಿರಾಜಿಸುತ್ತಿದೆ. ಅದರಲ್ಲಿ ಚಂದನೋದಕವನ್ನು ಬೆರೆಸಿದ ಏಳು ನದಿಗಳು ಪ್ರವಹಿಸುತ್ತವೆ. ಮಾಘಶುಕ್ಲ ದ್ವಾದಶಿಯ ದಿನ ಈ ತೀರ್ಥರಾಜನಾದ ವಾಮನ ತೀರ್ಥದಲ್ಲಿ ಸ್ನಾನಮಾಡಿ ಎಳ್ಳಿನಿಂದ ಮಾಡಿದ ಹಸುವನ್ನು ದಾನಮಾಡಿದವನು, ಪಾಯಸದಿಂದ ಬ್ರಾಹ್ಮಣ ಭೋಜನ ಮಾಡಿಸಿದವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ.

**ಸೋಮತೀರ್ಥದ ಮಹಿಮೆ:-** ಇಲ್ಲಿಂದ ಮುಂದೆ ಸಾಭ್ರಮತಿ ತೀರದಲ್ಲಿ ಗುಪ್ತವಾದ ಸೋಮ ತೀರ್ಥಕ್ಕೆ ಪಯಣಿಸಬೇಕು. ಹಿಂದೆ ಕೌಶೀತಕ ಋಷಿಯು ತರಗೆಲೆ ಗಳನ್ನು ತಿಂದು, ಗಾಳಿಕುಡಿದು, ಉಪವಾಸವಿದ್ದು ಬಹು ಯುಗಗಳ ಪರ್ಯಂತ ತಪಸ್ಸನ್ನು ಮಾಡಿದ. ಅವನ ತಪಸ್ಸಿಗೆ ಪ್ರಸನ್ನನಾಗಿ ಪರಮೇಶ್ವರನು ಬೇಕಾದ ವರ ಬೇಡು ಎಂದು ಹೇಳಿದ. ಆ ಕೌಶೀತಕ ಮುನಿಯು 'ಈ ಸ್ಥಳದಲ್ಲಿ ಸೋಮೇಶ್ವರ ಎಂಬ ಲಿಂಗವು ಉದ್ಭೂತವಾಗಲಿ' ಎಂದು ಕೇಳಿದ. ಅವನ ಅಪೇಕ್ಷೆಯಂತೆ ಇಲ್ಲಿ ಉದ್ಭವಿಸಿದ ಲಿಂಗಕ್ಕೆ ಸೋಮೇಶ್ವರ ಎಂದೂ ಇಲ್ಲಿಯ ತೀರ್ಥಕ್ಕೆ ಸೋಮೇಶ್ವರ ತೀರ್ಥ ಎಂದೂ ಪ್ರಸಿದ್ಧಿಯಾಯಿತು.

**ಕಾಪೋತ ತೀರ್ಥ:-** ಸಾಭ್ರಮತಿ ತೀರದಲ್ಲಿ ಒಂದು ಅತ್ಯಂತ ಹಳೆಯದಾದ ವಟವೃಕ್ಷವು ಇರುತ್ತದೆ. ಬಹಳ ಹಿಂದಿನ ಕಾಲದಲ್ಲಿ ಆ ವಟವೃಕ್ಷದ ಒಂದು ಟೊಂಗೆಯಲ್ಲಿ ಒಂದು ಪಾರಿವಾಳವು ಗೂಡು ಕಟ್ಟಿಕೊಂಡು ಮಡದಿ ಮಕ್ಕಳೊಂದಿಗೆ ವಾಸವಾಗಿದ್ದಿತು. ಒಂದು ದ್ವಾದಶೀ ದಿನ ಅಲ್ಲಿಗೆ ಒಂದು ಗಿಡಗವು ಅತಿಥಿಯಾಗಿ ಬಂದಿತು. ಕಪೋತಕ್ಕೆ ಹೇಳಿತು.

**ಗಿಡಗ:-** ಕಪೋತ ! ನಾನು ನಿನ್ನ ಮನೆಗೆ ಇಂದು ಅತಿಥಿಯಾಗಿ ಬಂದಿದ್ದೇನೆ. ಅತಿಥಿಗಳಿಗೆ ಅತಿಥ್ಯ ನೀಡುವದು ನಿನ್ನ ಕರ್ತವ್ಯ. ಇಂದು ದ್ವಾದಶಿ ತಿಥಿ. ವಿಷ್ಣುವಿನ ದಿನ. ಹಸಿದು ಬಂದ ನನಗೆ ನಿನ್ನ ದೇಹದ ಮಾಂಸವನ್ನು ಕೊಟ್ಟು ತೃಪ್ತಿಪಡಿಸು.

ಪರಮ ವಿಷ್ಣುಭಕ್ತನಾದ ಆ ಕಪೋತವು ಆ ಗಿಡಗಕ್ಕೆ ತನ್ನ ದೇಹದ ಮಾಂಸವನ್ನು ಕೊಟ್ಟು ಅತಿಥಿ ಸತ್ಕಾರ ಮಾಡಿತು. ಅನಂತರ ಆ ಪಾರಿವಾಳವು ತನ್ನ ದೇಹದಾನದ ಪುಣ್ಯದಿಂದ ವಿಷ್ಣುಲೋಕಕ್ಕೆ ಪಯಣಿಸಿತು. ಇಲ್ಲಿ ಇರುವ ಕಾಪೋತ ತೀರ್ಥದಲ್ಲಿ ವೈಶಾಖದಲ್ಲಿ ಸ್ನಾನ, ಬಿಳಿ ಸಾಸುವೆಯಿಂದ ದೇವರಪೂಜೆ, ಪಿತೃತರ್ಪಣ ಪಿಂಡಪ್ರದಾನ, ಕಾಗೆಗಳಿಗೆ ಬಲಿ, ನಾಯಿಗಳಿಗೆ ಆಹಾರ ನೀಡಿದವರು ತಾವು ಉದ್ಧೃತರಾಗಿ ತಮ್ಮ ಪಿತೃಗಳನ್ನೂ ಉದ್ಧಾರ ಮಾಡುವರು.

**ಗೋತೀರ್ಥ ಮಹಿಮೆ:-** ಇದರ ಮುಂದೆ ಕಾಶ್ಯಪ ಹೃದದ ಹಿಂದೆ ಇರುವ ಗೋತೀರ್ಥದಲ್ಲಿ ಸ್ನಾನ ಮಾಡಿ ಗೋಗ್ರಾಸ ನೀಡಿದವರು ಗೋದಾನ ಮಾಡಿದವರು ಗೋಮಾತೆಯರ ಪರಮ ಪ್ರಸಾದವನ್ನು ಹೊಂದುತ್ತಾರೆ.

**ಕಾಶ್ಯಪ ಹೃದದ ಮಹಿಮೆ:-** ಹಿಂದೆ ಕಶ್ಯಪ ಋಷಿಗಳು ಉಗ್ರತರವಾದ ತಪಗೈದು ಶಂಕರನ ಜಡೆಯಿಂದ ಗಂಗೆಯನ್ನು ಭೂಮಿಗೆ ಬರಮಾಡಿಕೊಂಡರು. ಕಶ್ಯಪ ಮುನಿಗಳು ಶಿವನ ಜಟಾಮಂಡಲದಿಂದ ಗಂಗೆ ಇಳಿದು ಬಂದಕೂಡಲೇ ಅಲ್ಲೇ ಒಂದು ದೊಡ್ಡ ಸರೋವರವನ್ನು ನಿರ್ಮಿಸಿದರು. ಅದೇ 'ಕಶ್ಯಪ ಹೃದ' ಎಂದು ಪ್ರಸಿದ್ಧವಾಗಿದೆ. ಕುಶೇಶ್ವರನನ್ನು ದಂಡೆಯ ಮೇಲೆ ಸ್ಥಾಪಿಸಿದರು. ಇಲ್ಲಿ ಸ್ನಾನ ಗೋದಾನ, ಪಿತೃತರ್ಪಣಾದಿಗಳು ಪರಮ ಪುಣ್ಯಪ್ರದ.

ಇದರ ಮುಂದೆ ಇರುವ ಭೂತಾಲಯ ಎಂಟ ವಟವೃಕ್ಷ ಹಾಗೂ ಚಂದನ ವೃಕ್ಷಗಳು ಇರುವ ಭೂತಾಲಯ ತೀರ್ಥವೂ ಮತ್ತು ಘಟೇಶ್ವರ ತೀರ್ಥವೂ ಪರಮ ಪಾವನ.

**ಪಾಂಡುರಾರ್ಯಾ ತೀರ್ಥ:-** ಹಿಂದೆ ಧರ್ಮರಾಜನ ರಾಜಸೂಯಯಾಗದ ಮುನ್ನ ದಕ್ಷಿಣ ದಿಕ್ಕಿಗೆ ದಿಗ್ವಿಜಯಕ್ಕೆ ಹೊರಟ ನಕುಲ. ಇಲ್ಲಿಗೆ ಬಂದು ಸಾಭ್ರಮತಿಯ ತೀರದಲ್ಲಿ 'ಪಾಂಡುರಾರ್ಯಾ' ಎಂಬ ದೇವಿಯ ಸ್ಥಾಪನೆಗೈದ. ಇವಳ ಸೇವೆಯಿಂದ ಅಣಿಮಾದಿ ಅಷ್ಟಸಿದ್ಧಿಗಳು ಲಭಿಸುತ್ತವೆ.

ಇದರ ಮುಂದಿನ ಚಂಡೇಶ್ವರ ತೀರ್ಥ, ಗುಣಪತ್ಯ ತೀರ್ಥಗಳಲ್ಲಿ ಸ್ನಾನ ಮಾಡಿ ಚಂಡೇಶ್ವರ ಗುಣಪತ್ಯೇಶ್ವರ ದೇವರ ದರ್ಶನ ಮಾಡಿಕೊಂಡವರು ಶಿವ ಹಾಗೂ ಗಣಪತಿಯರ ಅನುಗ್ರಹದಿಂದ ಮುಕ್ತರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಚಂದ್ರೇಶ್ವರ ಚಂದ್ರಭಾಗಾ ಮಾಹಾತ್ಮ್ಯ ಎಂಬ ನೂರ ಐವತ್ತಮೂರನೇಯ ಅಧ್ಯಾಯ ಮುಗಿದುದು*

—o—

ಇಂದ್ರನಿಂದ ವೃತ್ರನ ಸಂಹಾರ

ಬ್ರಹ್ಮಹತ್ಯೆಯ ಪಾಪದ ಹಂಚಿಕೆ

ಅಧ್ಯಾಯ - ೧೫೪

**ಮಹಾದೇವ:-** ಪೂರ್ವಕಾಲದಲ್ಲಿ ದೇವೇಂದ್ರನಿಗೂ ವೃತ್ರಾಸುರನಿಗೂ ನಿರಕದ ಕಾಳಗ ಮಸಗಿತು. ಹತ್ತುಸಾವಿರದ ಹತ್ತುನೂರು ವರ್ಷಗಳಷ್ಟು ದೀರ್ಘಕಾಲ ಸಾಗಿತು ಆ ಘೋರ ಸಂಗ್ರಾಮ. ಕೊನೆಗೆ ಇಂದ್ರನ ಪಾಲಿಗೆ ಸೋಲಿನ ಮಾಲೆ. ಪರಾಭೂತನಾದ ಆ ಪುರಹೂತ ರಣಾಂಗಣವನ್ನು ಬಿಟ್ಟು ಪಲಾಯ ಸೂಕ್ತ ಪಠಿಸಿದ. ಸಾಭ್ರಮತಿಯು ವಾರ್ತಘ್ನಿ ಎಂಬ ನದಿಯೊಂದಿಗೆ ಸಂಗಮಿಸಿದ ಈ ಪುಣ್ಯತೀರ್ಥಕ್ಕೆ ಬಂದು ಮಹಾದೇವನನ್ನು ಕುರಿತು ತಪಸ್ಸು ಮಾಡಿದ. ಶಚೀಪತಿಯ ತಪಸ್ಸಿಗೆ ಒಲಿದ ಪರಮೇಶ್ವರ. ಅಂತರಿಕ್ಷದಲ್ಲಿ ನಿಂತು ಅವನಿಗೆ ದರ್ಶನ ನೀಡಿದ. ಆಗ ಈ ಸಾಭ್ರಮತಿಯ ನದಿಯ ತೀರದಲ್ಲಿ ಮುಗಿಲಿನಲ್ಲಿ ಬಂದು ನಿಂತುಕೊಂಡ ಮಹಾದೇವನ ಮೈಯಿಂದ ಭಸ್ಮ ಉದುರಿತು. ಆದರಿಂದ ಭಸ್ಮಗಾತ್ರ ಎಂಬ ಲಿಂಗವು ರೂಪಗೊಂಡಿತು. ಬ್ರಹ್ಮದೇವರು ಅದಕ್ಕೆ ಭೂತೇಶ್ವರ ಎಂದು ಹೆಸರಿಟ್ಟು ಸಾಭ್ರಮತಿ ವಾರ್ತಘ್ನಿ ನದಿಗಳ ಸಂಗಮ ಸ್ಥಳದಲ್ಲಿ ಪ್ರತಿಷ್ಠೆಗೈದರು. ಆ ದೇವೇಂದ್ರನ ತಪಸ್ಸಿನಿಂದ ಪ್ರಸನ್ನನಾಗಿ ಬಂದು ನಿಂತ ನಾನು (ಪರಮೇಶ್ವರ) ಆ ಸುರರಾಜನಿಗೆ ವಜ್ರಾಯುಧವನ್ನು ಕೊಟ್ಟು ಅದರಿಂದ ವೃತ್ರಾಸುರನನ್ನು ಸಂಹರಿಸಲಿಕ್ಕೆ ಹೇಳಿದೆ. ಆಗ ಆ ಶಚೀಪತಿಯು ನಾನು ನೀಡಿದ ಆ ವಜ್ರಾಯುಧವನ್ನು ತೆಗೆದುಕೊಂಡು ವೃತ್ರನೊಡನೆ ಯುದ್ಧಕ್ಕೆ ತೆರಳಿದ. ಸಮುದ್ರ ತೀರದಲ್ಲಿ ಆ ಸ್ವರ್ಗಾಧಿಪತಿಗೂ ದೈತ್ಯಸಾರ್ವಭೌಮನಾದ ವೃತ್ರನಿಗೂ ಸಮರವು ನಡೆಯಿತು. ದೇವೇಂದ್ರನು ದಾರುಣವಾದ ಆ ವಜ್ರಾಯುಧದಿಂದ ವೃತ್ರಾಸುರನನ್ನು ಹೊಡೆದು ಸಂಹರಿಸಿದ. ಇಂದ್ರನ ಮೇಲೆ ಅಂತರಿಕ್ಷದಿಂದ ಪುಷ್ಪವೃಷ್ಟಿ ಆಯಿತು. ದೇವದುಂದುಭಿಗಳು ಮೊಳಗಿದವು.

ಆದರೆ ವೃತ್ರಾಸುರನ ಶರೀರದಿಂದ ಬ್ರಹ್ಮಹತ್ಯಾ ಪಾಪವು ಒಂದು ಕರಾಳ ಕೃತ್ಯೆಯ ರೂಪದಿಂದ ಹೊರಹೊಮ್ಮಿತು. ನೆತ್ತರು ಬಸಿಯುವ ವಿಕೃತ ದೇಹದ ಕರಾಳ ಮುಖದ ಕರಿಬಣ್ಣದ ಆ ಕೃತ್ಯೆಯು ತನ್ನ ಕೊರಳಲ್ಲಿ, ತಲೆಬುರುಡೆಯ ಮಾಲೆಯನ್ನು ಹಾಕಿಕೊಂಡು ಭೀಕರವಾದ ಆಕಾರದಿಂದ ಹಾಗೂ ಮೀನದ ವಾಸನೆಯಿಂದ ಗುಡುಗಿನಂತಹ ಘೋರ ಸ್ವರದಿಂದ ಎಲ್ಲರನ್ನೂ ಹೆದರಿಸುತ್ತ ಇಂದ್ರನನ್ನು ಹುಡುಕತೊಡಗಿತು. ಓಡುತ್ತಿರುವ ಇಂದ್ರ ಬೆನ್ನು ಹತ್ತಿ ಅವನ ಕೊರಳಿಗೆ ತೆಕ್ಕೆ ಬಿದ್ದಿತು. ಅದರಿಂದ ಮತ್ತಿಷ್ಟು ಹೆದರಿದ ಆ ಸುರೇಶ್ವರ ಓಡಿಹೋಗಿ ಒಂದು ಕಮಲದ ದೇಟಿನ ಒಳಗೆ ಅನೇಕ ವರ್ಷಗಳ ಕಾಲ ಅಡಗಿ ಕುಳಿತ. ಇಷ್ಟಾದರೂ ಅನೇಕ ವರ್ಷಕಾಲ ಆ ಬ್ರಹ್ಮಹತ್ಯೆ ಅವನನ್ನು ಬಿಡಲಿಲ್ಲ. ಅನಂತರ ಇಂದ್ರನು ಮೇಕೆಯ ರೂಪ ಧರಿಸಿ ಬ್ರಹ್ಮದೇವರ ಬಳಿಗೆ ಬಂದು. "ಈ ಬ್ರಹ್ಮಹತ್ಯೆಯಿಂದ ನನಗೆ ಬಿಡುಗಡೆಯಾಗುವ ಬಗೆ ಎಂತು?" ಎಂದು ಕೇಳಿದ. ಸುರರಾಜನ ಈ ಶೋಚನೀಯ ಸ್ಥಿತಿಯನ್ನು ಕಂಡು ಮರುಗಿದ ಪಿತಾಮಹ. ಕರಗಿ ಅವರು ಬ್ರಹ್ಮಹತ್ಯೆಯನ್ನು ಕರೆದು ಕೇಳಿದರು.

**ಬ್ರಹ್ಮ:-** ಈ ದೇವರಾಜನನ್ನು ಬಿಟ್ಟುಬಿಡು. ನಿನಗೆ ಏನು ಬೇಕು ಹೇಳು. ನಿನ್ನ ಇಚ್ಛೆ ಪೂರ್ತಿಮಾಡುತ್ತೇನೆ.

**ಬ್ರಹ್ಮಹತ್ಯೆ:-** ಪಿತಾಮಹ, ನಿನ್ನ ಅಪ್ಪಣೆ ಶಿರಸಾಮಾನ್ಯ. ಈಗಲೇ ಬಿಟ್ಟು ಹೋಗುತ್ತೇನೆ ಈ ಪುರಂದರನ ಪಿಂಡವನು. ಆದರೆ ಇವನನ್ನು ತೊರೆದು ನಾನು ಹೋದಬಳಿಕ ನಾನು ಎಲ್ಲಿ ನೆಲೆನಿಲ್ಲಲಿ? ನನಗೆ ಎಲ್ಲಿಯಾದರೂ ಒಂದು ಆಶ್ರಯವನ್ನು ತೋರಿಸು.

ಆಗ ಬ್ರಹ್ಮನು ಅದರ ಮಾತು ಮನ್ನಿಸಿ ಅಗ್ನಿಯನ್ನು ಕರೆದು ಬ್ರಹ್ಮಹತ್ಯಾ ಪಾಪದ ಕಾಲು ಭಾಗವನ್ನು ಪರಿಗ್ರಹಿಸಲು ಹೇಳಿದ.

**ಅಗ್ನಿ** :- ಪ್ರಭು ! ನಿಮ್ಮ ಅಪ್ಪಣೆಯಂತೆ ನಾನೇನೋ ಈ ಘೋರಪಾಪದ ಏಕಚತುರ್ಥಾಂಶವನ್ನು ಪರಿಗ್ರಹಿಸುತ್ತೇನೆ. ಆದರೆ ಮುಂದೆ ನನಗೆ ಇದರಿಂದ ಬಿಡುಗಡೆ ಎಂತು? ಎಂದು? ಹೇಗೆ?

**ಬ್ರಹ್ಮ** :- ಹೋಮಕುಂಡವನ್ನು ಮಾಡಿ ಅಗ್ನಿಪ್ರತಿಷ್ಠೆ ಮಾಡಿ ಆ ಹೋಮಾಗ್ನಿಯು ಪ್ರಜ್ವಲಿತವಾದ ಬಳಿಕ ಸಮಿಧೆ, ದರ್ಭೆ ಮುಂತಾದವುಗಳನ್ನು ಹಾಕಿ ಯಾರು ಹೋಮ ಮಾಡುವದಿಲ್ಲವೋ ಅವರನ್ನು ನಿನ್ನ ಬ್ರಹ್ಮಹತ್ಯೆ ಹಿಡಿದುಕೊಳ್ಳಲಿ. ಉದ್ದೀಪಿತವಾದ ಅಗ್ನಿಯಲ್ಲಿ ಹೋಮ ಮಾಡದವರನ್ನು ನಿನ್ನ ಬ್ರಹ್ಮಹತ್ಯೆ ತಗಲಿಕೊಂಡು ನಿನ್ನನ್ನು ಬಿಟ್ಟುಬಿಡಲಿ.

ಅನಂತರ ಬ್ರಹ್ಮದೇವರ ಆದೇಶದಂತೆ ಅಗ್ನಿಯು ಅವರ ಮಾತಿಗೆ ಒಳಪಟ್ಟು ಇಂದ್ರನ ಬ್ರಹ್ಮಹತ್ಯೆಯ ಕಾಲುಭಾಗವನ್ನು ಸ್ವೀಕರಿಸಿದ.

ಅನಂತರ ವೃಕ್ಷ, ಔಷಧ, ಹುಲ್ಲುಗಳನ್ನು ಕರೆದು ಬ್ರಹ್ಮದೇವರು ಎರಡನೆಯ ಕಾಲು ಭಾಗ ಬ್ರಹ್ಮಹತ್ಯೆಯನ್ನು ಸ್ವೀಕರಿಸಲು ಹೇಳಿದರು. ಕಾರಣವಿಲ್ಲದೇ ವ್ಯರ್ಥವಾಗಿ ಈ ಮರಗಿಡ, ಹುಲ್ಲು, ಬಳ್ಳಿಗಳನ್ನು ಯಾರು ಕಡಿಯುವರೋ ಅವರಿಗೆ ಈ ಬ್ರಹ್ಮಹತ್ಯೆಯ ಪಾಪವು ಹೋಗಿ ಸೇರಬೇಕು ಎಂದು ಕರಾರನ್ನು ಮಾಡಿ ಬೀಜ, ಔಷಧಿ, ವನಸ್ಪತಿ, ತೃಣಗಳು ಬ್ರಹ್ಮಹತ್ಯೆಯನ್ನು ಸ್ವೀಕರಿಸಿದವು.

ಅನಂತರ ಪಿತಾಮಹರು ಸುರಲೋಕದ ಅಪ್ಸರೆಯೊಂದಿಗೆ ಮೂರನೆಯ ಕಾಲು ಭಾಗ ಬ್ರಹ್ಮಹತ್ಯೆ ಸ್ವೀಕರಿಸಲು ಹೇಳಿದರು. ಮುಟ್ಟಾದ ನಾರಿಯರ ಮೈ ಮುಟ್ಟಿ ವಿಹಾರ ಗೈದವರನ್ನು ಈ ಬ್ರಹ್ಮಹತ್ಯೆಯು ತಮ್ಮನ್ನು ಬಿಟ್ಟು ತಗಲಿಕೊಳ್ಳಬೇಕು ಎಂದು ನಿರ್ಬಂಧ ಮಾಡಿ ಅಪ್ಸರೆಯರು. ಆ ಕಾಲು ಭಾಗ ಬ್ರಹ್ಮಹತ್ಯೆಯನ್ನು ಸ್ವೀಕರಿಸಿದರು.

ಬಳಿಕ ಆ ಸರಸ್ವತಿ ಪತಿಯು ನೀರುಗಳನ್ನು ನೆನೆದ. ಅವುಗಳನ್ನು ಕರೆದು ಉಳಿದ ಕೊನೆಯ ಕಾಲು ಭಾಗ ಬ್ರಹ್ಮಹತ್ಯಾಪಾಪ ಸ್ವೀಕರಿಸಲು ತಿಳಿಸಿದ. ಆಗ ಜಲಾಭಿಮಾನಿ ದೇವತೆಗಳು ನೀರಿನಲ್ಲಿಯೇ ಜಲಾಶಯಗಳಲ್ಲಿ ಮಲ, ಮೂತ್ರ, ಮೂಗು ತೊಳೆಯುವದು ಮೊದಲಾದವುಗಳನ್ನು ಮಾಡುವ ಜನರಿಗೆ ತಮ್ಮ ಬ್ರಹ್ಮಹತ್ಯೆಯನ್ನು ಸಾಗಹಾಕುವ ನಿರ್ಬಂಧ ಮಾಡಿಕೊಂಡು ಆ ಬ್ರಹ್ಮಹತ್ಯಾ ಪಾಪದ ಚತುರ್ಥಾಂಶವನ್ನು ಸ್ವೀಕರಿಸಿದರು.

ಹೀಗೆ ಅಗ್ನಿ, ಔಷಧಿ, ಅಪ್ಸರೆಯರು ಹಾಗೂ ನೀರು ಈ ನಾಲ್ಕರಲ್ಲಿ ಆ ಪಾಪವನ್ನು ಹಂಚಿದ ಬಳಿಕ ಆ ಬ್ರಹ್ಮಹತ್ಯೆಯು ಇಂದ್ರನನ್ನು ಬಿಟ್ಟು ಹೊರಟಿತು. ಅನಂತರ ದೇವೇಂದ್ರನು ಸಾಭ್ರಮತಿ ತೀರದ ವಾರ್ತಘ್ನೀ ಸಂಗಮ ಸ್ಥಾನದಲ್ಲಿ ನಿಂತು ತಪಸ್ಸುಮಾಡಿ ಅಶ್ವಮೇಧ ಯಜ್ಞವನ್ನು ಗೈದು ಶುದ್ಧನಾಗಿ ಅಮರಾವತಿಗೆ ತೆರಳಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಇಂದ್ರನಿಂದ ವೃತ್ರನ ಸಂಹಾರ ಬ್ರಹ್ಮಹತ್ಯೆಯ ಪಾಪದ ಹಂಚಿಕೆ ಎಂಬ ನೂರ ಐವತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ವರಾಹ ತೀರ್ಥ ಮಹಿಮೆ

ಅಧ್ಯಾಯ - ೧೫೫

ಸಾಭ್ರಮತೀ ನದಿಯು ವಾರ್ತಘ್ನೀ ನದಿಯ ಜೊತೆಗೆ ಸಂಗಮಿಸಿ ಮುಂದೆ ಭದ್ರಾ ನದಿಯೊಂದಿಗೆ ಸಮುದ್ರವನ್ನು ಸೇರುತ್ತದೆ. ಸಮುದ್ರದ ಉತ್ತರ ತೀರದಲ್ಲಿ ಮಿಲಿತವಾದ ಭದ್ರಾ, ಸಾಭ್ರಮತೀ ನದಿಗಳ ಸಂಗಮದಲ್ಲಿ ಸ್ನಾನಮಾಡಿ ವರಾಹದೇವರ ದರ್ಶನ ಮಾಡಿದವನು ವರುಣಸ್ಥಾನ ಪಡೆಯುತ್ತಾನೆ.

ಹಿಂದೆ ಮಹಾವಿಷ್ಣುವು ಸಾಭ್ರಮತೀ ಮತ್ತು ಸಮುದ್ರ ಸಂಗಮದ ಸ್ನಾನದಿಂದಲೇ ಸಮುದ್ರವನ್ನು ಪ್ರವೇಶಿಸಿ ವರಾಹರೂಪ ಧರಿಸಿ ಎಲ್ಲ ದೈತ್ಯ ವೈರಿಗಳನ್ನು ವಧಿಸಿ ಸಾಗರದ ಜಲದಲ್ಲಿ ವಿಹರಿಸಿ ಭೂಮಿಯನ್ನು ಎತ್ತಿಕೊಂಡು ಇಲ್ಲಿಯ ಕರ್ದಮಾಲಯ ತೀರ್ಥದಿಂದ ಎದ್ದುಬಂದ. ಅದಕ್ಕೆ ಕರ್ದಮ ತೀರ್ಥ ಎಂದು ಕರೆಯುತ್ತಾರೆ. ಯಜ್ಞವರಾಹನು ರಸಾತಲದ ಆಳದಿಂದ ಧರಣೀದೇವಿಯನ್ನು ತನ್ನ ಕೋರೆದಾಡಿಯಲ್ಲಿ ಹೊತ್ತು ಎದ್ದು ಬಂದ ಈ ಕರ್ದಮಾಲಯ ಸ್ಥಾನ ಹಾಗೂ ತೀರ್ಥ ಎರಡೂ ಪರಮ ಪವಿತ್ರ. ಇಲ್ಲಿ ಸ್ನಾನ ದಾನ ಶ್ರಾದ್ಧಗಳಿಂದ ಕರ್ತೃವಿಗೆ ಪಾಪಮುಕ್ತಿ ಪಿತೃಗಳಿಗೆ ಮುಕ್ತಿ.

ಇದರ ಮುಂದಿನ ತೀರ್ಥ ಸಾಭ್ರಮತಿಯು ಸಮುದ್ರದೊಂದಿಗೆ ಮಿಲನ ಹೊಂದಿದ ಸಂಗಮ ತೀರ್ಥ. ಗಂಗೆಯು ಸಮುದ್ರ ರಾಜನೊಡನೆ ಈ ತೀರ್ಥದಲ್ಲಿ ಸಂಗಮಿಸಿದ್ದರೂ ಹಲವರಿಗೆ ಸರಿಯಾಗಿ ಸಂಗಮದ ಸ್ಥಾನವು ಗೋಚರಿಸುವದಿಲ್ಲ. ಆಗ ಮಂದೆ ಬುದ್ಧಿಯವರು ನನ್ನ ನಾಮೋಚ್ಚಾರಣ ಮಾಡಿ ನದಿ ಹಾಗೂ ಸಮುದ್ರದ ನೀರು ಎರಡೂ ಕೂಡಿದ ಕಡೆ ಶಿವತೀರ್ಥ ಎಂದು ಸ್ನಾನ ಮಾಡಬೇಕು.

ಇವುಗಳ ಸಮೀಪದಲ್ಲಿಯೇ ಆದಿತ್ಯ ತೀರ್ಥವು ಲೋಕ ಪ್ರಸಿದ್ಧ. ಅದರ ಆಚೆ ನೀಲಕಂಠ ತೀರ್ಥ. ಅಲ್ಲಿ ಉಪವಾಸ ಮಾಡಿ ನೀಲಕಂಠನನ್ನು ಬಿಲ್ವಪತ್ರೆ ಧೂಪದೀಪ ಪೂಜೆ ಮಾಡಿದವರು ವಾಂಛಿತ ಫಲ ಪಡೆಯುವರು.

ಇದರ ಸಮೀಪದಲ್ಲಿಯೇ ಸಾಭ್ರಮತೀ ನದಿಯು ದುರ್ಗಾ ಎಂಬ ನದಿಯೊಂದಿಗೆ ಮಿಲಿತವಾಗಿ ಸಮುದ್ರದ ನೀರಿನಲ್ಲಿ ತಾನೂ ಸಾಗರಬಿದ್ದು ಬೆರತು ಬಿಡುತ್ತಾಳೆ. ಇಲ್ಲಿ ಸ್ನಾನ, ಗೋದಾನ, ಮಹಿಷೀ ದಾನಗಳಿಂದ ಅತ್ಯಧಿಕ ಪುಣ್ಯ.

ಸಾಕ್ಷಾತ್ ಗಂಗಾದೇವಿಯಂತೆ ಈ ಸಾಭ್ರಮತೀ ನದಿಯು ಕೂಡ ಪರಮ ಪಾವನ. ಇದೂ ಒಂದು ಗಂಗಾನದಿ ಎಂದೇ ತಿಳಿದು ಇಲ್ಲಿ ಸ್ನಾನ ದಾನ ಮಾಡಬೇಕು. ಅದರಿಂದ ಮಾನವರ ಪಾಪಗಳೆಲ್ಲವೂ ಪರಿಹಾರವಾಗುತ್ತವೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ವರಾಹ ತೀರ್ಥ ಮಹಿಮೆ ಎಂಬ ನೂರ ಐವತ್ತೈದನೇಯ ಅಧ್ಯಾಯ ಮುಗಿದುದು*

—o—

# ನೃಸಿಂಹ ಪ್ರಲ್ಹಾದ ಪ್ರಸಂಗ, ನೃಸಿಂಹ ಜಯಂತಿ ವಿಧಿ ವಿಧಾನ

**ಅಧ್ಯಾಯ - ೧೫೬**

**ಪಾರ್ವತಿ:-** ವಿಶ್ವೇಶ್ವರ ! ವಿಷ್ಣುವಿನ ಅವತಾರಗಳು ಅಸಂಖ್ಯ ಎಂದು ತಾವು ಹೇಳಿದಿರಿ. ಅವುಗಳಲ್ಲಿ ಅತ್ಯಂತ ಶ್ರೇಷ್ಠವಾದ ನೃಸಿಂಹಾವತಾರದ ಮಹಿಮೆಯನ್ನು ಹೇಳಿರಿ.

**ಮಹಾದೇವ:-** ನೃಸಿಂಹ ದೇವರು ಹಿರಣ್ಯ ಕಶ್ಯಪುವನ್ನು ಕೊಂದು ಅವನ ಮಗನಾದ ಪ್ರಹ್ಲಾದನನ್ನು ಪ್ರೀತಿಯಿಂದ ತನ್ನ ತೊಡೆಯ ಮೇಲೆ ಕುಳ್ಳಿರಿಸಿದ. ವಾತ್ಸಲ್ಯದಿಂದ ಮೈದಡವಿ ಪ್ರೀತಿಯಿಂದ ತಲೆಯ ಮೇಲೆ ಕೈ ಇರಿಸಿದ. ಆ ಭಗವಂತನ ವಾತ್ಸಲ್ಯದಿಂದ ಹೃಷ್ಟಪುಷ್ಟನಾದ ಪ್ರಹ್ಲಾದ ಕುತೂಹಲದಿಂದ ಕೇಳಿದ ತನ್ನ ಸ್ವಾಮಿಯನ್ನು.

**ಪ್ರಹ್ಲಾದ:-** ಸ್ವಾಮಿ ! ನನಗೆ ನಿನ್ನಲ್ಲಿ ಅವಿಚ್ಛಿನ್ನ ಭಕ್ತಿ. ನಿನಗೆ ನನ್ನಲ್ಲಿ ಅವಿಚ್ಛಿನ್ನ ಪ್ರೇಮ. ನಾನು ನಿನಗೆ ಇಷ್ಟು ಪ್ರೀತ್ಯಾಸ್ಪದನಾಗಲು ಏನು ಕಾರಣ?

**ನರಸಿಂಹ:-** ವತ್ಸ ಪ್ರಹ್ಲಾದ ! ನಾನು ನಿನ್ನ ಹಿಂದಿನ ಕಥೆ ಹೇಳುತ್ತೇನೆ ಕೇಳು. ನೀನು ಹಿಂದಿನ ಜನ್ಮದಲ್ಲಿ ಒಬ್ಬ ಬ್ರಾಹ್ಮಣ ಪುತ್ರನಾಗಿ ಹುಟ್ಟಿದ್ದೆ. ಆದರೂ ನೀನು ಆಗ ಏನನ್ನೂ ಓದಲಿಲ್ಲ. ಯಾವ ಅಧ್ಯಯನವನ್ನೂ ಮಾಡಲಿಲ್ಲ. ವಸುದೇವ ಎಂದು ಆಗ ನಿನಗೆ ಹೆಸರು. ಆಗ ನೀನು ಒಂದೂ ಪುಣ್ಯ ಕಾರ್ಯ ಮಾಡಲಿಲ್ಲ. ಯಾವ ಪಾಪಕಾರ್ಯವನ್ನೂ ಮಾಡದೇ ಬಿಡಲಿಲ್ಲ. ಇದರ ಮೇಲೆ ನೀನು ವೇಶ್ಯಾಲಂಪಟ. ಕಂಡ ಹೆಣ್ಣಿನ ಬೆಂಬತ್ತಿ ತಿರುಗುತ್ತಿದ್ದೆ. ತುಪ್ಪ, ಜೇನು ಕುಡಿದು ವಾರವನಿತೆಯರೊಂದಿಗೆ ವಿವಿಧ ವಿನೋದ ವಿಹಾರಗಳನ್ನು ಮಾಡುವವರಲ್ಲಿಯೇ ನಿನ್ನ ತಾರುಣ್ಯವೆಲ್ಲ ಕಳೆಯಿತು. ಮುಂದೆ ಸುದೈವದಿಂದ ಒಂದು ದಿನ ನೀನು ನನ್ನ ನೃಸಿಂಹ ವ್ರತವನ್ನು ಆಚರಿಸಿದೆ. ಅದರಿಂದ ನಿನಗೆ ನಿರತಿಶಯವಾದ ಭಕ್ತಿ ಹುಟ್ಟಿತು ನನ್ನಲ್ಲಿ. ಆ ನರಸಿಂಹ ವ್ರತವನ್ನು ನೀನು ವಿಧಿಪೂರ್ವಕವಾಗಿ ಆಚರಿಸಿದ್ದರಿಂದ ನನಗೆ ನಿನ್ನ ಮೇಲೆ ಇಂಥ ಅವಿಚ್ಛಿನ್ನವಾದ ಪ್ರೇಮವು ಉತ್ಪನ್ನವಾಗಿದೆ.

**ಪ್ರಹ್ಲಾದ:-** ದೇವೇಶ, ಆಗ ನಾನು ಯಾರ ಮಗನಾಗಿದ್ದೆ? ನೃಸಿಂಹ ವ್ರತ ಎಂದರೆ ಏನು? ವೇಶ್ಯಾಲಂಪಟನಾದ ನಾನು ಇದನ್ನು ಹೇಗೆ ಆಚರಿಸಿದೆ? ಇದೆಲ್ಲವನ್ನೂ ಹೇಳು.

**ನರಸಿಂಹ:-** ಬಹಳ ಹಿಂದಿನ ಕಾಲದ ಮಾತು. ಸೃಷ್ಟಿಯ ಪ್ರಾರಂಭದ ಕಾಲ. ಚತುರ್ಮುಖ ಬ್ರಹ್ಮ ಹೊಸ ಸೃಷ್ಟಿಯನ್ನು ಮಾಡಲು ಉಜ್ಜುಗಿಸಿದ. ಆದರೆ ಅವನಿಗೆ ತಿಳಿಯದು ಹೊಸ ಸೃಷ್ಟಿಯನ್ನು ಹೇಗೆ ಮಾಡಬೇಕು ಎಂದು. ನೂತನ ಸೃಷ್ಟಿಯ ಕ್ರಮ ಹಾಗೂ ಪ್ರಕ್ರಿಯೆಗಳನ್ನು ತಿಳಿಯದೇ ದಿಙ್ಮೂಢನಾಗಿ ಕುಳಿತ ಆ ಪಿತಾಮಹ. ಏನೂ ತಿಳಿಯದಾದಾಗ ಈ ನೃಸಿಂಹ ವ್ರತವನ್ನು ವಿಧಿಪೂರ್ವಕವಾಗಿ ಆಚರಿಸಿದ. ಅದರಿಂದ ನವೀನ ಸೃಷ್ಟಿ ಮಾಡುವ ಪ್ರಕಾರ ಪದ್ಧತಿ ಪ್ರಮಾಣ ಪ್ರಕ್ರಿಯಾ ಎಲ್ಲವೂ ತಾವಾಗಿ ತಿಳಿದು ಬಂದವು. ಅದರಿಂದ ಚರಾಚರಾತ್ಮಕವಾದ ಈ ಪ್ರಪಂಚವನ್ನೆಲ್ಲ ನಿರ್ಮಿಸಿದ ಆ ಹಂಸವಾಹನ. ತ್ರಿಪುರಾಸುರನನ್ನು ಕೊಲ್ಲುವಾಗ ನನಗೂ ಹಾಗೇ ಆಗಿತ್ತು. ''ಈ ದೈತ್ಯಾಧಮನನ್ನು ಕೊಲ್ಲುವದು ಹೇಗೆ?'' ಎಂದು. ಆಗ ನಾನು ಈ ನೃಸಿಂಹ ವ್ರತವನ್ನು ಆಚರಿಸಿದೆ. ಆ ವ್ರತದ ಪ್ರಭಾವದಿಂದ ತ್ರಿಪುರನನ್ನು ಸಂಹರಿಸಿದೆ. ಹೀಗೆ

ಹಿಂದಿನ ಅನೇಕಾನೇಕ ರಾಜರೂ, ಋಷಿಗಳೂ ಈ ವ್ರತವನ್ನು ಮಾಡಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಹೊಂದಿ ಸಿದ್ಧಿ, ಸಮೃದ್ಧಿಗಳನ್ನು ಪಡೆದು ತುಷ್ಟೋತ್ಕೃಷ್ಟರಾಗಿದ್ದಾರೆ.

ಪ್ರಹ್ಲಾದ ! ಅದರಂತೆಯೇ ನೀನಾದರೂ ವಿಧಿಪೂರ್ವಕವಾಗಿ ಆ ನೃಸಿಂಹ ವ್ರತವನ್ನು ಅನುಷ್ಠಾನ ಮಾಡು. ಕಳೆದ ಜನ್ಮದಲ್ಲಿ ಈ ವ್ರತವನ್ನು ಮಾಡಿದ್ದರಿಂದ ನೀನು ರಾಜಕುಮಾರನಾಗಿ ಜನಿಸಿದೆ. ಸಾಕ್ಷಾತ್ ನನ್ನನ್ನೇ ನಿನ್ನ ಚರ್ಮಚಕ್ಷುವಿನಿಂದ ನೋಡಿದೆ. ಮತ್ತೆ ಈ ಜನ್ಮದಲ್ಲಿ ಆ ನೃಸಿಂಹ ವ್ರತವನ್ನು ಮಾಡಿದರೆ ಮುಂದೆ ನನ್ನ ಶರೀರದಲ್ಲಿ ಪ್ರವೇಶ ಹೊಂದುವೆ. ಸಾರೂಪ್ಯ ಮೋಕ್ಷ ಹೊಂದುವೆ.

ಈ ವ್ರತವನ್ನು ಯಾವ ಜಾತಿಯವರಾದರೂ ಮಾಡಬಹುದು. ಸ್ತ್ರೀಯರೂ ಮಾಡಬಹುದು. ಈ ವ್ರತವನ್ನು ಮಾಡಿದ ಮಹಿಳೆಗೆ ಎಂದೂ ವೈಧವ್ಯ ಬರುವದಿಲ್ಲ. ಧನಧಾನ್ಯಾದಿ ಸಂಪತ್ತಿಗೆ ಎಂದೂ ಚ್ಯುತಿ ಬರುವದಿಲ್ಲ.

**ಪ್ರಲ್ಹಾದ:-** ಭಗವನ್ ! ಈ ವ್ರತವನ್ನು ಯಾವಾಗ, ಯಾವ ತಿಥಿಯಂದು ಯಾವ ಮಾಸದಲ್ಲಿ ಹೇಗೆ ಆಚರಿಸಬೇಕು? ಅದರ ವಿಧಿವಿಧಾನಗಳೇನು?

**ನರಸಿಂಹ:-** ವತ್ಸಾ ! ಏಕಾಗ್ರ ಮನಸ್ಸಿನಿಂದ ಕೇಳು. ವೈಶಾಖ ಶುಕ್ಲಪಕ್ಷ ಚತುರ್ದಶಿಯ ದಿನ ಈ ನೃಸಿಂಹ ವ್ರತವನ್ನು ಆಚರಿಸಬೇಕು. ಅಂದು ಸಂಧ್ಯಾಕಾಲದಲ್ಲಿ ನರಸಿಂಹ ಪ್ರಾದರ್ಭಾವವನ್ನು ಮಹೋತ್ಸವದಿಂದ ಆಚರಿಸಬೇಕು. ನನ್ನ ಉತ್ಪತ್ತಿಯು ಕಾರಣಾಂತರದಿಂದ ಪಶ್ಚಿಮ ದಿಕ್ಕಿನಲ್ಲಿ ಆಯಿತು.

ಈ ಸಾಭ್ರಮತೀ ನದಿಯ ತೀರದಲ್ಲಿ ಇರುವ ಮೌಲಿಸ್ಥಾನ ಎಂಬಲ್ಲಿ ಹಾರೀತ ಎಂಬ ಬ್ರಾಹ್ಮಣ ಇದ್ದ. ಅವನ ಹೆಂಡತಿ ಲೀಲಾವತಿ. ಅವಳು ಮಹಾಪತಿವ್ರತೆ. ಅವರಿಬ್ಬರೂ ದಂಪತಿಗಳು ಕೂಡಿ ಇಪ್ಪತ್ತೊಂದು ಯುಗಗಳ ಕಾಲ ಈ ಕ್ಷೇತ್ರದಲ್ಲಿ ನಿಂತು ಅದ್ಭುತವಾದ ತಪಸ್ಸನ್ನು ಆಚರಿಸಿದರು. ಅವರ ತಪಸ್ಸಿನಿಂದ ಪರಿತುಷ್ಟನಾದ ನಾನು ಅವರಿಗೆ ಪ್ರತ್ಯಕ್ಷನಾಗಿ ಬೇಡಿದ ವರ ನೀಡುವದಾಗಿ ತಿಳಿಸಿದೆ.

**ಹಾರೀತ:-** ಪ್ರಭು ! ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನನಗೆ ಈಗಲೇ ಇಲ್ಲಿಯೇ ನಿನ್ನಂತೆಯೆ ಇರುವ, ನಿನಗೆ ಸಮಾನವಾದ ಮಗನು ಹುಟ್ಟಲಿ.

**ನೃಸಿಂಹ:-** ಹಾರೀತ ! ನನಗೆ ಸಮಾನರು ಬೇರೆ ಯಾರು ಇಲ್ಲ. ನನಗೆ ಸಮಾನನೆಂದರೆ ನಾನೇ ಮತ್ತು ನನಗೆ ಗರ್ಭವಾಸವೂ ಇಲ್ಲ. ಮತ್ತು ಯಾರ ಹೊಟ್ಟೆಯಿಂದಲೂ ಹುಟ್ಟುವದಿಲ್ಲ. ಆದರೆ ನೀನು ತಪಸ್ಸು ಮಾಡಿ ವರ ಕೇಳಿದ್ದರಿಂದ ಈಗಲೇ ಹೀಗೆ ಇದೇ ರೂಪದಿಂದ ನಾನು ನಿನಗೆ ಪುತ್ರನಾಗಿ ಬಿಡುತ್ತೇನೆ. ಈಗ ನೀನು ತಂದೆ. ನಾನು ಮಗ. ಈಗ ನಾನು ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗುವದಿಲ್ಲ. ನಿನಗಾಗಿ ಇಲ್ಲಿಯೇ ಇದ್ದು ಬಿಡುತ್ತೇನೆ.

ಹೀಗೆ ಹೇಳಿ ನಾನು ಇಲ್ಲಿಯೇ ನಿಂತುಕೊಂಡೆ. ಈ ಕ್ಷೇತ್ರಕ್ಕೆ ಬಂದು ಯಾರು ನನ್ನ ದರ್ಶನ ತೆಗೆದುಕೊಂಡು ನೃಸಿಂಹ ವ್ರತ ಮಾಡುವರೋ ಮತ್ತು ಸಂಧ್ಯಾಕಾಲದಲ್ಲಿ ನರಸಿಂಹನನ್ನು ನೆನೆಯುವರೋ ಅವರು ನನ್ನ ಪರಮಾನುಗ್ರಹಕ್ಕೆ ಪಾತ್ರರಾಗುತ್ತಾರೆ.

**ಚತುರ್ಭುಜಂ ಮಹಾದಂಷ್ಟ್ರಂ ಕಾಲರೂಪಂ ದುರಾಸದಂ ।**
**ಸೂರ್ಯಕೋಟಿ ಪ್ರತಿಕಾಶಂ ಯಮಕೋಟಿ ದುರಾಸದಂ ॥**

ಸಿಂಹ ವಕ್ತ್ರ ಮುಖಂ ಯಸ್ಯ ನರವಚ್ಚಾಂಗ ಸಂಯುತಾಂ ।
ಶ್ರೀನೃಸಿಂಹ ದಿವ್ಯಸಿಂಹಂ ಕಾಲರೂಪಂ ಭಜೇತ್ ಸದಾ ॥

ಈ ಮಂತ್ರವನ್ನು ಹೇಳಿ ಸಿಂಹದ ಮುಖ ಮಾನವರ ಮೈ ಇರುವ ದಿವ್ಯರೂಪಿಯಾದ ಶ್ರೀ ನೃಸಿಂಹನನ್ನು ಯಾವಾಗಲೂ ಭಜನೆ ಮಾಡಬೇಕು. ಹೀಗೆ ನರಸಿಂಹ ದೇವರ ಉಪಾಸನೆ ಮಾಡಿದವರು ರಾಶಿರಾಶಿಯಾಗಿ ಸಂಪತ್ತು ಪಡೆಯುತ್ತಾರೆ ಕೊನೆಗೆ ಮೋಕ್ಷ, ಸ್ವಾತಿ ನಕ್ಷತ್ರ, ಶನಿವಾರ ಮತ್ತು ಚತುರ್ದಶಿ ತಿಥಿ, ಸಿದ್ಧಿಯೋಗ, ವಣಿಕ್ಕರಣ ಇವುಗಳಲ್ಲಿ ಯಾವದಾದರೂ ಎರಡು ಇದ್ದಾಗ ಈ ವ್ರತ ಮಾಡಿದರೆ ಸಾವಿರ ಹತ್ಯಾಪಾಪಗಳು ನಷ್ಟವಾಗುತ್ತವೆ. ಇವೆಲ್ಲವೂ ಮಿಲಿತವಾದರೆ ಅಂದರೆ ಚತುರ್ದಶಿ ತಿಥಿ (ವೈಶಾಖ ಕೃಷ್ಣ) ಸಿದ್ಧಿಯೋಗ, ವಣಿಕ್ಕರಣ, ಶನಿವಾರ ಇವು ಐದೂ ಯೋಗಾಯೋಗದಿಂದ ಒಂದೇ ದಿನ ಕೂಡಿ ಬಂದರೆ ಅಂದು ಆಚರಿಸಿದ ನೃಸಿಂಹ ವ್ರತವು ಕೋಟಿ ಹತ್ಯೆಗಳನ್ನು ಗೈದಿದ್ದರೂ ಅದೆಲ್ಲವನ್ನೂ ನಾಶಮಾಡುತ್ತದೆ. ಇವುಗಳಲ್ಲಿ ಎರಡು ಮೂರು ಯೋಗಗಳು ಮಿಲಿತವಾದಾಗ ವ್ರತ ಮಾಡಿದರೆ ಸರ್ವಪಾಪ ವಿನಾಶ ನಿಶ್ಚಿತ.

ಈ ನೃಸಿಂಹ ವ್ರತವನ್ನು ಮಾಡ ಬಯಸುವವರು ಪ್ರಾತಃಕಾಲದಲ್ಲಿ ಎದ್ದು ದಂತಧಾವನ ಮುಖಪ್ರಕ್ಷಾಲನ ಮಾಡಿಕೊಂಡು ದೇವರ ಮುಂದೆ 'ಅದ್ಯಾಹಂತೇ ವಿದಾಸ್ಯಾಮಿ ವ್ರತಂ ನಿರ್ವಿಘ್ನತಾಂ ಮಮ? ''ಸ್ವಾಮಿ ನೃಸಿಂಹ, ಇಂದು ನಾನು ನಿನ್ನ ವ್ರತವನ್ನು ಮಾಡುತ್ತೇನೆ. ಅದನ್ನು ನಿರ್ವಿಘ್ನಗೊಳಿಸು'' ಹೀಗೆ ಪ್ರಾರ್ಥಿಸಬೇಕು. ಮಧ್ಯಾಹ್ನದಲ್ಲಿ ನದಿ, ಸರೋವರ, ಹೊಕ್ಕರಣಿ, ಬಾವಿ ಕೊನೆಗೆ ಮನೆಯಲ್ಲಾದರೂ ವೇದೋಕ್ತ ಮಂತ್ರಗಳಿಂದ, ತುಳಸೀಮೃತ್ತಿಕಾ, ಗೋಮಯ, ನೆಲ್ಲಿಕಾಯಿ, ಎಳ್ಳು ಮುಂತಾದವುಗಳನ್ನು ಹಚ್ಚಿಕೊಂಡು, ಸಾರಣೆ ಕಾರಣೆ ಮಾಡಿದ ಮನೆಯಲ್ಲಿ ಒಂದು ಕಡೆ ರಂಗವಲ್ಲಿ ಹಾಕಿ, ಅಷ್ಟದಳ ಪದ್ಮ ಬರೆದು ಅದರ ಮೇಲೆ ತಾಮ್ರದ ಕಲಶ ಸ್ಥಾಪನೆ ಮಾಡಬೇಕು. ಅದರ ಒಳಗೆ ರತ್ನಗಳನ್ನು ಹಾಕಬೇಕು. ಅದರ ಮೇಲೆ ಅಕ್ಕಿ ತುಂಬಿದ ತಾಮ್ರದ ಪಾತ್ರೆ ಇರಿಸಿ ಅದರ ನಡುವೆ ತನ್ನ ಯೋಗ್ಯತಾನುಸಾರವಾಗಿ ಬಂಗಾರದ ಲಕ್ಷ್ಮೀ ನರಸಿಂಹ ಮೂರ್ತಿನಯನ್ನು ಇರಿಸಬೇಕು. ಅನಂತರ ಇಂದ್ರಿಯಲೋಲುಪ, ವಿಷಯಲಂಪಟನಲ್ಲದ ಶಾಸ್ತ್ರ ಓದಿದ ಆಚಾರ್ಯನನ್ನು ಮುಂದೆ ಕೂಡಿಸಿಕೊಂಡು ಹೂವು ಹಾರಗಳಿಂದ ಶೋಭಿಸುವ ಮಂಟಪದಲ್ಲಿ ಆ ಕಾಲದಲ್ಲಿ ಅರಳಿದ ಹೂಗಳಿಂದ ಷೋಡಶೋಪಚಾರ ಪೂಜೆಗಳನ್ನು ವೇದಮಂತ್ರಗಳಿಂದ ಮಾಡಬೇಕು. ಕರ್ಪೂರ, ಕುಂಕುಮ ಮಿಶ್ರವಾದ ಗಂಧವನ್ನು ಸಮರ್ಪಿಸಿ ಹೂಗಳನ್ನು ಏರಿಸಿ ತುಳಸೀದಳಗಳನ್ನು ಸಮರ್ಪಿಸಿ ಲಕ್ಷ್ಮೀ ನರಸಿಂಹ ಪೂಜೆಯನ್ನು ಧೂಪ, ದೀಪ, ನೈವೇದ್ಯ ಮಂಗಳಾರತಿಗಳಿಂದ ಮಾಡಬೇಕು. ಭಕ್ಷ್ಯಭೋಜ್ಯಗಳನ್ನು ದೇವರಿಗೆ ಅರ್ಪಿಸುವಾಗ

ನೈವೇದ್ಯಂ ಶರ್ಕರಾಂಚಾಪಿ ಭಕ್ಷ್ಯ ಭೋಜ್ಯ ಸಮನ್ವಿತಂ ।
ದದಾಮಿ ತೇ ರಮಾಕಾಂತ ಸರ್ವ ಪಾಪಕ್ಷಯಂ ಕುರು ॥

ಎಂಬ ಮಂತ್ರ ಹೇಳಿ ನೈವೇದ್ಯ ಮಾಡಬೇಕು. ಹೀಗೆ ದೇವರಿಗೆ ವಿಧಿಪೂರ್ವಕ ಸೇವೆ ಸಲ್ಲಿಸಿ ಪೂಜಕನು.

**ನೃಸಿಂಹಾಚ್ಯುತ ದೇವೇಶ ತವಜನ್ಮ ದಿನೇ ಶುಭೇ ।**
**ಉಪವಾಸಂ ಕರಿಷ್ಯಾಮಿ ಸರ್ವ ಭೋಗವಿವರ್ಜಿತಃ ॥**

ಎಂದು ದೇವರ ಎದುರು ಉಪವಾಸದ ಸಂಕಲ್ಪ ಮಾಡಿ "ತೇನ ಪ್ರೀತೋ ಭವ ಸ್ವಾಮಿನ್ ಜನ್ಮಪಾಪಂ ನಿರಾಕುರು" ಈ ಉಪವಾಸದಿಂದ ನೀನು ಪ್ರೀತನಾಗಿ ನಾನು ಜನ್ಮಾಂತರದಲ್ಲಿ ಮಾಡಿದ ಪಾಪಗಳನ್ನೆಲ್ಲ ಪರಿಹರಿಸು ಎಂದು. ಕೇಳಿಕೊಳ್ಳಬೇಕು. ಅಂದು ರಾತ್ರಿ ಜಾಗರಮಾಡಿ ದೇವರ ಮಹಿಮೆಯನ್ನು ವರ್ಣಿಸುವ ಹಾಡು ಕೀರ್ತನೆಗಳನ್ನು ಹೇಳಿ ಬಗೆಬಗೆಯ ವಾದ್ಯಗಳನ್ನು ಬಾರಿಸಬೇಕು. ನರಸಿಂಹ ದೇವರ ಕಥಾಸಂದರ್ಭವನ್ನು ನಿರೂಪಿಸುವ ಪುರಾಣವನ್ನು ಹೇಳಿಸಬೇಕು. ಅದರ ಪಾರಾಯಣವನ್ನಾದರೂ ಮಾಡಬೇಕು.

ಮರುದಿನ ಪ್ರಾತಃಕಾಲದಲ್ಲಿ ಎದ್ದು ಸ್ನಾನಮಾಡಿ ಹಿಂದಿನ ದಿನದಂತೆ ವಿಧಿಪೂರ್ವಕ ಲಕ್ಷ್ಮೀ ನರಸಿಂಹ ದೇವರ ಪೂಜೆ ಮಾಡಬೇಕು. ಮತ್ತು ಆ ಬಂಗಾರದ ಲಕ್ಷ್ಮೀ ನರಸಿಂಹ ದೇವರನ್ನು ಆಚಾರ್ಯರಿಗೆ ದಾನ ಕೊಡಬೇಕು. ಶಯ್ಯಾದಾನ, ಏಳು ಬಗೆಯಾದ ಧಾನ್ಯಗಳ ದಾನ ಮತ್ತು ಬೇರೆ ಬೇರೆ ದಾನಗಳನ್ನು ನೀಡಿ ಬ್ರಾಹ್ಮಣ ಭೋಜನ ಮಾಡಿಸಿ, ದಕ್ಷಿಣೆ ಕೊಟ್ಟು, ಅನಂತರ ದೇವರನ್ನು ಕೈಮುಗಿದು ಪ್ರಾರ್ಥಿಸಬೇಕು.

**ಕರಾವಲಂಬನಂ ದೇಹಿ ಶೇಷಶಾಯಿನ್ ಜಗತ್ಪತೇ ।**
**ವ್ರತೇ ನಾನೇ ದೇವೇಶ ಭುಕ್ತಿಮುಕ್ತಿ ಪ್ರದೋಭವ ॥**

ಎಂದು ಪ್ರಾರ್ಥಿಸಿ ಅನಂತರ ಉಪಾಹಾರಾದಿಗಳನ್ನು ಆಚಾರ್ಯರಿಗೆ ಕೊಟ್ಟು ಬ್ರಾಹ್ಮಣರನ್ನು ಬೀಳ್ಕೊಟ್ಟು ತಾನೂ ಬಂಧು ಮಿತ್ರರೊಂದಿಗೆ ಭೋಜನ ಮಾಡಬೇಕು.

ಶ್ರೀ ನರಸಿಂಹ ದೇವರನ್ನು ಕುರಿತು ಹಾರೀತ ಮುನಿ ಹಾಗೂ ಲೀಲಾವತಿಯರು ಆ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡ ಸ್ಥಳವು ಸಾಭ್ರಮತೀ ತೀರದಲ್ಲಿ ಈಗಲೂ ಮೌಲಿಸ್ಥಾನ ಎಂದು ಪ್ರಖ್ಯಾತವಾಗಿರುತ್ತದೆ. ಅಲ್ಲಿ ಈ ಕಲಿಯುಗದಲ್ಲಿ ಮ್ಲೇಚ್ಛರೇ ವಸತಿ ಮಾಡಿದ್ದರೂ ಅಲ್ಲಿಗೆ ಹೋಗಿ "ನೃಸಿಂಹ ನೃಸಿಂಹ" ಎಂದು ಗರ್ಜನೆ ಮಾಡಿದರೆ ಅಂಥದೇ ಪ್ರತಿ ಶಬ್ದವು ಕೇಳಿಬರುತ್ತದೆ. ಅಲ್ಲಿಗೆ ಹೋಗಿ, ಅಷ್ಟು ಶಕ್ತಿ ಇಲ್ಲದಿದ್ದರೆ ಮನೆಯಲ್ಲಿ ಕುಳಿತಾದರೂ, ಈ ಕೆಳಗಿನ ಶ್ಲೋಕವನ್ನು ಪಾರಾಯಣ ಮಾಡಬೇಕು.

**ಶ್ರೀ ನೃಸಿಂಹ ಮಹದ್ರೂಪ ಕಾಲಕೋಟಿ ದುರಾಸದ ।**
**ಭೈರವೇಶ ಹರಾರ್ತಿಘ್ನ ಬಾಲರೂಪ ನಮೋಸ್ತುತೆ ॥**
**ಮಾರ್ತಂಡ ಮಂಡಲಸ್ಥಾಯ ದಯಾಸಿಂಧೋ ನಮೋಸ್ತುತೇ ।**
**ಚತುರ್ವಿಂಶ ಸ್ವರೂಪಾಯ ಕಾಲ ರುದ್ರಾಗ್ನಿ ರೂಪಿಣೇ ॥**
**ಜಗದೇಕ ಸ್ವರೂಪಾಯ ನೃಸಿಂಹಾಯ ನಮೋಸ್ತುತೇ ।**
**ಭಾಲೇ ತಥಾರ ಯೋ ದೇವೋ ನೃಸಿಂಹೋ ವೀರಭದ್ರಜಿತ್ ॥**

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ನೃಸಿಂಹ ಪ್ರಲ್ಹಾದ ಪ್ರಸಂಗ, ನೃಸಿಂಹ ಜಯಂತಿಯ ವಿಧಿ ವಿಧಾನ ಎಂಬ ನೂರ ಐವತ್ತಾರನೇಯ ಅಧ್ಯಾಯ ಮುಗಿದುದು*

—o—

ಪಾರ್ವತಿ ಪರಮೇಶ್ವರರ ಸಂವಾದ

ಅಧ್ಯಾಯ - ೧೫೭

## ಭಗವದ್ಗೀತೆಯ ಮೊದಲಿನ ಅಧ್ಯಾಯದ ಮಹಿಮೆ

**ಪಾರ್ವತಿ:-** ಪ್ರಭು ಪರಮೇಶ್ವರ, ನಾನು ನಿನ್ನ ದಯೆಯಿಂದ ಮಹಾವಿಷ್ಣುವಿನ ಬಗೆಬಗೆಯ ಮಹಿಮೆಯನ್ನು ಶ್ರವಣಮಾಡಿದೆ. ನಾನಾವಿಧವಾದ ಧರ್ಮಗಳನ್ನೂ ತಾವು ನನಗೆ ನಿರೂಪಣೆ ಮಾಡಿದಿರಿ. ಈಗ ಪತಿದೇವರಾದ ತಮ್ಮ ಮುಖದಿಂದ ಶ್ರೀಹರಿಯು ಅರ್ಜುನನ್ನು ಕುರಿತು ನಿರೂಪಣೆ ಮಾಡಿದ ಶ್ರೀ ಮದ್ಭವದ್ಗೀತೆಯ ಮಹಾತ್ಮ್ಯವನ್ನು ಕೇಳಬೇಕೆಂಬ ಅಪೇಕ್ಷೆಯಾಗಿದೆ. ಗೀತಾಮಾಹಾತ್ಮ್ಯ ಶ್ರವಣದಿಂದ ಶ್ರೀಹರಿಯಲ್ಲಿ ಅತ್ಯಧಿಕವಾಗಿ ಭಕ್ತಿಯು ವರ್ಧಿಸುತ್ತದೆ. ತಾವು ನನ್ನ ಮೇಲೆ ಪ್ರೀತಿಯನ್ನು ಮಾಡುತ್ತಿದ್ದರೆ ಈಗ ಗೀತಾಮಾಹಾತ್ಮ್ಯವನ್ನು ಕೇಳುವ ನನ್ನ ಬಯಕೆಯನ್ನು ಪೂರೈಸಿರಿ.

**ಪರಮೇಶ್ವರ:-**

**ಅತಸೀ ಪುಷ್ಪ ಸಂಕಾಶಂ ಖಗೇಂದ್ರಾಸನ ಮಚ್ಯುತಮ್ ।**
**ಶಯಾನಂ ಶೇಷಶಯ್ಯಾಯಾಂ ಮಹಾವಿಷ್ಣುಂ ಮುಪಾಸ್ಮಹೇ ॥**

ಅತಸಿಯ ಹೂವಿನಂತೆ ನೀಲಮೇಘಶ್ಯಾಮ ಸುಂದರ ಶರೀರವುಳ್ಳ ಗರುಡಾರೂಢ ಆ ಶ್ರೀಹರಿಯನ್ನು ನಾನು ಉಪಾಸನೆ ಮಾಡುತ್ತೇನೆ. ಶೇಷಶಾಯಿಯಾದ ಆ ಮಹಾವಿಷ್ಣುವಿನ ಆರಾಧನೆಯಿಂದ ಆ ಮುರಾರಿಯು ಒಂದು ದಿನ ಆಸನದಲ್ಲಿ ಆಸೀನನಾದಾಗ ಹದಿನಾಲ್ಕು ಲೋಕಗಳನ್ನೂ ಆನಂದಪಡಿಸುವ ಲಕ್ಷ್ಮೀದೇವಿಯು ಅತ್ಯಾದರದಿಂದ ಕೈ ಜೋಡಿಸಿ ತಲೆಬಾಗಿಸಿ ಪ್ರಶ್ನೆ ಕೇಳಿದಳು.

**ಲಕ್ಷ್ಮೀ:-** ಹೃಷಿಕೇಶ, ನೀನು ಚರಾಚರಾತ್ಮಕವಾದ ಈ ಪ್ರಪಂಚಕ್ಕೆಲ್ಲ ಸೃಷ್ಟಿಕರ್ತಾ, ಪಾಲನಕರ್ತಾ, ಮತ್ತು ಸಂಹಾರಕರ್ತಾ, ನೀನು ಅರ್ಜುನನಿಗೆ ಭಗವದ್ಗೀತೆಯನ್ನು ರಣರಂಗದಲ್ಲಿ ಉಪದೇಶಿಸಿದಿ. ಆ ಗೀತೆಯ ಮಹಿಮೆಯನ್ನು ನನಗಾಗಿ ನಿರೂಪಣೆ ಮಾಡು.

**ನಾರಾಯಣ:-** ಸುಂದರಿ, ಭಗವದ್ಗೀತೆಯ ಮಹಿಮೆಯನ್ನು ಹೇಳುವೆ ಕೇಳು. ಭಗವದ್ಗೀತೆಯೆಂದರೆ ನನ್ನ ಇನ್ನೊಂದು ಸ್ವರೂಪ. ಹದಿನೆಂಟು ಅಧ್ಯಾಯಾತ್ಮಕವಾದ ಭಗವದ್ಗೀತೆ ನನ್ನ ದೇಹ ಎಂದೇ ಅನುಸಂಧಾನ ಮಾಡಿ ಆ ಗೀತೆಯನ್ನು ಪಾರಾಯಣ ಮಾಡಬೇಕು. ಮೊದಲಿನ ಐದು ಅಧ್ಯಾಯಗಳು ಪರಮಾತ್ಮನ ಪಂಚಮುಖಗಳು. ನಂತರ ಭಗವದ್ಗೀತೆಯ ಹತ್ತು ಅಧ್ಯಾಯಗಳೆಂದರೆ ಪಂಚಮುಖೀ ಪರಮಾತ್ಮನ ಹತ್ತು ತೋಳುಗಳು (ಬಾಹುಗಳು) ಹದಿನಾರನೆಯ ಅಧ್ಯಾಯವೇ ಭಗವಂತನ ಉದರ. ಆದುದರಿಂದ ಹದಿನಾರನೆಯ ಅಧ್ಯಾಯವನ್ನು ಭಗವಂತನ ಕುಕ್ಷಿ ಸ್ಥಾನದಲ್ಲಿ ಚಿಂತಿಸಬೇಕು. ಪರಮಾತ್ಮನ ಎರಡು ಪಾದಗಳೇ ಹದಿನೇಳು, ಹದಿನೆಂಟನೆಯ ಅಧ್ಯಾಯಗಳು. ಹೀಗೆ ಹದಿನೆಂಟು ಅಧ್ಯಾಯಾತ್ಮಕವಾದ ಗೀತೆಯು ವಾಸುದೇವನ ಅರ್ಥಾತ್ ನನ್ನ ಒಂದು ವಾಙ್ಮಯ ಮೂರ್ತಿಯೆಂದು ಬಾವಿಸಿ ಪರಮ ಭಕ್ತಿಯಿಂದ ಗೀತಾಪಾರಾಯಣ, ಅಧ್ಯಾಯನಾದಿಗಳನ್ನು ಮಾಡಿ ಭಗವಂತನನ್ನು ಆರಾಧಿಸಿದರೆ ಮಹಾಪಾತಕಗಳೂ ನಾಶವಾಗುತ್ತವೆ. ಈ ಭಗವದ್ಗೀತೆಯ ಒಂದು ಅಧ್ಯಾಯ, ಅಥವಾ

ಅರ್ಧ ಅಧ್ಯಾಯ, ಒಂದು ಶ್ಲೋಕ, ಕೊನೆಗೆ ಒಂದು ಪಾದವನ್ನು ಅರ್ಥ ತಿಳಿದು ಭಕ್ತಿಯಿಂದ ಪಠಿಸಿದರೂ, ಅವರ ಜನ್ಮ ಉದ್ಧಾರವಾಗುವದು.

ಸುಶರ್ಮನು ಭಗವದ್ಗೀತೆಯ ಪಾರಾಯಣವನ್ನು ಮಾಡಿ ಉದ್ಧಾರವನ್ನು ಹೊಂದಿದಂತೆ ಯಥಾಶಕ್ತಿ ಗೀತೆಯ ಒಂದು, ಅರ್ಧ, ಕಾಲು ಅಧ್ಯಾಯವನ್ನಾದರೂ ಮಾನವರು ತಪ್ಪದೇ ಪಾರಾಯಣ ಮಾಡಬೇಕು.

**ಲಕ್ಷ್ಮೀ:-** ಆ ಸುಶರ್ಮನಾರು? ಅವನ ಜಾತಿ ಯಾವುದು? ಅವನ ಸ್ವರೂಪವೇನು ? ಆತನಿರುವುದೆಲ್ಲಿ? ಆತನಿಗೆ ಯಾವ ಕಾರಣದಿಂದ ಮುಕ್ತಿಯಾಯಿತು? ಇದೆಲ್ಲವನ್ನೂ ನನಗಾಗಿ ದಯವಿಟ್ಟು ನಿರೂಪಿಸಿ.

**ನಾರಾಯಣ:-** ಪೂರ್ವಕಾಲದಲ್ಲಿ ಸುಶರ್ಮನೆಂಬ ಬ್ರಾಹ್ಮಣ. ಸದ್ಬುದ್ಧಿ ಅವನ ಜನ್ಮದಲ್ಲೇ ಹುಟ್ಟಲಿಲ್ಲ. ಹೆಸರೇನೋ ಬ್ರಾಹ್ಮಣರದ್ದು. ಆದರೆ ಆತನ ಹುಟ್ಟಿದ ಗುಣವಾಗಿ ಇವನ ಗುಣ. ಇವನು ಒಂದು ದಿನವೂ ದೇವರ ಧ್ಯಾನ ಮಾಡಲಿಲ್ಲ. ಜಪವಿಲ್ಲ, ತಪವಿಲ್ಲ, ಹೋಮವಿಲ್ಲ, ಹವನವಿಲ್ಲ. ಯಾವಾಗಲೂ ವಿಷಯಗಳಲ್ಲೇ ಲೋಲುಪತೆ, ಕೃಷಿ, ವ್ಯಾಪಾರ, ವ್ಯವಹಾರ ಇವೇ ಆತನ ದೈನಂದಿನ ಬದುಕಿನ ಹವ್ಯಾಸಗಳು, ಮದ್ಯವನ್ನೂ ಸಹ ಆ ಬ್ರಾಹ್ಮಣಾಧಮ ಪಾನಮಾಡುತ್ತಲಿದ್ದ. ವಿಹಿತಕರ್ಮಗಳನ್ನು ಒಂದು ಸಲವೂ ಅಪ್ಪಿತಪ್ಪಿಯೂ ಆತ ಮಾಡಲಿಲ್ಲ. ಹೀಗೆಯೇ ಆತನ ಆಯುಷ್ಯವೆಲ್ಲ ಕಳೆದುಹೋಯಿತು. ಕೊನೆಗೊಂದು ದಿನ ಹಣ್ಣು ಕಾಯಿಗಳನ್ನು ತರುವ ಉದ್ದೇಶದಿಂದ ಆತ ವನಗಳಲ್ಲಿ ತಿರುಗುವಾಗ ಕಾಲಸರ್ಪವೊಂದು ಆತನನ್ನು ಕಚ್ಚಿಬಿಟ್ಟಿತು. ಅದರಿಂದ ತಕ್ಷಣದಲ್ಲಿ ಮರಣವನ್ನು ಹೊಂದಿದ.

ಮರಣಾನಂತರದಲ್ಲಿ ಯಮಲೋಕದಲ್ಲಿ ವಿಚಿತ್ರವಾದ ಘೋರ ಯಾತನೆಗಳನ್ನು ಅನುಭವಿಸಿ ಭೂಲೋಕದಲ್ಲಿ ಒಂದು ಎತ್ತಾಗಿ ಮತ್ತೆ ಹುಟ್ಟಿದ. ಆ ಎತ್ತನ್ನು ಒಬ್ಬ ಕುಂಟ ಮನುಷ್ಯ ಕೊಂಡುಕೊಂಡ. ತನ್ನ ಉಪಜೀವನಕ್ಕಾಗಿ ಎತ್ತನ್ನು ಕೊಂಡ ಆ ಹೆಳವನು ಎತ್ತನ್ನು ಬಾಡಿಗೆ ಹೊಡೆಯಲು ಉಪಯೋಗಿಸಿ ತನ್ನ ಜೀವನ ಸಾಗಿಸುತ್ತಿದ್ದನು. ಬಾಡಿಗೆ ಹಣದ ಆಸೆಗಾಗಿ ಒಮ್ಮೆ ಒಂದು ಹಳ್ಳಿಗೆ ಏಳೆಂಟು ಸಲ ಆ ಎತ್ತನ್ನು ಹೊಡೆದು ಹೊಡೆದು ಓಡಾಡಿಸಿದ. ಎತ್ತಿನ ಮೇಲೆ ಸಿಕ್ಕಾಪಟ್ಟೆ ಭಾರವನ್ನೂ ಹೇರಿದ್ದ. ಮರಳಿ ಬರುವಾಗ ಬೇಗ ಬರುವ ಆತುರದಿಂದ ಬಹಳಷ್ಟು ಏಟು ಹಾಕಿ ವೇಗದಿಂದ ಓಡಿಸಿದ. ಮೊದಲೇ ದಣಿದ ಎತ್ತಿಗೆ ನಾಗಾಲೋಟ, ಏಟಗಳನ್ನು ತಾಳಿಕೊಳ್ಳಲಾಗದೇ ಅದು ಕುಸಿದು ಭೂಮಿಯ ಮೇಲೆ ಬಿದ್ದಿತು. ಆ ಎತ್ತಿನ ಬಾಯಿಯಿಂದ ನೊರೆ ಒಸರಲು ಆರಂಭವಾಗಿ, ಕಣ್ಣುಗುಡ್ಡೆಗಳೂ ತಿರುಗಹತ್ತಿದವು. ಅತ್ಯಂತ ನಿತ್ರಾಣಗೊಂಡ ಆ ಎತ್ತು ಮೃತ್ಯು ಜೀವನದ ಸಂದೇಹದ ಅಂದೋಲಿಕೆಯಲ್ಲಿ ತೂಗಾಡತೊಡಗಿತು. ಕೈ ಕಾಲುಗಳನ್ನು ಸೆಟೆಸಿ ನಿಟ್ಟುಸಿರು ಹೊಮ್ಮಿಸುತ್ತ ಒದ್ದಾಡುವ ಆ ಎತ್ತನ್ನು ನೋಡುವದಕ್ಕಾಗಿ ಸುತ್ತು ಮುತ್ತಲಿನ ಅನೇಕರು ಅಲ್ಲಿ ನೆರೆದರು. ಎತ್ತಿನ ಆ ದಯನೀಯವಾದ ಸ್ಥಿತಿಯನ್ನು ನೋಡಿ ಕರಗಿದ ಅನೇಕ ಸಜ್ಜನ ಕರುಣಾಳುಗಳು ಆ ಎತ್ತಿನ ಶ್ರೇಯಸ್ಸಿಗಾಗಿ ತಮ್ಮ ಪುಣ್ಯವನ್ನೇ ಧಾರೆಯೆರೆದರು.

ಅನೇಕರು ತಾವು ಮಾಡಿದ ಸ್ನಾನ, ದಾನ, ಸತ್ಕರ್ಮಗಳ ಪುಣ್ಯ ಫಲವನ್ನು 'ಈ ಎತ್ತಿನ ಶ್ರೇಯಸ್ಸಿಗಾಗಿ ವಿನಿಯೋಗವಾಗಲಿ'' ಎಂದು ಆ ಎತ್ತಿನ ಹೆಸರಿನಿಂದ ಸಂಕಲ್ಪಿಸಿ

ದಾನಮಾಡಿದರು. ಹೀಗೆ ಹಲವಾರು ಜನ ತಮ್ಮ ಪುಣ್ಯ ಧಾರೆಯೆರೆಯುವ ಆ ಗುಂಪಿನಲ್ಲಿ ಒಬ್ಬ ವೈಶ್ಯೆಯೂ ಇದ್ದಳು. ಅವಳೂ ಸಹ ಎತ್ತಿನ ಇಂಥ ಶೋಚನೀಯ ಅವಸ್ಥೆಯನ್ನು ಕಂಡು ಮನದುಂಬಿ ತನ್ನ ಪುಣ್ಯವನ್ನು ಆ ಎತ್ತಿಗೆ ಧಾರೆಯೆರೆದು ನೀಡಿದಳು. ಅಲ್ಲಿಯೇ ಕೆಲ ಕ್ಷಣಗಳಲ್ಲಿ ಪ್ರಾಣ ತ್ಯಜಿಸಿದ ಆ ಎತ್ತಿನ ಜೀವವನ್ನು ಯಮದೂತರು ಕೊಂಡೊಯ್ದರು. ಯಮಲೋಕದಲ್ಲಿ ವಿಚಾರಣೆ ನಡೆಯಿತು ಬೆಲೆವೆಣ್ಣು ಶ್ರದ್ಧೆಯಿಂದ ಸಂಕಲ್ಪಿಸಿ ಧಾರೆಯೆರೆದ ಮಹತ್ಪುಣ್ಯದ ಫಲವಾಗಿ ಆ ಎತ್ತು ಭೂಲೋಕದಲ್ಲಿನ ಶ್ರೇಷ್ಠ ಬ್ರಾಹ್ಮಣರ ವಂಶದಲ್ಲಿ (ಬ್ರಾಹ್ಮಣ ಕುಮಾರನಾಗಿ) ಜನಿಸಿತು. ಸುದೈವದಿಂದ ಅದಕ್ಕೆ ಜನ್ಮಾಂತರದ ಸ್ಮರಣೆಯೂ ಜಾಗರೂಕವಾಗಿದ್ದಿತು. ತಾನು ಎತ್ತಿನ ಜನ್ಮದಿಂದ ಇಂಥ ಉತ್ತಮ ಕುಲದಲ್ಲಿ ಹುಟ್ಟಿದ್ದು ಆ ವೇಶ್ಯೆಯು ನೀಡಿದ ಪರಿಶುದ್ಧ ದಾನದ ಮಹತ್ವಭಾವದಿಂದ, ಎಂಬುದು ಸ್ಮರಣೆಗೆ ಬಂದು, ಕೂಡಲೇ ಆ ಬ್ರಾಹ್ಮಣ ತನಗೆ ಪುಣ್ಯವನ್ನು ಧಾರೆಯೆರೆದ ಆ ವೇಶ್ಯೆಯ ಮನೆಗೆ ಬಂದ. ಅವಳನ್ನು ಕೇಳಿದ. ''ನಿನ್ನಲ್ಲಿ ಇಷ್ಟು ಅದ್ಭುತ ಪುಣ್ಯವು ಹೇಗೆ ಶೇಖರಿತವಾಯಿತು? ನೀನು ನೀಡಿದ ಪುಣ್ಯದ ಮಹಿಮೆಯಿಂದ ಎತ್ತಾಗಿದ್ದ ನಾನು ಬ್ರಾಹ್ಮಣ ವಂಶದಲ್ಲಿ ಉತ್ತಮ ಶೀಲವಂತರ ಕುಮಾರನಾಗಿ ಜನಿಸಿ ಬಂದಿರುವೆ. ಪುಣ್ಯಾತ್ಮಳೇ! ಇಂಥ ಅದ್ಭುತ ಪುಣ್ಯಗಳಿಸಬೇಕಾದರೆ ನೀನು ಯಾವ ಶ್ರೇಷ್ಠ ಧರ್ಮ ದಾನಗಳನ್ನು ಆಚರಿಸಿರುವಿ? ಅದಾವ ವ್ರತಾಚರಣೆ ಮಾಡಿದಿ? ನನ್ನ ಈ ಉತ್ತಮ ಜನ್ಮಕ್ಕೆ ಕಾರಣವಾದ ಆ ಉತ್ತಮ ಕರ್ಮಾಚರಣೆ ಯೇನೆಂಬುದನ್ನು ದಯವಿಟ್ಟು ನನಗೆ ತಿಳಿಸು.'' ಎಂದು ಕೇಳಿಕೊಂಡ.

**ವೇಶ್ಯೆ:-** ನಾನು ಕುಲದಿಂದಲೂ, ಕೃತಿಯಿಂದಲೂ ಮಹಾ ಪಾಪಿಷ್ಠಳು. ಆದರೆ ನಾನು ಒಂದು ಪುಣ್ಯ ಕಾರ್ಯವನ್ನು ಮಾತ್ರ ತಪ್ಪದೇ ಇಂದಿಗೂ ಪ್ರತಿನಿತ್ಯ ಮಾಡುತ್ತ ಬಂದಿರುವೆ. ಅದೇನೆಂದರೆ ನನ್ನ ಮನೆಯಲ್ಲಿ ಪಂಜರದಲ್ಲಿ ಗಿಳಿಯೊಂದಿದೆ. ಆ ಗಿಳಿಯು ಪ್ರತಿನಿತ್ಯ ಕೆಲವು ಮಂತ್ರಗಳನ್ನು ಹೇಳುತ್ತದೆ. ಅದನ್ನು ನಾನು ಶ್ರದ್ಧೆಯಿಂದ ಆಲಿಸುವ ಪುಣ್ಯ ಕಾರ್ಯವನ್ನು ಮಾಡಿ ಯಾವ ಪುಣ್ಯ ಸಂಪಾದಿಸಿದ್ದೆನೋ. ಅದನ್ನೇ ನಿನಗೆ ಧಾರೆ ಎರೆದಿದ್ದೇನೆ.

ಇದನ್ನು ಕೇಳಿ ಆ ಬ್ರಾಹ್ಮಣ ಆ ಗಿಳಿಯನ್ನು ನೋಡುವ ಬಯಕೆಯನ್ನು ವ್ಯಕ್ತಪಡಿಸಿದ. ಬ್ರಾಹ್ಮಣ ಮತ್ತು ಆ ವೇಶ್ಯೆ ಇಬ್ಬರೂ ಪಂಜರದ ಬಳಿಗೆ ಬಂದರು. ಆ ಗಿಳಿಯನ್ನು ಈ ರೀತಿ ಪ್ರಶ್ನಿಸಿದರು.

''ನೀನು ಇಂಥ ಪವಿತ್ರವಾದ ಮಂತ್ರಗಳನ್ನು ಹೇಗೆ ಮುಖೋದ್ಗತವಾಗಿ ಹೇಳುವಿ? ನಿನ್ನ ಸಮಾಚಾರವೇನು? ನಮಗೆ ತಿಳಿಸು.'' ಅವರ ಈ ಪ್ರಶ್ನೆಗಳನ್ನು ಕೇಳಿ ಜನ್ಮಾಂತರದ ಸ್ಮರಣೆಯಿಂದ ಆ ಗಿಳಿಯು ಹೇಳತೊಡಗಿತು.

**ಶುಕ:-** ನಾನು ಜನ್ಮಾಂತರದಲ್ಲಿ ವೇದಶಾಸ್ತ್ರಾದಿಗಳನ್ನು ಅಧ್ಯಯನಿಸಿ ಮಹಾ ಪಂಡಿತನಾಗಿದ್ದೆ. ಆದರೆ ನನ್ನಲ್ಲಿ ಆ ವೈದುಷ್ಯದ ಜೊತೆಗೆ ಪರ್ವತದಷ್ಟು ಬೃಹದಾಕಾರವಾಗಿ ಗರ್ವವೂ ಬೆಳೆದು ನಿಂತಿತ್ತು. ಪಾಂಡಿತ್ಯದ ಸೊಕ್ಕಿನಿಂದ ಉನ್ಮಾದಗೊಂಡ ನಾನು ಎಲ್ಲ ವಿದ್ವಾಂಸರನ್ನೂ ಧಿಕ್ಕರಿಸಿ, ತುಚ್ಛವಾಗಿ ಮಾತನಾಡುತ್ತಿದ್ದೆ. ಬ್ರಾಹ್ಮಣರೆಲ್ಲರನ್ನೂ ತಿರಸ್ಕರಿಸುತ್ತಿದ್ದೆ. ಪಾಂಡಿತ್ಯದ ಮದದಿಂದ ಬೀಗಿನಿಂತ ನಾನು ವಿದ್ವಜ್ಜನರು, ಸಜ್ಜನರು, ಭಗವದ್ಭಕ್ತರು, ಯಾರಿಗೂ ಗೌರವ ನೀಡುತ್ತಿರಲಿಲ್ಲ. ಸತ್ಕರಿಸುತ್ತಲಿರಲಿಲ್ಲ. ಹೀಗೆ ಪರಿಭಕ್ತರಾದ ವಿದ್ವಾಂಸರಲ್ಲಿ ಕರ್ಮಠರಲ್ಲಿ ಕುದೃಷ್ಟಿ, ಅನಾದರ, ಗುಣವಂತರಲ್ಲಿ ಮತ್ಸರ, ಸೀಮೆ ಮೀರಿದ ಗರ್ವ ಈ ಮೂರು ದುರ್ಗುಣಗಳಿಂದ ನಾನು ಜೀವನವಿಡೀ ಮೆರೆದರೂ

ಮರಣ ಹೊಂದಿದ ಬಳಿಕ ತಿರ್ಯಗ್ಯೋನಿಯಲ್ಲಿ ಒಂದು ಗಿಳಿಯ ವಂಶಧಲ್ಲಿ ಜನ್ಮ ತಳೆದೆ. ಹಿಂದಿನ ಜನ್ಮದಲ್ಲಿ ಮಾಡಿದ ಗುರು ಹಿರಿಯರ ನಿಂದೆ ನಿರ್ಭತ್ಸೆಗಳ ಫಲವಾಗಿ ನನಗೆ ಇಂಥ ಗಿಳಿಯ ಜನ್ಮ ಬಂದಿತು. ಈ ಗಿಳಿಯ ಜನ್ಮದಲ್ಲಿನ ನನ್ನ ತಾಯಿ ತಂದೆಗಳಿಬ್ಬರೂ ಮೃತರಾದ ಬಳಿಕ ಅನಾಥನಾದ ನಾನು ಒಮ್ಮೆ ಬೇಸಿಗೆಯ ಬಿಸಿಲಿನಲ್ಲಿ ಸಂಕಟಪಡುತ್ತ ದುಃಖಿಸುತ್ತಿರುವಾಗ ಅಲ್ಲಿಗೆ ಬಂದ ಕೆಲ ಮುನಿಗಳು ನನ್ನನ್ನು ಮನೆಗೆ ತೆಗೆದುಕೊಂಡು ಹೋದರು. ಅವರ ಮನೆಯಲ್ಲಿಯೇ ನನ್ನ ಪಾಲನೆ, ಪೋಷಣೆಗಳು ನಡೆದವು.

ಋಷಿಗಳ ಆಶ್ರಮದಲ್ಲಿದ್ದಾಗ ಮಹಾನುಭಾವರಾದ ಅವರು ಯಾವಾಗಲೂ ಶ್ರೀ ಭಗವದ್ಗೀತೆಯ ಮೊದಲನೆಯ ಅಧ್ಯಾಯದ ಪಾರಾಯಣ ಪ್ರವಚನ ಮಾಡುತ್ತಲಿದ್ದರು. ಋಷಿ ಕುಮಾರರೂ ಅದನ್ನು ಮೇಲಿಂದ ಮೇಲೆ ಪಠಿಸುತ್ತಿದ್ದರು. ಇಂಥ ಪುಣ್ಯ ಪರಿಸರದಲ್ಲಿ ನನಗೆ ಪ್ರತಿನಿತ್ಯ ಅನೇಕ ಬಾರಿ ಈ ಗೀತೆಯನ್ನು ಶ್ರವಣಮಾಡುವ ಸಂಯೋಗ ಲಭಿಸಿತ್ತು. ತತ್ಪರಿಣಾಮವಾಗಿ ಭಗವದ್ಗೀತೆಯ ಮೊದಲನೆಯ ಅಧ್ಯಾಯವು ನನಗೆ ಮುಖೋದ್ಗತವಾಗಿದ್ದಿತು.

ಕೆಲದಿನಗಳ ಬಳಿಕ ಒಂದು ಸಮಯದಲ್ಲಿ ಆ ಋಷಿ ಕುಮಾರರೆಲ್ಲ ಸಮಿಧೆ, ಫಲ, ಪುಷ್ಪ ಮುಂತಾದ ಪೂಜಾಸಾಮಗ್ರಿಗಳನ್ನು ಆಯ್ದುಕೊಂಡು ಬರಲು ಕಾಡಿಗೆ ಹೋದಾಗ ಸಮಯಸಾಧಿಸಿ ದುಷ್ಟ ಬೇಟೆಗಾರನೊಬ್ಬ ಆಶ್ರಮದೊಳಕ್ಕೆ ಬಂದ. ಪಂಜರದೊಳಗೆ ಗೀತೆಯ ಪ್ರಥಮಾಧ್ಯಾಯವನ್ನು ಸ್ಪಷ್ಟವಾಗಿ ಪಠಿಸುತ್ತ ಕುಳಿತಿದ್ದ ನಾನು ಆತನ ಕಣ್ಣಿಗೆ ಬಿದ್ದೆ. ಮುಂದೆ ಕ್ಷಣಾರ್ಧದಲ್ಲಿ ಪಂಜರಸಹಿತವಾಗಿಯೇ ನನ್ನನ್ನು ಕದ್ದುಕೊಂಡು ಅಲ್ಲಿಂದ ಪಲಾಯನ ಮಾಡಿದ. ನಂತರ ಈ ವೇಶ್ಯೆಗೆ ಮಾರಿದ. ಈ ವೇಶ್ಯೆಯ ಮನೆಯಲ್ಲಿಯೂ ನಾನು ಯಥಾಪ್ರಕಾರ ಗೀತೆಯ ಪ್ರಥಮಾಧ್ಯಾಯವನ್ನು ಪ್ರತಿನಿತ್ಯ ಸ್ಪಷ್ಟವಾಗಿ ಪಾರಾಯಣ ಮಾಡುತ್ತಲೇ ಇದ್ದೆ. ಅದನ್ನು ಆಸ್ಥೆಯಿಂದ ಆ ವೇಶ್ಯೆ ಆಲಿಸತೊಡಗಿದಳು. ಹೀಗೆ ಅನೇಕ ದಿನಗಳಿಂದ ಗೀತೆಯ ಪ್ರಥಮಾಧ್ಯಾಯ ಪಾರಾಯಣದ ಶ್ರವಣದಿಂದ ಆ ವೇಶ್ಯೆಗೆ ವಿಪುಲ ಪುಣ್ಯ ಬಂದಿತು. ಅದನ್ನೇ ನಿನಗೆ ಎತ್ತಿನ ಜನ್ಮದಲ್ಲಿರುವಾಗ ದಾನ ನೀಡಿದ್ದಾಳೆ. ತತ್ಪ್ರಭಾವ ದಿಂದಲೇ ನೀನು ಆ ಎತ್ತಿನ ಜನ್ಮವನ್ನು ತೊರೆದು ಇಂಥ ಅತ್ಯುತ್ತಮ ಬ್ರಾಹ್ಮಣ ಜನ್ಮ ಪಡೆದಿರುವಿ. ಇದು ಆ ಗೀತೆಯ ಪ್ರಥಮಾಧ್ಯಾಯ ಪಾರಾಯಣ ಶ್ರವಣಾದಿಗಳ ಫಲವೇ ಸರಿ.

ಹೀಗೆ ಆ ಗೀತೆಯ ಪಾರಾಯಣ-ಪಠಣ-ಶ್ರವಣಗಳ ಫಲವಾಗಿ ಆ ಬ್ರಾಹ್ಮಣ, ಗಿಳಿ, ಮತ್ತು ವೇಶ್ಯೆ ಮೂವರೂ ಭಗವದನುಗ್ರಹಕ್ಕೆ ಪಾತ್ರರಾಗಿ ಉದ್ಧರಿತಿಯನ್ನು ಹೊಂದಿದರು. ಆದುದರಿಂದ ಮನುಷ್ಯರು ಎಲ್ಲರೂ ಸರ್ವಪ್ರಯತ್ನದಿಂದ ಸಾಕ್ಷಾತ್ ವಾಸಿಷ್ಠಕೃಷ್ಣ, ಯಾದವಕೃಷ್ಣ ಇಬ್ಬರ ಮುಖಾರವಿಂದದಿಂದ ನಿಸ್ಸೃತವಾದ ಸಂಪೂರ್ಣ ಗೀತೆಯ ಪಠಣ-ಪಾಠಣ, ಪಾರಾಯಣ, ಪ್ರವಚನ ಮೊದಲಾದವನ್ನು ಅವಶ್ಯವಾಗಿ ಮಾಡಬೇಕು. ಸಂಪೂರ್ಣವಾದ ಭಗವದ್ಗೀತೆಯನ್ನು ಪಠಣಮಾಡಲಾಗದವರು ಕೊನೆಗೆ ಪ್ರಥಮಾಧ್ಯಾಯವನ್ನಾದರೂ ಪಠಿಸಬೇಕು. ಪಾರಾಯಣ ಮಾಡಬೇಕು. ಪ್ರವಚನ, ಶ್ರವಣಾದಿಗಳನ್ನು ಆಗಾಗ ಮಾಡುತ್ತಲಿರಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಪಾರ್ವತಿ ಪರಮೇಶ್ವರರ ಸಂವಾದ ಭಗವದ್ಗೀತೆಯ ಮೊದಲಿನ ಅಧ್ಯಾಯದ ಮಹಿಮೆ ಎಂಬ ನೂರ ಐವತ್ತೆಳನೇಯ ಅಧ್ಯಾಯ ಮುಗಿದುದು*

## ಭಗವದ್ಗೀತೆಯ ಎರಡನೆಯ ಅಧ್ಯಾಯದ ಮಾಹಾತ್ಮ್ಯ ದೇವಶರ್ಮನ ಉಪಾಖ್ಯಾನ

ಅಧ್ಯಾಯ - ೧೫೮

**ಭಗವಾನ್:-** ಸುಂದರಿಯಾದ ಇಂದಿರೆ ! ನಾನು ನಿನಗೆ ಭಗವದ್ಗೀತೆಯ ಪ್ರಥಮಾಧ್ಯಾಯದ ಮಹಿಮೆಯನ್ನು ವರ್ಣಿಸಿ ಹೇಳಿದೆ. ಈಗ ಗೀತೆಯ ಎರಡನೆಯ ಅಧ್ಯಾಯದ ಪ್ರಭಾವವನ್ನು ಹೇಳುವೆ ಕೇಳು.

ದಕ್ಷಿಣ ದೇಶದಲ್ಲಿ ವೇದವೇದಾಂತಗಳಲ್ಲಿ ಅಧ್ಯಯನಿಸಿದ ಒಂದು ಪಂಡಿತ ಕುಟುಂಬ. ಅಲ್ಲೊಬ್ಬ ದೇವಶರ್ಮನೆಂಬ ಬ್ರಾಹ್ಮಣ. ಆ ಬ್ರಾಹ್ಮಣ ನೆಲಸಿದ ಪಟ್ಟಣಕ್ಕೆ ಪುರಂದರ ಎಂದು ಹೆಸರು. ಈತ ವೇದದಲ್ಲಿ ಪರಿನಿಷ್ಠಿತ. ಶಾಸ್ತ್ರದಲ್ಲಿ ಪಂಡಿತ. ಮನೆಗೆ ಬಂದ ಅತಿಥಿ. ಅಭ್ಯಾಗತರ ಆದರದಲ್ಲಿ ನಿಷ್ಣಾತ. ಈತ ಮಾಡಿದ ಯಜ್ಞಗಳಿಗೆ ಲೆಕ್ಕವಿಲ್ಲ. ತಪಸ್ವಿಗಳಿಗೆಲ್ಲ ಪರಮಪ್ರಿಯ. ಹೋಮಹವನಗಳಿಂದ ದೇವತೆಗಳನ್ನೂ, ಪಾಠ ಪ್ರವಚನ ಪಾರಾಯಣಾದಿಗಳಿಂದ ಭಗವಾನ್ ಶ್ರೀಹರಿಯನ್ನೂ ಸಂತೋಷಗೊಳಿಸುತ್ತಲಿದ್ದ. ಮನೆಗೆ ಬಂದ ಜ್ಞಾನವೃದ್ಧ, ತಪೋವೃದ್ಧ, ವಯೋವೃದ್ಧರನ್ನೂ ಅತ್ಯಂತ ಭಕ್ತಿಯಿಂದ ಸೇವಿಸುತ್ತಲಿದ್ದ.

ಒಂದು ದಿನ ಈ ದೇವಶರ್ಮನೆಂಬ ವಿಪ್ರಶ್ರೇಷ್ಠನ ಮನೆಗೆ ಮಹಾಯೋಗಿಯೊಬ್ಬರು ಆಗಮಿಸಿದರು. ಅವರ ಪಾದಪೂಜೆಯನ್ನು ಮಾಡಿ ಪಾದಧೂಳಿಯನ್ನು ಶಿರಸ್ಸಿನಿಂದ ಧರಿಸಿ ಅವರ ಯೋಗ್ಯತೆಗನುಸಾರವಾಗಿ ಗೌರವ ಉಪಚಾರಗಳನ್ನು ಸಲ್ಲಿಸಿ ಕೈಮುಗಿದು ಕೇಳಿದ. ''ಸ್ವಾಮಿ, ನಮಗೆ ಶ್ರೇಯಸ್ಸಾಗುವ ಮಾರ್ಗವಾವುದು? ನಾನು ಯಜ್ಞ-ಯಾಗಾದಿಗಳು, ಪಾಠ ಪ್ರವಚನ, ಅತಿಥಿಸತ್ಕಾರ, ದೇವಬ್ರಾಹ್ಮಣರ ಸೇವೆ ಮುಂತಾದವನ್ನು ಮಾಡುತ್ತಲೇ ಇದ್ದೇನೆ. ಆದರೂ ನನಗೆ ತೃಪ್ತಿಯಿಲ್ಲ. ಹೃದಯಕ್ಕೆ ಶಾಂತಿಯಿಲ್ಲ. ಆದುದರಿಂದ ಆತ್ಮ ಸಂತೃಪ್ತಿಯುಂಟಾಗುವ ಉಪಾಯವೊಂದನ್ನು ತಾವು ದಯವಿಟ್ಟು ನನಗೆ ಸೂಚಿಸಬೇಕು.

ಈ ದೇವಶರ್ಮನ ಪ್ರಶ್ನೆಯನ್ನು ಕೇಳಿದ ಆ ಯೋಗೀಶ್ವರರು ಒಂದು ನಿಮಿಷ ಅಮೀಲಿತಲೋಚನರಾಗಿ, ಏನೋ ಧ್ಯಾನಗೈದು ಅನಂತರ ಹೇಳಿದರು.

**ಯೋಗೀಶ್ವರ:-** ಉತ್ತರ ದೇಶದಲ್ಲಿ ಸೌಪುರ ಎಂಬ ನಗರವಿದೆ. ಅಲ್ಲಿ ಮಿತ್ರವಂತನೆಂಬ ಒಬ್ಬ ಕುರಿಕಾಯುವವನಿದ್ದಾನೆ. ನಿನಗೆ ಶ್ರೇಯಸ್ಕರವಾದ ಮಾರ್ಗವನ್ನು ಆ ಅಜಪಾಲನು ನಿರೂಪಿಸುತ್ತಾನೆ.

ಆ ಯೋಗೀಶ್ವರನ ಸಂದೇಶವನ್ನು ಶ್ರವಣಮಾಡಿದ ದೇವಶರ್ಮನಿಗೆ ಪರಮಾನಂದವಾಯಿತು. ಅವರ ನಿರ್ದೇಶನದಂತೆ ಉತ್ತರದಿಕ್ಕಿಗೆ ಆತ ಪಯಣ ಬೆಳೆಸಿದ. ದಾರಿಯಲ್ಲಿ ಬರುವ ದೊಡ್ಡ ದೊಡ್ಡ ಗುಡ್ಡಗಳನ್ನೂ, ಸಾಣುಕಾಣುಗಳನ್ನೂ ಬೆಟ್ಟ-ಬಯಲುಗಳನ್ನೂ ದಾಟಿ, ಅವನು ಸೌಪುರ ನಗರಕ್ಕೆ ತಲುಪಿದ. ಆ ನಗರದ ಪ್ರಾಂತ ಪರಿಸರದಲ್ಲಿಯೇ ತಿಳಿನೀರಿನ ನದಿಯೊಂದು ಹರಿಯುತ್ತಲಿತ್ತು. ನದಿಯ ತೀರದಲ್ಲಿನ ಹಾಸುಗಲ್ಲಿನ ಮೇಲೆ ಕಣ್ಮುಚ್ಚಿ ಪ್ರಶಾಂತ ಮುದ್ರೆ ಧರಿಸಿ ಕುರಿಕಾಯವವ ಕುಳಿತಿದ್ದ.

ಆ ಮಿತ್ರವಂತನ ಆಶ್ರಮದಲ್ಲಿ ಒಂದು ವಿಚಿತ್ರ ದೃಶ್ಯ ದೇವಶರ್ಮನ ಕಣ್ಣಿಗೆ ಬಿದ್ದಿತು. ಅಲ್ಲಿ ಇರುವ ಹುಲಿ, ಸಿಂಹ, ಕರಡಿ, ಆನೆ, ಮುಂಗಸಿ, ಹಾವು, ಇಲಿ, ಬೆಕ್ಕು, ನಾಯಿ ಇನ್ನಿತರ

ಎಲ್ಲ ಪ್ರಾಣಿಗಳೂ ತಮ್ಮ ಜಾತಿ ಸಹಜವಾದ ದ್ವೇಷ, ಮರೆತು ಸಹಜೀವನವನ್ನು ಸ್ನೇಹದಿಂದ ನಡೆಸಿದ್ದವು. ಒಂದನ್ನೊಂದು ವೈರಿಗಳಾದ ಪ್ರಾಣಿಗಳು ಪರಸ್ಪರ ಪ್ರೀತಿ, ಸೌಹಾರ್ದಭಾವಗಳಿಂದ ಅಕ್ಕಪಕ್ಕದಲ್ಲಿ ಅಕ್ಕರೆಯಿಂದ ಒರಗಿಸಿಕೊಂಡು ಅಲ್ಲಿನ ಹಾಸುಗಲ್ಲುಗಳ ಮೇಲೆ ವಿಶ್ರಾಂತಿ ಪಡೆಯುತ್ತಲಿದ್ದವು. ಅದನ್ನು ಕಂಡು ಒಮ್ಮೆಲೇ ಕೌತುಕಾಕ್ರಾಂತನಾದ ದೇವಶರ್ಮನು ಆ ಆಶ್ರಮದ ಪರಿಸರದಲ್ಲಿ ಸೂರ್ಯನೂ ಸಹ ತನ್ನ ಕಠೋರ ರಶ್ಮಿಗಳನ್ನು ಮೃದುಗೊಳಿಸಿ ಆಶ್ರಮದ ಋಷಿಗಳಿಗೆ ಬಿಸಿಲಿನ ಬೇಗೆಯುಂಟಾಗ ಬಾರದೆಂದು ಎಚ್ಚರವಹಿಸುತ್ತಲಿದ್ದ. ಈ ರಮಣೀಯ ಹಾಗೂ ಪವಿತ್ರ ಪರಿಸರಕ್ಕೆ ಮನಸೋತ ದೇವಶರ್ಮನು ಭಕ್ತಿಯಿಂದ ತಲೆಬಾಗಿದ. ಆಶ್ರಮದ ಅಂಗಳದಲ್ಲಿಯೇ ದಿವ್ಯ ತೊರೆ ಹರಿಯುತ್ತಲಿತ್ತು. ಅದರ ತೀರದಲ್ಲಿರುವ ಒಂದು ಶಿಲಾಫಲಕದ ಮೇಲೆ ಮಿತ್ರವಂತನು ಕುಳಿತಿದ್ದ. ಕುರಿಗಾಹಿಯಾಗಿದ್ದರೂ ಮಿತ್ರವಂತನು ತನ್ನ ಯೋಗ್ಯತೆಯಿಂದ 'ಮಹರ್ಷಿ' ಪದವಿಗೇರಿದ್ದ. ಧ್ಯಾನಾರೂಢನಾಗಿ ನಿಶ್ಚಲಾಸನದಲ್ಲಿ ಆಸೀನನಾದ ಆ ಮಹರ್ಷಿ ಮಿತ್ರವಂತನನ್ನು ಒಮ್ಮೆ ದೇವಶರ್ಮನು ಕಣ್ತುಂಬ ದಿಟ್ಟಿಸಿ ನೋಡಿದ. ಆ ಮುನಿಯು ತಪಸ್ಸಮಾಧಿಯಿಂದ ಇಳಿಯುವವರೆಗೆ ಕಾಯುತ್ತ ಕುಳಿತ. ಧ್ಯಾನೋಪಾಸನೆ ಮುಗಿದ ಬಳಿಕ ಬಳಿಗೆ ಹೋಗಿ ವಂದಿಸಿ ಬಿನ್ನಹ ಮಾಡಿಕೊಂಡ. ''ಪೂಜ್ಯರೇ, ನಾನು ನನ್ನ ಆತ್ಮಕ್ಕೆ ಶ್ರೇಯಸ್ಕರವಾದ ಉಪಾಯವನ್ನು ತಮ್ಮಿಂದ ತಿಳಿಯಲು ಬಯಸುತ್ತೇನೆ. ನನಗೆ ಸಿದ್ಧಿಸಬಹುದಾದ ಅಂಥ ಸಾಧನಾಮಾರ್ಗವನ್ನು ದಯವಿಟ್ಟು ಉಪದೇಶಿಸಿರಿ.

ದೇವಶರ್ಮನ ಪ್ರಾರ್ಥನೆಯನ್ನು ಕೇಳಿ ಒಂದು ಚಣಹೊತ್ತು ಮತ್ತೆ ಕಣ್ಮುಚ್ಚಿ ಧ್ಯಾನಲೀನನಾದ ಆ ಮಿತ್ರವಂತನೆಂಬ ಮೇಷಪಾಲ ಮಹರ್ಷಿ. ನಂತರ ಮೆಲ್ಲನೇ ಕಣ್ತೆರೆದು ಮಂದವಾದ ಧ್ವನಿಯಲ್ಲಿ ಮಾತನಾಡಿದ.

**ಮಿತ್ರವಂತ:-** ಗೋದಾವರೀ ತೀರದಲ್ಲಿ ಪ್ರತಿಷ್ಠಾನವೆಂಬ ನಗರವಿದೆ. ಅಲ್ಲಿ ದುರ್ದಮನೆಂಬ ಬ್ರಾಹ್ಮಣ, ಪಂಡಿತರ ವಂಶದಲ್ಲಿ ಹುಟ್ಟಿ ವಾಸಮಾಡುತ್ತಲಿದ್ದಾನೆ. ಅದೇ ಊರಲ್ಲೇ ವಿಕ್ರಮನೆಂಬ ಮಹಾರಾಜನೂ ಇದ್ದಾನೆ. ಈತನು ತಾನು ಕ್ಷತ್ರಿಯನಾದರೂ ಜನರಿಂದ ದಾನ ಸ್ವೀಕಾರ ಮಾಡುತ್ತಿದ್ದ. ಕೇವಲ ಉದರಂಭರಣವೇ ಈ ವಿಕ್ರಮನ ಉದ್ಯೋಗ. ಹೀಗೆ ತನ್ನ ಜಾತಿಗೆ ವಿರುದ್ಧವಾದ ವ್ಯಾಪಾರ ಮಾಡುತ್ತ ಕೇವಲ ದ್ರವ್ಯಲೋಭದಿಂದ ಕಂಡಕಂಡವರಿಂದ, ಕುಮಾರ್ಗಗಳಿಂದ ಸಿಕ್ಕಷ್ಟು, ಸಿಕ್ಕಷ್ಟೂ ಧನ ದೋಚುತ್ತಿದ್ದ. ಆ ರಾಜ ಕೊನೆಗೆ ಒಂದು ದಿನ ಮರಣ ಹೊಂದಿದ. ಯಮಕಿಂಕರರು ಅವನನ್ನು ಯಮಪಟ್ಟಣಕ್ಕೆ ಕರೆದೊಯ್ದರು. ಯಮಪುರಿಯಲ್ಲಿ ಬಗೆಬಗೆಯ ಯಾತನೆಗಳನ್ನು ಅನುಭವಿಸಿ, ಭ್ರಷ್ಟ ಬ್ರಾಹ್ಮಣರ ಮನೆಯಲ್ಲಿ ನಂತರ ಜನ್ಮತಾಳಿದ. ಅಧಣ ಕುಲದಲ್ಲಿ ಹುಟ್ಟಿದ ಒಂದು ಕನ್ಯೆಯೊಡನೆ ಮದುವೆಯಾದ. ಯೌವ್ವನಲಾವಣ್ಯ ಆ ಸ್ತ್ರೀಯಲ್ಲಿ ಸೂಸುತ್ತಿರುವ ವಿಷಮ ವೇಳೆಯಲ್ಲಿ ದಾರಿಬಿಟ್ಟು, ಪತಿಯನ್ನು ವಂಚಿಸಿದಳು. ಪರಪುರುಷರಿಗೆ ಸುಖಲಾಲಸೆಯಿಂದ ತನ್ನ ಶರೀರವನ್ನು ಅರ್ಪಿಸಿದಳು.

ಒಂದು ದಿನ ಈ ಬ್ರಾಹ್ಮಣ ಮನೆ ಬಿಟ್ಟು ತನ್ನ ಉಪಜೀವನವನ್ನರಸುತ್ತ ಊರು ಬಿಟ್ಟು ಹೊರಹೋಗಿದ್ದ. ಆಗ ಕಾಮುಕಿಯಾದ ಆತನ ಹೆಂಡತಿಯು ಓರ್ವ ಚಂಡಾಲನ ಜೊತೆಗೆ ಸಹವಾಸಮಾಡಿ, ಕಾಲಾಂತರದಲ್ಲಿ ಆ ಚಂಡಾಲನಿಂದ ಒಂದು ಕನ್ಯೆಯನ್ನೂ

ಪಡೆದಳು. ಹೀಗೆ ಬಗೆಬಗೆಯ ಪಾಪಕರ್ಮಗಳನ್ನು ಮಾಡಿ, ಅನೇಕ ಪುರುಷರೊಂದಿಗೆ ವ್ಯಭಿಚಾರಾದಿಗಳನ್ನು ಮಾಡುತ್ತ ಜೀವನ ಕಳೆದಳು ಮತ್ತು ಕೆಲಕಾಲ ನಂತರ ವೃದ್ಧಳಾದಳು. ಮರಣಾನಂತರ 'ಡಾಕಿನಿ' ಎಂಬ ಪಿಶಾಚಿಯಾಗಿ ಜನ್ಮತಳೆದಳು. ಅವಳು ತನ್ನ ಈ ಪಿಶಾಚ ಜನ್ಮದಲ್ಲಿ ರಕ್ತದ ಆಸೆಯಿಂದ ವ್ಯಾಧಿಗ್ರಸ್ತನಾದ ಒಬ್ಬ ಕಿರಾತನನ್ನು ಸಂಹರಿಸಿ ತಿಂದಳು. ಆ ಡಾಕಿನಿಯನ್ನು ಕಂಡು ಎಲ್ಲ ಜನರೂ ಹೆದರುತ್ತಿದ್ದರು. ಇವಳು ಕೊಂದು ತಿಂದ ಆ ಕಿರಾತನು ನರಕದಲ್ಲಿ ತಾನು ಮಾಡಿದ ಕರ್ಮಗಳಿಗೆ ಅನೇಕ ಬಗೆಯ ಹಿಂಸೆಗಳನ್ನನುಭವಿಸಿ ಕೊನೆಗೊಮ್ಮೆ ಭೂಲೋಕದಲ್ಲಿ ಹುಲಿಯಾಗಿ ಹುಟ್ಟಿದ. ಈ ಡಾಕಿನಿಯೆಂಬ ಪಿಶಾಚಿಯೂ ಸಹ ಕಾಲಕ್ರಮೇಣ ಮರಣಹೊಂದಿ, ಭೂಲೋಕದಲ್ಲಿ ಆಡಿನ ಜನ್ಮದಿಂದ ಹುಟ್ಟಿ ನನ್ನ ಮನೆಯಲ್ಲಿ ವಾಸಿಸತೊಡಗಿದಳು. ನಾನು ಅದಲ್ಲದೇ ಇನ್ನೂ ಅನೇಕ ಆಡುಗಳನ್ನು ನನ್ನ ಮನೆಯಲ್ಲಿ ಪೋಷಿಸುತ್ತಿದ್ದೆ. ಒಂದು ದಿನ ಅರಣ್ಯದಲ್ಲಿ ಒಂದು ಭಯಂಕರ ಹುಲಿ ಗುಡುಗು ಹಾಕುತ್ತ ಬಂದಿತು. ಅದರ ಧ್ವನಿಯನ್ನು ಕೇಳಿಯೇ ತತ್ತರಿಸಿದ ನಾನು ಜೀವಭಯದಿಂದ ಆಡುಗಳನ್ನೆಲ್ಲ ಅಲ್ಲೇ ಬಿಟ್ಟು ಓಡಿದೆ. ದೂರದಲ್ಲಿ ಮರೆಯಾಗಿ ನಿಂತು ನೋಡಿದೆ.

ಅಕಸ್ಮಾತ್ತಾಗಿ ಪೂರ್ವ ಜನ್ಮದ ಸ್ಮರಣೆ ಮರುಕಳಿಸಿದ ಆ ಹುಲಿಯು ತನ್ನ ಪೂರ್ವಜನ್ಮದ ಅವಸಾನಕ್ಕೆ ಕಾರಣವಾದ ಆ ಆಡಿನ ಎದುರಿಗೆ ಹೋಗಿ ನಿಂತಿತು. ಪೂರ್ವಜನ್ಮದ ನೆನಪಿಲ್ಲದೇ, ಆಡಿನ ಸ್ವಭಾವಕ್ಕನುಗುಣವಾಗಿ ಸ್ವಚ್ಛಂದವಾಗಿ ಮೇಯುತ್ತ ಅಲ್ಲಲ್ಲಿ ಅಡ್ಡಾಡುತ್ತಲಿದ್ದ ಆ ಆಡು ತನ್ನೆದುರಿನ ಹುಲಿಯನ್ನು ಕಂಡು ಗಕ್ಕನೇ ನಿಂತಿತು. ಹುಲಿಯನ್ನು ಕಂಡಕೂಡಲೇ ಅದಕ್ಕೂ ಪೂರ್ವಜನ್ಮದ ಸ್ಮರಣೆ ಬಂದಿತು. ಆಗ ಆಡು ಆ ಸ್ಥಳದಿಂದ ಚಲಿಸದೇ, ನಿಂತಲ್ಲಿಯೇ ಗಕ್ಕನೇ ನಿಂತಿತು. ಮತ್ತು ಹುಲಿಯನ್ನು ಸ್ತಬ್ಧವಾಗಿ ಕ್ಷಣಹೊತ್ತು ನೋಡಿತು. ಈ ಅನಿರೀಕ್ಷಿತ ವರ್ತನೆಯನ್ನು ಅಸಹಜ ಸ್ತಬ್ಧತೆಯನ್ನು ಕಂಡ ಹುಲಿಯ ಹೃದಯದಲ್ಲೂ ಒಮ್ಮಿಂದೊಮ್ಮೆಲೇ ಪರಿವರ್ತನೆಯುಂಟಾಯಿತು. ಅದರ ಮನದಲ್ಲಿ ಪ್ರಾಣಿಹಿಂಸೆ ಸಲ್ಲದೆಂಬ ಸದ್ಬುದ್ಧಿ ಉದಿಸಿತು. ಅದನ್ನು ತಿಳಿದ ಈ ಆಡು ಅದಕ್ಕೆ ಹೇಳಿತು. ''ಹುಲಿಯೇ, ಈಗಲೇ ನನ್ನನ್ನು ನೀನು ಹೊಡೆದು ಕೊಂದು ತಿನ್ನಬಹುದು. ಆದರೂ ಹೊಡೆಯದೇ, ಹಿಂಸಿಸದೇ ತಟಸ್ಥವಾಗಿ ನಿಂತಿರುವೆ. ನಿನ್ನಲ್ಲಿ ಹಿಂಸೆಯ ರುಚಿಯೇ ಅಳಿದುಹೋದಂತಿದೆ; ಜಾತಿದ್ವೇಷವೂ ಮಾಯವಾಗಿದೆ. ಇಂಥ ಸದ್ಬುದ್ಧಿ, ದಯೆ, ಅಂತಃಕರಣ ಮುಂತಾದ ಗುಣಗಳು ಒಮ್ಮೆಲೇ ಉದಯಿಸಿದ್ದು ಹೇಗೆ?''

ಆ ಆಡಿನ ಮಾತನ್ನು ಕೇಳಿ ದ್ವೇಷರಹಿತವಾದ ನಿರ್ಮಲ ಮನಸ್ಸಿನಿಂದ ಇಂತು ನುಡಿಯಿತು ''ನಾನು ಈ ಸ್ಥಳಕ್ಕೆ ಬಂದಾಗಿನಿಂದ ನನ್ನ ಹೃದಯದಲ್ಲಿ ಅತ್ಯಾಶ್ಚರ್ಯಕರವಾದ ಪರಿವರ್ತನೆ ರೂಪುಗೊಳ್ಳುತ್ತಿದೆ. ನನಗೀಗ ಯಾವ ಪ್ರಾಣಿಗಳನ್ನೂ ಹಿಂಸಿಸಬೇಕೆನಿಸುವದಿಲ್ಲ. ಅತಿಯಾದ ಹಸಿವೆ ನೀರಡಿಕೆಗಳೂ ಇಲ್ಲ. ಆದುದರಿಂದ ಪಕ್ಕದಲ್ಲಿಯೇ ನಿಂತರೂ ನಿನ್ನನ್ನು ಕೊಲ್ಲುವ ಅಥವಾ ತಿನ್ನುವ ಆಸೆಯೇ ಇಲ್ಲದಾಗಿದೆ.

ಹುಲಿಯ ಈ ಮಾತನ್ನು ಕೇಳಿ ಆ ಆಡು ನುಡಿಯುತು. ''ಈ ಸ್ಥಳಕ್ಕೆ ಬಂದ ಬಳಿಕ ನನ್ನಲ್ಲೂ ದ್ವೇಷಾದಿಭಾವನೆಗಳು ದೂರವಾಗಿವೆ ಮನಸ್ಸು ಸದಾ ಪ್ರಶಾಂತವಾಗಿರುತ್ತದೆ. ಇದಕ್ಕೆ ಕಾರಣವೇನೆಂದು ನನಗೂ ತಿಳಿಯದು. ನಿನಗೆ ಗೊತ್ತಿದ್ದರೆ ಹೇಳು.''

**ಹುಲಿ:-**"ನಿನ್ನಂತೆಯೇ ನನಗೂ ಈ ವಿಚಿತ್ರ ಸನ್ನಿವೇಶದ ಕಾರಣ ತಿಳಿಯದು. ನಾವಿಬ್ಬರೂ ಹೋಗಿ ಇಲ್ಲಿಯೇ ಹಾಸುಗಲ್ಲಿನ ಮೇಲೆ ಧ್ಯಾನಮಗ್ನನಾದ ಮುನಿಯನ್ನು ಕೇಳೋಣ."

ಹೀಗೆ ಮಾತನಾಡಿಕೊಂಡು, ಪರಸ್ಪರ ಮೈತ್ರೀಭಾವ, ಸೌಹಾರ್ದಗಳಿಂದ ಕೂಡಿದ ಆ ಪ್ರಾಣಿಗಳೆರಡೂ ಜಿಜ್ಞಾಸೆಯಿಂದ ನನ್ನಲ್ಲಿಗೆ ಬಂದವು ಮತ್ತು ಕೇಳಿದವು. "ಸ್ವಾಮಿನ್, ಈ ಸ್ಥಳದಲ್ಲಿ ಬಂದ ಬಳಿಕ ನಮ್ಮ ನಮಗೆ ಸಹಜವಾದ ವೈರಭಾವ ದೂರವಾಗಿ, ಪರಸ್ಪರರಲ್ಲಿ ಸ್ನೇಹ, ಪ್ರೀತಿ ಉದಯಿಸಿವೆ. ಈ ವೈಚಿತ್ರ್ಯಕ್ಕೆ ಕಾರಣವೇನು ದಯವಿಟ್ಟು ತಿಳಿಸಿರಿ." ಎಂದು ಬಿನ್ನವಿಸಿಕೊಂಡವು. ಆಗ ನಾನು ಅವರಿಬ್ಬರನ್ನೂ ಕೂಡಿಕೊಂಡು ಅಲ್ಲಿಯೇ ಇದ್ದ ಒಬ್ಬ ಕಪೀಶ್ವರನ ಬಳಿಗೆ ಹೋಗಿ ಆತನನ್ನು ಇದೇ ಪ್ರಶ್ನೆ ಕೇಳಿದೆ.

**ಕಪೀಶ್ವರ:-** ಮೇಷಪಾಲ, ನಿನಗೆ ಇಲ್ಲಿಯ ಸಮಾಚಾರವನ್ನು ತಿಳಿಸುವೆ ಕೇಳು. ಇಲ್ಲಿಯೇ ವನಪ್ರದೇಶದಲ್ಲಿ ಒಂದು ಶಿವಲಿಂಗವು ಕಾಣುವದಷ್ಟೇ. ಅದು ಹಿಂದೆ ಬ್ರಹ್ಮನಿಂದ ಇಲ್ಲಿ ಪ್ರತಿಷ್ಠಾಪಿತವಾಗಿದೆ. ಸುಕರ್ಮನೆಂಬ ಒಬ್ಬ ತಪಸ್ವೀ ಶಿವಭಕ್ತನು ಇಲ್ಲಿ ತಪಸ್ಸನ್ನು ಕೈಗೊಂಡಿದ್ದಾನೆ. ಆತನು ನಿತ್ಯವೂ ಆ ಮಹಾದೇವರ ಲಿಂಗವನ್ನು ಪೂಜೆಗೈಯುತ್ತಾನೆ. ಈ ಪರಿಸರ ಪ್ರಾಂತದಲ್ಲಿರುವ ಪುಷ್ಪೋದ್ಯಾನಗಳಿಂದ ಹೂಗಳನ್ನು ಆಯ್ದು ತಂದು ಇಲ್ಲಿಯ ತೀರ್ಥದಲ್ಲಿ ಸ್ನಾನ ಮಾಡಿ ಮಹಾದೇವರ ಆರಾಧನೆಯನ್ನು ಶ್ರದ್ಧೆಯಿಂದ ಸರ್ವದಾ ಮಾಡುತ್ತಲಿದ್ದಾನೆ. ಒಂದು ದಿನ ಆತನ ಮನೆಗೆ ಅತಿಥಿಯೊಬ್ಬ ಆಗಮಿಸಿದ್ದ. ಸುಕರ್ಮನು ಆ ಅತಿಥಿಗೆ ಸ್ವಾಗತಗೈದು ಕಂದಮೂಲಫಲಾದಿಗಳನ್ನು ಸಮರ್ಪಿಸಿದ ಬಳಿಕ ಆತನು ಸುಕರ್ಮನನ್ನು ಕುರಿತು ಇಂತು ನುಡಿದ "ಸುಕರ್ಮ, ನೀನು ನನಗೆ ಅತ್ಯಂತ ಸ್ವಾದಿಷ್ಟವಾದ ಕಂದಮೂಲಫಲಾದಿಗಳನ್ನು ತಂದುಕೊಟ್ಟು ಸಂತೋಷಪಡಿಸಿರುವಿ. ನಿನ್ನ ಸೇವೆಯಿಂದ ನಾನು ತೃಪ್ತನಾಗಿದ್ದೇನೆ. ಇದಕ್ಕೆ ಪ್ರತಿಯಾಗಿ ನೀನೇನಾದರೂ ವರ ಕೇಳಿದರೆ ನಾನು ನೀಡುವೆ. ಅಪೇಕ್ಷೆ ಇದ್ದರೆ ಕೇಳು."

ಸುಕರ್ಮನು ಕೈ ಮುಗಿದು ಅತಿಥಿಗೆ ಹೇಳಿದ. ಪೂಜ್ಯರೇ, ನಾನು ಯಾವುದೇ ಫಲಾಪೇಕ್ಷೆಯಿಂದ ಅತಿಥಿಸತ್ಕಾರ ಮಾಡಲಿಲ್ಲ. ನನ್ನ ಕರ್ತವ್ಯವೆಂದು ಮಾಡಿದ್ದೇನೆ. ಕರ್ಮಮಾಡುವದಷ್ಟೇ ಮಾನವರ ಕರ್ತವ್ಯ. ಫಲ ಭಗವದಿಚ್ಛೆಗೆ ಸೇರಿದ್ದು, ತಮ್ಮಂಥ ಮಹಾನುಭಾವರು ಆಗಮಿಸಿ ನನ್ನ ಅಲ್ಪ ಸೇವೆ ಸ್ವೀಕರಿಸಿದ್ದೇ ನನ್ನ ಭಾಗ್ಯ. ನನ್ನ ಮೇಲೆ ತಾವು ಮಾಡಿದ ಕೃಪೆ. ನನ್ನ ಇಷ್ಟು ದಿನಗಳ ತಪಸ್ಸಿನ ಫಲವೋ ಎಂಬಂತೆ ತಮ್ಮಂಥವರ ಸೇವಾಭಾಗ್ಯ ನನ್ನ ಪಾಲಿಗೆ ದೊರಕಿದೆ. ನನಗಾವ ಫಲಾಪೇಕ್ಷೆ ಇಲ್ಲ.

ಸುಕರ್ಮ ಬ್ರಾಹ್ಮಣನ ಈ ಸತ್ಯ ಸುಂದರ ಮಾತುಗಳನ್ನು ಕೇಳಿ ಅವನ ಮನೆಗೆ ಬಂದ ತಪೋಧನನು ಪರಮ ಪ್ರೀತನಾದ. ಅಲ್ಲಿಯೇ ಇದ್ದ ಒಂದು ಶಿಲಾಫಲಕದ ಮೇಲೆ ಭಗವದ್ಗೀತೆಯ ಎರಡನೆಯ ಅಧ್ಯಾಯವನ್ನು ಬರೆದು ಸುಕರ್ಮನಿಗೆ ಕೊಟ್ಟು, ಇಂತು ಆದೇಶ ನೀಡಿದ.

"ಈ ಭಗವದ್ಗೀತೆಯ ಪಠಣ-ಪಾರಾಯಣ-ಮನನಗಳನ್ನು ಪ್ರತಿದಿನ ಮಾಡು. ನಿನ್ನ ಮನೋರಥಗಳು ಇದರಿಂದ ಸಿದ್ಧಿಸುವವು." ಹೀಗೆ ನುಡಿದು ಆ ಅತಿಥಿಯು ಅಂತರ್ಗತನಾದ. ಅವನ ಆದೇಶದಂತೆ ಸುಕರ್ಮನು ವಿಶಾಲವಾದ ಶಿಲಾಫಲಕದ ಮೇಲೆ ಅತಿಥಿ ತಪೋಧನನು ಸ್ವಹಸ್ತದಿಂದ ಬರೆದುಕೊಟ್ಟು ಅನುಗ್ರಹಿಸಿದ ಆ ಗೀತೆಯ

ಎರಡನೆಯ ಅಧ್ಯಾಯದ ಪಾಠ, ಪಾರಾಯಣಗಳನ್ನು ಭಕ್ತಿಯಿಂದ ಮಾಡಿ ಆಳ ಅರ್ಥದ ಸ್ವಾರಸ್ಯವನ್ನು ಅನುಭವಿಸಿ ಅಧ್ಯಯನಿಸಿದ. ಹೀಗೆ ನಿರಂತರ ಗೀತೆಯ ಪಠನಾದಿಗಳಿಂದ ಆತ್ಮೋದ್ಧಾರ ಸಾಧಿಸಿದ. ಇದು ದ್ವಿತೀಯಾಧ್ಯಾಯದ ಪಾರಾಯಣದಿಂದ ಉನ್ನತ ಗತಿಯನ್ನು ಹೊಂದಿದ ಆ ತಪೋಧನನ ವಾಸಭೂಮಿ. ಆ ಪುಣ್ಯ ಪುರುಷನ ತಪಃಪ್ರಭಾವದಿಂದ ಈ ಪರಿಸರದಲ್ಲಿನ ಯಾವುದೇ ಮನುಷ್ಯರಿಗೆ, ಪ್ರಾಣಿಗಳಿಗೆ ಹಸಿವೆ, ನಿದ್ರೆ, ಬಾಯಾರಿಕೆಗಳ ಬಾಧೆ ಇರುವದಿಲ್ಲ. ಮತ್ತು ಇದರ ಪರಿಣಾಮವಾಗಿಯೇ ಈ ತಪೋವನದ ಪ್ರಾಣಿಗಳಲ್ಲೂ ಸ್ನೇಹ-ಸೌಹಾರ್ದ, ನಿರ್ಮಲಭಾವ ರೂಪಗೊಂಡಿದೆ. ಇಲ್ಲಿ ಎಲ್ಲವೂ ಸ್ನೇಹಪೂರ್ಣ ಎಲ್ಲವೂ ಪ್ರಶಾಂತ.

**ಮಿತ್ರವಂತ:-** ಹೀಗೆ ಆ ತಪಸ್ವಿಯಾದ ಯೋಗಿಯು ಗೀತೆಯ ದ್ವಿತೀಯಾಧ್ಯಾಯದ ಮಹಿಮೆಯನ್ನು ತಿಳಿಸಿ ಹೇಳಿದ. ಅವನ ಮಾತಿನಿಂದ ಪರಿತೃಪ್ತನಾಗಿ ಆ ಹುಲಿ ಹಾಗೂ ಆಡು ಇವೆರಡರಿಂದೊಡಗೂಡಿ ಭಗವದ್ಗೀತೆ ಬರೆದ ಆ ಶಿಲಾಫಲಕದ ಕಡೆ ಹೋದೆ. ವಿಶಾಲವಾದ ಆ ಸುಂದರ ಶಿಲೆಯ ಮೇಲೆ ಸಂಪೂರ್ಣ ಭಗವದ್ಗೀತಾ ದ್ವಿತೀಯಾಧ್ಯಾಯ ಬರೆದಿಟ್ಟುದನ್ನು ಕಂಡೆ. ಭಕ್ತಿಯಿಂದ ಪಠಿಸಿ, ಬಾರಿ ಬಾರಿಗೆ ಪಾರಾಯಣಿಸಿ ಮುಖೋದ್ಗತವನ್ನಾಗಿ ಮಾಡಿದೆ. ಹಲವಾರು ವರ್ಷಗಳವರೆಗೆ ಅದನ್ನೇ ಶ್ರದ್ಧೆಯಿಂದ ಅಭ್ಯಸಿಸಿದೆ. ಮನನ ಮಾಡಿದೆ. ಅಂತೂ ಕೊನೆಗೆ ಇದರ ಪರಿಣಾಮವಾಗಿ ನನ್ನ ತಪಸ್ಸು ಫಲಿಸಿತು. ಶ್ರಮ ಸಫಲವಾಯಿತು.

ಆದುದರಿಂದ ನೀನೂ ಸಹ ಪ್ರತಿನಿತ್ಯ ಅರ್ಥಾನುಸಂಧಾನಪೂರ್ವಕ ಭಗವದ್ಗೀತೆಯ ಪಠನ ಮಾಡು. ಇದರಿಂದ ಮೋಕ್ಷಮಾರ್ಗವು ಸುಲಭವಾಗುವದು. ಆತ್ಮೋನ್ನತಿ ಸುಲಭವಾಗಿ ಆಗುವ ದಾರಿಯಿದು. ಹೀಗೆ ಮಿತ್ರವಂತ ಮಹರ್ಷಿಯ ಮಾತುಗಳನ್ನು ಕೇಳಿ ದೇವಶರ್ಮನು ಆತನನ್ನು ಭಕ್ತಿಯಿಂದ ನಮಸ್ಕರಿಸಿ, ಪುರಂದರ ಪಟ್ಟಣಕ್ಕೆ ಮರಳಿದನು. ಅಲ್ಲಿಯ ಒಂದು ದೇವಸ್ಥಾನಕ್ಕೆ ಹೋಗಿ ದೇವಸ್ಥಾನದಲ್ಲಿನ ವಿಪ್ರನಿಗೆ ಈ ಸಮಾಚಾರವನ್ನೆಲ್ಲ ತಿಳಿಸಿದ. ಅನಂತರ ಪುನಃ ಪುನಃ ತಾನು ಎಲ್ಲರೆದುರೂ ಗೀತೆಯ ಅಧ್ಯಾಯ ಪಠಿಸಿ, ಆ ದೇವಸ್ಥಾನಕ್ಕೆ ಬಂದ ಬುದ್ಧಿವಂತ ತರುಣನೊಬ್ಬನಿಗೆ, ಭಕ್ತಿಶ್ರದ್ಧಾ ಸಮನ್ವಿತವಾದವನಿಗೆ ಈ ಗೀತೆಯ ಪಾಠವನ್ನು ಹೇಳಿ ಅರ್ಥ ವಿವರಿಸಿ ಅದರಲ್ಲಿನ ಪ್ರಮೇಯ ಪುಂಜಗಳನ್ನೂ ನಿರೂಪಿಸಿದ. ಹೀಗೆ ಧನ್ಯತೆಯನ್ನು ಅನುಭವಿಸಿದ ಆ ದೇವಶರ್ಮನು ಹಾಗೂ ಅವನ ಶಿಷ್ಯ ವೃಂದದವರು ಗೀತೆಯ, ವಿಶೇಷತಃ ದ್ವಿತೀಯಾಧ್ಯಾಯದ ಪಾಠ, ಚಿಂತನೆ, ಮನನಗಳಿಂದ ಭಗವತ್ ಪ್ರೀತಿ ಸಂಪಾದಿಸಿ ಮೋಕ್ಷ ಹೊಂದಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಭಗವದ್ಗೀತೆಯ ಎರಡನೆಯ ಅಧ್ಯಾಯದ ಮಾಹಾತ್ಮ್ಯ ದೇವಶರ್ಮನ ಉಪಾಖ್ಯಾನ*
*ಎಂಬ ಒಂದುನೂರ ಐವತ್ತೆಂಟನೇಯ ಅಧ್ಯಾಯ ಮುಗಿದುದು*

—o—

## ಜಡಬ್ರಾಹ್ಮಣನ ದೃಷ್ಟಾಂತದಿಂದ ಭಗವದ್ಗೀತೆಯ ತೃತೀಯಾಧ್ಯಾಯದ ಮಾಹಾತ್ಮ್ಯ ನಿರೂಪಣೆ

**ಅಧ್ಯಾಯ - ೧೫**

**ಶ್ರೀಹರಿ:-** ಪೂರ್ವಕಾಲದಲ್ಲಿ ಜನಸ್ಥಾನದಲ್ಲಿ ಕೌಶಿಕ ವಂಶದ ಜಡ ಎಂಬ ಒಬ್ಬ ಬ್ರಾಹ್ಮಣನಿದ್ದ. ಅವನು ತನ್ನ ಜಾತಿಗೆ ಉಚಿತವಾದ ಅಧ್ಯಾಯನ, ಅಧ್ಯಾಪನ, ದಾನ, ಪ್ರತಿಗ್ರಹ, ಯಜನ, ಯಾಜನ ಎಂಬ ಷಟ್ಕರ್ಮಗಳನ್ನು ಪೂರ್ಣವಾಗಿ ಪರಿತ್ಯಜಿಸಿದ. ಹಣವನ್ನು ಗಳಿಸಲಿಕ್ಕಾಗಿ ವ್ಯಾಪಾರ, ಉದ್ಯೋಗ, ವ್ಯವಸಾಯಗಳನ್ನು ಕೈಕೊಂಡ. ಈ ವ್ಯವಹಾರ, ವ್ಯಾಪಾರದಿಂದ ಬಂದ ಹಣ ಅವನು ಹಾದಿ ತಪ್ಪುವಂತೆ ಮಾಡಿತು. ಧನದ ಮದದಿಂದ ಅಂಧನಾದ ಅವನು ವ್ಯಸನಿಯಾದ. ಪರಸ್ತ್ರೀಯರ ಸಹವಾಸದಿಂದ ಅವನು ದುರ್ಮಾರ್ಗವನ್ನು ತುಳಿಯ ಹತ್ತಿದ. ಜೂಜುಕೋರನಾಗಿ ಬಂದ ಹಣದಿಂದ ಕ್ರೀಡಾ ವ್ಯಸನಿಯಾಗಿ ತನ್ನ ಹಣವನ್ನೆಲ್ಲ ಕಳೆದುಕೊಂಡ. ಸುರಾಪನ, ವ್ಯಭಿಚಾರ, ಜೂಜಾಟ, ಬೇಟೆ ಮುಂತಾದ ದುರ್ವ್ಯಾಪಾರ ಅವ್ಯಾಪಾರಗಳಿಂದ ಅವನ ದ್ರವ್ಯ, ಆರೋಗ್ಯ, ಆಯುಷ್ಯ ಎಲ್ಲವೂ ಹಾಳಾಯಿತು. ವ್ಯಾಪಾರ ಉದ್ಯೋಗದಿಂದ ಸಂಪಾದಿಸಿದ ಹಣವನ್ನೆಲ್ಲ ಈ ದುರ್ವ್ಯಸನಗಳಿಗೆ ಪೋಲು ಮಾಡಿ ಹಾಳಾಗಿ ದಟ್ಟ ದರಿದ್ರನಾಗಿ ನಿಂತುಕೊಂಡ. ಐಶ್ವರ್ಯವೆಲ್ಲವೂ ಪರಸ್ತ್ರೀ ಹಾಗೂ ಜೂಜಾಟ ಸುರಾಪಾನಗಳಲ್ಲಿ ಕಳೆದುಹೋದ ಬಳಿಕ ಆ ಪಾಪಿಯು ಕಳವು ಮಾಡಲು ಪ್ರಾರಂಭಿಸಿದ. ಯಜ್ಞ ಯಾಗ ಮಾಡುವ ಶ್ರೋತ್ರೀಯರ ಹಣವನ್ನು ರಾತ್ರಿಯಲ್ಲಿ ಮನೆಗೆ ಕನ್ನ ಹಾಕಿ ಕೊರೆದು ದೋಚಿಕೊಂಡು ಹೋದ. ಆ ಹಣವನ್ನು ಕೂಡ ಮತ್ತೆ ಆಟದಲ್ಲಿ ಬೇಟದಲ್ಲಿ ಹಾಗೂ ಬೇಟೆಯಲ್ಲಿ ಮದ್ಯಪಾನದಲ್ಲಿ ಕಳೆದುಕೊಂಡ. ಇನ್ನೂ ದ್ರವ್ಯದ ದಾಹ ಅವನಿಗೆ ಇಂಗಿರಲಿಲ್ಲ. ದೂರ ದೂರ ದೇಶಗಳಿಗೆ ಹೋಗಿ ವ್ಯಾಪಾರ ಮಾಡಿ ಹಣವನ್ನು ಗಳಿಸಿಕೊಂಡು ಬರಬೇಕೆಂಬ ಉದ್ದೇಶದಿಂದ ಅವನು ಉತ್ತರ ದಿಕ್ಕಿಗೆ ಪ್ರಯಾಣ ಮಾಡಿದ. ಕಸ್ತೂರಿ, ಅಗರು, ಕೃಷ್ಣಾಗರು, ಕುಂಕುಮ, ಗುರುಚಾಮರ, ಏಲಕ್ಕಿ, ಪಚ್ಚಕರ್ಪೂರ ಮುಂತಾದ ಮಾಸಾಲಿ ಸಾಮಾನುಗಳನ್ನೆಲ್ಲ ತೆಗೆದುಕೊಂಡು ವ್ಯಾಪಾರಮಾಡಿ ಹಣಗಳಿಸಿಕೊಂಡು ತನ್ನ ಊರಿಗೆ ಹಿಂತಿರುಗಿದ.

ಗಳಿಸಿ ತಂದ ಹಣವನ್ನು ತನ್ನ ಪ್ರೇಯಸಿಯರಿಗೆಲ್ಲ ಹಂಚಬೇಕೆಂಬ ಉತ್ಸಾಹದಿಂದ ಅವನು ಕಾಡಿನಿಂದ ನಡೆದುಬರುವಾಗ ಸೂರ್ಯ ಅಸ್ತಮಿಸಿದ. ಸುತ್ತಲೂ ಎತ್ತೆತ್ತಲೂ ಕತ್ತಲೆ, ಕಣ್ಣು ಕಾಣದಂತೆ ಆಯಿತು. ಆಗ ಅವನು ಒಂದು ಗಿಡದ ಅಡಿಯಲ್ಲಿ ಅಂಧಕಾರದಲ್ಲಿ ವಿಶ್ರಮಿಸಿದ. ಇವನು ವ್ಯಾಪಾರ ಉದ್ಯೋಗ ಮಾಡಿ ಪ್ರಭೂತ ಧನವನ್ನು ಗಳಿಸಿಕೊಂಡು ಬಂದಿದ್ದು ಕಳ್ಳರಿಗೆ ಅದ್ಹೇಗೋ ಗೊತ್ತಾಗಿತ್ತು. ಆದುದರಿಂದ ಅವರು ಹೊಂಚು ಹಾಕಿ ಕುಳಿತುಕೊಂಡು ಇವನ ಮೇಲೆ ಬಿದ್ದು ಅವನನ್ನು ಕೊಂದುಹಾಕಿ ಆ ಹಣವನ್ನೆಲ್ಲ ಕದ್ದೊಯ್ದರು. ವಿಜನ ವನಾಂತರದ ಆ ಹೆಮ್ಮರದ ಕೆಳಗೆ ಅರ್ಧರಾತ್ರಿಯಲ್ಲಿ ಹತ ಪತಿತನಾಗಿ ಬಿದ್ದ. ಆ ಜಡ ಬ್ರಾಹ್ಮಣ ತನ್ನ ಪಾಪದಿಂದ ಭಯಂಕರನಾದ ಪಿಶಾಚನಾಗಿ ಅದೇ ಅಡವಿಯಲ್ಲಿ ಹಸಿದು ಅಂಡಲೆಯ ತೊಡಗಿದ. ಜೋಡು ನಾಲಿಗೆ, ನಿಮಿರಿದ ಕೂದಲು, ಬೆನ್ನಿನಲ್ಲಿ ನೆಟ್ಟು ಹೋದಂತಿರುವ ಉದರ, ಎಲುಬಿನ ಹಂದರದಂತಿರುವ ದೇಹ, ಇಂಥ

ಭೀಕರವಾದ ಪಿಶಾಚದಂತಿರುವ ಆ ಬ್ರಾಹ್ಮಣ ತಾನು ಕಳ್ಳರಿಂದ ಕೊಲ್ಲಲ್ಪಟ್ಟ ಮರದ ಊರ್ಧ್ವ ಭಾಗದಲ್ಲಿಯೇ ಅಂತರಪಿಶಾಚಿಯಾಗಿ ನಿಂತುಕೊಂಡ.

ಮುಂದೆ ಅವನ ಮಗನಾದ ಮೇಧಾವಿ ತನ್ನ ತಂದೆಯ ದಾರಿ ನೋಡಿದ ಬಹುವರ್ಷದವರೆಗೆ. ಕಂಡಕಂಡವರನ್ನೆಲ್ಲ ಕೇಳುತ್ತಿದ್ದ ನಮ್ಮ ತಂದೆಯವರನ್ನು ಯಾರಾದರೂ ಕಂಡಿರುವಿರಾ? ಎಂದು. ಯಾರಿಂದಲೂ ಅವನಿಗೆ ತಂದೆಯ ವೃತ್ತಾಂತ ದೊರೆಯಲಿಲ್ಲ. ಪಿತೃಭಕ್ತನಾದ ಆ ಮೇಧಾವಿಯು ತನ್ನ ತಂದೆಯ ವೃತ್ತಾಂತವನ್ನು ತಿಳಿಯದೇ ಬಹಳ ಶೋಕಪಟ್ಟ. ಕೊನೆಗೆ ಹನ್ನೆರಡು ವರ್ಷಗಳವರೆಗೆ ತನ್ನ ತಂದೆಯ ಸಮಾಚಾರವೇ ತಿಳಿಯದಾದಾಗ ತನ್ನ ತಂದೆ ಎಲ್ಲಿಯಾದರೂ ಮೃತಪಟ್ಟಿರಬೇಕು. ಎಂದು ತಿಳಿದು ಹಿರಿಯರನ್ನು ವಿಚಾರಿಸಿ ಕಾಶಿಯಲ್ಲಿ ತನ್ನ ತಂದೆಯ ಶ್ರಾದ್ಧ ಮಾಡಬೇಕೆಂದು ಸಕಲ ಪದಾರ್ಥಗಳನ್ನು ತೆಗೆದುಕೊಂಡು ಕಾಶಿಗೆ ಹೋರಟ. ಕಾಶೀಯಾತ್ರೆಯ ನಿಮಿತ್ತವಾಗಿ ಮನೆ ಬಿಟ್ಟು ಮಾರ್ಗವನ್ನು ಕ್ರಮಿಸುತ್ತಿದ್ದ. ಏಳೆಂಟು ದಿನ ಪಾದಚಾರಿಯಾಗಿ ನಡೆದ ಬಳಿಕ ಕೊನೆಗೆ ಅವನ ತಂದೆ ಮೃತನಾಗಿರುವ ಅರಣ್ಯಕ್ಕೆ ಆಗಮಿಸಿದ. ಕರ್ಮಧರ್ಮ ಸಂಯೋಗದಿಂದ ಅವನ ತಂದೆಯನ್ನು ಕಳ್ಳರು ಕೊಂದ ಮರದ ಕೆಳಗೆ ಅವನೂ ಬಂದು ವಿಶ್ರಮಿಸಿದ. ಸಾಯಂಕಾಲವಾಗುತ್ತಲಿತ್ತು. ಆದ್ದರಿಂದ ಅಲ್ಲಿಯೇ ಹರಿಯುವ ನಿರ್ಝರಿಡಿಯಲ್ಲಿ ಸ್ನಾನಮಾಡಿ ಅವನು ಸಂಧ್ಯಾವಂದನೆ ಮಾಡಲು ನಿಶ್ಚಯಿಸಿದ. ಸಾಯಂಕಾಲ ಸಂಧ್ಯಾವಂದನೆ ಮುಗಿದ ಬಳಿಕ ಅವನು ಭಗವದ್ಗೀತೆಯ ಮೂರನೆಯ ಅಧ್ಯಾಯವನ್ನು ಉಚ್ಚ ಕಂಠದಿಂದ ಪಾರಾಯಣ ಮಾಡಿದ. ಅರ್ಥಾನುಸಂಧಾನ ಪೂರ್ವಕವಾಗಿ ಆ ಮೇಧಾವಿಯು ಮಾಡಿದ ಭಗವದ್ಗೀತೆಯ ಮೂರನೆಯ ಅಧ್ಯಾಯದ ಪಾರಾಯಣದ ಪ್ರಭಾವದಿಂದ ಒಮ್ಮೆಲೆ ಆಕಾಶದಲ್ಲಿ ಭಯಂಕರ ಸಪ್ಪಳವು ಕೇಳಬಂದಿತು. ಇವನ ತಂದೆಯು ಮುಗಿಲಿನ ಮಧ್ಯದಿಂದ ವಿಕಾರ ಆಕಾರದಿಂದ ಒಮ್ಮೆಲೇ ಕೆಳಗೆ ಬಿದ್ದಂತೆ ಎನಿಸಿತು. ಅಷ್ಟರಲ್ಲಿ ಈ ಭೀಷಣ ಆಕಾರದ ಆಕಾಶಪಾತದಿಂದ ವಿಹ್ವಲನಾಗಿ ಆ ಮೇಧಾವಿಯು ಭಗವದ್ಗೀತೆಯ ಮೂರನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತ ಕುಳಿತುಕೊಂಡ. ಅಷ್ಟರಲ್ಲಿ ಸ್ವರ್ಗಲೋಕದಿಂದ ಕಿರುಗಂಟೆಗಳ ಕಿಂಕಿಣಿ ನಾದದಿಂದ ಝೇಂಕರಿಸುತ್ತ ಒಂದು ತೇಜೋಮಯವಾದ ವಿಮಾನ ಆಗಮಿಸಿತು. ಆ ವಿಮಾನದಲ್ಲಿ ಇವನ ಮೃತನಾದ ತಂದೆಯು ತನ್ನ ಪಿಶಾಚದೇಹದಿಂದ ಮುಕ್ತನಾಗಿ ವಿಷ್ಣುದೂತರಿಂದ ಆವೃತನಾಗಿ ಬಂದು ಕುಳಿತುಕೊಂಡಿದ್ದ. ದಿವ್ಯ ಸ್ತ್ರೀಯರು ಅವನಿಗೆ ಚಾಮರವನ್ನು ಬೀಸುತ್ತಲಿದ್ದರು. ಮುನಿಗಳು ಅವನ ಸ್ತೋತ್ರವನ್ನು ಮಾಡುತ್ತಲಿದ್ದರು.

ತನ್ನ ತಂದೆಯು ವಿಮಾನಾರೂಢನಾಗಿದ್ದನ್ನು ಕಂಡು ಮೇಧಾವಿಯು ಹೋಗಿ ಅವನಿಗೆ ವಂದನೆ ಮಾಡಿದ. ಯಾವ ಸಮಾಚಾರವೂ ತಿಳಿಯದೇ ಮೇಧಾವಿಯು ತನ್ನ ತಂದೆಯನ್ನು ಕೇಳಿದ. - ''ತಂದೆಯೇ, ನಾನು ನಿನ್ನ ಸಮಾಚಾರ ತಿಳಿಯದೇ ಹನ್ನೆರಡು ವರ್ಷ ಆದ ಬಳಿಕ ನೀನು ಮರಣ ಹೊಂದಿರುವೆ ಎಂದು ತಿಳಿದು ಉತ್ತರ ಕ್ರಿಯೆಯನ್ನು ಗಂಗಾ ತಟಾಕದಲ್ಲಿ ಮಾಡಬೇಕೆಂದು ಹೊರಟಿದ್ದೆ. ದಾರಿಯಲ್ಲಿ ಆಕಸ್ಮಿಕವಾಗಿ ಈ ಗೊಂಡಾರಣ್ಯದ ಮಧ್ಯದಲ್ಲಿರುವ ಈ ಹೆಮ್ಮರದ ಅಡಿಯಲ್ಲಿ ಕುಳಿತು ಸಂಧ್ಯಾವಂದನೆ ಮಾಡಿ ಭಗವದ್ಗೀತೆಯ ಮೂರನೆಯ ಅಧ್ಯಾಯವನ್ನು ಪಾರಾಯಣ ಮಾಡಿದೆ. ಆ ಕ್ಷಣದಲ್ಲಿಯೇ ಆಕಾಶದಿಂದ ಭೀಕರ ಆಕಾರದ ಒಂದು ಪ್ರೇತವು ಮುಗಿಲ ಮಧ್ಯದಿಂದ ಇಲ್ಲಿ ನೆಲದ ಮೇಲೆ ಬಿದ್ದಂತೆ

ಅನಿಸಿತು. ಮರುಕ್ಷಣದಲ್ಲಿಯೇ ಇಂಥ ದಿವ್ಯ ವಿಮಾನ ಅದರ ಕಿಂಕಿಣಿಗಳ ಝುಂಕಾರ. ಕಿರಿಗೆಜ್ಜೆಗಳ ಮಧುರ ಉಲಿತ. ಆ ವಿಮಾನದಲ್ಲೇ ದಿವ್ಯ ದೇಹ ಧಾರಣ ಮಾಡಿದ ನಿನ್ನನ್ನು ಆದರದಿಂದ ದೇವದೂತರು ಹತ್ತಿಸಿ ಕೂಡಿಸಿಕೊಂಡರು. ಇಂಥ ಸೌಭಾಗ್ಯವು ಆಕಸ್ಮಿಕವಾಗ ನಿನಗೆ ಕೂಡಿ ಬಂದದ್ದನ್ನು ನೋಡಿ ನಾನು ಆನಂದ ಮಂಥರನಾಗಿದ್ದೇನೆ. ನಿನ್ನ ಪಾದಾರವಿಂದದಲ್ಲಿ ಪ್ರಣತನಾಗಿದ್ದೇನೆ. ಇದೆಲ್ಲವೂ ಏನು ಸಮಾಚಾರ? ಆ ಭಯಂಕರವಾದ ಪ್ರೇತಕಾಯ ಅಂತರಿಕ್ಷದಿಂದ ಏಕೆ ಬಿದ್ದಿತು? ಅದಾವುದು? ಈ ದಿವ್ಯಲೋಕದ ವಿಮಾನವು ಏಕೆ ಬಂದಿತು? ಇದರಲ್ಲಿ ನಿನ್ನನ್ನೇಕೆ ಕುಳ್ಳಿರಿಸಿದ್ದಾರೆ? ನಿನಗೆ ಇಂಥ ದೈವೀತೇಜಸ್ಸಿನಿಂದೊಗೂಡಿದ ಶರೀರವು ಪ್ರಾಪ್ತವಾದದ್ದು ಹೇಗೆ?

ಮಗನ ಈ ಮಾತನ್ನು ಕೇಳಿ ಜಡಬ್ರಾಹ್ಮಣನು ನುಡಿದ.

**ಜಡಬ್ರಾಹ್ಮಣ:-** ನಿನಗೆ ತಿಳಿಯದೆಯೇ ನೀನು ನನ್ನ ಉದ್ಧಾರ ಮಾಡಿರುವೆ. ನಾನು ಮರಣ ಹೊಂದಿದ ಮರದ ಕೆಳಗೆ ಕುಳಿತು ಭಕ್ತಿಯಿಂದ ಅರ್ಥಾನುಸಂಧಾನ ಪೂರ್ವಕವಾಗಿ ಗೀತೆಯ ಮೂರನೆಯ ಅಧ್ಯಾಯವನ್ನು ಪಠಿಸಿದೆ. ತತ್ಫಲವಾಗಿ ನನ್ನ ಪಿಶಾಚ ಜನ್ಮವು ನೀಗಿತು. ನೀನು ಯಾವ ಉದ್ದೇಶದಿಂದ ಕಾಶಿಗೆ ಹೊರಟಿದ್ದೆಯೋ, ಆ ಉದ್ದೇಶವಿಂದು ಸಫಲವಾಯಿತು. ಮಾರ್ಗಮಧ್ಯದಲ್ಲಿ ನೀನು ಮಾಡಿದ ಈ ಗೀತಾಪಾರಾಯಣವು ಗಂತವ್ಯವನ್ನು ತಲುಪಿದ ನಂತರ ಮಾಡುವ ಕ್ರಿಯೆ ನೀಡುವ ಪುಣ್ಯಕ್ಕಿಂತ ಹೆಚ್ಚು ಪುಣ್ಯ ಸಂಪಾದಿಸಿಕೊಟ್ಟಿತು. ಗಂಗೆಗಿಂತಲೂ ಗೀತೆ ಅಧಿಕ ಪುಣ್ಯಪ್ರದ. ಗೀತೆಯ ಮಾಹಾತ್ಮ್ಯವನ್ನು ನಾನು ಸ್ವಯಂ ಅನುಭವಿಸಿದೆ. ಈ ಸೌಭಾಗ್ಯವು ನಿನ್ನಿಂದಲೇ ಪ್ರಾಪ್ತವಾಗಿದೆ.

ತಂದೆಯ ಮಾತುಗಳನ್ನು ಕೇಳಿದ ಪಿತೃಭಕ್ತ ಮೇಧಾವಿಗೆ ಹರ್ಷೋತ್ಕರ್ಷ. ಗದ್ಗದಿತ ಕಂಠದಿಂದ ಅವನು ತಂದೆಯನ್ನು ಕೇಳಿದ.

**ಮೇಧಾವಿ:-** ಪೂಜ್ಯ ತಂದೆಯೇ, ನನ್ನ ಜನ್ಮವಿಂದು ಸಾರ್ಥಕವಾಯಿತು. ನಿಮ್ಮ ಸೇವೆಗಿದೋ ಈ ನನ್ನ ದೇಹ ಸರ್ವದಾ ಮೀಸಲು. ನೀವು ಮತ್ತೆ ಮತ್ತೆ ನನಗೆ ನಿಮ್ಮ ಸೇವೆ ಮಾಡಲು ಅವಕಾಶ ಕೊಡಬೇಕು. ನಾನು ಇನ್ನು ಮುಂದೆ ಆಚರಿಸಬೇಕಾದ ಪುಣ್ಯಕರ್ಮಗಳಿಗೆ ಆದೇಶ ನೀಡು.

**ಜಡಬ್ರಾಹ್ಮಣ:-** ನೀನು ಭಗವದ್ಗೀತಾ ಮೂರನೆಯ ಅಧ್ಯಾಯದ ಪಾರಾಯಣ ಫಲದಿಂದ ನನ್ನನ್ನೇನೋ ಪಿಶಾಚ ಜನ್ಮದಿಂದ ಮುಕ್ತಗೊಳಿಸಿದಿ. ಆದರೆ ನನ್ನ ತಮ್ಮನೊಬ್ಬನಿದ್ದಾನೆ. ಅವನು ನಿಷಿದ್ಧ ಕರ್ಮಾಚರಣೆಯಲ್ಲಿ ಅಗ್ರಗಣ್ಯ. ಪಾಪಿಶ್ರೇಷ್ಠನಾದ ಆತನು ತನ್ನ ಕರ್ಮಾನುಸಾರವಾಗಿ ನರಕದಲ್ಲಿ ನವೆಯುತ್ತಲಿದ್ದಾನೆ, ನಾನಾವಿಧ ಶಿಕ್ಷೆಗಳನ್ನನುಭವಿಸುತ್ತ. ನನ್ನಂತೆ ಅವನನ್ನೂ ಆ ಘೋರ ಶಿಕ್ಷೆಯಿಂದ ಪಾರುಗಾಣಿಸು. ಆದುದರಿಂದ ಪುನಃ ಗೀತೆಯ ತೃತೀಯಾಧ್ಯಾಯದ ಪಾರಾಯಣ ಮಾಡು. ನನ್ನ ತಮ್ಮ ಮಾತ್ರವಲ್ಲ. ನಮ್ಮ ವಂಶದ ಪಿತೃಗಳು ನರಕದಲ್ಲಾರಾದರೂ ಇದ್ದರೆ ಅವರೂ ಮುಕ್ತರಾಗಲಿ. ದಯಾಳುವಾದ ನೀನು ಅರ್ಥಾನುಸಂಧಾನ ಪೂರ್ವಕವಾಗಿ, ಶ್ರದ್ಧೆಯಿಂದ ಅನೇಕ ಸಲ ಭಗವದ್ಗೀತೆಯ ಮೂರನೆಯ ಅಧ್ಯಾಯದ ಪಾರಾಯಣ ಮಾಡಿ, ಅದರ ಪುಣ್ಯವನ್ನು ನರಕದಲ್ಲಿರುವ ನಿನ್ನ ಪ್ರಾಚೀನ ವಂಶಜರಿಗೆ ಧಾರೆಯೆರೆದು ಅವರನ್ನುದ್ಧರಿಸು. ನಿನ್ನಲ್ಲಿ ಇದು ನನ್ನ ಒಂದೇ ಒಂದಾದ ಬಯಕೆ.

ತಂದೆಯ ಈ ಮಾತನ್ನು ಸಾವಧಾನದಿಂದ ಆಲಿಸಿದ ಮೇಧಾವಿಯು ತಲೆ ತಗ್ಗಿಸಿ, ಕೈ ಜೋಡಿಸಿ ನುಡಿದ.

**ಮೇಧಾವಿ:-** ತಂದೆಯೇ, ಭಗವದ್ಗೀತೆ ನನ್ನ ಜೀವನದ ಉಸಿರು. ನಾನು ಬದುಕಿರುವವರೆಗೂ ಭಗವಾನ್ ಶ್ರೀಕೃಷ್ಣ ಉಪದೇಶಿಸಿದ ಆ ಬ್ರಹ್ಮವಿದ್ಯೆಯನ್ನು ನಿರತರ ಪಠಿಸುವೆ. ಶ್ರದ್ಧೆಯಿಂದ ಪಠಿಸಿ ನಮ್ಮ ಪಿತೃಗಳನ್ನು ನರಕದಿಂದ ಉದ್ಧರಿಸುವೆ. ಹೀಗೆಂದು ನಾನು ನಿನಗೆ ವಚನ ನೀಡುತ್ತೇನೆ.

ಮಗನಾದ ಮೇಧಾವಿಯು ನೀಡಿದ ಈ ಅಮೃತ ವಚನದಿಂದ ಜಡಬ್ರಾಹ್ಮಣನಿಗೆ ಹಿಡಿಸಲಾರದ ಸಂತಸ. ಪರಮಾನಂದ ಭರಿತನಾದ ಆತನು ದಿವ್ಯ ತೃಪ್ತಿಯಿಂದ ವಿಮಾನಾರೂಢನಾಗಿ ವಿಷ್ಣುಲೋಕವನ್ನು ಕುರಿತು ಪ್ರಯಾಣ ಮಾಡಿದನು.

ಇತ್ತ ಮೇಧಾವಿಯು ತನ್ನ ಸ್ಥಾನವಾದ ಜನಸ್ಥಾನಕ್ಕೆ ಬಂದ. ಅಲ್ಲಿನ ಸುಂದರಪುರದ ಶ್ರೀಹರಿಯ ಮಂದಿರದಲ್ಲಿ ಭಕ್ತಿಯಿಂದ ಭಗವದ್ಗೀತೆಯ ತೃತೀಯಾಧ್ಯಾಯದ ಪಾರಾಯಣವನ್ನು ಮತ್ತೆ ಮತ್ತೆ ಮಾಡಿದ ಸುಂದರೇಶ್ವರನ ಸನ್ನಿಧಾನದಲ್ಲಿ ಪ್ರತಿನಿತ್ಯ ಅನೇಕ ಸಲ ಗೀತಾ ತೃತೀಯಾಧ್ಯಾಯದ ಅರ್ಥಾನುಸಂಧಾನಪೂರ್ವಕ ಪಾರಾಯಣ ಸಲ್ಲಿಸಿದ. ತಂದೆಯ ಆದೇಶದ ಮೇರೆಗೆ ಅದರ ಪುಣ್ಯವನ್ನು ಆ ನರಕಶಿಕ್ಷೆಯನ್ನು ಅನುಭವಿಸುತ್ತಿದ್ದ ತನ್ನ ಕಕ್ಕ, ಹಾಗೂ ಇತರ ಪಿತೃಗಳಿಗೆ ಧಾರೆಯೆರೆದ. ಅದರ ಪ್ರಭಾವದಿಂದ ವಿಷ್ಣುದೂತರು ಸಂಯಮಿನೀಪುರಕ್ಕೆ ಧಾವಿಸಿ ಯಮನನ್ನುದ್ದೇಶಿಸಿ ನುಡಿದರು.

**ವಿಷ್ಣುದೂತರು:-** ಪ್ರೇತನಾಥ! ಶ್ರೀಹರಿಯ ಸಂದೇಶವೊಂದನ್ನು ನಿನಗೆ ತಂದಿದ್ದೇವೆ. ಮೇಧಾವಿಯ ಕಕ್ಕ ಹಾಗೂ ಪಿತೃಗಳನೇಕರು ನಿನ್ನ ನರಕ ಸಾಮ್ರಾಜ್ಯದಲ್ಲಿ ನಾನಾಬಗೆಯ ಶಿಕ್ಷೆಗಳಿಗೊಳಗಾಗಿದ್ದಾರೆ. ಇದೀಗ ಅವರ ವಂಶದಲ್ಲಿನ ಮೇಧಾವಿ ಎಂಬ ಬ್ರಾಹ್ಮಣೋತ್ತಮನು ಸುಂದರಪುರದ ಇಂದಿರೇಶನ ಸನ್ನಿಧಾನದಲ್ಲಿ ಹಲವಾರು ಸಲ ಗೀತೆಯ ತೃತೀಯಾಧ್ಯಾಯದ ಭಕ್ತಿ ಪುರಸ್ಸರ ಪಾರಾಯಣಗೈದು, ಅದರ ಪುಣ್ಯವನ್ನು ನರಕದಲ್ಲಿನ ಪಿತೃಗಳ ವಿಮೋಚನೆಗಾಗಿ ಸಂಕಲ್ಪಿಸಿ, ಧಾರೆಯೆರೆದಿದ್ದಾನೆ. ಆದುದರಿಂದ ನೀನು ಈ ಕ್ಷಣವೇ ಆ ಮೇದಾವಿಯ ಕಕ್ಕ ಹಾಗೂ ಪಿತೃಗಳನ್ನು ನರಕದಿಂದ ದೂರಮಾಡಬೇಕು. ಆ ಕಷ್ಟಗಳ ಲೇಶವೂ ಅವರಿಗೆ ಸೋಂಕತಕ್ಕದ್ದಲ್ಲ. ಇದು ಸಾಕ್ಷಾತ್ ಶ್ರೀಮನ್ನಾರಾಯಣನ ಆದೇಶ.

ವಿಷ್ಣುದೂತರು ತಂದ ಶ್ರೀಹರಿಯ ಆಜ್ಞೆಯನ್ನು ಯಮದೇವರು ತಗ್ಗಿಸಿದ ತಲೆಯಿಂದ ಸ್ವೀಕರಿಸಿದರು. ಮೇಧಾವಿಯ ಪಿತೃಗಳನ್ನು ನರಕದಿಂದ ಮೇಲಕ್ಕೆ ಕರೆತಂದು ಅವರ ಕೈ ಹಿಡಿದು ಶ್ರೀಮನ್ನಾರಾಯಣನಿದ್ದಲ್ಲಿಗೆ ನಡೆದರು. ಕ್ಷೀರ ಸಮುದ್ರದ ಅಂಚಿನಲ್ಲಿ ನಿಂತು ಗದ್ಗದ ಕಂಠರಾಗಿ ಭಕ್ತಿಪೂರ್ಣವಾಗಿ ಶೇಷಶಾಯಿಯಾದ ಆ ಶ್ರೀಹರಿಯನ್ನು ಸುತ್ತಿಸಿದರು.

**ನಮಃ ಸಮಸ್ತ ನಿರ್ಮಾಣ ನಿರ್ಮಲೀ ಭೂತಚೇತಸೇ ।**
**ವಚನೋದ್ಗೀರ್ಣ ವೇದಾಯ ವಿಶ್ವರೂಪಾಯ ವೇದಶೇ ॥**

ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲ ನಿರ್ಮಾಣ ಮಾಡಿದ, ನಿಷ್ಕಲ್ಮಷಚೇತಸ್ಕನಾದ, ಮುಖದಿಂದ ನಾಲ್ಕೂ ವೇದಗಳನ್ನು ಉಚ್ಚರಿಸುತ್ತಲಿರುವ, ವಿಶ್ವರೂಪಿಯಾದ, ಜಗತ್‌ಸ್ರಷ್ಟಾರನಾದ ಸ್ವಾಮಿ ನಾರಾಯಣ! ನಿನಗೆ ನನ್ನ ನಮಸ್ಕಾರ.

**ಬಲವೇಗ ಸುದುರ್ಧರ್ಷ ದಾನವೇಂದ್ರಮದದ್ರುಹೇ ।**
**ನಮಃ ಸ್ಥಿತೌ ಚ ಸತ್ವಾಯ ವಿಶ್ವಾಧಾರಾಯ ವಿಷ್ಣವೇ ॥**

''ಪರಾಕ್ರಮ, ವೇಗ ಇವುಗಳಿಂದ ಯಾರಿಂದಲೂ ಗೆಲ್ಲಲಿಕ್ಕೂ, ಕೊಲ್ಲಲಿಕ್ಕೂ ಅಶಕ್ಯರಾದ, ಮದೋನ್ಮತ್ತರಾದ ದೈತ್ಯರ ಗರ್ವವನ್ನೆಲ್ಲ ನಿರ್ಮೂಲನಗೊಳಿಸುವ, ಪ್ರಪಂಚಕ್ಕೆಲ್ಲ ಆಧಾರಭೂತನಾದ ಹಾಗೂ ವಿಶ್ವವನ್ನೆಲ್ಲ ರಕ್ಷಣಮಾಡಲು ಶ್ರೀಹರಿ ರೂಪದಿಂದ ನಿಂತುಕೊಂಡ ಭಗವಂತನಿಗೆ ನನ್ನ ನಮಸ್ಕಾರ.''

''ಸ್ವಾಮಿ, ನಿನ್ನ ಅದ್ಭುತವಾದ ಮಹಿಮೆಗೆ ಅಂತವಿಲ್ಲ. ಅದನ್ನು ಸ್ತೋತ್ರ ಮಾಡಲು ನನಗೆ ಶಕ್ತಿಸಾಲದು. ನೀನು ಮಾತಿನ ಮೇರೆಯನ್ನು ಮೀರಿ ಆಚೆಗಿರುವವ. ವಾಙ್ಮನೋऽತೀತನಾದ ಪರಮಪುರುಷ ನೀನು. ನಮ್ಮ ಮಿತವಾದ ಮತಿಯಿಂದ ನಿನ್ನನ್ನು ಸ್ತುತಿಸಲಾರೆವು. ಈ ವಿಷಯದಲ್ಲಿ ಮಾತಿಗಿಂತ ಮೌನವೇ ಶ್ರೇಯಸ್ಕರ.''

ಹೀಗೆ ಭಕ್ತಿಯಿಂದ ಸ್ತೋತ್ರ ಮಾಡಿ ಕೈ ಮುಗಿದು ನಿಂತ ಯಮಧರ್ಮ. ಆಗ ಶ್ರೀಹರಿಯು ಕಾಣಿಸಿಕೊಂಡು ಸುಧಾರಸದಿಂದ ಅಭಿಷೇಕ ಮಾಡುವಂತೆ ನುಡಿದ.

''ಯಮಧರ್ಮ, ಗೀತೆಯ ಮೂರನೆಯ ಅಧ್ಯಾಯದ (ಪಾರಾಯಣ) ಫಲ ಮೇಧಾವಿಯ ಪಿತೃಗಳಿಗೆ ಲಭಿಸಿದೆ. ಈ ಕ್ಷಣವೇ ಅವರು ಮುಕ್ತರಾಗಲಿ. ನಿನ್ನ ಕರ್ತವ್ಯವನ್ನು ಸರಿಯಾಗಿ ನನ್ನಲ್ಲಿ ವಿನೀತಭಾವದಿಂದ ಪಾಲಿಸು. ನಿನಗೆ ಮಂಗಳವಾಗಲಿ''. ಎಂದು ಹೇಳಿ ಅದೃಶ್ಯನಾದ.

ಹೀಗೆ ಮೇಧಾವಿಯು ತನ್ನ ತಂದೆಯ ಅಪೇಕ್ಷೆಯನ್ನು ಪೂರ್ಣಗೊಳಿಸಿ, ತಾನೂ ಒಂದು ದಿನ ದಿವ್ಯವಾದ ವಿಷ್ಣುಲೋಕವನ್ನು ಕುರಿತು ಪಯಣಿಸಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಜಡಬ್ರಾಹ್ಮಣನ ದೃಷ್ಟಾಂತದಿಂದ ಭಗವದ್ಗೀತೆಯ ತೃತೀಯಾಧ್ಯಾಯದ ಮಾಹಾತ್ಮ್ಯ ನಿರೂಪಣೆ*
*ಎಂಬ ನೂರ ಐವತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

**ಶ್ರೀಹರಿ:-** ಲಕ್ಷ್ಮೀ, ಈಗ ನಾನು ಭಗವದ್ಗೀತೆಯ ಚತುರ್ಥಾಧ್ಯಾಯದ ಮಹಿಮೆಯನ್ನು ಹೇಳುವೆ, ಕೇಳು. ಇದರ ಪ್ರಭಾವದಿಂದ ಇಬ್ಬರು ಕನ್ಯೆಯರು ತಮ್ಮ ಬದರೀವೃಕ್ಷದ ಜನ್ಮವನ್ನು ನೀಗಿ ಸ್ವರ್ಗಕ್ಕೆ ಪ್ರಯಾಣ ಮಾಡಿದರು.

**ಮಹಾಲಕ್ಷ್ಮೀ:-** ದೇವಾ, ಕನ್ಯೆಯರಿಗೆ ಮರದ ಜನ್ಮ ಏಕೆ ಬಂದಿತು? ಆ ಇಬ್ಬರೂ ಕನ್ಯೆಯರು ಯಾರು? ಅವರು ಹೇಗೆ ಮರಳಿ ಒಳ್ಳೆಯ ಜನ್ಮ ಪಡೆದರು? ಇದೆಲ್ಲವನ್ನೂ ನನಗಾಗಿ ಹೇಳು. ನಿನ್ನ ಮುಖಾರವಿಂದದಿಂದ ಈ ಕಥಾಸಂದರ್ಭವನ್ನು ಕೇಳಿದಷ್ಟೂ ನನಗೆ ಆನಂದ. ದಯವಿಟ್ಟು ಗೀತೆಯ ಚತುರ್ಥಾಧ್ಯಾಯದ ಮಹಿಮೆಯನ್ನು ನಿರೂಪಿಸು.

**ನಾರಾಯಣ:-** ಗಂಗಾತೀರದಲ್ಲಿ ಇರುವ ಕ್ಷೇತ್ರಗಳಲ್ಲಿ ಶ್ರೇಷ್ಠವಾದುದು ಕಾಶೀಕ್ಷೇತ್ರ. ಆ ಕ್ಷೇತ್ರದಲ್ಲಿ ಭರತನೆಂಬ ಓರ್ವ ಯೋಗೀಶ್ವರ ನೆಲೆಸಿದ್ದ. ಆತನು ಪ್ರತಿನಿತ್ಯವೂ ಗೀತೆಯ ನಾಲ್ಕನೆಯ ಅಧ್ಯಾಯದ ಪಾರಾಯಣವನ್ನು ಮಾಡುತ್ತಲಿದ್ದ. ಗೀತಾಪಾರಾಯಣವೇ ಅವನ ಜಪ, ಗೀತೆಯ ಅರ್ಥಾನುಸಂಧಾನ, ಮನನಗಳೇ ಆತನ ತಪ. ಕಾಮ-ಕ್ರೋಧ, ಲೋಭ-ಮೋಹ, ರಾಗ-ದ್ವೇಷ ಮುಂತಾದ ದ್ವಂದ್ವಗಳಿಂದ ಸೆಳೆಯಲ್ಪಡದೇ, ನಿಷ್ಕಲ್ಮಷವಾದ ಏಕಾಗ್ರಮನಸ್ಸಿನಿಂದ ಸರ್ವದಾ ಗೀತೆಯನ್ನು ಪಠಿಸುತ್ತಲಿದ್ದ.

ಒಂದು ದಿವಸ ಆ ಭರತಮುನಿಗೆ ಕಾಶೀಪಟ್ಟಣದ ಪರಿಸರದಲ್ಲಿರುವ ದೇವಾಲಯಗಳನ್ನು ನೋಡಬೇಕೆಂಬ ಕುತೂಹಲ. ಮನೆಬಿಟ್ಟು ಹೊರಟ. ಊರ ಹೊರವಲಯದ ದೇವಾಲಯಗಳಿಗೆ ಹೋಗಿ ದೇವರ ದರ್ಶನ ತೆಗೆದುಕೊಂಡ. ಹಾಗೆಯೇ ಮುಂದೆ ಮುಂದೆ ಹೊರಟಾಗ ತುಸು ಆಯಾಸವೆನಿಸಿತು. ಅಲ್ಲಿಯೇ ಭಾಗೀರಥೀ ತೀರದಲ್ಲಿನ ಎರಡು ಬದರೀ ವೃಕ್ಷಗಳ ನೆರಳಿನಲ್ಲಿ ವಿಶ್ರಮಿಸಿದ. ಈ ಎರಡೂ ವೃಕ್ಷಗಳೂ ಅಕ್ಕಪಕ್ಕದಲ್ಲಿಯೇ ಬೆಳೆದಿದ್ದವು. ಭರತಮುನಿಯು ಒಂದಕ್ಕೆ ಬೆನ್ನು ಹಚ್ಚಿದ. ಇನ್ನೊಂದಕ್ಕೆ ಕಾಲುಚಾಚಿ ವಿಶ್ರಮಿಸಿದ. ಸಮೀಪದಲ್ಲಿ ಬಿದ್ದ ಬದರೀ ಫಲಗಳನ್ನು ಬಾಯಿಗೆ ಹಾಕಿದ. ಒಂದೆರಡು ಫಲಗಳನ್ನು ಭಕ್ಷಿಸಿ, ತುಸು ಹೊತ್ತು ವಿಶ್ರಮಿಸಿ ಆ ತಪಸ್ವಿಯು ಅಲ್ಲಿಂದ ತೆರಳಿದ. ಆ ಭರತಮುನಿಯು ಅಲ್ಲಿಂದೆದ್ದ ಕೂಡಲೇ ಆ ಎರಡೂ ಬದರೀ ವೃಕ್ಷಗಳೂ ಒಣಗಲಾರಂಭಿಸಿದವು. ಅಲ್ಪಕಾಲದಲ್ಲೇ ಆ ಎರಡೂ ವೃಕ್ಷಗಳ ಚಿಗುರು, ಕಾಂಡ, ಶಾಖೆ ಒಂದೊಂದಾಗಿ ಒಣಗುತ್ತ ಸಂಪೂರ್ಣ ವೃಕ್ಷ ಒಣಗಿನಿಂತವು. ಇತ್ತ ಬ್ರಾಹ್ಮಣನೊಬ್ಬನ ಮನೆಯಲ್ಲಿ ಇಬ್ಬರು ಹೆಣ್ಣು ಮಕ್ಕಳ ಜನನ. ಈ ಹೆಣ್ಣುಮಕ್ಕಳು ಬೆಳೆದು ಏಳು ವರ್ಷದವರಾದರು. ಒಂದು ದಿನ ದೂರದೇಶದಿಂದ ಆಗಮಿಸುತ್ತಿದ್ದ ಓರ್ವ ಯತೀಶ್ವರನನ್ನು ಕಂಡರು. ಆ ಯೋಗಿಯನ್ನು ಕಂಡಕೂಡಲೇ ಅವರಿಗೆ ಅವನಲ್ಲಿ ಭಕ್ತಿಯ ಉದ್ರೇಕವಾಯಿತು. ಜನ್ಮಾಂತರದ ನೆನಹು ಮರುಕಳಿಸಿತು. ಇಬ್ಬರೂ ಕನ್ಯಾಮಣಿಗಳು ಮುನಿಯಲ್ಲಿಗೆ ಧಾವಿಸಿ ಆತನ ಚರಣಗಳಿಗೆರಗಿ ಇಂತೆಂದರು.

**ಕನ್ಯೆಯರು:-** ನಿಮ್ಮ ಅನುಗ್ರಹದಿಂದ ನಾವಿಬ್ಬರೂ ವೃಕ್ಷ ಜನ್ಮದಿಂದ ಮುಕ್ತರಾದೆವು. ಕಳೆದ ಜನ್ಮದಲ್ಲಿ ನಾವಿಬ್ಬರೂ ಭಾಗೀರಥೀ ತೀರದ ಬದರೀ ವೃಕ್ಷಗಳಾಗಿದ್ದೆವು. ನಿಮ್ಮ ಅನುಗ್ರಹದಿಂದ ನಮಗೆ ಮನುಷ್ಯ ಜನ್ಮ ಪ್ರಾಪ್ತವಾಗಿದೆ.

ಆ ಭರತಮುನಿಗೆ ಈ ಕನ್ಯೆಯರ ಮಾತನ್ನು ಕೇಳಿ ಆಶ್ಚರ್ಯ. ವಿಸ್ಮಯದಿಂದ ಆತ ಕೇಳಿದ.

**ಭರತಮುನಿ:-** ಬಾಲೆಯರೇ ! ನಿಮಗೆ ಈ ವೃಕ್ಷಜನ್ಮ ಏಕೆ ಬಂದಿತು? ನಾನು ಹೇಗೆ ನಿಮ್ಮನ್ನು ಅದರಿಂದ ಉದ್ಧರಿಸಿದೆ? ಈ ಘಟನೆ ನಡೆದುದು ಯಾವಾಗ?

**ಕನ್ಯೆಯರು:-** ಪೂಜ್ಯರೇ, ನಮ್ಮ ವೃತ್ತಾಂತವನ್ನು ನಿಮ್ಮ ಸನ್ನಿಧಿಯಲ್ಲಿ ನಿವೇದಿಸುವೆವು. ಕೇಳಿರಿ.

ಪೂರ್ವಕಾಲದಲ್ಲಿ ಗೋದಾವರೀ ತೀರದಲ್ಲಿ ಛಿನ್ನ ಪಾಪವೆಂಬ ಒಂದು ತೀರ್ಥ. ಈ ತೀರ್ಥದ ದಂಡೆಯಲ್ಲಿ ಸತ್ಯತಪನೆಂಬ ಮುನೀಶ್ವರನು ಘೋರವಾದ ತಪಸ್ಸನ್ನಾಚರಿಸಿದ. ಗ್ರೀಷ್ಮಕಾಲದಲ್ಲಿ ಪ್ರಜ್ವಲಿಸುವ ಅಗ್ನಿಕುಂಡಗಳ ಮಧ್ಯೆ ನಿಂತು ತಪಂಗೈದ. ಮಳೆಗಾಲದಲ್ಲಿ ಬಯಲು ಭೂಮಿಗಳಲ್ಲಿ ಸಂತತ ಜಲಧಾರೆಗಳಿಂದ ಅಭಿಷಿಕ್ತನಾಗಿ ತಪಶ್ಚರಣೆಗೈದ. ಚಳಿಗಾಲದಲ್ಲಿ ಕುತ್ತಿಗೆಯವರೆಗಿನ ನೀರಿನಲ್ಲಿ ನಿಂತು ನಿಶ್ಚಲ ಮನಸ್ಸಿನಿಂದ ಭಗವಚ್ಚಿಂತನವನ್ನು ಮಾಡುತ್ತಲಿದ್ದ. ಹೀಗೆ ಮಹಾನುಭಾವನಾದ ಆ ಮುನಿಯ ಕಠೋರ ಭಕ್ತಿಗೆ, ಏಕಾಗ್ರತೆಗೆ ಮೆಚ್ಚಿದ ಬ್ರಹ್ಮನು ಅವನಿದ್ದಲ್ಲಿಗೆ ಬಂದ. ಮುನಿಯ ದೀಕ್ಷೆಯನ್ನು ಕಂಡು ಬ್ರಹ್ಮ ಪರಮಾನಂದದಿಂದ ಹರಸಿ ನಡೆದ.

ಆದರೆ ದೇವೇಂದ್ರನಿಗೆ ಮಾತ್ರ ಹೆದರಿಕೆ. ಇಂಥ ಘನ-ಘೋರ ತಪಸ್ಸನ್ನು ಮಾಡಿ ಈ ಮುನಿಯು ಸ್ವರ್ಗಲೋಕವನ್ನು ಕಬಳಿಸುವ ಹೊಂಚು ಹಾಕಿರಬಹುದೆ? ಬಹುವಾದ ಭೀತಿಯಿಂದ ದುರಾಲೋಚನೆಯೊಂದನ್ನು ಮಾಡಿದ. ಅಪ್ಸರೆಯರ ಗುಂಪಿನಲ್ಲಿದ್ದ ನಮ್ಮಿಬ್ಬರನ್ನೂ ತನ್ನಲ್ಲಿಗೆ ಕರೆಸಿದ. ಆಜ್ಞೆ ನೀಡಿದ.

''ಭೂಲೋಕದಲ್ಲಿ ಗೋದಾವರೀ ನದಿಯ ಸಮೀಪ ಸತ್ಯತಪನೆಂಬ ಬ್ರಾಹ್ಮಣ ಲೋಕೋತ್ತರವಾದ ತಪಸ್ಸನಾಚರಿಸುತ್ತಿರುವನು. ನೀವು ಅಲ್ಲಿಗೆ ಹೋಗಿರಿ. ಅವನ ತಪಸ್ಸಿಗೆ ವಿಘ್ನ ತನ್ನಿರಿ.''

ಮುನಿಪುಂಗವ ! ನಮಗಾಗ ಇನ್ನೂ ಹೊಸ ಹರೆಯ. ಸೌಂದರ್ಯದ ಗರ್ವ. ಒನಪು, ವಯ್ಯಾರ, ಬಿಂಕ, ಬಿನ್ನಾಣಗಳಿಂದ ಎಂಥ ಜಿತೇಂದ್ರಿಯನಾದ ಮುನಿಯನ್ನೂ ಲೀಲಾಜಾಲವಾಗಿ ಆಕರ್ಷಿಸಬಲ್ಲೆವು. ಎಂಬ ಅತೀ ಆತ್ಮವಿಶ್ವಾಸ, ಅಹಂಕಾರ, ನಮ್ಮಲ್ಲಂಕುರಿಸಿತ್ತು. ರೂಪಮದ, ಪ್ರಾಯದಮದ, ಅಪ್ಸರಾಕುಲದಮದ ಹೀಗೆ ಮದಗಳು ಮುಕರಿಕೊಂಡು ನಮ್ಮನ್ನು ಇಂಥ ಸಲ್ಲದ ಸಾಹಸಕ್ಕೆ ಪ್ರೋತ್ಸಾಹಿಸಿದವು. ದೇವಂದ್ರನ ಅಪ್ಪಣೆ ಪಡೆದು ನಾವು ನಾಕ ಬಿಟ್ಟು ನೆಲಕ್ಕಿಳಿದೆವು. ಗೋದಾವರಿಯ ಪರಿಸರಕ್ಕೆ ಬಂದೆವು. ಘೋರ ತಪಶ್ಚರಣೆಯಲ್ಲಿದ್ದ ಸತ್ಯತಪ ನಮಗೆ ಗೋಚರಿಸಿದ.

ಕೂಡಲೇ ನಮ್ಮ ಕಾರ್ಯಾಚರಣೆಗೆ ಉದ್ಯುಕ್ತರಾದೆವು. ಆ ಮುನಿಯು ತಪಸ್ಸನ್ನು ಮಾಡುತ್ತಿದ್ದ ಆಶ್ರಮದ ಸುತ್ತಮುತ್ತಲಿನ ಪರಿಸರ, ಗೋದಾವರೀ ತಟಾಕ, ಎಲ್ಲವನ್ನೂ, ಅಲ್ಲಿನ ಒಟ್ಟು ವಾತಾವರಣವನ್ನೇ ಮಾರ್ಪಾಟುಗೊಳಿಸಿದೆವು. ನೋಡಿದಲ್ಲೆಲ್ಲ ಕಣ್ಸೆಳೆಯುವ ಸೌಂದರ್ಯ, ಕಿವಿಗೆ ತಂಪನ್ನೆರೆಯುವ ಸಂಗೀತ, ಗೆಜ್ಜೆಯ ನಾದ, ಸ್ತ್ರೀಯರ ಸರಸಾಲಾಪ, ದೃಷ್ಟಿ ಹರಿಸಿದಲ್ಲೆಲ್ಲ ನೃತ್ಯ, ಕುಣಿತ, ಮಣಿತ, ಮೈ ಝುಂ ಎನ್ನಿಸುವ ನೋಟ. ಮುಗುಳ್ನಗೆಯನ್ನು ತುಟಿಯ ತಟದಲ್ಲಿ ಅರಳಿಸಿ, ಮೈಯಲ್ಲಿನ ಉಬ್ಬು-ತಗ್ಗುಗಳನ್ನು ವ್ಯಕ್ತಗೊಳಿಸಿ, ವಿಲಾಸ, ವಿಭ್ರಮಗಳಿಂದ ಓಲಾಡುತ್ತ ಮಿಂಚಿನ ಮಂಚಿನ ಮೂರ್ತಿಗಳಂತೆ ಆ ಋಷಿಯ ಎದುರು ಸಂಚರಿಸಿದೆವು. ನಮ್ಮ ಕೌಶಲ್ಯವನ್ನೆಲ್ಲ ಸೂರೆಗೈದು ಅವನೆದುರು

ಸುಳಿದಾಡಿದೆವು. ನಮ್ಮ ಹಾವ-ಭಾವಗಳಿಂದ ನಾವೇ ಹಿಗ್ಗಿ, ತಾಳ, ತಂಬೂರಿಗೆ ಒಪ್ಪುವಂತೆ ನಾಟ್ಯವಾಡುತ್ತ ಮೈ ಮರೆತಾಗ ತಂಗಾಳಿ ಬೀಸಿ ನಮ್ಮ ಮೈಮೇಲಿನ ತೆಳುವಾದ ವಸ್ತ್ರವೂ ಸಡಿಲವಾಗಿ ಹಾರಾಡಿ ನಮ್ಮೊಡನೆ ನೃತ್ಯಗೈಯುತ್ತಿತ್ತು. ಏತನ್ಮಧ್ಯೆ ಮುನಿಗೆ ಇಷ್ಟು ಹೊತ್ತಿನ ಗಲಾಟೆಯಿಂದಾಗಿ ಸಮಾಧಿಯಿಂದ ಅಲ್ಪ ಎಚ್ಚರ. ಕಣ್ತೆರೆದ. ಎದುರಿಗೆ ಜರುಗಿದ ಸೆರಗು, ಸರಿದ ಸೀರೆ, ತೆರೆದ ಅಂಗಗಳು, ಇಂಥ ಸ್ಥಿತಿಯಲ್ಲಿ ಉನ್ಮತ್ತ ನೃತ್ಯ. ಕ್ಷಣಾರ್ಧದಲ್ಲಿ ಮುನಿಯ ಹುಬ್ಬು ಗಂಟಿಕ್ಕಿತು. ಕಣ್ಣು ಕೆಂಡ ಕೆಂಡ, ನಮ್ಮ ಪರಿಶ್ರಮದ ಪರಿಣಾಮ ಕಿಂಚಿತ್ತೂ ಅವನಲ್ಲಾಗಿರಲಿಲ್ಲ. ಕಮಂಡಲು ಕೈಗೆತ್ತಿದ. ಉಗ್ಗಿದ ಶಾಪವನ್ನು. ''ಗಂಗಾ ತೀರದಲ್ಲಿ ಬದರೀವೃಕ್ಷಗಳಾಗಿ ಜನಿಸಿ.''

ನಮಗೆ ಅವಮಾನ, ಪಶ್ಚಾತ್ತಾಪ, ದುಃಖ-ದುಮ್ಮಾನಗಳು ಒತ್ತರಿಸಿಬಂದವು. ಮುನಿಯ ಪಾದಗಳಿಗೆ ಸಾಷ್ಟಾಂಗವೆರಗಿ ''ನಮ್ಮ ಸಕಲಾಪರಾಧಗಳನ್ನು ಕ್ಷಮಿಸುವ ಕೃಪೆಮಾಡಬೇಕು.'' ಎಂದು ಅಂಗಲಾಚಿ ಬೇಡಿದೆವು. ಎಷ್ಟಾದರೂ ಅವರು ಮಹಾತಪಸ್ವಿಗಳಲ್ಲವೆ? ನಮ್ಮ ಮೇಲೆ ಕರುಣೆಯಿಂದ ಇಂತು ನುಡಿದರು ಆ ಯೋಗೀಶ್ವರರು.

**ಸತಪ:-** ಕಾಶೀನಗರದ ಹೊರವಲಯದಲ್ಲಿ ಭಾಗೀರಥಿ ನದಿಯ ದಂಡೆಯ ಮೇಲೆ ಬದರೀವೃಕ್ಷವಾಗಿ ಜನಿಸಲಿರುವ ನಿಮ್ಮ ಬಳಿಗೆ ಒಂದು ದಿನ ಭರತಮುನಿ ಆಗಮಿಸಿ ವೃಕ್ಷದಡಿಯಲ್ಲಿ ವಿಶ್ರಮಿಸತ್ತಾರೆ. ಆ ತಪಸ್ವಿಗಳು ವೃಕ್ಷಗಳನ್ನು ಆಸರೆಗೆ ಆತುಕೊಳ್ಳುತ್ತಾರೆ. ಬದರೀ ಫಲವನ್ನು ಭಕ್ಷಿಸುತ್ತಾರೆ. ಮತ್ತು ತಮ್ಮ ಈ ವಿಶ್ರಾಂತಿ ವೇಳೆಯಲ್ಲೂ ಭಗವದ್ಗೀತೆಯ ನಾಲ್ಕನೆಯ ಅಧ್ಯಾಯವನ್ನು ಪಠಿಸುತ್ತಿರುತ್ತಾರೆ. ಅವರು ಪಾರಾಯಣ ಮಾಡಿದ ಗೀತೆಯ ನಾಲ್ಕನೆಯ ಅಧ್ಯಾಯದ ಪುಣ್ಯಪ್ರಭಾವದಿಂದ ನಿಮಗೆ ವೃಕ್ಷಜನ್ಮ ವಿಮೋಚನೆಯಾಗುವದು.

ಈ ಮುನಿಗಳ ಶಾಪದಂತೆ ವೃಕ್ಷಗಳಾಗಿ ಪರಿಣಮಿಸಿದ ನಾವು ಯಾವ ಭರತ ಮುನಿಯ ಕೃಪೆಯಿಂದ ಈಗ ಮರಳಿ ಮಾನವಯೋನಿಯಲ್ಲಿ ಜನಿಸಿದ್ದೇವೆಯೋ, ಆ ಭರತಮುನಿಯು ನೀವೆ ಆಗಿದ್ದೀರಿ ಎಂಬುದು ನಮಗೆ ತಿಳಿದಿದೆ. ಜನ್ಮಾಂತರದ ಸ್ಮರಣೆ ನಮಗಿರುವದರಿಂದ ನೀವು ಅಂದು ಬಂದು ವೃಕ್ಷರೂಪದಲ್ಲಿದ್ದ ನಮ್ಮನ್ನು ಸ್ಪರ್ಶಿಸಿದ, ಆ ದಿವ್ಯಾನುಭವದ ಪವಿತ್ರಸ್ಮರಣೆಯು ಇನ್ನೂ ಹೃದಯದಲ್ಲಿ ಹಚ್ಚ ಹಸಿರಾಗಿದೆ. ನಾವು ಈಗ ತಮಗೆ ಕೃತಜ್ಞತೆಗಳನ್ನು ಸಲ್ಲಿಸಿ, ಪಾದಾರವಿಂದದಲ್ಲಿ ಪ್ರಣತರಾಗಲು ಬಂದಿದ್ದೇವೆ. ತಾವು ಕೇವಲ ಶಾಪದಿಂದ ಮಾತ್ರ ನಮ್ಮನ್ನು ವಿಮೋಚನೆಗೊಳಿಸಿಲ್ಲ; ಈ ಸಂಸಾರ ಸಾಗರದಿಂದಲೇ ಉದ್ಧಾರಗೈದಿರುವಿರಿ.

ಹೀಗೆ ಆ ಇಬ್ಬರೂ ದಿವ್ಯ ಕನ್ನಿಕೆಯರಿಂದ ಅಭಿನಂದಿತರಾದ ಆ ಭರತಮುನಿಗಳು ಪರಮಪ್ರಸನ್ನರಾದರು, ಅವರ ಉದ್ಧಾರದ ಈ ಕಥೆಯನ್ನು ಕೇಳಿ, ಅನಂತರ ಭರತಮುನಿಗಳು ಆ ಇಬ್ಬರು ಕನ್ನಿಕೆಯರೂ ಗೀತೆಯ ಚತುರ್ಥಾಧ್ಯಾಯದ ಪಾರಾಯಣವನ್ನು ಮಾಡಲು ಆದೇಶಿಸಿ ಅಲ್ಲಿಂದ ಹೊರಟುಹೋದರು. ಆ ಕನ್ನಿಕೆಯರು ತಮ್ಮ ಸ್ವರೂಪಭೂತವಾದ ದೇಹವನ್ನು ಹೊಂದಿ ಭಗವದ್ಗೀತೆಯ ಚತುರ್ಥಾಧ್ಯಾಯದ ಪಾರಾಯಣವನ್ನು ಅತ್ಯಾದರದಿಂದ, ಭಕ್ತಿಯಿಂದ ಮಾಡುತ್ತಲೇ ಇರುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಗೀತೆಯ ಚತುರ್ಥಾಧ್ಯಾಯದ ಮಾಹಾತ್ಮ್ಯ ಎಂಬ ನೂರ ಆರವತ್ತನೇಯ ಅಧ್ಯಾಯ ಮುಗಿದುದು*

## ಪಿಂಗಳ ಬ್ರಾಹ್ಮಣನ ಉದಾಹರಣೆಯಿಂದ ಗೀತೆಯ ಐದನೆಯ ಅಧ್ಯಾಯ ಮಾಹಾತ್ಮ್ಯ ವರ್ಣನೆ

ಅಧ್ಯಾಯ - ೧೬೧

**ಶ್ರೀವಾಸುದೇವ:-** ದೇವಿ, ಈಗ ಭಗವದ್ಗೀತೆಯ ಪಂಚಮಾಧ್ಯಾಯದ ಮಹಿಮೆಯನ್ನು ಹೇಳುವೆ ಕೇಳು.

ಪೂರ್ವಕಾಲದಲ್ಲಿ ಭದ್ರದೇಶದಲ್ಲಿ 'ಪುರುಕುತ್ಸ' ಎಂಬ ಒಂದು ಪಟ್ಟಣ. ಆ ನಗರದಲ್ಲಿ 'ಪಿಂಗಲ' ಎಂಬ ವಿದ್ವಾಂಸನಾದ ಬ್ರಾಹ್ಮಣ. ಅವನ ವಂಶ ನಿರ್ಮಲ ಅವರ ಪೂರ್ವಪಂಡಿತರು ಸದಾಚಾರ ಸಂಪನ್ನರಾದ ಶ್ರೋತ್ರಿಯರು. ಬಾಲ್ಯದಲ್ಲಿ ವೇದವೇದಾಂತಗಳ ಅಧ್ಯಯನವನ್ನೂ 'ಶಾಸ್ತ್ರಿ'ಯಾದ ಅವನ ತಂದೆ ಸರಿಯಾಗಿ ಮಾಡಿಸಿದ್ದ. ಆದರೆ ಮಗನಾದ ಪಿಂಗಲ ಸಂಗೀತ, ನೃತ್ಯ, ವಾದ್ಯ ವಾದನ ಮೊದಲಾದ ಗೀತ-ನೃತ್ಯಗಳ ನಾದಕ್ಕೆ ಬಿದ್ದ. ತಬಲ, ತಂಬೂರಿ, ವೇಣು, ಮೃದಂಗ ಮುಂತಾದವನ್ನು ಆಕರ್ಷಕವಾಗಿ ನುಡಿಸಬಲ್ಲವನಾಗಿದ್ದ. ಇದರಿಂದಲೇ ಅವನ ಕೀರ್ತಿ ಅನೇಕ ಕಡೆ ಪಸರಿಸಿತು. ಆ ದೇಶದ ದೊರೆಯೂ ಒಳ್ಳೇ ರಸಿಕ. ಆತನಿಗೂ ಸಂಗೀತದ ಹುಚ್ಚು. ಪಿಂಗಲಬ್ರಾಹ್ಮಣನ ಸಂಗೀತ ಕೌಶಲ್ಯದ ಸಮಾಚಾರ ರಾಜನಿಗೆ ತಲುಪಿತು. ಕೂಡಲೇ ಆದರದಿಂದ ಪಿಂಗಲನನ್ನು ಅರಮನೆಗೆ ಬರಮಾಡಿಕೊಂಡ. ಇವನ ಸಂಗೀತ ಹಾಗೂ ವಿವಿಧ ವಾದ್ಯವಾದನದಲ್ಲಿನ ವೈದುಷ್ಯ, ವೈಶಿಷ್ಟ್ಯಗಳನ್ನು ಕಂಡು ಸಂಪ್ರೀತನಾದ. ತನ್ನ ಅರಮನೆಯ ಆಸ್ಥಾನ ವಿದ್ವಾಂಸನನ್ನಾಗಿ ನಿಯಮಿಸಿದ ಈ ಪಿಂಗಲನನ್ನು.

ರಾಜನ ಪರಮಾನುಗ್ರಹಕ್ಕೆ ಪಾತ್ರನಾದ ಪಿಂಗಲನಿಗೆ ಅಹಂಭಾವ ತುಳುಕಿ ನಿಂತಿತು. ಅವನ ವಿದ್ಯೆಯ ಗರ್ವ ಪರ್ವತಾಕಾರವಾಗಿ ಬೆಳೆಯಿತು. ರಾಜ ಇವನು ಹೇಳಿದ ಮಾತನ್ನೆಲ್ಲ ವಿಶ್ವಾಸದಿಂದ ಕೇಳುತ್ತಿದ್ದ. ರಾಜನು ತನಗೆ ಇಷ್ಟು ಪರವಶವಾದದ್ದನ್ನು ನೋಡಿ ದುಷ್ಟಬುದ್ಧಿಯ ಪಿಂಗಲ . ರಾಜನ ಕಿವಿಯಲ್ಲಿ ಹೆರವರ ದೋಷಗಳನ್ನೆತ್ತಿ ಉಸುರತೊಡಗಿದ. ಪಿಂಗಲನು ಪ್ರಜಾಜನರ, ಮಂತ್ರಿಮಾನ್ಯರ ಮೇಲೆ ಚಾಡೀ ಹೇಳತೊಡಗಿದಂತೆ, ರಾಜನಿಗೆ ಬಹಳ ಆಪ್ತನಾದ. ಇಬ್ಬರೂ ಅನ್ಯೋನ್ಯವಾಗಿದ್ದರೂ, ಇವರಿಬ್ಬರ ಸ್ನೇಹ ನಾಗರಿಕರಿಗೆ ಗಂಡಾಂತರವೆನಿಸಿತು. ಪಿಂಗಲನ ಮಾತು ಕೇಳಿ ರಾಜನು ನಿರಪರಾಧಿಗಳಾದ ಪ್ರಜೆಗಳನ್ನು ದಂಡಿಸತೊಡಗಿದ.

ಈ ಪಿಂಗಲನಿಗೆ ನೀಚಕುಲದಲ್ಲಿ ಹುಟ್ಟಿದ ಒಬ್ಬ ಮಡದಿ ಅವಳ ಹೆಸರು ಅರುಣಾ. ಹೆಸರಿಗೆ ತಕ್ಕಂತೆ, ಅವಳಿಗೆ ಬಂಗಾರದ ಬಣ್ಣ. ಹೊಂದಾವರೆಯಂತೆ ಸುಂದರ ಕಣ್ಣು. ಮುಖದಲ್ಲಿ ಉಕ್ಕುವ ಕಳೆ, ಕಾಂತಿ. ಅಡಿಯಿಂದ ಮುಡಿಯವರೆಗೆ ಪ್ರಾಯದಸಿರಿ ತುಳುಕುವ ಶರೀರಯಷ್ಟಿ. ಇಷ್ಟಿದ್ದರೂ ಅವಳು ತನ್ನ ನೀಚಕುಲಕ್ಕೆ ಅನುಗುಣವಾದ ದುಷ್ಟಗುಣಗಳನ್ನು ಹೊಂದಿದ್ದಳು. ನೀಚಜಾತಿಯ ಆ ಅರುಣೆ ಪಿಂಗಳನಂತಹ ವಿದ್ವಾನ್ ಬ್ರಾಹ್ಮಣನನ್ನು ವಿವಾಹವಾದರೂ, ತನ್ನ ದುರ್ಗಣಗಳನ್ನು ದುರಾಚಾರಗಳನ್ನು ಬಿಡಲಿಲ್ಲ. ಮಹಾ ಕಾಮುಕಿಯಾದ ಅವಳು ಕಂಡ ಕರೆದ ಕಾಮುಕರ ವಿಷಯವಾಸನೆಯನ್ನು ತೃಪ್ತಿಪಡಿಸುವ ಸಾಧನವಾದಳು. ಮೇಲಿಂದ ಮೇಲೆ ತನ್ನ ಪ್ರೇಮಿಗಳನ್ನು ಬದಲಿಸುತ್ತ ಅರುಣೆಯು ಲಂಪಟ ಕಾಮುಕನಾದ ಪಿಂಗಳನಿಗೆ ತಕ್ಕ ಮಡದಿಯಾಗಿ ಸ್ವೈರಿಣಿಯೂ

ಜಾರಿಣಿಯೂ ಆದಳು. ಪಿಂಗಲನೂ ಸಹ ವೇದವೇದಾಂತ ವಿದ್ವಾಂಸನಾದರೂ, ರಾಜನ ಸಹವಾಸದಿಂದ ಕಾಮವಶನಾಗಿ, ಅವನಂತೆಯೇ ಸ್ವೈರಾಚಾರ, ಪಾಪಾಚಾರ, ವ್ಯಭಿಚಾರ ಮುಂತಾದ ವಾಮಾಚಾರದ ಕಾಮಕೃತ್ಯಗಳಿಗೆ ಇಳಿದ. ರಾಜನೊಡನೆ ದಿನಕ್ಕೊಂದು ಬೆಲೆವೆಣ್ಣುಗಳ ಜೊತೆಗೆ ಕಾಮಕೇಳಿಲೋಲನಾದ ಪಿಂಗಲನಲ್ಲಿ ಸೇಡು ತೀರಿಸಿಕೊಳ್ಳುವ ಬಯಕೆ, ಆ ಅರುಣೆಗೆ. ಅದರಿಂದ ತಾನು ಕೂಡ ಅವನಿಗೆ ತಿಳಿಯುವಂತೆ ಬೇರೆ ಬೇರೆ ಪುರುಷರನ್ನು ಕರೆತಂದು ಅವರೊಡನೆ ಸರಸಕ್ಕೆ ಇಳಿಯುತ್ತಿದ್ದಳು. ಹೀಗೆ ಸ್ವಚ್ಛಂದ ಚಾರಿಣಿಯಾಗಿ ಮನಬಂದ ಪುರುಷರೊಡನೆ ಕಾಮಕೇಳಿ ವಿಲಾಸಿನಿಯಾದ ಆ ಅರುಣೆಯ ಈ ವ್ಯಭಿಚಾರ ವಿಲಾಸಗಳನ್ನು ಕಂಡು ಪಿಂಗಲನಿಗೆ ಕೋಪಬಂದಿತು. ಅವನು ಅವಳ ನಿಂದನೆಗೈದು ಇನ್ನೊಮ್ಮೆ ಮತ್ತೊಬ್ಬ ಪುರುಷನೊಡನೆ ವಿಹರಿಸಿದರೆ ನಿನಗೆ ಪ್ರಾಣಾಂತಿಕ ಶಿಕ್ಷೆಯನ್ನು ವಿಧಿಸುತ್ತೇನೆ ಎಂದು ಎಚ್ಚರಿಸಿದ.

ಪತಿ ಎಂಬ ಹೆಸರಿಟ್ಟುಕೊಂಡು ಕೇವಲ ನಾಮ ಮಾತ್ರಕ್ಕೆ ಗಂಡನಾದ ಪಿಂಗಳನ ಈ ಸಿಡಿನುಡಿ ಕೇಳಿ ಅರುಣೆಯು ಸಂತಪ್ತಳಾದಳು. ತನ್ನ ಸ್ವಚ್ಛಂದ ವಿಹಾರಕ್ಕೆ ಆತಂಕಕಾರಿಯಾದ ಈ ಪಿಂಗಲನನ್ನು ಸಂಹರಿಸಿಬಿಡಲು ಸಂಕಲ್ಪಿಸಿದಳು. ಅದರಂತೆ ಒಂದು ದಿನ ಸರಿ ರಾತ್ರಿಯಲ್ಲಿ ಪಿಂಗಲ ಗಾಢ ನಿದ್ರೆಯಲ್ಲಿದ್ದಾಗ ಹೊಂಚುಹಾಕಿ ಅದೇ ಕೋಣೆಯಲ್ಲಿ ನಿದ್ರೆ ಬಂದಂತೆ ನಟಿಸಿದ ಅರುಣೆಯು ನಿಶ್ಚಿಂತನಾಗಿ ಸುಪ್ಪತ್ತಿಗೆಯ ಮೇಲೆ ಮಲಗಿದ ಗಂಡನನ್ನು ನೋಡಿದಳು. ಖಡ್ಗವನ್ನು ಹಿರಿದಳು. ಅವನ ಶಿರಸ್ಸನ್ನು ಕ್ರೂರವಾಗಿ ತರಿದಳು. ಪತ್ನಿಯಿಂದ ತಿವಿಯಲ್ಪಟ್ಟ ಆ ಪಿಂಗಲ ಮರಣಹೊಂದಿದ. ಯಮಲೋಕಕ್ಕೆ ತೆರಳಿ ಅಲ್ಲಿ ಅನೇಕ ವರ್ಷಗಳ ವರೆಗೆ ನರಕವಾಸವನ್ನು ಅನುಭವಿಸಿದ. ಬದುಕಿ ಇದ್ದಾಗ ತನ್ನ ಪಿತೃಪರಂಪರಾ ಪ್ರಾಪ್ತವಾದ ಸತ್ಯತೆ, ಸ್ನಾನ, ಸಂಧ್ಯಾವಂದನೆ, ಪೂಜೆ, ವೇದಾಧ್ಯಯನ ಎಲ್ಲವನ್ನೂ ಬಿಟ್ಟು ಕೇವಲ ನೃತ್ಯ, ಗಾನ ವಾದ್ಯಗಳಿಂದ ರಾಜನ ಸ್ನೇಹ ಸಂಪಾದಿಸಿ ಅವನ ಎದುರು ಅನೇಕ ಸಜ್ಜನರ, ಮಂತ್ರಿಗಳ, ಪ್ರಜೆಗಳ ಚಾಡಿ ಹೇಳಿ ಅವರೆಲ್ಲರೂ ಶಿಕ್ಷೆಗೆ ಗುರಿಯಾಗುವಂತೆ ಮಾಡಿ ಪಾಪಕ್ಕೆ ಭಾಗಿಯಾಗಿದ್ದ. ಮತ್ತು ಮೊದಲೇ ಕಾಮುಕನಾದ ಆ ದುಷ್ಟರಾಜನ ಮನಸ್ಸನ್ನು, ಅನೇಕ ಹೆರವರ ಹೆಣ್ಣುಗಳ ಬಣ್ಣನೆ ಮಾಡಿ, ಕೆರಳಿಸಿ ಬಲಾತ್ಕಾರದಿಂದ ಚೆಲುವೆಯರಾದ ಸ್ತ್ರೀಯರನ್ನು ರಾಜನೊಡನೆ ತಾನೂ ಭೋಗಿಸಿದ್ದ. ಈ ಎಲ್ಲ ಭೀಕರವಾದ ಅತ್ಯಾಚಾರ ದುರಾಚಾರಗಳಿಗಾಗಿ ನರಕದಲ್ಲಿ ಭೀಕರವಾದ ಯಮಯಾತನೆಯನ್ನು ಅನುಭವಿಸಿದ. ಹೀಗೆ ದಾರುಣವಾದ ಭಯಾನಕವಾದ ನರಕದ ಯಾತನೆಯನ್ನೆಲ್ಲ ಹಲವು ಕಾಲ ಅನುಭವಿಸಿ ಕೊನೆಗೆ ಒಂದು ವಿಜನವನಾಂತರವಾದ ಕಗ್ಗಾಡಿನಲ್ಲಿ ಹದ್ದು ಆಗಿ ಹುಟ್ಟಿದ.

ಇತ್ತ ಅವನ ಮಡದಿಯಾದ ಅರುಣೆಯು ತನ್ನ ವ್ಯಭಿಚಾರ, ಸ್ವೈರವಿಹಾರ, ಪತಿಹತ್ಯಾ ಮುಂತಾದ ಪಾಪಗಳಿಂದ ಅದೇ ಜನ್ಮದಲ್ಲಿಯೇ ಭೀಕರವಾದ ಭಗಂಧರ ರೋಗಕ್ಕೆ ತುತ್ತಾದಳು. ಅವಳ ಅಂಗಾಂಗಗಳಲ್ಲಿ ಹುಳಬಿದ್ದವು. ಹೀಗೆ ಆ ಭಗಂಧರ ರೋಗವು ಉಲ್ಬಣವಾಗಿ ಆ ಅರುಣೆಯು ಮರಣ ಹೊಂದಿದಳು. ಈ ಎಲ್ಲ ಬದುಕಿ ಇದ್ದಾಗ ಮಾಡಿದ ಅನೇಕ ಪಾಪಗಳಿಗಾಗಿ ಅವಳೂ ಕೂಡ ಯಮಲೋಕದಲ್ಲಿ ಘೋರವಾದ ನರಕದಲ್ಲಿ ನೊಣವಾಗಿ, ನಾಯಿಯಾಗಿ, ಕ್ರಿಮಿಯಾಗಿ, ಕೀಟವಾಗಿ ಬಗೆಬಗೆಯ ದುಃಖವನ್ನು ಅನುಭವಿಸಬೇಕಾಯಿತು. ಹೀಗೆ ಬಹುಕಾಲದವರೆಗೆ ನರಕದಲ್ಲಿ ಯಾತನೆಯನ್ನು

ಅನುಭವಿಸಿದ ಬಳಿಕ ಅವಳೂ ಕೂಡ ಒಂದು ಬೆಂಗಾಡಿನಲ್ಲಿ ಹೆಣ್ಣು ಗಿಳಿಯಾಗಿ ಹುಟ್ಟಿದಳು. ಆಗ ಆ ಗಿಳಿ ಹೊಟ್ಟೆಗಾಗಿ ಕಾಳುಕಡ್ಡಿ, ಹಣ್ಣು ಹಂಪಲುಗಳನ್ನು ಆಯ್ದುಕೊಂಡು ತಿಂದು ಬರುವದಕ್ಕಾಗಿ ಅತ್ತಿತ್ತ ನಿಬಿಡವಾದ ಆ ಅರಣ್ಯದಲ್ಲಿ ಸಂಚರಿಸುತ್ತಿದ್ದಳು. ಅದೇ ಕಾನನದಲ್ಲಿ ಅದರ ಪೂರ್ವಜನ್ಮದ ಪತಿಯಾದ ಪಿಂಗಲನು ಹದ್ದಾಗಿ ಸಂಚರಿಸುತ್ತಿದ್ದ. ಹೀಗಿರುವಾಗ ಈ ಗಿಳಿಯು ಆ ಗಿಡಗನ ಕಣ್ಣಿಗೆ ಬಿದ್ದಿತು. ಕೂಡಲೇ ಪಿಂಗಲನಿಗೆ ಜನ್ಮಾಂತರದ ನೆನಪು ಎದ್ದು ಬಂದಿತು. ಈ ಹೆಣ್ಣುಗಿಳಿ ಪೂರ್ವಜನ್ಮದಲ್ಲಿ ನನ್ನನ್ನು ಸಂಹರಿಸಿದ ಆ ಅರುಣೆಯೇ ಎಂದು ಅದಕ್ಕೆ ತಿಳಿದುಹೋಯಿತು. ಜನ್ಮಾಂತರದಲ್ಲಿ ತನ್ನನ್ನು ಇರಿದುಕೊಂದ ಇದನ್ನು ಬಿಡಕೂಡದು ಎಂಬ ವಿಚಾರಬಂದು ಸಿಟ್ಟಿನಿಂದ ಆ ಹದ್ದು ಗಿಳಿಯ ಮೇಲೆ ಎರಗಿತು. ತನ್ನ ಕಾಲಿನಿಂದ ಹಿಡಿದು ಉಗುರಿನಿಂದ ಚಚ್ಚಿ, ಕೊಕ್ಕಿನಿಂದ ಚುಚ್ಚಿ, ಹೊಡೆದು ಆ ಗಿಳಿಯನ್ನು ಗಿಡಗವು ಕೊಂದು ಬಿಟ್ಟಿತು. ಆಗ ಗಿಡಗದ ಬಲವಾದ ಹೊಡೆತವನ್ನು ತಾಳಲಾರದೆ ಅಂತರಿಕ್ಷದಲ್ಲಿಯೇ ಪ್ರಾಣ ಕಳೆದುಕೊಂಡ ಆ ಗಿಳಿಯು ಗಿಡದ ಬದಿಯಲ್ಲಿಯೇ ಇದ್ದ ತಲೆಬುರುಡೆಯ ನೀರಿನಲ್ಲಿ ಬಿದ್ದಿತು.

ಆಗ ಅದೇ ವೇಳೆಯಲ್ಲಿ ಅಲ್ಲಿಗೆ ಬಂದ ಕಿರಾತರು ಈ ಹದ್ದಿಗೆ ಗುರಿಯಿಟ್ಟು ಬಾಣಬಿಟ್ಟರು. ಅವರ ತೀಕ್ಷ್ಣವಾದ ಬಾಣ ಗುರಿ ತಪ್ಪಲಿಲ್ಲ. ಗಿಡದಡಿಯಲ್ಲಿ ಗಿಳಿಯು ಬಿದ್ದ ನೀರು ತುಂಬಿದ ಅದೇ ಕಪಾಲದಲ್ಲಿ ಈ ಹದ್ದೂ ಕೂಡ ಬಿದ್ದಿತು. ಹೀಗೆ ಒಂದೇ ದಿನ ಒಂದೇ ಗಿಡದಡಿಯ ಒಂದೇ ಕಪಾಲದಲ್ಲಿ ಆ ಗಿಡಗ ಹಾಗೂ ಗಿಳಿಗಳು ಬಿದ್ದವು. ಯಮಕಿಂಕರರು ಈ ಇಬ್ಬರೂ ಜನ್ಮ ಜನ್ಮಾಂತರದ ಪಾಪಿಗಳನ್ನು ಎಳೆದೊಯ್ದರು. ದೂರದಿಂದಲೇ ನೋಡಿದ ಯಮಧರ್ಮ ಈ ಇಬ್ಬರೂ ಪಾಪಿ ದಂಪತಿಗಳನ್ನು ಅವರು ಹಿಂದಿನ ಜನ್ಮದಲ್ಲಿ ಮಾಡಿದ ಅತ್ಯಂತ ಹೇಯವಾದ ಕೃತ್ಯಗಳನ್ನು ನೆನೆದ. ಈ ಪ್ರಾಣಿಗಳ ಬಗ್ಗೆ ಒಂದು ಬಗೆಯ ಜಿಗುಪ್ಸೆ ಉಂಟಾಯಿತು ಅವನಿಗೆ. ಆದರೂ ಆ ಎರಡೂ ಹಕ್ಕಿಗಳು ಗಿಡದಡಿಯಲ್ಲಿದ್ದ ನರಕಪಾಲದ ನೀರಿನಲ್ಲಿ ಬಿದ್ದು ಮರಣ ಹೊಂದಿದ್ದರಿಂದ ಅವರಿಬ್ಬರನ್ನೂ ಯಮದೇವರು ನರಕದಿಂದ ಬಿಡುಗಡೆ ಮಾಡಿದ. ಅವರ ಎಲ್ಲ ಪಾಪಗಳೂ ತಕ್ಷಣದಲ್ಲಿಯೇ ಬಿಟ್ಟು ಹೋದವು. ಹೀಗೆ ಪಾಪಮುಕ್ತರಾದ ಆ ಗಿಡಗ ಹಾಗೂ ಗಿಳಿ ದಂಪತಿಗಳು ಯಮದೇವರ ಬಳಿ ಬಂದು ಆ ಪ್ರೇತರಾಜನ ಪಾದಾರವಿಂದಗಳಿಗೆ ಪೊಡಮಟ್ಟು ಕೈಜೋಡಿಸಿ ಬಿನ್ನವಿಸಿದರು.

**ಗಿಳಿ, ಗಿಡಗ:-** ಪೂಜ್ಯರೇ ! ನಾವಿಬ್ಬರೂ ಜನ್ಮಾಂತರದಲ್ಲಿ ಮಾಡಿದ ಘೋರ ಪಾಪಗಳನ್ನು ಈಗ ಹೇಳಲಿಕ್ಕೂ ಕೂಡ ನಾಚಿಕೆಯಾಗುತ್ತದೆ. ನಡುಕ ಹುಟ್ಟುತ್ತದೆ. ಇಂಥ ಪಾಪ ಮಾಡಿದ ನಾವು ಈಗ ತಮ್ಮಿಂದ ಬಿಡುಗಡೆ ಮಾಡಲ್ಪಟ್ಟಿದ್ದೇವೆ. ನಮ್ಮ ಪಾಪವೆಲ್ಲವೂ ನಾಶವಾಯಿತು. ಇಂಥ ಪಾಪಮಾಡಿದ ನಾವು ಹೇಗೆ ಒಮ್ಮೆಲೆ ಉದ್ಧಾರ ಹೊಂದಿದೆವು?

**ಯಮಧರ್ಮ:-** ಹಿಂದೆ ಗಂಗಾ ತೀರದಲ್ಲಿ 'ಬಟು' ಎಂಬ ಬ್ರಾಹ್ಮಣನಿದ್ದ. ಅವನು ಮೋಹ, ಮಮತೆ, ಮಾಯೆಗಳಿಂದ ಬಹು ದೂರ. ಅವನ ಹೃದಯದಲ್ಲಿ ರಾಗದ ಅಂಕುರವೇ ಆಗಿರಲಿಲ್ಲ. ಈ ಮಹಾನುಭಾವನಾದ ಬಟು ಬ್ರಾಹ್ಮಣನು ಪ್ರತಿದಿನವೂ ಭಗವದ್ಗೀತೆಯ ಐದನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಲಿದ್ದ. ಯಾವಜ್ಜನ್ಮ ಭಗವದ್ಗೀತೆಯ ಪಂಚಮಾಧ್ಯಾಯವನ್ನು ಅರ್ಥಾನುಸಂಧಾನ ಪೂರ್ವಕವಾಗಿ ಪಾರಾಯಣ

ಮಾಡುವ ಅವನು ತನ್ನ ಕಾಲ ಪ್ರಾಪ್ತವಾದಾಗ ಮರಣ ಹೊಂದಿದ. ಹೀಗೆ ಗೀತೆಯಿಂದ ಪ್ರಕ್ಷಾಲಿತವಾದ ಪರಿಶುದ್ಧವಾದ ದೇಹವನ್ನು ಹೊಂದಿದ ಆ ಬ್ರಾಹ್ಮಣ ಗೀತೆಯ ಪಂಚಮಾಧ್ಯಾಯವನ್ನು ಪಾರಾಯಣ ಮಾಡುತ್ತಲೇ ಈ ತೀರ್ಥದಲ್ಲಿ ತನ್ನ ದೇಹವನ್ನು ಬಿಟ್ಟ. ಹೀಗೆ ಜಲಸಮಾಧಿಯನ್ನು ಹೊಂದಿದ ಅವನ ದೇಹವು ಹಲವಾರು ದಿನಗಳ ನಂತರ ದಂಡೆಗೆ ಬಂದು ಬಿದ್ದಿತು. ಅವನ ದೇಹದ ಇತರ ಭಾಗಗಳು, ಮೂಳೆಗಳು ಆ ವನಾಂತರದಲ್ಲಿ ಅಲ್ಲಲ್ಲಿ ಬಿದ್ದಿದ್ದವು. ಅವನ ತಲೆಬುರುಡೆ ಮಾತ್ರ ಇಲ್ಲಿಯೇ ಮರದಡಿಯಲ್ಲಿ ಬಂದು ಬಿದ್ದಿತ್ತು. ಅದರಲ್ಲಿ ಮಳೆಗಾಲದಲ್ಲಿ ನೀರು ತುಂಬಿತ್ತು. ಯಾವಾಗಲೂ ಗೀತೆಯ ಪಂಚಮಾಧ್ಯಾಯವನ್ನು ತಪ್ಪದೇ ಪಾರಾಯಣ ಮಾಡುತ್ತಿದ್ದ ಆ ಬಟು ಮುನಿಯ ಕಪಾಲದಲ್ಲಿ ನೀರು ತುಂಬಿತ್ತು. ಆ ನೀರಿನಲ್ಲಿ ಮೊದಲು ಗಿಡಗದಿಂದ ಹೊಡೆಯಲ್ಪಟ್ಟ ಗಿಳಿ, ನಂತರ ಬೇಡನಿಂದ ಹೊಡೆಯಲ್ಪಟ್ಟ ಗಿಡಗವೂ ಬಂದು ಬಿದ್ದವು. ಬ್ರಹ್ಮಜ್ಞಾನಿಯ ಕಪಾಲದಲ್ಲಿಯ ನೀರಿನಲ್ಲಿ ಮಿಂದು ಬಂದದ್ದರಿಂದ ಅಂದಿನ ಗಿಡಗ ಗಿಳಿಗಳಾದ ನಿಮ್ಮಿಬ್ಬರ ಜನ್ಮಾಂತರದಲ್ಲಿ ಇಷ್ಟು ಭಯಂಕರವಾದ ಪಾಪಮಾಡಿದ್ದರೂ ಗೀತೆಯ ಐದನೆಯ ಅಧ್ಯಾಯವನ್ನು ಅಹರ್ನಿಶಿ ಪಠಣ ಪಾಠಣ ಪಾರಾಯಣ ಪ್ರವಚನಾದಿಗಳನ್ನು ಎಡಬಿಡದೇ ಮಾಡುತ್ತಲಿದ್ದ ಬಟು ಬ್ರಾಹ್ಮಣನ ಅಸ್ಥಿಶೇಷದ ಜಲಸ್ಪರ್ಶ ಮಾತ್ರದಿಂದ ಪವಿತ್ರತರಾಗಿರುವಿರಿ. ನಿಮಗೆ ಅಭೀಪ್ಸಿತವಾದ ಪುಣ್ಯಲೋಕಗಳನ್ನು ಕುರಿತು ನೀವು ಇನ್ನು ಮೇಲೆ ಪ್ರಯಾಣ ಬೆಳೆಸಿರಿ. ಗೀತೆಯ ಪಂಚಮಾಧ್ಯಾಯದ ಮಹಿಮೆ ಅತ್ಯುದ್ಭುತವಾಗಿದೆ. ಅದೋ ಅಲ್ಲಿ ನೋಡಿರಿ. ನಿಮ್ಮನ್ನು ಕರೆಯಲಿಕ್ಕಾಗಿ ದೇವಲೋಕದಿಂದ ಪ್ರಾಪ್ತವಾಗಿದೆ ಪುಣ್ಯ ವಾಹನವಾದ ಸುರವಿಮಾನ.

ಯಮದೇವರ ಈ ವಚನವನ್ನು ಆನಂದಭರಿತ ಗಿಳಿ ಮತ್ತು ಗಿಡಗ ಜನ್ಮದಿಂದ ಮುಕ್ತರಾಗಿ ದಿವ್ಯದೇಹ ಪಡೆದು ನಿಂತರು ಅರುಣಾ ಹಾಗೂ ಪಿಂಗಲ ದಂಪತಿಗಳು. ಅವರಿಬ್ಬರೂ ಯಮದೇವರಿಗೆ ನಮಸ್ಕರಿಸಿ ವೈಷ್ಣವ ವಿಮಾನವನ್ನು ಆರೋಹಣಮಾಡಿ ದಿವ್ಯಲೋಕ ಪ್ರಯಾಣವನ್ನು ಕೈಕೊಂಡರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಪಿಂಗಳ ಬ್ರಾಹ್ಮಣನ ಉದಾಹರಣೆಯಿಂದ ಗೀತೆಯ ಐದನೆಯ ಅಧ್ಯಾಯ ಮಾಹಾತ್ಮ್ಯ ವರ್ಣನೆ ಎಂಬ ನೂರ ಆರವತ್ತೊಂದನೇಯ ಅಧ್ಯಾಯ ಮುಗಿದುದು*



## ಗೀತೆಯ ಆರನೆಯ ಅಧ್ಯಾಯದ ಮಾಹಾತ್ಮ್ಯ

ಅಧ್ಯಾಯ - ೧೬೨

**ಮಹಾದೇವ:-** ಸುಂದರಿ, ಈಗ ಭಗವದ್ಗೀತೆಯ ಆರನೆಯ ಅಧ್ಯಾಯದ ಮಾಹಾತ್ಮ್ಯವನ್ನು ನಿರೂಪಿಸುವೆ ಕೇಳು. ಗೋದಾವರೀ ತಟಾಕದಲ್ಲಿ ಪ್ರತಿಷ್ಠಾನವೆಂಬ ಮಹಾಪಟ್ಟಣ. ಅಲ್ಲಿ ಪಿಪ್ಪಲೇಶ ಎಂಬ ಹೆಸರಿನ ಪರಮ ಪವಿತ್ರವಾದ ನನ್ನ ಮಂದಿರವೊಂದಿದೆ. ಪೂರ್ವಕಾಲದಲ್ಲ 'ಜ್ಞಾನಶ್ರುತಿ' ಎಂಬ ಮಹಾರಾಜನು ಆ ಪಟ್ಟಣವನ್ನು ಶಾಸನಗೈಯುತ್ತಿದ್ದ. ಅವನು ಅನೇಕಾನೇಕ ಯಜ್ಞ-ಯಾಗಗಳನ್ನು ಮಾಡಿ ದೇವತಾ ಮಂಡಲವನ್ನು ಸಂತೋಷಪಡಿಸಿದ್ದ. ಅವನ ದಾತೃತ್ವ, ಕಲ್ಪವೃಕ್ಷಗಳಿಗೂ ಲಜ್ಜೆಯನ್ನು ತರಿಸುವಂತಹದು. ಜ್ಞಾನಶ್ರುತಿಯು ನಿರಂತರವೂ ನಡೆಸಿದ ಯಜ್ಞ-ಯಾಗಗಳಲ್ಲಿಯ ಪುರೋಡಾಶ ಆಹುತಿಯ ಸವಿಯನ್ನುಂಡ ದೇವತೆಗಳು ಅವನ ಪಟ್ಟಣವಾದ 'ಪ್ರತಿಷ್ಠಾನ' ವನ್ನು ಎಂದೂ ಬಿಟ್ಟು ಹೋಗುವ ಮನಸ್ಸನ್ನು ಮಾಡಲಿಲ್ಲ. ಹೋಮ-ಧೂಮಗಳಿಂದ ಪರಿಪುಷ್ಟವಾಗಿ ಮೋಡಗಳು ಕಾಲಕಾಲಕ್ಕೆ ಮಳೆಗರೆಯುತ್ತಿದ್ದವು. ಅವನ ರಾಜ್ಯದಲ್ಲಿ ಎಲ್ಲಿಯೂ ರೋಗ, ರುಜಿನ, ಕಷ್ಟ, ನಷ್ಟ, ಅನ್ಯಾಯ ಕಂಡುಬರುತ್ತಿರಲಿಲ್ಲ.

ಜ್ಞಾನಶ್ರುತಿ ದೊರೆಯ ಈ ಉದಾರ ದಾನ, ಅದ್ಭುತ ತಪಸ್ಸು, ಪ್ರಭೂತ ದಾನ ದಕ್ಷಿಣೆಗಳಿಂದ ಒಡಗೂಡಿದ ಯಜ್ಞಯಾಗಗಳು, ಹಾಗೂ ಪ್ರಜಾಜನಪರಿಪಾಲನೆ, ಇವನ್ನು ಕಂಡು ಎಲ್ಲ ಸ್ವರ್ಗೀಯ ದೇವತೆಗಳೂ ಪರಮ ಸಂತುಷ್ಟರಾಗಿದ್ದರು. ಅದಕ್ಕಾಗಿ ಆ ಮಹಾರಾಜನಿಗೆ ಸ್ವಸಂತೋಷದಿಂದ ವರಗಳನ್ನು ನೀಡಬೇಕೆಂದು ದೇವತೆಗಳು ಹಂಸಪಕ್ಷಿಯ ರೂಪ ತಳೆದು, ಅವನ ರಾಜಧಾನಿಯ ಕಡೆಗೆ ಅಂತರಿಕ್ಷ ಮಾರ್ಗದಿಂದ ಹಾರುತ್ತ ಬಂದರು. ಕಮಲದ ದೇಟಿನ ಕಾಂತಿಯಂತೆ ಪರಿಶುಭ್ರವಾದ ದೇಹ ದೀಧಿತಿಯುಳ್ಳ ಆ ರಾಜಹಂಸ ಪಕ್ಷಿಗಳು ಪರಸ್ಪರವಾಗಿ ಮಧುರ ನುಡಿಗಳಿಂದ ಸಂವಾದವನ್ನು ಮಾಡುತ್ತ, ರಾಜಧಾನಿಯ ಕಡೆಗೆ ಹಾರುತ್ತಲಿದ್ದವು. ಆಗಸದ ಅಂಗಳದಲ್ಲಿ ಹಾಲುಬಣ್ಣದ ತಮ್ಮ ರೆಕ್ಕೆಗಳನ್ನು ಬೀಸಿ ಹಾರಾಡುತ್ತ ನಡೆದ ಆ ದೇವತಾರೂಪಿಯಾದ ಅರಸಂಚೆಗಳಲ್ಲಿ ಭದ್ರಾಶ್ವ ಮೊದಲಾದ ಮೂರು, ನಾಲ್ಕು ಹಂಸಗಳು ತಮ್ಮ ಗುಂಪನ್ನು ದಾಟಿ ವೇಗದಿಂದ ಮುಂದೆ ನಡೆದವು. ಹಿಂದೆ ಉಳಿದ ಹಂಸಗಳು ಅವಸರದಿಂದ ಉಡ್ಡಾಣ ಮಾಡುವ ತಮ್ಮ ಮುಂದಿನ ಭದ್ರಾಶ್ವ ಮೊದಲಾದ ಅರಸಂಚೆಗಳನ್ನು ಕುರಿತು ಕೂಗಿಕೊಂಡವು.

**ಹಿಂದೆ ಉಳಿದ ಹಕ್ಕಿಗಳು:-** ಮಿತ್ರರೇ, ನಾವೆಲ್ಲರೂ ಸಹ ಜೊತೆಜೊತೆಯಾಗಿ ಹಾರಾಡುತ್ತ ನಡೆದಾಗ ನೀವು ಮಾತ್ರ ಇಷ್ಟೇಕೆ ವೇಗದ ಉಡ್ಡಾಣವನ್ನು ಕೈ ಗೊಂಡಿರಿ? ಈ ಆಕಾಶದ ಮಾರ್ಗವು ಜನನಿಬಿಡವಾದ ಹಾಗೂ ತುಂಗೋತ್ತುಂಗವಾದ ಅರಮನೆ, ಮಠ, ಪ್ರಾಕಾರ, ಮೊದಲಾದವುಗಳಿಂದ ಒಡಗೂಡಿದ ಈ ಪ್ರತಿಷ್ಠಾನ ಪಟ್ಟಣದ ಬಳಿಯಲ್ಲಿ ದುರ್ಗಮವಾಗಿದೆ. ಆದುದರಿಂದ ಇಂಥ ವಿಷಮಮಾರ್ಗದಲ್ಲಿ ನಾವೆಲ್ಲರೂ ಗುಂಪುಗೂಡಿಯೇ ಹಾರೋಣ. ನಿಮಗೆ ಮುಂದೆ ಕಾಣುತ್ತಿದೆ. ಅಗೋ, ಅಲ್ಲಿ ನೋಡಿ, ಒಂದು ಬೆಳಕಿನ ಬೆಟ್ಟವೇ ಒಟ್ಟೈಸಿ ನಿಂತಂತೆ ತೋರುತ್ತದೆ. ಅದು ಈ ದೇಶದ ದೊರೆಯಾದ

ಜ್ಞಾನಶೃತಿ ಮಹಾರಾಜನ ಪುಣ್ಯಪ್ರಭಾವದ ಪ್ರಕಾಶಪುಂಜವೇ ಇರಬೇಕು. ಹಿಂದೆ ಹಾರುತ್ತಲಿರುವ ಹಂಸ ಹಕ್ಕಿಗಳ ಎಚ್ಚರದ ನುಡಿಯನ್ನು ಕೇಳಿ, ಮುಂದೆ ಮುಂದೆ ಹಾರುತ್ತ ಹೊರಟ ಭದ್ರಾಶ್ವ ಮೊದಲಾದ ಹಂಸಗಳು ನಕ್ಕು ನುಡಿದವು. ಈ ಜ್ಞಾನಶೃತಿಯ ತೇಜಸ್ಸಿನ ಬಗ್ಗೆ ನೀವೇಕೆ ಇಷ್ಟು ಬಣ್ಣನೆಯನ್ನು ಮಾಡುವಿರಿ? ಈ ಭೂಲೋಕದಲ್ಲಿ ''ರೈಕ್ವ'' ಎಂಬ ಓರ್ವ ಬ್ರಹ್ಮಜ್ಞಾನಿ ಇರುತ್ತಾನೆ. ಅವನ ತೇಜಸ್ಸು ಮಾತ್ರ ಅನುಲ್ಲಂಘ್ಯ. ಈ ಭೂತಲದಲ್ಲಿ ಈ ರೈಕ್ವಮಹರ್ಷಿಯೊಬ್ಬನೇ ಬೆಳಕಿನ ಬೆಟ್ಟದಂತೆ ಪ್ರಸಹ್ಯ ತೇಜಃ ಪ್ರಕಾಶದಿಂದ ಕಂಗೊಳಿಸುತ್ತಿದ್ದಾನೆ. ಆ ರೈಕ್ವನ ಮುಂದೆ ಈ ಮಹಾರಾಜನ ತೇಜಸ್ಸು ಏನು ಮಹಾ?

ಹೀಗೆ ಆ ಹಂಸ ಹಕ್ಕಿಗಳು ಮಾತನಾಡುತ್ತ ನಡೆದಾಗ ಅಲ್ಲಿಯೇ ಕೆಳಗೆ ಭೂಲೋಕದ ಅತ್ಯುಚ್ಚತರವಾದ ಮೇಲು ಮಾಳಿಗೆಯ ಮೇಲೆ ಹಂಸದುಪ್ಪಳದ ಹಾಸಿನಲ್ಲಿ ಜ್ಞಾನಶೃತಿಮಹಾರಾಜ ಪವಡಿಸಿದ್ದ. ಈ ದೇವಲೋಕದ ದೇವತಾ ರೂಪಿಯಾದ ಹಂಸಗಳ ಸಂಭಾಷಣೆಯು ಚಂದ್ರಶಾಲೆಯ ಸುಖಾಸನದಲ್ಲಿ ಮಲಗಿದ್ದ ಮಹಾರಾಜನಿಗೆ ನಿಚ್ಚಳವಾಗಿ ಕೇಳಿಬರುತ್ತಿತ್ತು. ಈ ಹಂಸಗಳ ನುಡಿಯನ್ನು ಕೇಳಿ ರಾಜನಿಗೆ ಆಶ್ಚರ್ಯವೂ ದುಃಖವೂ ಆಯಿತು. ಕೂಡಲೇ ಅವನು ತನ್ನ 'ಮಹ' ಎಂಬ ಹೆಸರಿನ ಸಾರಥಿಯನ್ನು ಕರೆದ. ಅವನಿಗೆ ರೈಕ್ವ ಮುನಿಯು ಎಲ್ಲಿರುವನು? ಹುಡುಕಿರಿ. ಇದ್ದಲ್ಲಿಂದ ಆ ಮಹಾಮುನಿಯನ್ನು ಇಲ್ಲಿಗೆ ಕರೆತನ್ನಿರಿ, ಎಂದು ಅಪ್ಪಣೆಗೈದ, ಆ ಮಹಾ ಎಂಬ ಹೆಸರಿನ ಸಾರಥಿಯು ರಾಜನ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು ಆ ಕ್ಷಣದಲ್ಲೇ ಹೊರಟ ರೈಕ್ವನ ಅನ್ವೇಷಣೆಗೆ.

ಭೂಮಂಡಲದ ತುಂಬ ಸಂಚಾರ ಮಾಡಿದ. ಅವನು ಮೊದಲು ಬಂದದ್ದು ವಾರಣಾಸೀ ಪಟ್ಟಣಕ್ಕೆ. ಜಗತ್ಪತಿಯಾದ ವಿಶ್ವೇಶ್ವರನು ನಿರಂತರವಾಗಿ ನೆಲೆಸಿದ ಆ ಕಾಶೀಕ್ಷೇತ್ರದಲ್ಲಿ ಎಲ್ಲೆಡೆಗೂ ರೈಕ್ವನಿಗಾಗಿ ಹುಡುಕಾಡಿದ, ಆ ರಾಜಸಾರಥಿ. ಅಲ್ಲಿ ಎಲ್ಲಿಯೂ 'ಮಹ'ನಿಗೆ ರೈಕ್ವನ ದರ್ಶನವಾಗಲಿಲ್ಲ. ಅನಂತರ ಸರ್ವ ಲೋಕಗಳನ್ನು ಉದ್ಧಾರಮಾಡುವದಕ್ಕಾಗಿ ಗದಾಧರಸ್ವಾಮಿಯು ಸುಪ್ರತಿಷ್ಠತನಾಗಿ ನಿಂತುಕೊಂಡ ಗಯಾಕ್ಷೇತ್ರಕ್ಕೆ ಹೋದ. ಅಲ್ಲಿಯೂ ಹುಡುಕಿ ನಿರಾಶನಾದ. ಅನಂತರ ಸರ್ವಪಾಪಗಳನ್ನೂ ಪರಿಹರಿಸುವ ಕೇದಾರ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದ. ಕೇದಾರಕ್ಷೇತ್ರದಲ್ಲಿ ಎಲ್ಲೆಡೆಗೆ ಹುಡುಕಾಡಿದ. ರೈಕ್ವ ಮುನಿಯನ್ನು ಎಲ್ಲೂ ಕಾಣದೇ ಜಗನ್ನಾಥಪುರಿ ಕ್ಷೇತ್ರಕ್ಕೆ ಬಂದ. ಅಲ್ಲಿನ ತೀರ್ಥದಲ್ಲಿ ಮಿಂದ. ಎಲ್ಲ ಕಡೆಗೂ ರೈಕ್ವನಿಗಾಗಿ ಅನ್ವೇಷಣೆ ನಡೆಸಿದ. ನಿರಾಶನಾಗಿ ಗೋಮತೀ ತೀರದಲ್ಲಿ ಇರುವ ದ್ವಾರಾವತಿಗೆ ಆಗಮಿಸಿದ. ಗೋಮತಿಯ ಪುಣ್ಯೋದಕದಲ್ಲಿ ಅವಗಾಹನ ಸ್ನಾನ ಮಾಡಿ ಅಲ್ಲಿರುವ ಶ್ರೀ ಕೃಷ್ಣನ ಪರಮಪವಿತ್ರವಾದ ಪಂಚಮೂರ್ತಿಗಳನ್ನು ಕಂಡು ಸಮುದ್ರ ನಮಸ್ಕಾರವನ್ನು ಮಾಡಿದ. ಬಳಿಕ ಸಮುದ್ರತೀರದಲ್ಲಿರುವ ಭಕ್ತಿ ಮುಕ್ತಿ ಪ್ರದಾಯಕವಾದ ಸೋಮನಾಥಕ್ಷೇತ್ರ, ಅವಂತಿಕಾ ಪಟ್ಟಣ, ನರ್ಮದಾತೀರದ ಓಂಕಾರೇಶ್ವರ, ಅಶ್ವಮೇಕರ ನಗರ, ವಿಷ್ಣು ಗಯಾಮುಂತಾದ ತೀರ್ಥಕ್ಷೇತ್ರಯಾತ್ರೆಗಳನ್ನು ಮಾಡಿ ರೈಕ್ವನ ಅನ್ವೇಷಣ ಕಾರ್ಯವನ್ನು ಮುಂದುವರೆಸಿದ. ಅಲ್ಲಲ್ಲಿಯೂ ಆ ಮಹಾಮುನಿಯು ಕಾಣಲಿಲ್ಲ. ಕೊನೆಗೆ ಕೊಲ್ಹಾಪುರಕ್ಷೇತ್ರಕ್ಕೆ ಬಂದ. ವಿಷ್ಣುಭಕ್ತಿಯನ್ನು ಪಾವನಗೊಳಿಸಿ ಕರುಣಿಸುವ ಸಾಕ್ಷಾತ್ ಲಕ್ಷ್ಮೀದೇವಿಯು ಆ ಕೊಲ್ಹಾಪುರಕ್ಷೇತ್ರವನ್ನು ಪಾವನಗೊಳಿಸಿ ಭಕ್ತರನ್ನು ಅನುಗ್ರಹಿಸುತ್ತ ನಿಂತುಕೊಂಡಿದ್ದಾಳೆ.

ಮಹಾಲಕ್ಷ್ಮೀದೇವಿಯ ದರ್ಶನ ಪಡೆದು, ಪಂಚಗಂಗಾನದಿಯಲ್ಲಿ ಸ್ನಾನ ಮಾಡಿ ಅನಂತರ ಅವಲಗಿರಿ, ನಂದಿಕೇಶ್ವರ, ಸೋಮನಾಥ, ತುಂಗಾತೀರದಲ್ಲಿರುವ ಹರಿಹರಕ್ಷೇತ್ರ, ಶ್ರೀಶೈಲ ಮುಂತಾದ ಕ್ಷೇತ್ರಗಳನ್ನು ಸಂದರ್ಶಿಸಿ ಎಲ್ಲ ಕಡೆಗೂ ರೈಕ್ವನಿಗಾಗಿ ಹುಡುಕಾಡಿದ. ಸಿದ್ಧಗಂಧರ್ವ ಸೇವಿತವಾದ ಶ್ರೀ ಶೈಲ ಪರ್ವತದಲ್ಲಿ ನೆಲೆಸಿರುವ ಪಾರ್ವತಿ ಪತಿಯಾದ ಮಲ್ಲಿಕಾರ್ಜುನನಿಗೆ ನಮಸ್ಕರಿಸಿದ. ಭೂಲೋಕದಲ್ಲಿರುವ ಎಲ್ಲ ಜನರನ್ನೂ ಸಂಸಾರ ಸಮುದ್ರದಿಂದ ಪಾರು ಮಾಡಲಿಕ್ಕಾಗಿ ಭಗವಾನ್ ಪರಮೇಶ್ವರನು ಜ್ಯೋತಿರೂಪದಿಂದ ಮಲ್ಲಿನಾಥ ಎಂಬ ಹೆಸರಿನಿಂದ ಶ್ರೀಶೈಲ ಕ್ಷೇತ್ರದಲ್ಲಿ ನೆಲೆಸಿದ್ದಾನೆ. ಅನಂತರ ಆ ಮಹಾ ಸಾರಥಿಯು ರಾಮೇಶ್ವರಾದಿ ದಕ್ಷಿಣದೇಶದ ಎಲ್ಲ ತೀರ್ಥಗಳಲ್ಲೂ ಅನ್ವೇಷಣೆಮಾಡಿ ಮರಳಿ ಭೀಮರಥೀ ತಟಾಕಕ್ಕೆ ಆಗಮಿಸಿದ. ಅಲ್ಲಿ ಇರುವ ಎರಡು ಕೈಗಳುಳ್ಳ ಪಂಢರಪುರದ ವಿಠ್ಠಲನ ದರ್ಶನ ತೆಗೆದುಕೊಂಡ. ಬಳಿಕ ಗೋದಾವರೀ ತೀರಕ್ಕೆ ಬಂದು ಬ್ರಹ್ಮಗಿರಿಯಲ್ಲಿರುವ ಗೌತಮರ ಆಶ್ರಮವನ್ನು ನಿರೀಕ್ಷಿಸಿದ. ತ್ರ್ಯಂಬಕೇಶ್ವರ ದರ್ಶನ ಮಾಡಿದ. ಅರುಣಾ, ವರುಣಾ ನದಿಗಳ ಮಧ್ಯದಲ್ಲಿ ಹರಿಯುತ್ತಲಿರುವ ಗೋದಾವರಿಯಲ್ಲಿ ಸ್ನಾನ ಮಾಡಿ ತ್ರ್ಯಂಬಕೇಶ್ವರನ ದರ್ಶನಮಾಡಿದ ಮಾನವರ ಬ್ರಹ್ಮಹತ್ಯಾದಿ ಪಾಪಗಳು ದೂರವಾಗುತ್ತವೆ. ಅಸಂಖ್ಯ ತೀರ್ಥಗಳಿಂದೊಡಗೂಡಿದ ಬ್ರಹ್ಮಗಿರಿಯ ದರ್ಶನಮಾತ್ರದಿಂದಲೇ ಸಂಸಾರ ಸಾಗರದಿಂದ ಮಾನವರು ಮುಕ್ತರಾಗುತ್ತಾರೆ. ಆ ಗೋದಾವರೀ ನದಿಯ ಎರಡೂ ತೀರದ ಸಮೀಪದಲ್ಲಿರುವ ಪುಣ್ಯ ತೀರ್ಥಕ್ಷೇತ್ರಗಳನ್ನೆಲ್ಲ ಸುತ್ತಾಡಿ ಅನಂತರ ಪಾಪನಾಶಕವಾದ ಮಧುರಾಕ್ಷೇತ್ರಕ್ಕೆ ಬಂದ. ಬಳಿಕ ಸಂವರ್ಧನ ಪರ್ವತ, ದ್ವಾದಶ ವನ ಮುಂತಾದ ಪುಣ್ಯ ಪ್ರದೇಶಗಳನ್ನೆಲ್ಲ ನೋಡಿಕೊಂಡು, ಕಾಶ್ಮೀರ, ಕುರುಕ್ಷೇತ್ರ ಮುಂತಾದ ರಮಣೀಯ ಭೂಖಂಡಗಳನ್ನು ಪ್ರವೇಶಿಸಿ ರೈಕ್ವನ ಅನ್ವೇಷಣೆ ಮಾಡಿದ. ಬಳಿಕ ಆ ಮಹಾಸಾರಥಿಯು ಕಾಶ್ಮೀರಮಂಡಲದಲ್ಲಿರುವ ಮಾಣಿಕ್ಯೇಶ್ವರ ಎಂಬ ಪರಮೇಶ್ವರನ ದಿವ್ಯ ಸನ್ನಿಧಾನಕ್ಕೆ ಆಗಮಿಸಿದ. ಆ ಮಾಣಿಕ್ಯೇಶ್ವರ ದೇವಸ್ಥಾನದ ಸಮೀಪದಲ್ಲಿಯೇ ಒಂದು ಗಿಡದ ನೆರಳಲ್ಲಿ ಒಂದು ಬಂಡಿಯ ಮೇಲೆ ಮೈಕೈಗಳನ್ನೆಲ್ಲ ತುರಿಸುತ್ತ ಆ ಬಂಡಿಯ ಸಾರಥಿಯಾದ ರೈಕ್ವ ಮುನಿಯು ಕುಳಿತುಕೊಂಡಿದ್ದ.

ಜ್ಞಾನಶೃತಿಮಹಾರಾಜನು ರೈಕ್ವನ ದೇಹದ ಲಕ್ಷಣಗಳನ್ನು ವಿವರವಾಗಿ ಮಹಾಸಾರಥಿಗೆ ಹೇಳಿಕೊಟ್ಟಿದ್ದ. ಬಂಡಿಯ ಮೇಲೆ ಕುಳಿತು ತನ್ನ ಅಂಗಾಂಗಳನ್ನು ತುರಿಸುತ್ತ ಕುಳಿತಿದ್ದ ಆ ವ್ಯಕ್ತಿಯಲ್ಲಿ ರೈಕ್ವನ ದೇಹಲಕ್ಷಣಗಳೆಲ್ಲ ಕಂಡವು. ಇವನೇ ರೈಕ್ವನೆಂದು ಮಹಾಸಾರಥಿಯು ನಿರ್ಧರಿಸಿದ. ಅಲ್ಲಿಗೆ ಬಂದು ರೈಕ್ವನಿಗೆ ನಮಸ್ಕಾರ ಮಾಡಿ, ಸಾರಥಿಯು ನುಡಿದ.

**ಸಾರಥಿ:-** ಪೂಜ್ಯರೇ, ತಮ್ಮ ಹೆಸರು ಏನು? ತಾವು ಇಲ್ಲಿ ಏಕೆ ವಿರಮಿಸಿದ್ದೀರಿ? ತಮ್ಮ ಊರು ಯಾವುದು? ಈಗ ತಾವು ಏನು ಮಾಡಬೇಕು ಎಂದು ಬಯಸಿರುವಿರಿ?

ಈ ಮಾತನ್ನು ಕೇಳಿ ಹರ್ಷಪುಲಕಿತನಾಗಿ ನುಡಿದ ರೈಕ್ವ.

**ರೈಕ್ವ:-** ನಾವಂತೂ ಪೂರ್ಣಮನೋರಥರು. ನಮಗೆ ಯಾವ ಆಸೆಯೂ ಇಲ್ಲ. ನಮ್ಮ ಸೇವೆಯನ್ನು ಮಾಡಬಯಸುವವರು ನಮ್ಮ ಮನಸ್ಸಿನ ಬೇಕು ಬೇಡಗಳನ್ನು ಅರಿತು ಸರಿಯಾಗಿ ಸೇವೆಯನ್ನು ಮಾಡಬೇಕು.

ರೈಕ್ವ ಮುನಿಯ ಈ ಮಾತನ್ನು ಕೇಳಿಕೊಂಡು ಸಾರಥಿಯು ಅಲ್ಲಿಂದ ನೇರವಾಗಿ ಪ್ರತಿಷ್ಠಾನ ಪಟ್ಟಣಕ್ಕೆ ಆಗಮಿಸಿದ. ಮಹಾರಾಜನಿಗೆ ನಮಸ್ಕರಿಸಿ ಎಲ್ಲ ವೃತ್ತಾಂತವನ್ನೂ ತಿಳಿಸಿದ. ಸಾರಥಿಯ ಮಾತನ್ನು ಕೇಳಿ ಅತ್ಯಾಶ್ಚರ್ಯ, ಆ ಜ್ಞಾನಶೃತಿಗೆ. ಅವರ ಜೊತೆಗೆ ರೈಕ್ವನ ಬಗೆಗೆ ಅವನಲ್ಲಿ ನಿರತಿಯವಾದ ಶ್ರದ್ಧೆ ಅಂಕುರಿಸಿತು. ಕೂಡಲೇ ಅವನು ಎರಡು ಹೇಸರಗತ್ತೆಗಳನ್ನೂ ಎರಡು ಒಳ್ಳೇ ಕುದುರೆಗಳನ್ನೂ ಒಂದು ಬಂಡಿಗೆ ಹೂಡಿದ. ಅದರಲ್ಲಿ ಮುತ್ತು, ರತ್ನ, ಬಟ್ಟೆ, ಬಂಗಾರಗಳನ್ನು ತುಂಬಿದ. ಒಂದು ಸಾವಿರ ಹಸುಗಳನ್ನು ತನ್ನೊಡನೆ ಇರಿಸಿಕೊಂಡ. ಪಯಣದ ಮೇಲೆ ಪಯಣವನ್ನು ಬೆಳೆಸುತ್ತ, ಕಾಶ್ಮೀರ ಮಂಡಲಕ್ಕೆ ಧಾವಿಸಿ ಬಂದ. ತಾನು ಎಲ್ಲ ಮುತ್ತು, ರತ್ನ, ಬಟ್ಟೆ, ಬರೆ, ಬಂಗಾರ ಮೊದಲಾದ ಅಪಾರ ಐಶ್ವರ್ಯದ ನಿಧಿಯನ್ನು ಆ ರೈಕ್ವ ಮುನಿಗೆ ನಿವೇದನೆಗೈದು ದಂಡ ಪ್ರಣಾಮ ಮಾಡಿದ. ತನ್ನೆದುರು ಸಾಷ್ಟಾಂಗ ನಮಸ್ಕರಿಸಿ ನಿಂತ ಆ ಮಹಾರಾಜನನ್ನು ಕಂಡು ರೈಕ್ವನಿಗೆ ಕೋಪಬಂದಿತು.

**ರೈಕ್ವ:-** ಎಲೈ ಕ್ಷುದ್ರ ಶೂದ್ರ, ನಿನಗೆ ನನ್ನ ನಿಯಮ ಹಾಗೂ ಸ್ವಭಾವ ಗೊತ್ತಿಲ್ಲವೆ ? ತೆಗೆದುಕೊಂಡು ಹೋಗು ಬಟ್ಟೆ ಬಂಗಾರಾದಿ ಸಂಪತ್ತಿನಿಂದ ಕೂಡಿದ ಈ ನಿನ್ನ ಚಕ್ಕಡಿಯನ್ನು ನನಗೆ ಇದಾವುದೂ ಬೇಡ.

ರೈಕ್ವ ಮುನಿಯ ಸಿಟ್ಟಿನ ಭಾವನೆಯಿಂದ ಸಿಡಿದು ಬಂದ ಈ ಬಿರುನುಡಿಯನ್ನು ಕೇಳಿ ನಡುಗಿಹೋದ ಜ್ಞಾನಶೃತಿ. ಅವರ ಮುಂದೆ ಅಡ್ಡಬಿದ್ದು ''ಪೂಜ್ಯರೇ, ಪ್ರಸನ್ನರಾಗಿರಿ'' ಎಂದು ಬೇಡಿಕೊಂಡ. ಮತ್ತು ''ತಮಗೆ ಇಂಥ ಅದ್ಭುತವಾದ ಮಹಿಮೆ ಬರಲು ಕಾರಣ ವೇನು ?'' ಎಂದೂ ವಿನಮ್ರವಾಗಿ ಪ್ರಶ್ನೆ ಮಾಡಿದ. ಮಹಾರಾಜನ ಪ್ರಶ್ನೆಯನ್ನು ಸಾವಧಾನ ಮನಸ್ಸಿನಿಂದ ಕೇಳಿಕೊಂಡ ರೈಕ್ವಮುನಿ. ಅವನ ಪ್ರಶ್ನೆಗೆ ಉತ್ತರಿಸುತ್ತ ರೈಕ್ವ ಹೇಳಿದ.

**ರೈಕ್ವ :-** ನಾನು ಪ್ರತಿದಿನವೂ ಶ್ರೀಕೃಷ್ಣನಿಂದ ಉಪದೇಶಿಸಲ್ಪಟ್ಟ ಭಗವದ್ಗೀತೆಯ ಆರನೆಯ ಅಧ್ಯಾಯವನ್ನು ತಪ್ಪದೇ ಪಾರಾಯಣ ಮಾಡುತ್ತೇನೆ. ಅದರಿಂದಾಗಿ ದೇವತೆಗಳಿಗೂ ಸಹ ಸಹನ ಮಾಡಲು ಸಾಧ್ಯವಿರಲಾರದಂಥ ದುಸ್ಸಹವಾದ ತೇಜಸ್ಸು ಪ್ರಾಪ್ತವಾಗಿದೆ.

ಅನಂತರ ಜ್ಞಾನಶೃತಿಯು ಸಾಷ್ಟಾಂಗವಂದನಗೈದು, ತನಗೆ ಭಗವದ್ಗೀತೆಯ ಆರನೆಯ ಅಧ್ಯಾಯದ ಪಾಠವನ್ನು ಹೇಳಬೇಕು, ಅದರ ಅರ್ಥವನ್ನು ವಿವರಿಸಬೇಕು, ಅದರ ರಹಸ್ಯವನ್ನು ತಿಳಿಸಿಕೊಡಬೇಕು ಎಂದು ಪ್ರಾರ್ಥನೆಯನ್ನು ಮಾಡಿದ.

ಮಹಾರಾಜನ ಈ ಭಗವದ್ಗೀತಾ ನಿಷ್ಠೆಯನ್ನೂ, ತತ್ವಜ್ಞಾನದ ಬುಭುತ್ಸೆಯನ್ನೂ ಕಂಡು ಪರಮ ಸಂತೋಷವಾಯಿತು ರೈಕ್ವ ಮುನಿಗೆ. ಅವನು ಗೀತೆಯ ರಹಸ್ಯಾರ್ಥವನ್ನೆಲ್ಲ ಚೆನ್ನಾಗಿ ಆ ಜ್ಞಾನಶೃತಿ ಮಹಾರಾಜನಿಗೆ ತಿಳಿಸಿಹೇಳಿದ. ಆದರ ಪ್ರಮೇಯಗಳ ಗಹನಗೂಢ ಅರ್ಥವನ್ನೆಲ್ಲ ಬಿಡಿಸಿ ತಿಳಿಸಿದ. ಹೀಗೆ ಪರಮಜ್ಞಾನಿಯಾದ ರೈಕ್ವನಿಂದ ಭಗವದ್ಗೀತೆಯ ಆರನೆಯ ಅಧ್ಯಾಯದ ಸಮ್ಯಗ್ ಅಧ್ಯಯನವನ್ನು ಮಾಡಿ ಜ್ಞಾನಶೃತಿ ಮಹಾರಾಜನು ಪ್ರತಿದಿನ ಅರ್ಥಾನುಸಂಧಾನ ಪೂರ್ವಕವಕವಾಗಿ ಆರನೆಯ ಅಧ್ಯಾಯದ ಪಾರಾಯಣಮಾಡಿದ. ಪುನಃ ಪುನಃ ಆವೃತ್ತಿ ಮಾಡಿದ. ಪ್ರವಚನಗೈದ. ಹೀಗೆ ನಿರಂತರ ಗೀತೆಯ ಷಷ್ಠಾಧ್ಯಾಯದ ಪಠನ, ಪಾಠನ, ಪ್ರವಚನ, ಪಾರಾಯಣದ ಪ್ರಭಾವದಿಂದ ಆ ಜ್ಞಾನಶೃತಿ ಮಹಾರಾಜನು ಸಂಸಾರ ಬಂಧನದಿಂದ ಮುಕ್ತನಾದ. ಇತ್ತ ರೈಕ್ವಮುನಿಯಾದರೂ ಮಾಣಿಕ್ಯೇಶ್ವರ ಸನ್ನಿಧಿಯಲ್ಲಿ ಗೋದಾನದೀ ತೀರದಲ್ಲಿ ಗೀತೆಯ

ಆರನೆಯ ಅಧ್ಯಾಯದ ಜಪ, ಪಾರಾಯಣ, ಉಪದೇಶ, ಉಪನ್ಯಾಸ, ಮನನಾದಿಗಳನ್ನು ಎಡೆಬಿಡದೇ ನಡೆಸಿ ಶ್ರೀಕೃಷ್ಣನ ಪರಮಾನುಗ್ರಹ ಪಡೆದು, ಸಂಸಾರ ವಿಮುಕ್ತನಾಗಿ ಮೋಕ್ಷವನ್ನು ಹೊಂದಿದ.

ಹಂಸದ ವೇಷವನ್ನು ಧರಿಸಿ ಜ್ಞಾನಶ್ರುತಿ ಮಹಾರಾಜನಿಗೆ ವರವನ್ನು ನೀಡಬೇಕು ಎಂದು ನಾಕಲೋಕದಿಂದ ಆಗಮಿಸಿದ ದೇವತಾರೂಪಿಯಾದ ಎಲ್ಲ ಹಂಸಗಳೂ ಗೀತೆಯ ಆರನೆಯ ಅಧ್ಯಾಯದ ಮಹಿಮೆಯನ್ನು ಕಣ್ಣಾರೆ ಕಂಡು ಆಶ್ಚರ್ಯಚಕಿತರಾಗಿ ಭಗವಂತನನ್ನು ಕೊಂಡಾಡುತ್ತ ಬಂದದಾರಿಯಿಂದ ಸ್ವರ್ಗಲೋಕಕ್ಕೆ ತೆರಳಿದವು.

ಶ್ರೀ ಕೃಷ್ಣನು ಅರ್ಜುನನಿಗೋಸ್ಕರ ಉಪದೇಶಿಸಿದ ಈ ಗೀತೆಯ ಆರನೆಯ ಅಧ್ಯಾಯದ ಅರ್ಥಾನುಸಂಧಾನಪೂರ್ವಕ, ಶ್ರದ್ಧೆಯಿಂದ ಪಾರಾಯಣ, ಪ್ರವಚನ, ಪಠನಾದಿಗಳನ್ನು ಪದೇ ಪದೇ ಮಾಡುವವರು ಶ್ರೀಕೃಷ್ಣನ ದಿವ್ಯಸನ್ನಿಧಿಯನ್ನು ಹೊಂದುವರು. ಇದರಲ್ಲಿ ತಿಲಮಾತ್ರವೂ ಸಂದೇಹವಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಗೀತೆಯ ಆರನೆಯ ಅಧ್ಯಾಯದ ಮಾಹಾತ್ಮ್ಯ ಎಂಬ ನೂರ ಆರವತ್ತೆರಡನೇಯ ಅಧ್ಯಾಯ ಮುಗಿದುದು*



## ಭಗವದ್ಗೀತೆಯ ಏಳನೆಯ ಅಧ್ಯಾಯ ಪ್ರಭಾವ | ಅಧ್ಯಾಯ - ೧೬೩
## ಶಂಕುಕರ್ಣ ಬ್ರಾಹ್ಮಣನ ಆಖ್ಯಾನ

**ಪರಮೇಶ್ವರ:-** ಪಾರ್ವತಿ, ನಾನು ಈಗ ನಿನಗೆ ಗೀತೆಯ ಏಳನೆಯ ಅಧ್ಯಾಯದ ಪುಣ್ಯ ಪ್ರಭಾವವನ್ನು ಬಣ್ಣಿಸುತ್ತೇನೆ. ಅದನ್ನು ಶ್ರವಣ ಮಾಡಿದರೆ ಮಾನವನ ಕಿವಿಯಲ್ಲಿ ಸೊದೆಯನ್ನೇ ಸುರಿದಂತೆ ತೃಪ್ತಿ, ತಣಿವು, ಸಂತೋಷ ಉಂಟಾಗುತ್ತವೆ. ಚಿತ್ತವಿಟ್ಟು ಆಲಿಸು.

ಪೂರ್ವಕಾಲದಲ್ಲಿ ಪಾಟಲೀಪುತ್ರದಲ್ಲಿ ಶಂಕುಕರ್ಣ ಎಂಬ ದಯಾಳು ಬ್ರಾಹ್ಮಣ. ಅವನು ವೇದಶಾಸ್ತ್ರಗಳ ಅಧ್ಯಾಯನವನ್ನೇನೋ ಮಾಡಿದ್ದ. ಆದರೆ ಹಣದ ಹಂಬಲ ಬಹಳ ಆ ವಿಪ್ರನಿಗೆ. ಅದಕ್ಕಾಗಿ ಅವನು ತನ್ನ ವಂಶಪರಂಪರೆಯಿಂದ ಬಂದ ಬ್ರಾಹ್ಮಣವೃತ್ತಿಯನ್ನು ತ್ಯಜಿಸಿದ. ದುಡ್ಡನ್ನುಗಳಿಸಲು ವೈಶ್ಯ ವೃತ್ತಿಗೆ ಇಳಿದ. ಉದ್ಯೋಗ ವ್ಯವಹಾರ ಮೊದಲಾದವುಗಳನ್ನು ಕೈಗೊಂಡ. ಹಗಲಿರುಳೂ ಹರಿದಾಡಿ ಹೇರಳ ಧನ ಸಂಪಾದಿಸಿದ. ದುಡ್ಡಿನ ನಾದದಿಂದ ಬಗೆಬಗೆಯ ಹವ್ಯಾಸಗಳನ್ನು ಹಮ್ಮಿಕೊಂಡ ಆ ಬ್ರಾಹ್ಮಣ, ದೇವರನ್ನು ಪೂಜಿಸಲಿಲ್ಲ, ಪಿತೃಗಳನ್ನು ತರ್ಪಿಸಲಿಲ್ಲ. ವಿಪ್ರರನ್ನು ಆದರಿಸಲಿಲ್ಲ. ಅತಿಥಿಗಳನ್ನು ಅನ್ನದಾನದಿಂದ ಸಂತೋಷಪಡಿಸಲಿಲ್ಲ. ಸಿರವಂತರನ್ನೂ, ರಾಜಮಹಾರಾಜರನ್ನೂ ಕರೆದು ಗೌರವಿಸಿ ಅವರಿಂದ ಹಣವನ್ನು ಗಳಿಸುತ್ತಿದ್ದ. ವಿಷಯಸುಖ ಲಂಪಟನಾದ ಅವನು ಹೊರೆ ಹೊರೆಯಾಗಿ ಹಣ ತನ್ನಲ್ಲಿ ಶೇಖರಿತವಾದ ಬಳಿಕ ಒಂದರ ಮೇಲೊಂದು ಮದುವೆ ಮಾಡಿಕೊಂಡ. ಪ್ರಥಮ ವಿವಾಹದಲ್ಲಿ ಪಾಣಿಗ್ರಹಣ ಮಾಡಿದ ಸತೀಮಣಿಯು ಆರೋಗ್ಯದಿಂದ ಬದುಕಿ ಇದ್ದರೂ ಸ್ತ್ರೀಲೌಲ್ಯದಿಂದ ಮತ್ತೊಬ್ಬಳನ್ನು ಮದುವೆಯಾದ. ಇಬ್ಬರು ಕನ್ಯೆಯರೊಂದಿಗೆ ಕೆಲವು ದಿನ

ಕಾಮಕೇಳಿ ವಿಲಾಸಗೈದರೂ ತೃಪ್ತಿ ಆಗಲಿಲ್ಲ. ಮೂರನೆಯ ಕನ್ನೆಯೊಂದನ್ನು ಮದುವೆ ಮಾಡಿಕೊಂಡು ಮನೆ ತುಂಬಿಸಿಕೊಂಡ. ಇಷ್ಟಾದರೂ ಅವನ ಹೆಣ್ಣಿನ ಹುಚ್ಚು ತಣಿಯಲಿಲ್ಲ. ಕೆಲವು ದಿನಗಳ ಬಳಿಕ ಮತ್ತೊಂದು ಸುಂದರಿಯಾದ ಕನ್ಯಾಮಣಿಯನ್ನು ಮದುವೆಯಾಗುವ ಸಿದ್ಧತೆ ನಡೆಸಿದ.

ಮೊದಲಿನ ಮೂವರು ಸ್ತ್ರೀಯರಲ್ಲಿ ಅನೇಕ ಜನ ಗಂಡು ಮಕ್ಕಳು, ಎಷ್ಟೋ ಹೆಣ್ಣು ಮಕ್ಕಳೂ ಆತನಿಗೆ ಜನಿಸಿದ್ದರು. ಅವರು ವಯಸ್ಸಿಗೂ ಬಂದಿದ್ದರು. ಈ ತನ್ನ ಗಂಡು, ಹೆಣ್ಣು ಮಕ್ಕಳು ಪ್ರಬುದ್ಧರಾಗಿದ್ದರೂ ಕಾಮಾಂಧನಾದ ಆ ಶಂಕುಕರ್ಣನು ನಾಲ್ಕನೆಯ ಮದುವೆಗೆ ತಯಾರಿ ನಡೆಸಿದ. ತನ್ನ ಎಲ್ಲ ಮಕ್ಕಳೂ ಹಾಗೂ ಬಂಧುಗಳಿಂದ ನಾಲ್ಕನೆಯ ಮದುವೆಗಾಗಿ ಹೊರಡಲನುವಾದ. ಎಲ್ಲ ಸಿದ್ಧತೆಯನ್ನೂ ಮಾಡಿಕೊಂಡು ವಿವಾಹ ಪರಿಕರಗಳನ್ನೂ ಕಟ್ಟಿಕೊಂಡು ಅವನ ಹೊರಡುವ ಸಿದ್ಧತೆಯಲ್ಲಿ ಮಲಗಿಕೊಂಡ. ದುರ್ದೈವದಿಂದ ಅವನು ನಿದ್ರಾವಶನಾದಾಗ ಘೋರವಾದ ಕೃಷ್ಣಸರ್ಪವೊಂದು ಅಲ್ಲಿಗೆ ಬಂದು ಅವನನ್ನು ಕಚ್ಚಿತು. ಶ್ರೀಮಂತನಾದ ಆತನಿಗೆ ಬಂಧು ಬಳಗದ ಪರಿವಾರ ದೊಡ್ಡದಿದ್ದಿತು. ಅವರೆಲ್ಲರೂ ಸರ್ಪದಷ್ಟನಾದ ಶಂಕುಕರ್ಣನನ್ನು ಬದುಕಿಸಿಕೊಳ್ಳಲು ಬಗೆಬಗೆಯ ಉಪಾಯ ಮಾಡಿದರು. ಮಾಂತ್ರಿಕರನ್ನು ಕರೆಸಿ ಮಂತ್ರ ಹಾಕಿಸಿದರು. ಮಣಿ, ಮಂತ್ರ, ಔಷಧಗಳ ಉಪಚಾರವೂ ನಡೆಯಿತು. ಎಲ್ಲವೂ ವಿಫಲ, ಎಷ್ಟು ಪ್ರಯತ್ನ ಮಾಡಿದರೂ ಬದುಕಲಿಲ್ಲ. ಆಗ ಅವನ ಎಲ್ಲ ಮಕ್ಕಳೂ ಆ ಶಂಕುಕರ್ಣನ ಉತ್ತರ ಕ್ರಿಯೆಯನ್ನು ಮಾಡಿ ಮನೆಗೆ ತೆರಳಿದರು. ಸರ್ಪದಂಶದಿಂದ ಹತನಾದ ಆ ಶಂಕುಕರ್ಣನು ಯಮಲೋಕದಲ್ಲಿ ಬಹುವಿಧವಾದ ಯಮಯಾತನೆಯನ್ನು ಅನುಭವಿಸಿದ. ಮರಣ ಹೊಂದುವಾಗ ಹಾವು ಕಚ್ಚಿ, ರೊಚ್ಚಿಗೆದ್ದು, ಅದನ್ನೇ ನೆನೆಯುತ್ತ ಮಲಗಿದ್ದರಿಂದ, ತಾನೂ ಒಂದು ಕೃಷ್ಣಸರ್ಪವಾಗಿ ಜನಿಸಿದ. ತನ್ನ ಮಕ್ಕಳನ್ನೆಲ್ಲ ವಂಚಿಸಿ ನೆಲದಲ್ಲಿ ಹುಗಿದಿಟ್ಟ ಕೋಟಿರೂಪಾಯಿಗಳ ಒಂದು ನಿಧಿಯ ಬಳಿಗೆ ಸರ್ಪರೂಪದಿಂದ ಧಾವಿಸಿದ. ಆ ಕೋಟಿನಿಧಿಯನ್ನು ಕಾಯುತ್ತ, ಆ ನಿಧಿಯ ಸುತ್ತುಮುತ್ತು ತಿರುಗ ತೊಡಗಿದ. ಅವನ ಮಕ್ಕಳು ಪರಮಭಕ್ತಿಯಿಂದ ನಾರಾಯಣ ಬಲಿಯನ್ನು ನೆರವೇರಿಸಿದರು.

ಒಂದು ದಿನ ಆ ಹಾವಿನ ರೂಪದಿಂದ ನಿಧಿಯ ಮೇಲೆ ಕುಳಿತುಕೊಂಡ ಆ ಶಂಕುಕರ್ಣನು ತನ್ನ ಮಕ್ಕಳ ಕನಸಿನಲ್ಲಿ ಬಂದು ಅಪೇಕ್ಷೆಯನ್ನೆಲ್ಲ ತಿಳಿಸಿದ. ''ನಾನು ಊರ ಹೊರಗೆ ಇಂಥ ಸ್ಥಳದಲ್ಲಿ ಒಂದು ಕೋಟಿನಿಧಿಯನ್ನು ಹುಗಿದು ಇಟ್ಟಿದ್ದೇನೆ. ಅದನ್ನು ನೀವು ತೆಗೆದುಕೊಳ್ಳಿರಿ'' ಎಂದು ಸ್ವಪ್ನದಲ್ಲಿ ಸೂಚಿಸಿದ ತಂದೆಯ ಈ ಸ್ವಪ್ನ ಸಂದೇಶವನ್ನು ಬೆಳಗಾದ ಬಳಿಕ ಮಕ್ಕಳೆಲ್ಲ ಒಬ್ಬರಿಗೊಬ್ಬರು ತಿಳಿಸಿದರು. ಎಲ್ಲರಿಗೂ ಒಂದೇ ಬಗೆಯಾದ ಸ್ವಪ್ನದ ಆದೇಶ ತಂದೆಯಿಂದ ಬಂದಿತ್ತು. ಅವರು ಪರಸ್ಪರ ವಿಚಾರಮಾಡಿದರು. ಅವರಲ್ಲಿ ಒಬ್ಬರು ತಂದೆಯ ಆದೇಶದಂತೆ ಒಬ್ಬನು ಆ ಹಣವನ್ನು ತೆಗೆದುಕೊಳ್ಳಬೇಕೆಂದು ಬಯಸಿದ. ಇನ್ನೊಬ್ಬನು ದ್ರವ್ಯದ ಲೋಭದಿಂದ ಸರ್ಪರೂಪದಿಂದ ಕೋಟಿನಿಧಿಯನ್ನು ಕಾಯುತ್ತಲಿರುವ ಆ ಶಂಕುಕರ್ಣನನ್ನು ಕೊಂದು ಆ ನಿಧಿಯನ್ನು ವಶಪಡಿಸಿಕೊಳ್ಳಬೇಕೆಂದು ಸೂಚಿಸಿದ. ಇಲ್ಲದಿದ್ದರೆ ಪರಮಲೋಭಿಯಾದ ನಮ್ಮ ತಂದೆಯು ನಮ್ಮನ್ನು ಕೊಂದುಬಿಡಬಹುದು ಎಂಬ ಸಂದೇಹವನ್ನು ವ್ಯಕ್ತಪಡಿಸಿದ. ಮತ್ತೊಬ್ಬ ಮಗನು ನಮ್ಮ ತಂದೆಯು ಸರ್ಪರೂಪದಿಂದ ಏಕೆ ಆ ನಿಧಿಯ ಬಳಿಗೆ

ಕುಳಿತುಕೊಂಡಿದ್ದಾನೆ? ಇಷ್ಟೇಕೆ ಅವನಿಗೆ ದ್ರವ್ಯಲೋಭ? ಎಂದು ಶೋಕದಿಂದ ರೋದಿಸತೊಡಗಿದ. ಹೀಗೆ ಒಬ್ಬೊಬ್ಬರೂ ಒಂದೊಂದು ರೀತಿಯಿಂದ ವಿಚಾರಮಾಡಿ ಯಾವ ನಿರ್ಣಯಕ್ಕೂ ಬಾರದೇ ನಿಷ್ಕ್ರಿಯರಾಗಿ ಕುಳಿತುಕೊಂಡರು.

ಅವರಲ್ಲಿ ನಡುವಿನ ಮಗನು ಉಳಿದಿಬ್ಬರನ್ನು ವಂಚಿಸಿ ಆ ನಿಧಿಯನ್ನೆಲ್ಲ ತಾನೊಬ್ಬನೇ ತೆಗೆದುಕೊಳ್ಳಬೇಕೆಂದು ಹೊಂಚುಹಾಕಿದ. ತನ್ನ ಹೆಂಡತಿಗೆ ಸೂಚನೆಯನ್ನು ಕೊಟ್ಟು ಇಟ್ಟ. ಅಂದು ರಾತ್ರಿ ಕೈಯಲ್ಲಿ, ಗುದ್ದಲಿ ಸಲಿಕೆ ಹಿಡಿದುಕೊಂಡು ಹೆಂಡತಿಯೊಡನೆ ಊರಹೊರಗಿನ ಹಣ ಹುಗಿದಿಟ್ಟ ಸ್ಥಳಕ್ಕೆ ನಡೆದ. ಆದರೆ ಅವನಿಗೆ ನಿಧಿಯನ್ನು ಹುಗಿದಿಟ್ಟ ಸ್ಥಾನವನ್ನು ಸರಿಯಾಗಿ ಗುರುತಿಸಲಾಗಲಿಲ್ಲ. ಆದುದರಿಂದ ಸ್ವಪ್ನದಲ್ಲಿ ತಂದೆಯು ಸಾಮಾನ್ಯವಾಗಿ ಸೂಚಿಸಿದ ಸ್ಥಳದಲ್ಲಿ ಮಡದಿಯೊಂದಿಗೆ ಅಗಿಯಲು ಪ್ರಾರಂಭಿಸಿದ. ಪಿಕಾಸಿಯಿಂದ ನೆಲವನ್ನು ಹೊಡೆದು ಮಣ್ಣನ್ನು ಅಗೆದಂತೆ ಅವನ ಹೆಂಡತಿಯು ಮಣ್ಣನ್ನು ಹೊರತೆಗೆದು ಹಾಕುತ್ತಿದ್ದಳು. ಹೀಗೆ ಅವರು ಸುತ್ತಲೂ ನೆಲವನ್ನು ಅಗಿದು, ಬಗಿಯುತ್ತಲಿರುವಾಗ ಸಮೀಪದ ಹಾವಿನ ಹುತ್ತದಿಂದ ಒಮ್ಮೆಲೇ ಅತ್ಯಂತ ಉಗ್ರವಾದ ಕೃಷ್ಣಸರ್ಪವೊಂದು ಪೂತ್ಕರಿಸುತ್ತ ಎದ್ದು ನಿಂತಿತು. ಆ ಕೃಷ್ಣಸರ್ಪವು ನುಡಿಯಿತು.

**ಸರ್ಪ:-** ಮೂರ್ಖನೇ, ನೀನು ಯಾರು? ಇಲ್ಲಿಗೇಕೆ ಬಂದಿರುವೆ? ಈ ಬಿಲವನ್ನು ತೋಡುತ್ತಿರುವದೇಕೆ? ನಿನ್ನನ್ನು ಕಳಿಸಿದವರಾರು? ಇದೆಲ್ಲವನ್ನೂ ನನ್ನ ಮುಂದೆ ಹೇಳು.

**ಮಧ್ಯಮಪುತ್ರ:-** ತಂದೆಯೇ, ನಾನು ನಿನ್ನ ಮಗ. 'ಶಿವ' ಎಂದು ನನ್ನ ಹೆಸರು. ನೀನು ನಿನ್ನೆ ರಾತ್ರಿ ಕನಸಿನಲ್ಲಿ ಬಂದು ಈ ನಿಧಿಯ ಸಮಾಚಾರವನ್ನು ತಿಳಿಸಿದಿ. ನಿನ್ನ ಆದೇಶದಂತೆ ನಾನು ನಿಧಿಯನ್ನು ತೆಗೆದುಕೊಳ್ಳುವುದಕ್ಕಾಗಿ ಮಡದಿಯೊಡನೆ ಬಂದಿದ್ದೇನೆ. ಸರಿಯಾದ ಸ್ಥಳವು ನನಗೆ ಗುರುತು ಆಗದೇ ಇರುವದರಿಂದ ಹಾವಿನಹುತ್ತದ ಸುತ್ತುಮುತ್ತಲಿನ ಈ ಸ್ಥಳವನ್ನು ಕಷ್ಟದಿಂದ ಅಗೆಯುತ್ತಿದ್ದೇನೆ.

ಮಧ್ಯಮಪುತ್ರನ ಈ ನುಡಿಯನ್ನು ಕೇಳಿ ಆ ಕರೀಹಾವು ನಕ್ಕು ನುಡಿಯಿತು.

**ಸರ್ಪ:-** ವತ್ಸ, ನಾನು ದ್ರವ್ಯದ ವಾಸನೆಯಿಂದ ಆ ನಿಧಿಯನ್ನು ರಕ್ಷಿಸಲಿಕ್ಕಾಗಿ ಮತ್ತೆ ಹಾವಾಗಿ ಹುಟ್ಟಿದ್ದೇನೆ. ಅತ್ಯಂತ ಹೇಯವಾದ ಈ ಹಾವಿನ ಜನ್ಮದಿಂದ ಹೇಗಾದರೂ ಮಾಡಿ ಬಿಡುಗಡೆ ಮಾಡು. ನೀನು ನನ್ನ ನಿಜವಾದ ಮಗನಾಗಿದ್ದರೆ ನನ್ನನ್ನು ಈ ಸರ್ಪಜನ್ಮದ ಬಂಧನದಿಂದ ಬಿಡಿಸು.

**ಮಧ್ಯಮಪುತ್ರ:-** ತಂದೆಯೇ, ಈ ಸರ್ಪಯೋನಿಯಿಂದ ನಿನ್ನ ಮುಕ್ತಿಯು ಆಗುವ ಬಗೆ ಏನು? ಅದನ್ನು ಹೇಳು. ನಾನು ಅವಶ್ಯವಾಗಿ ನಿನ್ನ ವಿಮೋಚನಕ್ಕಾಗಿ ಪ್ರಯತ್ನಿಸುತ್ತೇನೆ.

**ಶಂಕುಕರ್ಣ:-** ಮಗನೇ, ನನ್ನನ್ನು ಈ ನಿಕೃಷ್ಟವಾದ ಸರ್ಪದ ಜನ್ಮದಿಂದ ಯಾವ ಯಜ್ಞಯಾಗಗಳೂ, ದಾನಗಳೂ, ತೀರ್ಥಯಾತ್ರೆಗಳೂ, ತಪಸ್ಸು ಸಹ ಬಿಡುಗಡೆ ಮಾಡಲಾರವು. ಭಗವದ್ಗೀತೆಯ ಏಳನೆಯ ಅಧ್ಯಾಯದ ಪುಣ್ಯಪ್ರಭಾವದಿಂದಲೇ ನಾನು ಈ ಪನ್ನಗಯೋನಿಯಿಂದ ಮುಕ್ತನಾಗಲು ಸಾಧ್ಯ. ಮತ್ತಾವ ಧರ್ಮಕರ್ಮಗಳೂ ನನ್ನನ್ನು ಈ ಸರ್ಪಬಂಧದಿಂದ ಮುಕ್ತಮಾಡಲು ಸಮರ್ಥವಾಗಲಾರವು. ಗೀತೆಯ ಏಳನೆಯ ಅಧ್ಯಾಯವು ಪ್ರಾಣಿಗಳ ಮುಪ್ಪು, ಮರಣ, ದುಃಖ, ದುರ್ಭಾಗ್ಯ, ದುರವಸ್ಥೆಗಳನ್ನು

ದೂರೀಕರಿಸಲು ಏಕಮಾತ್ರವಾದ ಉಪಾಯವು ಆಗಿರುತ್ತದೆ. ಆದುದರಿಂದ ನನ್ನ ನೆಚ್ಚಿನ ಪುತ್ರ ನೀನು ಗೀತೆಯ ಏಳನೆಯ ಅಧ್ಯಾಯವನ್ನು ಪ್ರತಿದಿನ ಪಾರಾಯಣ ಮಾಡುವ ಬ್ರಾಹ್ಮಣನನ್ನು, ನನ್ನನ್ನು ಕುರಿತು ಮಾಡುವ ಶ್ರಾದ್ಧದಲ್ಲಿ ಭೋಜನ ಮಾಡಿಸು. ನೀನು ಭಕ್ತಿಯಿಂದ ಗೀತಾಧ್ಯಾಯಿಯಾದ ಬ್ರಾಹ್ಮಣನಿಗೆ ಶ್ರಾದ್ಧ ಭೋಜನ ಮಾಡಿಸಿದರೆ ಈ ಕ್ಷುಲ್ಲಕವಾದ ಸರ್ಪದ ಜನ್ಮದಿಂದ ನನಗೆ ಮುಕ್ತಿಯಾಗುವದು. ಇದರಲ್ಲಿ ಎಷ್ಟು ಮಾತ್ರಕ್ಕೂ ಸಂದೇಹವಿಲ್ಲ. ಆದುದರಿಂದ ಮುಂದೆ ಬರುವ ನನ್ನ ಶ್ರಾದ್ಧದ ದಿನದಲ್ಲಿ, ಗೀತೆಯ ಅರ್ಥಾನುಸಂಧಾನಪೂರ್ವಕ ಭಕ್ತಿ ಶ್ರದ್ಧೆಗಳಿಂದ ಪ್ರತಿನಿತ್ಯ ಪಾರಾಯಣ ಮಾಡುವ ಬ್ರಾಹ್ಮಣನನ್ನು ಹುಡುಕಿ, ಕರೆತಂದು, ಪ್ರೀತಿಯಿಂದ ಅವನನ್ನು ಭೋಜನಮಾಡಿಸಿ ಸಂತೋಷಗೊಳಿಸು. ಯಥಾಶಕ್ತಿ ದಾನ ದಕ್ಷಿಣೆ ನೀಡು.

ತಂದೆಯ ಈ ಆದೇಶವನ್ನು ಕೇಳಿ ಆ ಮಧ್ಯಮ ಪುತ್ರನು ಮನೆಗೆ ಬಂದ. ತನ್ನ ಸಹೋದರರಿಗೆ ತಂದೆಯು ಸರ್ಪರೂಪದಲ್ಲಿ ಉಪದೇಶಿಸಿದ ವಿಷಯವನ್ನು ತಿಳಿಸಿದ. ಅದನ್ನು ಕೇಳಿ ಮೂವರೂ ಮಕ್ಕಳು ಆನಂದದಿಂದ ವೇದಾಧ್ಯಾಯೀ ಹಾಗೂ ಗೀತೆಯ ಸಪ್ತಮಾಧ್ಯಾಯದ ಪಾರಾಯಣ ಪರಾಯಣರಾದ ಶ್ರೇಷ್ಠ ಬ್ರಾಹ್ಮಣರನ್ನು ಕರೆತಂದು ತಂದೆಯ ಶ್ರಾದ್ಧವನ್ನು ಮಾಡಿದರು. ಶ್ರಾದ್ಧದಿನ ಗೀತಾಪಾರಾಯಣ ಪ್ರವೀಣರಾದ ಸದ್ಬ್ರಾಹ್ಮಣರ ಭೋಜನದ ಪುಣ್ಯದಿಂದ ಶಂಕುಕರ್ಣನು ಕೂಡಲೇ ತನ್ನ ಸರ್ಪದೇಹದಿಂದ ಮುಕ್ತನಾದ. ದಿವ್ಯವಾದ ದೈವೀ ದೇಹವನ್ನು ಪಡೆದ. ತನ್ನ ಮೂವರೂ ಮಕ್ಕಳಿಗೂ ತಾನು ಜನ್ಮಾಂತರದಲ್ಲಿ ಬಚ್ಚಿಟ್ಟ ಹಣವನ್ನೆಲ್ಲ ಹೊರತೆಗೆದು ಹಂಚಿದ. ಆದರಿಂದ ಆನಂದ ತುಂಬಿದ ಆ ಮೂವರೂ ಮಕ್ಕಳು ತಂದೆಯು ನೀಡಿದ ಆ ಹಣದಿಂದ ಅನೇಕ ಕೆರೆ, ಬಾವಿ, ಸರೋವರ, ದೇವಮಂದಿರ, ಅನ್ನಛತ್ರಗಳನ್ನು ನಿರ್ಮಿಸಿ, ಹೋಮ, ಹವನ, ಪಿತೃಕಾರ್ಯಗಳನ್ನು ಶ್ರದ್ಧೆಯಿಂದ ನೆರವೇರಿಸಿದರು. ಮತ್ತು ತಂದೆಯ ಪ್ರತ್ಯಕ್ಷ ದೃಷ್ಟಾಂತದಿಂದ ಗೀತೆಯ ಸಪ್ತಮಾಧ್ಯಾಯದ ಮಹಿಮೆಯನ್ನು ಅರಿತುಕೊಂಡು ತಾವು ಬದುಕಿ ಇರುವವರೆಗೆ ಗೀತೆಯ ಏಳನೆಯ ಅಧ್ಯಾಯವನ್ನು ಅರ್ಥಾನುಸಂಧಾನಪೂರ್ವಕ ಪಾರಾಯಣ ಮಾಡತೊಡಗಿದರು. ಇದರಿಂದಾಗಿ ಆ ಮೂವರೂ ಶಂಕುಕರ್ಣನ ಮಕ್ಕಳು ಇಹಲೋಕದಲ್ಲಿ ಸಕಲ ಭೋಗಭಾಗ್ಯಗಳನ್ನು ಪಡೆದು ಅಂತ್ಯದಲ್ಲಿ ದಿವ್ಯವಾದ ಸದ್ಗತಿಯನ್ನು ಹೊಂದಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಭಗವದ್ಗೀತೆಯ ಏಳನೆಯ ಅಧ್ಯಾಯ ಪ್ರಭಾವ ಶಂಕುಕರ್ಣ ಬ್ರಾಹ್ಮಣನ ಆಖ್ಯಾನ*
*ಎಂಬ ನೂರ ಆರವತ್ತಮೂರನೇಯ ಅಧ್ಯಾಯ ಮುಗಿದುದು*

—o—

## ಗೀತೆಯ ಎಂಟನೆಯ ಅಧ್ಯಾಯದ ಪಾರಾಯಣ ಪ್ರಭಾವ ತಾಳೆಗಿಡದ ಜನ್ಮವನ್ನು ಹೊಂದಿದ ಭಾವಶರ್ಮನ ಉದ್ಧಾರ

ಅಧ್ಯಾಯ - ೧೬೪

**ಮಹಾದೇವ:-** ದೇವಿ, ಗೀತೆಯ ಎಂಟನೆಯ ಅಧ್ಯಾಯದ ಮಹಾಮಹಿಮೆಯನ್ನು ಹೇಳುವೆ ಕೇಳು. ದಕ್ಷಿಣಾಪಥದಲ್ಲಿ ಅಮರ್ದಕವೆಂಬ ಹೆಸರಿನ ಒಂದು ಪಟ್ಟಣ. ಅಲ್ಲಿ ಭಾವಶರ್ಮ ಎಂಬ ಒಬ್ಬ ಬ್ರಾಹ್ಮಣನು ವಾಸಿಸುತ್ತಿದ್ದ. ಆ ಬ್ರಾಹ್ಮಣ ಮಹಾ ಅನಾಚಾರಿ. ಮದ್ಯವನ್ನು ಕುಡಿಯುತ್ತಿದ್ದ, ಮಾಂಸ ತಿನ್ನುತ್ತಿದ್ದ. ಕನ್ನ ಹಾಕಿ ಕೊಳ್ಳೆಹೊಡೆದು ಸಜ್ಜನರ ಮನೆಗಳನ್ನು ಲೂಟಿಮಾಡುತ್ತಿದ್ದ. ಪರಸ್ತ್ರೀಯರ ಜೊತೆಗೆ ಸ್ವಚ್ಛಂದ ವಿಹಾರ ಅವನ ನಿತ್ಯದ ಕಾರ್ಯಕ್ರಮ. ಓರ್ವ ವೇಶ್ಯೆಯನ್ನೇ ಮದುವೆಯಾಗಿ ಮನೆಯಲ್ಲಿ ತಂದಿಟ್ಟುಕೊಂಡಿದ್ದ. ಬೇಟೆಯ ಆಟದಲ್ಲಿ ಅನೇಕ ಪ್ರಾಣಿಗಳ ರುಂಡಗಳನ್ನು ಚೆಂಡಾಡಿದ್ದ. ಇಂಥ ಪಾಪಿಷ್ಠನಾದ ಆ ಭಾವಶರ್ಮನು ಒಂದು ದಿನ ಅತಿಯಾಗಿ ಸೆರೆಯನ್ನು ಪಾನ ಮಾಡಿದ. ಅದರಿಂದ ಅಜೀರ್ಣವಾಗಿ ಮರಣಹೊಂದಿದ. ಸಾಯುವಾಗ ಆ ತಾಳೀಫಲದ ಸೆರೆಯನ್ನು ಕುಡಿದದ್ದರಿಂದ ಜನ್ಮಾಂತರದಲ್ಲಿ ತಾಳೀ ಮರವಾಗೇ ಜನಿಸಿದ. ಆ ತಾಳೀ ಮರವು ಬೆಳೆದು ವಿಶಾಲ ವೃಕ್ಷವಾಗಿ ಬಯಲು ಭೂಮಿಯಲ್ಲಿ ನಿಂತುಕೊಂಡಿತ್ತು. ಅದರ ದಟ್ಟವಾದ ನೆರಳಿನಲ್ಲಿ ಇಬ್ಬರು ಸತಿಪತಿಯರು ಬ್ರಹ್ಮರಾಕ್ಷಸ ಜನ್ಮ ಹೊಂದಿ ನೆಲೆಸಿದ್ದರು.

**ಮಹಾದೇವಿ:-** ಭಗವನ್, ಆ ದಂಪತಿಗಳು ಯಾವ ದುಷ್ಕರ್ಮದಿಂದ ರಾಕ್ಷಸರಾಗಿ ಜನಿಸಿದ್ದರು? ಅವರ ಹೆಸರೇನು? ಅವರ ಆಚಾರ, ವಿಚಾರ, ಶೀಲ, ನಡತೆ, ಹೇಗೆ ಇದ್ದವು? ಇದನ್ನೆಲ್ಲ ನನಗೆ ಹೇಳು.

**ಶಂಕರ:-** ಪೂರ್ವಕಾಲದಲ್ಲಿ 'ಕುಶೀವಲ' ಎಂಬ ಒಬ್ಬ ಸದಾಚಾರಿ ಬ್ರಾಹ್ಮಣ. ಈತ ಶಾಸ್ತ್ರಗಳಲ್ಲಿ ಪಂಡಿತ. ವೇದಗಳಲ್ಲೂ ವಿದ್ವಾಂಸ. ಅವನಿಗೆ ಆಸೆ ಬಹಳ. ಲೋಭದಿಂದ ಕಂಡವರ ಕಡೆಯಿಂದ ಎಲ್ಲ ವಿಧದ ದಾನವನ್ನೂ ಸ್ವೀಕರಿಸುತ್ತಿದ್ದ. ಎಮ್ಮೆ, ಮೃಗ, ಕುದುರೆ, ನಗ, ನಾಣ್ಯ, ಕಾಲಪುರುಷ ಎಲ್ಲವನ್ನೂ ಸಂಕೋಚವಿಲ್ಲದೇ ತಾನು ದಾನ ಪರಿಗ್ರಹಿಸುತ್ತಿದ್ದ. ತಾನು ದಾನ ತೆಗೆದುಕೊಂಡಿದ್ದರಲ್ಲಿ ಒಬ್ಬರಿಗೂ ಒಂದು ಕಾಸನ್ನು ಕೊಡುತ್ತಿರಲಿಲ್ಲ. ಇವನಿಗೆ 'ಕುಮತಿ' ಎಂಬ ಹೆಸರಿನ ಮಡದಿ. ಅವಳೂ ತನ್ನ ಹೆಸರಿಗೆ ತಕ್ಕಂತೆ ಯಾವಾಗಲೂ ದುಷ್ಟವಿಚಾರಗಳಲ್ಲೇ ಅವಳ ಆಸಕ್ತಿ. ಹೀಗೆ ಲೋಭಿಗಂಡ, ದುರ್ಬುದ್ಧಿಯ ಹೆಂಡತಿ. ಇಬ್ಬರೂ ದಾನ, ಧರ್ಮ, ಪುಣ್ಯಕರ್ಮಗಳನ್ನು ಮಾಡದೇ ಹಾಗೆಯೇ ಸತ್ತುಹೋದರು. ಅವರ ಲೋಭ, ಅತ್ಯಾಶೆ ಮೊದಲಾದ ಅಧಾರ್ಮಿಕ ಗುಣಗಳಿಂದ ಅವರು ಮರಣೋತ್ತರ ಬ್ರಹ್ಮರಾಕ್ಷಸ ಜನ್ಮವನ್ನು ಹೊಂದಿ ಹಸಿವೆ, ನೀರಡಿಕೆಗಳಿಂದ ಬಸವಳಿದು ಬಳಲುತ್ತ ಭೂಮಂಡಲದ ತುಂಬ ಅಲೆದಾಡಿದರು.

ಒಂದು ದಿನ ಅವರಿಬ್ಬರೂ ಪರಿಶ್ರಾಂತರಾಗಿ ಬಂದು ತಾಳೀವೃಕ್ಷದ ಬುಡದಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಲಿದ್ದರು. ''ನಮ್ಮ ಈ ನೀಚಯೋನಿಯಿಂದ ಬಂದ ದುಃಖಗಳೆಲ್ಲವೂ ಹೇಗಾದರೂ ಕಳೆದು ಹೋಗಬಹುದು? ಈ ರಾಕ್ಷಸಯೋನಿಯಿಂದ ನಮ್ಮ ಬಿಡುಗಡೆಯಾಗುವ ಬಗೆ ಏನು?'' ಹೀಗೆ ವಿಚಾರ ಮಾಡುತ್ತ ಕುಳಿತು ಕೊಂಡಿದ್ದರು.

ಅಲ್ಲಿಗೆ ಒಬ್ಬ ಬ್ರಾಹ್ಮಣ ಆಗಮಿಸಿದ. ಅವನಿಗೆ ಇವರು ನಮಸ್ಕರಿಸಿದರು. ಕುಮತಿಯು ಆ ಬ್ರಾಹ್ಮಣರಿಗೆ ಕೇಳಿದಳು. "ಪೂಜ್ಯರೇ, ನಮ್ಮಿಬ್ಬರಿಗೂ ಈ ಬ್ರಹ್ಮ ರಾಕ್ಷಸಯೋನಿಯಿಂದ ಮುಕ್ತಿಯಾಗುವ ಉಪಾಯವನ್ನು ಉಪದೇಶಿಸಿರಿ.

ಕುಶೀವಲನ ಪತ್ನಿಯಾದ ಕುಮತಿಯು ಈ ಕಷ್ಟವನ್ನು ಕೇಳಿ, ಬಂದ ಬ್ರಾಹ್ಮಣನು ಶಾಂತಮನಸ್ಸಿನಿಂದ ನುಡಿದ.

**ಬ್ರಹ್ಮವಿದ್ಯೋಪದೇಶೇನ ವಿನಾ ಅಧ್ಯಾತ್ಮ ವಿಚಾರಣಾತ್ ।**
**ವಿನಾಕರ್ಮವಿಧಿಜ್ಞಾನಾತ್ ಕಥಂ ಮುಚ್ಯೇತ್ ಸಂಕಟಾತ್ ॥**

ಬ್ರಹ್ಮವಿದ್ಯೆ, ಅರ್ಥಾತ್ ವೇದಾಂತ ತತ್ವಜ್ಞಾನದ ಉಪದೇಶ ಇಲ್ಲದೇ ಸಂಕಟದಿಂದ ಮಾನವನು ಹೇಗೆ ಬಿಡುಗಡೆ ಹೊಂದುವನು? ಅಧ್ಯಾತ್ಮ ವಿಚಾರವಿಲ್ಲದೇ ಹೇಗೆ ಬಂಧನಮೋಚನವಾದೀತು? ಕರ್ಮವಿಧಿಯ ಜ್ಞಾನವನ್ನು ಮಾಡಿಕೊಳ್ಳದೇ ಸಂಕಟದಿಂದ ಮುಕ್ತರಾಗುವ ಬಗೆ ಹೇಗೆ?

**ಕುಮತಿ:-** ಬ್ರಹ್ಮವಿದ್ಯೆಯ ಉಪದೇಶ ಬಂಧಮೋಚನಕ್ಕಾಗಿ ಅವಶ್ಯಕವೆಂದು ತಾವು ಹೇಳಿದಿರಿ. ಆದರೆ ಬ್ರಹ್ಮ ಎಂದರೇನು? ಅಧ್ಯಾತ್ಮ ವಿಚಾರ ಎಂದರೆ ಎಂತಹುದು? ಕರ್ಮವಿಧಿಜ್ಞಾನ ಎಂದರೆ ಏನು? ಇದನ್ನೆಲ್ಲ ನಮ್ಮ ಸಲುವಾಗಿ ತಾವು ನಿರೂಪಿಸುವ ಕೃಪೆ ಮಾಡಬೇಕು.

**ಬ್ರಾಹ್ಮಣ:-** ನಿಮಗೆ ಈ ದುರ್ಯೋನಿಯಿಂದ ಮೋಚನವಾಗಬೇಕಾದರೆ ನಾನು ನಿಮ್ಮೆದುರು ಭಗವಾನ್ ಶ್ರೀಕೃಷ್ಣನಿಂದ ಅರ್ಜುನನಿಗೆ ಉಪದಿಷ್ಟವಾದ ಗೀತೆಯ ಎಂಟನೆಯ ಅಧ್ಯಾಯವನ್ನು ಪಾರಾಯಣಮಾಡಿ ಶ್ರವಣ ಮಾಡಿಸುತ್ತೇನೆ.

ಹೀಗೆ ಹೇಳಿ ಆ ಬ್ರಾಹ್ಮಣನು ಗೀತೆಯ ಎಂಟನೆಯ ಅಧ್ಯಾಯದ ಪಾರಾಯಣವನ್ನು ಪ್ರಾರಂಭಿಸಿದ. ಎಂಟನೆಯ ಅಧ್ಯಾಯದ ಪ್ರಥಮ ಶ್ಲೋಕದ ಅರ್ಧಭಾಗವನ್ನು ಅವನು ಪಠಿಸಿದ ಕೂಡಲೇ ತಾಳೆಮರದ ಜನ್ಮ ತಳೆದ ಭಾವಶರ್ಮ ಬ್ರಾಹ್ಮಣನು ಆ ಜನ್ಮದಿಂದ ಮುಕ್ತನಾದ. ನಿಜ ಬ್ರಾಹ್ಮಣರೂಪವನ್ನು ಧರಿಸಿದ. ಅವನ ಪಾಪಗಳೆಲ್ಲವೂ ತೊಳೆದುಹೋದವು. ಭಗವದ್ಗೀತೆಯ ಎಂಟನೆಯ ಅಧ್ಯಾಯದ ಅರ್ಧಶ್ಲೋಕ ಶ್ರವಣಮಾತ್ರದಿಂದಲೇ ಮಹಾ ಮಹಾ ಪಾಪಗಳೆಲ್ಲ ನಷ್ಟವಾದವು. ಒಂದು ಶ್ಲೋಕದ ಅರ್ಥಾನುಸಂಧಾನದ ಜ್ಞಾನಮೃತದಿಂದ ಅವನ ಆತ್ಮವು ಸ್ನಾತಪೂರ್ವವಾಗಿ ಪವಿತ್ರವಾಗಿ ನಿಂತುಕೊಂಡಿತು. ಅದರಂತೆ ಆ ಮರದಡಿಯಲ್ಲಿ ಕುಳಿತು ಭಗವದ್ಗೀತೆಯ ಪಾರಾಯಣವನ್ನು ಮಾಡಿದ ಆ ಬ್ರಾಹ್ಮಣನ ಮುಖದಿಂದ ಹೊರಟುಬಂದ ಎಂಟನೆಯ ಅಧ್ಯಾಯದ ಪ್ರಥಮ ಶ್ಲೋಕ ಮಾತ್ರದಿಂದಲೇ, ಅಲ್ಲಿ ಬ್ರಹ್ಮರಾಕ್ಷಸರಾಗಿ ಮರದಡಿಯಲ್ಲಿ ವಿಶ್ರಮಿಸಿದ ಕುಶೀವಲ ಹಾಗೂ ಕುಮತಿ ಎಂಬ ರಾಕ್ಷಸ ದಂಪತಿಗಳೂ ಆ ಕ್ಷಣವೇ ಬ್ರಹ್ಮರಾಕ್ಷಸಜನ್ಮದಿಂದ ಮುಕ್ತರಾದರು. ಇವರನ್ನು ಕರೆಯಲು ವೈಕುಂಠಲೋಕದಿಂದ ದಿವ್ಯವಾದ ವಿಮಾನವು ಅಲ್ಲಿಗೆ ಆಗಮಿಸಿತು. ಅದರಲ್ಲಿ ಅನೇಕ ಅಪ್ಸರಾಸ್ತ್ರೀಯರು ಈ ದಂಪತಿಗಳ ಸೇವೆಗಾಗಿ ಸಿದ್ಧರಾಗಿ ಕುಳಿತುಕೊಂಡಿದ್ದರು. ಗಂಗೆಯ ತರಂಗದಂತೆ ಪರಿಶುಭ್ರವಾದ ಚಾಮರಗಳು ಆ ವಿಮಾನದ ಮೇಲೆ ಹಾರಾಡುತ್ತಿದ್ದವು. ಅದರಲ್ಲಿ ಸುರಸುಂದರಿಯರ ನರ್ತನ ಗಂಧರ್ವರ ಗಾಯನ. ಇಂಥ ದಿವ್ಯವಾದ ವಿಮಾನವು

ಬ್ರಹ್ಮರಾಕ್ಷಸ ಜನ್ಮದಲ್ಲಿ ತಾಳೀಮರದ ಬುಡದಲ್ಲಿ ತಂಗಿದ್ದ, ಕುಶೀವಲ ಹಾಗೂ ಕುಮತಿ ದಂಪತಿಗಳನ್ನು ಕೂಡಿಸಿಕೊಂಡು ಸ್ವರ್ಗಕ್ಕೆ ಹಾರಿತು.

ಭಗವದ್ಗೀತೆಯ ಎಂಟನೆಯ ಅಧ್ಯಾಯದ ಆ ಮಹಾಮಹಿಮೆಯನ್ನು ತನ್ನ ಸಮಕ್ಷಮದಲ್ಲಿಯೇ ಕಣ್ಣಾರೆ ಕಂಡು ಆಶ್ಚರ್ಯಚಕಿತನಾದ ಭಾವಶರ್ಮ ಬ್ರಾಹ್ಮಣನು ತಾಳೆಮರದ ಜನ್ಮದಿಂದ ಬಿಡುಗಡೆ ಹೊಂದಿ, ಅಷ್ಟಮಾಧ್ಯಾಯ ಸಹಿತವಾದ ಭಗವದ್ಗೀತೆಯನ್ನು ತನ್ನ ಹಸ್ತಾಕ್ಷರದಿಂದಲೇ ಬರೆದು ತನ್ನ ಬಳಿ ಇರಿಸಿಕೊಂಡ. ಮತ್ತು ಅಲ್ಲಿಂದ ಹೊರಟು ಮುಕ್ತಿ ಕ್ಷೇತ್ರ ಎನಿಸಿದ ಕಾಶೀಪಟ್ಟಣಕ್ಕೆ ಆಗಮಿಸಿದ. ಅಲ್ಲಿ ಲೋಕೋದ್ಧಾರಕ್ಕಾಗಿ ನೆಲೆಸಿದ ದೇವದೇವೋತ್ತಮನಾದ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸಿ ಆರಾಧಿಸಿ ಸಂತೋಷಪಡಿಸಿದ. ಕಾಶಿಯಲ್ಲಿ ನಿಂತುಕೊಂಡು ಜನಾರ್ದನನ್ನು ಕುರಿತು ಅತ್ಯುಗ್ರವಾದ ತಪಸ್ಸನ್ನು ಮಾಡಿದ.

ಇತ್ತ ಹಾಲುಗಡಲಿನಲ್ಲಿ ಹಾಯಾಗಿ ಪವಡಿಸಿದ ಶ್ರೀಹರಿಯು ನಿದ್ದೆಬಿಟ್ಟು ಎದ್ದುಕುಳಿತ. ಕ್ಷೀರಸಾಗರ ಕನ್ನಿಕೆಯಾದ ಲಕ್ಷ್ಮೀದೇವಿಯು ವಿನಯದಿಂದ ಕೈ ಜೋಡಿಸಿ ಭಗವಂತನನ್ನು ಪ್ರಶ್ನಿಸಿದಳು.

**ಶ್ರೀಲಕ್ಷ್ಮೀದೇವಿ:-** ಭಗವನ್, ತಾವು. ನಿದ್ದೆ ಮಾಡುವದನ್ನು ಬಿಟ್ಟು ಹೀಗೇಕೆ ಎದ್ದು ಕುಳಿತಿರುವಿರಿ? ಎಲ್ಲಿಗೆ ಹೊರಡುವ ವಿಚಾರ?

**ನಾರಾಯಣ:-** ಭಾಗೀರಥಿಯ ತೀರದಲ್ಲಿರುವ ಕಾಶೀಪಟ್ಟಣದಲ್ಲಿ ಭಾವಶರ್ಮ ಎಂಬ ತಪಸ್ವಿಯು ನನ್ನ ಮೇಲಿನ ನಿರತಿಶಯವಾದ ಭಕ್ತಿಯಿಂದ ತಪಸ್ಸನ್ನು ಮಾಡುತ್ತಲಿದ್ದಾನೆ. ಗೀತೆಯ ಎಂಟನೆಯ ಅಧ್ಯಾಯವನ್ನು ಶ್ರದ್ಧೆಯಿಂದ ಯಾವಾಗಲೂ ಪಾರಾಯಣ ಮಾಡುತ್ತಲೇ ಇರುತ್ತಾನೆ. ಜಿತೇಂದ್ರಿಯನಾಗಿ, ಭಕ್ತಿಯುಕ್ತನಾಗಿ ಭಗವದ್ಗೀತೆಯ ಅಷ್ಟಮಾಧ್ಯಾಯ ಪಾರಾಯಣ ರೂಪವಾದ ಅವನ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ಅವನಿಗೆ ಬೇಗನೇ ಅಪೇಕ್ಷಿತವಾದ ವರವನ್ನೂ ಕೊಡಬೇಕೆಂದು ನಾನು ಉತ್ಕಂಠಿತನಾಗಿ ಕುಳಿತಿರುವೆ. ಅದಕ್ಕಾಗಿ ನಾನೀಗ ನಿದ್ದೆ ಬಿಟ್ಟು ಎದ್ದು ಕುಳಿತಿದ್ದೇನೆ.

ಹೀಗೆ ಹೇಳಿ ಶ್ರೀಹರಿಯು ಕಾಶಿಯಲ್ಲಿ ಗೀತೆಯ ಅಷ್ಟಮಾಧ್ಯಾಯ ಪಾರಾಯಣ ರೂಪವಾದ ಅಪೂರ್ವ ತಪಸ್ಸನ್ನು ಆಚರಿಸುತ್ತಲಿರುವ ಭಾವಶರ್ಮ ಬ್ರಾಹ್ಮಣನಿಗೆ ಪ್ರಸನ್ನನಾಗಿ ಪ್ರತ್ಯಕ್ಷ ದರ್ಶನವನ್ನು ಇತ್ತ. ಅವನಿಗೆ ಅಭಿಷ್ಟವಾದ ವರವನ್ನು ಕರುಣಿಸಿದ. ಅವನಿಗೆ ತನ್ನ ದಿವ್ಯವಾದ ಲೋಕವನ್ನು ಇತ್ತು ಅನುಗ್ರಹಿಸಿದ.

ಮುಂದೆ ಆ ಭಾವಶರ್ಮನ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಎಲ್ಲರೂ ಗೀತೆಯ ಎಂಟನೆಯ ಅಧ್ಯಾಯದ ಪಾರಾಯಣವನ್ನು ನಿಯತವಾಗಿ ಮಾಡುತ್ತಲೇ ಇದ್ದರು. ಅದರಿಂದ ಅವರೆಲ್ಲರೂ ಅಷ್ಟಮಾಧ್ಯಾಯದ ಅರ್ಥಾನುಸಂಧಾನಪೂರ್ವಕವಾದ ಪಾರಾಯಣದಿಂದ ಶ್ರೀಹರಿಯ ಪರಮಾನುಗ್ರಹಕ್ಕೆ ಪಾತ್ರರಾಗಿ ಸನ್ಮತಿಯನ್ನೂ, ಸದ್ಗತಿಯಿನ್ನೂ ಹೊಂದಿ ಉದ್ಧೃತರಾದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಗೀತೆಯ ಎಂಟನೆಯ ಅಧ್ಯಾಯದ ಪಾರಾಯಣ ಪ್ರಭಾವ ತಾಳೆಗಿಡದ ಜನ್ಮವನ್ನು ಹೊಂದಿದ ಭಾವಶರ್ಮನ ಉದ್ಧಾರ ಎಂಬ ನೂರ ಅರವತ್ತನಾಲ್ಕನೇಯ ಅಧ್ಯಾಯ ಮುಗಿದುದು*

## ಭಗವದ್ಗೀತೆಯ ಒಂಬತ್ತನೇಯ ಅಧ್ಯಾಯದ ಮಾಹಾತ್ಮ್ಯ ಮಾಧವಬ್ರಾಹ್ಮಣನ ಅಖ್ಯಾನ

ಅಧ್ಯಾಯ - ೧೬೫

**ಮಹಾದೇವ:-** ಪರ್ವತನ ಕನ್ನಿಕೆಯೇ, ಇನ್ನು ಗೀತೆಯ ಒಂಬತ್ತನೆಯ ಅಧ್ಯಾಯದ ಮಹತ್ವವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ನರ್ಮದಾತೀರದಲ್ಲಿ ಮಾಹಿಷ್ಮತೀ ಎಂಬ ಒಂದು ಪಟ್ಟಣವು ಇದ್ದಿತು. ಮಾಧವ ಎಂಬ ಹೆಸರಿನ ಓರ್ವ ಬ್ರಾಹ್ಮಣನಿದ್ದ. ಅವನು ವೇದ ವೇದಾಂಗಗಳಲ್ಲಿ ಪಂಡಿತ. ಅತಿಥಿಸತ್ಕಾರವನ್ನು ತಪ್ಪದೇ ಮಾಡುತ್ತಲಿದ್ದ. ತನ್ನ ವಿದ್ಯೆಯಿಂದ ಈತನಿಗೆ ಹಣವೂ ವಿಪುಲವಾಗೇ ಬಂದಿತು. ಒಂದು ದಿನ ದೊಡ್ಡದಾದ ಯಜ್ಞವನ್ನು ಅವನು ಪ್ರಾರಂಭಿಸಿದ. ಆ ಯಜ್ಞದಲ್ಲಿ ಬಲಿಕೊಡಲಿಕ್ಕಾಗಿ ಒಂದು ಬೇಟೆಯನ್ನು ತೆಗೆದುಕೊಂಡು ಬಂದ. ಯಜ್ಞ ವಿಧಿಯಲ್ಲಿ ಹೇಳಿದಂತೆ ಅದಕ್ಕೆ ಪೂಜೆಯನ್ನು ಮಾಡಿದ. ಆ ಸಂದರ್ಭದಲ್ಲಿ ಒಂದು ಆಶ್ಚರ್ಯಕರವಾದ ಘಟನೆ ನಡೆಯಿತು. ಯಜ್ಞವೇದಿಕೆಯ ಬಳಿಯಲ್ಲಿ ಬಲಿಪಶುವಾಗಿ ಬಂದು ನಿಂತ ಆ ಮೇಕೆಯು ಮಾತನಾಡತೊಡಗಿತು.

**ಮೇಕೆ:-** ಬ್ರಾಹ್ಮಣ, ಈ ಎಲ್ಲ ಯಜ್ಞ-ಯಾಗಗಳಿಂದ ಏನು ಪ್ರಯೋಜನ? ಇದರಿಂದ ಬರತಕ್ಕ ಸ್ವರ್ಗಾದಿ ಫಲಗಳು ನಶ್ವರ, ಅಶಾಶ್ವತ. ಇದರಿಂದ ಮತ್ತೆ ಮತ್ತೆ ಮುಪ್ಪು, ಮರಣ, ಹುಟ್ಟು, ಸಾವು, ನೋವು ಎಲ್ಲವೂ ಚಕ್ರನೇಮಿ ಕ್ರಮದಿಂದ ಬರುತ್ತಲೇ ಹೋಗುವವು. ಮುಪ್ಪು ಮರಣಗಳನ್ನು ತಪ್ಪಿಸದಿರುವ ಈ ಯಜ್ಞಗಳು ಏನು ಪ್ರಯೋಜಕ? ಪ್ರಯೋಜನವಿಲ್ಲ. ಇಷ್ಟು ಮಾತ್ರವಲ್ಲದೇ ಅದರಿಂದ ಬಾಧಕವೇ ವಿಶೇಷವಾಗಿರುವುದು. ನನ್ನನ್ನು ನೋಡು. ನಾನು ಈ ಪರಿಸ್ಥಿತಿಗೆ ಬರಲು ಪಶುಹಿಂಸಾ ಪ್ರಧಾನವಾದ ಯಜ್ಞದ ಆಚರಣೆಯೇ ಕಾರಣ.

ಬಲಿಪಶುವಾಗಿ ಬಂದುನಿಂತ ಕುರಿಯ ಈ ಮಾತನ್ನು ಕೇಳಿ ಎಲ್ಲರಿಗೂ ಅಶ್ಚರ್ಯವಾಯಿತು. ಆ ಮೇಕೆಯ ಮಾತುಗಳನ್ನು ಕೇಳಿ ಯಜ್ಞಕ್ಕೆ ದೀಕ್ಷಿತನಾಗಿ ನಿಂತ ಮಾಧವನೆಂಬ ಬ್ರಾಹ್ಮಣನು ಅದಕ್ಕೆ ನಮಸ್ಕರಿಸಿದ. ಕೈ ಮುಗಿದು ಕೇಳಿದ.

**ಬ್ರಾಹ್ಮಣ:-** ಮಹಾತ್ಮ, ನೀನು ಯಾರು? ಯಾವ ಕರ್ಮದಿಂದ ನೀನು ಇಂಥ ಮೇಕೆಯ ಜನ್ಮವನ್ನು ಹೊಂದಿರುವಿ? ನಿನ್ನ ಜನ್ಮಾಂತರದಲ್ಲಿ ನಡೆದ ಘಟನೆಯಾದರೂ ಯಾವುದು? ಇದೆಲ್ಲವನ್ನೂ ಹೇಳು.

**ಮೇಕೆ:-** ದ್ವಿಜವರ್ಯ, ನಾನೂ ಸಹ ಕಳೆದ ಜನ್ಮದಲ್ಲಿ ಅತ್ಯಂತ ನಿರ್ಮಲ ಬ್ರಾಹ್ಮಣ ಕುಲದಲ್ಲಿ ಜನಿಸಿದ್ದೆ. ಆಗ ವೇದವಿದ್ಯೆಯಲ್ಲಿ ನಾನು ವಿಶಾರದ. ಯಜ್ಞಯಾಗ ಪ್ರಕ್ರಿಯೆಗಳಲ್ಲಿ ಪರಿಣತ. ಒಂದು ದಿನ ನಾನು ನನ್ನ ಮಡದಿಯ ಸಂತಾನದ ಹಂಬಲವನ್ನು ಪೂರೈಸಲಿಕ್ಕಾಗಿ ಚಂಡಿಕಾದೇವಾಲಯದಲ್ಲಿ ಒಂದು ಯಜ್ಞವನ್ನು ಪ್ರಾರಂಭಿಸಿದೆ. ಆ ಯಜ್ಞದಲ್ಲಿ ಚಂಡೀದೇವಿಯ ಪ್ರೀತ್ಯರ್ಥವಾಗಿ ಒಂದು ಕುರಿಯನ್ನು ತಂದು ನಿಲ್ಲಿಸಿದೆ. ಚಂಡಿಯ ಮಂಟಪದಲ್ಲಿ ನಾನು ಪುತ್ರರ ಅಪೇಕ್ಷೆಯಿಂದ ಯಜ್ಞಮಾಡಿ ಅದರಲ್ಲಿ ಮೇಕೆಯನ್ನು ಕೊಲ್ಲಲು ಉಪಕ್ರಮಿಸಿದಾಗ ಆ ಮೇಕೆಯ ತಾಯಿಯು ನನ್ನನ್ನು ಶಪಿಸಿತು. ಆ ಮೇಕೆಯು ಬ್ರಹ್ಮವಾದಿನಿಯರಾದ ಸ್ತ್ರೀಯರಂತೆ ಜ್ಞಾನಿ ಹಾಗೂ ವಿವೇಕಿಯಾಗಿದ್ದಿತು. ಬ್ರಹ್ಮವಾದಿನಿಯಾದ ಆ ಮೇಕೆಯ ತಾಯಿಯು ನನಗೆ

**ಅಶಾಸ್ತ್ರೀಯಾಧ್ವನಾ ಪಾಪ ಮತ್ಸುತಂ ಯಜ್ಞಘಾಂಸಸಿ ।**
**ದ್ವಿಜಾತ್ಮಧಮ ತೇನ ತ್ವಂ ಅಜಾಯೋನಿಮವಾಪ್ಸ್ಯಸಿ ॥**

"ಬ್ರಾಹ್ಮಣಾಧಮ, ನೀನು ಮೇಕೆಯನ್ನು ಕಡಿದು ಯಜ್ಞ ಮಾಡುವದು ಅಶಾಸ್ತ್ರೀಯ. ಹಿಂಸಾಪ್ರಧಾನವಾದ ಯಜ್ಞವು ಶಾಸ್ತ್ರೀಯ ಯಜ್ಞ ಎಂದೆನ್ನಿಸುವದಿಲ್ಲ. ಶಾಸ್ತ್ರವಿರುದ್ಧವಾದ ಹಿಂಸೆಯನ್ನು ಅದರಲ್ಲಿಯೂ 'ಅಜಾ' ಹಿಂಸೆಯನ್ನು ನೀನು ಈ ಯಜ್ಞದಲ್ಲಿ ಮಾಡುತ್ತಲಿರುವಿ. ಅದಕ್ಕಾಗಿ ನನ್ನ ಮಗುವನ್ನು ಕೊಲ್ಲತೊಡಗಿರುವಿ. ಅದುದರಿಂದ ಪಾಪಿಯೇ ನೀನೂ ಸಹ ಮೇಕೆಯ ಜನ್ಮವನ್ನು ಹೊಂದು."

ಹೀಗೆ ನಾನು ಕಡಿಯ ಹೊರಟ ಮೇಕೆಯ ತಾಯಿಯಿಂದ ಶಪಿತನಾಗಿ, ಈಗ ಕುರಿಯಾಗಿ ಹುಟ್ಟಿದ್ದೇನೆ. ಆದರೆ ಜನ್ಮಾಂತರದಲ್ಲಿ ಮಾಡಿದ ವೇದ ವೇದಾಂಗಗಳ ಅಧ್ಯಯನ, ಶಾಸ್ತ್ರಗಳಲ್ಲಿನ ಪರಿಶ್ರಮದಿಂದ ಜನ್ಮಾಂತರದ ನೆನಹು ಅಚ್ಚಳಿಯದೇ ಉಳಿದಿದೆ. ನಾನು ಬ್ರಾಹ್ಮಣನಾಗಿದ್ದಾಗ ಮಾಡಿದ ಆ ಪಶುಹಿಂಸೆಯ ಪಾಪದಿಂದ ಇನ್ನೂ ಅನೇಕ ಕೀಳು ಜನ್ಮದಲ್ಲಿ ನಾನು ಹುಟ್ಟಿಬರಬೇಕಾಯಿತು. ಅನೇಕ ಅಧಮ ಯೋನಿಗಳಲ್ಲಿ ಜನಿಸಿ ಅಲ್ಲಿ ನಾನಾಬಗೆಯ ಯಾತನೆಗಳನ್ನೂ, ವಿಪುಲ ಸಂತಾಪವನ್ನೂ ಅನುಭವಿಸಿ, ಕೊನೆಗೆ ಈ ಮೇಕೆಯ ಜನ್ಮವನ್ನು ಹೊಂದಿದೆ.

**ಬ್ರಾಹ್ಮಣ:-** ಹಾಗಾದರೆ ನಿನ್ನ ಈ ಜನ್ಮಜನ್ಮಾಂತರದ ಕತೆಯನ್ನು ಕೇಳಬೇಕೆಂದು ನಮಗೆ ಕುತೂಹಲವುಂಟಾಗಿದೆ. ಒಂದು ಜನ್ಮದಲ್ಲಿ ಆಡುಕುರಿಯನ್ನು ಯಜ್ಞಕ್ಕಾಗಿ ಕೊಂದ ತಪ್ಪಿಗೆ ಯಾವ ಯಾವ ಯೋನಿಯಲ್ಲಿ ಜನ್ಮ ಹೊಂದಿದೆ? ಎಷ್ಟೆಷ್ಟು ದುಃಖ ಅನುಭವಿಸಿದಿ ? ಇದನ್ನೆಲ್ಲವನ್ನೂ ನನಗೆ ತಿಳಿಸು. ಜನ್ಮಾಂತರದಲ್ಲಿ ಪಟ್ಟ ಬವಣೆಯ ಕಥೆಯನ್ನು ಈಗ ನನಗಾಗಿ ನಿರೂಪಿಸು.

**ಮೇಕೆ:-** ನಾನು ಬ್ರಾಹ್ಮಣನಾಗಿದ್ದಾಗ ಯಜ್ಞದ ನೆಪದಿಂದ ಮಾಡಿದ ಕುರಿಯ ಹಿಂಸೆಯಿಂದ ಮೊದಲು ಮರ್ಕಟನಾಗಿ ಜನಿಸಿದೆ. ಮಂಗಗಳನ್ನು ಆಡಿಸುವ ಓರ್ವ ಆಟಗಾರನು ನನ್ನನ್ನು ತೆಗೆದುಕೊಂಡು ಹೋಗಿ ಅಲ್ಲಲ್ಲಿ ಕುಣಿಸಿ, ಲಾಗ ಹೊಡೆಯಿಸಿ, ಮಕ್ಕಳನ್ನು ನಗಿಸಿ, ಜನರಿಗೆ ವಿನೋದವನ್ನುಂಟುಮಾಡಿ ಹಣವನ್ನು ಗಳಿಸುತ್ತಿದ್ದ. ಒಂದೊಂದು ಸಲ ನಾನು ನನ್ನ ಮಕ್ಕಳು ಮತ್ತು ಮಡದಿಯತ್ತ ಲಕ್ಷಗೊಟ್ಟಾಗ ಆಟಗಾರನು ಹೇಳಿದಂತೆ ಕುಣಿಯಲು ತಪ್ಪುತ್ತಿದೆ. ಆಗ ಆ ಆಟಗಾರನು ನನ್ನನ್ನು ಕಟ್ಟಿಗೆಯ ತುದಿಯಿಂದ ಹೊಡೆದು ಮೈಗೆಲ್ಲ ಗಾಯಗಳನ್ನುಂಟು ಮಾಡುತ್ತಿದ್ದ. ಒಂದು ದಿನ ಅವನು ಸಂಕೇತಮಾಡಿದಂತೆ ನಾನು ಕುಣಿದು, ಹಲ್ಕಿರಿದು, ಮೈಕೆರೆದು, ತಿಪ್ಪರಲಾಗಹಾಕಿ ನೆರದ ಜನಸ್ತೋಮವನ್ನು ರಂಜಿಸಲು ಸ್ವಲ್ಪ ವಿರೋಧವನ್ನು ತೋರಿಸಿದಾಗ ಯಜಮಾನನು ನಿರ್ದಯನಾಗಿ ಕೈಯಲ್ಲಿಯ ಕಟ್ಟಿಗೆಯಿಂದ ಬಿರುಸಾಗಿ ಹೊಡೆದುಹಾಕಿದ. ನಾನು ಮೂರ್ಛಿತನಾಗಿ ನೆಲಕ್ಕೆ ಬಿದ್ದೆ. ನನ್ನ ದೇಹದಿಂದ ಧಾರಾಕಾರವಾಗಿ ರಕ್ತ ಸೋರತೊಡಗಿತು. ಆ ಸಂದರ್ಭದಲ್ಲಿ ನನ್ನ ಒಡೆಯನು ನನ್ನ ದಾರ ಬಿಚ್ಚಿ, ಎಲ್ಲಿಯಾದರೂ ಹೋಗಿ ಬದುಕಲಿ ಎಂದು ಬಿಟ್ಟುಬಿಟ್ಟ. ಸಮೀಪದಲ್ಲಿರುವ ಜಲಾಶಯದಲ್ಲಿನ ನೀರು ಕುಡಿಯಲು ನಾನು ಧಾವಿಸಿದೆ. ನಾನು ನೀರಿನ ಹತ್ತಿರ ಹೋದ ಕೂಡಲೇ, ಅಲ್ಲಿಯೇ ದಂಡೆಯ ಮೇಲೆ ಬಿದ್ದು ಪ್ರಾಣ ನೀಗಿದೆ. ಆ ಮಂಗದ ಜನ್ಮ ನೀಗಿ

ನಂತರ ನಾನು ನಾಯಿಯ ಜನ್ಮವನ್ನು ತಳೆದೆ. ಮನೆಮನೆ ತಿರುಗಿ ಅವರುಗಳು ಬಿಸಾಕಿದ ರೊಟ್ಟಿಯ ತುಣುಕುಗಳಿಂದ ಹೊಟ್ಟೆತುಂಬಿಸಿ ಕೊಂಡು, ಎಂಜಲು ನೆಕ್ಕುತ್ತಾ ಅಲ್ಲಲ್ಲಿ ಸಂಚರಿಸುತ್ತ ದಿನಕ್ಕೆ ಇಪ್ಪತ್ತು ಮನೆ ತಿರುಗುತ್ತಿದ್ದೆ. ಒಂದು ದಿನ ಸಿರಿವಂತನ ಮನೆಯ ಮುಂಭಾಗದಲ್ಲಿ ಯಾರೂ ಇಲ್ಲದನ್ನು ನೋಡಿ ನಾನು ನಿರ್ಭಯವಾಗಿ ಒಳಗೆ ಪ್ರವೇಶಿಸಿದೆ. ನೇರವಾಗಿ ಅಡುಗೆ ಮನೆಗೆ ಹೋದೆ. ಆ ಅಡುಗೆ ಮನೆಯಲ್ಲಿ ನಾನಾಬಗೆಯ ಭಕ್ಷ್ಯ ಭೋಜ್ಯಗಳನ್ನು ತಯಾರಿಸಿ ಇರಿಸಿದ್ದರು. ಹಸಿವೆಯಿಂದ ಕಸಿವಿಸಿಬಡುವ ನಾನು ಅಷ್ಟೊಂದು ಭಕ್ಷ್ಯಗಳನ್ನು ನೋಡಿ, ಆಸೆದುಂಬಿ ಬಾಯಿಂದ ಜೊಲ್ಲು ಸುರಿಸುತ್ತ ಅತ್ತಿತ್ತ ನೋಡಿ ಮೆಲ್ಲನೆ ಆ ಭಕ್ಷ್ಯಗಳಿಗೆ ಬಾಯಿಹಾಕಿದೆ. ಬೆದರುಗಣ್ಣಿನಿಂದ ಸುತ್ತಲೂ ನೋಡುತ್ತ ತಿನ್ನುತ್ತಲಿರುವಾಗಲೇ, ಯಜಮಾನನ ಮಕ್ಕಳು ಅಲ್ಲಿಗೆ ಬಂದರು. ಯಜಮಾನತಿಯೂ ಬಂದಳು. ಅವರು ದೊಡ್ಡ ದೊಡ್ಡ ದೊಣ್ಣೆಗಳಿಂದ ನನ್ನನ್ನು ಥಳಿಸಿದರು.

ಮಕ್ಕಳು ಕೈಗೆ ಸಿಕ್ಕ ಕಲ್ಲು ಕಟ್ಟಿಗೆಗಳಿಂದ ಸಿಕ್ಕಸಿಕ್ಕಂತೆ ಬಗ್ಗು ಬಡಿದರು. ನನ್ನ ನಡುಮುರಿಯಿತು. ರಕ್ತ ಕಾರಿಕೊಂಡು ವಿಲಕ್ಷಣ ಒದ್ದಾಟದಿಂದ ನಾನು ಅವರ ಮನೆ ಬಿಟ್ಟೆ. ಅಷ್ಟು ಹೊಡೆದದ್ದರಿಂದ ಮೈ ತುಂಬ ಗಾಯ, ಆಳವಾದ ಗಾಯಗಳಲ್ಲಿ ಸೋರುವ ರಕ್ತ. ಅಲ್ಲಲ್ಲಿ ಕ್ರಿಮಿಗಳು ಸೇರಿ ಕೀವು ತುಂಬಿಕೊಂಡಿತು. ಸಹಿಸಲಾರದ ವೇದನೆಯನ್ನು ಸಹಿಸುತ್ತ ಕೊನೆಗೊಂದು ದಿನ ಆ ನಾಯಿಯ ಜನ್ಮ ಮುಗಿಸಿದೆ. ಅದರ ಮುಂದಿನ ಜನ್ಮ ಒಬ್ಬ ಸೆರಮಾರುವವನ ಮನೆಯಲ್ಲಿ. ಅಲ್ಲಿ ಗಿಡ್ಡ ಕುದುರೆಯಾಗಿ ಜನಿಸಿದೆ. ನಾನು ಕುದುರೆಯ ಜನ್ಮದಲ್ಲಿರುವಾಗ ಆ ಸೆರೆಮಾರುವವನ ಮಡದಿಯು ನನ್ನನ್ನು ಮಾರಾಟ ಮಾಡಿದಳು.

ದ್ವಾರಕಾಯಾತ್ರೆಗೆ ಹೊರಟ ಒಬ್ಬ ಮುದುಕಿಯು ಹಣಕೊಟ್ಟು ನನ್ನನ್ನು ಕೊಂಡು ಕೊಂಡಳು. ಆಗ ನನಗೆ ವಯಸ್ಸಾಗಿದ್ದಿತು. ಮುಪ್ಪು ಆ ಅಶ್ವದೇಹವನ್ನು ಅಪ್ಪಿ ಹಿಡಿದಿದ್ದಿತು. ಚೆನ್ನಾಗಿ ಓಡಲು ಬರುತ್ತಲಿರಲಿಲ್ಲ. ಆದರೂ ನನ್ನನ್ನು ಕರೆದು ಕೊಂಡು ಆ ಮುದುಕಿಯ ಕುಟುಂಬ ದ್ವಾರಕಾಯಾತ್ರೆಗೆ ಹೊರಟಿತು. ಅತ್ಯಂತ ಅಲ್ಪ ಬೆಲೆಗೆ ದೊರೆತ ನನ್ನ ಮೇಲೆ ಇಡೀ ಯಾತ್ರೆಯನ್ನು ಮುಗಿಸಬೇಕೆಂದು ಆ ಮುದುಕಿಯ ಸಂಕಲ್ಪ. ನನಗೆ ಹಗ್ಗ ಕಟ್ಟಿ ಮೇಲೆ ಥಡಿ ಹಾಕಿ ತನ್ನ ಮೂವರೂ ಮಕ್ಕಳನ್ನು ಕೂಡಿಸಿಕೊಂಡು ನನ್ನ ಮೇಲೆ ಆ ಮುದುಕಿಯು ಕುಳಿತುಕೊಂಡಿತು. ನಾನು ಮೆಲ್ಲಮೆಲ್ಲನೆ ದ್ವಾರಕಾ ಯಾತ್ರೆಯ ದಾರಿಯನ್ನು ಹಿಡಿದೆ. ಮಾರ್ಗಮಧ್ಯದಲ್ಲಿ ಒಂದು ಸರೋವರ. ಆ ಸರೋವರದ ನೀರಿನಲ್ಲಿ ನಾನು ಕಾಲಿಟ್ಟಾಗ ಕೆಳಗೆಲ್ಲ ಆಳವಾದ ಕೆಸರು. ನಾನು ಇಟ್ಟ ಹೆಜ್ಜೆ ಹಿಂತೆಗೆಯಲಾರದೇ ಆ ಕೆಸರಿನ ಮಡುವಿನಲ್ಲಿ ಹೂತುಹೋದೆ. ನನ್ನ ಮೇಲೆ ಕುಳಿತವರೆಲ್ಲ ತಕ್ಷಣ ಮೇಲಿಂದ ಬದಿಗೆ ಹಾರಿಪಾರಾದರು. ಹೂತುಹೋದ ನನ್ನ ಸುತ್ತಮುತ್ತ ಅವರು ನಿಂತು ನಾನು ಮೇಲೆ ಬರಬೇಕೆಂದು ಹೊಡೆದರು, ಬಡೆದರು, ಜಗ್ಗಿದರು. ಅವರು ಜಗ್ಗಿದಷ್ಟೂ, ಕೊಸರಾಟ ನಡೆಯಿತು. ನಾನು ಇನ್ನೂ ಆಳಕ್ಕೆ ಇಳಿಯತೊಡಗಿದೆ. ಬೇಸತ್ತ ಅವರು ಜಗ್ಗುವದನ್ನು ನಿಲ್ಲಿಸಿ ಕೋಪದಿಂದ ನನ್ನ ಮೇಲೆ ಬಲವಾಗಿ ಪ್ರಹಾರಮಾಡಿದರು. ಮೊದಲೇ ದುರವಸ್ಥೆಯಲ್ಲಿದ್ದ ನಾನು ಅವರ ಪ್ರಹಾರ ತಾಳಲಾಗದೇ ಅಸುನೀಗಿದೆ. ಹೀಗೆ ಮೃತನಾದ ನನ್ನನ್ನು ಬಿಟ್ಟು ಅವರೆಲ್ಲ ಅಲ್ಲಿಂದ ಹೊರಟುಹೋದರು. ಸೆರೆಮಾರು ಮವರ ಮನೆಯಲ್ಲಿ ಕುದುರೆಯ ಜನ್ಮದಿಂದ ಯಾತ್ರಾರ್ಥವಾಗಿ ಹೊರಟ ಕುಟುಂಬದವರೆಡೆಗೆ ಸೇರಿ ನಾನು ಆ ಜನ್ಮವನ್ನೂ ಸಹ ನೀಗಿ ಕೊನೆಯದಾದ ಮೇಕೆಯ ಜನ್ಮವನ್ನು ಈಗ ಹೊಂದಿದ್ದೇನೆ.

**ಬ್ರಾಹ್ಮಣ:-** ಮಹಾನುಭಾವ, ನಿನ್ನ ಈ ದುಃಖದ ಕತೆಯನ್ನು ಕೇಳಿಯಾಯಿತು. ಇದರಿಂದ ನನಗೇನು ಪ್ರಯೋಜನ? ನಾನು ಇನ್ನು ಮುಂದೆ ಸದ್ಗತಿಯನ್ನು ಹೇಗೆ ಹೊಂದಬೇಕು? ಇದನ್ನು ತಿಳಿಸಿ ಹೇಳು.

**ಮೇಕೆ:-** ಬ್ರಾಹ್ಮಣೋತ್ತಮ, ನಿನ್ನ ಪ್ರಶ್ನೆಗೆ ಉತ್ತರ ರೂಪವಾಗಿ ಇನ್ನೂ ಒಂದು ಆಖ್ಯಾನವನ್ನು ಹೇಳುವೆ ಕೇಳು.

ಭರತಖಂಡದಲ್ಲಿಯೇ ಅತ್ಯಂತ ಶ್ರೇಷ್ಠ ಕ್ಷೇತ್ರವಾದ ಕುರುಕ್ಷೇತ್ರದ ಹೆಸರನ್ನು ನೀನು ಕೇಳಿರುವೆಯಷ್ಟೇ. ಅದು ಮೋಕ್ಷಪ್ರದಾಯಕವಾದ ಕ್ಷೇತ್ರ. ಈ ಕುರುಕ್ಷೇತ್ರದಲ್ಲಿ ಪೂರ್ವಕಾಲದಲ್ಲಿ 'ಚಂದ್ರಶರ್ಮ' ಎಂಬ ಒಬ್ಬ ರಾಜ. ಸೂರ್ಯವಂಶದಲ್ಲಿ ಹುಟ್ಟಿದ ರಾಜನು ಒಂದು ದಿನ ಸೂರ್ಯಗ್ರಹಣದ ಕಾಲದಲ್ಲಿ ಅತ್ಯಂತ ಶ್ರದ್ಧೆಯಿಂದ ಕಾಲಪುರುಷನ ದಾನವನ್ನು ನೀಡಲು ಉದ್ಯುಕ್ತನಾದ ವೇದಾಂತ ಪಾರಂಗತನಾದ, ಸದಾಚಾರ ಸಂಪನ್ನನಾದ ತನ್ನ ಪುರೋಹಿತನನ್ನು ಕರೆದು ಅವರಿಗೆ ಕಾಲಪುರುಷನ ದಾನನೀಡಲು ಉಪಕ್ರಮಿಸಿದ. ಅದನ್ನು ಕಂಡು ಕಾಲಪುರುಷನು ಸ್ಪಷ್ಟವಾಗಿ ಇಂತು ನುಡಿದ.

**ಕಾಲಪುರುಷ:-** ಕುರುಕ್ಷೇತ್ರದಂಥ ಪುಣ್ಯಕ್ಷೇತ್ರದಲ್ಲಿ, ಸೂರ್ಯಗ್ರಹಣದಲ್ಲಿ ಅಲ್ಪಸ್ವಲ್ಪ ದಾನವನ್ನೂ ಸಹ ಬೇರೆ ಯಾರೂ ಸ್ವೀಕರಿಸುವದಿಲ್ಲ. ಆದರೆ ನೀನು ಈ ಸಮಯದಲ್ಲಿ, ಈ ಕ್ಷೇತ್ರದಲ್ಲಿ ಕಾಲಪುರುಷನಂಥ ದಾನವನ್ನು ಸ್ವೀಕರಿಸಲು ಹೇಗೆ ಸಿದ್ಧನಾದಿ? ಇದು ಮಹಪಾತಕ. ಇದನ್ನು ನೀನು ಅರಿಯೆಯಾ? ಧನಲೋಭದಿಂದ ಅಂಧನಾಗಿ ಇಂಥ ಘೋರವಾದ ದಾನವನ್ನೂ ಅಂಗೀಕರಿಸಲು ಏಕೆ ಉದ್ಯುಕ್ತನಾಗಿರುವೆ?

ಅತ್ಯಂತ ಆಶ್ಚರ್ಯಕಾರಕವಾದ ಈ ಕಾಲಪುರುಷನ ನುಡಿಯನ್ನು ಕೇಳಿ ಬೆದರಲಿಲ್ಲ ಆ ಮಹಾಬ್ರಾಹ್ಮಣ. ಧೈರ್ಯದಿಂದ ಕಾಲಪುರುಷನಿಗೆ ಉತ್ತರಿಸಿದ ಆ ವಿಪ್ರಶ್ರೇಷ್ಠ.

**ಪುರೋಹಿತ:-** ಕಾಲಪುರುಷ, ದಾನದ ಪರಿಗ್ರಹವು ಮಹಾಪಾತಕ ಎಂಬುದನ್ನು ನಾನು ಬಲ್ಲೆ. ಆದರೂ ಇಂಥ ಘೋರದಾನವನ್ನು ಸ್ವೀಕರಿಸಲು ಸಿದ್ಧನಾಗಿದ್ದೇನೆ. ಅದರಿಂದ ಬರುವ ಪಾಪರಾಶಿಯನ್ನು ನಿವಾರಿಸುವ ಉಪಾಯವನ್ನು ನಾನು ಚೆನ್ನಾಗಿ ತಿಳಿದಿದ್ದೇನೆ.

ಪುರೋಹಿತನ ಈ ಮಾತನ್ನು ಕೇಳಿ ಮಹಾರಾಜನಿಗೆ ಪರಮ ಸಂತೋಷವಾಯಿತು. ಆ ಚಂದ್ರಶರ್ಮ ಮಹೀಪತಿಯು ಶುಭ್ರವಸ್ತ್ರವನ್ನು ಧರಿಸಿದ. ಬೆಳ್ಳಗಿನ ಹೂಹಾರಗಳನ್ನು ಕೊರಳಲ್ಲಿ ಧರಿಸಿದ. ಪ್ರಸನ್ನ ಮನಸ್ಸಿನಿಂದ ತನ್ನ ಪಕ್ಕದಲ್ಲಿ ನಿಂತ ಪುರೋಹಿತರ ಕೈ ಹಿಡಿದು ಆ ಸ್ಥಳಕ್ಕೆ ಬಂದ. ವಿಧಿಪೂರ್ವಕವಾಗಿ ಸಂಕಲ್ಪಾದಿಗಳನ್ನು ಮಾಡಿ ಆ ಚಂದ್ರಶರ್ಮ ಭೂಪಾಲನು ತನ್ನ ಕುಲಪುರೋಹಿತರಾದ ವೇದ ಕೋವಿದ ಆ ಬ್ರಾಹ್ಮಣಶ್ರೇಷ್ಠನಿಗೆ ಭಕ್ತಿಯುಕ್ತನಾಗಿ ಕಾಲಪುರುಷನನ್ನು ದಾನ ನೀಡಿದ.

ದಾನದ ವಿಧಿ ಮುಗಿದ ತಕ್ಷಣ ಆ ಕಾಲಪುರುಷನ ಹೃದಯವನ್ನು ಸೀಳಿಕೊಂಡು ಓರ್ವ ಕ್ರೂರ ಕೆಂಗಣ್ಣಿನ, ಪಾಪಾತ್ಮನಾದ ಚಂಡಾಲನು ಹೊರಬಂದ. ಮತ್ತು ಅವನ ದೇಹದ ಇನ್ನೊಂದು ಪಾರ್ಶ್ವದಿಂದ ಓರ್ವ ಚಂಡಾಲಕನ್ನಿಕೆಯು ಎದ್ದು ಬಂದಳು. ಹೀಗೆ ಕಾಲಪುರುಷನ ದೇಹದಿಂದ ಹೊಮ್ಮಿ ಬಂದ ಆ ಇಬ್ಬರೂ ಚಂಡಾಲ ವ್ಯಕ್ತಿಗಳು ಪುರೋಹಿತನ ಕಡೆಗೆ ಬೆಂಕಿಯ ಬೊಂಬೆಯಂತೆ ನಡೆನಡೆದು ಬಂದರು. ಅವರನ್ನು ನೋಡಿ ತುಸು ಭಯಕಂಪಿತನಾದಂತೆ ಆದ ಆ ಪುರೋಹಿತನು ಗೀತೆಯ ಒಂಭತ್ತನೆಯ

ಅಧ್ಯಾಯವನ್ನು ಗಟ್ಟಿಯಾಗಿ ಪಾರಾಯಣ ಮಾಡುತ್ತ ಮನಸ್ಸಿನಲ್ಲಿಯೇ ಅರ್ಥವನ್ನು ಅನುಸಂಧಾನಕ್ಕೆ ತಂದುಕೊಂಡು ಭಗವನ್ನಾಮಸ್ಮರಣವನ್ನೂ ಸಹ ಮಧ್ಯಮಧ್ಯದಲ್ಲಿ ಮಾಡುತ್ತ ನಿಂತುಕೊಂಡ ಆ ಪುರೋಹಿತ. ಬಾಯಿಂದ ಉಚ್ಚರಿತವಾದ ಭಗವದ್ಗೀತೆಯ ಒಂದೊಂದು ಅಕ್ಷರದಿಂದಲೂ ಒಬ್ಬೊಬ್ಬ ವಿಷ್ಣುದೂತ ಹೊರಬಂದು ಅವನ ಬಳಿಯಲ್ಲಿ ನಿಂತುಕೊಂಡರು. ರಾಜನ ರಕ್ಷಣೆಗಾಗಿ ಸನ್ನದ್ಧರಾಗಿ ನಿಂತ ಆ ವಿಷ್ಣುಪಾರ್ಷದರು ಆ ಇಬ್ಬರೂ ಚಂಡಾಲರನ್ನು ಹೊಡೆಯಲಿಕ್ಕಾಗಿ ಆಯುಧವನ್ನು ಎತ್ತಿ ಅವರನ್ನು ಅಟ್ಟಿಸಿಕೊಂಡು ಬಂದರು. ಅದರಿಂದ ಹೆದರಿ ಭಯಭ್ರಾಂತರಾದ ಆ ಚಂಡಾಲ ತರುಣ-ತರುಣಿಯರು ಕಂಗೆಟ್ಟು ಅಲ್ಲಿಂದ ಓಡಿಹೋದರು. ಇದನ್ನೆಲ್ಲ ಪ್ರತ್ಯಕ್ಷವಾಗಿ ನೋಡಿ ಮಹಾರಾಜನು ಆಶ್ಚರ್ಯದಿಂದ ಕಣ್ಣು ಅರಳಿಸಿ ತನ್ನ ಪುರೋಹಿತನನ್ನು ಕೇಳಿದ.

**ರಾಜ:-** ಪೂಜ್ಯರೇ, ನೀವು ಈ ದಾರುಣ ಪುರುಷರ ಆಕ್ರಮಣದಿಂದ ಹೇಗೆ ಪಾರಾದಿರಿ? ಯಾವ ಮಂತ್ರವನ್ನು ಜಪಿಸಿದಿರಿ? ಯಾವ ದೇವರನ್ನು ನೆನೆದಿರಿ? ಯಾರು ಆ ಚಂಡಾಲ ಪುರುಷ? ಚಂಡಾಲ ಕನ್ನಿಕೆಯಾದರೂ ಯಾರು? ಇಲ್ಲಿಗೆ ಹೇಗೆ ಬಂದರು? ನಿಮ್ಮನ್ನು ಕಬಳಿಸಲು ಬಂದ ಅವರನ್ನು ನೀವು ನಿಗ್ರಹಿಸಿದ್ದು ಹೇಗೆ?

**ಪುರೋಹಿತ:-** ಕಾಲಪುರುಷನ ಹೃದಯದಿಂದ ಹೊರಟ ಆ ಚಂಡಾಲನು ಮೂರ್ತಿಮಂತ ಪಾಪಪುರುಷ. ವೇದ, ದೇವ, ಗುರು, ಧರ್ಮಗಳ ಮೂರ್ತಿಮಂತ ನಿಂದೆಯೇ ಆ ಚಂಡಾಲಕನ್ನಿಕೆ. ಅವರಿಬ್ಬರೂ ನನ್ನನ್ನು ಆಕ್ರಮಿಸಲು ಬಂದಾಗ ಶ್ರೀ ಮದ್ಭಗವದ್ಗೀತೆಯ ಒಂಬತ್ತನೆಯ ಅಧ್ಯಾಯದ ಪಾರಾಯಣಕ್ಕೆ ತೊಡಗಿದೆ. ಗೀತಾಚಾರ್ಯನಾದ ಶ್ರೀ ಕೃಷ್ಣನ ಮೂರ್ತಿಯನ್ನು ಮನದಲ್ಲಿ ನೆನೆಯುತ್ತ ಗೀತೆಯ ನವಮಾಧ್ಯಾಯದ ಅರ್ಥವನ್ನು ಅನುಸಂಧಾನಕ್ಕೆ ತಂದು ಪಾರಾಯಣ ಮಾಡುತ್ತ ನಿಂತುಕೊಂಡಾಗ, ತದ್ಗ್ರಂಥ ಪ್ರಣೇತಾರನಾದ ಶ್ರೀಕೃಷ್ಣನ ಪಾರ್ಷದರು ಅಕ್ಷರಕ್ಕೊಬ್ಬರಂತೆ ಎದ್ದು ಬಂದು ನನ್ನನ್ನು ಕಾಪಾಡಿದರು. ನನ್ನನ್ನು ಹಣಿಯಲು ಬಂದ ಆ ಘೋರಪುರುಷರಿಬ್ಬರನ್ನೂ ಕಣ್ತೆರೆದು ನೋಡಿದರು. ಅದರಿಂದ ಭಯಭ್ರಾಂತರಾಗಿ ಆ ಚಂಡಾಲ ಸ್ತ್ರೀ ಪುರುಷರು ದಿಕ್ಕೆಟ್ಟು ಓಡಿದರು.

**ಮೇಕೆ:-** ರಾಜನೇ, ನಾನು ಪ್ರತಿದಿನವೂ ಗೀತೆಯ ನವಮಾಧ್ಯಾಯವನ್ನು ಪಠಿಸುತ್ತೇನೆ. ಅದರಿಂದ ನಾನು ಪಾಪಿ ಜನರಿಂದ ದಾನತೆಗೆದುಕೊಂಡು ಪಾಪಗಳೆಲ್ಲ ಪರಿಹೃತವಾದವು. ಅದರಿಂದ ಉದ್ಭೂತವಾದ ಆಪತ್ತುಗಳೆಲ್ಲ ಕಳೆದುಹೋದವು.

ಆದುದರಿಂದ ಆ ಮಹಾರಾಜನು ತನ್ನ ಪುರೋಹಿತರಾದ ವಿದ್ವಾನ್ ಬ್ರಾಹ್ಮಣನಿಂದ ಗೀತೆಯ ಒಂಬತ್ತನೆಯ ಅಧ್ಯಾಯವನ್ನು ಅರ್ಥಸಹಿತವಾಗಿ ಚೆನ್ನಾಗಿ ಅಧ್ಯಯನ ಮಾಡಿ ತಪ್ಪದೇ ಅರ್ಥಾನುಸಂಧಾನಪೂರ್ವಕವಾಗಿ ಪಾರಾಯಣೆಸಿದ. ಈ ನವಮಾಧ್ಯಾಯದ ದೈನಂದಿನ ಪಠಣ, ಪ್ರವಚನ, ಪಾರಾಯಣಗಳಿಂದ ಆ ಗುರು ಶಿಷ್ಯರಿಬ್ಬರೂ ಶ್ರೀಕೃಷ್ಣಪರಮಾತ್ಮನ ಪರಮಾನುಗ್ರಹಕ್ಕೆ ಪಾತ್ರರಾಗಿ ಕೊನೆಗೆ ಮೋಕ್ಷವನ್ನು ಹೊಂದಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಭಗವದ್ಗೀತೆಯ ಒಂಬತ್ತನೇಯ ಅಧ್ಯಾಯದ ಮಾಹಾತ್ಮ್ಯ ಮಾಧವಬ್ರಾಹ್ಮಣನ ಆಖ್ಯಾನ*
*ಎಂಬ ನೂರ ಆರವತ್ತೈದನೇಯ ಅಧ್ಯಾಯ ಮುಗಿದುದು*

—o—

# ಗೀತೆಯ ಹತ್ತನೆಯ ಅಧ್ಯಾಯದ ಮಾಹಾತ್ಮ್ಯ



**ಪಾರ್ವತಿ:-** ಸರ್ವಜ್ಞನಾದ ಪರಮೇಶ್ವರ, ಭಗವದ್ಗೀತೆಯ ಒಂಬತ್ತು ಅಧ್ಯಾಯಗಳ ಪ್ರಭಾವವನ್ನು ನಾನು ನಿನ್ನ ಮುಖದಿಂದ ಕೇಳಿ ಧನ್ಯಳಾದೆ. ಈಗ ಹತ್ತನೆಯ ಅಧ್ಯಾಯವು ಎಲ್ಲ ಗೀತೆಯ ಹದಿನೆಂಟು ಅಧ್ಯಾಯಗಳಲ್ಲಿ ಸರ್ವಶ್ರೇಷ್ಠ ಎಂದು ಮುನಿಗಳ ಹೇಳಿಕೆ. ಆ ಗೀತಾ ದಶಮಾಧ್ಯಾಯದ ಪುಣ್ಯ ಪ್ರಭಾವವನ್ನು ಕೇಳಲು ನನಗೆ ಅಕುಂಠಿತವಾದ ಉತ್ಕಂಠತೆ. ಭಗವದ್ಗೀತೆಯ ಮಹಿಮೆಯೆಂದರೆ ಸರ್ವವೇದಶಾಸ್ತ್ರಗಳ ಜೀವಾಳ. ಅದರಲ್ಲಿಯ ಮಹತ್ತಮವಾದ ಹತ್ತನೆಯ ಅಧ್ಯಾಯದ ಮಹಾ ಮಹಿಮೆಯನ್ನು ನನಗಾಗಿ ಬಿತ್ತರಿಸು.

**ಪರಮೇಶ್ವರ:-** ದುರ್ಗಮವಾದ ಸ್ವರ್ಗಕ್ಕೆ ಗೀತೆಯ ಹದಿನೆಂಟು ಅಧ್ಯಾಯಗಳು ಸೋಪಾನಶ್ರೇಣಿಯಂತಿರುವ ಒಂದು ಏಣಿ. ಪಾವನ ಪ್ರಭಾವಗಳ ಚಲನಸೀಮೆ. ದಶಮಾಧ್ಯಾಯದ ಪುಣ್ಯಪ್ರಭಾವವನ್ನು ಅಭಿವ್ಯಂಜಿಸುವ ಪಾವನ ಕಥೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಓರ್ವ ವಿದ್ವಾನ್ ವಿಪ್ರ ಹಿಂಸೆಯ ಹೆಸರನ್ನು ಕೂಡ ಕೇಳಿ ಗೊತ್ತಿಲ್ಲ. ಅವನಿಗೆ ನಿವೃತ್ತಿ ಮಾರ್ಗದಲ್ಲಿಯೇ ಪ್ರವೃತ್ತಿ. ಆ ಜಿತೇಂದ್ರಿಯನಿಗೆ 'ಧೀರಧಿ' ಎಂದು ಅವನಿಗೆ ಹೆಸರು. ಅವನ ಮನಸ್ಸು ಪ್ರಶಾಂತಿಯ ಒಂದು ಹೆಗ್ಗಡಲು. ವೇದಶಾಸ್ತ್ರಗಳ ಸಾಗರವನ್ನು ಅವನು ಎಂದೋ ದಾಟಿ ಪಾರಾಗಿದ್ದ. ಆ ಪುಣ್ಯ ಪುರುಷನು ಧ್ಯಾನಾರೂಢನಾಗಿ ತನ್ನ ಹೃದಯಪಟಲದಲ್ಲಿ ಒಳಗಣ್ಣಿನಿಂದ ಭಗವನ್ಮೂರ್ತಿಯನ್ನು ನೋಡುತ್ತಲಿದ್ದ. ಅವನು ತನ್ನ ಧ್ಯಾನ ಸಮಾಧಿಯನ್ನು ಮುಗಿಸಿ ಹೊರಬಂದ ಕೂಡಲೇ ಸ್ವಯಂ ನಾನು ಎದ್ದು ಹೋಗಿ ಹಸ್ತಾಂದೋಲನ ಕೊಟ್ಟು ಬರುತ್ತೇನೆ. ಅವಧೂತ ಯೋಗಿಯಂತಿದ್ದ ಆ 'ಧೀರಧೀ' ಎಂಬ ವಿಪ್ರಶ್ರೇಷ್ಠನು ನನ್ನ ಪರಮ ಭಕ್ತ. ನನ್ನ ವಾಹನವಾದ ನಂದೀಶ್ವರನಂತೆಯೇ ಅವನ ಮೇಲೆ ನನಗೆ ಘನಿಷ್ಠ ಪ್ರೀತಿ.

ಒಂದು ದಿನ ಆ ಧೀರಧಿ ಮುನೀಶ್ವರನು ತನ್ನ ಪೂಜೆ ಹಾಗೂ ಆಹ್ನಿಕ ಮುಗಿಸಿ ಆಚಮನಮಾಡಿ ತಪಸ್ಸಮಾಧಿಯನ್ನು ಕೈಕೊಂಡ. ತನ್ನ ಮೂಗಿನ ತುದಿಯಲ್ಲಿ ದೃಷ್ಟಿ ನೆಟ್ಟು ಎಲ್ಲ ಇಂದ್ರಿಯಗಳನ್ನು ಬಾಹ್ಯ ವಿಷಯಗಳಿಂದ ಸೆಳೆದುಕೊಂಡು ಮನಸ್ಸನ್ನು ಭಗವದುನ್ಮುಖನಾಗಿ ಮಾಡಿ ಸಮಾಧಿಗೆ ಹಚ್ಚಿದ. ಕೆಲವು ಕ್ಷಣದ ಸಂಪ್ರಜ್ಞಾತ ಸಮಾಧಿಯ ಏಕಾಗ್ರಚಿತ್ತ ಧ್ಯಾನದ ಅನಂತರ ಅವನ ಮನಸ್ಸು ಅಸಂಪ್ರಜ್ಞಾತ ಅವಸ್ಥೆಗೆ ಇಳಿಯಿತು. ಆಗ ಅವನು ಕುಳಿತ ಆಸನ ಶಿಥಿಲಿತ. ಮುಖದಲ್ಲಿ ಮೇಲುಗಣ್ಣು. ತೇಲಗಣ್ಣು ಅಂಗಾಂಗಗಳೆಲ್ಲವೂ ತೂಗುತ್ತಲಿದ್ದವು. ಕೊನೆಗೆ ನಿದ್ದೆಯಲ್ಲಿ ಒರಗಿದಂತಿದ್ದ ಅವನ ತಲೆ ಮನೆಯ ಹೊಸ್ತಿಲಕ್ಕೆ ತಾಕಿತು. ಹಾಗೆಯೇ ನಿದ್ರಾಮುದ್ರಿತ ಲೋಚಿತನಾಗಿ ಅದನು ಅಸಂಪ್ರಜ್ಞಾತ ಅವಸ್ಥೆಯಲ್ಲಿಯೇ ದೀರ್ಘದಂಡ ಅವಸ್ಥೆಯಲ್ಲಿ ಪವಡಿಸಿದ.

ಆಗ 'ಭಿಂಗಿರಿಟೀ' ಎಂಬ ನನ್ನ ಭಕ್ತನು ನನ್ನ ಬಳಿಗೆ ಬಂದ. ಸಾಷ್ಟಾಂಗ ಪ್ರಣಾಮ ಗೈದ. ವಿನಯದಿಂದ ಕೇಳಿದ.

**ಭಿಂಗಿರಿಟೀ:-** ಭಗವನ್, ಈ ಮಹಾತ್ಮನಾದ ಧೀರಧೀ ಯಾವ ತಪಸ್ಸನ್ನು ಮಾಡಿದ ? ಯಾವ ಹೋಮವನ್ನು ಮಾಡಿದ? ಯಾವ ಮಂತ್ರವನ್ನು ಜಪಿಸಿದ? ಪ್ರತಿ

ನಿತ್ಯವೂ ನೀನು ಸ್ವಯಂ ಹೋಗಿ ಅವನ ಕೈ ಕುಲುಕುವಿ. ಇದೆಂಥ ಭಾಗ್ಯ ! ಸಾಕ್ಷಾತ್ ಪರಮೇಶ್ವರನಿಂದ ಪ್ರತಿದಿನವೂ ಸಾನಂದ ಹಸ್ತಾಂದೋಲನವನ್ನು ಹೊಂದಬೇಕಾದರೆ ಅವನು ಯಾವ ಮಹತ್ ಪುಣ್ಯವನ್ನು ಮಾಡಿದ? ಇದನ್ನು ಹೇಳು.

**ಮಹಾದೇವ:-** ವತ್ಸ ಭಿಂಗಿ, ಒಂದು ದಿನ ನಾನು ಕಂಪಿನ ಸೊಂಪನ್ನು ಸೂಸುವ ಸುಗಂಧಿ ಮರಗಳಿಂದ ಸಂದಟಿತವಾದ ಕೈಲಾಸ ಪರ್ವತದ ಒಂದು ಕಾನನದ ಕಾವಣದಲ್ಲಿ ಒಂದು ವೇದಿಕೆಯ ಮೇಲೆ ಕುಳಿತುಕೊಂಡಿದ್ದೆ. ಕೋಗಿಲೆಗಳ ಪಂಚಮದ ಇಂಚರ ಮತ್ತು ಭೃಂಗಗಳ ಗೀತಗುಂಜಾರವ, ಹರ್ಷ ನಿರ್ಭರವಾದ ನವಿಲುಗಳ ನಲ್ಕುಣಿತ, ಶುಕಸಾರಿಕೆಗಳ ಕಲಾಲಾಪಗಳಿಂದ ಹಾಗೂ ಬಗೆಬಗೆಯ ಲತಾಕುಂಜನಿಕುಂಜಗಳ ಮೇಲಿನ ಹೊರೆ ಹೊರೆ ಹೂಗಳ ಸೌಗಂಧದಿಂದ ಮಧುಶ್ರೀ ವೈಭವವನ್ನು ಮೆರೆಯಿಸುವ ಆ ತಂಪಿನ ತಾಣದಲ್ಲಿ ನಾನು ಸುಖಾಸೀನನಾದಾಗ ಒಮ್ಮೆಲೇ ಬಿರುಗಾಳಿ ಬೀಸಿತು. ಆಗ ಒಮ್ಮೆಲೇ ಆಗಸದ ಅಂಗಳದಿಂದ ಮಳೆಗಾಲದ ತುಂಬಿದ ಮೋಡದಿಂದ ಕಪ್ಪು ಕಪ್ಪಾದ ಒಂದು ಪಕ್ಷಿಯು ಇಳಿದು ಬಂದಿತು. ಅದು ಬಂದು ನನಗೆ ನಮಸ್ಕಾರ ಮಾಡಿ ಎಂದೂ ಬಾಡದ ಒಂದು ಹೊಂದಾವರೆಯ ಹೂವನ್ನು ನನ್ನ ಮುಂದೆ ತಂದು ಇರಿಸಿತು.

**'ಜಯದೇವ ಚಿದಾನಂದ ಸುಧಾ ಸಂಧೋ ಜಗತ್ಪತೇ ।**
**ಸದಾ ಸದ್ಭಾವನಾ ಸಂಘ ಕಲ್ಲೋಲಾನಂತ ವಿಗ್ರಹ ॥**
**ಕಾತ್ಯಾಯನೇ ಕುಚಾಂಭೋಜ ವರಕುಂಕುಮ ಚರ್ಚಿತ ।**
**ನಮಃ ಪ್ರಮಾಣ ರೂಪಾಯ ನಮಃ ಪ್ರಮತಿ ರೂಪಿಣೇ ॥**

ಜ್ಞಾನಾನಂದ ಸ್ವರೂಪಿಯೂ ಸುಧಾ ಸಮುದ್ರನೂ ಸದ್ಭಾವನೆಯಿಂದ ತರಂಗಿತವಾದ ದಿವ್ಯ ದೇಹವುಳ್ಳವನೂ ಜಗದೊಡೆಯನೂ ಆದ ಮಹಾದೇವರಿಗೆ ಗೆಲವು. ಪಾರ್ವತಿಯ ಎದೆಯ ಕುಂಕುಮಲೇಪನದಿಂದ ಚರ್ಚಿತಾರ್ಚಿತನಾದ ಪ್ರಮಾಣಗಳಿಗೆ ಸಿಲುಕದ, ಜ್ಞಾನಸ್ವರೂಪಿಯಾದ ಮಹದೇವನಿಗೆ ನಮೋನಮಃ ಎಂದು ಸ್ತೋತ್ರಮಾಡಿತು. ಅದರ ಭಾವಪೂರ್ಣವಾದ ಮಧುರ ಕಂಠದ ಈ ಸ್ತೋತ್ರವನ್ನು ಕೇಳಿ ಪರಮ ಪ್ರೀತನಾಗಿ ನಾನು ಕೇಳಿದೆ- ''ಪಕ್ಷಿಶ್ರೇಷ್ಠ, ನೀನು ಯಾರು? ನಿನ್ನ ದೇಹವೆನೋ ಹಂಸದಂತೆ ಕಾಣುತ್ತದೆ. ಆದರೆ ಬಣ್ಣವು ಮಾತ್ರ ಕಾಗೆಯಂತೆ ಕಡು ಕಪ್ಪು. ಅರಸಂಚೆಯ ಆಕಾರದ ನಿನಗೆ ಈ ಕಪ್ಪು ಬಣ್ಣ ಹೇಗೆ ಬಂದಿತು? ನೀನು ಇಲ್ಲಿಗೆ ಏತಕ್ಕಾಗಿ ಬಂದೆ? ಬಂದ ಉದ್ದೇಶ ಏನು? ಎಂದು ಕೇಳಿದ.

ಆಗ ಆ ಹಂಸ ಪಕ್ಷಿಯು ನನಗೆ ಮತ್ತೊಮ್ಮೆ ವಂದಿಸಿ ವಿನಯದಿಂದ ತಲೆ ಬಾಗಿಸಿ ಮುಳಿಯಂತಿರುವ ತನ್ನ ಕೊರಳ ದನಿಯನ್ನು ಎತ್ತರಿಸಿ ಮೃದುಮಧುರವಾದ ಮಾತಿನಿಂದ ನುಡಿಯಿತು.

**ಹಂಸ:-** ದೇವಶ್ರೇಷ್ಠನಾದ ಧೂರ್ಜಟಿಯೇ, ನಾನು ಬ್ರಹ್ಮದೇವನ ವಾಹನ, ನಮ್ಮದು ಹಂಸ ಕುಲ. ಮೊದಲು ನನ್ನದು ಹಾಲಿನಂತೆ ಅಚ್ಚ ಬಿಳಿಬಣ್ಣ. ನನಗೆ ಈ ಕಾಗೆಯಂತೆ ಕರಿಬಣ್ಣ ಬಂದುದರ ಕಾರಣವನ್ನು ಹೇಳುತ್ತೇನೆ ಕೇಳು.

ನಾನು ಕೈಲಾಸ ಪರ್ವತದ ಬಳಿಯಲ್ಲಿರುವ ಮಾನಸಸರೋವರದಲ್ಲಿ ವಾಸಿಸಿದ್ದೆ. ಅದನ್ನು ತ್ಯಜಿಸಿ ಭೂಲೋಕಕ್ಕೆ ಬಂದದ್ದೇ ನನ್ನದು ದೊಡ್ಡ ತಪ್ಪಾಯಿತು. ಒಂದು ದಿನ ನಾನು ಆಗಸದ ಅಂಗಳದಲ್ಲಿ ನನ್ನ ಹಾಲು ಬಣ್ಣದ ರೆಕ್ಕೆಗಳನ್ನು ಬೀಸುತ್ತ ಹಾಯಾಗಿ

ಹಾರುತ್ತ ಸೌರಾಷ್ಟ್ರ ದೇಶಕ್ಕೆ ಬಂದೆ. ಆ ಪಟ್ಟಣದ ಸಮೀಪದಲ್ಲಿ ಇರುವ ಒಂದು ತಿಳಿ ನೀರಿನ ಕೊಳದಲ್ಲಿ ಅನೇಕಾನೇಕ ಅರೆಬಿರಿದ ತಾವರೆಗಳ ಹಿಂಡು ನನ್ನ ಕಣ್ಣಿಗೆ ಬಿತ್ತು. ನಾನು ಪುಷ್ಕರಣಿಯಲ್ಲಿ ನುಗ್ಗಿ ಆ ಕಮಲದ ದೇಟುಗಳನ್ನು ಮುರಿದು ತಿಂದು ತೃಪ್ತನಾಗಿ ಅಲ್ಲಿಂದ ಗಗನಕ್ಕೆ ಹಾರಿದೆ. ಗಗನಾಂಗಣದಲ್ಲಿ ಹಾರುತ್ತ ತುಸು ಮಾರ್ಗಕ್ರಮಣವನ್ನು ಮಾಡುವಷ್ಟರಲ್ಲಿ ಒಮ್ಮೆಲೇ ಕೆಳಗೆ ಜಗ್ಗಿದಂತಾಗಿ ಒಮ್ಮೆಲೇ ಕೆಳಗೆ ಬಿದ್ದು ಬಿಟ್ಟೆ. ಮೂರ್ಛೆ ನನ್ನ ಮೇಲೆ ತನ್ನ ಸೆರಗನ್ನು ಹೊದಿಸಿತು. ನನ್ನ ದೇಹ ನಡುಗುತ್ತಿತ್ತು. ಮುಂದೆ ತಂಗಾಳಿ ಬೀಸತೊಡಗಿತು. ಅದರಿಂದ ನನಗೆ ಎಚ್ಚರ ಮರುಕಳಿಸಿತು. ''ಮುಗಿಲಿನಿಂದ ನಾನು ಕೆಳಗೆ ಬೀಳಲು ಕಾರಣವೇನು? ನನ್ನ ಕಪ್ಪುರದಂತೆ ಶುಭ್ರ ಕಾಂತಿಯಿಂದ ಒಪ್ಪುವ ಈ ನನ್ನ ದೇಹದಲ್ಲಿ ಒಮ್ಮೆಲೇ ಕಪ್ಪು ಬಣ್ಣವು ಹೇಗೆ ವ್ಯಾಪಿಸಿತು?'' ಹೀಗೆ ಕೌತುಕಾಕ್ರಾಂತನಾಗಿ ವಿಚಾರ ಮಾಡುತ್ತ ತಲೆಹಿಡಿದು ಕುಳಿತುಕೊಂಡೆ. ಅಷ್ಟರಲ್ಲಿ ಆಕಾಶವಾಣಿ,

**ಆಕಾಶವಾಣಿ:-** ಹಂಸಪಕ್ಷಿಯೇ, ಎದ್ದೇಳು, ನೀನು ಇಲ್ಲಿ ಕುಸಿದು ಬಿದ್ದಿದ್ದರ ಕಾರಣವನ್ನೂ ನಿನ್ನ ಧವಲಕಾಂತಿಯು ಕೃಷ್ಣವರ್ಣನಾಗಿ ಮಾರ್ಪಟ್ಟಿದ್ದರ ರಹಸ್ಯವನ್ನೂ ನಿನಗೆ ಕೂಡಲೇ ತಿಳಿಸಲಾಗುವದು.

ಈ ನಭೋವಾಣಿಯ ನಿರ್ದೇಶನದಂತೆ ನಾನು ಎದ್ದು ನಿಂತೆ. ಸರೋವರಕ್ಕೆ ಬಂದೆ. ಆ ಸರೋವರದ ಮಧ್ಯದಲ್ಲಿ ಐದು ತಾವರೆ ಹೂಗಳಿಂದ ಯುಕ್ತವಾದ ಒಂದು ಕಮಲದ ಬಳ್ಳಿಯು ತೊನೆದಾಡುತ್ತಿತ್ತು. ಅದರ ಮೇಲೆ ಅರವತ್ತು ಸಾವಿರ ಪುರುಷರು, ಎಲ್ಲರೂ ಶಂಖ, ಚಕ್ರ, ಗದಾ, ಪದ್ಮ ಮುಂತಾದ ಚಿಹ್ನೆಗಳನ್ನು ಧರಿಸಿದ್ದರು. ಎಲ್ಲರಿಗೂ ನಾಲ್ಕು ತೋಳುಗಳು. ಪ್ರತಿಯೊಬ್ಬರ ತಲೆಯ ಮೇಲೆ ಕಿರೀಟ, ಕೊರಳಲ್ಲಿ ಹಾರ, ಕಿವಿಯಲ್ಲಿ ಕುಂಡಲ. ಅವರೆಲ್ಲರಿಗೂ ನಾನು ದೂರದಿಂದಲೇ ನಮಸ್ಕಾರ ಮಾಡಿದೆ. ಅನಂತರ ನಾನು ಅವರೆಲ್ಲರಿಗೂ ನಮಸ್ಕರಿಸಿ ಐದು ಕಮಲಗಳು ಅರಳಿನಿಂತ ಆ ಪದ್ಮದ ಬಳ್ಳಿಗೆ ಪ್ರದಕ್ಷಿಣೆ ಹಾಕಿ ಆ ಪದ್ಮಿನಿಯನ್ನು ಕೇಳಿದೆ. ನನ್ನ ಪತನದ ಕಾರಣವನ್ನು ತಿಳಿಸಬೇಕು ಎಂದು ಯಾಚಿಸಿದೆ. ಆಗ ಆ ಪದ್ಮಿನಿಯು ಉತ್ತರಿಸಿದಳು.

**ಪದ್ಮಿನಿ:-** ಅರೆಸಂಚಿಯೇ, ನೀನು ನನ್ನನ್ನು ಉಲ್ಲಂಘಿಸಿ ಗಗನಾಂಗಣದಲ್ಲಿ ಉಡ್ಡಾಣವನ್ನು ಮಾಡತೊಡಗಿದೆ. ಆದುದರಿಂದ ನೀನು ಭೂಲೋಕದಲ್ಲಿ ಪತಿತನಾದೆ. ನನ್ನನ್ನು ಉಲ್ಲಂಘಿಸಿ ನಡೆದ ಪಾಪದಿಂದಲೇ ನಿನ್ನ ಕರ್ಪೂರ ಶುದ್ಧವಾದ ದೇಹದಲ್ಲಿ ಈ ಕಾಡಿಗೆ ಅರ್ಥಾತ್ ಕಪ್ಪು ಬಣ್ಣ ಬಂದಿದೆ. ನೀನು ಅಂತರಿಕ್ಷದಿಂದ ಒಮ್ಮೆಲೇ ಬಿದ್ದದ್ದನ್ನು ನೋಡಿ ನನ್ನ ಐದು ಕಮಲಗಳಲ್ಲಿ ಮಧ್ಯದ ಕಮಲವು ಮುಖರವಾಯಿತು. ಅದು ಮಾತನಾಡಲು ಬಾಯಿ ತೆರೆದಾಗ ಅದರ ಮುಖದಿಂದ ಸೂಸಿದ ಸೌಗಂಧವನ್ನು ಮೂಸಿ ನೋಡಿ ಈ ನನ್ನ ಕಮಲದ ಬಳ್ಳಿಗೆ ಮುತ್ತಿದ ಅರವತ್ತು ಸಾವಿರ ಭೃಂಗಗಳು ಸ್ವರ್ಗಲೋಕವನ್ನು ಸೇರಿದರು. ಅದೋ ಅಲ್ಲಿ ನೋಡು. ಅಂತರಿಕ್ಷದ ವಕ್ಷಸ್ಥಳದಲ್ಲಿ ಈಗ ನಿನ್ನ ಚಕ್ಷುಸ್ಸಿಗೆ ಗೋಚರವಾಗುವಂತೆ ನಿಂತುಕೊಂಡ ಆ ಅರವತ್ತು ಸಾವಿರ ಮಹಾಪುರುಷರೆಲ್ಲರೂ ನನ್ನ ಮಧ್ಯಮ ಕಮಲದ ಮುಖ ಸುವಾಸನೆಯನ್ನು ಆಘ್ರಾಣಿಸಿ ಉಧೃತರಾದ ಅರವತ್ತು ಸಹಸ್ರ ದೇವಪುರುಷರು. ಇವರದೂ ಒಂದು ಕಥೆ ಅದನ್ನು ಹೇಳುತ್ತೇನೆ ಕೇಳು.

ಈಗ ಅಂತರಿಕ್ಷದಲ್ಲಿ ನಿಂತುಕೊಂಡ ಈ ಮಹಾಪುರುಷರೆಲ್ಲರೂ ಇವರ ಹಿಂದಿನ ಏಳನೆಯ ಜನ್ಮದಲ್ಲಿ ಋಷಿಕುಮಾರರು ಆಗಿದ್ದರು. ಇದೇ ನದಿಯ ಇದೇ ಸರೋವರದ ತೀರದಲ್ಲಿ ಅವರೆಲ್ಲರೂ ದಾರುಣವಾದ ತಪಸ್ಸನ್ನು ಆಚರಿಸಿದರು. ಅವರು ತಪೋನುಷ್ಠಾನ ತತ್ಪರರಾಗಿ ಈ ಸರೋವರದ ತೀರದಲ್ಲಿ ತಪಿಸುತ್ತ ಇರುವಾಗ ಒಂದು ದಿನ ಸಂಪಿಗೆಯಂತೆ ಸುಂದರವಾದ ಮೂಗು, ಮಂದಾರದಂತೆ ರಕ್ತ ವರ್ಣ, ಚಂದ್ರನಂತೆ ಮುಖಮಂಡಲನ, ಆಕರ್ಷಕವಾದ ಚೆಲವು, ಕಾಂತಿ ಕುಂಜವನ್ನೇ ಸುರಿಸುವ ತಾರಾಣ್ಯ. ಅಸದೃಶ್ಯವಾದ ಮಾನವಲೋಕ ದುರ್ಲಭವಾದ ಲಾವಣ್ಯ ಇವುಗಳಿಂದ ಒಡಗೂಡಿದ ಓರ್ವ ಕಾಮಿನಿಯು ತನ್ನ ತೊಡೆಯ ಮೇಲೆ ವೀಣೆಯನ್ನು ಇಟ್ಟುಕೊಂಡು ಮಧುರ ಕಂಠದಿಂದ ಗಾಯನ ಮಾಡುತ್ತ ಈ ಅರಣ್ಯದಲ್ಲಿ ಕುಳಿತುಕೊಂಡಿದ್ದಳು. ಅವಳ ಕಂಠಮಾಧುರ್ಯದ ಆ ಇಂಪು ಹಾಗೂ ಅವಳ ಕೋಕಿಲೆಯು ಕೂಡ ನಾಚುವಂಥ ಧ್ವನಿ ಮಾಧುರ್ಯಗಳನ್ನು ಕೇಳಿ ಆ ಬ್ರಾಹ್ಮಣ ಕುಮಾರರೆಲ್ಲರೂ ಆಕರ್ಷಿತರಾದರು. ಚಿಗರೆಗಳಂತೆ ಗಾನ ತಾನಗಳಿಂದ ಸೆಳೆಯಲ್ಪಟ್ಟು ಆ ಹರಿಣಾಕ್ಷಿಯು ಇದ್ದಲ್ಲಿಗೆ ತೆರಳಿದರು. ಅವಳ ರೂಪ, ಅವಳ ಧ್ವನಿ, ಅವಳ ಆ ಹಾವಭಾವಗಳಿಂದ ಆ ಎಲ್ಲ ಮುನಿಕುಮಾರರು ಮುಗ್ಧರಾಗಿ ಇವಳು ನನಗೆ ಬೇಕು ನನಗೆ ಬೇಕು ಎಂದು ಪರಸ್ಪರ ಕಾದಾಡತೊಡಗಿದರು. ಅವರ ಈ ಹೆಣ್ಣಿನ ನಾದ, ಅವರ ನೀರೆಯ ಆಶೆ ವಿಪರೀತಕ್ಕೆ ಇಟ್ಟುಕೊಂಡಿತು. ಅವಳನ್ನು ಪಡೆಯಲಿಕ್ಕೆ ಆ ಎಲ್ಲ ಸೋದರರು ಪರಸ್ಪರ ಹುರುಪುಕಟ್ಟಿ ಹೋರಾಡಿ ಹೊಡೆದಾಡಿ ಪರಸ್ಪರ ಭೀಕರ ಪ್ರಹಾರವನ್ನು ಮಾಡಿ ಎಲ್ಲರೂ ಅನ್ಯೋನ್ಯ ನಿಷ್ಠುರ ಮುಷ್ಟಿ ಪ್ರಹಾರದಿಂದ ಮರಣಹೊಂದಿದರು. ಅನಂತರ ಅವರು ಅನೇಕ ವರ್ಷಗಳ ಕಾಲ ನರಕದಲ್ಲಿ ಯಮಯಾತನೆಯನ್ನು ಅನುಭವಿಸಿ ಅನಂತರ ಭೂಲೋಕದಲ್ಲಿ ಕಾರಕ ಪಕ್ಷಿಗಳಾಗಿ ಜನಿಸಿದರು.

ಆ ಪಕ್ಷಿಯ ಜನ್ಮದಲ್ಲಿಯೂ ಅವರು ತಮ್ಮ ನಿಶಿತವಾದ ಕೊಕ್ಕೆಯಿಂದ ಚುಚ್ಚಿ ಚುಚ್ಚಿ ಪ್ರಾಣಿಗಳನ್ನು ಕೊಂದು ಹಾಕಿದರು. ಅನಂತರ ಒಂದು ದಿನ ಕಾಡಿನಲ್ಲಿ ಹೊತ್ತಿಕೊಂಡ ದಳ್ಳುರಿಯ ಬೆಂಕಿಯಲ್ಲಿ ಬಿದ್ದು ಅವರೆಲ್ಲರೂ ಸುಟ್ಟು ಬೂದಿಯಾದರು. ಬಳಿಕ ಅವರೆಲ್ಲರೂ ಆನೆಯ ಜನ್ಮವನ್ನು ಹೊಂದಿ ಕಾಡಿನಲ್ಲಿ ಸೀಳುದಾರಿಯಲ್ಲಿ ನಡೆದುಬಂದ ಪಾಂಥರನ್ನು ಯಾತ್ರಿಕರನ್ನು ಹೊಡೆದು ಕೊನೆಗೆ ಒಂದು ದಿನ ಒಂದು ಜಲಾಶಯದ ವಿಷಮಿಶ್ರಿತವಾದ ನೀರನ್ನು ಕುಡಿದು ಎಲ್ಲ ಆನೆಗಳು ಮೃತವಾದವು ಬಳಿಕ ಆ ಮದ್ದಾನೆಯ ಜನ್ಮದಿಂದ ಬಿಡುಗಡೆ ಹೊಂದಿದ ಆ ಋಷಿಕುಮಾರರು ಒಂಟೆಯ ಜನ್ಮವನ್ನು ಅನಂತರ ಕತ್ತೆಯ ಜನ್ಮವನ್ನು, ಬಳಿಕ ಕೋತಿಯ ಜನ್ಮವನ್ನು ಆಮೇಲೆ ಬೆಕ್ಕಿನ ಜನ್ಮವನ್ನು ಹೊಂದಿ ಕ್ರಮವಾಗಿ ಅನೇಕ ದುಃಖಗಳನ್ನು ಅನುಭವಿಸಿ ಕೊನೆಯದಾಗಿ ದುಂಬಿಯ ಜನ್ಮವನ್ನು ಪಡೆದು ಸರೋವರದಲ್ಲಿ ವಾಸಮಾಡಿದ್ದರು. ಇಷ್ಟು ದಿನ ಇದೇ ಜಲಾಶಯದ ಹೂಗಳ ರಾಶಿಯ ಮೇಲೆ ಬಂದು ತಂಪಾಗಿ ಜೇನನ್ನು ಹೀರುತ್ತ ಹೂಗಳಿಂದ ಹೂವಿಗೆ ಹಾರುತ್ತ ಭ್ರಮರ ಜೀವನದ ಘಮಂಡಿಯಲ್ಲಿ ಸಂಚರಿಸುತ್ತಲಿರುವ ಆ ಎಲ್ಲ ದುಂಬಿಗಳು ಅರ್ಥಾತ್ ಹಿಂದಿನ ಋಷಿಕುಮಾರರು ಇಂದು ಕಮಲಿನೀ ಎಂದರೆ ಕಮಲದ ಬಳ್ಳಿಯಾಗಿ ಸರೋವರದಲ್ಲಿ ಸೌಗಂಧವನ್ನು ಸೂಸುತ್ತಲಿರುವ ಸುವಾಸನೆಯನ್ನು ಮೂಸಿ ನೋಡಿ ಅವರೆಲ್ಲರೂ ಆ ಭೃಂಗ ಜನ್ಮದಿಂದ ಮುಕ್ತರಾಗಿ ದಿವ್ಯ ಶರೀರವನ್ನು ಪಡೆದು ಇಲ್ಲಿಯೇ ಅಂತರಿಕ್ಷದಲ್ಲಿ ನಿಂತು ಕೊಂಡಿದ್ದಾರೆ.

ಪಕ್ಷಿಶ್ರೇಷ್ಠನೇ, ನನ್ನ ಸುವಾಸನೆಯ ಅಘ್ರಾಣ ಮಾತ್ರದಿಂದಲೇ ಇಷ್ಟೆಲ್ಲ ಭ್ರಮರಗಳು ಉಧೃತರಾಗಬೇಕಾದರೆ ನಾನು ಹಿಂದೆ ಏನಾಗಿರಬಹುದು ಎಂದು ನಿನ್ನಲ್ಲಿ ಕುತೂಹಲ ಉಂಟಾಗಿರಲು ಸಾಕು. ಆದುದರಿಂದ ನನಗೆ ಇಂಥ ಮಹಾತ್ಮ್ಯೆಯು ಬರಲು ಕಾರಣವನ್ನು ಹೇಳುತ್ತೇನೆ ಆಲಿಸು.

ನಾನು ಇದಕ್ಕೂ ಹಿಂದಿನ ಮೂರನೆಯ ಜನ್ಮದಲ್ಲಿ ಓರ್ವ ಬ್ರಾಹ್ಮಣನ ಮಗಳಾಗಿ ಹುಟ್ಟಿದ್ದೆ. ಆಗ ನನಗೆ 'ಸರೋಜವದನ' ಎಂದು ಹೆಸರು. ಆಗ ಗುರು ಹಿರಿಯರನ್ನು ನಾನು ಸೇವೆ ಮಾಡುತ್ತಿದ್ದೆ. 'ಪಾತಿವ್ರತ್ಯದ' ದಿವ್ಯವಾದ ನೇಮ ಒಂದನ್ನು ತಪ್ಪದೇ ಪಾಲಿಸುತ್ತಿದ್ದೆ. ಪತಿಯೇ ಪರದೇವತೆಯೆಂದು ನನ್ನ ಗಂಡನಲ್ಲಿಯೇ ಜಗದೀಶ್ವರನನ್ನು ಕಂಡುಕೊಂಡು ಪತ್ಯಂತರ್ಗತ ಪರಮಾತ್ಮನ ಸೇವೆಯಲ್ಲಿಯೇ ನನ್ನ ದೇಹವನ್ನು ಸವೆಯಿಸುತ್ತಲಿದ್ದೆ.

ಒಂದು ದಿನ ನನ್ನ ಮನೆಯ ಅಂಗಳದಲ್ಲಿ ಇರುವ ಒಂದು ಸಾರಿಕಾ ಪಕ್ಷಿಗೆ ನಾನು ಕೆಲವೊಂದು ಪದ್ಯಗಳನ್ನು ಪಾಠಮಾಡಿಸುತ್ತಲಿದ್ದೆ. ಅದನ್ನು ನೋಡಿ ನನ್ನ ಪತಿಗೆ ಕೋಪಬಂದಿತು. ಅವರು ನಾನು ತದೇಕಚಿತ್ತಳಾಗಿ ಸಾರಿಕಾ ಪಕ್ಷಿಗೆ ಶ್ಲೋಕಗಳನ್ನು ಪಾಠಮಾಡಿಸುತ್ತಿರುವದನ್ನು ನೋಡಿ ''ನೀನು ಕೂಡ ಸಾರಿಕಾ ಪಕ್ಷಿಯೇ ಆಗು'' ಎಂದು ಶಾಪ ಕೊಟ್ಟರು. ಆದರಿಂದ ನಾನು ಆ ಬ್ರಾಹ್ಮಣ ಸತೀ ಜನ್ಮವನ್ನು ಪರಿತ್ಯಜಿಸಿ ಒಂದು ಸಾರಿಕಾ ಪಕ್ಷಿಯಾಗಿ ಹುಟ್ಟಿದೆ. ನನ್ನ ಸುದೈವದಿಂದ ಹಾಗೂ ನಾನು ಜನ್ಮಾಂತರದಲ್ಲಿ ನಿರವಸ ವೃತ್ತಿಯಿಂದ ಮಾಡಿದ ಪತಿದೇವತೆಯ ಸೇವಾ ಶುಶ್ರೂಷೆಯ ಪ್ರಭಾವದಿಂದ ನಾನು ಓರ್ವ ಮುನೀಶ್ವರರ ಮನೆಯಲ್ಲಿಯೇ ಜನಿಸಿದೆ. ಆ ಮುನಿಗಳ ಕನ್ಯೆ ನಿಜವಾಗಿಯೂ ಸಾಧ್ವೀ ಶಿಖಾಮಣಿ. ಪರಮ ಯೋಗ್ಯಳಾದ ಕನ್ಯಾಮಣಿ. ಬಹಳ ಪ್ರೀತಿಯಿಂದ ನನ್ನನ್ನು ಪಾಲಿಸಿದಳು. ಪೋಷಿಸಿದಳು. ಆ ಮುನಿಗಳ ಮನೆಯಲ್ಲಿ ಮಹಾನುಭಾವರಾದ ಆ ಮುನಿಪುಂಗವರು ಪ್ರತಿದಿನವೂ ಪ್ರಾತಃಕಾಲದಲ್ಲಿ ಭಗವದ್ಗೀತೆಯ ಹತ್ತನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಲಿದ್ದರು. ಪರಮಾತ್ಮನ ವಿಭೂತಿ ರೂಪಗಳ ಬಗೆಬಗೆಯ ಬಣ್ಣನೆಯನ್ನು ಒಳಗೊಂಡ ಆ ಭಗವದ್ಗೀತೆಯ ದಶಮಾಧ್ಯಾಯವನ್ನು ನಾನು ಆ ಮುನಿಗಳ ಮನೆಯಲ್ಲಿ ಇರುವವರೆಗೂ ಪ್ರತಿ ದಿನವೂ ಪ್ರಾತಃಕಾಲದಲ್ಲಿ ಕೇಳುತ್ತಲಿದ್ದೆ. ಮುಂದೆ ನಾನು ಆ ಸಾರಿಕಾ ಜನ್ಮವನ್ನು ನೀಗಿ ಭಗವದ್ಗೀತೆಯ ದಶಮಾಧ್ಯಾಯದ ನಿತ್ಯ ಶ್ರವಣದ ಪುಣ್ಯಪ್ರಭಾವದಿಂದ ಸ್ವರ್ಗಲೋಕದಲ್ಲಿ ಅಪ್ಸರಾ ಸ್ತ್ರೀ ಆಗಿ ಜನಿಸಿದೆ.

ಆಗ 'ಪದ್ಮಾವತಿ' ಎಂದು ನನಗೆ ಪ್ರಖ್ಯಾತಿ ಇದ್ದಿತು. ಪದ್ಮ ಎಂಬ ಶ್ರೇಷ್ಠ ಅಪ್ಸರೆಯ ಗೆಳತಿಯು ನಾನು. ಒಂದು ದಿನ ನಾನು ವಿಮಾನದಲ್ಲಿ ಕುಳಿತು ಆಕಾಶ ಮಾರ್ಗದಲ್ಲಿ ಸ್ವಚ್ಛಂಧ ಸಂಚಾರಗೈಯುತ್ತಿದ್ದೆ. ಅಗ ಕೆಳಗೆ ಭೂಲೋಕದಲ್ಲಿ ಈ ಪುಣ್ಯಕರವಾದ ಸರೋವರವು ನನ್ನ ಕಣ್ಣಿಗೆ ಬಿದ್ದಿತು. ಇಲ್ಲಿಯ ನೀರು ಸ್ಪಟಿಕ ಶುದ್ಧ. ಅಮೃತಕ್ಕಿಂತ ರುಚಿಕರ. ಈ ಶುಚಿರುಚಿಯಾದ ಈ ಸರೋವರವನ್ನು ನೋಡಿ ನಾನು ಅಲ್ಲಿಯೇ ನನ್ನ ವಿಮಾನವನ್ನು ಇಳಿಸಿದೆ. ವಿಮಾನದಿಂದ ಕೆಳಗೆ ಇಳಿದು ಈ ನಿರ್ಮಲವಾದ ಜಲಾಶಯದ ನೀರಿನಲ್ಲಿ ಜಲಕ್ರೀಡೆಯಾಡಿ ಸ್ವಚ್ಛಂದ ವಾಯು ವಿಹಾರವನ್ನು ಮಾಡತೊಡಗಿದೆ. ಅಷ್ಟರಲ್ಲಿ ಮಹರ್ಷಿದೇವನಾದ ದೂರ್ವಾಸರ ಆಗಮನ. ಆ ಸ್ವಚ್ಛ ಜಲಾಶಯದ ಸಲಿಲದಲ್ಲಿ ಮೀಯುವಾಗ ನನ್ನ ಮೈ ಮೇಲೆ ತುಂಡು ಬಟ್ಟೆಯೂ ಇರಲಿಲ್ಲ.

ಆ ಅವಸ್ಥೆಯಲ್ಲಿ ನಾನು ಮುನಿಗಳ ಕಣ್ಣಿಗೆ ಬಿದ್ದುದರಿಂದ ನಾಚಿಕೆಯಾಯಿತು. ಕೂಡಲೇ ನಾನು ಕಮಲದ ಬಳ್ಳಿಯ ರೂಪವನ್ನು ಧರಿಸಿದೆ. ನನ್ನ ಎರಡು ಪಾದಗಳನ್ನು ಆ ಬಳ್ಳಿಯ ಎರಡು ಪುಷ್ಪಗಳಲ್ಲಿ ಅಡಗಿಸಿದೆ. ನನ್ನ ಎರಡು ಕೈಗಳನ್ನು ಮತ್ತೆರಡು ಕಮಲಗಳಲ್ಲಿ ಹೊಂದಿಸಿದೆ. ಐದನೆಯ ಕಮಲದಲ್ಲಿ ನನ್ನ ಮುಖವನ್ನು ಹುದುಗಿಸಿದೆ. ಪಂಚ ಪದ್ಮದ ಒಂದು ಪದ್ಮಿನಿ ಎಂದರೆ ಕಮಲದ ಬಳ್ಳಿಯಾಗಿ ನಾನು ಅಲ್ಲಿ ನಿಂತುಕೊಂಡೆ.

ಹೀಗೆ ನಾನು ಪದ್ಮಿನೀ ರೂಪದಿಂದ ಮಾರ್ಪಾಟು ಹೊಂದಿದ್ದರೂ ನಿರಸ್ತರವಾಗಿ ಪುಣ್ಯೋದಕದಲ್ಲಿ ಮೀಯುವ ನನ್ನ ಮೇಲೆ ದೂರ್ವಾಸರಿಗೆ ಕೋಪ ಬಂದಿತು. ಅವರು ಕೆಂಪಡರಿದ ಕಣ್ಣುಗಳಿಂದ ನನ್ನನ್ನು ಒಮ್ಮೆ ಕೆಕ್ಕರಿಸಿ ನೋಡಿ ಇದೇ ರೂಪದಿಂದ ನೂರುವರ್ಷಈ ಸರೋವರದಲ್ಲಿ ಹೀಗೆಯೇ ನಿಂತುಕೋ ಎಂದು ಶಾಪಕೊಟ್ಟರು. ಅವರಿಂದ ಉಪಶಾಪವನ್ನು ಪಡೆಯಬೇಕು ಎಂದು ನಾನು ಧಾವಿಸಿ ಹೋಗುವಷ್ಟರಲ್ಲಿ ಆ ಮಹಾಮುನಿ ಕ್ಷಣಾರ್ಧದಲ್ಲಿ ಅಂತರ್ಧಾನ ಹೊಂದಿದ್ದ. ಭಗವದ್ಗೀತೆಯ ದಶಮಾಧ್ಯಾಯ ಅರ್ಥಾತ್ ವಿಭೂತಿ ಅಧ್ಯಾಯದ ಪ್ರಭಾವದಿಂದ ಕಮಲದ ಬಳ್ಳಿಯ ರೂಪವನ್ನು ಹೊಂದಿದ್ದರೂ, ನನಗೆ ವಾಕ್‌ಶಕ್ತಿಯು ವಿರೂಪವಾಗಿಲ್ಲ. ಆದುದರಿಂದಲೇ ನಾನು ಪದ್ಮಿನಿಯಾಗಿ ಇದ್ದಾಗ ಮಾತನಾಡುತ್ತಿದಂತೆಯೇ ಈಗಲೂ ಅಷ್ಟೇ ಸ್ಪಷ್ಟವಾದ ವಾಣಿಯಲ್ಲಿ ಮಾತನ್ನು ಆಡುತ್ತಲಿದ್ದೇನೆ.

ಪಕ್ಷಿರಾಜ, ನೀನು ಭಗವದ್ಗೀತೆಯ ದಶಮಾಧ್ಯಾಯವನ್ನು ಜನ್ಮಾಂತರದಲ್ಲಿ ಬದುಕಿ ಇರುವವರೆಗೂ ಕೇಳಿದರೆ ಭಕ್ತಿಯಿಂದ ಅದರ ಪ್ರವಚನ, ಅದರ ಮಾಹಾತ್ಮ್ಯ ತಿಳಿದುಕೊಂಡು ಗೀತಾ ಶ್ರವಣ ಮಾಡಿದ ನನ್ನನ್ನು ಉಲ್ಲಂಘಿಸಿ ಹೋದದ್ದರಿಂದ ಆಕಾಶದಿಂದ ಕೆಳಗೆ ಉರುಳಿ ಬಿದ್ದಿರುವೆ. ಇಂದು ನನಗೂ ಕೂಡ ಈ ಶಾಪದಿಂದ ಮೋಚನ ಆಗಲಿದೆ. ಆದುದರಿಂದ ಪಕ್ಷಿರಾಜ, ನಾನು ಈಗ ಪಾರಾಯಣ ಮಾಡುತ್ತಲಿರುವ ಭಗವದ್ಗೀತೆಯ ದಶಮಾಧ್ಯಾಯವನ್ನು ನೀನು ಶ್ರವಣ ಮಾಡು. ನಿನಗೂ ಆ ದಶಮಾಧ್ಯಾಯದ ವಿಭೂತಿ ರೂಪಗಳ ಶ್ರವಣ ಮಾಡಿದ ತಕ್ಷಣದಲ್ಲಿ ಈ ಪಕ್ಷಿಜನ್ಮದಿಂದ ಮೋಕ್ಷವಾಗುತ್ತದೆ. ನಾನು ಹಿಂದಿನ ಜನ್ಮದಲ್ಲಿ ಮುನಿಪುಂಗವರ ಮನೆಯಲ್ಲಿ ಇರುವಾಗ ಸಾರಿಕೆಯಾಗಿ ಬಹುಕಾಲ ಭಗವದ್ಗೀತೆಯ ಶ್ರವಣ ಮಾಡಿದ್ದರ ಸಂಸ್ಕಾರ ಇನ್ನೂ ಅಚ್ಚಳಿಯದೇ ಉಳಿದಿದೆ. ಆದುದರಿಂದ ನಿನಗಾಗಿ ಈಗ ನಾನು ಭಗವದ್ಗೀತೆಯನ್ನು ಪಠಣಮಾಡುತ್ತೇನೆ ಕೇಳು.

ಹೀಗೆ ಹೇಳಿ ಕಮಲದ ಬಳ್ಳಿಯು ಸರೋವರದಲ್ಲಿ ತೊನೆದಾಡುತ್ತ ನಿಂತು ಕೊಂಡ ಪದ್ಮಿನಿಯು ಅರ್ಥಾತ್ ಜನ್ಮಾಂತರದಲ್ಲಿ ಪದ್ಮಾವತಿಯು ಸಂಪೂರ್ಣವಾಗಿ ಭಗವದ್ಗೀತೆಯ ದಶಮಾಧ್ಯಾಯವನ್ನು ಮಧುರ ಕಂಠದಿಂದ ವಿವರವಾಗಿ ಬಿಡಿಸಿ ಬಿಡಿಸಿ ನನ್ನ ಎದುರು ಪಾರಾಯಣ ಮಾಡಿದಳು, ಮತ್ತು ನನಗೆ ತನ್ನ ಸುಗಂಧಿಯಾದಂಥ ಒಂದು ಪದ್ಮವನ್ನು ಕೂಡ ಕೊಟ್ಟಳು. ಆ ಗಂಧಾಢ್ಯವಾದ ಆ ಪದ್ಮವನ್ನು ನಾನು ನಿನಗೆ ತಂದು ಸಮರ್ಪಿಸಿದ್ದೇನೆ.

ಹೀಗೆ ಹೇಳಿ ಆ ಪಕ್ಷಿಯು ನನ್ನ ಎದುರೇ ದೇಹತ್ಯಾಗವನ್ನು ಮಾಡಿತು. ಅದನ್ನು ಕಂಡು ನನಗೂ ಕೂಡ ಅಚ್ಚರಿಯಾಯಿತು.

**ಭೃಂಗಿರಿಟೀ:-** ಹಿಂದಿನ ಜನ್ಮದಲ್ಲಿ ಆ ಪಕ್ಷಿಯು ಬ್ರಹ್ಮದೇವರ ವಾಹನವಾದ ಹಂಸವಾಗಿದ್ದಿತು ಎಂದು ಹೇಳಿದೆ. ಬ್ರಹ್ಮಹಂಸವಾದ ಆ ಪಕ್ಷಿಯು ನಿಮ್ಮ ಎದುರು ದೇಹಪರಿತ್ಯಾಗವನ್ನು ಏಕೆ ಮಾಡಿತು? ಇದನ್ನು ಹೇಳಿರಿ. ಆ ಪಕ್ಷಿಯ ಜನ್ಮ ಜನ್ಮಾಂತರದ ಕಥೆಯನ್ನು ಕೇಳಬೇಕೆಂದು ನನಗೆ ಬಹಳ ಕೌತುಕ.

**ಮಹಾದೇವ:-**ಭೃಂಗಿರಿಟಿಯ ಮಾತನ್ನು ಕೇಳಿ ನಾನು ಹೀಗೆ ವಿವರಿಸಿದೆ. ಈ ಪಕ್ಷಿಯು ಜನ್ಮಾಂತರದಲ್ಲಿ ಒಂದು ಸದಾಚಾರ ಸಂಪನ್ನವಾದ ಬ್ರಾಹ್ಮಣ ವಂಶದಲ್ಲಿ ಸುತಪ ಎಂಬ ಹೆಸರಿನ ಬ್ರಹ್ಮಚಾರಿಯಾಗಿ ಜನಿಸಿದ್ದ. ಅವನು ಗುರುಕುಲದಲ್ಲಿ ವೇದಾಧ್ಯಯನ ಮಾಡುತ್ತಾ ಇದ್ದಾಗ ಭಕ್ತಿಯಿಂದ ಹಗಲಿರುಳು ಗುರುಗಳ ಸೇವೆಯನ್ನು ಗೈಯುತ್ತಿದ್ದ. ಒಂದು ದಿನ ಅವನ ಗುರುಗಳು ಮಲಗಿದಾಗ ತಿಳಿಯದೇ ಆ ಸುತಪನು ಗುರುಗಳನ್ನು ತುಳಿದ. ಆ ಪಾಪದಿಂದ ಅವನು ಜನ್ಮಾಂತರದಲ್ಲಿ ಸ್ವರ್ಗಲೋಕದ ಹಂಸವಾಗಿ ಹುಟ್ಟಿದ. ಮೊದಲಿನ ಜನ್ಮದಲ್ಲಿ ಅವನು ಮಾಡಿದ ವೇದಾಧ್ಯಯನ ಹಾಗೂ ಗುರುಸೇವೆಯನ್ನು ನೆನೆದು ಬ್ರಹ್ಮದೇವರು ಅವನನ್ನು ತಮ್ಮ ವಾಹನವಾದ ಹಂಸಗಳ ಗಣದಲ್ಲಿ ಸೇರಿಸಿಕೊಂಡರು. ಅದೇ ಹಂಸ ಜನ್ಮದಲ್ಲಿ ಅವನು ಗೀತೆಯ ದಶಾಮಾಧ್ಯಾಯವನ್ನು ಪ್ರತಿದಿನ ಪಾರಾಯಣ ಮಾಡುವ ಪದ್ಮಿನಿಯನ್ನು ಉಲ್ಲಂಘಿಸಿದ್ದರಿಂದ ಗಗನ ಮಾರ್ಗದಿಂದ ಅಧಃಪತಿತನಾದ. ಅನಂತರ ಆ ಪದ್ಮಿನಿಯ ಮುಖದಿಂದ ಗೀತೆಯ ಹತ್ತನೆಯ ಅಧ್ಯಾಯವನ್ನು ಶ್ರವಣ ಮಾಡಿ ಬ್ರಹ್ಮಜ್ಞಾನವನ್ನು ಪಡೆದು ಆ ವಿಭೂತಿ ಅಧ್ಯಾಯದ ಪ್ರಭಾವದಿಂದ ಓರ್ವ ವಿದ್ವಾನ್ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ. ಜನ್ಮಾಂತರದ ಸಂಸ್ಕಾರದಿಂದ ಆ ಬ್ರಾಹ್ಮಣ ಕುಮಾರನಿಗೆ ಎಳೆ ಕೂಸಿದ್ದಾಗಲೇ ಗೀತೆಯ ದಶಮಾಧ್ಯಾಯವು ಬರುತ್ತಿತ್ತು. ಮಗುವಿದ್ದಾಗಿನಿಂದ ಅವನು ಇಂದಿನವರೆಗೂ ಹಗಲಿರುಳು ಗೀತೆಯ ಹತ್ತನೆಯ ಅಧ್ಯಾಯವನ್ನು ಅರ್ಥಾನುಸಂಧಾನಪೂರ್ವಕವಾಗಿ ಉಚ್ಚರಿಸುತ್ತಲೇ ಇರುತ್ತಾನೆ. ಆ ವಿಭೂತಿ ಅಧ್ಯಾಯದ ಸತತ ಪಠಣ ಪಾರಾಯಣದ ಪ್ರಭಾವದಿಂದ ಧೀರಧೀ ಎಂಬ ಈ ಬ್ರಾಹ್ಮಣೋತ್ತಮನಿಗೆ ಶಂಖಚಕ್ರಧಾರಿಯಾದ ಶ್ರೀಹರಿಯು ಸರ್ವದಾ ಕಣ್ಣಿಗೆ ಕಾಣುತ್ತಾನೆ. ಈ ವಿಪ್ರೋತ್ತಮನು ಸ್ನೇಹಪೂರ್ಣ ದೃಷ್ಟಿಯಿಂದ ಯಾರನ್ನು ನೋಡುವನೋ ಅವರು ಸೆರಗುಡಕರಿದ್ದರೂ, ಬ್ರಾಹ್ಮಣ ಹಂತಕರಿದ್ದರೂ ಮುಕ್ತಾರುಗಾತ್ತಾರೆ. ಈ ಬ್ರಾಹ್ಮಣನ ನಿತ್ಯ ಭಗವದ್ದರ್ಶನದ ಪ್ರಭಾವವನ್ನು ತಿಳಿದು ನಾನು ಅವನನ್ನು ಕಾಶಿಪಟ್ಟಣ ಬಿಟ್ಟು ಹೋಗಬಾರದೆಂದು ನಿರ್ಬಂಧ ವಿಧಿಸಿ ತಂದು ಇರಿಸಿದ್ದೇನೆ. ಇವರು ಬೇರೆ ಊರಿಗೆ ಹೋದರೆ ಇವನ ದೃಷ್ಟಿಗೆ ಬಿದ್ದವರೆಲ್ಲರೂ ಮುಕ್ತಿಯನ್ನು ಹೊಂದಿಬಿಡುವರು. ಆದರಿಂದ ಜಗತ್ತಿನ ಪಂಚಮಹಾಪಾಪಮಾಡಿದ ಪಾತಕಿಗಳೆಲ್ಲರೂ ಮುಕ್ತಿಮಂದಿರಕ್ಕೆ ನುಗ್ಗುವಂತೆ ಆಗುವವು. ಅದಕ್ಕಾಗಿ ನಾನು ಅವನಿಗೆ ಕಾಶಿಪಟ್ಟಣ ಬಿಟ್ಟು ಬೇರೆ ಕಡೆಗೆ ಹೋಗಬಾರದೆಂದು ನಿರ್ಬಂಧವನ್ನು ಮಾಡಿದ್ದೇನೆ. ಕಾಶಿಗೆ ಬಂದು ಗಂಗಾ ಸ್ನಾನ ಮಾಡಿ ವಿಶ್ವನಾಥನ ದರ್ಶನ ಮಾಡಿಕೊಂಡು ಅವನಿಂದ ತಾರಕ ಮಂತ್ರ ಉಪದೇಶ ಪಡೆದ ಜೀವಿಗಳು ಹೀಗೂ ಮುಕ್ತರಾಗುವರು. ಇಲ್ಲಿ ಇದ್ದ ಜನರಿಗೆ ಧೀರಧೀ ವಿಪ್ರನ ದೃಷ್ಟಿಕ್ಷೇಪದಿಂದ ಬೇರೆ ಮುಕ್ತಿ ಆಗುವ ಪ್ರಮೇಯವಿಲ್ಲ. ಇವನ ಈ ಮಹಿಮೆಯನ್ನು ತಿಳಿದು ನಾನು ಇವನಿಗೆ ಪ್ರತಿದಿನವೂ

ಬಂದು ಕೈಕುಲುಕುತ್ತೇನೆ. ಇದೆಲ್ಲವೂ ಹತ್ತನೆಯ ಅಧ್ಯಾಯದ ಪಾರಾಯಣದ ಮಹಾಮಹಿಮೆ. ಈ ಕಥಾನಕದ ಶ್ರವಣ ಮಾತ್ರದಿಂದ ನರನಾರಿಯರು ಸರ್ವಪಾಪದಿಂದ ಮುಕ್ತರಾಗುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಗೀತೆಯ ಹತ್ತನೆಯ ಅಧ್ಯಾಯದ ಮಾಹಾತ್ಮ್ಯ ಎಂಬ ನೂರ ಆರವತ್ತಾರನೇಯ ಅಧ್ಯಾಯ ಮುಗಿದುದು*



## ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದ ಮಾಹಾತ್ಮ್ಯ ವರ್ಣನ

ಅಧ್ಯಾಯ - ೧೬೭

**ಪಾರ್ವತಿ :-** ಪ್ರಿಯ ಪರಮೇಶ್ವರ, ಭಗವದ್ಗೀತೆಯ ಮಹಾ ಮಹಿಮೆಯು ಶ್ರೇಯಸ್ಸಿಗೆ ಶ್ರೇಷ್ಠವಾದ ಸಾಧನ. ಅದರಲ್ಲಿಯೂ ಶ್ರೀಕೃಷ್ಣ ಪರಮಾತ್ಮನ ವಿಶ್ವರೂಪದ ಪ್ರಭಾವವನ್ನು ಬಿತ್ತರಿಸುವ ಭಗವದ್ಗೀತೆಯ ಏಕಾದಶ ಅಧ್ಯಾಯದ ಮಾಹಾತ್ಮ್ಯವನ್ನು ಶ್ರವಣಾಡಬೇಕು ಎಂದು ನನ್ನ ಹೆಬ್ಬಯಕೆ. ಆದುದರಿಂದ ನೀನು ನನಗೆ ಆ ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದ ಮಾಹಾತ್ಮ್ಯವನ್ನು ನಿರೂಪಿಸು.

**ಪರಮೇಶ್ವರ:-** ವಿಶ್ವರೂಪಾಧ್ಯಾಯ ಎಂಬ ಅಭಿದಾನವುಳ್ಳ ಭಗವದ್ಗೀತೆಯ ಏಕಾದಶ ಅಧ್ಯಾಯದ ಪ್ರಭಾವ ಹಾಗೂ ಪುಣ್ಯಫಲ ಮತ್ತು ಮಾಹಾತ್ಮ್ಯಗಳನ್ನು ಪ್ರಕಟಿಸುವ ಸಹಸ್ರಾರು ದೃಷ್ಟಾಂತಗಳೂ ಕಥಾನಕಗಳೂ ಇರುತ್ತವೆ. ಆದರೆ ಈಗ ಒಂದು ಆಖ್ಯಾನವನ್ನು ಮಾತ್ರ ನಾನು ನಿನಗಾಗಿ ನಿರೂಪಿಸುತ್ತೇನೆ ಕೇಳು.

'ಪ್ರಣೀತಾ' ಎಂಬ ನದಿಯ ದಂಡೆಯ ಮೇಲೆ ಮೇಘಂಕರ ಎಂಬ ಒಂದು ಪಟ್ಟಣ. ಬಂಗಾರದ ಭಿತ್ತಿ, ಮಣಿಮಯ ಸ್ಥಂಭ, ವೈಡೂರ್ಯದ ವೇದಿಕೆ, ಸುವರ್ಣ ಕಳಸ, ಧಾತುಮಯ ಪ್ರಾಕಾರ, ಗಗನಚುಂಬಿ ಪ್ರಾಸಾದ ಪಂಕ್ತಿ, ಸ್ವಚ್ಛವಾದ ರಾಜಬೀದಿಗಳಿಂದ ಆ ನಗರವು ಅಮರಾವತಿಯಂತೆ ಮೆರೆಯುತ್ತಿತ್ತು. ವೇದಾಧ್ಯಯನದ ಮಂಜುಳ ಘೋಷದಿಂದ ಹಾಗೂ ಬಗೆಬಗೆಯ ಮಂಗಳ ವಾದ್ಯಗಳ ಮಂದ್ರನಾದದಿಂದ ಅದು ಸರ್ವದಾಮುಖರಿತ. ಅನೇಕ ಸಭಾಮಂಟಪ, ಸರೋವರ, ಹಣ್ಣು ಕಾಯಿಗಳ ಭಾರದಿಂದ ಬಾಗಿದ ಬೀದಿಬದಿಯ ಬಗೆಬಗೆಯ ಹೆಮ್ಮರಗಳ ಸಾಲುಗಳಿಂದ ಪರಮ ರಮಣೀಯವಾಗಿ ತೋರುತ್ತಿತ್ತು ಆ ಪಟ್ಟಣ. ನಾನಾ ದೇಶದ ಜಾನಪದ ಪೌರಜನಸ್ತೋಮದಿಂದ ಶೋಭಿಸುವ ಆ ಮೇಘಂಕರ ಪುರವು ದಿಕ್ಪಾಲಕರ ನಗರದಂತೆ ಕಂಗೊಳಿಸುತ್ತಿತ್ತು.

ಆ ನಗರದಲ್ಲಿ ಸಾರಂಗಪಾಣಿ ಎಂಬ ಹೆಸರಿನ ಶ್ರೀ ಹರಿಯ ಒಂದು ದಿವ್ಯ ಭವ್ಯವಾದ ಮೂರ್ತಿಯು ನಗರದ ಮಧ್ಯಭಾಗದಲ್ಲಿ ತಲೆಯೆತ್ತಿ ನಿಂತಿರುತ್ತದೆ. ಅನೇಕ ಮುತ್ತು ರತ್ನ ಸುವರ್ಣ ಆಭರಣಗಳಿಂದ ಅಲಂಕೃತವಾದ ಆ ಸಾರಂಗಪಾಣಿಯ ಸುಂದರ ಪ್ರತಿಮೆಯು ಮಿಂಚಿನ ಗೊಂಚಲಗಳಿಂದ ಹೊಳೆಯುವ ಮೇಘ ಮಂಡಲದಂತೆ ರಾರಾಜಿಸುತ್ತಿದೆ. ಆ ನಗರದಲ್ಲಿ ಮೇಖಲಾ ಎಂಬ ಪರಮ ಪವಿತ್ರವಾದ ಒಂದು ನದೀ ತೀರ್ಥವಿದೆ.

ಆ ನದಿಯಲ್ಲಿ ಸ್ನಾನಮಾಡಿ ಸಾರಂಗಪಾಣಿ ದೇವರನ್ನು ಅರ್ಚಿಸಿದವರಿಗೆ ಶ್ರೀ ವಿಷ್ಣುವಿನ ಪರಮಪದ ಪ್ರಾಪ್ತಿ ನಿಶ್ಚಿತ.

ಆ ಪುಣ್ಯಪುರಿಯಲ್ಲಿ ಸುಪ್ರತಿಷ್ಠಿತನಾದ ಶ್ರೀ ನರಸಿಂಹ ದೇವರನ್ನು ಸೇವಿಸಿದವರು ಏಳು ಜನ್ಮಗಳ ಪಾಪಗಳಿಂದ ಮುಕ್ತರಾಗುತ್ತಾರೆ. ಅಲ್ಲಿಯ ಮೇಖಲಾ ತೀರ್ಥದ ದಂಡೆಯಲ್ಲಿ ನೆಲೆಸಿದ ಗಣಾಧೀಶನ ದರ್ಶನ ಮಾಡಿಕೊಂಡವರು ಎಲ್ಲ ವಿಘ್ನಗಳನ್ನು ದಾಟಿ ಸಮಸ್ತ ಮಂಗಳಗಳನ್ನು ಹೊಂದುತ್ತಾರೆ.

ಈ 'ಮೇಘಂಕರ' ನಗರದಲ್ಲಿ ವೇದಶಾಸ್ತ್ರ ವಿಶಾರದನಾದ 'ಸುನಂದ' ಎಂಬ ಹೆಸರಿನ ಒಬ್ಬ ವಿಪ್ರೋತ್ತಮ. ಹತ್ತು ಇಂದ್ರಿಯಗಳು, ಮನಸ್ಸು ಆ ವಿಪ್ರೋತ್ತಮನ ಅಂಕಿತದಲ್ಲಿ. ಅವನ ಚಿತ್ತ ಯಾವಾಗಲೂ ವಾಸುದೇವನತ್ತ. ಸಾರಂಗಪಾಣಿ ದೇವರ ಪಕ್ಕದಲ್ಲಿ ಕುಳಿತು ಭಗವಂತನ ವಿಶ್ವರೂಪದ ವೈಭವವನ್ನು ನಿರೂಪಿಸುವ ಭಗವದ್ಗೀತೆಯ ಏಕಾದಶ ಅಧ್ಯಾಯವನ್ನು ಆ ಬ್ರಾಹ್ಮಣ ಪಾರಾಯಣ ಮಾಡುತ್ತಲಿದ್ದ. ನಿತ್ಯನಿರಂತರವೂ ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದ ಪಠನ, ಪಾಠಣ, ಪಾರಾಯಣಗಳ ಪ್ರಭಾವದಿಂದ ಆ ಸುನಂದನು ದಿವ್ಯವಾದ ಬ್ರಹ್ಮಜ್ಞಾನವನ್ನು ಪಡೆದು ಧನ್ಯನಾದ. ಗೀತೆಯ ವಿಶ್ವರೂಪಾಧ್ಯಾಯದ ರಹಸ್ಯಾರ್ಥವನ್ನು ಚೆನ್ನಾಗಿ ಅರಿತು, ಪರಮಾನಂದ ತುಂದಿಲನಾಗಿ, ಎಲ್ಲ ಇಂದ್ರಿಯಗಳನ್ನು ಅಂತರ್ಮುಖಿಗೈದು, ಶ್ರೀಹರಿಯ ಧ್ಯಾನೈಕತಾನಲೀನಮಾನಸನಾಗಿ ದಿವ್ಯ ಸಮಾಧಿಯಲ್ಲಿ ನಿಶ್ಚಲನಾಗಿ ನಿಂತುಕೊಳ್ಳುತ್ತ ಇದ್ದ. ಆ ಸುನಂದ ಜೀವನ್ಮುಕ್ತನಂತೆ ಅವಧೂತ ಶಿಖಾಮಣಿಯಾಗಿ ಭಗವದ್ಗೀತಾ ಪಾರಾಯಣದಲ್ಲಿಯೇ ತನ್ನ ದೇಹವನ್ನು ಸವೆಯಿಸುತ್ತ ಭಗವದರ್ಪಿತ ಕಿಂಕರನಾಗಿ ಅಲ್ಲಿ ನೆಲೆಸಿದ.

ಒಂದು ದಿನ ಮಹಾಯೋಗೀಶ್ವರನಾದ ಆ ಸುನಂದ ಭಕ್ತನು ಸಿಂಹರಾಶಿಗೆ ಗುರು ಬಂದಾಗ ಗೋದಾವರೀ ಯಾತ್ರೆಗೆ ಹೊರಟ. ಮೊದಲನೆಯ ದಿನ ವಿರಜಾ ನದಿಗೆ ಆಗಮಿಸಿ ಅಲ್ಲಿಯ ದೇವತಾ ಪೂಜೆಯನ್ನು ನೆರವೇರಿಸಿದ. ಅನಂತರ ನಾಭಿತೀರ್ಥದಿಂದ ಆರಂಭಿಸಿ ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿ ದೇವತಾರ್ಚನೆ ಗೈದ. ಅನಂತರ ಲೋಕಮಾತೆಯಾದ ಕಮಲಾದೇವಿಯ ದೇವಸ್ಥಾನಕ್ಕೆ ಬಂದ. ಆ ಮಹಾತಾಯಿಯನ್ನು ಧ್ಯಾನ ಮಾಡಿ ಪ್ರಣಿಧಾನದಿಂದ ಅವಳನ್ನು ಕಂಡು ಅವಳಿಗೆ ತನ್ನ ಭಕ್ತಿಯುಕ್ತವಾದ ಪೂಜೆಯನ್ನು ಸಮರ್ಪಿಸಿದ. ತಾರಾತೀರ್ಥದಲ್ಲಿ ಸ್ನಾನಮಾಡಿ, ಕಪಿಲಾ ಸಂಗಮಕ್ಕೆ ಬಂದು, ಅಲ್ಲಿ ಮಿಂದು, ದೇವರ ದರ್ಶನ ಪಡೆದ. ಅಷ್ಟತೀರ್ಥ ಸ್ನಾನಮಾಡಿ ಪಿತೃಕಾರ್ಯವನ್ನು ನೆರವೇರಿಸಿದ.

ಕುಮಾರೇಶ್ವರನ ದಿವ್ಯ ದರ್ಶನ ತೆಗೆದುಕೊಂಡು ಕಪಿಲಾದ್ವಾರಕ್ಕೆ ಬಂದ. ಅಲ್ಲಿ ಸ್ನಾನ ಮಾಡಿ ತನ್ನ ಜನ್ಮಾಂತರಗಳ ಪಾಪವನ್ನೆಲ್ಲ ಕಳೆದುಕೊಂಡು ಮಧುಸೂದನ ದೇವಸ್ಥಾನಕ್ಕೆ ಆಗಮಿಸಿದ. ಅಲ್ಲಿ ಭಗವಂತನ ಪೂಜೆಗೈದು ಒಂದು ರಾತ್ರಿ ಅಲ್ಲಿಯೇ ಇದ್ದು ಮರುದಿನ ಪ್ರಾತಃಕಾಲದಲ್ಲಿ ಎದ್ದು ನರಸಿಂಹ ವನಕ್ಕೆ ಬಂದ. ಆ ನರಸಿಂಹ ವನದಲ್ಲಿ ಮುಂದುಗಡೆ ಇರುವ ರಾಮತೀರ್ಥದಲ್ಲಿ ಸ್ನಾನಮಾಡಿ ಪ್ರಹ್ಲಾದರಾಜರು ಪೂಜಿಸಿದ ನರಸಿಂಹದೇವರನ್ನು ಭಕ್ತಿಯಿಂದ ಪೂಜಿಸಿದ. ಒಂದು ದಿನ ಅಲ್ಲಿ ಇದ್ದು ಅನಂತರ ಅಂಬಿಕಾಪುರಕ್ಕೆ ಹೋಗಿ ಭಕ್ತಿಯಿಂದ ಆ ಅಂಬಿಕಾದೇವಿಯನ್ನು ಹೂ, ಗಂಧ, ಉಪಹಾರ, ನೈವೇದ್ಯ, ಸ್ತೋತ್ರ, ಮಂತ್ರ ಮುಂತಾದವುಗಳಿಂದ ಪೂಜೆಮಾಡಿದ. ಬಳಿಕ ಬ್ರಾಹ್ಮಣನು ಕಂಠಸ್ಥಾನ ಎಂಬ ಪಟ್ಟಣಕ್ಕೆ

ಬಂದು ಮಹಾಲಕ್ಷ್ಮೀದೇವಿಯ ದರ್ಶನ ತೆಗೆದುಕೊಂಡ. ಅನಂತರ ವಿವಾಹ ಮಂಟಪ ಎಂಬ ಪಟ್ಟಣಕ್ಕೆ ಅನೇಕ ಬ್ರಾಹ್ಮಣರ ಜೊತೆಗೆ ಕೂಡಿ ತೆರಳಿದ. ಅಲ್ಲಿ ಮನೆಮನೆಗೆ ಹೋಗಿ ತನಗೆ ವಾಸಮಾಡಲು ಸ್ಥಾನವನ್ನು ಕೇಳಿದ. ಆದರೆ ಅಲ್ಲಿ ಎಲ್ಲಿಯೂ ಅವನಿಗೆ ವಾಸಮಾಡಲು ಸ್ಥಳ ಸಿಕ್ಕಲಿಲ್ಲ. ಅವನಿಗೂ ಅವನ ಜೊತೆಗೆ ಬಂದ ಯಾತ್ರಿಕರಿಗೂ ಎಲ್ಲಿಯೂ ನಗರದಲ್ಲಿ ಒಂದು ಕೋಣೆ, ಮನೆ, ತಾಣ ದೊರಕದೆ ಎಲ್ಲರೂ ಚಿಂತೆಮಾಡತೊಡಗಿದರು.

ಈ ಬ್ರಾಹ್ಮಣ ಹಾಗೂ ಅವನ ಪರಿವಾರದವರಿಗೆ ಯಾರೂ ತಮ್ಮ ಮನೆಯಲ್ಲಿ ಅವಕಾಶವನ್ನು ಕೊಡದಿರುವಾಗ ಅವರೆಲ್ಲರೂ ಸಂಭ್ರಾಂತರಾಗಿ ನಿಂತುಕೊಂಡರು. ಆಗ ಆ ಊರಿನ ಗ್ರಾಮರಕ್ಷಕನು ಅಲ್ಲಿಗೆ ಬಂದ. ಸ್ಥಳಕ್ಕಾಗಿ ಮಿಡುಕಾಡುವ ಸುನಂದ ಬ್ರಾಹ್ಮಣ ಹಾಗೂ ಪರಿವಾರದವರು ತಮಗೆ ಒಂದು ಸ್ಥಳವನ್ನು ಒಂದು ರಾತ್ರಿ ಉಳಿದುಕೊಳ್ಳಲು ತೋರಿಸಬೇಕೆಂದು ಕೇಳಿಕೊಂಡರು. ಆಗ ಆ ಗ್ರಾಮಪಾಲನು ಒಂದು ವಿಶಾಲವಾದ ವಾಸಗೃಹವನ್ನು ಅವರಿಗೆ ತೋರಿಸಿದ. ಪ್ರಶಸ್ತವಾದ ಆ ವಿಶಾಲ ಮಂದಿರವನ್ನು ನೋಡಿ ಸುನಂದನ ಪರಿವಾರದವರಿಗೆಲ್ಲ ಹಿಗ್ಗಾಯಿತು. ಅವರೆಲ್ಲರೂ ಸಂತೋಷದಿಂದ ಆ ವಾಸಗೃಹದಲ್ಲಿ ತಂಗಿದರು. ಅಂದಿನ ರಾತ್ರಿ ಅಲ್ಲಿಯೇ ಉಳಿದರು.

ಬೆಳಗಾಗುವಷ್ಟರಲ್ಲಿ ಎಲ್ಲವೂ ವಿಪರೀತವಾಗಿತ್ತು. ಸುನಂದ ಬ್ರಾಹ್ಮಣನ ದೇಹವು ಹೊರಗೆ ಎಸೆಯಲ್ಪಟ್ಟಿತ್ತು. ಅವನ ಸಂಗಡಿಗರಾದ ಪ್ರವಾಸಿಗಳು ಯಾರೂ ಅಲ್ಲಿ ಇರಲಿಲ್ಲ. ಆಗ ಆ ಸುನಂದನು ಅಲ್ಲಿಂದ ಎದ್ದು ಹೊರಡುವಾಗ ಗ್ರಾಮಪಾಲನು ಎದುರು ಬಂದು ಭೇಟಿಯಾದ. ಮತ್ತು ಆ ಗ್ರಾಮರಕ್ಷಕನು ಸುನಂದನನ್ನು ಕಂಡು ಆಶ್ಚರ್ಯದಿಂದ ನುಡಿದ.

**ಗ್ರಾಮರಕ್ಷಕ:-** ಪುಣ್ಯಾತ್ಮ, ನೀನು ಭಾಗ್ಯಶಾಲಿ. ನಿನ್ನಲ್ಲಿ ಲೋಕೋತ್ತರವಾದ ಪ್ರಭಾವ ಇದೆ. ಆದರೆ ನಿನ್ನ ಜೊತೆಗೆ ಬಂದ ಸಹಾಯಕರಲ್ಲಿ ಒಬ್ಬರೂ ಕಾಣುವದಿಲ್ಲ. ಅವರೆಲ್ಲಿಗೆ ಹೋಗಿದ್ದಾರೆ? ನೀನಾದರೂ ಮನೆಯ ಒಳಗೆ ಮಲಗಿದ್ದೆ. ಈಗ ಹೊರಗೆ ಬಂದು ಹೇಗೆ ಬಿದ್ದಿರುವೆ? ನಿನ್ನ ಪ್ರಬಾವ ಅಸಾಧಾರಣ ಇರುವದರಲ್ಲಿ ಸಂದೇಹವಿಲ್ಲ. ನೀನು ಯಾವ ಸಿದ್ಧಿಯನ್ನು ಸ್ವಾಧೀನ ಪಡಿಸಿಕೊಂಡಿರುವೆ? ನಿನ್ನಲ್ಲಿ ಯಾವ ಮಂತ್ರಶಕ್ತಿ ಇದೆ? ನಿನ್ನಂಥ ಸಮರ್ಥರಾದ ಪುರುಷರನ್ನೆ ನಾನು ಈ ವರೆಗೆ ನೋಡಿದ್ದಿಲ್ಲ. ಯಾವ ದೇವರ ಕರುಣೆಯಿಂದ ನಿನಗೆ ಇಂಥ ಲೋಕವಿಲಕ್ಷಣವಾದ ಶಕ್ತಿಯು ಲಭಿಸಿದೆ? ಆ ದೇವತೆಯ ಕರುಣೆಯಿಂದಲೇ ನೀನು ಈ ಗ್ರಾಮದಲ್ಲಿ ನಿಲ್ಲು. ನಾನು ಮಾಡುತ್ತೇನೆ ನಿನಗೆ ಎಲ್ಲ ವಿಧವಾದ ಸೇವೆಯನ್ನು.

ಹೀಗೆ ನುಡಿದು ಆ ಗ್ರಾಮಪಾಲಕನು ಆ ಸುನಂದ ಮುನಿಯನ್ನು ಅದೇ ಗ್ರಾಮದಲ್ಲಿ ಒಂದು ಉತ್ತಮ ಸ್ಥಳದಲ್ಲಿ ಇರಲು ತಕ್ಕ ಏರ್ಪಾಡನ್ನು ಮಾಡಿದನು. ಭಕ್ತಿಯಿಂದ ಹಗಲಿರುಳೂ ಅವನ ಸರ್ವವಿಧವಾದ ಸೇವೆಯನ್ನು ಗೈದನು. ಹೀಗೆಯೇ ಎಳೆಂಟು ದಿನಗಳು ಉರುಳಿದವು.

ಮುಂದೆ ಒಂದು ದಿನ ಮುಂಜಾವು ನಸುಕು. ಅದೇ ಮುಸುಕು ತೆಗೆಯುತ್ತಿತ್ತು. ಆ ಮಂಗಳ ಸುಪ್ರಭಾತದಲ್ಲಿ ಸುನಂದ ಮುನಿಗೆ ಇರಲು ಮನೆಕೊಟ್ಟ ಗ್ರಾಮಪಾಲಕನು ಅಳುತ್ತ ಬಂದ. ತನ್ನ ಎದೆಯ ಕುದಿಯನ್ನೆಲ್ಲ ಆ ತಪಸ್ವಿಯ ಎದುರು ತೋಡಿಕೊಂಡ.

**ಗ್ರಾಮಪಾಲ:-** ವಿಪ್ರೋತ್ತಮ, ಈ ಊರಿನ ರಕ್ಕಸನು ನನ್ನ ಗುಣವಂತನಾದ ಹಾಗೂ ದೈವಭಕ್ತನಾದ ಮಗನನ್ನು ನನ್ನ ದುರ್ದೈವದಿಂದ ಕೊಂದು ತಿಂದು ಬಿಟ್ಟಿದ್ದಾನೆ.

**ಸುನಂದಮುನಿ:-** ನಿನ್ನ ಪುತ್ರನನ್ನು ಭಕ್ಷಿಸಿದ ಆ ರಕ್ಕಸನು ಎಲ್ಲಿ ಇರುತ್ತಾನೆ? ನಿನ್ನ ಪುತ್ರನನ್ನು ಆ ರಕ್ಕಸ ಕೊಂದದ್ದಾದರೂ ಹೇಗೆ?

**ಗ್ರಾಮಪಾಲ:-** ಬ್ರಾಹ್ಮಣದೇವ, ಈ ಊರಿನಲ್ಲಿ ಓರ್ವ ನರಭಕ್ಷಕನಾದ ರಾಕ್ಷಸನು ಬಹುಕಾಲದಿಂದ ವಾಸಮಾಡಿದ್ದಾನೆ. ಅವನು ಮೊದಲು ನಿತ್ಯವೂ ಪಟ್ಟಣದ ಒಳಗೆ ಬಂದು ಕೈಗೆ ಸಿಕ್ಕ ಮನುಷ್ಯರನ್ನು ಅಲ್ಲಿಯೇ ಕೊಂದು ತಿಂದುಬಿಡುತ್ತಾನೆ. ಅದನ್ನು ನೋಡಿ ಭಯಭ್ರಾಂತರಾದ ಇಲ್ಲಿಯ ನಾಗರಿಕರು ಆ ರಾಕ್ಷಸನನ್ನು ಕಂಡು ಅವನಿಗೆ ಬಿನ್ನಹ ಮಾಡಿಕೊಂಡರು.

**ನಾಗರಿಕರು:-** ರಾಕ್ಷಸೋತ್ತಮ, ನೀನು ನಮ್ಮನ್ನು ರಕ್ಷಿಸು. ನಿನಗೆ ನಾವು ಪ್ರತಿನಿತ್ಯವೂ ಒಂದು ಆಹಾರವನ್ನು ಕಲ್ಪಿಸಿಕೊಡುತ್ತೇವೆ. ಈ ಊರಿನಲ್ಲಿ ಹೊರಗಿನಿಂದ ರಾತ್ರಿ ವೇಳೆಯಲ್ಲಿ ಬಂದು ಈ ಪ್ರವಾಸಿ ಮಂದಿರಲ್ಲಿ ಗ್ರಾಮಪಾಲಕನಿಂದ ಒಳಗೆ ಸೇರಿಸಲ್ಪಟ್ಟು ನಿದ್ದೆ ಮಾಡುತ್ತಲಿರುವ ದಾರಿಕಾರರನ್ನೆಲ್ಲ ಕೊಂದು ತಿಂದುಬಿಡು.

ಹೀಗೆ ಈ ನಗರವಾಸಿಗಳೆಲ್ಲ ಕೂಡಿ ತಮ್ಮ ಪ್ರಾಣ ಉಳಿಸಿಕೊಳ್ಳಲಿಕ್ಕಾಗಿ ಆ ರಾಕ್ಷಸನಿಗೆ - ''ಅನುದಿನವೂ ಈ ವಾಸಗೃಹದಲ್ಲಿ ಮಲಗಿದವರನ್ನು ಭಕ್ಷಿಸು'' ಎಂದು ಆದೇಶ ನೀಡಿದರು.

ಅದರಿಂದ ಆ ನಗರವಾಸಿಗಳೆಲ್ಲರೂ ತಮ್ಮನ್ನು ಆ ದೈತ್ಯನು ಅನುದಿನವೂ ಬಂದು ಹೊಡೆದು ಬಡೆದು ಕೊಂದು ತಿನ್ನದಿರಲಿ ಎಂದು ಒಂದು ಯುಕ್ತಿ ಮಾಡಿದರು. ತಾವು ಪಾರಾದರು. ಆ ಊರಿನ ಒಂದು ವಿಶಾಲವಾದ ಮನೆಯನ್ನು ಅತಿಥಿ ಗೃಹ ಎಂದು ಮಾಡಿ ಅದರಲ್ಲಿ ಪರ ಊರುಗಳಿಂದ ಬಂದ ಪ್ರವಾಸಿಗರನ್ನೆಲ್ಲ ಅಲ್ಲಿಯೇ ಇಳಿಸುತ್ತಿದ್ದರು. ಈ ವಾಸಗೃಹಕ್ಕೆ ಬಂದು ಮಲಗಿ ನಿದ್ರಿಸುವವರನ್ನೆಲ್ಲ ಭಕ್ಷಿಸಲಿಕ್ಕೆ ಅವನಿಗೆ ಹೇಳಿದರು. ಅದರಂತೆ ಆ ರಾಕ್ಷಸನು ಆ ಊರಿಗೆ ಆಗಮಿಸಿ ಗ್ರಾಮಪಾಲನಿಂದ ಆ ಅತಿಥಿ ಗೃಹದಲ್ಲಿ ಪ್ರವೇಶಿಸಲ್ಪಟ್ಟ ಯಾತ್ರಿಕರನ್ನು, ಸಂಚಾರಿ ಸಾಧುಗಳನ್ನು ರಾತ್ರಿಕಾಲದಲ್ಲಿ ಕಡಿದು ಕೊಂದು ತಿಂದುಬಿಡುತ್ತಿದ್ದ. ಅದರಂತೆ ನಿನ್ನೆ ನಾವು ನಗರದಲ್ಲಿ ಎಲ್ಲಿಯೂ ವಸತಿಯು ಸಿಕ್ಕದೇ ತೊಳಲಾಡುತ್ತಿರುವ ನಿಮ್ಮನ್ನು ಕರೆತಂದು ಆ ಅತಿಥಿ ಗೃಹದಲ್ಲಿ ಪ್ರವೇಶ ಮಾಡಿಸಿದೆವು. ನಿಮಗಿಂತ ಮೊದಲು ಅಲ್ಲಿ ನಿದ್ದೆ ಹತ್ತಿ ಮಲಗಿದ ಎಷ್ಟೋ ಯಾತ್ರಿಕರನ್ನು ಆ ದುಷ್ಟ ರಕ್ಕಸನು ಭಕ್ಷಣ ಮಾಡಿದ್ದಾನೆ.

ಅದರಂತೆ ನೀವಾದರೂ ಕೂಡ ನಿನ್ನೆ ರಾತ್ರಿ ಅವನಿಗೆ ಆಹಾರವಾಗಿರುತ್ತೀರಿ ಎಂದು ನಾನು ತಿಳಿದಿದ್ದೆ. ಆದರೆ ಆ ರಕ್ಕಸನು ನೀವು ಅಲ್ಲಿಯೇ ಮಲಗಿದರೂ ನಿಮ್ಮ ಸಮೀಪಕ್ಕೂ ಸುಳಿದಿಲ್ಲ. ನೀವು ಆ ರಾಕ್ಷಸನಿಗೆ ಆಹಾರವಾಗದೇ ಸುರಕ್ಷಿತವಾಗಿ ಉಳಿದದ್ದೇ ನಮಗೊಂದು ಕೌತುಕ. ಆದರೆ ನಿಮ್ಮ ಜೊತೆಗೆ ಮಲಗಿದ ನಿಮ್ಮ ಸಂಗಡಿಗರನ್ನೆಲ್ಲ ಆ ರಾಕ್ಷಸನು ಕಬಳಿಸಿದಂತೆ ಕಾಣುತ್ತದೆ. ಆದರೆ ಸುದೈವದಿಂದ ನೀವು ಮಾತ್ರ ಆ ರಾಕ್ಷಸನ ಮೃತ್ಯುಮುಖದಿಂದ ಪಾರಾಗಿರುವಿರಿ. ಇದೇನೋ ಪರಮಸಂತೋಷಕರ. ಆದರೆ ನಿನ್ನೆ ಪರಸ್ಥಳದಿಂದ ನನ್ನ ಮಗನ ಓರ್ವ ಮಿತ್ರನು ಈ ಊರಿಗೆ ಆಗಮಿಸಿದ. ಅದು ನನಗೆ ಗೊತ್ತಾಗಲಿಲ್ಲ. ನಿನ್ನ ಬಂದ ಬೇರೆ ಅನೇಕ ಅತಿಥಿಗಳ ಜೊತೆಗೆ ಆ ನನ್ನ ಪುತ್ರನ ಮಿತ್ರನನ್ನು ನಾನು ಆ ಅತಿಥಿಗೃಹಕ್ಕೆ ಕಳುಹಿಸಿಕೊಟ್ಟೆ. ಈ ಸಮಾಚಾರ ನನ್ನ ಮಗನಿಗೆ ತಿಳಿಯಿತು. ಅವನು ತನ್ನ ಮಿತ್ರನನ್ನು ಕರೆಯಲು ನಿನ್ನೆ ರಾತ್ರಿ ಆ ಅತಿಥಿಗೃಹಕ್ಕೆ ಹೋಗಿದ್ದ.

ದುಷ್ಟನಾದ ರಕ್ಕಸನು ಅಲ್ಲಿ ತಂಗಿದ್ದ ಉಳಿದ ಪಾಂತಸ್ಥರೊಡನೆ ನನ್ನ ಮಗನನ್ನೂ ಕೊಂದು ಭಕ್ಷಿಸಿಬಿಟ್ಟ. ಅದನ್ನು ತಿಳಿದು ನಾನು ಇಂದು ನಸುಕಿನಲ್ಲಿಯೇ ಆ ರಕ್ಕಸನ ಬಳಿಗೆ ಹೋದೆ. ಅವನನ್ನು ಧಿಕ್ಕರಿಸಿ ನುಡಿದೆ - ''ದುಷ್ಟಭ್ರಷ್ಟನಾದ ರಾಕ್ಷಸ, ನೀನು ನಿನ್ನೆ ರಾತ್ರಿ ನನ್ನ ಹೊಟ್ಟೆಯ ಮಗನನ್ನು ಕೊಂದು ನಿನ್ನ ಹೊಟ್ಟೆಯಲ್ಲಿ ಹಾಕಿಕೊಂಡೆ. ಆ ನನ್ನ ಮಗನು ಬದುಕಿ ಬರಲು ಏನಾದರೂ ಉಪಾಯವಿದ್ದರೆ ತಿಳಿಸು.

**ರಾಕ್ಷಸ:-** ಗ್ರಾಮಪಾಲ, ಆ ವಾಸಗೃಹದಲ್ಲಿ ನಿನ್ನೆ ರಾತ್ರಿ ನಿನ್ನ ಮಗನು ಇರುತ್ತಾನೆ ಎಂಬುದು ನನಗೇನು ಗೊತ್ತು? ಆ ವಾಸಗೃಹದಲ್ಲಿ ತಂಗಿದವರನ್ನೆಲ್ಲ ತಿನ್ನು ಎಂದು ನೀನೇ ನನಗೆ ಹೇಳಿದೆ. ಅದರಂತೆ ನಾನು ನಿನ್ನ ಮಗನೆಂದು ತಿಳಿಯದೇ ಉಳಿದೆಲ್ಲ ಪ್ರಯಾಣಿಕರ ಜೊತೆಗೆ ನಿನ್ನ ಮಗನನ್ನೂ ನಾನು ವಧೆಗೈದು ಭಕ್ಷಿಸಿಬಿಟ್ಟೆ. ಆದರೆ ಇದಕ್ಕೆ ಒಂದು ಉಪಾಯವಿದೆ. ನಾನು ಭಕ್ಷಣೆ ಮಾಡಿದವರೆಲ್ಲರೂ ನನ್ನ ಹೊಟ್ಟೆಯಿಂದ ಹೊರಬಿದ್ದು ಬದುಕಿಬರಲಿಕ್ಕೆ ಒಂದು ಉಪಾಯವನ್ನು ಬ್ರಹ್ಮದೇವರು ಹೇಳಿ ಇಟ್ಟಿದ್ದಾನೆ. ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯವನ್ನು ಪ್ರತಿದಿನವೂ ಪಠಣ ಮಾಡುವ ಬ್ರಾಹ್ಮಣ ಪ್ರಭಾವದಿಂದ ನನ್ನ ಹೊಟ್ಟೆಯಲ್ಲಿ ಇದ್ದವರೆಲ್ಲರೂ ಬದುಕಿ ಬರುತ್ತಾರೆ.

**ಗ್ರಾಮಪಾಲ:-** ಗೀತೆಯ ಏಕಾದಶ ಅಧ್ಯಾಯದ ಸಾಮರ್ಥ್ಯವು ಇಷ್ಟು ಅತ್ಯದ್ಭುತ ಹೇಗೆ ಇರುತ್ತದೆ?

**ರಾಕ್ಷಸ:-** ಪೂರ್ವಕಾಲದಲ್ಲಿ ಒಂದು ಹದ್ದು ಬಾಯಲ್ಲಿ ಒಂದು ಮೂಳೆಯ ತುಂಡನ್ನು ಹಿಡಿದುಕೊಂಡು ಮುಗಿಲಿನಲ್ಲಿ ಹಾರುತ್ತ ಹೊರಟಿತ್ತು. ಹಾರುವ ರಭಸದಲ್ಲಿ ಅದು ಚುಂಚುವಿನಲ್ಲಿ ಹಿಡಿದ ಅಸ್ಥಿಯ ತುಣುಕು ಒಮ್ಮೆಲೇ ಕೆಳಗೆ ನೆಲದ ಮೇಲಿನ ಒಂದು ಜಲಾಶಯದಲ್ಲಿ ಬಂದು ಬಿದ್ದಿತು. ಅಲ್ಲಿಯೇ ಸಮೀಪದಲ್ಲಿ ಜಪಮಾಡುತ್ತ ಕುಳಿತ ಓರ್ವ ಮುನೀಶ್ವರನು ಇದನ್ನು ನೋಡಿದ. ಹದ್ದಿನ ಬಾಯಿಂದ ಜಾರಿಬಿದ್ದ ಮೂಳೆಯ ತುಣುಕು ಪರಮ ಪವಿತ್ರ ಅಂಥ ಪವಿತ್ರವಾದ ಆಸ್ತಿಖಂಡವು ಬಿದ್ದ ತೀರ್ಥವೂ ಕೂಡ ಅತ್ಯಂತ ಪವಿತ್ರ ಎಂದು ತಿಳಿದು ಅಲ್ಲಿಗೆ ಧಾವಿಸಿ ಬಂದ. ತನ್ನ ಪಿತೃಗಳನ್ನು ಉದ್ದೇಶಿಸಿ ತರ್ಪಣ ನೀಡಿದ. ಆಗ ಅಲ್ಲಿ ನೆರೆದ ಜನ ಕೇಳಿದರು ''ಇದು ಹೇಗೆ ತೀರ್ಥ'' ಎಂದು. ಆಗ ಜ್ಞಾನಿಯಾದ ಆ ಮುನಿ ನುಡಿದ.

**ಜ್ಞಾನಮುನಿ:-** ''ಮೌನವ್ರತವನ್ನು ಹಿಡಿದ ಓರ್ವ ವಿಪ್ರನು ಇಂದ್ರಿಯಗಳನ್ನೆಲ್ಲ ಬಿಗಿ ಹಿಡಿದು ತ್ರಿಕಾಲಗಳಲ್ಲೆಲ್ಲ ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಲಿದ್ದ. ಅವನು ಒಮ್ಮೆ ಪ್ರಯಾಣದಲ್ಲಿ ಇದ್ದಾಗ ದಾರಿಯಲ್ಲಿ ಕಳ್ಳರು ಅವನನ್ನು ಹೊಡೆದು ಬಡಿದು ಪ್ರಾಣ ತೆಗೆದರು. ಅವನ ಮೂಳೆಯ ಒಂದು ತುಂಡನ್ನು ಹದ್ದು ಕಚ್ಚಿಕೊಂಡು ಹೊರಟಿತ್ತು. ಆಗಸದಲ್ಲಿ ಅದು ಹಾರಿ ಹೋಗುವಾಗ ಅದರ ಮುಖದಿಂದ ಆ ವೇದಾಧ್ಯಾಯಿ ಮುನಿಯ ಪವಿತ್ರವಾದ ಮೂಳೆಯು ಜಾರಿ ಜಲಾಶಯದಲ್ಲಿ ಬಿದ್ದಿತು. ಅದರಿಂದ ಇದೊಂದು ಪರಮ ಪವಿತ್ರವಾದ ತೀರ್ಥವಾಯಿತು. ಆದುದರಿಂದ ನಾನು ಅದರಲ್ಲಿ ಸ್ನಾನ ಮಾಡಿ ಪಿತೃಗಳಿಗೆ ತರ್ಪಣ ನೀಡಿದೆ.''

ಎಂದು ಆ ಮೌನಿ ಮುನಿಯು ಹೇಳಿದ ಮಾತನ್ನು ಕೇಳಿ ಎಲ್ಲರೂ ಭಕ್ತಿಯಿಂದ ಆ ಕೊಳದಲ್ಲಿ ಮುಳುಗು ಹಾಕಿದರು. ಅನಂತರ ಅಲ್ಲಿ ಸ್ನಾನ ಮಾಡಿದವರೆಲ್ಲ ದಿವ್ಯಗತಿಯನ್ನು ಹೊಂದಿದರು.

ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದ ಸಾಮರ್ಥ್ಯವು ಲೋಕೋತ್ತರವಾಗಿದೆ. ಅದರ ಪ್ರಭಾವದಿಂದ ನಾನು ಭಕ್ಷಿಸಿದ ಎಲ್ಲ ಪಾಂಥರೂ ಪ್ರಾಣ ಪೂರಣವಾಗಿ ಎಲ್ಲರೂ ಬದುಕಿ ಬರುವರು. ಮತ್ತು ನಾನು ಬಾಯಲ್ಲಿ ಹಾಕಿಕೊಂಡು ನುಂಗಲಾರದೇ ಹೊರಗೆ ತಂದು ಉಗುಳಿದ ಆ ಸುನಂದ ಬ್ರಾಹ್ಮಣನು ಇಲ್ಲಿಯೇ ನಿಂತುಕೊಂಡಿದ್ದಾನೆ. ಅವನು ಪ್ರತಿದಿನವೂ ತ್ರಿಕಾಲದಲ್ಲಿಯೂ ಗೀತೆಯ ಹನ್ನೊಂದನೆಯ ಅಧ್ಯಾಯವನ್ನು ಪಾರಾಯಣ ಮಾಡುತ್ತಲಿದ್ದ. ಈಗಲೂ ಅವನು ಗೀತೆಯ ಹನ್ನೊಂದನೆಯ ಅಧ್ಯಾಯವ್ವನು ಏಳು ಸಲ ಅಂದು ಅಭಿಮಂತ್ರಣ ಮಾಡಿ ಆ ನೀರನ್ನು ನನ್ನ ಮೇಲೆ ಪ್ರೋಕ್ಷಣ ಮಾಡಿದರೆ ನನಗೆ ಮುಕ್ತಿ ದೊರಕುವದು ಈ ರಾಕ್ಷಸಯೋನಿಯಿಂದ. ಇದರಲ್ಲಿ ಸಂದೇಹವಿಲ್ಲ.

**ಗ್ರಾಮಪಾಲ:-** ಸುನಂದ ಮುನಿಯೇ, ನಾನು ಆ ರಾಕ್ಷಸನಿಂದ ಸಂದೇಶವನ್ನು ಹೊತ್ತು ನಿನ್ನ ಬಳಿಗೆ ಬಂದಿದ್ದೇನೆ.

**ಸುನಂದ:-** ಗ್ರಾಮಪಾಲ, ರಾತ್ರಿಕಾಲದಲ್ಲಿ ಈ ನಗರದ ವಾಸಗೃಹದಲ್ಲಿ ಬಂದು ಮಲಗಿದ ಜನರನ್ನೆಲ್ಲ ತಿನ್ನವಂಥ ಕ್ರೂರ ಕರ್ಮದ ರಾಕ್ಷಸನು ಹಿಂದಿನ ಜನ್ಮದಲ್ಲಿ ಯಾವ ಪಾಪವನ್ನು ಮಾಡಿದ್ದ? ಇದನ್ನು ಹೇಳು.

**ಗ್ರಾಮಪಾಲ:-** ಈ ಗ್ರಾಮದಲ್ಲಿ ಹಿಂದೆ ಒಬ್ಬ ಬ್ರಾಹ್ಮಣ ಬೇಸಾಯ ಮಾಡುತ್ತಲಿದ್ದ. ಒಂದು ದಿನ ಅವನು ಬತ್ತದ ಗದ್ದೆಯನ್ನು ಕಾಯುತ್ತ ಹೊಲದಲ್ಲಿ ಕುಳಿತುಕೊಂಡಿದ್ದ. ಅಲ್ಲಿಯೇ ಸಮೀಪದಲ್ಲಿ ಒಂದು ರಣಹದ್ದು ಓರ್ವ ದಾರಿಹೋಕನ ಮೇಲೆ ಎರಗಿ ಹೊಡೆದು ಕೊಂದಿತು. ಬತ್ತದ ಬೆಳೆಯನ್ನು ರಕ್ಷಿಸುವದರಲ್ಲಿ ಮಗ್ನನಾದ ಈ ಬ್ರಾಹ್ಮಣ ಕಮತಿಗ ಸಮೀಪದಲ್ಲಿದ್ದರೂ ಆ ದಾರಿಕಾರನನ್ನು ಪಾರುಮಾಡಲು ಹೋಗಲಿಲ್ಲ. ಆ ರಣಹದ್ದು ಆ ಪಾಂಥಸ್ಥನನ್ನು ಹೊಡೆದು ಕೊಂದು ತಿಂದು ಮುಗಿಲಿಗೆ ಹಾರಿಹೋಯಿತು. ಇದನ್ನೆಲ್ಲ ಅಲ್ಲಿಯೇ ಒಬ್ಬ ತಪಸ್ವಿಯು ದೂರದಿಂದ ನೋಡುತ್ತಲಿದ್ದ. ಅವನಿಗೆ ಬೇಸಾಯಗಾರನಾದ ಆ ಬ್ರಾಹ್ಮಣನ ಮೇಲೆ ಕೋಪವುಕ್ಕಿ ನುಡಿದ.

**ತಾಪಸ:-** "ಬ್ರಾಹ್ಮಣಾಧಮ, ನಿನಗೆ ಧಿಕ್ಕಾರ. ನೀನೆಂಥ ಕ್ರೂರ. ನಿನ್ನ ಕಣ್ಣೆದುರೇ ಸಾಯುತ್ತಲಿರುವ ದಾರಿಕಾರನನ್ನು ಹದ್ದಿನ ಬಾಯಿಂದ ನೀನು ರಕ್ಷಿಸಲಿಲ್ಲ. ಆದುದರಿಂದ ದಯಾಶೂನ್ಯನಾದ ನೀನು ರಾಕ್ಷಸನಾಗು" ಎಂದು ಶಪಿಸಿದ. ಈ ಶಾಪಾಕ್ಷರವನ್ನು ಕೇಳಿ ಆ ಕೃಷೀವಲ ವಿಪ್ರನ ಮೈಯೆಲ್ಲ ನಡುಗತೊಡಗಿತು. ಅವನು ದೀನನಾಗಿ ನುಡಿಯತೊಡಗಿದ.

**ಕೃಷೀವಲ:-** ಪೂಜ್ಯರೇ, ನಾನು ನನ್ನ ಹೊಲದ ಬೆಳೆಯನ್ನು ಕಾಯುತ್ತ ಕುಳಿತುಕೊಂಡಿದ್ದೆ. ನಾನು ಹದ್ದು ಎರಗಿದ್ದನ್ನೂ ಪಾಂಥಸ್ಥನನ್ನು ಕೊಂದದ್ದನ್ನೂ ನೋಡಲಿಲ್ಲ. ಕ್ಷಮಿಸಬೇಕು.

**ತಾಪಸ:-** ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯವನ್ನು ಪ್ರತಿದಿನವೂ ಪಠಣ ಪಾರಾಯಣ ಮಾಡುವ ಮನುಷ್ಯನು ಅದರಿಂದ ನೀರನ್ನು ಅಭಿಮಂತ್ರಿಸಿ ನಿನ್ನ ತಲೆಯ ಮೇಲೆ ಸಿಂಪಡಿಸಿದ ಕೂಡಲೇ ನಿನಗೆ ಅದರಿಂದ ಮುಕ್ತಿಯಾಗುವದು.

**ಗ್ರಾಮಪಾಲ:-** ಹೀಗೆ ಹೇಳಿ ಆ ತಾಪಸನು ಹೊರಟುಹೋದ. ಬಳಿಕ ಕೃಷಿಕರ್ಮವನ್ನು ಮಾಡುತ್ತಲಿದ್ದ ಆ ಬ್ರಾಹ್ಮಣ ಕೂಡಲೇ ರಾಕ್ಷಸನಾದ. ಆ ರಾಕ್ಷಸನೇ ಈಗ ನಮ್ಮ ಈ ನಗರದಲ್ಲಿ ನೆಲೆಸಿ ನನ್ನ ಮಗನನ್ನು ಹಾಗೂ ಉಳಿದ ಪಾಂಥಸ್ಥರನ್ನೂ ನನ್ನ

ಮಗನ ಮಿತ್ರರನ್ನೂ ಭಕ್ಷಿಸಿದ್ದಾನೆ. ಆದುದರಿಂದ ಸುನಂದ ಬ್ರಾಹ್ಮಣ, ನೀನು ಭಗವದ್ಗೀತೆಯ ಹನ್ನೊಂದನೆಯ ಅಧ್ಯಾವನ್ನು ಪಾರಾಯಣ ಮಾಡಿ ಅದರಿಂದ ನೀರನ್ನು ಅಭಿಮಂತ್ರಿಸಿ ಈ ರಾಕ್ಷಸನ ಮೇಲೆ ಸಿಂಪಡಿಸು.

ಗ್ರಾಮಪಾಲನನ ಬಿನ್ನಹದಂತೆ ಆ ಸುನಂದ ಮುನಿಯು ಆ ರಾಕ್ಷಸನಿದ್ದಲ್ಲಿಗೆ ಬಂದು ಏಕಾದಶ ಅಧ್ಯಾಯದಿಂದ ನೀರನ್ನು ಅಭಿಮಂತ್ರಿಸಿ ಪ್ರೋಕ್ಷಣೆಮಾಡಿದ. ಗೀತೆಯ ಹನ್ನೊಂದನೆಯ ಅಧ್ಯಾಯದ ಪ್ರಭಾವದಿಂದ ಆ ರಾಕ್ಷಸನು ರಾಕ್ಷಸದೇಹವನ್ನು ತೊರೆದು ಚತುರ್ಭುಜನಾಗಿ ನಿಂತುಕೊಂಡ. ಅವನು ಭಕ್ಷಿಸಿದ ಜನರೆಲ್ಲರೂ ಪುನಃ ಬದುಕಿ ಬಂದು ಸಹಸ್ರಾರು ಸಂಖ್ಯೆಯಲ್ಲಿ ದಿವ್ಯರೂಪ ಪಡೆದು ನಿಂತರು. ಅವರೆಲ್ಲರೂ ದೇವ ವಿಮಾನವನ್ನು ಆರೋಹಣ ಮಾಡಿದರು. ಅದನ್ನು ಕಂಡು ಗಾಬರಿಯಾದ ಗ್ರಾಮಪಾಲನು ಕಣ್ಣು ಕಣ್ಣು ಬಿಡುತ್ತ ನುಡಿದ.

**ಗ್ರಾಮಪಾಲ:-** ರಾಕ್ಷಸ, ನನ್ನ ಮಗನು ಎಲ್ಲಿ? ಅದನ್ನು ನನಗೆ ತೋರಿಸು.

**ದಿವ್ಯರೂಪಿ ರಾಕ್ಷಸ:-** ಗ್ರಾಮಪಾಲ, ನಿನ್ನ ಮಗ ನಾಲ್ಕು ಬಾಹು, ದಿವ್ಯ ಮಣಿಕುಂಡಲ, ಶಾಮಸುಂದರ ವಿಗ್ರಹ, ತಾವರೆಗಣ್ಣು, ಕೈಯಲ್ಲಿ ಕಮಲ, ಮಾಣಿಕ್ಯದ ಮುಕುಟ ಮುಂತಾದವುಗಳಿಂದ ಅಲಂಕೃತನಾಗಿ ದೇವಲೋಕದ ವಿಮಾನವನ್ನು ಏರಿ ಕುಳಿತಿದ್ದಾನೆ.

ಇದನ್ನು ಕೇಳಿ ಆ ಗ್ರಾಮಪಾಲನು ವಿಮಾನದಲ್ಲಿ ಕುಳಿತ ತನ್ನ ಮಗನನ್ನು ಕೆಳಗೆ ಕರೆದು ಮನೆಯ ಕಡೆಗೆ ಎಳೆದುಕೊಂಡು ಹೊರಟ. ಆಗ ಅವನ ಮಗನು ನಕ್ಕು ನುಡಿದ.

**ಗ್ರಾಮಪಾಲಪುತ್ರ:-** ತಂದೆಯೇ, ಈ ಹಿಂದಿನ ಜನ್ಮದಲ್ಲಿ ನಾನೇನೋ ನಿನಗೆ ಮಗನಾಗಿದ್ದೆ. ಅದಕ್ಕೂ ಮೊದಲು ನೀನೇ ನನಗೆ ಮಗನಾಗಿ ಜನಿಸಿದ್ದೆ. ಈ ಪುತ್ರತ್ವ, ಎಲ್ಲವೂ ಕರ್ಮಾಧೀನ. ಆ ಕರ್ಮ ಭಗವಂತನ ಆಧೀನ. ಈ ಜನನ ಮರಣದ ಚಕ್ರಭ್ರಮಣದಲ್ಲಿ ತಂದೆಯಾಗುವುದು ಮಗನಾಗುವುದು ವಿಧಿಪ್ರಾಪ್ತ. ಆದರೆ ಈಗ ಮಾತ್ರ ನಾನು ಭಗವದ್ಗೀತೆಯ ಏಕಾದಶ ಅಧ್ಯಾಯದ ಮಹಿಮೆಯಿಂದ ದೇವತ್ವವನ್ನು ಪಡೆದಿದ್ದೇನೆ. ವಿಮಾನಾರೂಢನಾಗಿ ಸ್ವರ್ಗಕ್ಕೆ ಹೊರಟಿದ್ದೇನೆ. ನಿನ್ನ ಮಗನಾಗಿದ್ದಾಗ ನನ್ನನ್ನು ನುಂಗಿ ಹಾಕಿದ ಈ ರಾಕ್ಷಸನು ಕೂಡಾ ಅದೇ ಭಗವದ್ಗೀತೆಯ ಏಕಾದಶಾಧ್ಯಾಯದಿಂದ ಅಭಿಮಂತ್ರಿತವಾದ ನೀರಿನ ಸಂಪ್ರೋಕ್ಷಣೆಯಿಂದ ಉದ್ಧೃತನಾಗಿ ದಿವ್ಯ ದೇಹ ಪಡೆದು ಸ್ವರ್ಗಲೋಕಕ್ಕೆ ಹೊರಟು ನಿಂತಿದ್ದಾನೆ. ಆದುದರಿಂದ ನೀನು ಕೂಡ ಬದುಕಿ ಇರುವವರೆಗೆ ಗೀತಾ ಪಾರಾಯಣವನ್ನು ತಪ್ಪದೇ ಮಾಡು. ಆ ವಿಶ್ವರೂಪ ಅಧ್ಯಾಯವನ್ನು ಹಗಲಿರುಳು ಜಪಿಸು. ನೀನಗೂ ಕೂಡ ಅದರಿಂದ ನಿಶ್ಚಿತವಾಗಿಯೂ ಸ್ವರ್ಗಲೋಕ ಪ್ರಾಪ್ತಿ ಆಗುವುದು. ತಂದೆಯೇ, ಈ ಲೋಕದಲ್ಲಿ ಸಜ್ಜನರ ಸಹವಾಸ ಅತ್ಯಂತ ದುರ್ಲಭ. ನಿನ್ನ ಸುದೈವದಿಂದ ಅಂಥ ಸಾಧು ಸಜ್ಜನ ಸಂಗವು ನಿನಗೆ ಈಗ ತಾನಾಗಿ ಒದಗಿ ಬಂದಿದೆ. ಆದುದರಿಂದ ನೀನು ಈ ಸುನಂದ ಮುನೀಶ್ವರರಿಂದ ಪೂರ್ಣಬ್ರಹ್ಮನಾದ ಶ್ರೀಕೃಷ್ಣಪರಮಾತ್ಮನ ಮುಖದಿಂದ ಹೊರಹೊಮ್ಮಿದ ಭಗವದ್ಗೀತೆಯ ಅಧ್ಯಯನವನ್ನು ಮಾಡು. ಏಕಾದಶ ಅಧ್ಯಾಯವನ್ನು ಹಗಲಿರುಳೂ ಜಪಿಸು. ಯಜ್ಞ, ದಾನ, ತಪಸ್ಸು ಮುಂತಾದ ಎಲ್ಲ ಪುಣ್ಯ ಕರ್ಮಗಳಿಗಿಂತಲೂ ಭಗವದ್ಗೀತಾ ಪಾರಾಯಣವು ಅತ್ಯಂತ ಪುಣ್ಯಪ್ರದವಾಗಿದೆ.

ಹೀಗೆ ಹೇಳಿ ಆ ಗ್ರಾಮಪಾಲನ ಮಗನು ದೇವಲೋಕದ ವಿಮಾನವನ್ನು ಆರೋಹಣ ಮಾಡಿ ತನ್ನನ್ನು ತಿಂದ ಆ ರಾಕ್ಷಸ ಹಾಗೂ ತನ್ನ ಜೊತೆಗೆ ಮುನ್ನಾದಿನ ರಾಕ್ಷಸನ ಬಾಯಿಗೆ ಬಿದ್ದ ತನ್ನ ಮಿತ್ರ ಹಾಗೂ ತಮ್ಮ ಊರಿನ ವಾಸಗೃಹದಲ್ಲಿ ಮುಂಚಿನ ದಿನ ರಾತ್ರಿ ತಂಗಿದ ಉಳಿದ ಎಲ್ಲ ಪಾಂಥಸ್ಥರೂ ಮೊದಲಾದ ಉಳಿದ ಎಲ್ಲ ದಾರಿಕಾರರೊಂದಿಗೆ ಸ್ವರ್ಗಲೋಕಕ್ಕೆ ಪ್ರಯಾಣ ಬೆಳೆಸಿದ.

**ಮಹಾದೇವ:-** ಅನಂತರ, ಆ ಗ್ರಾಮಪಾಲನು ಆ ಸುನಂದ ಬ್ರಾಹ್ಮಣರ ಬಳಿಯಲ್ಲಿ ಶಿಷ್ಯತ್ವ ವಹಿಸಿ ಗೀತೆಯ ಏಕಾದಶ ಅಧ್ಯಾಯವನ್ನು ಓದಿ ಅರ್ಥ ತಿಳಿದುಕೊಂಡು ಪ್ರತಿನಿತ್ಯವೂ ಪಾರಾಯಣ, ಪಠಣವನ್ನು ತಪ್ಪದೇ ಮಾಡತೊಡಗಿದ. ಹೀಗೆ ಪ್ರತಿನಿತ್ಯ ಮಾಡಿದ ಗೀತೆಯ ಏಕಾದಶ ಅಧ್ಯಾಯದ ಅಧ್ಯಯನ ಪ್ರಭಾವದಿಂದ ಆ ಸುನಂದ ಬ್ರಾಹ್ಮಣ ಮತ್ತು ಗ್ರಾಮಾಪಾಲ ಇಬ್ಬರೂ ಪುನೀತರಾಗಿ ಇಲ್ಲಿ ಇರುವವರೆಗೆ ಭೋಗಭಾಗ್ಯಗಳನ್ನು ಅನುಭವಿಸಿ ವಿಷ್ಣುವಿನ ದಿವ್ಯವಾಸಸ್ಥಾನವನ್ನು ಹೊಂದಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದ ಮಾಹಾತ್ಮ್ಯ ವರ್ಣನ ಎಂಬ ನೂರ ಆರವತ್ತೇಳನೇಯ ಅಧ್ಯಾಯ ಮುಗಿದುದು*



## ಗೀತೆಯ ದ್ವಾದಶಾಧ್ಯಾಯ ಮಹಿಮೆ

**ಅಧ್ಯಾಯ - ೧೬೮**

**ಮಹಾದೇವ:-** ಭಾರತ ವರ್ಷದ ದಕ್ಷಿಣ ದಿಕ್ಕಿನಲ್ಲಿ ಕೊಲ್ಹಾಪುರ ಎಂಬ ಪುರಾಣ ಪ್ರಸಿದ್ಧವಾದ ಪಟ್ಟಣ ಇರುತ್ತದೆ. ಮಹಾಲಕ್ಷ್ಮಿಯ ಪ್ರತಿಷ್ಠಾನವಾದ ಆ ಕ್ಷೇತ್ರವು ಶ್ರೇಷ್ಠವಾದ ಪರಾಶಕ್ತಿಯ ಪ್ರಧಾನಪೀಠ ಎಂದು ಪ್ರಸಿದ್ಧ. ಒಂದು ದಿನ ಅಲ್ಲಿಗೆ ಒಳ್ಳೆ ಲಕ್ಷಣ ಸಂಪನ್ನನಾದ ಬಂಗಾರ ಬಣ್ಣದ ಓರ್ವ ಯುವಕ ರಾಜಕುಮಾರನು ಆಗಮಿಸಿದ. ಅಲ್ಲಿಯ ಮಣಿಕುಂಡದಲ್ಲಿ ಸ್ನಾನ ಮಾಡಿದ. ಪಿತೃಗಳಿಗೆ ತರ್ಪಣ ನೀಡಿದ. ಲಕ್ಷ್ಮೀದೇವಿಯ ದೇವಸ್ಥಾನಕ್ಕೆ ಬಂದ. ಆ ಮಹಾತಾಯಿಗೆ ಭಕ್ತಿಯಿಂದ ವಂದಿಸಿದ. ಕೈ ಜೋಡಿಸಿ ಸ್ತೋತ್ರಮಾಡಿದ.

**ರಾಜಪುತ್ರ ಉವಾಚ-**

**ಜಯತ್ಯಪಾರ ಕರುಣಾ ಶರಣ್ಯಾ ಜಗದಂಬಿಕಾ ।**
**ಕುರುವಾಣಾ ಜಗತೋ ಜನ್ಮ ಪಾಲನಂ ಕ್ಷಣಂ ದೃಶಾ ॥**

ಜಗತ್ತಿನ ಜನ್ಮ ರಕ್ಷಣ ನಾಶ ಮೂರನ್ನೂ ದೃಷ್ಟಿಕ್ಷೇಪದಿಂದ ಮಾತ್ರ ಮಾಡುವ ಶರಣಾಗತರನ್ನು ರಕ್ಷಿಸುವ ಕರುಣಾಶಾಲಿನಿಯಾದ ಜಗದಂಬೆಗೆ ಗೆಲವು.

**ಅನಂತಚರಿತೇ ತುಭ್ಯಂ ನಮಸ್ತ್ರೈಲೋಕ್ಯ ಮಾತ್ರಿಕೆ ।**
**ಭಕ್ತಕಲ್ಪಲತೇ ಮಹ್ಯಂ ಪ್ರಸೀದ ಪರಮೇಶ್ವರಿ ॥**

ಮೂರು ಲೋಕದ ತಾಯಿಯೂ ಭಕ್ತರ ಬೇಡಿಕೆಗಳನ್ನು ಈಡೇರಿಸುವ ಕಲ್ಪಲತೆಯೂ ಅನಂತ ಚರಿತ್ರವುಳ್ಳ ಪರಮೇಶ್ವರಿಯೂ ಆದ ಲಕ್ಷ್ಮೀದೇವಿ ನಿನಗೆ ನನ್ನ ನಮಸ್ಕಾರ. ನೀನು ನನ್ನ ಮೇಲೆ ಪ್ರಸನ್ನಳಾಗು.

ರಾಜಪುತ್ರನ ಈ ಸ್ತೋತ್ರದಿಂದ ಸುಪ್ರಸನ್ನಳಾಗಿ ಲಕ್ಷ್ಮಿಯು ಅವನಿಗೆ ಪ್ರತ್ಯಕ್ಷ ದರ್ಶನವನ್ನು ನೀಡಿ ನಿನಗೆ ಬೇಕಾದ ವರ ಬೇಡಿಕೋ ಎಂದು ಹೇಳಿದಳು.

**ರಾಜಪುತ್ರ:-** ತಾಯಿ, ನನ್ನ ತಂದೆಯು ಅಶ್ವಮೇಧ ಯಾಗವನ್ನು ಮಾಡುತ್ತಲಿದ್ದಾಗ ಮರಣ ಹೊಂದಿದ. ಆಗ ನಾನು ಅವನ ದೇಹವನ್ನು ಎಣ್ಣೆ ಹಚ್ಚಿ ಒಣಗಿಸಿ ಹಾಗೆಯೇ ಇರಿಸಿ ಯಜ್ಞವನ್ನು ಮುಂದುವರೆಸಿದೆ. ಅಶ್ವಮೇಧದ ಕುದುರೆಯು ಭೂಮಂಡಲವನ್ನೆಲ್ಲ ಸುತ್ತಾಡಿ ಯಜ್ಞ ಶಾಲೆಗೆ ಸುರಕ್ಷಿತವಾಗಿ ತಿರುಗಿ ಬಂದಿತ್ತು. ಅದನ್ನು ಯಜ್ಞದ ಯೂಪ ಸ್ತಂಭಕ್ಕೆ ಬಿಗಿಯಾಗಿ ಕಟ್ಟಲಾಗಿತ್ತು. ಆದರೆ ರಾತ್ರಿಕಾಲದಲ್ಲಿ ಅದಕ್ಕೆ ಬಿಗಿದು ಕಟ್ಟಿದ ಹಗ್ಗವನ್ನು ಹರಿದು ಯಾರೋ ಆ ಯಜ್ಞಾಶ್ವವನ್ನು ಕದ್ದುಕೊಂಡು ಹೋಗಿದ್ದಾರೆ. ಆಗ ಅದನ್ನು ನೋಡಿ ಖಿನ್ನರಾದ ಜನರೆಲ್ಲರೂ ಯಜ್ಞಕ್ಕಾಗಿ ಬಂದವರು ಮರಳಿ ಹೋದರು. ನನಗೆ ಏನು ಮಾಡಲೂ ತೋಚಲಿಲ್ಲ. ನನ್ನ ಪುರೋಹಿತರಿಗೂ ಋತ್ವಿಜರಿಗೂ ಹೇಳಿ ನಾನು ಈಗ ನಿನಗೆ ಶರಣು ಬಂದಿದ್ದೇನೆ. ನೀನು ನನ್ನ ಮೇಲೆ ಪ್ರಸನ್ನಳಾಗಿದ್ದರೆ ನನಗೆ ಆ ಯಜ್ಞದ ಕುದುರೆಯು ದೊರಕಿ ನಮ್ಮ ತಂದೆಯು ಪ್ರಾರಂಭಿಸಿದ ಅಶ್ವಮೇಧ ಯಾಗವನ್ನು ಪೂರ್ಣಗೊಳಿಸಲು ಅನುಗ್ರಹಿಸು. ಶರಣಾಗತ ವತ್ಸಲಳಾದ ನೀನು ನನ್ನ ತಂದೆಯು ಈ ಯಜ್ಞದ ಋಣದಿಂದ ಮುಕ್ತನಾಗುವಂತೆ ಮಾಡು.

**ಮಹಾಲಕ್ಷ್ಮೀ:-** ನನ್ನ ಈ ದೇವಸ್ಥಾನದ ಬಾಗಿಲ ಬಳಿಯಲ್ಲಿ 'ಸಿದ್ಧ ಸಮಾಧಿ' ಎಂಬ ಹೆಸರಿನಿಂದ ಪ್ರಖ್ಯಾತನಾದ ತಪಸ್ವಿಯು ಇರುತ್ತಾನೆ. ನನ್ನ ಆಜ್ಞೆಯಿಂದ ಅವನು ನಿನ್ನ ಎಲ್ಲ ಕೆಲಸಗಳನ್ನು ಸಂಪನ್ನಗೊಳಿಸುವನು.

ಅನಂತರ ಆ ರಾಜಕುಮಾರನು ಮಹಾಲಕ್ಷ್ಮಿಗೆ ವಂದಿಸಿ ಅವಳ ಆದೇಶದಂತೆ ಮುನಿಯ ಬಳಿ ಬಂದ. ಅವನ ಪಾದಾರವಿಂದಗಳಿಗೆ ವಂದಿಸಿದ. ಅವನನ್ನು ನೋಡಿದ ಕೂಡಲೇ ಆ ಸಿದ್ಧಸಮಾದಿ ತಾಪಸನು ಅವನ ಕಾರ್ಯವನ್ನು ತಿಳಿದು ನುಡಿದ ರಾಜಕುಮಾರನಿಗೆ.

**ಸಿದ್ಧ ಸಮಾಧಿ:-** ಮಹಾಲಕ್ಷ್ಮಿಯು ನಿನ್ನನ್ನು ನನ್ನ ಬಳಿ ಕಳಿಸಿದ್ದಾಳೆ. ನಾನು ಅಭೀಷ್ಟವಾದ ಕಾರ್ಯವನ್ನೆಲ್ಲ ಮಾಡಿಕೊಡುತ್ತೇನೆ.

ಹೀಗೆ ಹೇಳಿ ಆ ತಪಸ್ವಿಯು ತನ್ನ ಮಂತ್ರಬಲದಿಂದ ಎಲ್ಲ ದೇವತೆಗಳನ್ನೂ ಆಮಂತ್ರಿಸಿದ. ಅವನ ತಪೋಬಲದಿಂದ ಆಕೃಷ್ಟರಾದ ಸುರಸತ್ತಮರು ಕೈ ಕಟ್ಟಿನಿಂತರು. ಸಿದ್ಧಸಮಾಧಿ ಗಂಭೀರ ಧ್ವನಿಯಲ್ಲಿ ದೇವತೆಗಳಿಗೆ ಹೇಳಿದ.

**ಸಿದ್ಧಸಮಾಧಿ:-** ಈ ರಾಜಪುತ್ರನು ಅಶ್ವಮೇಧ ಯಜ್ಞಕ್ಕಾಗಿ ನಿಯಮಿಸಿದ ಕುದುರೆಯನ್ನು ದೇವೇಂದ್ರನು ರಾತ್ರಿಯಲ್ಲಿ ಕದ್ದೊಯ್ದಿದ್ದಾನೆ. ದೇವತೆಗಳೇ, ನೀವೀಗಲೇ ಆ ಕುದುರೆಯನ್ನು ತೆಗೆದುಕೊಂಡು ಬನ್ನಿ.

ತಪಸ್ವಿಯ ನುಡಿಯನ್ನು ಕೇಳಿ ಕೂಡಲೇ ಆ ಸುರರು ಯಜ್ಞಾಶ್ವವನ್ನು ತಂದುಕೊಟ್ಟರು. ಇದನ್ನೆಲ್ಲ ನೋಡಿ ಆ ರಾಜಕುಮಾರನು ಬೆರಗುವಡೆದು ನಿಂತ. ಆ ಸಿದ್ಧಸಮಾಧಿ ಮುನಿಗೆ ನಮಿಸಿ ನುಡಿದ.

**ರಾಜಕುಮಾರ:-** ಮುನಿಪುಂಗವ ! ದೇವತೆಗಳನ್ನು ಸ್ವರ್ಗದಿಂದ ಎಳೆ ತಂದು ಅವರ ಕೈಯಲ್ಲಿ ಕುದುರೆಯನ್ನು ತರಿಸಿದ ವಿಚಿತ್ರ ಶಕ್ತಿ ನಿನಗೆ ಹೇಗೆ ಬಂದಿತು ? ಇಂಥ

ಪ್ರಭಾವಶಾಲಿಯಾದ ಮನುಷ್ಯನನ್ನೇ ನಾನು ನನ್ನ ಜನ್ಮದಲ್ಲಿ ನೋಡಿರಲಿಲ್ಲ. ನಿನ್ನಲೋಕೋತ್ತರವಾದ ದಿವ್ಯಶಕ್ತಿಯನ್ನು ನೋಡಿದ ನಾನು ನಿನ್ನಲ್ಲಿ ಇನ್ನೊಂದು ಪ್ರಾರ್ಥನೆ ಮಾಡುತ್ತೇನೆ. ಈ ಅಶ್ವಮೇಧವನ್ನು ಮೊದಲು ಪ್ರಾರಂಭ ಮಾಡಿದವ ನನ್ನ ತಂದೆ. ಈ ಹಯಮೇಧವನ್ನು ಶುರು ಮಾಡಿದ ಬಳಿಕ ನನ್ನ ತಂದೆಯು ಮಧ್ಯದಲ್ಲಿಯ ಮಡಿದು ಹೋದ. ನಿಮ್ಮಂಥ ಪುಣ್ಯ ಪುರುಷರ ಸಹವಾಸದಿಂದ ಕದಾಚಿತ್ ನಮ್ಮ ತಂದೆಯ ಪುನರುಜ್ಜೀವನವಾಗಬಹುದೆಂದು ನಾನು ನನ್ನ ತಂದೆಯ ಮೃತದೇಹವನ್ನು ಕಾಯ್ದ ಎಣ್ಣೆಯಲ್ಲಿ ನೆನಸಿ ಒಣಗಿಸಿ ಇರಿಸಿದ್ದೇನೆ. ತಾವು ಅವನನ್ನು ಮರಳಿ ಬದುಕಿಸಬೇಕು.

ರಾಜಕುಮಾರನ ಈ ವಿಚಿತ್ರವಾದ ಬಿನ್ನಹವನ್ನು ಕೇಳಿ ಆ ಸಿದ್ಧಪುರುಷ ಮುನಿಯು ನಸುನಕ್ಕ ಮತ್ತು ನೀರನ್ನು ಅಭಿಮಂತ್ರಿಸಿ ಮೃತಶವದ ಮೇಲೆ ಪ್ರೋಕ್ಷಿಸಿದ ತಕ್ಷಣದಲ್ಲಿ ಮಹಾರಾಜನಿಗೆ ಪ್ರಾಣ ಮರುಕಳಿಸಿತು. ಅವನು ಮರಣದ ಅವಸ್ಥೆಯಿಂದ ಜೀವಂತ ಅವಸ್ಥೆಗೆ ಮರಳಿದ. ನಿದ್ದೆಯಲ್ಲಿ ಎದ್ದವರಂತೆ ಎಚ್ಚರವಾಗಿ ಕುಳಿತ, ಮತ್ತು ತನ್ನ ಎದುರು ನಿಂತುಕೊಂಡ ಸಿದ್ಧಪುರುಷನನ್ನು ಕೇಳಿದ ''ನೀನು ಯಾರು'' ಎಂದು.

ಆಗ ರಾಜಕುಮಾರನು ತನ್ನ ತಂದೆಗೆ ಎಲ್ಲ ವೃತ್ತಾಂತವನ್ನು ತಿಳಿಸಿದ. ಅದನ್ನು ಕೇಳಿ ಕೌತುಕೋತ್ತರನಾದ ಮಹಾರಾಜ ಆ ತಾಪಸೋತ್ತಮನನ್ನು ಕುರಿತು ನುಡಿದ -

**ಮಹಾರಾಜ:-** ಪುಣ್ಯಪುರುಷ, ನಿನಗೆ ಇಂಥ ಲೋಕೋತ್ತರವಾದ ಮಂತ್ರ ಸಿದ್ಧಿ ಹಾಗೂ ವಾಕ್ ಸಿದ್ಧಿಗಳು ಹೇಗೆ ಬಂದವು? ಅದನ್ನು ತಿಳಿಸು.

**ಸಿದ್ಧಸಮಾಧಿ:-** ಮಹಾರಾಜ, ನಾನು ಭಗವದ್ಗೀತೆಯ ಹನ್ನೆರಡನೇಯ ಅಧ್ಯಾಯವನ್ನು ಬೇಸರವಿಲ್ಲದೇ ಪಾರಾಯಣ ಮಾಡುತ್ತೇನೆ. ಅದರ ಪ್ರಭಾವದಿಂದ ದೇವಾಧಿದೇವತೆಗಳನ್ನು ಕರೆತಂದು ಕೆಲಸ ಮಾಡಿಸುವ ಅದ್ಭುತ ಶಕ್ತಿಯು ಪ್ರಾಪ್ತವಾಗಿದೆ ನನಗೆ.

ಈ ಮಾತನ್ನು ಕೇಳಿ ವಿಸ್ಮಿತನಾದ ಆ ಮಹಾರಾಜನು ಆ ಮುನಿಪುಂಗವನ ಬಳಿಯಲ್ಲಿಯೇ ಆ ಭಗವದ್ಗೀತೆಯ ದ್ವಾದಶಾಧ್ಯಾಯವನ್ನು ಓದಿ ಬದುಕಿ ಇರುವವರೆಗೆ ಪ್ರತಿದಿನವೂ ಪಠಣ ಪಾಠಣಾದಿಗಳನ್ನು ಮಾಡಿದ. ತನಗೆ ಪರಿಚಿತ ಬ್ರಾಹ್ಮಣ ವೃಂದದೊಂದಿಗೆ ಆ ಭಗವದ್ಗೀತೆಯ ಪಾರಾಯಣ ಪ್ರಭಾವದಿಂದ ಮುಂದೆ ಸದ್ಗತಿಯನ್ನು ಹೊಂದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಗೀತೆಯ ದ್ವಾದಶಾಧ್ಯಾಯ ಮಹಿಮೆ ಎಂಬ ನೂರ ಅರವತ್ತೆಂಟನೇಯ ಅಧ್ಯಾಯ ಮುಗಿದುದು*

—o—

ಹರಿದೀಕ್ಷಿತನ ಹೆಂಡತಿ ಹಗರಣ

ಗೀತೆಯ ಹದಿಮೂರನೆಯ ಅಧ್ಯಾಯ ಮಹಿಮೆ

ಅಧ್ಯಾಯ - ೧೬

**ಮಹಾದೇವ:-** ದೇವಿ, ಭಗವದ್ಗೀತೆಯ ಹದಿಮೂರನೆಯ ಅಧ್ಯಾಯದ ಮಹಿಮೆಯನ್ನು ಹೇಳುತ್ತೇನೆ ಕೇಳು. ದಕ್ಷಿಣ ಭಾರತದಲ್ಲಿ ತುಂಗಭದ್ರಾ ಎಂಬ ಮಹಾನದಿ ಹರಿಯುತ್ತಲಿದೆ. ಅದರ ತೀರದಲ್ಲಿ ಹರಿಹರ ಎಂಬ ರಮಣೀಯವಾದ ನಗರ. ಅಲ್ಲಿ ಹರಿಹರೇಶ್ವರ ಎಂಬ ದೇವನು ದರ್ಶನ ಮಾತ್ರದಿಂದಲೇ ಭಕ್ತರಿಗೆ ಕಲ್ಯಾಣವನ್ನು ಕರುಣಿಸುತ್ತಲಿದ್ದಾನೆ.

ಆ ನಗರದಲ್ಲಿ 'ಹರಿದೀಕ್ಷಿತ' ಎಂಬ ಒಬ್ಬ ಶ್ರೋತ್ರೀಯ ಬ್ರಾಹ್ಮಣ ಇದ್ದ. ಅವನು ತಪೋನಿಷ್ಠ, ಸ್ವಾಧ್ಯಾಯ ನಿರತ, ಹಾಗೂ ವೇದಪಾರಂಗತ, ಅವನ ಹೆಂಡತಿಯ ಹೆಸರು ದುರಾಚಾರಾ. ಅವಳು ಹೆಸರಿನಿಂದಲೂ ಕೃತಿಯಿಂದಲೂ ದುರಾಚಾರಿಯೇ ಆಗಿದ್ದಳು. ಅವಳು ತನ್ನ ಆಯುಷ್ಯದಲ್ಲಿ ಒಂದು ಸಲವೂ ಗಂಡನೊಡನೆ ಪ್ರೀತಿಯಿಂದ ಮಾತನಾಡಲಿಲ್ಲ. ಹಾಗೂ ಏಕಶಯ್ಯೆಯಲ್ಲಿ ಮಲಗಲಿಲ್ಲ. ಮನೆಯಲ್ಲಿ ಒಂದು ಕ್ಷಣವೂ ಇರದೇ ಸ್ವೈರಿಣಿಯಾದ ಅವಳು ಜಾರಿಣೀಸ್ತ್ರೀಯಂತೆ ವಿಟಪುರುಷರೊಡನೆ ಮದ್ಯಪಾನ ಮಾಡಿ, ಮನಬಂದಲ್ಲಿ ಸ್ವಚ್ಛಂದ ವಿಹಾರ ಮಾಡುತ್ತಾ ತಿರುಗುತ್ತಿದ್ದಳು. ಪತಿಯ ಸಂಬಂಧಿಕರಾದ ಬಂಧು-ಬಳಗವನ್ನೆಲ್ಲ ಪ್ರತಿದಿನವೂ ಧಿಕ್ಕರಿಸಿ ಅವಮಾನ ಮಾಡಿ ಕಳಿಸುತ್ತಿದ್ದಳು.

ಒಂದು ದಿನ ಆ ಹರಿಹರ ಪಟ್ಟಣದಲ್ಲಿ ಒಂದು ಉತ್ಸವ ನಡೆಯಿತು. ನಗರದ ತುಂಬ ನಾಗರಿಕರು ಗಡಿಬಿಡಿಯಿಂದ ಓಡಾಡುತ್ತಿದ್ದರು. ಹೀಗೆ ಆ ಹರಿಹರ ಕ್ಷೇತ್ರದಲ್ಲಿ ಮೇಲಿಂದ ಮೇಲೆ ಉತ್ಸವ ಯಜ್ಞಯಾಗಗಳು ನಡೆಯುತ್ತಿರುವದರಿಂದ ಆ ದುರಾಚಾರಿಗೆ ತನ್ನ ವಿಟಪುರಷರೊಂದಿಗೆ ಸ್ವಚ್ಛಂದ ವಿಹಾರ ಮಾಡಲು ಏಕಾಂತ ಸ್ಥಳವೇ ದೊರಕದಂತಾಯಿ. ಆಗ ಅವಳು ಸಮೀಪದ ಒಂದು ನಿರ್ಜನವಾದ ಕಾಡಿನಲ್ಲಿ ಒಂದು ಚಿಕ್ಕ ಮನೆಯನ್ನೇ ಕಟ್ಟಿಸಿ ಅಲ್ಲಿ ಲಂಪಟರಾದ ಕಾಮುಕ ತರುಣರೊಂದಿಗೆ ಸ್ವೈರವಿಹಾರದ ವಿನೋದ ವಿಲಾಸ ಮಾಡುತ್ತ ಕಾಲಕಳೆಯತೊಡಗಿದಳು. ಊರಲ್ಲಿಯ ಗಲಾಟೆ ಕಡಿಮೆ ಆದಾಗ ಮನೆಗೆ ಬಂದು ಪತಿಯನ್ನು ಪೀಡಿಸಿ ಧನ ಧಾನ್ಯಗಳನ್ನು ಕಿತ್ತುಕೊಂಡು ಹೋಗುತ್ತಿದ್ದಳು.

ಒಂದು ದಿನ ವಸಂತ ಮಾಸದ ಪ್ರಾರಂಭ. ನಾಡಿನಲ್ಲಿಯೂ ಕಾಡಿನಲ್ಲಿಯೂ ತಳಿರು ಚಿಗುರು ಕುಡಿಮಿಡಿ ದಾಗುಡಿಯಿಟ್ಟು ಕಾನನದ ಕಾವಣವೆಲ್ಲವೂ ಹೂವಿನ ಸುಗ್ಗಿಯಿಂದ ಸುಗಂಧಭರಿತವಾಗಿ ಕಂಪಿಂಪು ಸೂಸತೊಡಗಿತು. ಆಗ ಮದನ ಮದಾವೇಶದಿಂದ ಮುದಿತಳಾದ ಆ ದುರಾಚಿಯು ನಗರದಲ್ಲಿಯ ತನ್ನ ಪ್ರೀತಿಯ ವಿಟಪುರುಷರಿಗೆ ಸಂಕೇತ ಸ್ಥಾನಕ್ಕೆ ಬರಲು ಹೇಳಿ ತಾನು ರಾತ್ರಿಕಾಲದಲ್ಲಿ ಮನೆಯನ್ನು ತೊರೆದು ಅರಣ್ಯದಲ್ಲಿಯ ಏಕಾಂತ ಸ್ಥಳಕ್ಕೆ ನಡೆದಳು. ಪೂರ್ಣ ಚಂದ್ರನ ತಿಂಗಳಿನ ಕಾಂತಿಯು ಆ ವನಾಂತ ಏಕಾಂತದಲ್ಲಿ ಅವಳನ್ನು ಉನ್ಮಾದ ವಶಳನ್ನಾಗಿ ಮಾಡಿತು. ಆದರೆ ಅವಳ ಪ್ರಿಯಕರ ಆ ಸ್ಥಳಕ್ಕೆ ಯಾವದೋ ಕಾರಣಕ್ಕಾಗಿ ಬರಲಿಲ್ಲ. ಆ ನಟ್ಟಿರುಳಿನಲ್ಲಿ ದಟ್ಟ ಕಾಂತಾರದ ಮಧ್ಯದಲ್ಲಿ ಅವಳು ತನ್ನ ಪ್ರಿಯತಮನನ್ನು ಕರೆದು ಕೂಗಿ ಎಲ್ಲ ಕಡೆ ಹುಡುಕಾಡಿ ಎಲ್ಲಿಯೂ ಕಾಣದೇ ಮಿಡುಕಿದಳು. ಪ್ರೇಮೋನ್ಮತ್ತಳಾದ ಆ ಸ್ವೈರಣಿಯು ತನ್ನ ಕಾಂತನ

ಭ್ರಾಂತಿಯಿಂದ ಅಲ್ಲಿಯ ಮರ ಬಳ್ಳಿಗಳನ್ನೇ ತಬ್ಬಿಕೊಂಡು "ಎಲ್ಲಿರುವೆ ಪ್ರಿಯಾ?" ಎಂದು ಹುಚ್ಚಳಂತೆ ಕೂಗುತ್ತಿದಳು.

ಅಷ್ಟರಲ್ಲಿ ಆ ಬೆಂಗಾಡಿನ ಮಧ್ಯದಲ್ಲಿ ಮಲಗಿದ ಒಂದು ಹುಲಿಯು ಈ ದುರಾಚಾರಿಯು ಉನ್ಮತ್ತ ಪುಲಕಿತವನ್ನು ಕೇಳಿ ಎದ್ದು ಬಂದು ಅವಳನ್ನು ಹಾರಿ ಹಿಡಿಯಿತು. ಆಗ ಅವಳ ಪ್ರೇಮೋನ್ಮಾದವೆಲ್ಲವೂ ಜರ್‍ರನೇ ಇಳಿದು ಗಾಬರಿ ಆಗಿ ತನ್ನನ್ನು ಹಿಡಿದ ಹೆಬ್ಬಲಿಗೆ ಹೌಹಾರಿ ಕೇಳಿದಳು.

**ದುರಾಚಾರಿ:-** ಹುಲಿಯೇ, ನೀನೇಕೆ ನನ್ನನ್ನು ಕೊಲ್ಲ ಬಂದಿರುವೆ? ನೀನು ಯಾರು ? ನನ್ನನ್ನು ಕೊಲ್ಲುವ ಉದ್ದೇಶವೇನು?

**ಹುಲಿ:-** ದಕ್ಷಿಣ ದೇಶದ ಮಲಾಪಹಾರಿ ನದಿಯ ತೀರದಲಿ ಮುನಾಪರ್ಣ ಎಂಬ ನಗರವು ಇರುತ್ತದೆ. ಅಲ್ಲಿ ಪಂಚಲಿಂಗಿ ಪರಮೇಶ್ವರನ ಒಂದು ದಿವ್ಯ ದೇವಸ್ಥಾನವಿದೆ. ಅಲ್ಲಿ ನಾನು ಒಬ್ಬ ಬ್ರಾಹ್ಮಣ ಕುಮಾರನಾಗಿ ಹುಟ್ಟಿದ್ದೆ. ನಾನು ಕಲಿತ ವೇದ ವೇದಾಂತ ವಿದ್ಯೆಯನ್ನೆಲ್ಲ ಹಣ ತೆಗೆದುಕೊಂಡು ದುಷ್ಟಭ್ರಷ್ಟರಿಗೂ ಕಲಿಸುತ್ತಿದ್ದೆ. ಪಾಪಿಗಳ ದಾನಗಳನ್ನು ಸ್ವೀಕರಿಸುತ್ತಿದ್ದೆ. ಯಾಚಕರನ್ನು ಧಿಕ್ಕರಿಸುತ್ತಿದ್ದೆ. ಸಜ್ಜನರನ್ನು ಬಿರುನುಡಿಗಳಿಂದ ನಿಂದಿಸುತ್ತಿದ್ದೆ. ಎಲ್ಲ ಜನರನ್ನು ಉಪಹಾಸ ಮಾಡುವದರಲ್ಲಿಯೇ ನನಗೊಂದು ಆನಂದ. ಹೀಗೆ ಪರರಿಗೆ ಅಪಕಾರ, ಅಪಹಾಸ, ದ್ರೋಹ ಗೈಯುವದರಲ್ಲಿಯೇ ನನ್ನ ಜನ್ಮ ಹೋಯಿತು. ಪಾಪಕೃತ್ಯದಲ್ಲಿಯೇ ನನಗೆ ಮುಪ್ಪು ಬಂತು. ಹಲ್ಲುಬಿದ್ದವು. ಕೂದಲು ಬೆಳ್ಳಗಾದವು. ಆದರೂ ಆಶೆ ತಪ್ಪಿರಲಿಲ್ಲ. ಕೈಯಲ್ಲಿ ದರ್ಭೆ ಹಿಡಿದುಕೊಂಡು ತೀರ್ಥಕ್ಷೇತ್ರಗಳಿಗೆ ಹೋಗಿ ಜನರಿಂದ ಹಣವನ್ನು ಕಿತ್ತುಕೊಂಡು ಶ್ರಾದ್ಧ ಮಾಡಿಸುತ್ತಿದ್ದೆ.

ಹೀಗೆ ಜರಾ ಜರ್ಜರಿತ ದೇಹನಾಗಿ ಒಬ್ಬ ಬ್ರಾಹ್ಮಣನ ಮನೆಗೆ ಶ್ರಾದ್ಧ ಭೋಜನ ಮಾಡಲು ಹೊರಟಿದ್ದೆ. ದಾರಿಯಲ್ಲಿ ಒಂದು ನಾಯಿಯು ನನ್ನನ್ನು ಬೆನ್ನಟ್ಟಿ ಕಾಲು ಹಿಡಿದು ಕಚ್ಚಿತು. ಆಗ ನೆಲದ ಮೇಲೆ ನಾನು ಬಿದ್ದೆ ಮೂರ್ಛಿತನಾಗಿ. ಮತ್ತೆ ನನಗೆ ಎಚ್ಚರ ಬರಲೇ ಇಲ್ಲ. ಅದೇ ಅವಸ್ಥೆಯಲ್ಲಿಯೇ ಸತ್ತು ಹೋದೆ. ಬಳಿಕ ಈ ಕಗ್ಗಾಡಿನಲ್ಲಿ ಹುಲಿಯಾಗಿ ಹುಟ್ಟಿದ್ದೇನೆ. ನನ್ನ ಜನ್ಮಾಂತರದ ನೆನಪು ಇನ್ನೂ ಅಳಿದಿಲ್ಲ. ಹಿಂದೆ ನಾನು ಮಾಡಿದ ಪಾಪ ಇನ್ನೂ ನನ್ನ ಸ್ಮೃತಿಪಥದಲ್ಲಿ ಇದೆ. ಆದುದರಿಂದ ನಾನು ಈಗ ಹುಲಿಯಾಗಿ ಹುಟ್ಟಿದ್ದರೂ ಧಾರ್ಮಿಕರನ್ನು ತಿನ್ನುವದಿಲ್ಲ. ದೇವಭಕ್ತರನ್ನು ಮುಟ್ಟುವದಿಲ್ಲ. ಸಾಧು ಸಜ್ಜನರನ್ನು ಕಚ್ಚುವದಿಲ್ಲ. ಆಧರೆ ಪಾಪಿಗಳನ್ನೂ, ದುರಾಚಾರಿಗಳನ್ನೂ ಶೀಲಭ್ರಷ್ಟರಾದ ಸ್ತ್ರೀಯರನ್ನೂ ನಾನು ಕೊಂದು ತಿನ್ನುತ್ತೇನೆ. ನೀನು ಅಸತಿ, ಜಾರಿಣಿ, ದುಷ್ಟ ಹೆಣ್ಣು, ನಿನ್ನನ್ನು ನಾನು ಕೊಲ್ಲದೇ ಬಿಡಲಾರೆ.

ಹೀಗೆ ನುಡಿದು ಆ ಹೆಬ್ಬುಲಿಯು ಪಾಪಿ ಹೆಣ್ಣಾದ ಆ ದುರಾಚಾರೆಯನ್ನು ತನ್ನ ಕ್ರೂರವಾದ ಉಗುರುಗಳಿಂದ ಹೊಡೆದು ದೇಹವನ್ನೆಲ್ಲ ಹರಿದು ಚೂರು ಚೂರು ಮಾಡಿ ಅವಳನ್ನು ತಿಂದುಬಿಟ್ಟಿತು. ಅನಂತರ ಪಾಪಿ ದೇಹವನ್ನು ಎಂದರೆ ಯಾತನಾಮಯ ಶರೀರ ಹೊಂದಿದ ಅವಳನ್ನು ಯಮನ ಸೇವಕರು ಯಮರಾಜಧಾನಿಯಾದ ಸಂಯಮನೀಪುರಕ್ಕೆ ಕರೆದುಕೊಂಡು ಹೋದರು. ಅಲ್ಲಿ ಅನೇಕ ನರಕಗಳಲ್ಲಿ ಉರುಳಾಡಿ ಘೋರ

ಯಾತನೆಗಳನ್ನು ಅವಳು ಅನುಭವಿಸಿದಳು. ರೌರವ ಮೂತ್ರಕುಂಡ, ಮಲರಾಶಿ, ರಕ್ತದ ಮಡುವುಗಳಲ್ಲಿ ಅನೇಕ ಸಾವಿರ ವರ್ಷ ಹೊರಳಾಡಿ ಅವಳು ತನ್ನ ಮಹಾ ಪಾಪದಿಂದ ನಾಯಿ ಬೇಯಿಸುವ ಶ್ವಪಚರ ಕುಲದಲ್ಲಿ ಹುಟ್ಟಿದಳು. ನಾಯಿ ಮಾಂಸ ತಿನ್ನುವ ಆ ಪಾಪಿಗಳ ಮನೆಯಲ್ಲಿಯೇ ಬೆಳೆದಳು. ಹೀಗೆ ಕೆಲವು ಕಾಲ ಕಳೆದ ಬಳಿಕ ಶಿವನ ಅಂತಃಪುರದ ಒಡತಿಯಾದ ಜ್ರುಂಭರೌದೇವಿಯ ದೇವಸ್ಥಾನಕ್ಕೆ ಆ ಚಂಡಾಲಕನ್ನಿಕೆಯು ಹೋದಳು. ಅಲ್ಲಿ ವಾಸುದೇವ ಎಂಬ ಹೆಸರಿನ ಬ್ರಾಹ್ಮಣನನ್ನು ನೋಡಿದಳು. ಅವನು ಯಾವಾಗಲೂ ಗೀತೆಯ ಹದಿಮೂರನೆಯ ಅಧ್ಯಾಯವನ್ನು ಬಾಯಿಂದ ಪಠಿಸುತ್ತಲೇ ಇದ್ದ. ಆ ಗೀತೆಯ ತ್ರಯೋದಶಾಧ್ಯಾಯದ ಶ್ರವಣ ಮಾತ್ರದಿಂದ ಶ್ವಪಚರ ಕುಲದಲ್ಲಿ ಜನಿಸಿದ ಆ ಅಂತ್ಯಜ ಕನ್ನಿಕೆಯು ಆ ಜನ್ಮದಿಂದ ಉದ್ಧೃತಳಾದಳು. ಇದರಂತೆ ಗೀತೆಯ ಶ್ರವಣ ಮಾತ್ರದಿಂದಲೇ ಅನೇಕ ಜನ ಅಂತ್ಯಜರು ಉದ್ಧೃತರಾದರು. ಮತ್ತು ದಿವ್ಯದೇಹವನ್ನು ಪಡೆದು ಸ್ವರ್ಗಕ್ಕೆ ಹೊರಟು ಹೋದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಹರಿದೀಕ್ಷಿತನ ಹೆಂಡತಿ ಹಗರಣ ಗೀತೆಯ ಹದಿಮೂರನೆಯ ಅಧ್ಯಾಯ ಮಹಿಮೆ ಎಂಬ*
*ನೂರ ಆರವತ್ತೊಂಬತ್ತನೇಯ ಅಧ್ಯಾಯ ಮುಗಿದುದು*



## ಭಗವದ್ಗೀತೆಯ ಹದಿನಾಲ್ಕನೆಯ ಅಧ್ಯಾಯದ ಮಾಹಾತ್ಮ್ಯ

ಅಧ್ಯಾಯ - ೧೭೦

**ಮಹಾದೇವ:-** ಭವಾನಿ, ಇನ್ನು ಮುಂದೆ ಕೃಷ್ಣಗೀತೆಯ ಹದಿನಾಲ್ಕನೆಯ ಅಧ್ಯಾಯದ ವಿಷಯದಲ್ಲಿ ಒಂದು ಉಪಾಖ್ಯಾನವನ್ನು ಹೇಳುತ್ತೇನೆ ಕೇಳು.

ಈ ಭೂಲೋಕದಲ್ಲಿ ಅತ್ಯಂತ ಸುಂದರ ಭೂಖಂಡ ಎಂದು ಹೆಸರಾದ ಕಾಶ್ಮೀರ ಮಂಡಲವು ಸರಸ್ವತಿಯ ರಾಜಧಾನಿಯಂತೆ ಇರುತ್ತದೆ. ಅದೊಂದು ವಾಗ್ದೇವಿಯ ಅಧಿಷ್ಠಾನ. ಆ ಕಾಶ್ಮೀರದಲ್ಲಿ ನೆಲಿಸಿದ ಜನರೆಲ್ಲರೂ ಸಂಸ್ಕೃತದಲ್ಲಿಯೇ ತಮ್ಮ ಸರ್ವ ಲೌಕಿಕ ವ್ಯವಹಾರಗಳನ್ನು ನಿರ್ವಹಿಸುತ್ತಾರೆ. ಇಂಥ ಶಾರದಾಪೀಠ ಎನಿಸಿದ ಕಾಶ್ಮೀರ ಮಂಡಲವನ್ನು ಪೂರ್ವಕಾಲದಲ್ಲಿ ಪ್ರಚಂಡ ಪರಾಕ್ರಮಿಯಾದ ಶೌರ್ಯವರ್ಮ ಎಂಬ ಪರಾಕ್ರಮಿಯು ಆಳುತ್ತಲಿದ್ದ. ಅದೇ ಕಾಲದಲ್ಲಿ ಸಿಂಹಳ ದ್ವೀಪದಲ್ಲಿ ಸಿಂಹದಂತೆ ಪರಾಕ್ರಮಶಾಲಿಯಾದ ವಿಕ್ರಮ ವೇತಾಳ ಎಂಬ ದೊರೆಯ ಶಾಸನ ನಡೆದಿತ್ತು. ಇಬ್ಬರೂ ಒಂದೊಂದು ಸ್ವತಂತ್ರವಾದ ಭೂಖಂಡಗಳಿಗೆ ಅಧೀಶ್ವರರಾಗಿದ್ದರು. ಇಬ್ಬರೂ ಶೂರರು, ವೀರರು ಕಲಾಕೌಶಲ್ಯ ಪಾಂಡಿತ್ಯ ಕವಿತ್ವಗಳನ್ನು ಮೆಚ್ಚಿ ಪುರಸ್ಕರಿಸುವ ರಸಿಕ ರಾಜರ್ಷಿಗಳು. ಅವರಿಬ್ಬರ ಶೀಲ, ಸದ್ಗುಣ, ಅಭಿರುಚಿ, ವ್ಯವಸಾಯ ವ್ಯವಹಾರಗಳಲ್ಲಿ ಸಮಾನತೆ ಇದ್ದುದರಿಂದ ಅವರಿಬ್ಬರಲ್ಲಿಯೂ ಘನಿಷ್ಠವಾದ ಮಿತ್ರತ್ವವು ಬೆಳೆದು ಬಂದಿತು. ಇಬ್ಬರೂ ತಮ್ಮ ತಮ್ಮ ದೇಶಗಳಲ್ಲಿ ಉತ್ಪನ್ನವಾಗುವ ಒಳ್ಳೊಳ್ಳೆ ವಸ್ತುಗಳನ್ನು ಕಾಣಿಕೆಯಾಗಿ ಕಳಿಸಿಕೊಡುತ್ತಿದ್ದರು.

ಒಂದು ಸಲ ಕಾಶ್ಮೀರದ ದೊರೆಯಾದ ಶೌರ್ಯವರ್ಮನು ಸಿಂಹಳದ ಸಾಮ್ರಾಟನಾದ ವಿಕ್ರಮ ವೇತಾಳನಿಗೆ ತನ್ನ ದೇಶದಲ್ಲಿ ಉತ್ಪನ್ನವಾದ ವಿಪುಲ ನಗನಾಣ್ಯ ಮಣಿಮಾಣಿಕ್ಯ ಮುಂತಾದವುಗಳನ್ನು ಕಾಣಿಕೆಯಾಗಿ ಕಳಿಸಿಕೊಟ್ಟ. ಅದನ್ನು ನೋಡಿ ವಿಕ್ರಮ ವೇತಾಳನೂ ಕೂಡ ಸಂತುಷ್ಟನಾಗಿ ತನ್ನ ದೇಶದ ಒಳ್ಳೆ ವೇಗಗಾಮಿಯೂ ಮತ್ತು ಚುರುಕುಬುದ್ಧಿಯುಳ್ಳ ಎರಡು ನಾಯಿಗಳನ್ನು ಹಾಗೂ ಆನೆ, ಕುದುರೆ, ರತ್ನ, ಆಭರಣ, ಚಾಮರ ಮುಂತಾದ ಬೆಲೆಯುಳ್ಳ ವಸ್ತುಗಳನ್ನು ಕಾಣಿಕೆಯಾಗಿ ಕಳಿಸಿದ ಶೌರ್ಯವರ್ಮನಿಗೆ. ಸಿಂಹಳದ ದೊರೆ ಕಳಿಸಿದ ಎಲ್ಲ ವಸ್ತುಗಳಲ್ಲಿ ಶೌರ್ಯವರ್ಮನಿಗೆ ಆ ಎರಡು ಹೆಣ್ಣು ನಾಯಿಗಳು ಮೆಚ್ಚಿಗೆಯಾದವು. ಬೇಟೆಯ ಆಟದಲ್ಲಿ ಪ್ರವೀಣನಾದ ಆ ಶೌರ್ಯವರ್ಮನಿಗೆ ಚಪಲವರ್ಣದ ಚುರುಕು ಬುದ್ಧಿಯ, ಚಂಡವೇಗದ ಆ ನಾಯಿಯ ಜೋಡಿಯು ತನ್ನ ಮೃಗಯಾ ಕ್ರೀಡೆಗೆ ಅತ್ಯುಪಯುಕ್ತ ಎನಿಸಿತು.

ಕೆಲವು ದಿನಗಳು ಕಳೆದ ಬಳಿಕ ಶೌರ್ಯವರ್ಮನು ಸಮಾನ ವಯಸ್ಕರಾದ ರಾಜಕುಮಾರರೊಂದಿಗೆ ಬೇಟೆಗೆ ಆ ಎರಡೂ ಹೆಣ್ಣು ನಾಯಿಗಳನ್ನು ತೆಗೆದುಕೊಂಡು ಹೊರಟ. ಆ ಎರಡೂ ನಾಯಿಗಳ ಬಣ್ಣನೆಯನ್ನು ತನ್ನ ಮಿತ್ರರಾದ ರಾಜಪುತ್ರರೊಡನೆ ರಾಜ ಅನೇಕ ಸಲ ಮಾಡಿದ್ದ.

ಈಗ ಎಲ್ಲ ರಾಜಪುತ್ರರೂ ಕೂಡಿ ಬೇಟೆಗೆ ಹೊರಟಾಗ ಓರ್ವ ರಾಜಕುಮಾರ ನೊಡನೆ ಶೌರ್ಯವರ್ಮ ಪಣ ಕಟ್ಟಿದ. ಪಣಕ್ಕೆ ಇಟ್ಟ ಹಣದ ಮೌಲ್ಯ ಅಪರಿಮಿತ.

ರಾಜಕುಮಾರನು ಮೊದಲು ಒಂದು ಮೊಲವನ್ನು ಮುಂದೆ ಓಡಲು ಬಿಟ್ಟು ಅದನ್ನು ಹಿಡಿಯಲು ನಾಯಿಯನ್ನು ಬಿಡಲು ಶೌರ್ಯವರ್ಮನಿಗೆ ಹೇಳಿದ, ಕೂಡಲೇ ಶೌರ್ಯವರ್ಮನು ತನ್ನ ಪಲ್ಲಕ್ಕಿಯನ್ನು ಬಿಟ್ಟು ಕೆಳಗೆ ಇಳಿದು ತನ್ನ ಎರಡೂ ನಾಯಿಗಳನ್ನು ಛೂ ಬಿಟ್ಟ. ಧಾಪುಗಾಲು ಕೊಟ್ಟು ಮುಂದೆ ಮುಂದೆ ಮೊಲ, ಹಿಂದೆ ಹಿಂದೆ ಎರಡೂ ನಾಯಿಗಳು ಓಡತೊಡಗಿದವು. ರಾಜ, ಪ್ರಜಾ, ಪರಿವಾರದವರೆಲ್ಲರೂ ಈ ನಾಯಿ ಮೊಲಗಳ ಓಟದ ಸ್ಪರ್ಧೆಯನ್ನು ಕೌತುಕದಿಂದ ನಿರೀಕ್ಷಿಸುತ್ತಿದ್ದರು. ಮುಂದೆ ಹಾಗೂ ಹಿಂದೆ ಓಡುತ್ತಲಿರುವ ಆ ಎರಡೂ ಪ್ರಾಣಿಗಳು ಮಿತಿಮೀರಿದ ವೇಗದಿಂದ ಓಡುತ್ತಿರುವುದನ್ನು ಕಂಡು ಜನರೆಲ್ಲರೂ ಎದ್ದು ನಿಂತು, ಕಣ್ಣಿನ ಎವೆ ಪಿಳಿಕಿಸದೇ, ಉಸಿರು ಬಿಗಿ ಹಿಡಿದು ನಿರೀಕ್ಷಿಸುತ್ತಲಿದ್ದರು. ಮಿಂಚಿನ ವೇಗದಿಂದ ಮುಂದೆ ಮುಂದೆ ಧಾವಿಸುತ್ತಲಿದ್ದ ಮೊಲವು ಅತೀ ಆಯಾಸಗೊಂಡು ಒಮ್ಮೆಲೇ ನೆಲದ ಮೇಲೆ ಉರುಳಿ ಬಿದ್ದಿತು. ಆದರೂ ಅದು ಶೌರ್ಯವರ್ಮನ ನಾಯಿಯ ಕೈಗೆ ಸಿಗದೇ, ಮೆಲ್ಲಮೆಲ್ಲನೇ, ಮೇಲಕ್ಕೆ ಎದ್ದು ಅಮೆಗತಿಯಿಂದ ಓಡತೊಡಗಿತು. ಅದರ ಬಾಯಿಂದ ಬುರುಗು ಬೀಳುತ್ತಿತ್ತು. ಆಗ ರೋಷಗೊಂಡ ರಾಜನ ನಾಯಿಯು ವೇಗದಿಂದ ಹಾರಿ ಆ ಮೊಲವನ್ನು ನೆಲಕ್ಕೆ ಕೆಡವಿತು. ಮತ್ತು ಅದನ್ನು ಕುತ್ತಿಗೆಯಲ್ಲಿ ಹಿಡಿಯಿತು.

ಆ ಶೌರ್ಯವರ್ಮನ ಜನರು ಸ್ಪರ್ಧೆಗೆ ಇಳಿದ ಇನ್ನೊಬ್ಬ ರಾಜಕುಮಾರನ ಪರಿವಾರದವರಿಗೆ ನಾವು ಗೆದ್ದವರು ನೀವು ಬಿದ್ದವರು. ಆಕೋ ನೋಡಿರಿ ನಮ್ಮ ನಾಯಿಯ ಬಾಯಲ್ಲಿ ನಿಮ್ಮ ಮೊಲದ ಕತ್ತು ಸಿಕ್ಕಿದೆ. ಆದುದರಿಂದ ಗೆಲವು ನಮ್ಮದು ಎಂದು ಶೌರ್ಯವರ್ಮನ ಪರಿವಾರದವರೆಲ್ಲರೂ ಆನಂದದಿಂದ ಜಯಘೋಷ ಮಾಡತೊಡಗಿದರು. ಈ ಕೋಲಾಹಲದಲ್ಲಿ ನಾಯಿಯ ಮುಖದಲ್ಲಿ ಅದರ ಹಲ್ಲಿನಿಂದ

ಕಚ್ಚಿ ಹಿಡಿಯಲ್ಪಟ್ಟ ಮೊಲವು ಜಾರಿ ಕೆಳಗೆ ಬಿದ್ದಿತು. ನೆತ್ತರದ ಹನಿಗಳನ್ನು ಸುರಿಸುತ್ತಲಿರುವ ಆ ಮೊಲವು ನೆಲದ ಒಂದು ಪೊಳ್ಳು ಪದರಿನಲ್ಲಿ ಅವಿತುಕೊಂಡು ಕುಳಿತಿತು. ಆಗ ಮತ್ತಿಷ್ಟು ಸಿಟ್ಟಿಗೆದ್ದ ಶೌರ್ಯವರ್ಮನ ನಾಯಿಯು ಎಲ್ಲ ಕಡೆಯೂ ನೆಲವನ್ನು ಮೂಸಿನೋಡುತ್ತ ವಾಸನೆಯಿಂದಲೇ ಮೊಲದ ಇರುವನ್ನು ಕಂಡು ಹಿಡಿದು ಅತ್ತ ಕಡೆ ಧಾವಿಸಿತು.

ಅದನ್ನು ಕಂಡು ಮೊಲವು ಸರ್ವಪ್ರಯತ್ನದಿಂದ ತನ್ನ ದೇಹವನ್ನು ತೂರಿಸಿ ಒಂದು ಮೊಳ ಮುಂದೆ ಹಾರಿತು. ಮೊಲವು ಹಾರಿಹೋಗಿ ಕುಳಿತ ಆ ಪ್ರದೇಶವು ಒಬ್ಬ ಮಹರ್ಷಿಗಳ ಪುಣ್ಯಾಶ್ರಮ. ಅಲ್ಲಿ ಆನೆಗಳು ಸಿಂಹಗಳೊಂದಿಗೆ ಆಟವಾಡುತ್ತಿದ್ದವು. ಹಾವುಗಳು ನವಿಲುಗಳಿದ್ದಲ್ಲಿ ಸುಖವಾಗಿ ಪ್ರವೇಶಿಸುತ್ತಿದ್ದವು. 'ವತ್ಸ' ಎಂಬ ಜಿತೇಂದ್ರಿಯನಾದ ತಪಸ್ವಿಯು ಆ ಪುಣ್ಯಾಶ್ರಮದಲ್ಲಿ ಭಗವದ್ಗೀತೆಯನ್ನು ನಿತ್ಯ ನಿರಂತರವೂ ಜಪ ಮಾಡುತ್ತ ವಾಸ ಮಾಡಿದ್ದ. ಅವನ ಶಿಷ್ಯನಾದ 'ಮೇಧಾವಿ' ಎಂಬ ತರುಣ ಪಂಡಿತನು ನೀರಿನಿಂದ ಕಾಲು ತೊಳೆದುಕೊಂಡ ಸ್ಥಳದಲ್ಲಿಯ ಕೆಸರಿನಲ್ಲಿ ಈ ಭಯಭ್ರಾಂತವಾದ ಮೊಲವು ಬಂದು ಬಿದ್ದಿತು. ಅದರಿಂದ ಅದು ತಕ್ಷಣದಲ್ಲಿ ಪತಿತವಾದ ಕೂಡಲೇ ಮರಣೋನ್ಮುಖವಾಗಿದ್ದರೂ ಅದು ಬದುಕಿತು.

ಆ ಸ್ಥಳದಲ್ಲಿಯ ಕೆಸರಿನ ಸ್ಪರ್ಶಮಾತ್ರದಿಂದಲೇ ಸಂಸಾರ ಬಂಧನದಿಂದ ಮುಕ್ತವಾಗಿ ಜೀವವನ್ನು ತೊರೆದು ಅಮರಾವತಿಯಿಂದ ತನ್ನನ್ನು ಕರೆಯಲು ಬಂದ ವಿಮಾನವನ್ನು ಏರಿ ಕುಳಿತು ಸ್ವರ್ಗಲೋಕಕ್ಕೆ ತೆರಳಿತು. ಇತ್ತ ನಾಯಿಯು ಕೂಡ ಮೊಲವನ್ನು ಹಿಡಿಯಲು ಅಲ್ಲಿಗೆ ಬಂದಾಗ ಶಿಷ್ಯನು ಕಾಲು ತೊಳೆದ ನೀರಿನ ಕೆಸರಿನ ಕೆಲವು ಹನಿಗಳು ಆ ನಾಯಿಗೂ ಸಿಡಿದಿದ್ದವು. ಅದರಿಂದ ಆ ರಾಜನ ನಾಯಿಯು ತನ್ನ ಶ್ವಾನರೂಪವನ್ನು ಬಿಟ್ಟು ದಿವ್ಯ ಅಂಗನೆಯ ರೂಪವನ್ನು ತೊಟ್ಟು ಗಂಧರ್ವರಿಂದ ಅಧಿಷ್ಠಿತವಾದ ದಿವ್ಯ ವಿಮಾನವನ್ನು ಏರಿಕೊಂಡು ಸ್ವರ್ಗಕ್ಕೆ ತೆರಳಿತು. ಅದನ್ನು ನೋಡಿ ಆ ಮೇಧಾವಿಯಾದ ವತ್ಸ ತಪಸ್ವಿಯ ಶಿಷ್ಯ ಸ್ವಕಂಧರನು ನಸುನಕ್ಕನು. ಅದರಿಂದ ಮಹಾರಾಜನಿಗೂ ಅತ್ಯಾಶ್ಚರ್ಯ. ಅವನು ಆ ತಪಸ್ವಿಯಾದ ವತ್ಸ ಬ್ರಾಹ್ಮಣನಿಗೆ 'ನಿನ್ನ ನಗೆಯ ಕಾರಣ ಏನು' ಎಂದು ಪ್ರಶ್ನೆ ಹಾಕಿದ. ಮತ್ತು ಆ ದೊರೆಯು ಆ ವತ್ಸ ಶಿಷ್ಯನಾದ ಸ್ವಕಂಧರನಿಗೆ ನಮಸ್ಕರಿಸಿ - 'ಹೀನಯೋನಿಯಲ್ಲಿ ಹುಟ್ಟಿದ ಜ್ಞಾನ ಶೂನ್ಯವಾದ ಈ ನಾಯಿಮರಿ ಹಾಗೂ ಮೊಲದ ಮರಿಗಳು ಕೀಳು ಕುಲದಲ್ಲಿ ಹುಟ್ಟಿದರೂ ಹೇಗೆ ಸ್ವರ್ಗಕ್ಕೆ ಹೋದವು? ಇದನ್ನು ಹೇಳಿರಿ.

**ಶಿಷ್ಯ:-** ಮಹಾರಾಜ, ಈ ಆಶ್ರಮದಲ್ಲಿ ಹಗಲಿರುಳೂ ಎಡೆಬಿಡದೆ ಗೀತೆಯ ಹದಿನಾಲ್ಕನೆಯ ಅಧ್ಯಾಯವನ್ನು ಸದಾ ಸರ್ವದಾ ಜಪ ಮಾಡುತ್ತ ವತ್ಸಮುನಿಯು ವಾಸಮಾಡಿದ್ದಾನೆ. ನಾನು ಕೂಡ ಆ ವತ್ಸ ಬ್ರಾಹ್ಮಣನ ಶಿಷ್ಯನೇ. ಬ್ರಹ್ಮವಿದ್ಯೆಯಲ್ಲಿ ನಾನು ಬಹುಪರಿಶ್ರಮದಿಂದ ಪ್ರಾವೀಣ್ಯವನ್ನು ಪಡೆದಿದ್ದೇನೆ. ಗೀತೆಯ ಹದಿನಾಲ್ಕನೆಯ ಅಧ್ಯಾಯವನ್ನು ಅನುದಿನವೂ ಬಿಡದೇ ಪಾರಾಯಣ ಮಾಡುತ್ತ ಇರುತ್ತೇನೆ. ನಾನು ಕಾಲು ತೊಳೆದುಕೊಂಡ ನೀರುನಿಂತು ಉಂಟಾದ ಕೆಸರಿನಲ್ಲಿ ಹೊರಳಾಡಿ ಮೊಲವು ಸ್ವರ್ಗಕ್ಕೆ ಹೋಯಿತು. ನಾಯಿಯೂ ಕೂಡ ಸುರಲೋಕವನ್ನು ಸಾರಿತು ತನ್ನ ಕಾಲಿನ ಕೆಸರಿನ ಎರಡು ಹನಿ ಸಿಡಿಯುವ ಮಾತ್ರದಿಂದ.

**ರಾಜ:-** ಶಿಷ್ಯೋತ್ತಮ, ನೀನು ನಾಯಿ ಮತ್ತು ಮೊಲಗಳು ವಿಮಾನದಲ್ಲಿ ಸ್ವರ್ಗದೆಡೆ ತೆರಳಿದ್ದನ್ನು ಕಂಡು ನಕ್ಕೆ. ಆ ನಿನ್ನ ನಗೆಗೆ ಕಾರಣ ಏನು?

**ಶಿಷ್ಯ:-** ಮಹಾರಾಷ್ಟ್ರ ದೇಶದಲ್ಲಿ ಕೇಶವ ಎಂಬ ದುರಾಚಾರಿ ಬ್ರಾಹ್ಮಣ ಇದ್ದ. ಅವನಿಗೆ 'ವಿಲೋಭನಾ' ಎಂಬ ಅನಾಚಾರಿ ಹೆಂಡತಿ ಇದ್ದಳು. ಅವಳ ವ್ಯಭಿಚಾರ ಮುಂತಾದ ಪಾಪಾಚಾರ ಕಂಡು ಕೇಶವನ ಕೋಪ ಉಕ್ಕಿ. ಅವನು ತನ್ನ ಹೆಂಡತಿಯನ್ನು ಹೊಡೆದು ಕೊಂದುಬಿಟ್ಟನು. ಆ ಸ್ತ್ರೀ ಹತ್ಯಾಪಾಪದಿಂದ ಆ ಕೇಶವ ಬ್ರಾಹ್ಮಣನು ಈಗ ಮೊಲವಾಗಿ ಹುಟ್ಟಿದ. ವಿಲೋಭನಾ ಎಂಬ ಅವನ ಸ್ವಚ್ಛಂದ ವಿಹಾರಿಣೀ ಆದ ಮಡದಿಯು ತನ್ನ ಪಾಪಕೃತ್ಯದಿಂದ ಈ ಜನ್ಮದಲ್ಲಿ ಹೆಣ್ಣು ನಾಯಿಯಾಗಿ ಹುಟ್ಟಿದಳು. ಹೀಗೆ ಇಬ್ಬರೂ ಜನ್ಮಾಂತರವನ್ನು ಹೊಂದಿದ್ದರೂ ಪೂರ್ವ ಜನ್ಮದ ವೈರವನ್ನು ಮರೆತಿಲ್ಲ. ಹಿಂದಿನ ಜನ್ಮದಲ್ಲಿ ತನ್ನನ್ನು ಹೊಡೆದು ತನ್ನ ಮರಣಕ್ಕೆ ಕಾರಣನಾದ ತನ್ನ ಪತಿ ಕೇಶವನನ್ನು ಈಗ ನಾಯಿಯಾಗಿರುವ ವಿಲೋಭನೆಯು ಹಿಂದಿನ ವೈರವನ್ನು ನೆನೆದು ವೇಗದಿಂದ ಎರಗಿ ಕಚ್ಚಿ ಹಿಡಿದಿತ್ತು. ಮತ್ತು ಅದನ್ನು ಅರ್ಥಾತ್ ತನ್ನ ಜನ್ಮಾಂತರದ ವೈರಿಯನ್ನು ಚಚ್ಚಿ ಕಚ್ಚಿ ಚುಚ್ಚಿಹಾಕಿತು. ಅದನ್ನು ಕಂಡು ನನಗೆ ನಗೆ ಬಂದು ನಕ್ಕು ಬಿಟ್ಟೆ.

ಇದನ್ನು ಕಂಡು ಶ್ರದ್ಧೆಯಿಂದ ಒಡಗೂಡಿದ ಶೌರ್ಯವರ್ಮ ಮಹಾರಾಜನು ತಾನು ಕೂಡ ಭಗವದ್ಗೀತೆಯ ಹದಿನಾಲ್ಕನೆಯ ಅಧ್ಯಾಯವನ್ನು ಗುರುಗಳಿಂದ ಕಲಿತು, ಅಧ್ಯಯನ ಮಾಡಿ ಪಾರಾಯಣ ರೂಪದಿಂದ ಪಠಿಸಿ ದಿವ್ಯಗತಿಯನ್ನು ಹೊಂದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಭಗವದ್ಗೀತೆಯ ಹದಿನಾಲ್ಕನೆಯ ಅಧ್ಯಾಯದ ಮಾಹಾತ್ಮ್ಯ ಎಂಬ ಎಪ್ಪತ್ತನೇಯ ಅಧ್ಯಾಯ ಮುಗಿದುದು*



## ಗೀತೆಯ ಹದಿನೈದನೆಯ ಅಧ್ಯಾಯ ಮಾಹಾತ್ಮ್ಯ | ಅಧ್ಯಾಯ - ೧೭೧

**ಮಹಾದೇವ:-** ಗಿರಿರಾಜ ಕನ್ಯೆಯೇ, ಪೂರ್ವಕಾಲದಲ್ಲಿ ಗೌಡದೇಶದಲ್ಲಿ ನರಸಿಂಹ ಎಂಬ ಶೂರಶ್ರೇಷ್ಠನಾದ ರಾಜನ ಶಾಸನ ಚಕ್ರವು ಉರುಳುತ್ತಿತ್ತು. ಅವನ ಸೈನ್ಯದಲ್ಲಿ ಸರಭ ಭೇರುಂಡ ಎಂಬ ಮಹಾಮೇಧಾವಿಯೂ ಶಸ್ತ್ರ ಶಾಸ್ತ್ರನಿಪುಣನೂ ಮಹಾಪರಾಕ್ರಮಿಯೂ ಆದ ಒಬ್ಬ ಸೈನಿಕನೂ ಇದ್ದ. ಅವನು ಹಲಕೆಲವು ದುರ್ಗಮವಾದ ದುರ್ಗಗಳನ್ನು ತನ್ನ ತುರಂಗ ಸೇನೆಯಿಂದ ದಾಳಿಮಾಡಿ ಸೋಲಿಸಿ ಸ್ವಾಧೀನ ಪಡಿಸಿಕೊಂಡ. ಈಗ ಇರುವ ರಾಜನನ್ನು ಕೊಂದು ಅವನ ಮಕ್ಕಳನ್ನೂ ನಾಶಮಾಡಿ ತಾನೇ ರಾಜ್ಯವನ್ನು ಆಳಬೇಕೆಂದು ದುರ್ಬುದ್ಧಿ ಅವನಲ್ಲಿ ಉದಿಸಿತು. ಆದರೆ ಅವನು ತನ್ನ ಉದ್ದೇಶವನ್ನು ಸಾಧಿಸಲಿಕ್ಕಾಗಿ ತರುಣ ಕ್ಷತ್ರಿಯರೊಂದಿಗೆ ಕಾರ್ಯಪ್ರವೃತ್ತನಾದಾಗ ಒಮ್ಮೆಲೇ ಅವನಿಗೆ ಪ್ಲೇಗ ಬಂದು ಮರಣ ಹೊಂದಿದ. ಅನಂತರ ಕೆಲವೇ ದಿನದಲ್ಲಿ ಅವನು ತನ್ನ ಕರ್ಮವಿಪಾಕದಿಂದ ಸಿಂಧ ದೇಶದಲ್ಲಿ ಒಂದು ಕುದುರೆಯಾಗಿ ಹುಟ್ಟಿದ. ಆ ಕುದುರೆಯನ್ನು ಒಬ್ಬ ಪ್ರಯತ್ನಶೀಲನಾದ ವೈಶ್ಯಕುಮಾರನು ಬಹಳ ಹಣವನ್ನು ಕೊಟ್ಟು ತನ್ನ ಮನೆಗೆ ತಂದನು.

ಆ ಸರಭಭೇರುಂಡ ಸೈನಿಕನ ಮರಣಾನಂತರ ನರಸಿಂಹ ಮಹಾರಾಜನ ಕಂಟಕಗಳೆಲ್ಲ ದೂರವಾದವು. ಅವನು ತನ್ನ ಸ್ವರಾಜ್ಯವನ್ನು ಪಾಲನ ಮಾಡುತ್ತ ಕಾಲಕ್ಷೇಪ ಮಾಡಿ ಮುಪ್ಪಿನ ಅಂಚಿನಲ್ಲಿ ಕಾಲಿರಿಸಿದ. ಕುದುರೆಯ ರಕ್ಷಣವನ್ನೆಲ್ಲ ಚೆನ್ನಾಗಿ ಬಲ್ಲ

ಆ ವೈಶ್ಯಕುಮಾರನು ತಾನು ಕೊಂಡ ಆ ಚತುರ ಕುದುರೆಯನ್ನು ರಾಜನಿಗೆ ಮಾರಿಬಿಡಲು ಅರಮನೆಗೆ ಬಂದ. ಮತ್ತು ಅರಸನಿಗೆ ಹೇಳಿದ.

**ವೈಶ್ಯಕುಮಾರ:-** ಪ್ರಭು, ನಾನು ತಂದ ಈ ಕುದುರೆ ಈ ಭೂಮಂಡಲದಲ್ಲಿ ಒಂದು ಅನರ್ಘ್ಯ ರತ್ನ. ಅಶ್ವಶಾಸ್ತ್ರವನ್ನು ಚೆನ್ನಾಗಿ ಓದಿದ ನಾನು ಇದರ ಒಳ್ಳೊಳ್ಳೆ ಸಲ್ಲಕ್ಷಣಗಳನ್ನು ನೋಡಿ ಇದು ಸರ್ವಶ್ರೇಷ್ಠ ಎಂದು ನಿರ್ಣಯ ಮಾಡಿ ಆ ವ್ಯಾಪಾರಿಯು ಹೇಳಿದ ಬೆಲೆಯನ್ನು ಕೊಟ್ಟು ಕೊಂಡುಕೊಂಡೆ. ಆದರೆ ಇದು ತಮ್ಮಂಥ ಚಕ್ರವರ್ತಿ ಭೂಪಾಲರ ಬಳಿಯಲ್ಲಿ ಇರಲು ತಕ್ಕುದಾದ ಅಶ್ವರತ್ನ. ಇದನ್ನು ತಮಗೆ ಕೊಡಬೇಕೆಂದು ತಂದಿದ್ದೇನೆ. ಇದು ಇಂದ್ರಲೋಕದ ಉಚ್ಚೈಶ್ರವ ಕುದುರೆಗೆ ಹೆಗಲೆಣೆಯಾಗಿ ನಿಲ್ಲಬಲ್ಲ ಹಯೋತ್ತಮ. ಇದನ್ನು ತಾವು ಪರಿಕಿಸಿಕೊಳ್ಳಬಹುದು. ಹೀಗೆ ಹೇಳಿ ಆ ವೈಶ್ಯಕುಮಾರನು ತನ್ನ ಕುದುರೆಯನ್ನು ತಂದು ಅದರ ಒಳ್ಳೊಳ್ಳೆ ಲಕ್ಷಣಗಳನ್ನು ಹೇಳಿ ರಾಜನಿಗೆ ಅದನ್ನು ತೋರಿಸಿದ. ಅಶ್ವಲಕ್ಷಣಗಳನ್ನು ಬಲ್ಲ ಮಂತ್ರಿಗಳು, ಪ್ರಜೆಗಳು ಅದನ್ನು ಬಹುವಾಗಿ ಹೊಗಳಿದರು.

ಆಗ ಮಹಾರಾಜನು ಆ ವೈಶ್ಯಕುಮಾರನು ಹೇಳಿದ ಬೆಲೆಯನ್ನು ಇತ್ತು ಆ ಕುದುರೆಯನ್ನು ಕೊಂಡುಕೊಂಡ. ಅನಂತರ ಅರಮನೆಯ ಅಶ್ವಪಾಲನನ್ನು ಕರೆದು ಇದನ್ನು ಚೆನ್ನಾಗಿ ಪಾಲಿಸು ಲಾಲಿಸು ಎಂದು ಅಪ್ಪಣೆ ನೀಡಿದ.

ಒಂದು ದಿನ ಆ ಮಹಾರಾಜನು ಆ ವೈಶ್ಯಪುತ್ರನು ನೀಡಿದ ಕುದುರೆಯನ್ನೇ ಏರಿಕೊಂಡು ಬೇಟೆ ಆಡಲಿಕ್ಕೆ ಹೋದ ಸಮೀಪದ ಅರಣ್ಯಕ್ಕೆ. ತನ್ನ ಹಿಂದಿನಿಂದ ಬೆಂಬತ್ತಿ ಬರುವ ಸೈನಿಕರನ್ನೆಲ್ಲ ಬಿಟ್ಟು ಚಿಗರೆಗಳನ್ನು ಬೆನ್ನಟ್ಟಿ ತಾನೊಬ್ಬನೇ ಓಡಿ ಓಡಿ ಬಾಯಾರಿಕೆಯಿಂದ ಬಳಲಿದ. ಗಂಟಲು ಕಿತ್ತು ಬರುತ್ತಿತ್ತು. ಆಗ ಅವನು ಕುದುರೆಯಿಂದ ಕೆಳಗಿಳಿದ. ಒಂದು ಗಿಡದ ಟೊಂಗೆಗೆ ಆ ಕುದುರೆಯನ್ನು ಕಟ್ಟಿ ಅಲ್ಲಿಯೇ ಸಮೀಪದಲ್ಲಿರುವ ಒಂದು ಹೆಬ್ಬಂಡೆಯ ಮೇಲೆ ಏರಿ ಕುಳಿತುಕೊಂಡ. ಆಗ ಒಮ್ಮೆಲೇ ಗಾಳಿ ಬೀಸಿತು. ಆ ಗಾಳಿಯಿಂದ ಮಹಾರಾಜ ಕುಳಿತ ಕಲ್ಲಿನ ಮೇಲೆ ಒಂದು ವಿಶಾಲವಾದ ಮರದ ಎಲೆ ಬಂದು ಬಿದ್ದಿತು. ಅದರಲ್ಲಿ ಭಗವದ್ಗೀತೆಯ ಹದಿನೈದನೆಯ ಅಧ್ಯಾಯದ ಅರ್ಧ ಶ್ಲೋಕವು ಬರೆಯಲ್ಪಟ್ಟಿತ್ತು.

ಅದನ್ನು ರಾಜನು ತನ್ನ ಕೈಯಲ್ಲಿ ತೆಗೆದುಕೊಂಡು ಆ ಗೀತೆಯ ಅಧ್ಯಾಯದ ಅರ್ಧ ಶ್ಲೋಕವನ್ನು ಪಠಿಸಿದ. ಅದು ಅಲ್ಲಿಯೇ ತರು ಶಾಖೆಗೆ ಬಿಗಿದು ಕಟ್ಟಿದ ಕುದುರೆಯ ಕಿವಿಗೆ ಬಿದ್ದಿತು. ಆ ಶ್ಲೋಕಾರ್ಧ ಶ್ರವಣ ಮಾತ್ರದಿಂದಲೇ ಆ ಕುದುರೆಯು ತನ್ನ ಪೂರ್ವ ಪಾಪದಿಂದ ಮುಕ್ತವಾಯಿತು. ಆದರೆ ಕುದುರೆಯ ದೇಹ ಅಲ್ಲಿಯೇ ನೆಲಕ್ಕೆ ಬಿದ್ದಿತು. ಅದನ್ನು ನೋಡಿ ಗಾಬರಿಯಾದ ಮಹಾರಾಜ ಅದರ ಲಗಾಮನ್ನು ತೆರೆದು ಬೆನ್ನ ಮೇಲೆ ಹಾಕಿದ ಥಡಿಯನ್ನು ಇಳಿಸಿ ಆ ಕುದುರೆಯನ್ನು ಎಬ್ಬಿಸಿದ. ಆದರೆ ಸತ್ತು ಬಿದ್ದ ಆ ಅಶ್ವವು ಮತ್ತೆ ಏಳಲೇ ಇಲ್ಲ. ಗೀತೆಯ ಹದಿನೈದನೆಯ ಅಧ್ಯಾಯದ ಅರ್ಧ ಶ್ಲೋಕದ ಅಕ್ಷರ ಪಂಕ್ತಿಯನ್ನು ಶ್ರವಣಮಾಡಿ ಉದ್ಧೃತನಾದ ಆ ಸರಭಭೇರುಂಡ ಸೈನಿಕನು ಮಹಾರಾಜನಿಗೆ ಕೃತಜ್ಞತೆಯನ್ನು ಹೇಳಿ ನಮಸ್ಕಾರ ಮಾಡಿ ವಿಮಾನವನ್ನು ಆರೋಹಣಮಾಡಿ ಸ್ವರ್ಗಕ್ಕೆ ತೆರಳಿದ.

ಅನಂತರ ಮಹಾರಾಜನು ಆ ಪರ್ವತವನ್ನು ಏರಿ ಅಲ್ಲಿ ಇರುವ ಒಂದು ಋಷ್ಯಾಶ್ರಮವನ್ನು ನೋಡಿದ. ಒಳಗೆ ನಡೆದ. ಅಲ್ಲಿ ತಪಸ್ಸನ್ನು ಮಾಡುತ್ತ ಕುಳಿತ

ಬ್ರಾಹ್ಮಣೋತ್ತಮನನ್ನು ಭಕ್ತಿಯಿಂದ ಕೇಳಿದ. ಆ ನನ್ನ ಕುದುರೆಯ ಯಾವ ಕಾರಣದಿಂದ ಸ್ವರ್ಗವನ್ನು ಸೇರಿತು? ಹೇಳಿರಿ ನನಗೆ.

**ಬ್ರಾಹ್ಮಣೋತ್ತಮ:-** ಮಹಾರಾಜ, ನಿನ್ನ ಹಿಂದಿನ ಸೇನಾಧಿಪತಿಯಾದ ಭೇರುಂಡನು ನಿನ್ನನ್ನು ಕೊಂದು ರಾಜ್ಯವನ್ನು ಕಬಳಿಸಬೇಕು ಎಂದು ಹೊರಟಿದ್ದ. ಆದರೆ ಅಷ್ಟರಲ್ಲಿ ರೋಗ ಬಂದು ಮರಣವನ್ನು ಹೊಂದಿದ. ಅನಂತರ ಕುದುರೆಯಾಗಿ ನಿನ್ನನ್ನು ಇಲ್ಲಿಗೆ ಹೊತ್ತು ತಂದಾಗ ಹದಿನೈದನೆಯ ಅಧ್ಯಾಯದ ಅರ್ಧಶ್ಲೋಕವನ್ನು ಒಂದು ಎಲೆಯ ಮೇಲೆ ಬರೆಯಲ್ಪಟ್ಟದ್ದನ್ನು ಅಕಸ್ಮಾತ್ ಆಗಿ ಕೇಳಿ ಆ ಕುದುರೆಯ ಆ ಜನ್ಮದಿಂದ ಉದ್ಧೃತವಾಗಿ ಈಗ ಸ್ವರ್ಗಕ್ಕೆ ಪ್ರಸ್ಥಾನ ಮಾಡಿತು.

ಅನಂತರ ಆ ಮಹಾರಾಜನಾದರೂ ಅಲ್ಲಿಯೇ ತೆರೆದು ಇರಿಸಲ್ಪಟ್ಟ ಹದಿನೈದನೇ ಅಧ್ಯಾಯದ ಮಹಿಮೆಯನ್ನು ಪ್ರತ್ಯಕ್ಷವಾಗಿ ನೋಡಿ ಆ ಮಹಾರಾಜನು ಹರ್ಷನಿರ್ಭರನಾದ. ಊರಿಗೆ ಬಂದು ತನ್ನ ಮಂತ್ರಿಗಳೊಡನೆ ಸಮಾಲೋಚನೆ ನಡೆಸಿ ತನ್ನ ಮಗನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಮುಕ್ತಿಯನ್ನು ಹೊಂದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಗೀತೆಯ ಹದಿನೈದನೆಯ ಅಧ್ಯಾಯ ಮಾಹಾತ್ಮ್ಯ ಎಂಬ ನೂರ ಎಪ್ಪತ್ತೊಂದನೇಯ ಅಧ್ಯಾಯ ಮುಗಿದುದು*



## ಗೀತೆಯ ಹದಿನಾರನೆಯ ಅಧ್ಯಾಯದ ಮಹಾತ್ಮ್ಯ ವರ್ಣನೆ

ಅಧ್ಯಾಯ - ೧೭೨

**ಮಹಾದೇವ:-** ದೇವಿ, ಹಿಂದೆ ಗುಜರಾಥ ದೇಶದಲ್ಲಿ ಸೌರಾಷ್ಟ್ರ ಎಂಬ ನಗರ. ಅಲ್ಲಿಯ ಖಡ್ಗಬಾಹು ಮಹಾರಾಜನು ವೈರಿಮರ್ದನ ಎಂದು ಹೆಸರಾಗಿದ್ದ ತನ್ನ ಪರಾಕ್ರಮದಿಂದ. ಅವನ ಕೀರ್ತಿ ದಿಗಂತ ವಿಶ್ರಾಂತ. ಆ ಮಹಾರಾಜನ ಗಜಶಾಲೆಯಲ್ಲಿ 'ಅರಿಮರ್ದನ' ಎಂಬ ಐರಾವತದಂತಹ ಆನೆಯಿದ್ದಿತು. ಅದಕ್ಕೆ ಒಂದು ದಿನ ಮದ ಏರಿ ಗಂಡಸ್ಥಳದಿಂದ ಮದೋದಕವು ಸೋರತೊಡಗಿತು. ಮತ್ತು ಏರಿದ ಆ ತರುಣ ಗಜವು ತನ್ನನ್ನು ಬಿಗಿದು ಕಟ್ಟಿದ ಕಬ್ಬಿಣದ ಸರಪಳಿಗಳನ್ನು ಹರಿದು ಹಾಕಿ ತನ್ನನ್ನು ಬಿಗಿದ ಉಕ್ಕಿನ ಕಂಬವನ್ನು ಕಿತ್ತುಕೊಂಡು ಗಜಶಾಲೆಯಿಂದ ಹೊರಬಿದ್ದು, ಹಿಡಿಯಲು ಬಂದ ಮಾವುತರನ್ನು ಸೊಂಡಿಲಿನಿಂದ ಹಿಡಿದೆತ್ತಿ ದೂರ ಎಸೆಯಿತು. ಗಜಶಾಲೆಯ ಕಂಬಗಳನ್ನು ಮುರಿದು ಎತ್ತಿ ತೂರಾಡಿತು. ಅಂಕುಶದಿಂದ ಹೊಡೆಯಲು ಬಂದ ಹಿರಿಯ ಮಾವುತನ ಬಡಿಗೆ ಈಟಿ ಭರ್ಜಿ ಅಂಕುಶಗಳ ಪ್ರಹಾರವನ್ನು ಲೆಕ್ಕಿಸದೇ ಕೈಗೆ ಸಿಕ್ಕವನನ್ನು ಕೊಲ್ಲುತ್ತ ರಾಜಧಾನಿಯಲ್ಲಿ ಹಿಂಸಾತಾಂಡವವನ್ನು ನಡೆಸಿತು. ಅನೇಕ ಮಾಳಿಗೆಯ ಮನೆಗಳನ್ನು ಮುರಿದು ನೆಲಸಮ ಮಾಡಿತು. ಜನರು ದಿಕ್ಕೆಟ್ಟು ಓಡತೊಡಗಿದರು. ಈ ಸಮಾಚಾರ ತಿಳಿದ ರಾಜನು ಓಡಿಬಂದು ಆ ಗಜೇಂದ್ರನ ಹಾವಳಿಯನ್ನು ದೂರದಿಂದಲೇ ನೋಡಿ ತಲ್ಲಣಿಸಿದ. ಮಂತ್ರಿ ಸೇನಾಧಿಪತಿಗಳೂ ದಿಙ್ಮೂಢರಾಗಿ ನಿಂತರು.

ಅಷ್ಟರಲ್ಲಿ ಅದೇ ದಾರಿಯಿಂದ ಸರೋವರದಲ್ಲಿ ಸ್ನಾನಮಾಡಿ ಒಬ್ಬ ಬ್ರಾಹ್ಮಣನು ಮನೆಗೆ ಹೊರಟಿದ್ದ. ಅವನು ಬಾಯಿಂದ ಗೀತೆಯ ಹದಿನಾರನೆಯ ಅಧ್ಯಾಯವನ್ನು

ಪಠಿಸುತ್ತಿದ್ದ. ಅವನಿಗೆ ಆ ದಾರಿಯಲ್ಲಿ ಮದ್ದಾನೆಯು ನಡೆಸಿದ ಹಾವಳಿಯನ್ನು ತಿಳಿಸಿ, ಆ ದಾರಿಯಿಂದ ಹೋಗದಿರಲು ಜನರು ತಿಳಿಸಿದರು. ಅವರ ಮಾತನ್ನು ಕೇಳದೇ ಆ ಬ್ರಾಹ್ಮಣ ಗೀತೆಯ ಶ್ಲೋಕಗಳ್ನನು ಪಠಿಸುತ್ತ ಅದೇ ಮಾರ್ಗದಲ್ಲಿ ಮುನ್ನಡೆದ. ಪೌರರು ಮಾವುತರು ಮಂತ್ರಿಗಳು ರಾಜಪರಿವಾರದವರು ಅವನ ಈ ಧೈರ್ಯವನ್ನು ನೋಡಿ ನಿಬ್ಬೆರಗಾಗಿ ನಿಂತುಕೊಂಡರು. ಆ ಬ್ರಾಹ್ಣನು ಧೈರ್ಯದಿಂದ ನೇರವಾಗಿ ಆ ಆನೆಯ ಬಳಿಗೆ ಹೋದ. ಇವನು ಉಚ್ಚರಿಸುವ ಗೀತೆಯ ಹದಿನಾರನೆಯ ಅಧ್ಯಾಯದ ಶ್ಲೋಕಗಳನ್ನು ಕೇಳಿ ಆ ಮದ್ದಾನೆಯು ಸ್ತಬ್ಧವಾಗಿ ನಿಂತುಕೊಂಡಿತು. ದುಂಬಿಗಳ ಹಿಂಡು ಆ ಗಜೇಂದ್ರನ ಗಂಡಸ್ಥಲದಿಂದ ಸೋರುವ ಮದೋದಕದ ಗಂಧದಿಂದ ಆಕೃಷ್ಟವಾಗಿ ಅದರ ಗಂಡಸ್ಥಲಕ್ಕೆ ಮುಕುರಿದ್ದಿತು. ಗೀತಾಧ್ಯಾಯಿಯಾದ ಆ ವಿಪ್ರನು ಮದೋದಕ ಸುರಿಯುವ ಆ ಮದ್ದಾನೆಯ ಗಂಡಸ್ಥಲವನ್ನು ಸ್ಪರ್ಶಿಸಿದ. ಆನೆಯ ಮದವಿಳಿದು ಅದು ಶಾಂತವಾಗಿ ಈ ಬ್ರಾಹ್ಮಣನ ಹಸ್ತಸ್ಪರ್ಶದಿಂದ ಸೌಮ್ಯವಾಯಿತು. ಇದನ್ನು ನೋಡುತ್ತ ನಿಂತ ರಾಜನಿಗೂ ಪ್ರಜೆಗಳಿಗೂ ಪರಮಾಶ್ಚರ್ಯವಾಯಿತು. ರಾಜಕೇಳಿದ.

**ರಾಜ:-** ಪೂಜ್ಯರೇ, ನಿಮ್ಮ ದರ್ಶನ ಹಾಗೂ ಸ್ಪರ್ಶಮಾತ್ರದಿಂದಲೇ ಮದ್ದಾನೆ ಸೌಮ್ಯವಾಯಿತು. ನಿಮಗೆ ಇಂಥ ಸಿದ್ಧಿ ಹೇಗೆ ಬಂದಿತು?

**ಬ್ರಾಹ್ಮಣ:-** ಮಹಾರಾಜ, ನಾನು ಭಗವದ್ಗೀತೆಯ ಹದಿನಾರನೆಯ ಅಧ್ಯಾಯದ ಕೆಲವು ಶ್ಲೋಕಗಳನ್ನು ಕಂಠಪಾಠ ಮಾಡಿದ್ದೇನೆ. ಯಾವಾಗಲೂ ಆ ಶ್ಲೋಕಗಳನ್ನು ಪಠಿಸುತ್ತಿರುತ್ತೇನೆ. ಆದ್ದರಿಂದಲೇ ನನಗೆ ಈ ಶಕ್ತಿ ಬಂದಿದೆ.

ಇದನ್ನು ಕೇಳಿ ರಾಜನು ಆ ಬ್ರಾಹ್ಮಣನನ್ನು ಅರಮನೆಗೆ ಕರೆತಂದು ಅವನಿಗೆ ಒಂದು ಲಕ್ಷ ಸುವರ್ಣನಾಣ್ಯಗಳನ್ನು ಕೊಟ್ಟು ಅವನಿಂದ ಗೀತೆಯ ಹದಿನಾರನೆಯ ಅಧ್ಯಾಯದ ಕೆಲವು ಶ್ಲೋಕಗಳನ್ನು ಕಲಿತುಕೊಂಡ. ತಾನೂ ಕೂಡ ಆ ಗೀತೆಯ ಶ್ಲೋಕ ಪಠಿಸಿ ಮದ್ದಾನೆಯನ್ನು ಸ್ಪರ್ಶಿಸಿದ. ಪ್ರಶಾಂತವಾದ ಆ ಆನೆಯು ಗೀತೆಯ ಷೋಡಶಾಧ್ಯಾಯದ ಶ್ಲೋಕಗಳನ್ನು ಕೇಳಿ ಸಾಧುವಾಗಿ ನಿಂತಿತು. ಇದರಿಂದ ಮಹಾರಾಜನಿಗೆ ಭಗವದ್ಗೀತೆಯ ಷೋಡಶಾಧ್ಯಾಯದ ಮಹಾಮಹಿಮೆಯ ಅರಿವು ಬಂದು ಅವನು ತನ್ನ ಮಗನನ್ನು ಸಿಂಹಾಸನದ ಮೇಲೆ ಕೂಡಿಸಿ ಅರಣ್ಯಕ್ಕೆ ತೆರಳಿದ. ಅಲ್ಲಿ ಋಷಿಗಳಿಂದ ಸಂಪೂರ್ಣ ಗೀತೆಯ ಹದಿನಾರನೆಯ ಅಧ್ಯಾಯವನ್ನು ಅರ್ಥಸಹಿತ ತಿಳಿದು ಆಪರಾಯಣ ಮಾಡುತ್ತ ಶೇಷಾಯುಷ್ಯವನ್ನು ಕಳೆದ. ಕೊನೆಗೆ ಹರಿಪದವನ್ನೈದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಗೀತೆಯ ಹದಿನಾರನೆಯ ಅಧ್ಯಾಯದ ಮಹಾತ್ಮ್ಯ ಎಂಬ ನೂರ ಎಪ್ಪತ್ತೆರಡನೇಯ ಅಧ್ಯಾಯ ಮುಗಿದುದು*

—o—

**ಮಹಾದೇವ:-** ಖಡ್ಗಬಾಹು ಮಹಾರಾಜನ ಭೃತ್ಯನಾದ ದುಶ್ಶಾಸನ ಎಂಬ ಮಾವುತನು ಅರಿಮರ್ದನ ಎಂಬ ಹೆಸರಿನ ರಾಜನ ಪಟ್ಟದಾನೆಯು ಮಸ್ತಿಗೆ ಬಂದಾಗ ಅದನ್ನು ಹಿಡಿಯಲು ಅಂಕುಶ ಹಿಡಿದು ಅದಕ್ಕೆ ಹೊಡೆದ. ಅದರಿಂದ ಕ್ರುದ್ಧವಾದ ಆ ಮದ್ದಾನೆಯು ತನ್ನ ಶುಂಡಾದಂಡವನ್ನು ಚಾಚಿ ಆ ಮಾವುತನನ್ನು ಮೇಲಕ್ಕೆ ಎತ್ತಿ ಮುಗಿಲಿನಲ್ಲಿ ಮೂರು ಸಲ ತಿರುಗಿಸಿ ಬಂಡೆಗಲ್ಲಿಗೆ ಕುಕ್ಕಿತು. ತಕ್ಷಣದಲ್ಲಿ ಅವನು ಮರಣಹೊಂದಿದ.

**ಪಾರ್ವತಿ:-** ಪ್ರಭು, ಈ ದುಶ್ಶಾಸನನ ವೃತ್ತಾಂತವನ್ನು ವಿಸ್ತಾರವಾಗಿ ತಿಳಿಸಿರಿ.

**ಮಹಾದೇವ:-** ಹಿಂದಿನ ಅಧ್ಯಾಯದಲ್ಲಿ ತಿಳಿಸಿದಂತೆ ಖಡ್ಗಬಾಹುವಿನ ಆನೆಗೆ ಮತ್ತು ಏರಿದಾಗ ಮಾವುತರೆಲ್ಲರೂ ಕೂಡಿ ಚಿಂತಾಕ್ರಾಂತರಾಗಿ ಕುಳಿತು ಕೊಂಡರು. ಆಗ ಯೌವನದ ಮದದಿಂದ ಆ ಆನೆಯಂತೆ ಉನ್ಮತ್ತನಾದ ಈ ದುಶ್ಶಾಸನನು ಹುಚ್ಚು ಧೈರ್ಯದಿಂದ ಆ ಆನೆಯನ್ನು ನಾನು ಮಣಿಸುತ್ತೇನೆ ಎಂದು ಅದರ ಸಮೀಪಕ್ಕೆ ಹೋದ. ಅತ್ಯಂತ ತೀಕ್ಷಣವಾದ ದೊಡ್ಡ ಅಂಕುಶವನ್ನು ಕೈಯಲ್ಲಿ ಹಿಡಿದು ಬರುತ್ತಿರುವ ಅವನನ್ನು ನೋಡಿ ಆ ಆನೆಯು ಘೀಳಿಟ್ಟು ಪೂತ್ಕರಿಸಿತು. ತನ್ನನ್ನು ಹೊಡೆಯಲು ಬಂದ ಅನನ್ನು ತನ್ನ ಸೊಂಡಿಲಿನಿಂದ ಎಳೆದು ತನ್ನ ಕಾಲಕೆಳಗೆ ಹಾಕಿ ಮೆಟ್ಟಿತು. ಅದರಿಂದಲೇ ಆ ದುಶ್ಶಾಸನನ ಅರ್ಧ ಪ್ರಾಣ ಹೋದಂತಾಯಿತು. ಆದರೂ ಇನ್ನೂ ಉಸಿರಾಡುತ್ತಿರುವ ಅವನನ್ನು ಮತ್ತೆ ತನ್ನ ಅಡಿಯಿಂದ ಮೇಲಕ್ಕೆತ್ತಿ ಮುಗಿಲಲ್ಲಿ ತೂರಾಡಿ ಒಂದು ಹೆಬ್ಬಂಡೆಗೆ ಅಪ್ಪಳಿಸಿತು. ಅದರಿಂದ ಮುರಿದು ಮೂರು ಭಾಗವಾದ ಅವನ ದೇಹದ ಮೂಳೆಗಳನ್ನು ದಿಕ್ಕು ದಿಕ್ಕಿಗೆ ತೂರಿತು. ಅದನ್ನು ನೋಡಿ ಭಯಭ್ರಾಂತರಾದ ಮಾವುತರು ದಿಕ್ಕೆಟ್ಟು ಓಡಿಹೋದರು.

ಭಗವದ್ಗೀತೆಯ ಹದಿನಾರನೆಯ ಅಧ್ಯಾಯ ಪಠಿಸಿ ಆನೆಯನ್ನು ಆ ಬ್ರಾಹ್ಮಣನು ಶಾಂತಗೊಳಿಸಿದ ಬಳಿಕ ಮಾವುತರು ಅದನ್ನು ಒಯ್ದು ಗಜಶಾಲೆಯಲ್ಲಿ ಕಟ್ಟಿದರು. ನಂತರ ರಾಜ ಹಾಗೂ ಅವನ ಪರಿವಾರದವರು ಮತ್ತು ಮಾವುತರು ಗೀತೆಯ ಹದಿನಾರನೆಯ ಅಧ್ಯಾಯ ಹೇಳುತ್ತಲೇ ಆ ಆನೆಯ ಬಳಿಗೆ ಬರುತ್ತಿದ್ದರು. ಆಗ ಮಾತ್ರ ಅದು ಶಾಂತವಾಗಿ ಅವರು ಹೇಳಿದಂತೆ ಕೇಳುತ್ತಿತ್ತು.

ಇತ್ತ ಆ ಪಟ್ಟದಾನೆಯಿಂದ ಮರಣ ಹೊಂದಿದ ದುಶ್ಶಾಸನನು ಮರಣ ಕಾಲದಲ್ಲಿ ಆ ಆನೆಯನ್ನೆ ನೋಡುತ್ತ ನೆನೆಯುತ್ತ ಸತ್ತುಹೋಗಿ ಆ ಗಜದ ವಾಸನೆಯಿಂದ ಜನ್ಮಾಂತರದಲ್ಲಿ ತಾನೂ ಗಜನಾಗಿಯೇ ಹುಟ್ಟಿದ. ಸಿಂಹಳ ದ್ವೀಪದ ಮಹಾರಾಜನಾದ ಜಯದೇವನ ಗಜಶಾಲೆಯಲ್ಲಿ ಸೇರಿಸಲ್ಪಟ್ಟ. ಸಿಂಹಳ ದೊರೆ ಜಯದೇವನಿಗೂ ಗುಜರಾತದ ಸೌರಾಷ್ಟ್ರದ ಮಹಾರಾಜನಾದ ಖಡ್ಗಬಾಹುವಿಗೂ ಪರಮಸ್ನೇಹ. ಇಬ್ಬರೂ ಬಾಲ್ಯಮಿತ್ರರು, ಜಯದೇವನು ತನ್ನ ಜೀವದ ಗೆಳೆಯನಾದ ಖಡ್ಗಬಾಹುವಿಗೆ ತನ್ನ ಗಜಶಾಲೆಯಲ್ಲಿ ಇರುವ ಆ ಆನೆಯನ್ನು ಕಾಣಿಕೆಯಾಗಿ ನೀಡಿದ. ಖಡ್ಗಬಾಹು ಅವನು ಕೊಟ್ಟ ಆನೆಯ ಕಾಣಿಕೆಯನ್ನು ಜಲಮಾರ್ಗದಿಂದ ತರಿಸಿಕೊಂಡ.

ಖಡ್ಗಬಾಹುವಿನ ಗಜಶಾಲೆಯಲ್ಲಿ ಆ ಆನೆಯನ್ನು ರಾಜಗೌರವದಿಂದ ಸತ್ಕರಿಸಲಾಯಿತು. ಅದಕ್ಕೆ ರಾಜ, ರಾಜಪುತ್ರ, ಮಂತ್ರಿ, ಮಾವುತ ಎಲ್ಲರೂ ಅತ್ಯಂತ ಪ್ರೀತಿ ಮಾಡುತ್ತಿದ್ದರು. ಜಲಮಾರ್ಗದಿಂದ ಅದನ್ನು ತರಿಸಿದ ಕಾರಣ ಅದಕ್ಕೆ ವಾರುಣ ಎಂದು

ಹೆಸರಿಟ್ಟರು. ಜನ್ಮಾಂತರದಲ್ಲಿ ದುಶ್ಯಾಸನ ಎಂಬ ಮಾವುತನಾಗಿದ್ದ ಆವಾರುಣ ಗಜಕ್ಕೆ ಅಲ್ಲಿನ ತನ್ನ ಪರಿವಾರ, ಅಣ್ಣ ತಮ್ಮಂದಿರು ಹಾಗೂ ಮಿತ್ರರನ್ನು ನೋಡಿದಾಗ, ಜನ್ಮಾಂತರದ ನೆನಪು ಮೂಡಿಬಂದಿತು. ಹಿಂದೆ ತಾನು ಮದಾಂಧನಾಗಿ ಮದ್ದಾನೆಯೊಡನೆ ಸೆಣಸಿದ್ದರಿಂದ ಮಾನವ ಜನ್ಮ ಕಳೆದುಕೊಂಡು ಆನೆಯಾಗಿ ಹುಟ್ಟಿದ್ದಕ್ಕೆ ಪಶ್ಚಾತ್ತಾಪಗೊಂಡು ತನ್ನ ಸೋದರರು ಮಿತ್ರರು ಮಾನವರಾಗಿ ಮೆರೆದಾಡುವಾಗ ತಾನು ಮಾತ್ರ ಮೂಕ ಪ್ರಾಣಿಯಾದ ಆನೆಯಾದುದಕ್ಕೆ ಅದಕ್ಕೆ ಬಹಳ ವ್ಯಥೆಯಾಯಿತು. ಅದು ಆಹಾರ ಬಿಟ್ಟು ಕೊರಗಿ ಸೊರಗಿತು.

ಒಂದು ದಿನ ಖಡ್ಗಬಾಹುವಿನ ಆಸ್ಥಾನದಲ್ಲಿ ಒಬ್ಬ ಕವಿರಾಜನು ಆಸ್ಥಾನ ಪಂಡಿತರು ಹೇಳಿದ ಎಲ್ಲ ಸಮಸ್ಯೆಗಳನ್ನು ಸರಸ ಸುಂದರವಾದ ಕಾವ್ಯದಿಂದ ಪೂರ್ಣ ಮಾಡಿದ. ಅವನ ಸಮಸ್ಯಾ ಪೂರ್ತಿಯ ಅಶುಕವಿತ್ವದಿಂದ ಸಂತುಷ್ಟನಾದ ಖಡ್ಗಬಾಹು ಕವಿರಾಜನಿಗೆ ಆ ಆನೆಯನ್ನು ಪಾರಿತೋಷಕವಾಗಿ ಕೊಟ್ಟುಬಿಟ್ಟ. ಅವನು ಆನೆಯನ್ನು ಮನೆಗೆ ಒಯ್ದ. ಆದರೆ ಅದು ಯಾವ ಆಹಾರವನ್ನೂ ಸ್ವೀಕರಿಸದೇ ಇರುವದನ್ನು ನೋಡಿ ಗಾಬರಿಯಾದ. ಉಪವಾಸದಿಂದ ಏನಾದರೂ ರೋಗ ಬಂದು ಆ ಆನೆಯು ಸಾಯಬಹುದು ಎಂದು ಹೆದರಿ ಮಾಳವ ದೇಶದ ರಾಜನಿಗೆ ಅದನ್ನು ಮಾರಿದ. ಮಾಳವ ದೇಶದ ಅರಸನ ಗಜಶಾಲೆಯಲ್ಲಿಯೂ ಈ ಆನೆಯು ತನ್ನ ಉಪವಾಸದ ವ್ರತವನ್ನು ಬಿಡಲಿಲ್ಲ. ಮಾವುತರು ಎಷ್ಟು ಪ್ರೀತಿಯಿಂದ ತಿನ್ನಿಸಿದರೂ ಹುಲ್ಲು ತಿನ್ನಲಿಲ್ಲ. ನೀರು ಕುಡಿಯಲಿಲ್ಲ, ನಿದ್ದೆ ಮಾಡಲಿಲ್ಲ, ಯಾವಾಗಲೂ ಎರಡೂ ಕಣ್ಣಿನಿಂದ ಕಣ್ಣೀರನ್ನು ಸುರಿಸುತ್ತಿತ್ತು. ಮಾವುತನ ಬಾಯಿಂದ ತಾನು ಮೆಚ್ಚಿ ತಂದ ಆನೆಯ ಈ ಉಪವಾಸದ ಸಂಗತಿ ತಿಳಿದು ಸಂಭ್ರಾಂತನಾದ ಮಾಳವದರಸು ಗಜಶಾಲೆಗೆ ಬಂದ. ಅವನನ್ನು ಕಂಡೊಡನೆ ಆ ವಾರುಣ ಗಜವು ದೀನ ಮುಖದಿಂದ ಹೇಳಿತು.

**ವಾರುಣ:-** ಮಹಾರಾಜ, ನನ್ನ ಬೇನೆಗೆ ನಿಮ್ಮ ಯಾವ ಔಷಧಗಳೂ ಉಪಯೋಗವಿಲ್ಲ. ಭಗವದ್ಗೀತೆಯ ಹದಿನೇಳನೆಯ ಅಧ್ಯಾಯವನ್ನು ಜಪಮಾಡುವ ಒಬ್ಬ ಬ್ರಾಹ್ಮಣನನ್ನು ಕರೆದುಕೊಂಡು ಬನ್ನಿರಿ. ಅವನಿಂದ ಮಾತ್ರ ವಾಸಿಯಾಗುವದು ನನ್ನ ರೋಗ.

ಗಜದ ಈ ಮಾತನ್ನು ಕೇಳಿ ಆ ಮಾಳವ ದೇಶದ ದೊರೆಯು ಭಗವದ್ಗೀತೆಯ ಹದಿನೇಳನೆಯ ಅಧ್ಯಾಯದ ಪಾರಾಯಣ ಮಾಡುವ ವಿಪ್ರನೊಬ್ಬನನ್ನು ಬರಮಾಡಿಕೊಂಡ. ಅವನು ಬಂದು ಗೀತೆಯ ಹದಿನೇಳನೆಯ ಅಧ್ಯಾಯ ಪಠಿಸಿ ನೀರನ್ನು ಮಂತ್ರಿಸಿ ಆನೆಯ ಮೇಲೆ ಪ್ರೋಕ್ಷಿಸಿದ. ಕೂಡಲೇ ಆನೆಯ ಜನ್ಮ ಹೊಂದಿದ ದುಶ್ಯಾಸನನು ಗಜಯೋನಿಯಿಂದ ಮುಕ್ತನಾಗಿ ದಿವ್ಯದೇಹವನ್ನು ಧರಿಸಿದ. ರಾಜನ ಎದುರು ನಿಂತುಕೊಂಡ. ಅವನನ್ನು ಕರೆಯಲು ಸ್ವರ್ಗ ಲೋಕದಿಂದ ವಿಮಾನ ಬಂದಿತು. ಆಗ ವಿಸ್ಮಯಸ್ತಿಮಿತನಾದ ಮಾಳವ ದೇಶದ ಅರಸು ಕೇಳಿದ.

**ಮಾಳವದೊರೆ:-** ಪುಣ್ಯಾತ್ಮ, ನೀನು ಹಿಂದೆ ಎಲ್ಲಿ ಇದ್ದೆ? ಆನೆ ಏಕೆ ಆಗಿದ್ದೆ? ಈಗ ಗಜಯೋನಿಯಿಂದ ನೀನು ಮುಕ್ತನಾದ ಬಗೆ ಎಂತು?

**ದುಶ್ಯಾಸನ:-** ನಾನು ಹಿಂದೆ ಖಡ್ಗಬಾಹುರಾಜನ ನಗರದಲ್ಲಿ ಅವನ ಪಟ್ಟದಾನೆಯೊಡನೆ ಹೋರಾಡಿ ಗಜವಾಗಿ ಜನಿಸಿದ್ದೆ. ಅವನಿಂದ ಆಸ್ಥಾನ ಕವಿರಾಜನಿಗೂ ಅವನಿಂದ ನಿನಗೂ ವರ್ಗಾಯಿಸಲ್ಪಟ್ಟೆ. ಈಗ ಭಗವದ್ಗೀತೆಯ ಸಪ್ತದಶಾಧ್ಯಾಯದಿಂದ ಉದ್ಧೃತನಾದೆ. ನೀನೂ ಕೂಡ ಅದನ್ನು ಪಾರಾಯಣ ಮಾಡು.

ಹೀಗೆ ಹೇಳಿ ವಿಮಾನಾರೂಢನಾಗಿ ದುಶ್ಶಾಸನ ಸ್ವರ್ಗಸೇರಿದ. ಅದನ್ನು ಕಂಡು ಮಾಳವ ರಾಜನೂ ಕೂಡ ಆ ಅಧ್ಯಾಯದ ನಿತ್ಯ ನಿರಂತರ ಪಾರಾಯಣದಿಂದ ಮಾನವ ಜನ್ಮದಿಂದ ಮುಕ್ತನಾದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಗೀತೆಯ ಹದಿನೇಳನೆಯ ಅಧ್ಯಾಯದ ಜಪ ಪ್ರಭಾವ ಎಂಬ ನೂರ ಎಪ್ಪತ್ತಮೂರನೇಯ ಅಧ್ಯಾಯ ಮುಗಿದುದು*



## ಗೀತೆಯ ಹದಿನೆಂಟನೆಯ ಅಧ್ಯಾಯದ ಮಾಹಾತ್ಮ್ಯ — ಅಧ್ಯಾಯ - ೧೭೪

**ಪಾರ್ವತಿ:-** ಪರಶಿವ ! ನಾನು ನಿನ್ನ ಮುಖದಿಂದ ಗೀತೆಯ ಹದಿನೇಳು ಅಧ್ಯಾಯಗಳ ಮಹಾತ್ಮೆಯನ್ನು ಶ್ರವಣ ಮಾಡಿದೆ. ಈಗ ಹದಿನೆಂಟನೆಯ ಅಧ್ಯಾಯದ ವರ್ಣನೆಯನ್ನು ಹೇಳಿರಿ.

**ಮಹಾದೇವ:-** ಗಿರಿನಂದಿನಿ ! ಮಾನವರಿಗೆ ಬ್ರಹ್ಮಾನಂದವನ್ನು ತಂದುಕೊಡುವ ಹದಿನೆಂಟನೆಯ ಅಧ್ಯಾಯದ ಮಹಿಮೆ ಕೇಳು. ಇದು ಪರಮ ರಹಸ್ಯ. ಸನಕ ಸನಂದನಾದಿ ಯೋಗೀಶ್ವರರಿಗೆ ಮನೋರಂಜನೆಯಾಗುವದು ಇದರಿಂದಲೇ. ಇದರ ಪಠಣ ಮಾತ್ರದಿಂದಲೇ ಯಮದೂತರ ಸದ್ದಡಗಿ ಹೋಗುವದು. ತೀರ್ಥಗಳಲ್ಲಿ ಪುಷ್ಕರ, ಹೂಗಳಲ್ಲಿ ಕಮಲ, ರಸಗಳಲ್ಲಿ ಅಮೃತ, ಪಶುಗಳಲ್ಲಿ ಕಾಮಧೇನು. ಗಿರಿಗಳಲ್ಲಿ ಕೈಲಾಸ, ಪತಿವ್ರತೆಯರಲ್ಲಿ ಆರುಂಧತಿ, ಯಜ್ಞಗಳಲ್ಲಿ ಅಶ್ವಮೇಧ, ಉದ್ಯಾನಗಳಲ್ಲಿ ನಂದನವಿದ್ದಂತೆ, ಅಧ್ಯಾತ್ಮ ಸಾಹಿತ್ಯದಲ್ಲಿ ಭಗವದ್ಗೀತೆಯ ಹದಿನೆಂಟನೆಯ ಅಧ್ಯಾಯ ಪರಮ ಶ್ರೇಷ್ಠ, ಸರ್ವಶಾಸ್ತ್ರಗಳ ಸರ್ವಸ್ವವಾದ, ಕರ್ಣರಸಾಯನವೆನಿಸಿದ ಆ ಅಧ್ಯಾಯದ ಮಹಿಮೆಯನ್ನು ನಿನಗಾಗಿ ಹೇಳುತ್ತೇನೆ ಕೇಳು.

ಸೃಷ್ಟಿಯ ಪ್ರಾರಂಭ ಕಾಲದಲ್ಲಿ ಬ್ರಹ್ಮನು ನನ್ನ ಮನೋವಿನೋದಕ್ಕಾಗಿ ವಿಶ್ವಕರ್ಮನಿಂದ ಮೇರು ಪರ್ವತದ ಶೃಂಗಾಂಗಣದಲ್ಲಿ ಅಮರಾವತಿ ಎಂಬ ಸುಂದರ ನಗರ ನಿರ್ಮಿಸಿದ. ಅಲ್ಲಿಯ ಭವ್ಯ ಪ್ರಾಸಾದಗಳೆಲ್ಲವೂ ಚಿಂತಾಮಣಿಶಿಲೆಯಿಂದ ನಿರ್ಮಿಸಲ್ಪಟ್ಟಿದ್ದವು. ಅಲ್ಲಿಯ ಕಲ್ಪವೃಕ್ಷದ ನೆರಳಲ್ಲಿ ದೇವೇಂದ್ರ ಹಾಗೂ ಶಚಿದಂಪತಿಗಳು ಗಂಧರ್ವಗಾಯನ ಕೇಳುತ್ತ ಆನಂದದಿಂದ ವಾಸಮಾಡಿದ್ದರು.

ಒಂದು ದಿನ ಮಹೇಂದ್ರನು ತನ್ನ ಸಭೆಯಲ್ಲಿ ಎಲ್ಲ ಸುರಸತ್ತಮರಿಂದ ಸೇವಿತನಾಗಿ ಸುಖಾಸೀನನಾದಾಗ ಅಲ್ಲಿಗೆ ಮತ್ತೊಬ್ಬ ಸಾವಿರ ಕಣ್ಣಿನ ಮಹಾತೇಜಸ್ವಿಯಾದ ಇಂದ್ರನು ಆಗಮಿಸಿದ. ಅವನ ಮುಖದಿಂದ ಉಕ್ಕುವ ದಿವ್ಯತೇಜವನ್ನು ನೋಡಿ ಇಂದ್ರನ ಮುಖ ಬಿಳಿಚಿಕೊಂಡಿತು. ಅವನು ಕೂಡಲೇ ತನ್ನ ಸಿಂಹಾಸನದಿಂದ ಇಳಿದು ಹೊರಗೆ ನಡೆದುಬಿಟ್ಟ. ಅಲ್ಲಿಯೇ ಇದ್ದ ದೇವತಾ ಧುರೀಣರು ಹೊಸ ಇಂದ್ರನಿಗೆ ಪಟ್ಟ ಕಟ್ಟಿದರು. ಅವನ ಪಕ್ಕದಲ್ಲಿ ಶಚೀರಾಣಿ ಬಂದು ಕುಳಿತಳು. ಸುರಸುಂದರಿಯರು ಆರತಿ ಬೆಳಗಿದರು. ಋಷಿಗಳು ಆಶೀರ್ವಾದ ಮಾಡಿದರು, ಗಂಧರ್ವರು ಗಾಯನ ಮಾಡಿದರು. ರಂಭಾದಿಯರು ನೃತ್ಯ ಮಾಡಿದರು.

ಇದನ್ನೆಲ್ಲ ಕಂಡು ಹಳೆಯ ಇಂದ್ರನಿಗೆ ಬಹಳ ದುಃಖವಾಯಿತು. ಅವನು ನೇರವಾಗಿ ಕ್ಷೀರಸಾಗರಕ್ಕೆ ಓಡಿದ. ಶ್ವೇತದ್ವೀಪದಲ್ಲಿ ಶೇಷಶಾಯಿಯಾದ ಮಹಾವಿಷ್ಣುವಿನ ಎದುರು ತನ್ನ ದುಃಖ ತೋಡಿಕೊಂಡ.

**ಇಂದ್ರ:-** ಭಗವನ್, ಹಿಂದೆ ನಾನು ನಿನ್ನ ಪ್ರೀತಿಗಾಗಿ ನೂರು ಯಜ್ಞಮಾಡಿದೆ. ಆದರಿಂದ ನನಗೆ ಈ ಇಂದ್ರಪದವಿ ಬಂದಿತು. ಆದರೆ ಈಗ ಒಬ್ಬ ಹೊಸ ಇಂದ್ರ ಬಂದಿದ್ದಾನೆ. ಅವನು ಒಂದು ಯಜ್ಞವನ್ನೂ ಮಾಡಿಲ್ಲ. ಆದರೂ ಈಗ ಅವನು ಅಮರಾವತಿಗೆ ಬಂದು ನನ್ನ ಸಿಂಹಾಸನವನ್ನು ಆಕ್ರಮಿಸಿದ್ದಾನೆ. ಇದು ಹೇಗೆ?

**ಮಹಾವಿಷ್ಣು:-** ದೇವೇಂದ್ರ, ಈ ಹೊಸ ಇಂದ್ರನು ಭಗವದ್ಗೀತೆಯ ಹದಿನೆಂಟನೆಯ ಅಧ್ಯಾಯದ ಐದು ಶ್ಲೋಕಗಳನ್ನು ಪ್ರತಿದಿನವೂ ತಪ್ಪದೇ ಪಾರಾಯಣ ಮಾಡುತ್ತಾನೆ. ಆದರಿಂದಲೇ ಅವನಿಗೆ ಈ ಭಾಗ್ಯ ಬಂದಿದೆ. ಎಲ್ಲ ಪುಣ್ಯಗಳಿಗಿಂತ, ಎಲ್ಲ ಯಜ್ಞಯಾಗಾದಿಗಳಿಗಿಂತ ಗೀತಾಪಾರಾಯಣ ಮಿಗಿಲಾದುದು.

ಇದನ್ನು ಕೇಳಿ ದೇವೇಂದ್ರ ನೇರವಾಗಿ ಭೂಲೋಕಕ್ಕೆ ಬಂದ ಬ್ರಾಹ್ಮಣ ವೇಷ ಧರಿಸಿ. ಗೋದಾವರೀತೀರದ ಶಾಲಿಕಾಗ್ರಾಮಕ್ಕೆ ನಡೆದ. ಅಲ್ಲಿ ಇರುವ ವೇದ ವೇದಾಂತ ಪಾರಂಗತನಾದ ಓರ್ವ ಕರ್ಮಠ ಬ್ರಹ್ಮಜ್ಞಾನಿ ಬ್ರಾಹ್ಮಣನ ಶಿಷ್ಯತ್ವ ವಹಿಸಿದ. ಹಗಲಿರುಳು ಭಗವದ್ಗೀತೆಯ ಹದಿನೆಂಟನೆಯ ಅಧ್ಯಾಯವನ್ನು ಅರ್ಥಾನುಸಂಧಾನ ಪೂರ್ವಕ ಪಾರಾಯಣ ಮಾಡುತ್ತಲಿದ್ದ ಆ ಬ್ರಾಹ್ಮಣನಿಂದ ಭಗವದ್ಗೀತೆಯ ಹದಿನೆಂಟನೆಯ ಅಧ್ಯಾಯವನ್ನು ಸಂಪೂರ್ಣವಾಗಿ ಕಲಿತುಕೊಂಡು ತಾನೂ ಕೂಡ ಅನುದಿನವೂ ಅನೇಕ ವರ್ಷಗಳವರೆಗೆ ಗೀತೆಯ ಹದಿನೆಂಟನೆಯ ಅಧ್ಯಾಯದ ಪಾರಾಯಣ ಮಾಡಿದ. ಆದರಿಂದ ಮಹಾವಿಷ್ಣು ಸುಪ್ರೀತನಾಗಿ ಅವನಿಗೆ ''ಬೇಕಾದ ವರ ಬೇಡು'' ಎಂದ. ಆಗ ವಿವೇಕಿಯಾದ ಇಂದ್ರನು ಕ್ಷುದ್ರವಾದ ಪುರಂದರ ಪದವಿಯನ್ನು ಕೇಳದೆ ವಿಷ್ಣುವಿನ ಸಾಯುಜ್ಯ ಪದವಿ ಕೇಳಿದ. ಶ್ರೀಹರಿಯು ಸಂತೋಷದಿಂದ ತನ್ನ ಸಾಯುಜ್ಯ ಪದವಿ ಕರುಣಿಸಿ ಆ ಇಂದ್ರನನ್ನು ಧನ್ಯನನ್ನಾಗಿ ಮಾಡಿದ.

ದೇವಿ, ನಾನು ನಿನಗೆ ಶ್ರೀಮದ್ ಭಗವದ್ಗೀತೆಯ ಹದಿನೆಂಟೂ ಅಧ್ಯಾಯಗಳ ಮಹಾಮಹಿಮೆಯನ್ನು ಬಣ್ಣಿಸಿ ಹೇಳಿದೆ. ಇದರ ಶ್ರವಣ ಮಾತ್ರದಿಂದಲೇ ಮಾನವರು ಸರ್ವ ಯಜ್ಞಗಳ ಫಲವನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಗೀತೆಯ ಹದಿನೆಂಟನೆಯ ಅಧ್ಯಾಯದ ಮಾಹಾತ್ಮ್ಯ ಎಂಬ ನೂರ ಎಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

**ಪಾರ್ವತಿ:-** ದೇವ ದೇವನಾದ ಮಹಾದೇವ, ನಾನು ನಿನ್ನ ಮುಖದಿಂದ ಅತ್ಯಾಶ್ಚರ್ಯಕರವಾದ ಗೀತೆಯ ಮಹಾಮಹಿಮೆಯನ್ನು ಕೇಳಿದೆ. ಅದರಿಂದ ನನಗೆ ಮತ್ತೆ ಕೃಷ್ಣಕಥೆಯನ್ನು ಕೇಳಲು ಹರಿಭಕ್ತಿಯು ಉತ್ಪನ್ನವಾಗಿದೆ. ಹದಿನೆಂಟು ಪುರಾಣಗಳಲ್ಲಿ ಶ್ರೀ ಭಾಗವತವು ಸರ್ವ ಶ್ರೇಷ್ಠ. ಹೆಜ್ಜೆ ಹೆಜ್ಜೆಗೂ ಅದರಲ್ಲೂ ಶ್ರೀ ಕೃಷ್ಣನ ಮಹಾಮಹಿಮೆಯ ಬಣ್ಣನೆ. ಅದರ ಮಾಹಾತ್ಮ್ಯ ಏನು? ತತ್ವ ಏನು? ಇತಿಹಾಸ ಏನು? ಬಣ್ಣಿಸಿರಿ.

**ಮಹಾದೇವ:-** ನೈಮಿಷ ಕ್ಷೇತ್ರದಲ್ಲಿ ಸತ್ಕಥಾ ಪ್ರವಚನಕ್ಕಾಗಿ ದಿಕ್ಷಾ ಬದ್ಧರಾಗಿ ಕುಳಿತ ಸೂತರನ್ನು ಅಭಿವಂದಿಸಿ ಕಥಾಮೃತ ರಸದ ಆಸ್ಥಾನದಲ್ಲಿ ಕುಶಲರಾದ ಶೌನಕರು ನುಡಿದರು.

**ಶೌನಕ:-** ಅಜ್ಞಾನ ಕತ್ತಲೆಯನ್ನು ಹೊಡೆದೋಡಿಸುವ ಕೋಟಿ ಜನ್ಮದ ಪಾಪವನ್ನು ಕಳೆಯಲು ಶ್ರೀಮದ್ ಭಾಗವತವು ಒಂದು ದಿವ್ಯವಾದ ರಸಾಯನ ಇದ್ದಂತೆ. ಅದನ್ನು ನಮಗೆ ನಿರೂಪಿಸಿರಿ.

**ಸೂತ:-** ಕೃಷ್ಣ ಭಕ್ತಿಯನ್ನು ಅಭಿವೃದ್ಧಿಸುವ ಶ್ರೀಮದ್ ಭಾಗವತವು ಕಲಿಯುಗದಲ್ಲಿ ಲೋಕೋದ್ಧಾರಕ್ಕಾಗಿ ಶ್ರೀ ವ್ಯಾಸರಿಂದ ರಚಿಸಲ್ಪಟ್ಟಿದೆ. ಭಾಗವತ ಗ್ರಂಥದ ಶ್ರವಣದಿಂದ ಪರೀಕ್ಷಿತ ರಾಜನಿಗೆ ಮುಕ್ತಿ ಆದುದನ್ನು ನೋಡಿ ಬ್ರಹ್ಮದೇವನು ಉಳಿದೆಲ್ಲ ಪುರಾಣಗಳನ್ನು ಸಕಲ ಶಾಸ್ತ್ರಗಳನ್ನೂ ಭಾಗವತದೊಡನೆ ತಕ್ಕಡಿಯಲ್ಲಿಟ್ಟು ತೂಗಿ ನೋಡಿದರು. ಅದರಲ್ಲಿ ಶ್ರೀಮದ್ ಭಾಗವತವೇ ಸರ್ವಶ್ರೇಷ್ಠ ಎಂದು ನಿರ್ಣಯವಾಯಿತು. ಈ ಭಾಗವತವು ಭಗವಾನ್ ಶ್ರೀಕೃಷ್ಣನ ಇನ್ನೊಂದು ರೂಪವೇ ಆಗಿರುತ್ತದೆ. ಈ ಭಾಗವತವನ್ನು ಇಡೀ ವರ್ಷ ಪ್ರತಿದಿವಸವೂ ಸ್ವಲ್ಪ ಸ್ವಲ್ಪ ಪಠಣ ಶ್ರವಣ ಮಾಡಿ ಒಂದು ವರ್ಷದಲ್ಲಿ ಅದರ ಸಂಪೂರ್ಣ ಶ್ರವಣ ಪಠಣ ಮಾಡಿದರೆ ಬಹಳ ಪುಣ್ಯ ಮತ್ತು ವಿಪುಲ ಸೌಖ್ಯ ಪ್ರಾಪ್ತಿ. ಒಂದು ತಿಂಗಳಲ್ಲಿ ಭಾಗವತವನ್ನು ಕೇಳಿ ಪಠಿಸಿದರೆ, ಭಗವಂತನಲ್ಲಿ ವಿಶೇಷ ಭಕ್ತಿ ಉತ್ಪನ್ನವಾಗುವುದು. ಏಳು ದಿನಗಳಲ್ಲಿ ಸಪ್ತಾಹ ಕ್ರಮದಿಂದ ಶ್ರೀಮದ್ ಭಾಗವತದ ಪಠಣ ಶ್ರವಣ ಮಾಡಿದರೆ ಮೋಕ್ಷವೇ ದೊರೆಯುವದು. ಸನಕಾದಿಗಳು ಪೂರ್ವಕಾಲದಲ್ಲಿ ನಾರದರಿಗೆ ಭಾಗವತದ ಸಪ್ತಾಹ ಶ್ರವಣದ ವಿಧಿಯನ್ನು ನಿರೂಪಿಸಿದ್ದರು.

**ಶೌನಕ:-** ನಾರದರು ತಮ್ಮ ತಂದೆಯಾದ ಬ್ರಹ್ಮದೇವರ ಮುಖದಿಂದ ಭಾಗವತವನ್ನು ಮೊದಲು ಅಧ್ಯಯನವನ್ನು ಮಾಡಿದ್ದರು. ಅವರು ತ್ರಿಲೋಕ ಸಂಚಾರಿ. ಮಹಾತ್ಮರಾದ ಸನಕಸನಂದನಾದಿಗಳಿಗೂ, ನಾರದರಿಗೂ ಎಂದು ಎಲ್ಲಿ ಮಿಲನವಾಗಿದ್ದಿತು ? ಭಾಗವತ ಸಪ್ತಾಹದ ವಿಧಿವಿಧಾನವನ್ನು ನಾರದರು ಎಲ್ಲಿ ಕೇಳಿದರು?

**ಸೂತ:-** ಒಂದು ದಿನ "ವಿಶಾಲಾ" ಎಂದು ಹೆಸರಾದ ಬದರೀ ಕ್ಷೇತ್ರದಲ್ಲಿ ಕೆಳಗೆ ಮುಖಮಾಡಿಕೊಂಡು ಕುಳಿತ ನಾರದರನ್ನು ಸನಕಸನಂದನರಾದ ಸನಕ, ಸನಾತನ, ಸನಂದನ, ಸನತ್‌ಕುಮಾರ ಎಂಬ ನಾಲ್ಕು ನೈಷ್ಠಿಕ ಬ್ರಹ್ಮಚಾರಿಗಳು ನೋಡಿ ಕೇಳಿದರು. -ನಾರದರೇ ನೀವು ಬಹಳ ಚಿಂತಾಕ್ರಾಂತರಾದಂತೆ ತೋರುವದು. ನಿಮ್ಮ ಮುಖವು ಬಹಳ ಖಿನ್ನವಾಗಿದೆ. ನಿಮ್ಮ ಚಿಂತೆಗೆ ಕಾರಣವೇನು?

**ನಾರದ:-** ನಾನು ಈ ಭೂಮಂಡಲದಲ್ಲಿ ಇರುವ ಕಾಶಿ, ಪ್ರಯಾಗ ಪುಷ್ಕರ, ಕುರುಕ್ಷೇತ್ರ, ಶ್ರೀರಂಗ, ಕನ್ಯಾಕುಮಾರಿ ಮುಂತಾದ ಎಲ್ಲ ಪುಣ್ಯಕರವಾದ ತೀರ್ಥಕ್ಷೇತ್ರಗಳಲ್ಲಿ ಸಂಚರಿಸಿದೆ. ಕಲಿಯು ಈ ಭೂಮಿಯನ್ನು ಭಾದಿಸುತ್ತ ಇದ್ದಾನೆ. ಸತ್ಯ, ಶೌಚ, ದಯಾ, ದಾನ ಮುಂತಾದ ಮುಖ್ಯ ಧರ್ಮಗಳು ಎಲ್ಲಿಯೂ ಭೂಲೋಕದಲ್ಲಿ ಕಾಣುವದಿಲ್ಲ. ಇಂದಿನ ಮಾನವರಿಗೆ ಹೊಟ್ಟೆ ಹೊರೆಯುವದೇ ಜೀವನದ ಮುಖ್ಯ ಉದ್ದೇಶ. ಸುಳ್ಳು, ಸಾಕ್ಷಿ, ನಾಸ್ತಿಕ ಭಾವ, ಕನ್ಯಾವಿಕ್ರಯ, ಭ್ರಷ್ಟಾಚಾರ, ಸ್ವೇಚ್ಛಾಚಾರ ಎಲ್ಲ ಕಡೆಗೂ ತುಂಬಿ ಹೋಗಿದೆ. ಗೃಹಸ್ಥಾಶ್ರಮಿಗಳ ಮನೆಗಳಲ್ಲೆಲ್ಲ ಹೆಂಗಸರದೇ ಕಾರಭಾರ. ಬ್ರಹ್ಮಚಾರಿಗಳು ತಮ್ಮ ಬ್ರಹ್ಮಚರ್ಯ ವ್ರತವನ್ನು ಪಾಲಿಸುವದೇ ಇಲ್ಲ. ಸಂನ್ಯಾಸಿಗಳು ಭೋಗ ವಿಲಾಸ ಲಾಲಸರು.

**ಅಷ್ಟ ಶೂಲಾ ಜನ ಪದಾಃ ಶಿವಶೂಲಾದ್ ಜಾತಯಃ ।**
**ಕಾಮಿನ್ಯಃ ಕೇಶಶೂಲಿನ್ಯೋ ತ್ರಿಶ್ಯಂತೇ ಭುವಿಸರ್ವತಃ ॥**

ದೇಶದ ತುಂಬೆಲ್ಲ ಅನ್ನದ ಮಾರಾಟ ನಡೆಯುತ್ತದೆ. ಬ್ರಾಹ್ಮಣರು ವೇದಶಾಸ್ತ್ರ ವಿದ್ಯೆಯನ್ನು ಮಾರಾಟ ಮಾಡುತ್ತಿದ್ದಾರೆ. ಹೆಣ್ಣು ಮಕ್ಕಳು ಬಗೆಬಗೆಯ ವಿನ್ಯಾಸ ಮಾಡಿಕೊಂಡು ಆದರಿಂದ ಹಣಗಳಿಸುತ್ತಾರೆ. ಯೋಗಿಯಾಗಲಿ, ಸಿದ್ಧನಾಗಲಿ, ಜ್ಞಾನಿಯಾಗಲಿ ಪ್ರಾಮಾಣಿಕ ರೀತಿಯಿಂದ 'ಭಗವತ್ ಪ್ರೀತಿಕಾರಕವಾದ ಭಾಗವತ ಧರ್ಮವನ್ನು ಅನುಷ್ಠಾನ ಮಾಡುವದಿಲ್ಲ.

ನಾನು ಒಂದು ಸಲ ದೇಶಸಂಚಾರ ಮಾಡುತ್ತ ಶ್ರೀಹರಿಯ ಲೀಲಾಭೂಮಿಯಾದ ಬೃಂದಾವನಕ್ಕೆ ಹೋಗಿದ್ದೆ. ಅಲ್ಲಿ ಒಬ್ಬ ತರುಣಿಯು ಖಿನ್ನಳಾಗಿ ಕುಳಿತು ಕೊಂಡಿದ್ದಳು. ಅವಳ ಅಕ್ಕಪಕ್ಕದಲ್ಲಿ ಇಬ್ಬರು ಮುದುಕರು ಮೂರ್ಛೆಹೊಂದಿ ಬಿದ್ದಿದ್ದರು. ಈ ತರುಣಿಯು ಅವರಿಬ್ಬರೂ ಮುದುಕರನ್ನು ಸೇವಿಸುತ್ತ ಎಚ್ಚರಗೊಳಿಸಲು ಪ್ರಯತ್ನಿಸಿದ್ದಳು. ಬಹಳ ದುಃಖದಿಂದ ಅಳುತ್ತಲಿರುವ ಅವಳನ್ನು ದೂರದಿಂದ - "ಕಲ್ಯಾಣಿ, ನೀನು ಯಾರು? ನಿನ್ನ ಅಕ್ಕಪಕ್ಕದಲ್ಲಿ ಬಿದ್ದ ಇವರು ಯಾರು? ನಿನ್ನ ದುಃಖಕ್ಕೆ ಕಾರಣವೇನು? ಹೇಳು." ಎಂದು ಕೇಳಿದೆ.

**ತರುಣಿ:-** ನಾನು ಭಕ್ತಿ. ಜ್ಞಾನ, ವೈರಾಗ್ಯ ಎಂಬ ಹೆಸರಿನ ಇವರಿಬ್ಬರೂ ನನ್ನ ಮಕ್ಕಳು. ಗಂಗಾದಿ ತೀರ್ಥಗಳು ನನ್ನ ಸೇವೆಗೆ ಇಲ್ಲಿ ಬಂದಿರುತ್ತವೆ. ನಾನು ಹುಟ್ಟಿದ್ದು ದ್ರಾವಿಡ ದೇಶದಲ್ಲಿ. ಬೆಳೆದಿದ್ದು ಕರ್ನಾಟಕದಲ್ಲಿ. ಮಹಾರಾಷ್ಟ್ರದಲ್ಲಿಯೂ ನನಗೆ ತುಸು ನೆಲೆ ಸಿಕ್ಕಿತ್ತು. ಆದರೆ ಗುಜರಾತದಲ್ಲಿ ಮಾತ್ರ ನನಗೆ ಒಮ್ಮೆಲೇ ಮುಪ್ಪು ಅಡರಿತು. ಮುಂದೆ ಈ ಜ್ಞಾನ ವೈರಾಗ್ಯ ಎಂಬ ನನ್ನ ಮಕ್ಕಳನ್ನು ಕರೆದುಕೊಂಡು ನಾನು ಬೃಂದಾವನಕ್ಕೆ ಬಂದೆ. ಇಲ್ಲಿ ಬಂದ ಕೂಡಲೇ ನನಗೆ ತಾರುಣ್ಯವೇ ಬಂದಂತಾಯಿತು. ನಾನು ಮತ್ತೆ ಮೊದಲಿನಂತೆ ಹುಡುಗಿಯಾದೆ. ಆದರೆ ಇಲ್ಲಿಯೂ ಈ ನನ್ನ ಜ್ಞಾನ ವೈರಾಗ್ಯ ಎಂಬ ಮಕ್ಕಳು ಮಾತ್ರ ಮುಪ್ಪಿನ ಮದುಕರಾಗಿ ಮಲಗಿ ಬಿಟ್ಟಿದ್ದಾರೆ. ಏನು ಮಾಡಲಿ? ಮಕ್ಕಳು ಮುದುಕರು. ತಾಯಿ ಮಾತ್ರ ತರುಣಿ. ಇದೊಂದು ವಿಪರೀತ ಘಟನೆ ಅಲ್ಲವೆ? ಇದಕ್ಕೆ ಕಾರಣವೇನು? ನಿಮಗೆ ಗೊತ್ತಿದ್ದರೆ ಹೇಳಿರಿ. ಆಗ ನಾನು ಅವಳಿಗೆ ಹೇಳಿದೆ.

**ನಾರದ:-** ಇದು ಕಲಿಯುಗ. ಈಗ ಕಲಿಪ್ರಭಾವದಿಂದ ಸದಾಚಾರ, ತಪಸ್ಸು, ಯೋಗಮಾರ್ಗ ಎಲ್ಲವೂ ಲುಪ್ತವಾಗಿ ಹೋಗಿವೆ. ಜನರೆಲ್ಲರೂ ತಮ್ಮ ದುಷ್ಕೃತ್ಯಗಳಿಂದ

ರಾಕ್ಷಸರಂತೆ ಆಗಿದ್ದಾರೆ. ನೀನೂ ಕೂಡ ವಿಷಯಲಂಪಟರಾದ ಜನರ ಶೌಠ್ಯ ದೌಷ್ಟ್ಯಗಳ ಪರಿಣಾಮವಾಗಿ ಮುಪ್ಪಿನ ಮುದುಕಿಯಾಗಿದ್ದೆ. ಆದರೆ ಪಾವನವಾದ ಈ ಬೃಂದಾವನದ ಸಂಪರ್ಕದಿಂದ ನೀನು ಮತ್ತೆ ತರುಣಿಯಾದೆ. ಆದರೆ ಈ ಜ್ಞಾನ ವೈರಾಗ್ಯಗಳನ್ನು ಸ್ವೀಕರಿಸುವವರೇ ಇಲ್ಲದ್ದರಿಂದ ಅವು ಈಗ ಮುದುಕರಾಗಿರುತ್ತವೆ.

**ಭಕ್ತಿ:-** ಪರೀಕ್ಷಿತರಾಜನು ಕಲಿಯನ್ನು ಹೀಗೇಕೆ ಬೆಳೆಯಲು ಬಿಟ್ಟಿದ್ದಾನೆ? ದಯಾಳುವಾದ ಶ್ರೀಹರಿಯು ಅಧರ್ಮವನ್ನು ನಾಶಮಾಡದೇ ಏಕೆ ಉಪೇಕ್ಷೆ ಮಾಡಿದ್ದಾನೆ?

**ನಾರದ:-** ಶ್ರೀಕೃಷ್ಣನು ತನ್ನ ಅವತಾರ ಕಾರ್ಯವನ್ನು ಸಮಾಪ್ತಗೊಳಿಸಿ ಪರಂಧಾಮಕ್ಕೆ ಪ್ರಯಾಣ ಬೆಳೆಸಿದ ಕೂಡಲೇ ಕಲಿಯು ಈ ಭೂಲೋಕಕ್ಕೆ ಪ್ರವೇಶ ಮಾಡಿದ. ಅನಂತರ ಪರೀಕ್ಷಿತ ರಾಜನು ಕಲಿಯನ್ನು ನಿಗ್ರಹಿಸಬೇಕೆಂದು ದಿಗ್ವಿಜಯಕ್ಕೆ ಹೊರಟಾಗ ಅವನು ಆ ರಾಜನಿಗೆ ಶರಣು ಹೋದ. ಕಲಿಯುಗದ ಗುಣಗಳನ್ನು ಕಂಡು ಪರೀಕ್ಷಿತನು ಅವನನ್ನು ಕೊಲ್ಲದೇ ಬಿಟ್ಟು ಬಿಟ್ಟ. ತಪಸ್ಸು, ಯೋಗ, ಸಮಾಧಿ ಮುಂತಾದವುಗಳಿಂದ ದೊರಕದ ಫಲವು ಕಲಿಯುಗದಲ್ಲಿ ಕೇಶವನ ನಾಮೋಚ್ಚಾರಣ ಮಾತ್ರದಿಂದ ಲಭಿಸುತ್ತವೆ. ಕಲಿಕಾಲದಲ್ಲಿ ಹುಟ್ಟಿದ ಜನರು ಸುಲಭೋಪಾಯದಿಂದಲೇ ಶ್ರೀಹರಿಯ ನಾಮಸ್ಮರಣ ಮಾಡಿ ಉದ್ಧಾರ ಹೊಂದಲಿ ಎಂದು ಕಲಿಯನ್ನು ನಿಗ್ರಹಿಸದೇ ಇಟ್ಟಿದ್ದಾನೆ.

ಈಗ ಕಲಿಯುಗದಲ್ಲಿ ಕುಕರ್ಮಗಳ ಆಚರಣೆಯಿಂದ ಎಲ್ಲ ಪದಾರ್ಥಗಳಲ್ಲಿ ಸಾರಭಾಗವು ಹೊರಟುಹೋಗಿದೆ. ಬ್ರಾಹ್ಮಣರು ದ್ರವ್ಯದ ಆಶೆಯಿಂದ ಮನೆ ಮನೆಯಲ್ಲಿ ಭಾಗವತದ ಪ್ರವಚನವನ್ನು ಮಾಡುವದರಿಂದ ಅದರ ಕಥೆಯ ಸಾರವು ನಷ್ಟವಾಗಿದೆ. ನಾಸ್ತಿಕರು ಪಾಂಥಿಕರು ತುಂಬಿ ಬಿಟ್ಟಿದ್ದರಿಂದ ತೀರ್ಥಗಳೆಲ್ಲವೂ ನಿಸ್ಸಾರವಾಗಿವೆ. ಕಾಮ, ಕ್ರೋಧ, ಲೋಭಗಳು ತುಂಬಿದ ಲಂಪಟಜನರು ಯಜ್ಞ, ಯಾಗ, ಮುಂತಾದವುಗಳನ್ನು ಮಾಡುವದರಿಂದ ವೇದಶಾಸ್ತ್ರೋಕ್ತವಾದ ಕರ್ಮಗಳೆಲ್ಲವೂ ನಿಸ್ಸಾರವಾಗಿವೆ. ಮನಸ್ಸಿನ ಮೇಲೆ ಯಾರದೂ ಹಿಡಿತವೇ ಇಲ್ಲದ್ದರಿಂದ ಮತ್ತು ನಾಸ್ತಿಕ್ಯ ಭಾವನೆ, ಜಂಭ, ಮತ್ತು ಶಾಸ್ತ್ರಗಳ ಅನಭ್ಯಾಸ ಮುಂತಾದವುಗಳಿಂದ ಧ್ಯಾನಯೋಗದ ಫಲವು ನಷ್ಟವಾಗಿವೆ. ಪಂಡಿತರಾದವರೆಲ್ಲರೂ ಮಡದಿಯೊಂದಿಗೆ ಕೋಣಗಳಂತೆ ಕಾಮಕೇಳಿ ವಿಲಾಸಗಳಲ್ಲಿ ಮಗ್ನರಾಗಿರುತ್ತಾರೆ. ಕಲಿಯುಗದ ಎಲ್ಲ ವಿದ್ವಾಂಸರು ಮಕ್ಕಳನ್ನು ಹುಟ್ಟಿಸುವದರಲ್ಲಿಯೇ ದಕ್ಷರು. ಮುಕ್ತಿಸಾಧನದಲ್ಲಿ ಯಾರೂ ದಕ್ಷರಲ್ಲ. ವೈಷ್ಣವತ್ವವು ಲುಪ್ತವೇ ಆಗಿದೆ. ಎಲ್ಲರೂ ದೇವರನ್ನು ನಿಂದಿಸುವವರೇ. ಸಜ್ಜನರನ್ನು ಪೀಡಿಸುವವರೇ. ಇದು ಇಂದಿನ ಕಲಿಕಾಲದ ಧರ್ಮ. ಇದರಲ್ಲಿ ಯಾರು ಯಾರನ್ನು ದೂಷಿಸುವದು? ಆದುದರಿಂದ ನೀನು ಶ್ರೀಹರಿಯನ್ನೇ ಸ್ಮರಿಸು. ಅದರಿಂದ ಸೌಖ್ಯವನ್ನು ಹೊಂದುವೆ.

**ಭಕ್ತಿ:-** ದೇವರ್ಷಿಯೆ, ಭಗವದ್‌ಭಕ್ತ ಶ್ರೇಷ್ಠನಾದ ನಿನ್ನ ದರ್ಶನದಿಂದ ನಾನು ಧನ್ಯಳಾದೆ. ಕಯಾದು ಮಗನಾದ ಪ್ರಹ್ಲಾದನಿಗೂ, ಧ್ರುಮಕುಮಾರನಿಗೂ ಉಪದೇಶ ನೀಡಿ ಅವರಿಗೆ ಭಗವತ್ ಸಾಕ್ಷಾತ್ಕಾರ ಆಗುವಂತೆ ಮಾಡಿದ ಬ್ರಹ್ಮಪುತ್ರನಾದ ನಿನಗೆ ನನ್ನ ವಂದನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಭಾಗವತ ಮಾಹಾತ್ಮ್ಯ ಎಂಬ ನೂರಎಪ್ಪತ್ತೈದನೇಯ ಅಧ್ಯಾಯ ಮುಗಿದುದು*

—o—

**ನಾರದ:-** ಭಕ್ತಿಬಾಲೆಯೆ, ನೀನು ದುಃಖಪಡಬೇಡ. ದ್ರೌಪದಿಯ ಮಾನ ರಕ್ಷಣೆ ಮಾಡಿದ ಶ್ರೀಕೃಷ್ಣನ ಚರಣವನ್ನು ಮನಸ್ಸಿನಲ್ಲಿ ಸ್ಮರಿಸು. ಕೃತ ತ್ರೇತಾದಿಯುಗಗಳಲ್ಲಿ ಜ್ಞಾನ ಯಜ್ಞಗಳು ಮುಕ್ತಿಸಾಧಕವಾದರೆ ಕಲಿಯುಗದಲ್ಲಿ ಭಕ್ತಿ ಮಾತ್ರ ಮೋಕ್ಷ ಸಾಧಕ. ಭಗವಾನ್ ಮಹಾವಿಷ್ಣುವು ಜ್ಞಾನಾನಂದ ಸ್ವರೂಪವಾದ ತನ್ನ ದೇಹದಿಂದ ನಿನ್ನನ್ನು ನಿರ್ಮಿಸಿ ನಿನಗೆ 'ಮುಕ್ತಿ' ಎಂಬ ದಾಸಿಯನ್ನೂ ಜ್ಞಾನವೈರಾಗ್ಯ ಎಂಬ ಮಕ್ಕಳನ್ನೂ ಕೊಟ್ಟಿದ್ದಾನೆ. ನೀನು ವೈಕುಂಠ ಲೋಕದಲ್ಲಿಯೇ ಇದ್ದು ಅವರನ್ನು ಪಾಲಿಸಿ ಪೋಷಿಸುವೆ. ಈಗ ಅದರ ಛಾಯಾರೂಪವಾಗಿ ಆ ನಿನ್ನ ದಾಸಿ ಮತ್ತು ಮಕ್ಕಳೊಂದಿಗೆ ಭೂಲೋಕಕ್ಕೆ ಬಂದಿರುವೆ. ದಾಸಿಯಾದ ಮುಕ್ತಿಯಂತೂ ಈ ಕಲಿಯುಗದಲ್ಲಿ ಬಹಳ ಕ್ಷೀಣವಾಗಿ ಹೋಗಿದೆ. ನೀನು ಸ್ಮರಣ ಮಾಡಿದರೆ ಈಗಲೇ ಆ ಮುಕ್ತಿಯು ಬಂದು ಬಿಡುತ್ತಾಳೆ. ನಿನ್ನ ಪಕ್ಕದಲ್ಲಿ ಮಲಗಿದ ಜ್ಞಾನ ವೈರಾಗ್ಯವೆಂಬ ಇಬ್ಬರು ಮಕ್ಕಳು ಜನರ ಉಪೇಕ್ಷೆ ಅನಾದರಗಳಿಂದ ಮುದುಕರಾಗಿದ್ದಾರೆ. ನೀನು ಅವರ ಚಿಂತೆಯನ್ನು ಬಿಟ್ಟುಬಿಡು. ನಾನೊಂದು ಉಪಾಯಮಾಡಿ ಆ ಮಕ್ಕಳನ್ನು ಎಬ್ಬಿಸಿ ಕೂಡಿಸುತ್ತೇನೆ. ತಪಸ್ಸು, ವೇದ, ಜ್ಞಾನ, ಕರ್ಮಗಳಿಂದ ಸಾಧ್ಯಇಲ್ಲದ ಶ್ರೀಹರಿಯ ಪ್ರಸಾದವು ಭಕ್ತಿಯಿಂದ ಲಭ್ಯವಾಗುತ್ತದೆ. ಈ ವಿಷಯದಲ್ಲಿ ಗೋಪಿಕಾ ಸ್ತ್ರೀಯರೇ ಪ್ರಮಾಣ. ಕಲಿಯುಗದಲ್ಲಿ ಭಕ್ತಿ ಒಂದೇ ತಾರಕ.

ಹೀಗೆ ಹೇಳಿ ನಾರದರು ಆ ಬಾಲೆಯನ್ನು ಸಮಾಧಾನಪಡಿಸಿ ಮರುವುಗಟ್ಟಿ ಮಲಗಿದ ಆ ಭಕ್ತಿಯ ಮಕ್ಕಳನ್ನು ಎಬ್ಬಿಸಲು ಪ್ರಯತ್ನ ಮಾಡಿದರು. ''ಜ್ಞಾನವೇ, ಏಳು. ವೈರಾಗ್ಯವೇ, ಎಚ್ಚರವಾಗು'' ಎಂದು ಕೂಗಿ ವೇದವೇದಾಂತ ಘೋಷಗಳಿಂದಲೂ ಒದರಿ ಎಬ್ಬಿಸಿದರೂ ಅವರಿಬ್ಬರೂ ತೂಕಡಿಸಿ ಮತ್ತೆ ಮೈ ಮಡಿಚಿ ಮಲಗಿಕೊಂಡರು. ಆಗ ನಾನು (ನಾರದ) ಏನು ಮಾಡಬೇಕೆಂಬುದು ತಿಳಿಯದೇ ಗೋವಿಂದನ ನಾಮಸ್ಮರಣೆ ಮಾಡಿದೆ. ಆಗ ಒಮ್ಮೆಲೇ ಆಕಾಶವಾಣಿಯಾಯಿತು ''ನಾರದ, ನೀನು ಒಂದು ಸತ್ಕರ್ಮಮಾಡು. ಅದರಿಂದ ಈ ಜ್ಞಾನ ವೈರಾಗ್ಯಗಳ ಮುಪ್ಪುಮರೆಯಾಗಿ ಯೌವನ ಮರುಕಳಿಸುವದು. ಭಕ್ತಿಯು ಎಲ್ಲ ಕಡೆಗೆ ಪ್ರಸಾರ ಹೊಂದುವದು. ಆ ಸತ್ಕರ್ಮ ಏನು ಎಂಬುದನ್ನು ಋಷಿಗಳು ಮತ್ತು ಸಾಧುಸಂತರು ನಿನಗೆ ಹೇಳುತ್ತಾರೆ.''

ಈ ಆಕಾಶವಾಣಿಯನ್ನು ಕೇಳಿ ನಾರದರಿಗೆ ಚಿಂತೆಯಾಯಿತು. ಅವರು ಸಾಧುಸಂತರನ್ನು ಹುಡುಕುತ್ತ ಹೊರಟರು. ತಮಗೆ ಭೆಟ್ಟಿಯಾದ ಋಷಿಮುನಿಗಳಿಗೆಲ್ಲ ಮುಪ್ಪಿನ ಮುದುಕರಾದ ಜ್ಞಾನವೈರಾಗ್ಯಗಳನ್ನು ತರುಣರನ್ನಾಗಿಸುವ ಸತ್ಕರ್ಮಯಾವದು ಎಂದು ಕೇಳಿದರು. ಯಾರೂ ಸರಿಯಾದ ಉತ್ತರ ಕೊಡಲಿಲ್ಲ. ಆಗ ಅವರು ಬದರೀ ಕ್ಷೇತ್ರಕ್ಕೆ ಬಂದರು. ಅಲ್ಲಿ ಕೋಟಿ ಸೂರ್ಯ ಸಮಾನ ಕಾಂತಿಯುಳ್ಳ ಭಗವದ್ಭಕ್ತರಾದ ಐದು ವರ್ಷದ ಯೋಗೀಶ್ವರರೆನಿಸಿದ ಸನಕ, ಸನಂದನ, ಸನಾತನ, ಸನತ್ಕುಮಾರ, ಎಂಬ ಯೋಗಿಶ್ರೇಷ್ಠರ ದರ್ಶನವಾಯಿತು. ನಾರದರು ಅವರಿಗೆ ನಮಿಸಿ ಜ್ಞಾನವೈರಾಗ್ಯಗಳ ಪುನರುಜ್ಜೀವನಕ್ಕೆ ಉಪಾಯ ಏನು ಎಂದು ಕೇಳಿದರು.

**ಕುಮಾರರು:-** ಮುನೀಶ್ವರ, ಎಲ್ಲ ಯಜ್ಞಗಳಲ್ಲಿ ಜ್ಞಾನಯಜ್ಞವು ಪರಮಶ್ರೇಷ್ಠ. ಶುಕಾಚಾರ್ಯರ ಮುಖದಿಂದ ಬಂದ ಶ್ರೀಮದ್ಭಾಗವತ ಪ್ರವಚನವು, ಭಕ್ತಿ, ಜ್ಞಾನ ವೈರಾಗ್ಯಗಳಿಗೆ ಅಭ್ಯುದಯವನ್ನು ತಂದು ಕೊಡುವುದು.

**ನಾರದ:-** ವೇದ ವೇದಾಂತ ಘೋಷದಿಂದಲೂ, ಗೀತಾಪಾಠದಿಂದಲೂ, ಎದ್ದು ಕೂಡದ ಜ್ಞಾನ, ವೈರಾಗ್ಯಗಳಿಗೆ ಕೇವಲ ಭಾಗವತ ಪ್ರವಚನದಿಂದ ಎಚ್ಚರವು ಹೇಗೆ ಬರುವುದು?

**ಕುಮಾರರು:-** ಭಾಗವತ ಕಥೆಯು ವೇದೋಪನಿಷತ್ತುಗಳ ಸಾರ. ಮೂಲದಲ್ಲಿ ಇರದೇ ಇರುವ ವಿಚಿತ್ರಶಕ್ತಿ, ಸ್ವಾದ, ಸ್ವಾರಸ್ಯಗಳು ಅವುಗಳಿಂದ ಉತ್ಪನ್ನವಾದ ಭಾಗವತದಲ್ಲಿ ಇರುತ್ತದೆ. ಎಷ್ಟೋ ವಸ್ತುಗಳಲ್ಲಿ ಆಮೂಲಾಗ್ರರಸವೇ ತುಂಬಿದ್ದರೂ ಅದನ್ನು ಬೇರೆ ಮಾಡಿ ತಿಂದಾಗ ಅದಕ್ಕೊಂದು ವಿಚಿತ್ರಶಕ್ತಿ ಸವಿ ಬರುತ್ತದೆ. ಹಾಲಿನಲ್ಲಿ ತುಪ್ಪವಿದ್ದರೂ ಬರಿ ಹಾಲು ಕುಡಿದಾಗ ತುಪ್ಪದ ರುಚಿಗೊತ್ತಾಗುವದಿಲ್ಲ. ಹೂವಿನಲ್ಲಿ ಜೇನು ಇದ್ದರೂ ಬರೀ ಹೂವಿನ ಪಕಳೆಗಳನ್ನೇ ತಿಂದಾಗ ಆ ಜೇನಿನ ಆನಂದವಾಗುವದಿಲ್ಲ. ಕಬ್ಬಿನಲ್ಲಿ ಮೊದಲಿನಿಂದ ಕೊನೆಯ ವರೆಗೆ ಸಕ್ಕರೆ ತುಂಬಿದರೂ ಅದನ್ನು ಕಬ್ಬಿನಿಂದ ಹೀರಿ ಸಾರೋದ್ಧಾರ ಮಾಡಿ ಪ್ರತ್ಯೇಕ ಸಕ್ಕರೆಯನ್ನು ಮಾಡಿದಾಗ ದರ ಸ್ವಾದವು ಆನಂದದಾಯಕವಾಗುವದು.

ಅದರಂತೆ ವೇದ, ಪುರಾಣ, ಗೀತೆ, ಉಪನಿಷತ್ತು, ವೇದಾಂತಗಳಲ್ಲಿ ಅಧ್ಯಾತ್ಮ ತತ್ವಜ್ಞಾನ ತುಂಬಿದ್ದರೂ ಅದನ್ನೇ ಭಾಗವತ ರೂಪವಾಗಿ ಬೇಪದಿಸಿ ಪ್ರತ್ಯೇಕವಾಗಿ ಇಟ್ಟಾಗ ಮೂಲವಸ್ತುಗಳಾದ ಹಾಲು, ಹೂ, ಕಬ್ಬುಗಳಿಂದ ಸಾರೋದ್ಧಾರ ಮಾಡಿ ಎತ್ತಿ ತುಪ್ಪ, ಜೇನು, ಸಕ್ಕರೆ ಎಂಬ ಪದಾರ್ಥಾಂತರಗಳನ್ನಾಗಿ ಮಾಡಿದಾಗ ಅದಕ್ಕೊಂದು ವಿಶಿಷ್ಟವಾದ ಹೊಸರುಚಿ ಬರುವಂತೆ ಭಾಗವತಕ್ಕೊಂದು ಹೊಸ ಸತ್ವ, ಹೊಸ ಸ್ವಾರಸ್ಯ, ಹೊಸರುಚಿ ಬರುವದು. ಭಕ್ತಿ ಜ್ಞಾನ ವೈರಾಗ್ಯಗಳ ಅಭಿವೃದ್ಧಿಗಾಗಿಯೇ ಶ್ರೀಕೃಷ್ಣನು ಮೊದಲು ಶೇಷಶಾಯಿಯಾಗಿದ್ದಾಗ ತನ್ನ ಹೊಕ್ಕಳಿನ ಹೊಂದಾವರೆಯಿಂದ ಹುಟ್ಟಿದ ಚತುರ್ಮುಖನಿಗೆ ವೇದ ಪುರಾಣಗಳ ಸಾರವಾದ ಭಾಗವತವನ್ನು ಪ್ರೀತಿಯಿಂದ ಹೇಳಿದ. ಆ ಚತುರ್ಮುಖನು (ನಿನಗೂ) ನಾರದನಿಗೂ, ನೀನು ವೇದವ್ಯಾಸರಿಗೂ ಹೇಳಿದಿರಿ. ವ್ಯಾಸರು ಜಗತ್ತಿನ ಹಿತಕ್ಕಾಗಿ ಆ ಭಾಗವತವನ್ನು ಸ್ವಾರಸ್ಯಪೂರ್ಣವಾಗಿ ರಚಿಸಿ ಇಟ್ಟಿದ್ದಾರೆ. ಈ ಭಾಗವತ ಪ್ರವಚನವೇ ಮುಖ್ಯವಾದ ಸತ್ಕರ್ಮ. ಇದರಿಂದಲೇ ಜ್ಞಾನಭಕ್ತಿ ವೈರಾಗ್ಯಗಳಿಗೆ ಸುಖ ಸೌಭಾಗ್ಯ ಶುಭೋದಯ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ನಾರದರಿಂದ ಭಕ್ತಿಯ ಸಂಸ್ಥಾಪನೆ ಎಂಬ ನೂರ ಎಪ್ಪತ್ತಾರನೇಯ ಅಧ್ಯಾಯ ಮುಗಿದುದು*

—o—

**ನಾರದ:-** ಜ್ಞಾನ, ಭಕ್ತಿ, ವೈರಾಗ್ಯಗಳ ಪುನಃ ಸ್ಥಾಪನೆಗಾಗಿ ವೇದವ್ಯಾಸರು ಶುಕಾಚಾರ್ಯರ ಮುಖಾಂತರವಾಗಿ ಪ್ರಚುರಗೊಳಿಸಿದ ಭಾಗವತ ಪ್ರವಚನ ರೂಪವಾದ ಜ್ಞಾನಯಜ್ಞವನ್ನು ನಾನು ಮಾಡುತ್ತೇನೆ. ಅದಕ್ಕೆ ನಿಮ್ಮನ್ನೇ ಮುಖ್ಯ ಋತ್ವಿಜರನ್ನಾಗಿ ನಾನು ಆರಿಸಿದ್ದೇನೆ. ಅದನ್ನು ನಾನು ಹೇಗೆ ಮಾಡಬೇಕು? ಎಲ್ಲಿ ಮಾಡಬೇಕು? ಎಷ್ಟು ದಿವಸ ಮಾಡಬೇಕು? ಹೇಗೆ ಕೇಳಬೇಕು? ಈ ಸಪ್ತಾಹದ ವಿಧಿವಿಧಾನಗಳೇನು? ಇದನ್ನೆಲ್ಲ ನೀವು ನನಗೆ ಹೇಳಿರಿ. ಜ್ಞಾನಯಜ್ಞ ವಿಶಾರದರಲ್ಲವೇ ಬ್ರಹ್ಮದೇವ ಮಕ್ಕಳಾದ ನೀವು !

**ಕುಮಾರರು:-** ನಾರದ, ಗಂಗಾದ್ವಾರದ ಸಮೀಪದಲ್ಲಿ ಕಾಮದಾ ಎಂಬ ಪಟ್ಟಣವಿದೆ. ಅಲ್ಲಿ ಆ ಗಂಗಾ ನದಿಯ ಉತ್ತರ ತೀರದಲ್ಲಿ ಆನಂದ ಎಂಬ ಒಂದು ಏಕಾಂತ ಮನೋಹರವಾದ ರಮಣೀಯ ಸ್ಥಳವಿರುತ್ತದೆ. ಅಲ್ಲಿ ನೀನು ಜ್ಞಾನ ಯಜ್ಞ ಮಾಡು. ಅಲ್ಲಿ ನಡೆಯುವ ಭಾಗವತ ಯಜ್ಞಕ್ಕೆ ಭಕ್ತಿಯು ಮುಪ್ಪಿನ ಮುದುಕರಾದ ತನ್ನ ಇಬ್ಬರೂ ಮಕ್ಕಳನ್ನೂ ಕರೆದುಕೊಂಡು ಬರುವಳು. ಅಲ್ಲಿ ಭಕ್ತಿಯು ತರುಣಿಯಂತೆ ಆಗುವಳು, ಅವಳ ಮಕ್ಕಳೂ ಯುವಕರಾಗುವರು.

**ಸೂತ:-** ಹೀಗೆಂದು ಆ ನಾಲ್ವರೂ ಕುಮಾರರು ನಾರದರೊಡನೆ ಜ್ಞಾನಯಜ್ಞವನ್ನು ನೆರವೇರಿಸುವದಕ್ಕಾಗಿ ಗಂಗಾದ್ವಾರಕ್ಕೆ ಆಗಮಿಸಿದರು. ಅಲ್ಲಿ ಆ ಭಾಗವತ ಪ್ರವಚನದ ಮಹಾಕಾರ್ಯಕ್ಕಾಗಿ ಎಲ್ಲ ವಿಷ್ಣುಭಕ್ತರೂ ಓಡೋಡಿ ಬಂದರು. ಭೃಗು, ಗೌತಮ, ಪರಶುರಾಮ, ವಿಶ್ವಾಮಿತ್ರ, ಮಾರ್ಕಂಡೇಯ, ಪಿಪ್ಪಲಾದ ಮುಂತಾದ ಪ್ರಾಚೀನ ಮುನಿಗಳೂ, ಸ್ವಯಂ ವೇದವ್ಯಾಸರೂ, ಶುಕಾಚಾರ್ಯರೂ, ಪರಾಶರರೂ ತಮ್ಮ ತಮ್ಮ ಶಿಷ್ಯ ಪರಿವಾರದೊಂದಿಗೆ ಅಲ್ಲಿಗೆ ಆಗಮಿಸಿದರು. ಈ ಜ್ಞಾನಸತ್ರದ ದೀಕ್ಷೆಯನ್ನು ಪರಿಗ್ರಹಣ ಮಾಡಿದ ನಾರದರು ಎಲ್ಲರಿಗೂ ಯೋಗ್ಯವಾದ ಆಸನ, ಸ್ಥಾನ ಕೊಟ್ಟು ಗೌರವಿಸಿದರು. ಸನಕ ಸನಂದನಾದಿಗಳು ಎಲ್ಲರಿಂದಲೂ ವಂದಿತರಾಗಿ ಮುಖ್ಯಾಸನದ ಮೇಲೆ ಕುಳಿತರು. ಮುಂಭಾಗದಲ್ಲಿ ನಾರದರು, ನಾರದರ ಬಲಭಾಗದಲ್ಲಿ ದೇವತೆಗಳು, ಎಡಭಾಗದಲ್ಲಿ ಮುನಿಮಹರ್ಷಿಗಳು, ಒಂದು ಬದಿ ಉಪನಿಷತ್ತುಗಳು, ಇನ್ನೊಂದು ಬದಿ ತೀರ್ಥಕ್ಷೇತ್ರಗಳೂ ಉಪಸ್ಥಿತರಾದರು. ದೇವತೆಗಳು ವಿಮಾನದಲ್ಲಿ ಕುಳಿತು ಪುಷ್ಪವೃಷ್ಟಿ ಮಾಡಿದರು. ಇಂಥ ಪರಮ ಪವಿತ್ರವಾದ ಅಧ್ಯಾತ್ಮದ ನೆಲೆಯಲ್ಲಿ ನಿಂತು ಸನತ್ಕುಮಾರ ಸನಕ ಸನಂದನ ಸನಾತನರು ನಾರದರಿಗೆ ಭಾಗವತದ ಮಹಿಮೆ ಹೇಳಿದರು.

**ಕುಮಾರರು:-** ನಾರದ ! ಭಾಗವತದ ಮಹಿಮೆಯನ್ನು ಹೇಳುತ್ತೇನೆ ಕೇಳು. ಈ ಗ್ರಂಥದಲ್ಲಿ ಹದಿನೆಂಟುಸಾವಿರ ಶ್ಲೋಕಗಳು, ಹನ್ನೆರಡು ಸ್ಕಂದಗಳು ಪರೀಕ್ಷಿತ ಶುಕಾಚಾರ್ಯರ ಸಂವಾದ ರೂಪವಾಗಿದೆ ಈ ಭಾಗವತ ಗ್ರಂಥ ಯಾವ ಮನೆಯಲ್ಲಿ ಭಾಗವತ ಕಥೆ ನಡೆಯುವದೋ ಆ ಮನೆ ಒಂದು ತೀರ್ಥ. ಗಂಗಾ, ಗಯಾ, ಕಾಶಿ, ಪುಷ್ಕರ, ಅಶ್ವಮೇಧ, ರಾಜಸೂಯ ಯಾವದೂ ಭಗಾವತದ ಹದಿನಾರನೆಯ ಭಾಗಕ್ಕೂ ಸಮವಲ್ಲ. ಈ ಭಾಗವತವನ್ನು ಜನ್ಮಾವಧಿ ಕೇಳಬೇಕು. ಆದರೆ ಮನಸ್ಸನ್ನು ನಿಗ್ರಹಿಸುವದು ಕಷ್ಟ.

ರೋಗರುಜಿನಗಳ ಭಯವೂ ಇದ್ದದ್ದೇ. ಮಾನವರಿಗೆ ಆಯುಷ್ಯವೂ ಅಲ್ಪ. ಆದುದರಿಂದ ಭಾಗವತ ಸಪ್ತಾಹ ಮಾಡಿ ಏಳು ದಿನಗಳಲ್ಲಿ ಸಂಪೂರ್ಣ ಶ್ರವಣ ಮಾಡುವದು ಉತ್ತಮ. ಶ್ರೀಕೃಷ್ಣನು ಪರಂಧಾಮಕ್ಕೆ ಹೋಗುವಾಗ ಉದ್ಧವ ಕೇಳಿದ.

**ಉದ್ಧವ:-** ಕೃಷ್ಣಾ ! ನೀನು ನಿನ್ನ ಪರಮ ಪದಕ್ಕೆ ಹೊರಟು ನಿಂತಿರುವೆ. ಭೂಲೋಕದಲ್ಲಿ ಈಗ ಕಲಿಯು ಎಲ್ಲ ಕಡೆಗೂ ಕಾಲು ಇರಿಸಿದ್ದಾನೆ. ಆದರಿಂದ ನನಗೆ ಚಿಂತಾಯಾಗಿದೆ. ನಿನ್ನಿಂದ ಅಗಲಿ ನಾವು ಈ ಕಲಿಯುಗದಲ್ಲಿ ಹೇಗೆ ಬಾಳುವದು ಎಂಬುದೇ ನಮಗೆ ಸಮಸ್ಯೆಯಾಗಿದೆ. ಆದ್ದರಿಂದ ಕೃಷ್ಣ, ಕಲಿಯುಗದಲ್ಲಿ ನೀನು ಹೋದ ಬಳಿಕ ನಾವು ಏನು ಮಾಡಬೇಕು?

ಉದ್ಧವನ ಪ್ರಾರ್ಥನೆ ಕೇಳಿ ಶ್ರೀಕೃಷ್ಣನು ತನ್ನ ತೇಜಸ್ಸನ್ನೆಲ್ಲ ಭಾಗವತದಲ್ಲಿಟ್ಟು ಅದನ್ನು ಉದ್ಧವನಿಗೆ ತನ್ನ ಕೈಯಿಂದಲೇ ಕೊಟ್ಟ. ಆದ್ದರಿಂದ ಭಾಗವತವೆಂದರೆ ಶ್ರೀಕೃಷ್ಣನ ವಾಙ್ಮಯರೂಪದ ಮೂರ್ತಿಯೇ. ಈ ಭಾಗವತ ಸಪ್ತಾಹದಿಂದ ಅತ್ಯಂತ ಪುಣ್ಯ ಬರುವದೆಂದು ಹೇಳಲಾಗಿದೆ. ಈ ಭಾಗವತ ಸಪ್ತಾಹದಲ್ಲಿ ಹೇಳುವವ, ಕೇಳುವವ ಎಲ್ಲರೂ ಆ ಭಗವತ್ಕಥೆಯಲ್ಲಿ ತನ್ಮಯರಾಗುವರು. ಈ ಭಾಗವತ ಶ್ರವಣದಿಂದ ಮಾನವರ ದುಃಖ, ದಾರಿದ್ರ್ಯ ಎಲ್ಲವೂ ತೊಡೆದು ಹೋಗುವವು.

ಹೀಗೆ ಹೇಳಿ ಆ ಕುಮಾರರು ಭಾಗವತದ ದಿವ್ಯ ಕಥೆಯನ್ನು ಹೇಳಲು ಉಪಕ್ರಮಿಸಿದರು. ವೇದೋಪನಿಷತ್ತುಗಳ ಸಾರಭೂತವಾದ ಭಾಗವತ ಪ್ರವಚನವು ಪ್ರಾರಂಭವಾದ ಕೂಡಲೇ, ಅಲ್ಲಿಗೆ ಭಕ್ತಿಯು ಬಂದಳು. ಅವಳ ಜ್ಞಾನ, ವೈರಾಗ್ಯ ಎಂಬ ಇಬ್ಬರೂ ಮಕ್ಕಳೂ ಭಾಗವತ ರಸಾಮೃತ ಪಾನದಿಂದ ತರುಣರಾದರು. ''ಶ್ರೀಕೃಷ್ಣ ಗೋವಿಂದ ಹರೇ ಮುರಾರೇ'' ಎಂದು ಭಗವನ್ನಾಮ ಸ್ಮರಣೆ ಮಾಡುತ್ತ ಆ ಭಕ್ತಿಭಾಮಿನಿಯು ಅಲ್ಲಿಗೆ ಬಂದು ಆ ಕುಮಾರರನ್ನು ಕೇಳಿದಳು.

ಭಕ್ತಿ-ಕಲಿಯುಗದಲ್ಲಿ ನಾನು ನನ್ನ ಮಕ್ಕಳೊಂದಿಗೆ ನಷ್ಟವಾಗಿ ಹೋಗಿದ್ದೆ. ನೀವು ಇಲ್ಲಿ ನಡೆಸಿದ ಭಾಗವತ ಕಥಾರಸದಿಂದ ಈಗ ಮತ್ತೆ ಪುಷ್ಟಳಾಗಿದ್ದೇನೆ. ನಾನು ಎಲ್ಲಿ ಇರಬೇಕು ಎಂದು ಹೇಳಿರಿ.

**ಕುಮಾರರು:-** ಶ್ರೀಹರಿಯ ಏಕನಿಷ್ಠ ಭಕ್ತರಾದ ಹಾಗೂ ದೀನದಯಾಳುಗಳಾದ ಸಾಧು ಸಜ್ಜನರಲ್ಲಿ ನೀನು ನಿರಂತರವಾಗಿ ನೆಲಿಸು. ಅಂದರೆ ನಿನಗೆ ಎಂದೂ ಕಲಿಬಾಧೆ ತಟ್ಟುವದಿಲ್ಲ. ಭಕ್ತಿ ದೇವಿ ! ಕಲಿಯುಗದಲ್ಲಿ ನಾರದನಿಂದ ಪ್ರಚುರ ಪಡಿಸಲ್ಪಟ್ಟ ನೀನೊಬ್ಬಳೇ ಲೋಕಕ್ಕೆಲ್ಲ ಹಿತಕಾರಕಳು. ಈ ಪ್ರಪಂಚದಲ್ಲಿ ದರಿದ್ರರಾದರೂ ಯಾರ ಹೃದಯದಲ್ಲಿ ಹರಿಭಕ್ತಿಯು ದೃಢವಾಗಿ ಇದೆಯೋ, ಅವರ ಮಾನಸ ಮಂದಿರವನ್ನು ಶ್ರೀಹರಿಯು ತನ್ನ ವೈಕುಂಠಾದಿ ಲೋಕವನ್ನು ಬಿಟ್ಟು ಪ್ರವೇಶಿಸುತ್ತಾನೆ. ಪ್ರೇಮ ಸೂತ್ರದಿಂದ ಬಿಗಿಯಲ್ಪಟ್ಟವರಂತೆ ಅಲ್ಲಿಯೇ ನೆಲೆಸುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಭಾಗವತ ಸಪ್ತಾಹ ಪ್ರವಚನ ಎಂಬ ನೂರ ಎಪ್ಪತ್ತೇಳನೇಯ ಅಧ್ಯಾಯ ಮುಗಿದುದು*

—o—

## ಶ್ರೀ ಮದ್ಭಾಗವತ ಮಹಾತ್ಮ್ಯದಲ್ಲಿ ಗೋಕರ್ಣ ವೃತ್ತಾಂತ ವರ್ಣನೆ ಪುರಸ್ಸರವಾಗಿ ಆತ್ಮದೇವನ ಪುತ್ರನಾದ ಧುಂಧುಕಾರಿಯ ಪಾಪಕೃತ್ಯ ವರ್ಣನೆ. ವನಕ್ಕೆ ಹೋಗಿ ಆತ್ಮದೇವನಿಂದ ಮುಕ್ತಿ ಪ್ರಾಪ್ತಿ

**ಅಧ್ಯಾಯ - ೧೭೮**

**ಸೂತ:-** ವೈಷ್ಣವರ ಚಿತ್ತದಲ್ಲಿ ಶ್ರೀಹರಿಯ ವಿಷಯಕವಾದ ಅಲೌಕಿಕ ಭಕ್ತಿಯು ಉಂಟಾದುದನ್ನು ನೋಡಿ, ಶ್ರೀಹರಿಯು ತನ್ನ ಲೋಕವನ್ನು ತ್ಯಜಿಸಿ ಭೂಲೋಕಕ್ಕೆ ಬಂದ. ಪರಮಾನಂದ ಮೂರ್ತಿಯಾದ ಆ ಪೀತಾಂಬರನು ಭಕ್ತರ ಹೃದಯದಲ್ಲಿ ಪ್ರವೇಶ ಮಾಡಿದ. ಶ್ರೀಹರಿಯ ದಿವ್ಯವಾದ ಕಥೆಯನ್ನು ಶ್ರವಣ ಮಾಡಲಿಕ್ಕಾಗಿ ಮುಕ್ತರೂ ಸಹ ಉತ್ಸುಕರಾಗಿ ಆಗಮಿಸಿದರು. ಎಲ್ಲ ಕಡೆಗೂ 'ಜಯ ಜಯ ಜಗನ್ನಾಥ' ಎಂಬ ಮಂಗಳ ಘೋಷವು ಮೊಳಗತೊಡಗಿತು. ಅದರಿಂದ ಕಲಿಯ ಭಯವು ದೂರವಾಯಿತು, ಜನರೆಲ್ಲರೂ ಭಕ್ತಿಭಾವಭರಿತರಾಗಿ ಧ್ಯಾನ ಮಾಡತೊಡಗಿದರು. ಆಗ ನಾರದರು ಆ ಸನಕ, ಸನಂದನ, ಸನಾತನ, ಸನತ್ಕುಮಾರ ಎಂಬ ಕುಮಾರರನ್ನು ಕುರಿತ ಮಾತನಾಡಿದರು.

**ನಾರದ:-** ಮುನೀಶ್ವರರೇ, ಈ ಭಾಗವತ ಸಪ್ತಾಹದ ಭಕ್ತಿರಸದ ಕಾರ್ಯಕ್ರಮದಿಂದ ಲೋಕದಲ್ಲೆಲ್ಲ ಅದ್ಭುತ ಪರಿಣಾಮವುಂಟಾಗುವದನ್ನು ನಾನೀಗ ಕಣ್ಣಾರೆ ಕಂಡಿದ್ದೇನೆ. ಭಾಗವತ ಸಪ್ತಾಹ ಶ್ರವಣದಿಂದ ಮೂಢರೂ, ದುಷ್ಟರೂ, ಸಹ ಉತ್ತಮವಾದ ಗತಿಯನ್ನು ಹೊಂದುತ್ತಾರೆ. ಈ ಲೋಕದಲ್ಲಿ ಚಿತ್ತಶುದ್ಧಿಯು ಬೇರಾವ ಶಾಸ್ತ್ರದಿಂದಲೂ ಆಗುವದಿಲ್ಲ. 'ಭಾಗವತ'ದಿಂದ ಮಾತ್ರ ಮಾನವರೆಲ್ಲರ ಪಾಪಗಳೂ ನಷ್ಟವಾಗಿ, ಅಂತಃಕರಣ ಪರಿಶುದ್ಧಿ ಸಿದ್ಧಿಸುವದು. ಹೃದಯದಲ್ಲಿ ಭಕ್ತಿಯು ಉದ್ದೀಪ್ತವಾಗುವದು. ಇಂಥ ಜ್ಞಾನ ಯಜ್ಞದಿಂದ ಯಾರು ಪರಿಶುದ್ಧರಾಗಲಿಕ್ಕಿಲ್ಲ? ಇಂಥ ಭಗವತ್ಕಥಾರೂಪವಾದ ಸಪ್ತಾಹ ಯಜ್ಞವನ್ನು ಈ ಲೋಕದಲ್ಲಿ ಪ್ರಕಾಶಪಡಿಸಿದ ತಾವು ನಿಜವಾಗಿಯೂ ಕೃಪಾಳುಗಳು. ಹೊಸ ಮಾರ್ಗವನ್ನೇ ತಾವು ಜಗತ್ತಿಗೆ ತೋರಿಸಿದ್ದೀರಿ.

**ಕುಮಾರ:-** ಕಾಮಕ್ರೋಧದಿಂದ ಕಲುಷಚಿತ್ತರಾದ ಪಾಪಿಗಳೂ ಸಹ ಈ ಸಪ್ತಾಹ ಯಜ್ಞದಿಂದ ಶ್ರೀಹರಿಯ ಸನ್ನಿಧಿಗೆ ಸೇರುತ್ತಾರೆ. ವರ್ಣಾಶ್ರಮ ಬಾಹ್ಯರೂ, ತಾಯ್ತಂದೆಗಳನ್ನು ನಿಂದಿಸುವವರೂ, ಪ್ರಾಣಿಹಿಂಸೆ ಮಾಡುವವರೂ, ಡಾಂಭಿಕರೂ, ಅತಂಕರೂ ಭಕ್ತಿಯಿಂದ ಸಪ್ತಾಹ ಯಜ್ಞವನ್ನು ಆಚರಿಸಿದರೆ ಶ್ರೀಹರಿಯ ಪರಮಾನುಗ್ರಹಕ್ಕೆ ಪಾತ್ರರಾಗಿ ಮೋಕ್ಷ ವೈಕುಂಠಲೋಕವನ್ನು ಕುರಿತು ಪ್ರಯಾಣ ಬೆಸುವರು. ಪಂಚಮಹಾಪಾತಕಗಳನ್ನು ಮಾಡಿದವರೂ, ಕ್ರೂರರೂ, ಪಿಶಾಚರೂ, ಬ್ರಹ್ಮಸ್ವದಿಂದ ಹೊಟ್ಟೆಹೊರೆದುಕೊಳ್ಳುವವರೂ, ವ್ಯಭಿಚಾರಿಗಳೂ, ಸಪ್ತಾಹ ಯಜ್ಞದಿಂದ ಶ್ರೀಹರಿಯ ಸ್ಥಾನವನ್ನು ಹೊಂದುವರು.

ನಾರದ, ಈ ವಿಷಯದಲ್ಲಿ ನಿನಗೆ ಇತಿಹಾಸವೊಂದನ್ನು ಹೇಳುವೆ. ಪೂರ್ವಕಾಲದಲ್ಲಿ ತುಂಗಭದ್ರಾ ತೀರದಲ್ಲಿ 'ಕೋಹಲ' ಎಂಬ ಪಟ್ಟಣ. ಆ ಊರಿನಲ್ಲಿ 'ಆತ್ಮದೇಹ' ಎಂಬ

ಬ್ರಾಹ್ಮಣೋತ್ತಮ. ವೇದವೇದಾಂತ ವಿದ್ಯೆಗಳೆಲ್ಲ ಅವನಿಗೆ ಸ್ವಾಧೀನ. ನಿತ್ಯವೂ ಸಹ ಶಾಸ್ತ್ರೋಕ್ತವಾದ ಕರ್ಮಾಚರಣೆಯಲ್ಲೇ ಆಸಕ್ತಿ. ಇಂಥ ವಿಪ್ರೋತ್ತಮನಿಗೆ ಹೆಂಡತಿ ಮಾತ್ರ ಸರ್ವಥಾ ಪ್ರತಿಕೂಲ. ಅವನ ಮಡದಿಯ ಹೆಸರು ಧುಂಧುರೀ. ಅವಳು ರೂಪದಿಂದ ಒಳ್ಳೇ ಚೆಲುವೆ. ಜನಿಸಿದ ಕುಲವೂ ಶ್ರೇಷ್ಠ. ಆದರೆ ಪೂರ್ವ ಕರ್ಮಗಳ ವಿಪಾಕದಿಂದ ಇವಳು ಮಾತ್ರ ಬಹುಭಾಷಿಯೂ ಕ್ರೂರಳೂ, ಕಲಹಪ್ರಿಯಳೂ ಆಗಿದ್ದಳು. ಅವಳಿಗೆ ಯಾವಾಗಲೂ ತನ್ನದೇ ಮಾತು ನಡೆಯಬೇಕೆಂಬ ಹಟ. ಹೀಗೆಯೇ ಆ ಇಬ್ಬರೂ ದಂಪತಿಗಳು ಕೋಹಲ ಪಟ್ಟಣದಲ್ಲಿ ಅನೇಕ ವರ್ಷ ಒಟ್ಟಿಗಿದ್ದರು. ಅವರ ವಿವಾಹವಾಗಿ ಐವತ್ತು ವರ್ಷಗಳು ಕಳೆದವು. ಆದರೂ ಅವರಿಗೆ ಸಂತತಿ ಇರಲಿಲ್ಲ. ಅದರಿಂದಾಗಿ ಇಬ್ಬರಿಗೂ ಬಹಳ ದುಃಖ. ಒಳ್ಳೇ ಸಂತಾನ ಆಗಲೆಂಬ ಉದ್ದೇಶದಿಂದ ಅವರು ಗೋದಾನ, ಭೂದಾನ, ಬಂಗಾರದಾನ, ವಸ್ತ್ರದಾನ ಮುಂತಾದವನ್ನೆಲ್ಲ ಮಾಡಿದರು. ಇಷ್ಟಾದರೂ ಪ್ರಾರಬ್ಧಕರ್ಮನುಸಾರವಾಗಿ ಅವರಿಗೆ ಮಕ್ಕಳು ಜನಿಸಲಿಲ್ಲ.

ಇದರ ಪರಿಣಾಮವಾಗಿ ಅತ್ಯಂತ ಖಿನ್ನನೂ ವಿಷಣ್ಣನೂ ಆದ ಆ ಆತ್ಮದೇವ. ಮಕ್ಕಳಿಲ್ಲದ ಕೊರಗು ದಿನೇ ದಿನೇ ಹೆಚ್ಚಾಗಿ ಕೊರಗಿ, ಸೊರಗಿ, ನಿರ್ವಿಣ್ಣನಾದ. ಕೊನೆಗೆ ಅದೇ ದುಃಖದಲ್ಲಿ ಮನೆ ಬಿಟ್ಟು ಕಾಡಿಗೆ ಸಾಗಿದ. ಅರಣ್ಯದಲ್ಲಿ ಹಸಿವೆ, ಬಾಯಾರಿಕೆಗಳಿಂದ ಬಳಲಿ ಆಚೀಚೆ ಅಲೆದಾಡುತ್ತ ಸುದೈವದಿಂದ ಒಂದು ಜಲಾಶಯಕ್ಕೆ ಬಂದ. ಆ ಸರೋವರದ ಸ್ಪಟಿಕದಂತೆ ನಿರ್ಮಲವಾದ, ಅಮೃತದಂತೆ ರುಚಿಯಾದ ನೀರನ್ನು ಯಥೇಷ್ಟವಾಗಿ ಪಾನಮಾಡಿದ. ಅದೇ ಸರೋವರದ ದಂಡೆಯ ಮೇಲಿದ್ದ ಗಿಡದ ದಟ್ಟವಾದ ನೆರಳಿನಲ್ಲಿ ವಿಶ್ರಮಿಸಿದ. ಅಷ್ಟರಲ್ಲಿ ಒಬ್ಬ ಸಿದ್ಧಪುರುಷ ಹೀಗೆ ಸಂಚಾರಗೈಯುತ್ತ ಅಲ್ಲಿಗೆ ಆಗಮಿಸಿದ. ಸರೋವರ ಕಂಡು ಅದರಲ್ಲಿನ ನೀರು ಕುಡಿದು ತೀರದಲ್ಲಿಯೇ ಕುಳಿತ ಆತ್ಮದೇವ ಆತನನ್ನು ನೋಡಿದ. ಅವನೊಬ್ಬ ಸಂನ್ಯಾಸಿ. ಮುಖದ ಮೇಲೆ ದಿವ್ಯವಾದ ವರ್ಚಸ್ಸು. ಕಂಗಳಲ್ಲಿ ಶಾಂತ ಕಾಂತಿ. ಆ ಯೋಗೀಶ್ವರನನ್ನು ಕಂಡು ತಟ್ಟನೆದ್ದು ಅವನಿದ್ದಲ್ಲಿಗೆ ಹೋಗಿ ಪಾದಗಳಿಗೆ ನಮಿಸಿದ. ಇಬ್ಬರೂ ಒಬ್ಬರಿಗೊಬ್ಬರು ಯೋಗಕ್ಷೇಮ ವಿಚಾರಿಸಿದರು. ಆತ್ಮದೇವನ ಮುಖದ ಮೇಲಿನ ನಿರ್ವೇದಭಾವ, ನಿಟ್ಟುಸಿರು, ದೀನ ಮುಖಚರ್ಯೆ, ಮುಂತಾದವನ್ನು ಗಮನಿಸಿದ ಆ ಸಿದ್ಧಪುರುಷನು ಪ್ರಶ್ನಿಸಿದ.

**ಸಿದ್ಧಪುರುಷ:-** ಬ್ರಾಹ್ಮಣೋತ್ತಮ, ನಿನ್ನ ಹೃದಯದಲ್ಲಿನ ಯಾವ ಚಿಂತೆ ನಿನ್ನನ್ನು ದುಃಖಕ್ಕೀಡುಮಾಡಿದೆ? ನನ್ನಲ್ಲಿ ಅದನ್ನು ಹೇಳು.

**ಆತ್ಮದೇವ:-** ನನ್ನ ಪೂರ್ವಜನ್ಮದ ವಿಪಾಕವನ್ನು ಏನೆಂದು ಹೇಳಲಿ? ನನ್ನ ಪೂರ್ವಜರು ನಾನು ನೀಡಿದ ತರ್ಪಣದ ನೀರನ್ನು ಬಿಸಿಮಾಡಿಕೊಂಡು ಸೇವಿಸುತ್ತಾರೆ. ನಾನು ನೀಡಿದ ಜಲಾಂಜಲಿಯನ್ನು ಅವರು ಸ್ವೀಕರಿಸುವುದಿಲ್ಲ. ನನಗೆ ಸಂತಾನವಿಲ್ಲ. ಮಕ್ಕಳಿಲ್ಲದವರು ನೀಡಿದ ಜಲಾಂಜಲಿಯನ್ನು ಪಿತೃಗಳು ಅಂಗೀಕರಿಸುವದಿಲ್ಲ.

ಮಕ್ಕಳಿಲ್ಲದ ನನ್ನ ಜೀವನ ಹಾಳು ಬೆಂಗಾಡು. ದುರ್ದೈವಿಯಾದ ಈ ನನ್ನ ಜೀವನಕ್ಕೆ ಧಿಕ್ಕಾರ. ನನ್ನ ದುರದೃಷ್ಟವು ಬಲವತ್ತರವಾಗಿದೆ. ನಾನು ಮನೆಯಲ್ಲಿ ತಂದು ಚೆನ್ನಾಗಿ ಪೋಷಿಸಿದ ಹಸುವೂ ಸಹ ಈಯುವದಿಲ್ಲ. ನನ್ನ ಹೆಂಡತಿಯಂತೆ ನಮ್ಮ ಮನೆಗೆ ಬಂದ ದನಕರುಗಳೆಲ್ಲವೂ ಬಂಜೆಯಾಗಿಯೇ ಉಳಿಯುತ್ತವೆ. ಮನೆಯಲ್ಲಿ ನಾನು ಹಚ್ಚಿದ

ಗಿಡಗಳು ಅನೇಕ. ಒಂದು ಗಿಡಕ್ಕೂ ಹೂವಿಲ್ಲ, ಕಾಯಿಯಿಲ್ಲ. ನಮ್ಮ ಮನೆಯ ಎಲ್ಲ ಮರಬಳ್ಳಿಗಳೂ ಬಂಜೆಗಳೇ. ಇಂಥ ನಾನೇಕೆ ಬದುಕಿರಬೇಕು? ಈ ದುರ್ಭರ ಜೀವನವನ್ನು ಅಂತ್ಯಗೊಳಿಸಲೆಂದೇ ನಾನಿಲ್ಲಿಗೆ ಬಂದಿದ್ದೇನೆ.

ಎಂದು ಹೇಳಿ ಗಟ್ಟಿಯಾಗಿ ಅತ್ತುಬಿಟ್ಟ. ಕೇಳಿದ ಸಿದ್ಧರ ಹೃದಯದಲ್ಲಿ ಕರುಣೆಯ ಉದಯ. ಆತ್ಮದೇವನನ್ನು ಕರುಣೆದುಂಬಿ ನೋಡಿದರು ಇಂತು ನುಡಿದರು.

**ಸಿದ್ಧಪುರುಷ:-** ಆತ್ಮದೇವ, ನಾವು ನಿನ್ನ ಹಣೆಯ ಹಲಗೆಯ ಮೇಲೆ ಬ್ರಹ್ಮನು ಬರೆದ ಫಾಲಪಟ್ಟಲಿಪಿಯನ್ನು ಓದಿದೆವು. ದುರ್ದೈವದಿಂದ ನಿನಗೆ ಈ ಜನ್ಮದಲ್ಲಿ ಬ್ರಹ್ಮನಿಂದ ಸಂತಾನ ಲಿಖಿತವಾಗಿಲ್ಲ. ಈ ಜನ್ಮ ಮಾತ್ರವಲ್ಲ. ಮುಂದಿನ ಏಳು ಜನ್ಮಗಳ ವರೆಗೆ ನಿನಗೆ ಪುತ್ರಪ್ರಾಪ್ತಿಯಿಲ್ಲ. ಆದುದರಿಂದ ಈ ಸಂತಾನದ ಆಶೆಯನ್ನು ಬಿಟ್ಟುಬಿಡು. ವಿವೇಕಿಯಾಗಿ ಭಕ್ತಿಯಿಂದ ಭಗವಂತನ ಆರಾಧನೆಯನ್ನು ಮಾಡು.

ಸಿದ್ಧಪುರುಷರ ಈ ಉಪದೇಶವನ್ನು ಕೇಳಿ ಆತ್ಮದೇವನಿಗೆ ಮತ್ತಿಷ್ಟು ದುಃಖವಾಯಿತು. ಅವನು ದೀನವದನನಾಗಿ ಮಾತನಾಡಿದ.

**ಆತ್ಮದೇವ:-**

**ವಿವೇಕೇನ ಭವೇತ್ಕಿಂ ಮೇ ಪುತ್ರಂ ದೇಹಿ ಬಲಾದವೆ ।**
**ನೋಚೇತ್ತ್ಯಜಾಮ್ಯಹಂ ಪ್ರಾಣಾಂಸ್ತ್ವದಗ್ರೇ ಶೋಕ ಮೂರ್ಛಿತಃ ॥**

ಮುನಿಗಳೇ, ನನಗೆ ವಿವೇಕದಿಂದ ಏನು ಮಾಡುವುದು? ಈ ವಿವೇಕದ ಉಪದೇಶ ಸಾಕು. ನನಗೆ ಹೇಗಾದರೂ ಮಾಡಿ ಒಬ್ಬ ಗಂಡು ಮಗನನ್ನು ನೀಡಿರಿ. ದುಃಸ್ಸಹವಾದ ಶೋಕದಿಂದ ವಿಕಲ್ಪನಾದ ನಾನು ಏನನ್ನೂ ಕೇಳಲಾರೆ. ಅಸಹನೀಯ ದುಃಖಭಾರದಿಂದ ಇಲ್ಲಿಯೇ ನನ್ನ ಪಂಚಪ್ರಾಣಗಳನ್ನೂ ಬಿಟ್ಟುಬಿಡುವೆ.

ಆ ಬ್ರಾಹ್ಮಣನ ಸಂತಾನ ವಿಷಯಕವಾದ ಆಗ್ರಹವನ್ನು ಕಂಡ ಆ ತಪೋಧನರು ನಿರುಪಾಯರಾಗಿ ನುಡಿದರು.

**ಸಿದ್ಧಪುರುಷ:-** ಪೂರ್ವಕಾಲದಲ್ಲಿ ಸಗರ ಮಹಾರಾಜನು ಸಂತತಿಯಿಂದಲೇ ಭಯಂಕರ ದುಃಖವನ್ನು ಹೊಂದಿದ. ಅಂಗರಾಜನು ದುಷ್ಟಸಂತಾನ ಹೊಂದಿ ಮನೆ ಬಿಟ್ಟು ಅಡವೀಪಾಲಾದ. ಚಿತ್ರಕೇತು ಮಹಾರಾಜನು ಮಕ್ಕಳಿಂದ ವಿಚಿತ್ರ ದುಃಖವನ್ನನುಭವಿಸಿದ. ಆದುದರಿಂದ ಆತ್ಮದೇವ, ನೀನು ಧರ್ಮದ ಮರ್ಮವನ್ನರಿತುಕೋ. ಸಂತತಿಯ ಆಶೆ ಬಿಡು. ನಮ್ಮಿಂದ ಬಲಾತ್ಕಾರವಾಗಿ ಒಂದು ವೇಳೆ ಪುತ್ರನನ್ನು ಪಡೆದರೂ, ಆ ಮಗನಿಂದ ನಿನಗೆ ಎಂದೂ ಸುಖವಾಗುವದಿಲ್ಲ. ಆದರೂ ಸಹ ನೀನು ಪ್ರಾಣಾರ್ಪಣೆಗೆ ಸಿದ್ಧನಾದುದನ್ನು ನೋಡಿ ಕರುಣೆಗೊಂಡು ನಾನು ನಿನಗೆ ಪುತ್ರನನ್ನು ಕೊಡುತ್ತೇನೆ. ಆದರೆ ನೆನಪಿರಲಿ ಇಂಥ ಪುತ್ರನಿಂದ ನಿನಗೆ ಎಂದಿಗೂ ಸುಖವಾಗುವದಿಲ್ಲ.

ಹೀಗೆ ಹೇಳಿ ಆ ಸಿದ್ಧಪುರುಷರು ಆತ್ಮದೇವನಿಗೆ ಫಲವೊಂದನ್ನು ನೀಡಿದರು. ಮತ್ತು ಹೀಗೆ ಅನುಶಾಸನಗೈದರು.

**ಸಿದ್ಧಪುರುಷ:-** ಆತ್ಮದೇವ, ನಾನು ನಿನಗೆ ಕೊಟ್ಟ ಫಲವನ್ನು ನಿನ್ನ ಮಡದಿಗೆ ಕೊಡು. ಜನಿಸುವ ಮಗನು ಸದಾಚಾರಿಯಾಗಿರಬೇಕೆಂಬ ಆಪೇಕ್ಷೆ ಇದ್ದರೆ ನಿನ್ನ ಹೆಂಡತಿ ಹಾಗೂ ನೀನು ಒಂದು ವರ್ಷದವರೆಗೆ ನಿಯಮಬದ್ಧರಾಗಿರಬೇಕು. ಎಂದೂ ಹುಸಿಯನ್ನು

ನುಡಿಯಬಾರದು. ಶೌಚದ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಬೇಕು. ಪರೋಪಕಾರ, ದಯೆ, ದಾನ, ಧರ್ಮಗಳನ್ನು ಏಕಚಿತ್ತರಾಗಿ ಮಾಡಬೇಕು. ಎರಡು ಹೊತ್ತು ಊಟ ಸಲ್ಲದು. ಒಂದು ವರ್ಷದ ವರೆಗೆ ಒಂದು ಹೊತ್ತು ಮಾತ್ರ ಊಟ ಮಾಡಬೇಕು. ನಿನ್ನ ಹೆಂಡತಿಯು ಪರಿಶುದ್ಧಾಳಾಗಿ ಒಂದು ವರ್ಷದ ವರೆಗೆ ಶ್ರದ್ಧೆಯಿಂದ ದೇವ ಬ್ರಾಹ್ಮಣರ ಆರಾಧನೆಗೈಯಬೇಕು.

ಹೀಗೆ ನಿರ್ದೇಶನ ನೀಡಿ ಆ ಸಿದ್ಧಿಯೋಗಿಯು ಫಲವಿತ್ತು ಅಲ್ಲಿಂದ ಹೊರಟು ಹೋದ. ಇತ್ತ ಆತ್ಮದೇವನು ಆ ಅರಣ್ಯದಿಂದ ಮರಳಿ ತನ್ನ ಮನೆಗೆ ಬಂದ. ಸಿದ್ಧಪುರುಷ ಅನುಗ್ರಹಿಸಿದ ಫಲವನ್ನು ಹೆಂಡತಿಗೆ ಕೊಟ್ಟು, ಪಾಲಿಸಬೇಕಾದ ನಿಯಮಗಳನ್ನೂ, ವ್ರತಾಚರಣೆಗಳನ್ನೂ ತಿಳಿಸಿದ. ಆತ್ಮದೇವನ ಹೆಂಡತಿಯಾದ ಧುಂಧುರಿಗೆ ಇದರಿಂದ ಸಮಾಧಾನವಾಗಲಿಲ್ಲ. ತನ್ನ ಗೆಳತಿಯಲ್ಲಿ ಈ ಎಲ್ಲ ವಿಷಯವನ್ನು ತಿಳಿಸಿದಳು. ''ಸಖಿ, ಈ ಫಲವನ್ನು ನಾನು ಭಕ್ಷಿಸಿದರೆ ಗರ್ಭಧರಿಸುವದು ನಿಶ್ಚಿತ. ನಿಯಮ ವ್ರತಗಳನ್ನು ಪಾಲಿಸಬೇಕಂತೆ. ಬಸಿರು ಹೆಂಗಸಿನ ಕಷ್ಟಗಳನ್ನು ನಾನೆಂತು ಸಹಿಸಲಿ? ಆ ಅವಸ್ಥೆಯಲ್ಲಿ ಬೇಕುಬೇಕಾದ್ದನ್ನು ತಿನ್ನುವಂತಿಲ್ಲ ಬೇಕೆಂದಲ್ಲಿಗೆ ಹೋಗಿ ಬರುವಂತಿಲ್ಲ. ದಿನಕಳೆದಂತೆ ಹೊಟ್ಟೆ ಭಾರವಾಗುತ್ತ ಹೋಗುತ್ತದೆ. ಒಂಭತ್ತು ತಿಂಗಳು ಈ ಅವಸ್ಥೆಯಲ್ಲಿರಬೇಕು. ನಂತರ ಪ್ರಸವವೇದನೆಯನ್ನನುಭವಿಸಬೇಕು. ಈ ವೇದನೆಯಂತೂ ಭಯಂಕರ. ಅದನ್ನನುಭವಿಸಿದ ಹೆಂಗಸರನ್ನು ನಾನು ನೋಡಿದ್ದೇನೆ. ಆ ವೇದನೆಯ ಬಗ್ಗೆ ಸಾಕಷ್ಟು ಕೇಳಿದ್ದೇನೆ. ಕೆಲ ಸಲ ಪ್ರಸವಕಾಲದಲ್ಲಿ ತಡೆಯಲಾರದ ನೋವಿನಿಂದ ಮರಣವೇ ಬರುವುದೂ ಉಂಟು. ನಾನು ದಿನತುಂಬಿ ಆಯಾಸದಿಂದ ಅಲ್ಲಲ್ಲಿ ಸಂಚಾರ ಮಾಡಲಾಗದೇ ಮನೆಯ ಮೂಲೆಯೊಂದರಲ್ಲಿ ಕುಳಿತಾಗ ನನ್ನ ಅತ್ತಿಗೆ ನಾದಿನಿಯರು ಮನೆಯನ್ನೆಲ್ಲ ಕೊಳ್ಳೆಹೊಡೆದು ಬಿಡುವರು. ಬಸಿರಾದರೆ ನನ್ನ ಸರ್ವಸ್ವಹಾನಿ. ಆದುದರಿಂದ ನನಗೆ ಗರ್ಭಿಣಿ ಯಾಗುವದೆಂದರೆ ಆಗದು. ಏನಾದರೂ ಉಪಾಯ ಮಾಡಿ ನಾನಿದನ್ನು ತಪ್ಪಿಸಬೇಕೆಂದು ಮಾಡಿದ್ದೇನೆ.''

ಧುಂಧುರಿಯ ಈ ಮಾತನ್ನು ಕೇಳಿ ಅವಳ ಗೆಳತಿಯು ನಗುತ್ತ ''ಸರಿ ಹಾಗೆಯೇ ಮಾಡು'' ಎಂದು ನುಡಿದಳು. ಧುಂಧುರಿಯು ಮಾತ್ರ ಮೊದಲೇ ತಾನು ನಿರ್ಧರಿಸಿದಂತೆ ಆ ಫಲವನ್ನು ಭಕ್ಷಿಸಲೇ ಇಲ್ಲ. ಆತ್ಮದೇವನು ಬಂದು ಕೇಳಿದಾಗ ಆ ಹಣ್ಣನ್ನು ನೀನು ಕೊಟ್ಟ ದಿನವೇ, ಆಗಲೇ ಭಕ್ಷಿಸಿದ್ದೇನೆ ಎಂದು ಸುಳ್ಳು ಹೇಳಿದಳು. ಮುಂದೆ ಕೆಲದಿನಗಳ ಬಳಿಕ ಅವಳು ತನ್ನ ತಂಗಿಯ ಮನೆಗೆ, ಕೆಲದಿನ ಇರಲೆಂದು ಹೋದಳು. ಅವಳೆದುರು ಈ ಫಲದ ವಿಷಯವನ್ನೆಲ್ಲ ಹೇಳಿದಳು.

ವಿಷಯವನ್ನು ತಿಳಿದ, ಅವಳ ತಂಗಿಯು ಹೇಳಿದಳು. ''ನಾನು ಈಗ ಗರ್ಭಿಣಿಯಾಗಿದ್ದೇನೆ. ನಾನು ಮಗುವನ್ನು ಹೆತ್ತು ನಿನಗೆ ಕೊಡುತ್ತೇನೆ. ಅದನ್ನೇ ನಿನ್ನ ಮಗುವೆಂದು ನಿನ್ನ ಪತಿಗೆ ತೋರಿಸು. ಅನಂತರ ನಾನು ನಿನ್ನ ಮನೆಯಲ್ಲಿಯೇ ಇದ್ದು ಆ ಮಗುವನ್ನು ಪೋಷಿಸುತ್ತೇನೆ. ಇದಲ್ಲ ರಹಸ್ಯವಾಗಿ ನಡೆಯುತ್ತದೆ. ಹೊರಗೆ ಆ ಮಗುವನ್ನು ನಿನ್ನದೆಂದೇ ಹೇಳುತ್ತೇನೆ. ಅರಣ್ಯದಲ್ಲಿದ್ದ ಸಿದ್ಧಪುರುಷನು ಅಭಿಮಂತ್ರಿಸಿ ಕೊಟ್ಟ ಫಲವನ್ನು ನಿನ್ನ ಮನೆಯಲ್ಲಿನ ಹಸುವಿಗೆ ತಿನ್ನಿಸಿಬಿಡು. ಆ ಸಿದ್ಧಪುರುಷನ ಫಲದ ಶಕ್ತಿಯನ್ನೂ ಪರೀಕ್ಷಿಸಿ ಬಿಡೋಣ.''

ತಂಗಿಯ ಮಾತನ್ನು ಒಪ್ಪಿ, ಧುಂಧುರಿಯು ಮನೆಗೆ ತೆರಳಿದಳು. ಏಕಾಂತದಲ್ಲಿ ತನ್ನ ಪತಿಗೆ ತಾನು ಗರ್ಭಿಣಿಯಾಗಿದ್ದೇನೆ ಎಂದು ಹೇಳಿದಳು. ಕಾಲಕಾಲಕ್ಕೆ ಸರಿಯಾಗಿ ಗರ್ಭಿಣಿಯಂತೆ ಬಯಕೆ, ಬೇನೆಗಳನ್ನು ಪ್ರಕಟಿಸುತ್ತ ಇಷ್ಟವಾದ ಮೃಷ್ಟಾನ್ನಗಳನ್ನು, ಬಯಕೆಯ ಹೆಸರಿನಲ್ಲಿ ಬಗೆಬಗೆಯ ಖಾದ್ಯಗಳನ್ನೂ ಮೆಲ್ಲುತ್ತ ಅಪ್ಪಟ ಗರ್ಭಿಣಿಯಂತೆ ವೇಷಭೂಷಣಗಳನ್ನು ತೊಟ್ಟು ಎಲ್ಲರೊಡನೆ ವ್ಯವಹರಿಸಿದಳು. ಕೆಲ ದಿನಗಳ ಬಳಿಕ ಅವಳ ಸೋದರಿಯು ಗಂಡು ಮಗುವನ್ನು ಹೆತ್ತಳು. ಹುಟ್ಟಿದ ಕೂಡಲೇ ರಹಸ್ಯವಾಗಿ ಧುಂಧುರಿಗೆ ತನ್ನ ಮಗುವನ್ನು ನೀಡಿದಳು. ಧುಂಧುಲಿಯು ಅಲ್ಪ ಸ್ವಲ್ಪ ಪ್ರಸವ ವೇದನೆಯನ್ನು ನಟಿಸಿ, ಸೂಲಗಿತ್ತಿಯನ್ನು ಕರೆಕಳುಹಿಸಿ, ಅವಳು ಬರುವಷ್ಟರಲ್ಲಿ ಗಂಡು ಮಗುವನ್ನು ಹೆತ್ತಿದ್ದೇನೆ ಎಂದು ಪ್ರಚಾರಮಾಡಿಸಿ, ಪತಿಯಾದ ಆತ್ಮದೇವನಿಗೂ ಹಾಗೆಯೇ ಸಮಾಚಾರ ತಲುಪಿಸಿದಳು. ಆತ್ಮದೇವನಿಗೆ ಪುತ್ರ ಜನನದ ವಾರ್ತೆ ಕೇಳಿ ಪರಮಹಿಗ್ಗು. ಅಮಿತಾನಂದ. ಅವನು ಸದಾಚಾರಿಗಳಾದ ಬ್ರಾಹ್ಮಣರನ್ನು ಕೂಡಲೇ ಕರೆಯಿಸಿ ದಾನ, ದಕ್ಷಿಣೆ ನೀಡಿದ. ಬ್ರಾಹ್ಮಣೋಚಿತವಾದ ಜಾತಕರ್ಮ ಸಂಸ್ಕಾರವನ್ನೂ ಮಾಡಿಸಿದ. ಮನೆಯಲ್ಲಿ ಮಂಗಳ ವಾದ್ಯಗಳು ಮೊಳಗಿದವು.

ಅನಂತರ ಆ ಧುಂಧುರಿಯು ತನ್ನ ಪತಿಯನ್ನು ಕರೆದು ''ನನ್ನ ಸ್ತನಗಳಲ್ಲಿ ಹಾಲು ಬೀಳಲಿಲ್ಲ. ಮಗುವನ್ನು ಹೇಗೆ ರಕ್ಷಿಸಲಿ? ನನ್ನ ತಂಗಿಯೂ ಸಹ ಒಂದು ಗಂಡು ಮಗುವನ್ನು ಹೆತ್ತಿದ್ದಳು. ಆ ಮಗು ಮೃತವಾಗಿದೆ. ಅವಳನ್ನು ಹೋಗಿ ನೀನು ಇಲ್ಲಿಗೆ ಕರೆದುಕೊಂಡು ಬಾ. ಅವಳನ್ನು ಇಲ್ಲಿ ರಕ್ಷಿಸು. ಅವಳಿಂದ ನಮ್ಮ ಮಗು ರಕ್ಷಿತವಾಗುವದು.'' ಎಂದಳು.

ಮಡದಿಯ ಈ ಮಾತನ್ನು ಕೇಳಿ ಸಾಧುಪ್ರಾಣಿಯಾದ ಆ ಆತ್ಮದೇವನು ಧುಂಧುರಿಯ ತಂಗಿಯ ಮನೆಗೆ ಹೋಗಿ ಅವಳನ್ನು ಕರೆತಂದ. ಧುಂಧುರಿಯ ಅಪೇಕ್ಷೆಯಂತೆ ಆ ಮಗನಿಗೆ ಧುಂಧುಕಾರಿ ಎಂಬ ಹೆಸರನ್ನಿಟ್ಟ. ಆ ಧುಂಧುರಿಯ ತಂಗಿಯೇ ಆತ್ಮದೇವನ ಬೇಡಿಕೆಯ ಮೇರೆಗೆ ತನ್ನ ಎದೆಯ ಹಾಲನ್ನು ಆ ಮಗುವಿಗೆ ನೀಡಿ ಪೋಷಿಸತೊಡಗಿದಳು.

ಮುಂದೆ ಮೂರು ತಿಂಗಳು ಕಳೆದ ನಂತರ ಆತ್ಮದೇವನ ಮನೆಯ ಹಸುವು ಒಂದು ಗಂಡು ಮಗುವನ್ನು ಹೆತ್ತಿತ್ತು. ಸಿದ್ಧಪುರುಷರ ಫಲದ ಪ್ರಭಾವದಿಂದ ಸುಂದರ ಅವಯವಗಳಿಂದ ಕೂಡಿದ, ದಿವ್ಯ ತೇಜಸ್ಸುಳ್ಳ ಬಂಗಾರದಬಣ್ಣದ ಗಂಡು ಮಗುವು ಆ ಹಸುವಿನಿಂದ ಹೊರಬಂದಿತು. ಈ ಆಶ್ಚರ್ಯವನ್ನು ನೋಡಲು ನಗರದ ನರನಾರಿಯರೆಲ್ಲರೂ ಆತ್ಮದೇವನ ಮನೆಗೆ ಬಂದರು. ಹಸುವಿನ ಹೊಟ್ಟೆಯಿಂದ ಹುಟ್ಟಿದ ಮನುಷ್ಯ ಶಿಶುವನ್ನು ನೋಡಿ ಬೆರಗುಪಟ್ಟರು. ಆದರೆ ಅದರ ಗುಟ್ಟು ಗೊತ್ತಾಗಲಿಲ್ಲ ಯಾರಿಗೂ. ಗೋವಿನ ಹೊಟ್ಟೆಯಿಂದ ಹುಟ್ಟಿದ ಆ ಕೂಸಿನ ಕಿವಿ ಮಾತ್ರ ಗೋವಿನ ಕಿವಿಯಂತೇ ಇದ್ದಿತು. ಅದಕ್ಕಾಗಿ ಗೋಕರ್ಣ ಎಂದು ಹೆಸರಿಸಲಾಯಿತು ಆ ಹಸುವಿನ ಶಿಶುವನ್ನು ಕೆಲಕಾಲದ ನಂತರ ಆತ್ಮದೇವನ ಮನೆಯಲ್ಲಿ ಗೋಕರ್ಣ, ಧುಂಧುಕಾರಿ ಇಬ್ಬರೂ ಬೆಳೆದು ದೊಡ್ಡವರಾದರು. ಗೋಕರ್ಣನು ಕ್ರಮಪ್ರಕಾರ ಸ್ವಾಧ್ಯಾಯ ಅಧ್ಯಯನ ಮಾಡಿ ವೇದ-ವೈದುಷ್ಯವನ್ನು, ಶಾಸ್ತ್ರ ಪಾಂಡಿತ್ಯವನ್ನು ಪಡೆದ. ಸದಾಚಾರ ಸಂಪತ್ತಿ, ಭಗವದೈಕ ಪ್ರಪತ್ತಿ ಇವುಗಳಿಂದ ಸಂಪನ್ನನಾದ. ಆದರೆ ಧುಂಧುಕಾರಿಯು ಮಾತ್ರ

ಆಚಾರಹೀನ, ದುರ್ವಿಚಾರಿ, ಸ್ನಾನ, ಸಂಧ್ಯಾದಿ ಸದಾಚಾರ ವರ್ಜಿತ. ಕಂಡಲ್ಲಿ ತಿನ್ನುತ್ತಿದ್ದ. ಕಾಮಕ್ರೋಧಗಳಿಂದ ಸದಾ ಕ್ರೂರನಾಗಿ ವರ್ತಿಸುತ್ತಿದ್ದ. ಕಳವು, ದೇವಬ್ರಾಹ್ಮಣದ್ವೇಷ, ದುಷ್ಟಚಂಡಾಲ ಸಹವಾಸ ಮುಂತಾದ ದುರ್ಗುಣಗಳನ್ನು ಬೆಳೆಸಿಕೊಂಡ. ಓಣಿಯಲ್ಲಿ ಆಟವಾಡುವ ಮಕ್ಕಳನ್ನು ಎತ್ತಿಕೊಂಡು ಹೋಗಿ ಬಾವಿಯಲ್ಲಿ ಎಸೆಯುತ್ತಿದ್ದ. ವ್ಯಭಿಚಾರ ಅವನ ನಿತ್ಯ ಆಚಾರ. ತಂದೆ ಮಾಡಿಟ್ಟ ಹಣವನ್ನೆಲ್ಲ ವೇಶ್ಯಾಸಂಪರ್ಕದಿಂದ ಹಾಳು ಮಾಡಿದ. ಹೀಗೆ ಮನೆಯಲ್ಲಿದ್ದ ಬಂಗಾರ, ನಗ, ನಾಣ್ಯ ಎಲ್ಲವನ್ನೂ ಪೋಲುಮಾಡಿದ. ಆತ್ಮದೇವನಿಗೆ ಮುಪ್ಪಿನಕಾಲದಲ್ಲಿ ದಟ್ಟದಾರಿದ್ರ್ಯ ಬಂದಿತು. ಮನೆಯ ನಿತ್ಯ ಬಳಕೆಯ ವೆಚ್ಚಕ್ಕೂ ಇಲ್ಲದಂತಾಗಿ ಬಡತನದಿಂದ ಬಳಲಿ ದುಃಖಿಸತೊಡಗಿದ ಆತ್ಮದೇವ.

**ಆತ್ಮದೇವ:-** ''ದುಃಖವನ್ನು ನೀಡುವ ದುಷ್ಟ ಮಕ್ಕಳು ಇರುವದಕ್ಕಿಂತ ಮಕ್ಕಳು ಇಲ್ಲದಿರುವುದೇ ಲೇಸು. ಎಂದು ಮೊದಲೇ ಹೇಳಿದ್ದ ಸಿದ್ದಪುರುಷ. ಆ ಮಾತಿನ ಯಥಾರ್ಥತೆ ಈಗ ನನ್ನ ಅನುಭವಕ್ಕೆ ಬಂದಿದೆ. ಇನ್ನು ನಾನು ಏನು ಮಾಡಲಿ? ಎಲ್ಲಿ ಹೋಗಲಿ? ನನ್ನ ಈ ಸಂಕಟವನ್ನು ಪರಿಹರಿಸುವವರು ಯಾರು? ನಾನು ಈಗ ಈ ಮಗನೊಡನೆ ಮನೆಯಲ್ಲಿ ಬಾಳಲಾರೆ. ಅವನು ಮಾಡುವ ಕಳವು, ಕೊಲೆ, ವ್ಯಭಿಚಾರಾದಿ ದುರ್ವ್ಯಾಪಾರಗಳನ್ನು ತಾಳಲಾರೆ. ಊರಲ್ಲಿ ಜನರಿಗೆ ಮುಖವನ್ನು ತೋರಲಾರೆ. ಈಗ ಬೆಂಕಿಯಲ್ಲಿ ಹಾರಿ, ಅಥವಾ ನೀರಿನಲ್ಲಿ ಮುಳುಗಿ ಇಲ್ಲವೇ ಭೃಗುಶೃಂಗದಿಂದ ಜಿಗಿದು ಪ್ರಾಣವನ್ನು ಪರಿತ್ಯಾಗ ಮಾಡುವೆ.''

ಹೀಗೆ ದುರಂತವಾದ ಚಿಂತಾಸಂತಾನದಿಂದ ಅಂತರಂಗದಲ್ಲೇ ಕುದಿಯುತ್ತ ಮುಖ ಕೆಳಗೆ ಹಾಕಿ ಕುಳಿತಿದ್ದ. ಆಗ ಅಲ್ಲಿಗೆ ಪರಮ ಜ್ಞಾನಿಯಾದ ಗೋಕರ್ಣ ಬಂದ. ಚಿಂತಾಚಕ್ರದಲ್ಲಿ ಸಿಕ್ಕು ಗಾಸಿಗೊಂಡ ತಂದೆಯನ್ನು ನೋಡಿದ. ಅವನಿಗೆ ಹಿತವಚನಗಳನ್ನು ಬೋಧಿಸಿದ.

**ಗೋಕರ್ಣ:-** ''ಅಸಾರಸ್ತಿತ ಸಂಸಾರೋ ದುಃಖ ಮೋಹಪ್ರದೋನೃಣಾಮ್'' ''ತಂದೆಯೇ, ಈ ಸಂಸಾರಕ್ಕೆ ''ಸಂಸಾರ'' ಎಂಬ ಹೆಸರು ವ್ಯರ್ಥ. ಇದು ಸಂಸಾರ ಅಲ್ಲ. ''ಅಸಾರ'' ಇದರಲ್ಲಿ ಯಾವ ಸಾರವೂ ಇಲ್ಲ, ಸುಖವೂ ಇಲ್ಲ. ಇಲ್ಲಿ ಬಾಳುವ ಮನುಷ್ಯರ ಬದುಕೆಲ್ಲವೂ ಗೊಳು. ಇಲ್ಲಿಯ ಮೋಹ ಸ್ನೇಹಗಳಿಂದ ಮಾನವನಿಗೆ ನಿರಂತರ ದುಃಖ, ದಾರಿದ್ರ್ಯ, ದೈನ್ಯಾವಸ್ಥೆಗಳು ತಪ್ಪಿದ್ದಲ್ಲ. ಮೋಹಪಾಶದಿಂದ ಬದ್ದನಾದ ಜೀವ ಈ ಸಂಸಾರದ ಸುಳಿಯಲ್ಲಿ ಸಿಕ್ಕು ದುಃಖಪಡುತ್ತಾನೆ. ಸಾಕ್ಷಾತ್ ದೇವೇಂದ್ರನಿಗೂ ಸಹ ಸಂಸಾರದಲ್ಲಿ ಸುಖವಿಲ್ಲ. ಭೂಲೋಕದ ಚಕ್ರವರ್ತಿ ರಾಜನಿಗೂ ಬಾಳ್ವೆಯಲ್ಲಿ ಬೇಗುದಿ ತಪ್ಪಿದ್ದಲ್ಲ. ನೆಮ್ಮದಿ ಎಂಬುದು ಯಾರಿಗೂ ಇರುವುದಿಲ್ಲ. ಈ ಲೋಕದಲ್ಲಿ ''ಸುಖ'' ಎಂಬುದು ಸರ್ವಸಂಗ ಪರಿತ್ಯಾಗ ಮಾಡಿ ಏಕಾಂತದಲ್ಲಿ ಕುಳಿತು ಭಗವಂತನ ಧ್ಯಾನಮಾಡುವ ಮುನಿಮನೀಷಿಗಳಿಗೆ ಮಾತ್ರ ಲಭ್ಯ. ಆದುದರಿಂದ ಮಕ್ಕಳು, ಮಡದಿ, ಮನೆ, ಬಂಧು, ಬಳಗದಿಂದ ಸುಖ ದೊರಕುವದೆಂಬ ಮೋಹವನ್ನು ತ್ಯಜಿಸು. ಯಾರು ಯಾರಿಗೆ ಆಗುವರು? ಮಗನು ಯಾರು? ಮಡದಿ ಯಾರು? ಜೀವಾತ್ಮನಿಗೆ ಏನು ಸಂಬಂಧ? ತಂದೆ, ಮಗ, ಹೆಂಡತಿ ಎಲ್ಲವೂ ಕೃತ್ರಿಮ ಸಂಬಂಧ. ಈ ಎಲ್ಲ ಮೋಹವು ನರಕಕ್ಕೆ ಕಾರಣ. ಆದುದರಿಂದ ಸಾಂಸಾರಿಕ ವಿಷಯಗಳ ಮೇಲೆ 'ನಾನು' 'ನನ್ನದು' ಎಂಬ

ಅಭಿಮಾನ ಬಿಡು. ಎಲ್ಲವನ್ನೂ ತೊರೆದು ಅರಣ್ಯಕ್ಕೆ ನಡೆ. ಏಕಾಂತದಲ್ಲಿ ಕುಳಿತು ಶ್ರೀಕಾಂತನನ್ನು ಧ್ಯಾನಿಸು.

**ಮಾಂಸಾಸ್ಥಿರಕ್ತನಿಕರೇ ಸ್ವಶರೀರಕೇಸ್ಮಿನ್ ಸ್ವತ್ವಂ ತ್ಯಜಾಶು ಮಮತಾಂ ವನಿತಾಸುತಾದೌ ।**
**ಪಶ್ಯಾsನಿಶಂ ಜಗದಿದಂ ಕ್ಷಣಭಂಗನಿಷ್ಠಂ ಜ್ಞಾನೀವಿರಾಗರಸಿಕೋ ಭವ ಭಕ್ತಿನಿಷ್ಠಃ ॥**

ಮಾಂಸ, ಮೂಳೆ, ನೆತ್ತರ, ಮಜ್ಜೆ, ತೊಗಲುಗಳಿಂದ ತುಂಬಿದ ಈ ಶರೀರದಲ್ಲಿ ನಾನು ಎನ್ನುವ ಅಭಿಮಾನವನ್ನು ತ್ಯಜಿಸು. ನನ್ನದು ಎನ್ನುವ ಸ್ನೇಹ ಮೋಹವನ್ನು ವರ್ಜಿಸು. ಈ ಜಗತ್ತೆಲ್ಲವೂ ಕ್ಷಣಭಂಗುರ ಎಂದು ತಿಳಿದುಕೋ. ಭಗವಂತನಲ್ಲಿ ಏಕಾಗ್ರಚಿತ್ತದಿಂದ ಭಕ್ತಿಯನ್ನು ಮಾಡು. ಜ್ಞಾನಿಯಾಗಿ ದೇವರ ಧ್ಯಾನಮಾಡು. ಇಷ್ಟು ದಿನ ನೀನು ಸಂಸಾರದಲ್ಲಿ ರಾಗರಸಿಕನಾಗಿದ್ದೆ. ಇನ್ನು ಮೇಲೆ ವೈರಾಗ್ಯ ರಸಿಕನೂ ಆಗು.

**ಧರ್ಮಂ ಭಜಸ್ವ ಸತತಂ ತ್ಯಜಲೋಕಧರ್ಮಾನ್ ।**
**ಸಂಸೇವ್ಯ ಸಾಧುಪುರುಷಾನ್ ಜಹಿ ಕಾಮತೃಷ್ಣಾಮ್ ॥**
**ಅನ್ಯಚ್ಚ ದೋಷಗುಣಚಿಂತನ ಮಾಶುಮುಕ್ತ್ವಾ ।**
**ವಿಷ್ಣೋಃ ಕಥಾರಸಮಥೋ ನಿತರಾಂ ಪಿಬ ತ್ವಂ ॥**

ಯಾವಾಗಲೂ ಧರ್ಮವನ್ನು ಆಶ್ರಯಿಸು. ಭಾಗವತ ಧರ್ಮವನ್ನು ಅನುಷ್ಠಾನ ಮಾಡು. ಲೋಕಧರ್ಮಗಳನ್ನು ತ್ಯಜಿಸು. ಸಾಧು ಸಜ್ಜನರನ್ನು ಸೇವಿಸಿ ಕಾಮವನ್ನೂ ವಿಷಯದ ದುರಾಶೆಯನ್ನೂ ವರ್ಜಿಸು. ಹೆರವರ ದೋಷಗಳನ್ನು ಗಣಿಸಬೇಡ. ಅವಗುಣಗಳನ್ನೂ ಎಣಿಸಬೇಡ. ಲೌಕಿಕ ಚಿಂತೆಗಳನ್ನು ಮಾಡಬೇಡ. ಶ್ರೀಹರಿಯ ಕಥಾಮೃತದ ರಸವನ್ನು ನಿತ್ಯವೂ ಪಾನಮಾಡು.

**ಸನತ್ಕುಮಾರ:-** ಹೀಗೆ ಮಗನಾದ ಗೋಕರ್ಣನು ಮಾಡಿದ ಸದುಪದೇಶವನ್ನು ಕೇಳಿ ಅರವತ್ತರ ಅಂಚಿನಲ್ಲಿದ್ದ ಆ ಆತ್ಮದೇವನಿಗೆ ನಿಜವಾದ ವೈರಾಗ್ಯ ಉದಿಸಿತು. ಭಗವಂತನಲ್ಲಿ ಅವ್ಯಭಿಜರಿತವಾದ ಭಕ್ತಿ ಮನಸ್ಸಿನಲ್ಲಿ ಮೂಡಿತು. ಅಜ್ಞಾನದ ಅರಿವಿನ ಅರುಣೋದಯವಾಯಿತು. ಬೆಳಕು ಬೀರಿತು. ಮುಕ್ತಿ ಮಾರ್ಗದ ಸುಳಿವು ತೋರಿತು.

ಕೂಡಲೇ ಅವನು ಗೃಹ, ಗೃಹಿಣೀ, ಇಷ್ಟ, ಮಿತ್ರ ಪರಿವಾರವನ್ನೆಲ್ಲ ತೊರೆದ. ಕಾಡಿಗೆ ನಡೆದ. ಭಗವದ್ಭಕ್ತರನ್ನು ಸೇವಿಸಿದ. ವಿರಕ್ತನಾದ. ಭಗವದ್ಭಕ್ತನಾದ, ಸಂಸಾರದ ತಾಪತ್ರಯದಿಂದ ಮುಕ್ತನಾದ. ಕೊನೆಗೆ ಶ್ರೀಹರಿಯಲ್ಲಿ ಅತ್ಯರ್ಥ ಭಕ್ತಿಯನ್ನು ಮಾಡಿ ಮುಕ್ತನೂ ಆದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಶ್ರೀ ಮದ್ಭಾಗವತ ಮಹಾತ್ಮ್ಯದಲ್ಲಿ ಗೋಕರ್ಣ ವೃತ್ತಾಂತ ವರ್ಣನೆ ಪುರಸ್ಸರವಾಗಿ ಆತ್ಮದೇವನ ಪುತ್ರನಾದ ಧುಂಧುಕಾರಿಯ ಪಾಪಕೃತ್ಯ ವರ್ಣನೆ. ವನಕ್ಕೆ ಹೋಗಿ ಆತ್ಮದೇವನಿಂದ ಮುಕ್ತಿ ಪ್ರಾಪ್ತಿ ಎಂಬ ನೂರ ಎಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*

## ಧುಂಧುಕಾರಿಯ ವೃತ್ತಾಂತ. ಭಾಗವತ | ಅಧ್ಯಾಯ - ೧೭೯

## ಸಪ್ತಾಹದಿಂದ ಧುಂಧುಕಾರಿಗೆ ಪಿಶಾಚ ಯೋನಿಯಿಂದ ಬಿಡುಗಡೆ

**ಕುಮಾರರು:-** ತಂದೆ ಆತ್ಮದೇವನು ಅರಣ್ಯಕ್ಕೆ ಹೋದ ಕೂಡಲೇ ದುಷ್ಟನಾದ ಧುಂಧುಕಾರಿಯು ತಾಯಿಯಾದ ಧುಂಧುರಿಯನ್ನು ಸತಾಯಿಸಲು ಸುರುಮಾಡಿದ- "ಮನೆಯಲ್ಲಿ ತಂದೆ ಗಳಿಸಿದ ಹಣವು ಎಲ್ಲಿ ಇರುತ್ತದೆ? ದ್ರವ್ಯವನ್ನು ಬಚ್ಚಿಟ್ಟ ಸ್ಥಳ ಯಾವುದು? ನಿಧಿ ಇದ್ದ ಸ್ಥಳವನ್ನು ಹೇಳದಿದ್ದರೆ ನಿನ್ನನ್ನು ಈಗಲೇ ಇಲ್ಲಿಯೇ ಹೊಡೆದು ಸಾಯಿಸುತ್ತೇನೆ" ಎಂದು ಗದರಿಸಿ ತಾಯಿಯನ್ನು ಪ್ರಹರಿಸಿದ. ಮಗನಿಂದ ಮೈ ತುಂಬ ಹೊಡೆತ ಬಡೆತಗಳನ್ನು ತಿಂದು ಬೇಸತ್ತು ಧುಂಧುರಿಯು ಮನೆಯ ಹಿಂದಿನ ಹಾಳುಬಾವಿಯಲ್ಲಿ ಬಿದ್ದು ಪ್ರಾಣ ನೀಗಿದಳು. ಆಗ ಜನರು ಬಂದು ಬಾವಿಯಿಂದ ಅವಳನ್ನು ಮೇಲೆ ಎಳೆದು ಹಾಕಿದರು. ಅನಂತರ ಗೋಕರ್ಣನು ಅವಳಿಗೆ ಅಂತ್ಯ ಸಂಸ್ಕಾರವನ್ನು ಮಾಡಿ ಮನೆಬಿಟ್ಟು ಹೋಗಿಬಿಟ್ಟ.

ಇತ್ತ ಧುಂಧುಕಾರಿಯು ತಾಯಿ ತಂದೆ ಇಬ್ಬರೂ ಮನೆಯಲ್ಲಿ ಇಲ್ಲದಂತಾದಾಗ ಮತ್ತಿಷ್ಟು ಉಚ್ಛೃಂಖಲನಾದ. ಅನೇಕ ಬೆಲೆವೆಣ್ಣುಗಳನ್ನು ಮನೆಯಲ್ಲಿಯೇ ತಂದು ಇಟ್ಟುಕೊಂಡ. ಅವರು ಬೇಡಿದ ಬಟ್ಟೆ, ಬಯಸಿದ ಭೂಷಣ ಕೇಳಿದ ಆಭರಣ, ಇಚ್ಛಿಸಿದ ಭೋಜನಗಳನ್ನು ಕೊಟ್ಟು ಮನೆಯಲ್ಲಿಯೇ ಇರಿಸಿಕೊಂಡು ಅವರ ಪೋಷಣ ತೋಷಣದಲ್ಲಿ ತನ್ನ ಜೀವನ ಸಾರ್ಥಕ ಎಂದುಕೊಂಡ. ಧನ ಪಿಶಾಚಿನಿಯರಾದ ಆ ಬಣ್ಣದ ಬೀಸಣಿಕೆಯರು ಕಾಮುಕನಾದ ಆ ಧುಂಧುಕಾರಿಯನ್ನು ಮರುಳು ಮಾಡಿ ಅವನಿಂದ ಪ್ರತಿದಿನವೂ ಬಟ್ಟೆ, ಬಂಗಾರ, ವಸ್ತು ವಡವೆ ಮುಂತಾದ ವಿಲಾಸ ಸಾಮಗ್ರಿಗಳನ್ನು ಕಿತ್ತುಕೊಳ್ಳುತ್ತಿದ್ದರು. "ನಾವು ಬೇಡಿದ ವಸ್ತುಗಳನ್ನು ತಂದು ಕೊಡದಿದ್ದರೆ ನಾವು ಈಗಲೇ ನಿನ್ನನ್ನು ಬಿಟ್ಟು ಹೊರಟು ಹೋಗುತ್ತೇವೆ. ನಾವು ನಿನ್ನನ್ನೇ ಪತಿಯೆಂದು ನಂಬಿ ಸೇವಿಸುತ್ತಿದ್ದೇವೆ. ಆದರಿಂದಾಗಿ ನಮ್ಮ ಬಳಿಗೆ ಉಳಿದ ಪುರುಷರು ಯಾರೂ ಬರುವದಿಲ್ಲ. ಆದುದರಿಂದ ನಮಗೆ ಈಗ ನೀನು ಅಮೂಲ್ಯವಾದ ಹಾಗೂ ಸೂಕ್ಷ್ಮವಾದ ವಸ್ತುಗಳನ್ನೂ ಆಭರಣಗಳನ್ನೂ ನೀಡು. ಇಲ್ಲದಿದ್ದರೆ ನಾವು ನಿನ್ನನ್ನು ಬಿಟ್ಟು ಹೋಗುತ್ತೇವೆ" ಎಂದು ಬಿಂಕ ಬಿನ್ನಾಣದೊಂದಿಗೆ ಬೆದರಿಕೆಯ ಹುಸಿನುಡಿಯನ್ನು ಆಡುತ್ತಿದ್ದರು.

ಅವರ ಈ ಮಾತನ್ನು ಕೇಳಿ ಕಾಮಾಂಧನಾದ ಆ ಧುಂಧುಕಾರಿಯು ರಾತ್ರಿ ನಿದ್ದೆಯನ್ನು ಬಿಟ್ಟ. ಹಣವಂತರ ಮನೆಗೆ ಕನ್ನ ಹಾಕಿದ, ಬೇಕಾದಷ್ಟು ಬಟ್ಟೆ, ಬಂಗಾರ, ನಗ, ನಾಣ್ಯ, ಮುತ್ತು, ರತ್ನ, ಆಭರಣ ಮುಂತಾದವುಗಳನ್ನು ಕೊಟ್ಟು ಆ ವೇಶ್ಯೆಯರನ್ನು ಸಂತೋಷಪಡಿಸಿದ.

ಆ ವೇಶ್ಯಾಸ್ತ್ರೀಯರು ತಮ್ಮ ತಮ್ಮಲ್ಲಿ ವಿಚಾರ ಮಾಡಿದರು - "ಕಾಮಾತುರನಾದ ಧುಂಧುಕಾರಿಯು ನಮಗಾಗಿ ಅನೇಕ ಶ್ರೀಮಂತರ ಮನೆಗೆ ಕನ್ನಹಾಕಿ ಕದ್ದು ಬೆಲೆ ಬಾಳುವ ಬಂಗಾರದ ಆಭರಣ ಹಾಗೂ ಪಟ್ಟೆ ಪೀತಾಂಬರಗಳನ್ನು ನಮಗೆ ತಂದು ಕೊಟ್ಟಿದ್ದಾನೆ. ಈಗಾಗಲೇ ರಾಜದೂತರು ಅವನನ್ನು ಹುಡುಕುತ್ತಿರಬಹುದು. ಅವರು ನಾವಿದ್ದ ಮನೆಗೆ ಬಂದರೆ ನಾವೆಲ್ಲರೂ ಕಳವಿನ ಮಾಲು ಸಹಿತ ಸಿಕ್ಕಿಬೀಳುವೆವು. ಆದುದರಿಂದ ಈಗ ಇವನನ್ನು ಕೊಂದು ಅವನು ಮನೆಯಲ್ಲಿ ತಂದು ಇರಿಸಿದ ಎಲ್ಲ ದ್ರವ್ಯವನ್ನೂ ತೆಗೆದುಕೊಂಡು ಹೋಗಿಬಿಡೋಣ."

ಹೀಗೆ ವಿಚಾರಮಾಡಿ ಆ ಎಲ್ಲ ಗಣಿಕೆಯರು ಒಂದು ದಿನ ಧುಂಧುಕಾರಿಯ ಕೊರಳಿಗೆ ಉರುಳು ಹಾಕಿದರು. ಹಗ್ಗದಿಂದ ಅವನ ಕೊರಳನ್ನು ಬಿಗಿದರೂ ಬೇಗ ಅವನ ಪ್ರಾಣ ಹೋಗಲಿಲ್ಲ. ಆಗ ಬಲಿಷ್ಠರಾದ ಆ ಬೀದಿಯ ಹೆಣ್ಣುಗಳು ಬಹಳ ಜನರಿದ್ದುದರಿಂದ ಎಲ್ಲರೂ ಕೂಡಿ ಆ ಧುಂಧುಕಾರಿಯನ್ನು ಹೊಡೆದು ನೆಲದ ಮೇಲೆ ಬೀಳಿಸಿ ಮೈ ಕೈ ಬಿಗಿದು ಒಗೆದು ಬಾಯಲ್ಲಿ ಬೆಂಕಿಯಿಟ್ಟು ಮೈಗೆಲ್ಲ ಉರಿ ಹಚ್ಚಿದರು. ಆ ಗಣಿಕೆಯರು ಹಚ್ಚಿದ ಬೆಂಕಿಯಲ್ಲಿ ಧುಂಧುಕಾರಿಯ ದೇಹ ಬೆಂದು ಹೋಯಿತು. ಅಳಿದುಳಿದ ಅವನ ದೇಹದ ಅವಶೇಷಗಳನ್ನು ದೊಡ್ಡದಾದ ತೆಗ್ಗು ತೋಡಿ ಹುಗಿದು ಆ ಎಲ್ಲ ಜಾರಿಣಿಯರು ಧುಂಧುಕಾರಿಯು ಸಿರಿವಂತರ ಮನೆಯಿಂದ ಕದ್ದು ತಂದ ಹಣವನ್ನೆಲ್ಲ ಅಪಹರಿಸಿದರು. 'ಧುಂಧುಕಾರಿ ಎಲ್ಲಿ' ಎಂದು ಕೇಳಿದವರಿಗೆಲ್ಲ ''ವ್ಯಾಪಾರಕ್ಕಾಗಿ ದೂರದೇಶಕ್ಕೆ ಹೋಗಿದ್ದಾನೆ. ಇನ್ನೂ ಕೆಲವು ದಿನಗಳ ಅನಂತರ ಮರಳಿ ಬರುತ್ತಾನೆ'' ಎಂದು ಹೇಳುತ್ತಿದ್ದರು. ಆದುದರಿಂದ ಸ್ತ್ರೀಯರ ಮೇಲೆ ವಿಶ್ವಾಸವನ್ನಿಡಬಾರದು ವಿವೇಕಿಗಳಾದವರು.

**''ವಿಶ್ವಸ್ತಂ ಸರ್ವಥಾ ಘ್ನಂತಿ ಪ್ರಾರ್ಥಯಂತ್ಯೋ ನವಂ ನವಮ್''**
**ಸುಧಾಮಯಂ ವಚೋಯಾಸಾಂ ಕಾಮಿನಾಂ ರಸವರ್ಧನಂ ।**
**ಹೃದಯಂ ಕ್ಷುರಧಾರಾಭಂ ಪ್ರಿಯಃ ಕೋನಾಮ ಯೋಷಿತಾಮ್ ॥**

ಮಹಿಳೆಯರು ಹೊಸ ಹೊಸ ಪುರುಷರ ಸಹವಾಸವನ್ನು ಬಯಸುತ್ತಾರೆ. ನಂಬಿದವರನ್ನು ವಿಶ್ವಾಸಘಾತಮಾಡಿ ನಾಶಮಾಡುತ್ತಾರೆ. ಕಾಮಿನಿಯರ ಅಮೃತಮಯವಾದ ಮಾತು ಕಾಮುಕರ ಪ್ರೀತಿಯನ್ನು ಗಳಿಸುತ್ತದೆ. ಬಾಯಲ್ಲಿ ಸಿಹಿ ಮಾತನಾಡುತ್ತಿದ್ದರೂ ಅವರ ಹೃದಯವು ಮಾತ್ರ ಖಡ್ಗದ ಅಲಗಿನಂತೆ ತೀಕ್ಷ್ಣವಾಗಿರುತ್ತದೆ. ಅವರಿಗೆ ಪ್ರಿಯವಾದ ಗಂಡಸು ಯಾರು ಇದ್ದಾರೆ?

ಬಳಿಕ ಆ ಎಲ್ಲ ವೇಶ್ಯೆಯರು ಧುಂಧುಕಾರಿಯ ಮನೆಯಲ್ಲಿ ಇದ್ದ ಹಣವನ್ನೆಲ್ಲ ಕದ್ದುಕೊಂಡು ರಾಜದೂತರ ಭಯದಿಂದ ಆ ಊರನ್ನು ಬಿಟ್ಟು ಪರಊರಿಗೆ ಹೊರಟುಹೋದರು. ಇತ್ತ ಧುಂಧುಕಾರಿಯು ವೇಶ್ಯೆಯರು ಕೊಟ್ಟ ಕೊಳ್ಳಿಯಿಂದ ಸುಟ್ಟು, ಅಪಮೃತ್ಯುವನ್ನು ಹೊಂದಿ, ಯಾವ ಅಂತ್ಯ ಸಂಸ್ಕಾರವೂ ಇಲ್ಲದೇ ಪ್ರೇತನಾಗಿ ಗಾಳಿಯ ರೂಪದಿಂದ ದಿಕ್ಕೆಟ್ಟು ಓಡಾಡತೊಡಗಿದ. ಹಸಿವೆ, ನೀರಡಿಕೆಯಿಂದ ಬಳಲಿ ಬೆಂಡಾಗಿ 'ಹಾಯ್ ! ಹಾಯ್ ! ಅಕಟಕಟ,' ಎನ್ನುತ್ತ ಅಂತರ ಪಿಶಾಚಿಯಾಗಿ ತಿರುಗತೊಡಗಿದ.

ಕೆಲವು ದಿನಗಳ ನಂತರ ತೀರ್ಥಯಾತ್ರೆಯಲ್ಲಿದ್ದ ಗೋಕರ್ಣನಿಗೆ ತನ್ನ ಅಣ್ಣನ ಮರಣದ ಸಮಾಚಾರ ತಿಳಿಯಿತು. ಆಗ ಗೋಕರ್ಣನು ಗಯಾ ಕ್ಷೇತ್ರಕ್ಕೆ ಹೋಗಿ ಅಲ್ಲಿ ತನ್ನ ಸೋದರನಾದ ಧುಂಧುಕಾರಿಯ ಶ್ರಾದ್ಧವನ್ನು ಮಾಡಿದ. ತೀರ್ಥಯಾತ್ರೆ ಮಾಡಿಕೊಂಡು ತನ್ನ ಸ್ವಂತ ಊರಿಗೆ ಮರಳಿದ. ಊರ ಜನರು ಬಹುದಿನಗಳ ಮೇಲೆ ತೀರ್ಥಯಾತ್ರೆ ಮುಗಿಸಿ ಬಂದ ಗೋಕರ್ಣನಿಗೆ ಸ್ವಾಗತ ನೀಡಿ ಸತ್ಕಾರ ಮಾಡಿ ಮರ್ಯಾದೆಯನ್ನು ಸಲ್ಲಿಸಿದರು. ಗೋಕರ್ಣ ತನ್ನ ಮನೆಯಲ್ಲಿ ಕೆಲವು ದಿನಗಳ ವರೆಗೆ ಸುಖವಾಗಿ ಇದ್ದ.

ಒಂದು ದಿನ ಗೋಕರ್ಣನು ಮಲಗಿಕೊಂಡಾಗ ದುಷ್ಟನಾದ ಧುಂಧುಕಾರಿಯು ತನ್ನ ವಿಕರಾವಾದ ಪ್ರೇತರೂಪವನ್ನು ಪ್ರದರ್ಶಿಸಿದ. ಒಂದು ಕ್ಷಣ ಆನೆ, ಇನ್ನೊಂದು ಕ್ಷಣ ಒಂಟೆ, ಇನ್ನೊಂದು ಕ್ಷಣ ಅಗ್ನಿ, ಮತ್ತೊಂದು ಕ್ಷಣ ಕೋಣ, ಮಗದೊಂದು ಕ್ಷಣದಲ್ಲಿ ಹಾವು, ಅದರ ಮರುಕ್ಷಣದಲ್ಲಿ ಪುರುಷ ಮುಂತಾದ ಬಗೆಬಗೆಯ ರೂಪಗಳನ್ನು

ಧರಿಸಿದಂತೆ ಕಾಣಿಸಿಕೊಂಡ. ಗೋಕರ್ಣನೂ ಮಹಾ ಧೈರ್ಯಶಾಲಿ. ಈ ಎಲ್ಲ ಭೂತಚೇಷ್ಟೆಗೆ ಅವನು ಬೆದರಲಿಲ್ಲ. ದಿಟ್ಟತನದಿಂದ ಗಟ್ಟಿಸಿ ಕೇಳಿದ.

**ಗೋಕರ್ಣ:-** ಪುರುಷಾಧಮ, ನೀನು ಯಾರು? ನನ್ನನ್ನು ಹೆದರಿಸಲು ಬಂದ ನೀನು ಪ್ರೇತವೋ, ಪಿಶಾಚವೋ ದೆವ್ವವೋ ಭೂತವೋ ಗ್ರಹವೋ? ನಿನಗೆ ಇಂಥ ದುರ್ದಶೆ ಏಕೆ ಬಂದಿತು? ನನ್ನಿಂದ ಏನಾದರೂ ನಿನಗೆ ಕೆಲಸ ಆಗಬೇಕೆ? ಇಂಥ ಅಪರಾತ್ರಿಯಲ್ಲಿ ಇಂಥ ಘೋರ ರೂಪದಿಂದ ನನ್ನ ಬಳಿಗೆ ಏಕೆ ಬಂದಿರುವೆ?

ಗೋಕರ್ಣನ ಮಾತು ಕೇಳಿ ಪ್ರೇತ ರೂಪದಲ್ಲಿರುವ ಧುಂಧುಕಾರಿಯು ಆರ್ತನಾಗಿ ಮುಸಿ ಮುಸಿ ಅತ್ತ. ಮಾತನಾಡಲು ಬಾಯಿ ಇಲ್ಲ. ಮುಖ ತೋರಲು ಆಕಾರವಿಲ್ಲ. ಸಂಕಟವನ್ನು ಹೇಳಿಕೊಳ್ಳಲು ನಾಲಿಗೆ ಇಲ್ಲ. ಆದರೂ ತನಗೆ ಬಾಯಾರಿಕೆ ಆಗಿದೆ ಎಂಬುದನ್ನು ಏನೋ ಸಂಕೇತ ಮಾಡಿ ಸನ್ನೆಗೈದು ತಿಳಿಸಿದ. ಆಗ ಗೋಕರ್ಣನು ತನ್ನ ಕೈಯಲ್ಲಿಯ ನೀರನ್ನು ಆ ಪ್ರೇತದ ಮೇಲೆ ಪ್ರೋಕ್ಷಿಸಿದ. ಆದರಿಂದ ಆ ಧುಂಧುಕಾರಿಯ ದೇಹಕ್ಕೆ ತೃಪ್ತಿ ಆದಂತೆ ಆಯಿತು. ಆ ಜಲ ಪ್ರೋಕ್ಷಣದಿಂದ ಆ ಪ್ರೇತಕ್ಕೆ ತುಸು ಜ್ಞಾನ ಬಂದಿತು. ಕಿಂಚಿತ್ ವಿಚಾರಶಕ್ತಿಯೂ ಅಸ್ಪಷ್ಟವಾಗಿ ಹೊರಬಿದ್ದು ಬಂದಿತು.

**ಪ್ರೇತ:-** ಗೋಕರ್ಣ, ನಾನು ನಿನ್ನ ಅಣ್ಣ. ಧುಂಧುಕಾರಿಯೆಂದು ನನ್ನ ಹೆಸರು. ನಾನು ಕಳೆದ ಜನ್ಮದಲ್ಲಿ ಮಾಡಿದ ದುಷ್ಕೃತ್ಯದಿಂದ ಈಗ ಪ್ರೇತನಾಗಿದ್ದೇನೆ. ನಾನು ನನ್ನ ತಾಯಿಯನ್ನು ಬಹಳಷ್ಟು ಸಲ ಗದರಿಸಿ ಬೆದರಿಸಿ ಪ್ರಹರಿಸಿ ಅವಳು ತಾನಾಗಿ ಸಾಯುವಂತೆ ಮಾಡಿದೆ. ಹೆರವರ ಮನೆಯ ಹಣವನ್ನು ಕದ್ದು ತಂದು ಬೀದಿಯ ಹೆಣ್ಣುಗಳನ್ನೆಲ್ಲ ಪೋಷಿಸಿದೆ. ಕಳವು ಮಾಡಿದೆ. ಕನ್ನ ಕೊರೆದೆ. ಕಂಡ ಹೆಣ್ಣುಗಳನ್ನೆಲ್ಲ ಕೆಡಿಸಿದೆ. ಅವರೆಲ್ಲರನ್ನೂ ನನ್ನ ಮನೆಯಲ್ಲಿಯೇ ತಂದು ಇಟ್ಟುಕೊಂಡೆ. ಅವರ ಬಟ್ಟೆ, ಬಂಗಾರ, ಭೂಷಣ, ಭೋಗ ವಿಲಾಸಗಳ ಬಯಕೆಯನ್ನು ಪೂರೈಸಲಿಕ್ಕಾಗಿ ತುಡುಗು ಮಾಡಿದೆ. ಅವರು ಬೇಡಿದಷ್ಟು ದ್ರವ್ಯವನ್ನು ತಂದು ಅವರ ಮುಂದೆ ಸುರುವಿದೆ. ಹಣದ ಆಶೆಗಾಗಿ ಸಿರಿವಂತರ ಮನೆಯಿಂದ ಅಮೂಲ್ಯವಾದ ಮುತ್ತು ರತ್ನಾಭರಣಗಳನ್ನು ತಂದು ಆ ಬೀದಿಯ ಹೆಣ್ಣುಗಳಿಗೆ ಕೊಟ್ಟು ಸಂತೋಷಪಡಿಸಿದೆ.

ಒಂದು ದಿನ ಆ ಎಲ್ಲ ಗಣಿಕೆಯರು ನನ್ನನ್ನು ಮನೆಯಲ್ಲಿಯೇ ಕೊರಳು ಬಿಗಿದು ಬಾಯಲ್ಲಿ ಬೆಂಕಿಹಾಕಿ ಕೊಂದು ಓಡಿಹೋದರು. ಆದರಿಂದ ದುರ್ಮರಣಕ್ಕೆ ಈಡಾದ ನಾನು ಪ್ರೇತನಾಗಿ ಇನ್ನೂವರೆಗೂ ಅಂತರಾಳದಲ್ಲಿ ತಿರುಗುತ್ತಿದ್ದೇನೆ. ಇಂದು ನೀನು ನನಗೆ ನೀರಿನಿಂದ ಪ್ರೋಕ್ಷಣ ಮಾಡಿದ್ದರಿಂದ ನನಗೆ ತುಸು ಎಚ್ಚರ ಬಂದಿದೆ. ಈಗ ನಾನು ಬರೀ ಗಾಳಿ ಕುಡಿದು ಇದ್ದೇನೆ. ಆದರೆ ಇಂದು ನನ್ನ ಸೋದರನಾದ ನೀನು ಈ ಮನೆ ಅಂಗಳದಲ್ಲಿ ಮಲಗಿದ್ದನ್ನು ನೋಡಿದ ನನಗೆ ನಿನ್ನ ಗುರುತು ಚೆನ್ನಾಗಿ ಹತ್ತಿತ್ತು. ನೀನು ಮಾತ್ರ ನನ್ನನ್ನು ಗುರುತಿಸಲಾರೆ. ನಿನ್ನ ಹಿರಿಯ ಅಣ್ಣನೇ ನಾನು. ದಯಾಸಿಂಧುವಾದ ದೀನಬಂಧುವೇ, ನನ್ನನ್ನು ಈ ಘೋರವಾದ ಪ್ರೇತಜನ್ಮದಿಂದ ಉದ್ಧಾರಮಾಡು. ಅಂದರೆ ನಾನು ಕೃತಾರ್ಥನಾಗುವೆ.

ಗೋಕರ್ಣನು ತನ್ನ ಸೋದರನಾದ ಧುಂಧುಕಾರಿಯ ಈ ಮಾತುಗಳನ್ನು ಕೇಳಿ ದುಃಖಿತನಾಗಿಯೇ ನುಡಿದ -

**ಗೋಕರ್ಣ:-** ನಾನು ಗಯಾ ಕ್ಷೇತ್ರಕ್ಕೆ ಹೋಗಿ ವಿಷ್ಣುಪಾದದ ಮೇಲೆ ನಿನ್ನ ಪಿಂಡವನ್ನು ಹಾಕಿ ಬಂದೆ. ಆದರೂ ನಿನಗೆ ಈ ಪ್ರೇತ ಜನ್ಮದಿಂದ ಬಿಡುಗಡೆ ಹೇಗೆ ಆಗಿಲ್ಲ ? ಗಯಾದಲ್ಲಿ ಪಿಂಡಪ್ರದಾನದಿಂದ ಮಹಾಪಾಪಿಗಳೂ ಕೂಡ ಸದ್ಗತಿಯನ್ನು ಹೊಂದುತ್ತಾರೆ. ಜನರ ಬಾಯಿಂದ ನಿನ್ನ ಮರಣದ ಸಮಾಚಾರವನ್ನು ಕೇಳಿದ ಕೂಡಲೇ ನಾನು ಗಯಾಕ್ಕೆ ಹೋಗಿ ನಿನ್ನ ಶ್ರಾದ್ಧ ಮಾಡಿದೆ. ನೀನು ಇನ್ನೂವರೆಗೂ ಸ್ವರ್ಗಕ್ಕೆ ಹೋಗದೆ ಹೇಗೆ ಉಳಿದೆ?

**ಧುಂಧುಕಾರಿ:-** ನನ್ನ ಪಾಪ ಘನತರ ಮತ್ತು ಗುರುತರ. ಗಯಾಶ್ರಾದ್ಧದಿಂದ ಆ ನನ್ನ ಘೋರಪಾಪ ಕಳೆಯಲಾರದು. ನನ್ನ ಉದ್ಧಾರಕ್ಕಾಗಿ ಬೇರೆ ಯಾವುದಾದರೂ ಉಪಾಯವನ್ನು ಸೂಚಿಸು.

ಆ ಪ್ರೇತದ ಮಾತನ್ನು ಕೇಳಿ ಗೋಕರ್ಣನು ಧರ್ಮಶಾಸ್ತ್ರ ಪಂಡಿತರನ್ನು ಕೇಳಿದ ಅವರು ಸೂರ್ಯದೇವನಿಗೆ ಶರಣು ಹೋಗು ಎಂದು ಸಲಹೆ ಮಾಡಿದರು. ಮತ್ತು ಸ್ವಯಂ ತಾವೇ ಆ ಎಲ್ಲ ಧರ್ಮಶಾಸ್ತ್ರ ಪಂಡಿತರಾದ ವಿದ್ವಾಂಸರು ಇಂಥ ಪಾಪಿಷ್ಠರ ಉದ್ಧಾರಕ್ಕಾಗಿ ಮಾರ್ಗದರ್ಶನ ಮಾಡಲು ಸೂರ್ಯನಾರಾಯಣನನ್ನು ಪ್ರಾರ್ಥಿಸಿ ಸ್ತೋತ್ರ ಮಾಡಿದರು.

**ಪಂಡಿತರು:-**

**ನಮಸ್ತೇ, ಭಾಸ್ಕರಾದಿತ್ಯ, ತಮೋಹಂತರ್ಗಭಿಸ್ತಿಮನ್ ।**
**ಲೋಕಸಾಕ್ಷಿನ್ ಜಗದ್ಧಾಮ ಸುರಾಸುರ ನಮಸ್ಕೃತ ॥**

ಕತ್ತಲೆಯನ್ನು ನಾಶಮಾಡುವ ದೀಪ್ತಿವಂತನಾದ ಸೂರ್ಯದೇವ, ಲೋಕಸಾಕ್ಷಿಯೂ ಜಗದಾಧಾರನೂ ದೇವಾಸುರರಿಂದ ವಂದನೀಯನೂ ಆದ ನಿನಗೆ ನಮಸ್ಕಾರ.

ಹೀಗೆ ಆ ವಿಪ್ರೋತ್ತಮರ ಪ್ರಾರ್ಥನೆಯಿಂದ ಪ್ರಮುದಿತನಾದ ಆ ಪ್ರಭಾಕರನು ಅಶರೀರ ವಾಣಿಯಿಂದ ನುಡಿದ.

**ಸೂರ್ಯ:-** ದ್ವಿಜಶ್ರೇಷ್ಠರೇ, ಧುಂಧುಕಾರಿಯ ಪಾಪಶಾಂತಿಗಾಗಿ ಗೋಕರ್ಣನು ಶ್ರೀಮದ್ ಭಾಗವತದ ಸಪ್ತಾಹ ಸಮಾರಂಭವನ್ನು ನೆರವೇರಿಸಲಿ. ಆದರಿಂದ ದುಂದುಕಾರಿಯ ಉದ್ಧಾರವು ಆಗುವದು.

ಆಗ ಗೋಕರ್ಣನು ದಿವಾಕರನ ಆದೇಶದಂತೆ ತುಂಗಭದ್ರಾ ತೀರದ ಕೋಹಲಾ ನಗರದಲ್ಲಿ ತನ್ನ ಮನೆಯಲ್ಲಿ ಆ ಶ್ರೀ ಭಾಗವತ ಸಪ್ತಾಹ ಪ್ರವಚನವನ್ನು ಪ್ರಾರಂಭಿಸಿದ. ಅದನ್ನು ನೋಡಲು ಹಾಗೂ ಕೇಳಲು ನಗರದ ಎಲ್ಲ ಜನರೂ ಭಕ್ತಿಯಿಂದ ಹಾಗೂ ಕುತೂಹಲದಿಂದ ಆಗಮಿಸಿದರು.

ಸಪ್ತಾಹದ ಪ್ರಾರಂಭದ ಮೊದಲು ಶ್ರೀಹರಿಯನ್ನು ಮತ್ತು ಅನಂತರ ತಾರತಮ್ಯಕ್ಕೆ ಅನುಗುಣವಾಗಿ ಇತರ ದೇವತೆಗಳನ್ನು ನಮಸ್ಕರಿಸಿದ. ''ಸೂರ್ಯನಾರಾಯಣನು ಅಶರೀರ ವಾಣಿಯಿಂದ ಹೇಳಿದ ಮಾತು ನಿಜದಾಗಿದ್ದರೆ ಭಗವಾನ್ ವೇದವ್ಯಾಸರ ಮುಖದಿಂದ ಹರಿದು ಬಂದ ಶ್ರೀಮದ್ ಭಾಗವತವು ಶ್ರೀಹರಿಯ ಪಾದೋದಕವಾದ ಗಂಗೆಯಂತೆ ಪರಮ ಪವಿತ್ರವಾಗಿ ಸರ್ವ ಪಾಪಪರಿಹಾರವಾಗಿ ಇದ್ದುದು ನಿಜವಿದ್ದರೆ ಈ ಧುಂಧುಕಾರಿಯು ಪ್ರೇತಯೋನಿಯಿಂದ ಮುಕ್ತನಾಗಿ ಸದ್ಗತಿಯನ್ನು ಹೊಂದಲಿ'' ಎಂದು ಮನಸ್ಸಿನಿಂದ ಸಂಕಲ್ಪಿಸಿ ಶ್ರೀಮದ್ ಭಾಗವತ ಸಪ್ತಾಹವನ್ನು ಶುರು ಮಾಡಿದ.

''ಜನ್ಮಾದ್ಯಸ್ಯಯತಃ'' ಎಂಬ ಶ್ಲೋಕದೊಂದಿಗೆ ಶ್ರೀಮದ್‌ಭಾಗವತ ಪ್ರವಚನವು ಶುರು ಆದ ಕೂಡಲೇ ಅಲ್ಲಿಗೆ ಆ ಧುಂಧುಕಾರಿಯ ಪ್ರೇತವು ಅತ್ತಿತ್ತ ನೋಡುತ್ತ ಬಂದಿತು. ಆ ಸಪ್ತಾಹ ಪ್ರವಚನದ ಕಾರ್ಯಕ್ರಮಕ್ಕಾಗಿ ಹಾಕಿದ ವಿಶಾಲವಾದ ಹಂದರದ ಒಂದು ಏಳು ಗಣ್ಣಿನ ಬಿದಿರಿನಲ್ಲಿ ಆ ಪ್ರೇತವು ಗಾಳಿಯ ರೂಪದಿಂದ ಬಿದಿರುಗಣ್ಣಿನ ಒಳಗೆ ಹೋಗಿ ಕುಳಿತುಕೊಂಡಿತು. ಗೋಕರ್ಣನಂಥ ಸರ್ವಶಾಸ್ತ್ರ ಪ್ರವೀಣನಾದ ಪಂಡಿತೋತ್ತಮನು ಮಾಡುತ್ತ ಇರುವ ಭಾಗವತ ಪ್ರವಚನರೂಪ ಸಪ್ತಾಹಯಜ್ಞದಲ್ಲಿ ಭಾಗವತವನ್ನು ಶ್ರವಣ ಮಾಡಬೇಕು, ಎಂದು ಅನೇಕ ವಿಷ್ಣುಭಕ್ತರೂ ಭಾಗವತ ಪ್ರವಚನವನ್ನು ಕೇಳಲಿಕ್ಕೆ ಬರುತ್ತಿದ್ದರು.

ಅದರಂತೆ ಧುಂಧುರಿಯ ಮಗನಾದ ಧುಂಧುಕಾರಿಯು ಕೂಡ ಹಂದರದ ಬಿದಿರುಕಂಬದ ಗೆಣ್ಣುಗಳಲ್ಲಿ ಇರುವ ರಂಧ್ರದಲ್ಲಿ ಕುಳಿತು ಭಾಗವತವನ್ನು ಶ್ರವಣಮಾಡಿದ. ಮೊದಲನೆಯ ದಿನ ಭಾಗವತದ ಕಥಾಪ್ರವಚನವು ಮುಗಿದ ಕೂಡಲೇ ಆ ಬಿದಿರುಗಂಬದ ಏಳು ಗೆಣ್ಣುಗಳಲ್ಲಿ ಒಂದು ಗಂಟು ಸ್ಫೋಟಗೊಂಡಿತು. ಹೀಗೆ ಪ್ರತಿ ದಿನ ಭಾಗವತ ಪ್ರವಚನಾಂತ್ಯದಲ್ಲಿ ಒಂದೊಂದು ಬಿದಿರಿನ ಗಂಟು ಒಡೆಯುತ್ತ ಬಂದು ಏಳನೆಯ ದಿವಸ ಕೊನೆಯ ಗೆಣ್ಣು ಸ್ಫೋಟಗೊಂಡಿತು.

ಹೀಗೆ ಏಳು ದಿನ ಸಾಯಂಕಾಲದವರೆಗೆ ಭಾಗವತ ಕಥಾಮೃತವನ್ನು ಶ್ರವಣ ಮಾಡಿ ಕೊನೆಯ ದಿನ ಸಂಪೂರ್ಣ ಕಥಾಶ್ರವಣವು ಮುಗಿದ ಬಳಿಕ ಅದನ್ನು ಇಡಿ ಕಿಡಿಯಾಗಿ ಶ್ರವಣ ಮಾಡಿದ ಧುಂಧುಕಾರಿಯ ಪ್ರೇತತ್ವವು ನಷ್ಟವಾಯಿತು. ಮತ್ತು ಅವನಿಗೆ ಒಂದು ದಿವ್ಯವಾದ ರೂಪವು ಪ್ರಾಪ್ತವಾಯಿತು. ಕೊರಳಲ್ಲಿ ತುಳಸಿ ಮಾಲೆ, ಮೈ ಮೇಲೆ ಪೀತಾಂಬರ, ಅಂಗಾಂಗಗಳಲ್ಲಿ ಬಗೆಬಗೆಯ ಆಭರಣಗಳಿಂದ ಮಂಡಿತನಾಗಿ ಧುಂಧುಕಾರಿಯು ದೈವಿಕ ದೇಹವನ್ನು ಹೊಂದಿ ರಾರಾಜಿಸಿದ. ಮತ್ತು ಅಲ್ಲಿಯೇ ಭಾಗವತ ಪ್ರವಚನ ಮಾಡುತ್ತ ಕುಳಿತ ಗೋಕರ್ಣನ ಬಳಿಗೆ ಬಂದು ನಮಸ್ಕಾರ ಮಾಡಿ - ''ಪ್ರಿಯ ಬಂಧುವೇ, ಭಾಗವತ ಕಥೆಯು ನಿಜವಾಗಿಯೂ ಧನ್ಯಧನ್ಯ. ಸಪ್ತಾಹ ಪ್ರವಚನವಂತೂ ಪ್ರೇತತ್ವವನ್ನು ಕಳೆದು ವಿಷ್ಣುಲೋಕಕ್ಕೆ ಕರೆದೊಯ್ಯುವ ಏಕಮಾತ್ರ ಸಾಧನವಾಗಿದೆ. ಪ್ರಿಯ ಸೋದರನಾದ ಗೋಕರ್ಣನೇ, ನೀನು ನನ್ನ ಮೇಲೆ ಕೃಪೆಮಾಡಿ ಭಾಗವತ ಸಪ್ತಾಹ ಪ್ರವಚನವನ್ನು ಗೈದು ನನ್ನನ್ನು ಈ ಪ್ರೇತ ಜನ್ಮದಿಂದ ಉದ್ಧರಿಸಿದೆ. ಅದಕ್ಕಾಗಿ ನಾನು ನಿನ್ನನ್ನು ಪುನಃ ಪುನಃ ಅಭಿನಂದಿಸುತ್ತೇನೆ. ಚಿಕ್ಕವನಾದರೂ ಭಾಗವತ ಪ್ರವಚನಕಾರನಾದ ನಿನ್ನಂಥ ಜ್ಞಾನಿಗೆ ವಂದಿಸುತ್ತೇನೆ'' ದಿವ್ಯ ರೂಪವನ್ನು ಧರಿಸಿದ ಧುಂಧುಕಾರಿಯು ಇಷ್ಟು ಮಾತನಾಡುವಷ್ಟರಲ್ಲಿಯೇ ವಿಷ್ಣುಲೋಕದಿಂದ ಅವನನ್ನು ಕರೆಯಲು ವೈಕುಂಠ ವಿಮಾನಬಂದಿತು. ಅದರಲ್ಲಿ ಕುಳಿತು ಧುಂಧುಕಾರಿಯು ವಿಷ್ಣುಲೋಕಕ್ಕೆ ಪಯಣವನ್ನು ಬೆಳೆಸಿದ.

ಅದನ್ನು ನೋಡಿ ಅಲ್ಲಿ ಭಾಗವತ ಶ್ರವಣ ಮಾಡುತ್ತ ಏಳು ದಿನಗಳ ವರೆಗೆ ಸಂಕಲ್ಪಮಾಡಿ ಕುಳಿತ ದ್ವಿಜರೆಲ್ಲರೂ ವಿಸ್ಮಯಸ್ಥಿಮಿತರಾಗಿ ಗೋಕರ್ಣನನ್ನು ಕೇಳಿದರು. - ''ಭಾಗವತವನ್ನು ನಾವೆಲ್ಲರೂ ಶ್ರವಣಮಾಡಿದ್ದೇವೆ. ಈಗ ವೈಕುಂಠ ವಿಮಾನವನ್ನು ಏರಿದವ ನಿಮ್ಮ ಅಣ್ಣನು ಒಬ್ಬನು ಮಾತ್ರ. ನಮ್ಮೆಲ್ಲರನ್ನು ಬಿಟ್ಟು ಅವನೊಬ್ಬನೇ ವೈಕುಂಠ ಲೋಕಕ್ಕೆ ತೆರಳಿದ್ದು ಏಕೆ?

**ಗೋಕರ್ಣ:-** ಪೂಜ್ಯರೇ, ಈ ಭಾಗವತ ಸಪ್ತಾಹ ಪ್ರವಚನವನ್ನು ಕೇಳುವವರು ಉಪವಾಸ ಇದ್ದು ಕೇಳಬೇಕು. ಶ್ರೀಕೃಷ್ಣನಲ್ಲಿ ದೃಢವಾದ ಭಕ್ತಿಯನ್ನು ಮಾಡುತ್ತಿರಬೇಕು. ಅಂದರೆ ಮಾತ್ರ ಈ ಭಾಗವತ ಸಪ್ತಾಹ ಪ್ರವಚನದ ಶ್ರವಣದಿಂದ ಮುಕ್ತಿದ್ವಾರವು ತೆರೆಯುವದು. ನೀವು ಕೂಡ ಮತ್ತೊಮ್ಮೆ ಏಕಾಗ್ರ ಚಿತ್ತದಿಂದ ಉಪವಾಸಗೈದು ಶ್ರದ್ಧೆಯಿಂದ ಶ್ರೀಕೃಷ್ಣನ ಪ್ರೇಮಾಮೃತವನ್ನು ದೊರಕಿಸಿಕೊಡುವ ಶ್ರೀಮದ್ಭಾಗವತದ ಕಥಾಮೃತ ರಸವನ್ನು ಪಾನಮಾಡಿರಿ. ಅದರಿಂದ ನೀವೂ ಉದ್ಧಾರ ಹೊಂದುವಿರಿ.

ಗೋಕರ್ಣನ ಈ ಮಾತನ್ನು ಕೇಳಿ ಅಲ್ಲಿದ್ದ ದ್ವಿಜರೆಲ್ಲರೂ ಮತ್ತೆ ಶ್ರೀಕೃಷ್ಣನಲ್ಲಿಯೇ ಮನಸ್ಸನ್ನು ಇಟ್ಟು ಉಪವಾಸಗೈದರು. ಮತ್ತೆ ಭಾಗವತವನ್ನು ಸಪ್ತಾಹಕ್ರಮದಿಂದ ಶ್ರವಣ ಮಾಡಲು ಶುರುಮಾಡಿದರು. ಆ ದ್ವಿಜರ ಈ ಪಾರಮಾರ್ಥಿಕ ಭಕ್ತಿ ವೈವಶ್ಯವನ್ನು ನೋಡಿ ಉತ್ಸಾಹಿತನಾದ ಗೋಕರ್ಣನು ಪರಮ ಸಂತೋಷದಿಂದ ಮತ್ತೊಮ್ಮೆ ಸಮಗ್ರ ಭಾಗವತವನ್ನು ಭಕ್ತ್ಯುದ್ರೇಕಗೊಂಡು ಪ್ರವಚನ ಮಾಡಿದ. ಕಥಾ ಪ್ರವಚನವು ಮುಗಿದಾಗ ಶಂಖ, ಚಕ್ರ, ಗದಾಪದ್ಮಧಾರಿಯಾದ ವನಮಾಲೆಯಿಂದ ಭೂಷಿತನಾದ, ಕಿರೀಟ ಕುಂಡಲವನ್ನು ಧರಿಸಿದ ಶ್ರೀಕೃಷ್ಣ ಪರಮಾತ್ಮನು ಆ ಪ್ರವಚನ ಮಂಟಪದಲ್ಲಿ ಪ್ರಾದುರ್ಭೂತನಾದ. ಎಲ್ಲ ಕಡೆಗೂ ''ಜಯ ಜಯ ಜನಾರ್ದನ ನಮಃ ಕೃಷ್ಣ ಮುಕುಂದ ಮುರಾರೇ ನಮೋ ನಮಃ''

ಎಂಬ ಜಯಘೋಷ ನಮಃ ಶಬ್ದಗಳು ಎಲ್ಲರಿಂದ ಉಚ್ಚರಿಸಲ್ಪಟ್ಟವು. ಆಗ ಶ್ರೀಹರಿಯು ಆನಂದದಿಂದ ಶಂಖಧ್ವನಿಯನ್ನು ಮಾಡಿದ. ಪರಮ ಭಕ್ತಿಯಿಂದ ಭಾಗವತ ಪ್ರವಚನವನ್ನು ಮಾಡಿ ಅಷ್ಟು ಜನರಿಗೆ ಕೃಷ್ಣಕಥಾಮೃತ ರಸಪಾನವನ್ನು ಮಾಡಿಸಿದ ಆ ಗೋಕರ್ಣನ ಬಳಿಗೆ ಭಗವಂತನು ಬಂದು ಬರಸೆಳೆದು ಬಿಗಿದಪ್ಪಿ ತನ್ನ ಸಾರೂಪ್ಯ ಮೋಕ್ಷವನ್ನು ಕರುಣಿಸಿದ. ಮತ್ತು ಅತ್ಯಂತ ಭಕ್ತಿಯಿಂದ ಏಳು ದಿನ ಶ್ರೀಮದ್ಭಾಗವತವನ್ನು ಶ್ರವಣ ಮಾಡಿದ ಚಂಡಾಲ, ಶೂದ್ರ, ಬ್ರಾಹ್ಮಣಾದಿ ಎಲ್ಲ ಭಗವದ್‌ಭಕ್ತರನ್ನು ತನ್ನ ಸಾರೂಪ್ಯವನ್ನಿತ್ತು ತನ್ನಂತೆ ಸುಸ್ವರೂಪಿಗಳನ್ನಾಗಿ ಮಾಡಿ ಎಲ್ಲರನ್ನೂ ಉದ್ಧರಿಸಿದ. ಗೋಕರ್ಣನ ಮುಖದಿಂದ ಭಾಗವತ ಕಥಾಮೃತ ರಸಪಾನ ಮಾಡಿ ಹರಿಜನರು, ಗಿರಿಜನರು, ಬ್ರಾಹ್ಮಣರು, ಬ್ರಾಹ್ಮಣೇತರರು ಎಲ್ಲರೂ ಶ್ರೀಕೃಷ್ಣನ ಅಪ್ಪಣೆಯಿಂದ ದಿವ್ಯ ವಿಮಾನಗಳನ್ನು ಏರಿ ದಿವ್ಯ ಲೋಕಕ್ಕೆ ಪ್ರಯಾಣ ಬೆಳೆಸಿದರು.

ಗೋಪೀಜನ ಪ್ರಿಯನಾದ ಶ್ರೀಕೃಷ್ಣನು ಗೋಕರ್ಣನೊಂದಿಗೆ ಎಲ್ಲ ಲೋಕಗಳ ಮೇಲೆ ಇರುವ ಗೋಲೋಕಕ್ಕೆ ತೆರಳಿದ. ಅಲ್ಲಿ ಒಂದು ದಿವ್ಯವಾದ ವೃಂದಾವನ. ಅದರ ಮಧ್ಯದಲ್ಲಿ ಹರಿಮಂದಿರ. ಅದರಲ್ಲಿ ರಾಧೆ ಮೊದಲಾದ ಕೃಷ್ಣ ಪ್ರೇಯಸಿಯರಿಂದ ಸೇವಿಸಲ್ಪಟ್ಟ ಯಶೋಧೆಯ ಪಕ್ಕದಲ್ಲಿಯೇ ಶ್ರೀಕೃಷ್ಣ ಪರಮಾತ್ಮನ ಮಧುರವಾದ ಶಿಶುರೂಪವು ಶೋಭಿಸುತ್ತಲಿದೆ. ಅದನ್ನು ಉಮಾಪತಿಯೇ ಮೊದಲಾದ ಭಗವಂತನ ಏಕಾಂತ ಭಕ್ತರು ಯಾವಾಗಲೂ ಹೃದಯದಲ್ಲಿ ಧ್ಯಾನಿಸುತ್ತ ಇರುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಧುಂಧುಕಾರಿಯ ವೃತ್ತಾಂತ. ಭಾಗವತ ಸಪ್ತಾಹದಿಂದ ಧುಂಧುಕಾರಿಗೆ ಪಿಶಾಚ ಯೋನಿಯಿಂದ ಬಿಡುಗಡೆ ಎಂಬ ನೂರ ಎಪ್ಪತ್ತೊಂಬತ್ತನೇಯ ಅಧ್ಯಾಯ ಮುಗಿದುದು*

''ಜನ್ಮಾದ್ಯಸ್ಯಯತಃ'' ಎಂಬ ಶ್ಲೋಕದೊಂದಿಗೆ ಶ್ರೀಮದ್‌ಭಾಗವತ ಪ್ರವಚನವು ಶುರು ಆದ ಕೂಡಲೇ ಅಲ್ಲಿಗೆ ಆ ಧುಂಧುಕಾರಿಯ ಪ್ರೇತವು ಅತ್ತಿತ್ತ ನೋಡುತ್ತ ಬಂದಿತು. ಆ ಸಪ್ತಾಹ ಪ್ರವಚನದ ಕಾರ್ಯಕ್ರಮಕ್ಕಾಗಿ ಹಾಕಿದ ವಿಶಾಲವಾದ ಹಂದರದ ಒಂದು ಏಳು ಗಣ್ಣಿನ ಬಿದಿರಿನಲ್ಲಿ ಆ ಪ್ರೇತವು ಗಾಳಿಯ ರೂಪದಿಂದ ಬಿದಿರುಗಣ್ಣಿನ ಒಳಗೆ ಹೋಗಿ ಕುಳಿತುಕೊಂಡಿತು. ಗೋಕರ್ಣನಂಥ ಸರ್ವಶಾಸ್ತ್ರ ಪ್ರವೀಣನಾದ ಪಂಡಿತೋತ್ತಮನು ಮಾಡುತ್ತ ಇರುವ ಭಾಗವತ ಪ್ರವಚನರೂಪ ಸಪ್ತಾಹಯಜ್ಞದಲ್ಲಿ ಭಾಗವತವನ್ನು ಶ್ರವಣ ಮಾಡಬೇಕು, ಎಂದು ಅನೇಕ ವಿಷ್ಣುಭಕ್ತರೂ ಭಾಗವತ ಪ್ರವಚನವನ್ನು ಕೇಳಲಿಕ್ಕೆ ಬರುತ್ತಿದ್ದರು.

ಅದರಂತೆ ಧುಂಧುರಿಯ ಮಗನಾದ ಧುಂಧುಕಾರಿಯು ಕೂಡ ಹಂದರದ ಬಿದಿರುಕಂಬದ ಗೆಣ್ಣುಗಳಲ್ಲಿ ಇರುವ ರಂಧ್ರದಲ್ಲಿ ಕುಳಿತು ಭಾಗವತವನ್ನು ಶ್ರವಣಮಾಡಿದ. ಮೊದಲನೆಯ ದಿನ ಭಾಗವತದ ಕಥಾಪ್ರವಚನವು ಮುಗಿದ ಕೂಡಲೇ ಆ ಬಿದಿರುಗಂಬದ ಏಳು ಗೆಣ್ಣುಗಳಲ್ಲಿ ಒಂದು ಗಂಟು ಸ್ಫೋಟಗೊಂಡಿತು. ಹೀಗೆ ಪ್ರತಿ ದಿನ ಭಾಗವತ ಪ್ರವಚನಾಂತ್ಯದಲ್ಲಿ ಒಂದೊಂದು ಬಿದಿರಿನ ಗಂಟು ಒಡೆಯುತ್ತ ಬಂದು ಏಳನೆಯ ದಿವಸ ಕೊನೆಯ ಗೆಣ್ಣು ಸ್ಫೋಟಗೊಂಡಿತು.

ಹೀಗೆ ಏಳು ದಿನ ಸಾಯಂಕಾಲದವರೆಗೆ ಭಾಗವತ ಕಥಾಮೃತವನ್ನು ಶ್ರವಣ ಮಾಡಿ ಕೊನೆಯ ದಿನ ಸಂಪೂರ್ಣ ಕಥಾಶ್ರವಣವು ಮುಗಿದ ಬಳಿಕ ಅದನ್ನು ಇಡಿ ಕಿಡಿಯಾಗಿ ಶ್ರವಣ ಮಾಡಿದ ಧುಂಧುಕಾರಿಯ ಪ್ರೇತತ್ವವು ನಷ್ಟವಾಯಿತು. ಮತ್ತು ಅವನಿಗೆ ಒಂದು ದಿವ್ಯವಾದ ರೂಪವು ಪ್ರಾಪ್ತವಾಯಿತು. ಕೊರಳಲ್ಲಿ ತುಳಸಿ ಮಾಲೆ, ಮೈ ಮೇಲೆ ಪೀತಾಂಬರ, ಅಂಗಾಂಗಗಳಲ್ಲಿ ಬಗೆಬಗೆಯ ಆಭರಣಗಳಿಂದ ಮಂಡಿತನಾಗಿ ಧುಂಧುಕಾರಿಯು ದೈವಿಕ ದೇಹವನ್ನು ಹೊಂದಿ ರಾರಾಜಿಸಿದ. ಮತ್ತು ಅಲ್ಲಿಯೇ ಭಾಗವತ ಪ್ರವಚನ ಮಾಡುತ್ತ ಕುಳಿತ ಗೋಕರ್ಣನ ಬಳಿಗೆ ಬಂದು ನಮಸ್ಕಾರ ಮಾಡಿ - ''ಪ್ರಿಯ ಬಂಧುವೇ, ಭಾಗವತ ಕಥೆಯು ನಿಜವಾಗಿಯೂ ಧನ್ಯಧನ್ಯ. ಸಪ್ತಾಹ ಪ್ರವಚನವಂತೂ ಪ್ರೇತತ್ವವನ್ನು ಕಳೆದು ವಿಷ್ಣುಲೋಕಕ್ಕೆ ಕರೆದೊಯ್ಯುವ ಏಕಮಾತ್ರ ಸಾಧನವಾಗಿದೆ. ಪ್ರಿಯ ಸೋದರನಾದ ಗೋಕರ್ಣನೇ, ನೀನು ನನ್ನ ಮೇಲೆ ಕೃಪೆಮಾಡಿ ಭಾಗವತ ಸಪ್ತಾಹ ಪ್ರವಚನವನ್ನು ಗೈದು ನನ್ನನ್ನು ಈ ಪ್ರೇತ ಜನ್ಮದಿಂದ ಉದ್ಧರಿಸಿದೆ. ಅದಕ್ಕಾಗಿ ನಾನು ನಿನ್ನನ್ನು ಪುನಃ ಪುನಃ ಅಭಿನಂದಿಸುತ್ತೇನೆ. ಚಿಕ್ಕವನಾದರೂ ಭಾಗವತ ಪ್ರವಚನಕಾರನಾದ ನಿನ್ನಂಥ ಜ್ಞಾನಿಗೆ ವಂದಿಸುತ್ತೇನೆ'' ದಿವ್ಯ ರೂಪವನ್ನು ಧರಿಸಿದ ಧುಂಧುಕಾರಿಯು ಇಷ್ಟು ಮಾತನಾಡುವಷ್ಟರಲ್ಲಿಯೇ ವಿಷ್ಣುಲೋಕದಿಂದ ಅವನನ್ನು ಕರೆಯಲು ವೈಕುಂಠ ವಿಮಾನಬಂದಿತು. ಅದರಲ್ಲಿ ಕುಳಿತು ಧುಂಧುಕಾರಿಯು ವಿಷ್ಣುಲೋಕಕ್ಕೆ ಪಯಣವನ್ನು ಬೆಳೆಸಿದ.

ಅದನ್ನು ನೋಡಿ ಅಲ್ಲಿ ಭಾಗವತ ಶ್ರವಣ ಮಾಡುತ್ತ ಏಳು ದಿನಗಳ ವರೆಗೆ ಸಂಕಲ್ಪಮಾಡಿ ಕುಳಿತ ದ್ವಿಜರೆಲ್ಲರೂ ವಿಸ್ಮಯಸ್ಥಿಮಿತರಾಗಿ ಗೋಕರ್ಣನನ್ನು ಕೇಳಿದರು. - ''ಭಾಗವತವನ್ನು ನಾವೆಲ್ಲರೂ ಶ್ರವಣಮಾಡಿದ್ದೇವೆ. ಈಗ ವೈಕುಂಠ ವಿಮಾನವನ್ನು ಏರಿದವ ನಿಮ್ಮ ಅಣ್ಣನು ಒಬ್ಬನು ಮಾತ್ರ. ನಮ್ಮೆಲ್ಲರನ್ನು ಬಿಟ್ಟು ಅವನೊಬ್ಬನೇ ವೈಕುಂಠ ಲೋಕಕ್ಕೆ ತೆರಳಿದ್ದು ಏಕೆ?

**ಗೋಕರ್ಣ:-** ಪೂಜ್ಯರೇ, ಈ ಭಾಗವತ ಸಪ್ತಾಹ ಪ್ರವಚನವನ್ನು ಕೇಳುವವರು ಉಪವಾಸ ಇದ್ದು ಕೇಳಬೇಕು. ಶ್ರೀಕೃಷ್ಣನಲ್ಲಿ ದೃಢವಾದ ಭಕ್ತಿಯನ್ನು ಮಾಡುತ್ತಿರಬೇಕು. ಅಂದರೆ ಮಾತ್ರ ಈ ಭಾಗವತ ಸಪ್ತಾಹ ಪ್ರವಚನದ ಶ್ರವಣದಿಂದ ಮುಕ್ತಿದ್ವಾರವು ತೆರೆಯುವದು. ನೀವು ಕೂಡ ಮತ್ತೊಮ್ಮೆ ಏಕಾಗ್ರ ಚಿತ್ತದಿಂದ ಉಪವಾಸಗೈದು ಶ್ರದ್ಧೆಯಿಂದ ಶ್ರೀಕೃಷ್ಣನ ಪ್ರೇಮಾಮೃತವನ್ನು ದೊರಕಿಸಿಕೊಡುವ ಶ್ರೀಮದ್ಭಾಗವತದ ಕಥಾಮೃತ ರಸವನ್ನು ಪಾನಮಾಡಿರಿ. ಅದರಿಂದ ನೀವೂ ಉದ್ಧಾರ ಹೊಂದುವಿರಿ.

ಗೋಕರ್ಣನ ಈ ಮಾತನ್ನು ಕೇಳಿ ಅಲ್ಲಿದ್ದ ದ್ವಿಜರೆಲ್ಲರೂ ಮತ್ತೆ ಶ್ರೀಕೃಷ್ಣನಲ್ಲಿಯೇ ಮನಸ್ಸನ್ನು ಇಟ್ಟು ಉಪವಾಸಗೈದರು. ಮತ್ತೆ ಭಾಗವತವನ್ನು ಸಪ್ತಾಹಕ್ರಮದಿಂದ ಶ್ರವಣ ಮಾಡಲು ಶುರುಮಾಡಿದರು. ಆ ದ್ವಿಜರ ಈ ಪಾರಮಾರ್ಥಿಕ ಭಕ್ತಿ ವೈವಶ್ಯವನ್ನು ನೋಡಿ ಉತ್ಸಾಹಿತನಾದ ಗೋಕರ್ಣನು ಪರಮ ಸಂತೋಷದಿಂದ ಮತ್ತೊಮ್ಮೆ ಸಮಗ್ರ ಭಾಗವತವನ್ನು ಭಕ್ತ್ಯುದ್ರೇಕಗೊಂಡು ಪ್ರವಚನ ಮಾಡಿದ. ಕಥಾ ಪ್ರವಚನವು ಮುಗಿದಾಗ ಶಂಖ, ಚಕ್ರ, ಗದಾಪದ್ಮಧಾರಿಯಾದ ವನಮಾಲೆಯಿಂದ ಭೂಷಿತನಾದ, ಕಿರೀಟ ಕುಂಡಲವನ್ನು ಧರಿಸಿದ ಶ್ರೀಕೃಷ್ಣ ಪರಮಾತ್ಮನು ಆ ಪ್ರವಚನ ಮಂಟಪದಲ್ಲಿ ಪ್ರಾದುರ್ಭೂತನಾದ. ಎಲ್ಲ ಕಡೆಗೂ ''ಜಯ ಜಯ ಜನಾರ್ದನ ನಮಃ ಕೃಷ್ಣ ಮುಕುಂದ ಮುರಾರೇ ನಮೋ ನಮಃ''

ಎಂಬ ಜಯಘೋಷ ನಮಃ ಶಬ್ದಗಳು ಎಲ್ಲರಿಂದ ಉಚ್ಚರಿಸಲ್ಪಟ್ಟವು. ಆಗ ಶ್ರೀಹರಿಯು ಆನಂದದಿಂದ ಶಂಖಧ್ವನಿಯನ್ನು ಮಾಡಿದ. ಪರಮ ಭಕ್ತಿಯಿಂದ ಭಾಗವತ ಪ್ರವಚನವನ್ನು ಮಾಡಿ ಅಷ್ಟು ಜನರಿಗೆ ಕೃಷ್ಣಕಥಾಮೃತ ರಸಪಾನವನ್ನು ಮಾಡಿಸಿದ ಆ ಗೋಕರ್ಣನ ಬಳಿಗೆ ಭಗವಂತನು ಬಂದು ಬರಸೆಳೆದು ಬಿಗಿದಪ್ಪಿ ತನ್ನ ಸಾರೂಪ್ಯ ಮೋಕ್ಷವನ್ನು ಕರುಣಿಸಿದ. ಮತ್ತು ಅತ್ಯಂತ ಭಕ್ತಿಯಿಂದ ಏಳು ದಿನ ಶ್ರೀಮದ್ಭಾಗವತವನ್ನು ಶ್ರವಣ ಮಾಡಿದ ಚಂಡಾಲ, ಶೂದ್ರ, ಬ್ರಾಹ್ಮಣಾದಿ ಎಲ್ಲ ಭಗವದ್‌ಭಕ್ತರನ್ನು ತನ್ನ ಸಾರೂಪ್ಯವನ್ನಿತ್ತು ತನ್ನಂತೆ ಸುಸ್ವರೂಪಿಗಳನ್ನಾಗಿ ಮಾಡಿ ಎಲ್ಲರನ್ನೂ ಉದ್ಧರಿಸಿದ. ಗೋಕರ್ಣನ ಮುಖದಿಂದ ಭಾಗವತ ಕಥಾಮೃತ ರಸಪಾನ ಮಾಡಿ ಹರಿಜನರು, ಗಿರಿಜನರು, ಬ್ರಾಹ್ಮಣರು, ಬ್ರಾಹ್ಮಣೇತರರು ಎಲ್ಲರೂ ಶ್ರೀಕೃಷ್ಣನ ಅಪ್ಪಣೆಯಂದ ದಿವ್ಯ ವಿಮಾನಗಳನ್ನು ಏರಿ ದಿವ್ಯ ಲೋಕಕ್ಕೆ ಪ್ರಯಾಣ ಬೆಳೆಸಿದರು.

ಗೋಪೀಜನ ಪ್ರಿಯನಾದ ಶ್ರೀಕೃಷ್ಣನು ಗೋಕರ್ಣನೊಂದಿಗೆ ಎಲ್ಲ ಲೋಕಗಳ ಮೇಲೆ ಇರುವ ಗೋಲೋಕಕ್ಕೆ ತೆರಳಿದ. ಅಲ್ಲಿ ಒಂದು ದಿವ್ಯವಾದ ವೃಂದಾವನ. ಅದರ ಮಧ್ಯದಲ್ಲಿ ಹರಿಮಂದಿರ. ಅದರಲ್ಲಿ ರಾಧೆ ಮೊದಲಾದ ಕೃಷ್ಣ ಪ್ರೇಯಸಿಯರಿಂದ ಸೇವಿಸಲ್ಪಟ್ಟ ಯಶೋಧೆಯ ಪಕ್ಕದಲ್ಲಿಯೇ ಶ್ರೀಕೃಷ್ಣ ಪರಮಾತ್ಮನ ಮಧುರವಾದ ಶಿಶುರೂಪವು ಶೋಭಿಸುತ್ತಲಿದೆ. ಅದನ್ನು ಉಮಾಪತಿಯೇ ಮೊದಲಾದ ಭಗವಂತನ ಏಕಾಂತ ಭಕ್ತರು ಯಾವಾಗಲೂ ಹೃದಯದಲ್ಲಿ ಧ್ಯಾನಿಸುತ್ತ ಇರುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಧುಂಧುಕಾರಿಯ ವೃತ್ತಾಂತ. ಭಾಗವತ ಸಪ್ತಾಹದಿಂದ ಧುಂಧುಕಾರಿಗೆ ಪಿಶಾಚ ಯೋನಿಯಿಂದ ಬಿಡುಗಡೆ ಎಂಬ ನೂರ ಎಪ್ಪತ್ತೊಂಬತ್ತನೇಯ ಅಧ್ಯಾಯ ಮುಗಿದುದು*

## ಸನತ್ಕುಮಾರರು ಹೇಳಿದ ಭಾಗವತ ಸಪ್ತಾಹ ಶ್ರವಣ ವಿಧಿ



**ಕುಮಾರ:-** ಈಗ ಭಾಗವತ ಸಪ್ತಾಹ ಶ್ರವಣದ ವಿಧಿಯನ್ನು ನಿಮಗೆ ಹೇಳುತ್ತೇನೆ ಕೇಳಿರಿ. ಭಾಗವತ ಸಪ್ತಾಹವನ್ನು ಪ್ರಾರಂಭಿಸುವ ಮೊದಲು ಜ್ಯೋತಿರ್ವಿಜ್ಞರನ್ನು ಕರೆದು ಒಳ್ಳೆ ಮುಹೂರ್ತವನ್ನು ಕೇಳಬೇಕು. ಶ್ರಾವಣ, ಭಾದ್ರಪದ, ಆಶ್ವೀಜ, ಕಾರ್ತಿಕ, ಮಾರ್ಗಶೀರ್ಷ, ಚೈತ್ರ, ವೈಶಾಖ ಮಾಸಗಳು ಪ್ರಶಸ್ತವಾಗಿವೆ. ಮಂಗಳವಾರ ಶನಿವಾರ ಬಿಟ್ಟು ಬೇರೆ ಶುಭವಾರ, ಶುಭನಕ್ಷತ್ರ ಪೂರ್ಣ ತಿಥಿಯಂದು ಕಥೆಯನ್ನು ಪ್ರಾರಂಭಿಸಬೇಕು. ದ್ವಾದಶಿಯ ದಿನ ಮಾತ್ರ ಭಾಗವತ ಪುರಾಣ ಹೇಳಬಾರದು. ಈ ಭಾಗವತ ಪ್ರವಚನ ಸಪ್ತಾಹವು ಒಂದು ಮಹಾಯಜ್ಞ ಇದ್ದಂತೆ. ಅದಕ್ಕಾಗಿ ಎಲ್ಲ ಕಡೆಯಿಂದಲೂ ವಿಷ್ಣುಭಕ್ತರಿಗೆ ಭಗಾವತ ಶ್ರವಣ ಮಾಡಲು ಬರಬೇಕು ಎಂದು ಆಮಂತ್ರಿಸಬೇಕು. ಬಂದವರಿಗೆಲ್ಲ ಉಳಿದುಕೊಳ್ಳಲು ವ್ಯವಸ್ಥೆಯನ್ನು ಮಾಡಬೇಕು. ಯಾವದಾದರೂ ತೀರ್ಥ, ಉಪವನ, ಗ್ರಾಮಗಳಲ್ಲಿ ಭೂಮಿಯನ್ನು ಸಾರಣೆ ಕಾರಣೆಗಳಿಂದ ಅಲಂಕರಿಸಿ, ನಾಲ್ಕು ದಿಕ್ಕುಗಳಲ್ಲಿ ಬಾಳೆಯ ಕಂಬಗಳನ್ನು ನೆಟ್ಟು, ಧ್ವಜ ಪತಾಕೆಗಳನ್ನು ನಿಲ್ಲಿಸಿ ಸುಂದರವಾದ ಮಂಟಪಗಳನ್ನು ನಿರ್ಮಿಸಬೇಕು. ಭಾಗವತ ಪ್ರವಚನಕಾರನಿಗೆ ಎತ್ತರವಾದ ಆಸನವನ್ನು ಮಾಡಿ ಅವನ ಎದುರು ಹಾಗೂ ಅಕ್ಕಪಕ್ಕದಲ್ಲಿ ಶ್ರೋತ್ರಗಳಿಗೆ ಆಸನಗಳನ್ನು ಒದಗಿಸಬೇಕು. ಪೌರಾಣಿಕನು ಉತ್ತರಕ್ಕೆ ಮುಖಮಾಡಿ ಕುಳಿತುಕೊಳ್ಳಬೇಕು.

ಈ ಭಾಗವತ ಪುರಾಣವನ್ನು ಸಪ್ತಾಹದಲ್ಲಿ ಹೇಳುವವನು ವೇದಶಾಸ್ತ್ರಗಳ ತತ್ವಾರ್ಥಗಳನ್ನು ತಿಳಿದುಕೊಂಡು ಧೈರ್ಯದಿಂದ ಪುರಾಣಗಳಲ್ಲಿಯ ತಾತ್ವಿಕ ವಿಷಯಗಳನ್ನು ದೃಷ್ಟಾಂತ ಉದಾಹರಣಗಳ ಮುಖಾಂತರ ತಿಳಿಸಿ ಹೇಳುವ ನಿರೂಪಣ ನೈಪುಣ್ಯವನ್ನು ಹೊಂದಿರಬೇಕು. ಕೇಳುಗರ ಸರ್ವ ಸಂಶಯಗಳನ್ನು ವಕ್ತಾರನು ನಿವಾರಿಸಬೇಕು. ಪ್ರವಚನಕಾರನ ಪಕ್ಕದಲ್ಲಿಯೇ ಶ್ರೋತ್ರಗಳ ಸಂಶಯಗಳನ್ನು ಪರಿಹರಿಸಬಲ್ಲ ಬೇರೊಬ್ಬ ಪಂಡಿತನನ್ನೂ ಕೂಡಿಸಿರಬೇಕು. ವಿಘ್ನ ವಿಡ್ಡೂರಗಳನ್ನು ದೂರ ಮಾಡಲಿಕ್ಕಾಗಿ ಸಪ್ತಾಹ ಪ್ರಾರಂಭದಲ್ಲಿ ಗಣಪತಿಯ ಪೂಜೆಯನ್ನು ಮಾಡಬೇಕು. ಅನಂತರ ದುರ್ಗಾದೇವಿಯನ್ನೂ, ಮಹಾದೇವರನ್ನೂ, ಶ್ರೀಹರಿಯನ್ನೂ ಬ್ರಹ್ಮದೇವನನ್ನೂ, ಸೂರ್ಯನನ್ನೂ ಬ್ರಾಹ್ಮಣರನ್ನೂ ವಿಧಿಪೂರ್ವಕವಾಗಿ ಪೂಜಿಸ ಪಿತೃತರ್ಪಣ ಮಾಡಿ ಅನಂತರ ಪುಸ್ತಕ ಪೂಜೆಯನ್ನು ಮಾಡಬೇಕು. ಮುಖ್ಯಶ್ರೋತಾರನು ಕೈಯಲ್ಲಿ ದ್ರವ್ಯ, ವಸ್ತ್ರ, ಫಲಗಳನ್ನು ಹಿಡಿದುಕೊಂಡು ಪುಸ್ತಕಕ್ಕೆ ಪ್ರದಕ್ಷಿಣೆ ಹಾಕಿ ಪುಸ್ತಕದಲ್ಲಿರುವ ಶ್ರೀಹರಿಯನ್ನು,

**ತ್ವಂ ಭಾಗವತೆ ಲೋಕೇಸ್ಮಿನ್ ಸ್ವಯಂ ಕೃಷ್ಣೋ ವ್ಯವಸ್ಥಿತೇ ।**
**ಸಮಾಶ್ರಿತೋ ಮಯಾನಾಥ ಮುಕ್ತ್ಯರ್ಥಂ ಭವಸಾಗರೇ ॥**
**ಮನೋರಥೋ ಮದೀಯೋಽಯಂ ಸರ್ವಥಾ ಸಫಲಸ್ತ್ವಯಾ ।**
**ನಿರ್ವಿಘ್ನೇನ ಪ್ರಕರ್ತವ್ಯಂ ದಾಸೋಽಹಂ ತವ ಕೇಶವ ॥**

''ಶ್ರೀಕೃಷ್ಣನೇ, ನೀನು ಈ ಭಾಗವತದಲ್ಲಿ ಸ್ವಯಂ ಸಾಕ್ಷಾತ್ ಆಗಿ ವ್ಯವಸ್ಥಿತನಾಗಿ ಇರುವೆ. ಈ ಸಂಸಾರ ಸಮುದ್ರದಿಂದ ಪಾರಾಗಲು ನಾನು ನಿನ್ನನ್ನು ಆಶ್ರಯಿಸಿದ್ದೇನೆ.

ಸ್ವಾಮಿ, ನನ್ನ ಈ ಮನೋರಥವು ನಿನ್ನಿಂದ ಸಫಲವಾಗಲಿ. ನಾವು ಕೈಕೊಂಡ ಈ ಭಾಗವತ ಸಪ್ತಾಹ ಕಾರ್ಯಕ್ರಮವು ನಿರ್ವಿಘ್ನದಿಂದ ನೆರವೇರಲಿ. ನಾನು ನಿನ್ನ ದಾಸ."

ಹೀಗೆ ಮಂತ್ರ ಹೇಳಿ ಆ ದ್ರವ್ಯ, ವಸ್ತ್ರ, ಫಲಗಳನ್ನು ಆ ಗ್ರಂಥಸ್ಥನಾದ ಶ್ರೀಹರಿಯ ಎದುರು ಇಡಬೇಕು. ನಂತರ ಆ ಭಾಗವತ ಪ್ರವಚನಕಾರನಿಗೆ ನಮಸ್ಕಾರ ಮಾಡಿ ಕೈ ಮುಗಿದು

**ಶು ಕರೂಪ ದ್ವಿಜಶ್ರೇಷ್ಠ ಸರ್ವ ಶಾಸ್ತ್ರ ವಿಶಾರದ ।**
**ಶ್ರೀ ಭಾಗವತ ವ್ಯಾಖ್ಯಾನಾದಜ್ಞಾನಂ ಮೇ ವಿನಾಶಯ ॥**

ಸರ್ವಶಾಸ್ತ್ರಗಳಲ್ಲಿ ವಿಶಾರದನಾದ ವಿಪ್ರೋತ್ತಮ, ನೀನು ಸಾಕ್ಷಾತ್ ಶುಕಾಚಾರ್ಯನೇ ಇದ್ದಂತೆ. ಶ್ರೀಭಾಗವತ ಪ್ರವಚನವನ್ನು ಮಾಡಿ ನನ್ನ ಆಜ್ಞಾನವನ್ನು ನಾಶಮಾಡು. ಹೀಗೆ ಪ್ರಾರ್ಥಿಸಬೇಕು. ಅನಂತರ ಪ್ರವಚನವು ಮುಗಿಯುವವರೆಗೆ **"ಓಂ ನಮೋ ಭಗವತೇ ವಾಸುದೇವಾಯ"** ಎಂಬ ದ್ವಾದಶಾಕ್ಷರ ಮಂತ್ರವನ್ನು ಪ್ರತಿನಿತ್ಯವೂ ಜಪಮಾಡಲು ಐದು ಪಂಡಿತರನ್ನು ನಿಯಮಿಸಬೇಕು. ಈ ಭಾಗವತ ಸಪ್ತಾಹ ಪ್ರವಚನವನ್ನು ಶ್ರಾವಕರು ಏಕಚಿತ್ತರಾಗಿ ಕೇಳಬೇಕು. ಮನೆ, ಹೊಲ, ಹೆಂಡತಿ, ಮಕ್ಕಳ ಚಿಂತೆಯನ್ನು ತ್ಯಜಿಸಬೇಕು. ಸೂರ್ಯೋದಯದಲ್ಲಿ ಆರಂಭಿಸಿ ಮೂರು ಪ್ರಹರಗಳ ಕಾಲ, ಅನಂತರ ಮಧ್ಯಾಹ್ನದಲ್ಲಿ ಐದು ಘಂಟೆ ಪ್ರವಚನವನ್ನು ನಡೆಸಬೇಕು. ಭಾಗವತ ಕಥಾನಿರೂಪಣೆಯ ಕೊನೆಯಲ್ಲಿ ಕೇಶವನ ಗುಣಗಾನ ಸಂಕೀರ್ತನಾದಿಗಳನ್ನು ಮಾಡಬೇಕು. ಭಾಗವತ ಸಪ್ತಾಹದ ಪ್ರವಚನವನ್ನು ಕೇಳುವವರು, ಹೇಳುವವರು ಪೂರ್ಣ ಉಪವಾಸ ಮಾಡಬೇಕು. ಅಷ್ಟು ಶಕ್ತಿ ಇಲ್ಲದಿದ್ದರ ಹವಿಷ್ಯವಾದ ಅನ್ನವನ್ನು ಅಲ್ಪಸ್ವಲ್ಪ ಸ್ವೀಕರಿಸಬೇಕು. ನೀರು, ಹಣ್ಣು, ಹಾಲು, ತುಪ್ಪ ಮುಂತಾದವುಗಳಿಂದ ಅಲ್ಪೋಪಹಾರ ಮಾಡಿ ದೇಹಧಾರಣೆಗೆ ಬೇಕಾಗುವಷ್ಟು ಮಾತ್ರ ಆಹಾರವನ್ನು ಸ್ವೀಕರಿಸಿ ಸಪ್ತಾಹದ ಶ್ರವಣವನ್ನು ಮಾಡಬೇಕು. ವಿಷ್ಣುದೀಕ್ಷೆ ಇಲ್ಲದವರಿಗೆ ಶ್ರವಣಾಧಿಕಾರವು ಇರುವದೇ ಇಲ್ಲ. ಶ್ರೀಭಾಗವತ ಪ್ರವಚನದ ಸಪ್ತಾಹವು ನಡೆದಾಗ ಬ್ರಹ್ಮಚರ್ಯ, ನೆಲದ ಮೇಲೆ ಶಯನ, ಪತ್ರಾವಳಿಯಲ್ಲಿ ಊಟಗಳನ್ನು ನಿತ್ಯವೂ ಮಾಡಬೇಕು. ದ್ವಿದಳ ಧಾನ್ಯವಾದ ಬೇಳೆಕಾಳು, ಜೇನು ತುಪ್ಪ, ಎಣ್ಣೆ, ಪರಾನ್ನ, ಕಾಕವಿ, ಹಳಸಿದ್ದು, ಬೆಳ್ಳೊಳ್ಳಿ, ಉಳ್ಳಾಗಡ್ಡಿ, ಮೂಲಂಗಿ, ಗಜ್ಜರಿ, ಸಂಹಿಗುಂಬಳ, ಇಂಗು ಮುಂತಾದವುಗಳನ್ನು ತಿನ್ನಬಾರದು ಕಾಮ, ಕ್ರೋಧ, ಮದ, ಲೋಭ, ದಂಭ, ಅಸೂಯೆ, ಮೋಹ, ದ್ವೇಷ, ಹಿಂಸೆ ಇವುಗಳನ್ನು ತ್ಯಜಿಸಬೇಕು. ವೇದ, ವೈಷ್ಣವ, ವಿಪ್ರ, ಗುರು, ಗೋವು, ಸನ್ಯಾಸಿ, ಬ್ರಹ್ಮಚಾರಿ, ಸ್ತ್ರೀ, ರಾಜ, ಮತ್ತು ಮಹಾತ್ಮರ ನಿಂದೆಯನ್ನು ಬಿಡಬೇಕು. ಸಂತಾನ, ಸಂಪತ್ತು, ವಿಜಯ, ಮೋಕ್ಷಗಳನ್ನು ಬಯಸುವವರೂ ಯಾವ ಕಾಮನಾ, ವಾಸನೆ ಇಲ್ಲದೇ ಭಾಗವತವನ್ನು ಶ್ರವಣ ಮಾಡಿದರೆ ಶ್ರೀಹರಿಯನ್ನು ಹೊಂದುವರು.

ಪುರಾಣಿಕನನ್ನು, ಪುರಾಣ ಹೇಳಿದವನನ್ನು ಬಂಗಾರ, ಭೂಮಿ, ಬಟ್ಟೆ, ತುಳಸೀಮಾಲೆ, ಹಸು ಮುಂತಾದವುಗಳನ್ನು ಕೊಟ್ಟು ಪೂಜೆ ಮಾಡಬೇಕು. ಭಾಗವತ ಸಪ್ತಾಹ ಮಂಗಳ ಸಮಾರಂಭವನ್ನು ಸಂಗೀತ, ವಾದ್ಯಗಳಿಂದೊಡಗೂಡಿ ಒಳ್ಳೇ ಮಹೋತ್ಸವವನ್ನಾಗಿ ಆಚರಿಸಬೇಕು. ಭಾಗವತದ ಪ್ರತಿ ಶ್ಲೋಕವನ್ನೂ ಉಚ್ಚರಿಸಿ ಪಾಯಸ, ಜೇನು, ತುಪ್ಪ, ಎಳ್ಳು, ಅಕ್ಕಿ, ಗೋಧಿ, ಸಕ್ಕರೆ, ದ್ರಾಕ್ಷಿ, ಖರ್ಜೂರ ಮುಂತಾದವುಗಳಿಂದ ಹೋಮಮಾಡಬೇಕು. ಈ ಸಪ್ತಾಹದ ಪ್ರವಚನ ಕಾರ್ಯದಲ್ಲಿ ಸಂಭವಿಸಬಹುದಾದ

ಲೋಪದೋಷಗಳ ಪರಿಹಾರಕ್ಕಾಗಿ ಮತ್ತು ವಿಘ್ನವಿನಾಶಕ್ಕಾಗಿ ಹಾಗೂ ಆತ್ಮಶುದ್ಧಿಗಾಗಿ ವಿಷ್ಣು ಸಹಸ್ರನಾಮ ಸ್ತೋತ್ರವನ್ನು ಪಠಿಸಬೇಕು. ಹನ್ನೆರಡು, ಹದಿನೆಂಟು ಅಥವಾ ಅಧಿಕ ಸಂಖ್ಯೆಯಲ್ಲಿ ಬ್ರಾಹ್ಮಣರಿಗೆ ಮಂಗಳದ ದಿನ ಪಾಯಸಾದಿ ಪಕ್ವಾನ್ನ ಮಾಡಿ ಭೋಜನ ಮಾಡಿಸಬೇಕು. ಬಂಗಾರ, ಹಸು, ದಕ್ಷಿಣೆ ಮುಂತಾದವುಗಳನ್ನು ವ್ರತ ಸಿದ್ಧಿಗಾಗಿ ದಾನ ಕೊಡಬೇಕು. ಬಂಗಾರದ ಸಿಂಹವನ್ನು ಮಾಡಿಸಿ ಅದರ ಬೆನ್ನ ಮೇಲೆ ಭಾಗವತ ಪುಸ್ತಕವನ್ನು ಇಟ್ಟು ಪ್ರವಚನಕಾರನಿಗೆ ನೀಡಬೇಕು. ಈ ಭಾಗವತ ಪುರಾಣವು ಧರ್ಮ, ಅರ್ಥ, ಕಾಮ, ಮೋಕ್ಷ ನಾಲ್ಕು ವಿಧವಾದ ಪುರುಷಾರ್ಥಗಳನ್ನು ಶ್ರೋತೃಗಳಿಗೆ ನೀಡುವದು. ಭಕ್ತಿಗೆ ಇದು ಮುಖ್ಯ ಸಾಧನ. ಎಲ್ಲ ಪುರಾಣಗಳಲ್ಲಿಯೂ ಭಾಗವತವು ಸರ್ವಶ್ರೇಷ್ಠ.

**ನಾರದ:-** ಪೂಜ್ಯರಾದ ಸನತ್ಕುಮಾರರೇ, ನೀವು ನಮಗೆ ಭಾಗವತ ಸಪ್ತಾಹದ ವಿಧಿಯನ್ನು ತಿಳಿಸಿ ಹೇಳಿದ್ದನ್ನು ಕೇಳಿ ನಾವು ಧನ್ಯಾರೆದವು. ಶ್ರೀಮದ್ಭಾಗವತದ ಶ್ರವಣವು ಸರ್ವಧರ್ಮಗಳಿಗಿಂತ ಶ್ರೇಷ್ಠವಾದ ಧರ್ಮ ಎಂದು ನಾನು ತಿಳಿದಿದ್ದೇನೆ. ಏಕೆಂದರೆ ಶ್ರೀಮದ್ಭಾಗವತದ ಶ್ರವಣದಿಂದ ಶ್ರೀಹರಿಯ ಸಾಕ್ಷಾತ್ ದರ್ಶನವು ಆಗುವದು.

**ಸೂತ:-** ಹೀಗೆ ನಾರದರು ಮಾತನಾಡುತ್ತ ಇರುವಾಗ ಹದಿನಾರು ವರ್ಷದ ಅವಧೂತ ಶಿಖಾಮಣಿ ವ್ಯಾಸ ಪುತ್ರರಾದ ಶುಕಾಚಾರ್ಯರು ಅಲ್ಲಿಗೆ ಆಗಮಿಸಿದರು. ಭಾಗವತ ಕಥಾಪ್ರವಚನದ ಕೊನೆಯಲ್ಲಿ ಭಾಗವತವನ್ನೇ ಪಠಿಸುತ್ತ ಬಂದ ಆ ಶುಕಮುನಿಗಳನ್ನು ನೋಡಿ ಎಲ್ಲರೂ ಎದ್ದು ನಿಂತು ಆಸನವನ್ನು ಕೊಟ್ಟರು. ಅಷ್ಟರಲ್ಲಿ ಅಲ್ಲಿಗೆ ಸಾಕ್ಷಾತ್ ಶ್ರೀಹರಿಯೂ, ಪಾರ್ವತಿ ಪರಮೇಶ್ವರರೂ, ಬ್ರಹ್ಮದೇವರೂ, ಉಳಿದೆಲ್ಲ ಇಂದ್ರಾದಿ ದೇವತೆಗಳೂ ಆಗಮಿಸಿದರು. ಸ್ವಯಂ ಶುಕಾಚಾರ್ಯರು ಭಾಗವತವನ್ನು ಪ್ರವಚನ ಮಾಡತೊಡಗಿದರು.

**ಪ್ರಲ್ಹಾದಸ್ತಾಲಧಾರೀ ತರಲಗತಿತಯಾ ಹ್ಯುದ್ಧವಃ ಕಾಂಸ್ಯಧಾರೀ ।**
**ವೀಣಾಧಾರೀ ಸುರರ್ಷಿಃ ಸ್ವರಕುಶಲತಯಾ ರಾಗಕರ್ತಾರ್ಜುನೋಭೂತ್ ॥**
**ಇಂದ್ರೋ ಮಾರ್ದಂಗಿಕೋಽಭೂಜ್ಜಯ ಜಯ ಸುವಚಃ ಪ್ರಾವಚಂಸ್ತೇ ಕುಮಾರಾಃ**
**ಸದ್ಭಾವಸ್ಯ ಪ್ರವಕ್ತಾ ನಿರತಿಶಯಗುಣೋ ವ್ಯಾಸಪುತ್ರೋ ಬಭೂವ ॥**

ವ್ಯಾಸಪುತ್ರರಾದ ಶುಕಾಚಾರ್ಯರು ಶ್ರೀಮದ್ಭಾಗವತದ ಭಾವಾರ್ಥವನ್ನು ಹೇಳತೊಡಗಿದರು. ಆಗ ಪ್ರಹ್ಲಾದನು ತಾಳ ಹಿಡಿದ. ಉದ್ಧವನು ಗಂಟೆ ಬಾರಿಸಿದ. ನಾರದರು ತಂಬೂರಿಯನ್ನು ನುಡಿಸಿದರು. ಅರ್ಜುನನು ರಾಗಸಂಯೋಜನೆಯನ್ನು ಮಾಡಿದ. ಇಂದ್ರನು ತಬಲವನ್ನು ನುಡಿಸಿದ. ಸನಕ, ಸನಂದನ, ಸನಾತನ ಸನತ್ಕುಮಾರರು ಜಯ ಜಯ ಶಬ್ದವನ್ನು ಉಚ್ಚರಿಸಿದರು. ಆ ಸಭಾಮಧ್ಯದಲ್ಲಿ ಜ್ಞಾನಭಕ್ತಿ, ವೈರಾಗ್ಯ ಮೂರೂ ಹರೆಯ ಸಿರಿತುಂಬಿ ಕುಣಿದಾಡಿದವು. ಹೀಗೆ ಶ್ರೀಮದ್ಭಾಗವತದ ಅಲೌಕಿಕ ಕಥನ, ಕೀರ್ತನ, ಪ್ರವಚನಾದಿಗಳನ್ನು ಕೇಳಿ ಶ್ರೀಹರಿಯು ಪ್ರಸನ್ನನಾಗಿ ನಿಮಗೆ ಬೇಕಾದ ವರವನ್ನು ಕೇಳಿರಿ ಎಂದು ಹೇಳಿದ.

**ಕುಮಾರರು:-** ಸ್ವಾಮೀ, ಈ ಭಾಗವತ ಪ್ರವಚನದ ಯಜ್ಞದಿಂದ ನೀನು ಕೂಡಲೇ ಪ್ರಸನ್ನನಾಗು. ಯಾರೇ ಮಾಡಲಿ, ಎಂದೇ ಮಾಡಲಿ, ಎಲ್ಲಿಯೇ ಮಾಡಲಿ, ಭಾಗವತ ಸಪ್ತಾಹ ಮಾಡಿದವರಿಗೆಲ್ಲ ಪ್ರಸನ್ನನಾಗು.

ಇದಕ್ಕೆ ಶ್ರೀಹರಿಯು ಅಸ್ತು ಎಂದು ಹೇಳಿ ಅಲ್ಲಿಯೇ ಅದೃಶ್ಯನಾದ. ಅನಂತರ ನಾರದರು ಆ ಸನತ್ಕುಮಾರಾದಿಗಳನ್ನು ನಮಸ್ಕರಿಸದರು. ಬಳಿಕ ಆ ಕುಮಾರರು, ಶುಕ್ರಾಚಾರ್ಯರು, ಭೃಗು ಮೊದಲಾದ ಋಷಿಗಳು, ಭಾಗವತ ಕಥಾಮೃತ ಪಾನದಿಂದ ಪರಿತುಷ್ಟರಾಗಿ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು. ಅಂದಿನಿಂದ ಈ ಭೂಮಂಡಲದಲ್ಲಿ ಜ್ಞಾನವೈರಾಗ್ಯವೆಂಬ ಮಕ್ಕಳಿಂದ ಸಹಿತವಾಗಿ ಭಕ್ತಿಯು ಎಲ್ಲ ಕಡೆಯೂ ನಾರದರಿಂದ ಪ್ರವರ್ತಿತವಾಯಿತು.

**ಶೌನಕ:-** ಶುಕಾಚಾರ್ಯರು ಭಾಗವತವನ್ನು ಪರೀಕ್ಷಿತ ರಾಜನಿಗೆ ಯಾವಾಗ ಹೇಳಿದರು? ಗೋಕರ್ಣನು ಯಾವಾಗ ಭಾಗವತ ಸಪ್ತಾಹವನ್ನು ಮಾಡಿದ? ಸನತ್ಕುಮಾರ ಮೊದಲಾದವರು ನಾರದರಿಗೆ ಎಂದು ಈ ಭಾಗವತವನ್ನು ಹೇಳಿದರು?

**ಸೂತ:-** ಶ್ರೀಕೃಷ್ಣನು ಪರಂಧಾಮಕ್ಕೆ ಹೋದ ಬಳಿಕ ಕಲಿಯು ಭೂಲೋಕದಲ್ಲಿ ಪ್ರವೇಶಮಾಡಿದ. ನಂತರ ಮೂವತ್ತು ವರುಷದ ಮೇಲೆ ಭಾದ್ರಪದ ಶುಕ್ಲನವಮೀ ದಿನ ಪರೀಕ್ಷಿತರಾಜನಿಗಾಗಿ ಭಾಗವತ ಕಥೆಯನ್ನು ಶ್ರೀಶುಕರು ನಿರೂಪಿಸಿದರು. ಅನಂತರ ಎರಡುನೂರು ವರ್ಷಗಳು ಕಳೆದ ಬಳಿಕ ಆಷಾಢ ಶುದ್ಧ ನವಮೀ ದಿನ ಗೋಕರ್ಣನು ತುಂಗಾ ತೀರದಲ್ಲಿ ಭಾಗವತ ಸಪ್ತಾಹವನ್ನು ನೆರವೇರಿಸಿದ. ಅನಂತರ ಮುಂದೆ ಮೂರುನೂರಾ ಆರು ವರ್ಷ ಕಲಿಕಾಲವು ಗತಿಸಿದ ಬಳಿಕ ಕಾರ್ತಿಕ ಶುಕ್ಲಪಕ್ಷ ನವಮೀ ದಿನ ಸನತ್ಕುಮಾರರು ಈ ಭಾಗವತ ಪ್ರವಚನವನ್ನು ಮಾಡಿದರು.

ಈ ಕಲಿಯುಗದಲ್ಲಿ ಭಾಗವತ ಕಥೆಯು ಭವರೋಗ ವಿನಾಶಕವಾಗಿದೆ. ಈ ಕೃಷ್ಣಕಥೆಯು ಭಕ್ತಿವರ್ಧಕ. ಮುಕ್ತಿದಾಯಕ. ಯಮನು ತನ್ನ ದೂತರಿಗೆ ಭಾಗವತ ಕಥಾಶ್ರವಣ ಮಾಡುವ ಭಗವದ್ಭಕ್ತರ ಸಮೀಪದಲ್ಲಿಯೂ ಹೋಗಬೇಡಿರಿ ಎಂದು ಕಿವಿಯಲ್ಲಿಯೇ ಗುಟ್ಟಾಗಿ ಹೇಳಿಬಿಟ್ಟಿದ್ದಾನೆ. ಆದ್ದರಿಂದ ಅಸಾರವಾದ ಸಂಸಾರದಲ್ಲಿ ಅನೇಕ ವಿಧ ದುಃಖ ಸಂಕಟ ಪರಿಹಾರಕ್ಕಾಗಿ ಹಾಗೂ ಮೋಕ್ಷಾರ್ಥಕ್ಕಾಗಿ ಭಾಗವತವೆಂಬ ಸುಧೆಯನ್ನು ಪಾನಮಾಡಿರಿ. ಭಾಗವತ ಶ್ರವಣ ಮಾಡಿದವರು ಮುಕ್ತಿಯನ್ನು ಹೊಂದುವರು ಎಂಬ ವಿಷಯದಲ್ಲಿ ಪರೀಕ್ಷಿತರಾಜನೇ ಸಾಕ್ಷಿ. ಆ ಪರೀಕ್ಷಿತರಾಜನ ಜನ್ಮಕಾಲದಿಂದ ಈ ಕಲಿಯುಗದಲ್ಲಿ ಈಗ ಸಾವಿರ ವರ್ಷಗಳು ಕಳೆದವು. ನೀವು ಕೈಕೊಂಡ ಸಹಸ್ರವರ್ಷಾತ್ಮಕವಾದ ದೀರ್ಘಕಾಲೀನವಾದ ಈ ಜ್ಞಾನಸತ್ರವನ್ನು ಇಲ್ಲಿಗೆ ಮುಗಿಸಿರಿ.

**ಈಶ್ವರ:-** ಸೂತಾಚಾರ್ಯನ ಈ ಮಾತನ್ನು ಕೇಳಿ ಮುನಿಪುಂಗವರಾದ ಶೌನಕರು ಸಾವಿರ ವರ್ಷದ ತಮ್ಮ ಜ್ಞಾನಸತ್ರವನ್ನು ಪೂರ್ಣಮಾಡಿದರು. ಲೋಮಹರ್ಷ ಸೂತನಿಂದ ಶೌನಕಾದಿ ಮುನಿಗಳು ಈ ಸಹಸ್ರವರ್ಷದ ಜ್ಞಾನಸತ್ರದಲ್ಲಿ ಬ್ರಹ್ಮಪುರಾಣ, ಪದ್ಮಪುರಾಣ, ಕೂರ್ಮಪುರಾಣ, ಮತ್ಸ್ಯಪುರಾಣ, ವಾಮನಪುರಾಣ, ವರಾಹಪುರಾಣ, ಬ್ರಹ್ಮವೈವರ್ತಪುರಾಣ, ನಾರದಪುರಾಣ, ಭವಿಷ್ಯಪುರಾಣ ಮತ್ತು ಅಗ್ನಿಪುರಾಣ ಅರ್ಧ-ಇಷ್ಟನ್ನು ದ್ವಾಪರಯುಗದ ಕೊನೆಯಲ್ಲಿ ನೈಮಿಷಾರಣ್ಯದಲ್ಲಿ ಜ್ಞಾನಸತ್ರ ಪ್ರಾರಂಭಕ್ಕಿಂತ ಮೊದಲೇ ಕೇಳಿದ್ದರು. ಆಗ ಒಂದು ದಿನ ಆ ನೈಮಿಷಾರಣ್ಯದಲ್ಲಿ ನಡೆದ ಸಹಸ್ರ ವಾರ್ಷಿಕ ಜ್ಞಾನಸತ್ರಕ್ಕೆ ತೀರ್ಥಯಾತ್ರೆಗೆ ಹೊರಟ ಬಲರಾಮನು ಆಗಮಿಸಿದ. ಆಗ ಶೌನಕಾದಿ ಋಷಿಗಳು ಹೋಗಿ ಅವನನ್ನು ಸ್ವಾಗತಿಸಿ ಪುರಾಣ ಪ್ರವಚನವು ನಡೆದಲ್ಲಿಗೆ ಕರೆತಂದರು.

ಎಲ್ಲರೂ ಎದ್ದು ನಿಂತು ಬಲರಾಮನಿಗೆ ಸ್ವಾಗತ ಸತ್ಕಾರ ಪೂಜೆಗಳನ್ನು ಸಲ್ಲಿಸಿದರು. ಆದರೆ ಪ್ರವಚನಕಾರರ ಪೀಠದ ಮೇಲೆ ಕುಳಿತ ಲೋಮಹರ್ಷ ಸೂತನು ಮಾತ್ರ ಆಸನ ಬಿಟ್ಟು ಏಳಲಿಲ್ಲ. ಬಲರಾಮನಿಗೆ ಗೌರವ ಸಲ್ಲಿಸಲಿಲ್ಲ. ಅಂದು ಆಷಾಢ ಶುಕ್ಲ ದ್ವಾದಶಿ. ಪ್ರವಚನನಿರತನಾದ ಸೂತನು ತನ್ನನ್ನು ಕಂಡು ಆಸನ ಬಿಟ್ಟು ಎದ್ದು ನಿಲ್ಲದಿರುವದನ್ನು ನೋಡಿ ಬ್ರಹ್ಮಾಂಡಕೋಪ ಬಂದಿತು ಬಲರಾಮನಿಗೆ. ಆಗ ಅವನು ಸಿಟ್ಟಿನಿಂದ ಕೈ ಎತ್ತಿ ಆಸನದ ಮೇಲೆ ಆಸೀನನಾದ ಸೂತನನ್ನು ಹೊಡೆದು ಸಂಹರಿಸಿದ.

**ಶೌನಕಾದಿ:-** ಪರಾಕ್ರಮಶಾಲಿಯಾದ ಬಲರಾಮ, ಈ ಲೋಮಹರ್ಷ ಸೂತನು ಸಾಕ್ಷಾತ್ ವೇದವ್ಯಾಸದೇವರ ಶಿಷ್ಯ. ಹದಿನೆಂಟು ಪುರಾಣಗಳ ಪ್ರವಚನಕಾರ. ಆದ್ದರಿಂದಲೇ ನಾವು ಇವನಿಗೆ ಈ ನಮ್ಮ ಜ್ಞಾನಯಜ್ಞದಲ್ಲಿ ಉಚ್ಚ ಆಸನವನ್ನು ಕೊಟ್ಟು ಅವನ ಮುಖದಿಂದ ಭಗವತ್ ಕಥಾ ಶ್ರವಣವನ್ನು ಮಾಡುತ್ತಲಿದ್ದೆವು. ಏನೂ ತಿಳಿಯದ ಜನರಂತೆ ನೀನು ಅವನನ್ನು ಸಂಹರಿಸಿದೆ. ಇದು ಬ್ರಹ್ಮಹತ್ಯೆಗಿಂತ ಹೆಚ್ಚಿನ ಹಿಂಸೆ. ಸಾಕ್ಷಾತ್ ಜಗದೀಶ್ವರನೇ ನಿನ್ನ ರೂಪದಿಂದ ಧರ್ಮ ಸೇತು ಪ್ರವರ್ತನೆಗಾಗಿ ಆವಿರ್ಭೂತನಾಗಿದ್ದಾನೆ. ನೀನು ನಿಗ್ರಹ ಅನುಗ್ರಹ ಎರಡಕ್ಕೂ ಸಮರ್ಥ.

**ಬಲರಾಮ :-** ಈ ಲೋಮಹರ್ಷನ ಮಗನಾದ ಉಗ್ರಶ್ರವಸೂತನು ನನ್ನ ವರದಿಂದ ಮಹಾಪಂಡಿತನಾಗುತ್ತಾನೆ. ನಿಮಗೆ ಬೇಕಾದ ಶಾಸ್ತ್ರಪುರಾಣಗಳನ್ನು ಹೇಳುತ್ತಾನೆ. ಪ್ರಕೃತ ಈಗ ನೀವು ನನ್ನನ್ನು ಇಲ್ಲಿಗೆ ಕರೆದದ್ದು ಏಕೆ?

**ಶೌನಕಾದಿ ಮುನಿಗಳು :-** ''ಬಲ್ವಲ ಎಂಬ ರಾಕ್ಷಸನು ನಮ್ಮನ್ನು ಬಹಳ ಕಾಡುತ್ತಿದ್ದಾನೆ. ಅವನನ್ನು ನಿಗ್ರಹಿಸಿರಿ'' ಎಂದು ಹೇಳಿದರು. ಆಗ ಆ ಬಲರಾಮನು ಆ ಬಲ್ವಲನನ್ನು ಕೊಂದು ಮತ್ತೆ ತನ್ನ ತೀರ್ಥಯಾತ್ರೆಗೆ ಹೊರಟ.

ಇತ್ತ ಶೌನಕಾದಿ ಮುನೀಶ್ವರರು ಲೋಮಹರ್ಷನ ಉಗ್ರಶ್ರವ ಎಂಬ ಮಗನನ್ನು ಕರೆದು ಸತ್ಕಾರಮಾಡಿ ಅವನ ತಂದೆಯ ಪ್ರವಚನಕಾರರ ಪೀಠದಲ್ಲಿ ತಂದು ಕೂಡಿಸಿದರು. ಅವನ ಮುಖದಿಂದ ಅರ್ಧದಲ್ಲಿಯೇ ಉಳಿದ ಅಗ್ನಿಪುರಾಣವನ್ನು ಭಾಗವತದವರೆಗಿನ ಉಳಿದ ಏಳು ಪುರಾಣಗಳನ್ನೂ ಪರಿತೃಪ್ತ ಮಾನಸರಾಗಿ ಶ್ರವಣ ಮಾಡಿದರು.

ಸತ್ಯವತಿಯ ಮಗನಾದ ವೇದವ್ಯಾಸರು ಹದಿನೇಳು ಪುರಾಣವನ್ನೂ, ಮಹಾಭಾರತವನ್ನೂ ರಚಿಸಿದರು. ಆದರೂ ಅವರಿಗೆ ಅದರಿಂದ ಸಮಾಧಾನವಾಗಲಿಲ್ಲ. ಅಷ್ಟರಲ್ಲಿ ಅಲ್ಲಿಗೆ ನಾರದರು ಆಗಮಿಸಿದರು. ಅವರಿಗೆ ಆಸನವನ್ನು ನೀಡಿ ಅರ್ಘ್ಯ ಪಾದ್ಯಾದಿಗಳಿಂದ ಪೂಜೆ ಮಾಡಿಸಿದರು. ಆಗ ನಾರದರು ವೇದವ್ಯಾಸದೇವರಿಗೆ ನಿಮ್ಮ ಮನೋವೈಕಲ್ಯಕ್ಕೆ ಕಾರಣವೇನೆಂದು ಕೇಳಿದರು. ಅದನ್ನು ನೀನೇ ಯೋಚಿಸಿ ಹೇಳು ಎಂದು ವ್ಯಾಸರು ನುಡಿದಾಗ ನಾರದರು ಉತ್ತರಿಸಿದರು.

**ನಾರದ :-** ವ್ಯಾಸಮುನಿಗಳೇ, ನೀವು ಭೂಲೋಕದಲ್ಲಿ ಅವತಾರ ಮಾಡಿ ವೇದಗಳನ್ನು ವಿಭಾಗಿಸಿದಿರಿ. ಪುರಾಣಗಳನ್ನು ರಚಿಸಿದಿರಿ. ಇತಿಹಾಸಗಳನ್ನು ಬರೆದಿರಿ. ಆದರೆ ಅವುಗಳಲ್ಲೆಲ್ಲ ಸ್ತ್ರೀ, ಶೂದ್ರ, ಬ್ರಹ್ಮ ಬಂಧುಗಳ ಧರ್ಮಾದಿಗಳನ್ನು ನಿರೂಪಿಸಿದಂತೆ ವ್ಯಕ್ತವಾಗಿ ಶ್ರೀಹರಿಯ ಮಹಿಮೆಯನ್ನು ಪ್ರಾಧಾನ್ಯಕೊಟ್ಟು ನಿರೂಪಿಸಿಲ್ಲ. ದೋಷನಿಧಿಯಾದ ಈ ಕಲಿಯುಗದಲ್ಲಿ ಕೃಷ್ಣಕಥಾಮೃತ ಶ್ರವಣದ ಹೊರತು ಬೇರೆ

ದಾರಿಯೇ ಇಲ್ಲ. ಉದ್ಧಾರಕ್ಕೆ ಕಲಿಯುಗದ ದೊಡ್ಡ ಗುಣ ಎಂದರೆ ಈ ಯುಗದಲ್ಲಿ ಮಾನವರು ಶ್ರೀಕೃಷ್ಣ ಪರಮಾತ್ಮನ ನಾಮಮಾತ್ರದಿಂದಲೇ ಬಂಧನ ಮುಕ್ತರಾಗುವರು. ಯಜ್ಞ, ಜ್ಞಾನ, ತಪಸ್ಸು, ಧ್ಯಾನ ಮೊದಲಾದವುಗಳು ಹಿಂದೆ ಕೃತತ್ರೇತಾಯುಗದಲ್ಲಿ ಸಿದ್ಧಿಪ್ರದವಾಗಿದ್ದರೂ ಕಲಿಯುಗದಲ್ಲಿ ಮಾತ್ರ ಭಗವನ್ನಾಮಕೀರ್ತನೆ ಮಾತ್ರ ಫಲಪ್ರದ. ಆದ್ದರಿಂದ ನೀನು ಕಲಿಯುಗದಲ್ಲಿ ಹುಟ್ಟಿದ ಜನರ ಉದ್ಧಾರಕ್ಕಾಗಿ ಭಾಗವತ ಮಹಾಪುರಾಣವನ್ನು ರಚಿಸು. ಹೀಗೆ ನಾರದರು ಹೇಳಿದ ಬಳಿಕ ವೇದವ್ಯಾಸರು ಶ್ರೀಮದ್ ಭಾಗವತವನ್ನು ರಚಿಸಿದರು. ತಮ್ಮ ಶಿಷ್ಯರಾದ ಪೈಲ ಮೊದಲಾದ ಋಷಿಗಳಿಗೆ ವೇದಗಳನ್ನು ವಿಧಿಪೂರ್ವಕವಾಗಿ ಅಧ್ಯಯನ ಮಾಡಿಸಿ ಪುರಾಣ ಸಂಹಿತೆಗಳೆಲ್ಲವನ್ನೂ ಸೂತನಿಗೆ ಕರುಣಿಸಿದರು. ಮತ್ತು ಭಾಗವತ ಎಂಬ ಪುರಾಣವನ್ನು ತಮ್ಮ ಮಗನಾದ ಶುಕಾಚಾರ್ಯನಿಗೆ ಪಾಠ ಹೇಳಿದರು. ಶುಕಾಚಾರ್ಯರು ಪರೀಕ್ಷಿತರಾಜನಿಗೆ ಭಾಗವತ ಹೇಳುವಾಗ ಲೋಮಹರ್ಷನ ಮಗನಾದ ಉಗ್ರಶ್ರವನು ಅದನ್ನೆಲ್ಲ ಕೇಳಿದ. ಆ ಉಗ್ರಶ್ರವನು ಶೌನಕಾದಿ ಋಷಿಗಳಿಗೆ ಈ ಪುರಾಣವನ್ನು ನಿರೂಪಿಸಿದ.

ನಗನಂದಿನಿ, ಎಲ್ಲ ಪುರಾಣಗಳಲ್ಲಿ ಈ ಭಾಗವತವು ಸರ್ವಶ್ರೇಷ್ಠ. ಇದರಲ್ಲಿ ಆಸಕ್ತರಾದ ಜನರಿಗೆ ಬೇರೆ ಎಲ್ಲಿಯೂ ಮನಸ್ಸೇ ಹೋಗುವದಿಲ್ಲ. ಆದ್ದರಿಂದ ಎಲ್ಲರೂ ಈ ಭಾಗವತವನ್ನು ದಿನನಿತ್ಯವೂ ಶ್ರವಣ ಮಾಡಬೇಕು. ಅದರಿಂದ ಶ್ರಾವಕರ ಮನಸ್ಸಿನಲ್ಲಿ ನಂದಗೋಪನ ಮಗನಾದ ಕೃಷ್ಣನು ಹೊಳೆಯುತ್ತಾನೆ.

ಪಾರ್ವತಿ, ಲೋಕೋದ್ಧಾರಕ್ಕಾಗಿ ನೀನು ಕೇಳಿದ ಭಾಗವತ ಮಹಾತ್ಮೆಯನ್ನು ನಾನು ನಿನಗೆ ಹೇಳಿದ್ದೇನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಸನತ್ಕುಮಾರರು ಹೇಳಿದ ಭಾಗವತ ಸಪ್ತಾಹ ಶ್ರವಣ ವಿಧಿ ಎಂಬ ನೂರ ಎಂಬತ್ತನೇಯ ಅಧ್ಯಾಯ ಮುಗಿದುದು*

—o—

## ಕಾಲಿಂದೀ ಮಾಹಾತ್ಮ್ಯ ಇಂದ್ರಯಾಗ ವಿಧಿ ವರ್ಣನ | ಅಧ್ಯಾಯ - ೧೮೧

**ಋಷಿಗಳು:-** ಕಾಲಿಂದೀ ಎಂದು ಹೆಸರಾದ ಯಮುನಾ ನದಿಯ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳು.

**ಸೂತ:-** ಒಂದು ದಿನ ಪಾಂಡುಕುಮಾರನಾದ ಧರ್ಮರಾಜನು ಸೌಭರಿಋಷಿಯ ಆಶ್ರಮಕ್ಕೆ ಬಂದು ಅವನಿಗೆ ನಮಸ್ಕರಿಸಿ ಪ್ರಶ್ನೆಯನ್ನು ಕೇಳಿದ.

**ಧರ್ಮರಾಜ:-** ಸೂರ್ಯನ ಮಗಳಾದ ಯಮುನಾನದಿಯ ತೀರ ಪ್ರದೇಶದಲ್ಲಿ ಯಾವ ಯಾವ ಪುಣ್ಯ ತೀರ್ಥಗಳು ಇರುತ್ತವೆ? ಎಂಬುದನ್ನು ತಿಳಿಸಿರಿ.

**ಸೌಭರಿಮುನಿ:-** ಒಂದು ದಿನ ಮುನಿಶ್ರೇಷ್ಠರಾದ ನಾರದ ಮತ್ತು ಪರ್ವತರು ಪ್ರಯಾಣ ಮಾಡುವಾಗ ದಾರಿಯಲ್ಲಿ ಖಾಂಡವವನವನ್ನು ನೋಡಿದರು. ಗಗನ ಮಾರ್ಗದಿಂದ ಗಮನಮಾಡುವ ಆ ಮುನಿಪುಂಗವರ ಕಣ್ಣಿಗೆ ದೂರದ ಅಂತರಿಕ್ಷದಿಂದ ಫಲಪುಷ್ಪಭಾರಭರಿತವಾದ ಖಾಂಡವವನವು ಅತ್ಯಂತ ಮನೋಹರವಾಗಿ ಕಂಡಿತು. ಅದನ್ನು

ನೋಡಿ ಆ ಇಬ್ಬರೂ ಮುನಿಮನೀಷಿಗಳು ಆಗಸದಿಂದ ಕೆಳಗೆ ಇಳಿದರು. ಯಮುನಾತರಂಗಿಣಿಯ ತಡಿಯಡೆಯಲ್ಲಿ ಶೋಭಿಸುವ ಖಾಂಡವವನದಲ್ಲಿ ಪ್ರವೇಶಿಸಿದರು. ಅನಂತರ ಕಾಲಿಂದಿಯ ತಿಳಿನೀರಿನ ಪ್ರವಾಹದಲ್ಲಿ ಸ್ನಾನಮಾಡಲು ಇಳಿದರು. ಅದೇ ವೇಳೆಯಲ್ಲಿ ಉಶೀನರ ರಾಜನ ನೆಚ್ಚಿನ ಮಗನಾದ ಶಿಬಿಚಕ್ರವರ್ತಿಯು ಬೇಟೆಯಾಡುತ್ತ ಅಲ್ಲಿಗೆ ಬಂದ. ಅವನು ಅಲ್ಲಿಂದ ಮುಂದೆ ಹೊರಟುನಿಂತಾಗ ಕಾಲಿಂದಿಯು ಜಲಪ್ರವಾಹದಲ್ಲಿ ಮೀಯುತ್ತಲಿರುವ ಮುನಿ ಮಹಾನುಭಾವರು ಅವನ ಕಣ್ಣಿಗೆ ಬಿದ್ದರು. ಧಾರ್ಮಿಕನಾದ ದೊರೆಯು ತನ್ನ ಪ್ರಯಾಣ ನಿಲ್ಲಿಸಿ ಆ ಮುನಿಗಳು ಮಿಂದು ಮೇಲೆ ಬರುವದನ್ನು ಕಾಯುತ್ತ ದಂಡೆಯಲ್ಲಿ ಕುಳಿತು ಕೊಂಡ. ಇಬ್ಬರೂ ಮಹರ್ಷಿಗಳು ಆ ಕಾಲಿಂದೀ ಜಲದಲ್ಲಿ ಸಂಕಲ್ಪ ಪೂರ್ವಕವಾಗಿ ವಿಧಿಪ್ರಕಾರ ಸ್ನಾನಗೈದರು. ಮಡಿ ಬಟ್ಟೆಗಳನ್ನು ಉಟ್ಟುಕೊಂಡರು. ತೀರದ ಹುಲ್ಲಿನ ಪೀಠದ ಮೇಲೆ ತಮ್ಮ ದೇವಪೂಜಾದಿ ನಿತ್ಯಾಹ್ನೀಕವನ್ನು ಮಾಡುವದಕ್ಕಾಗಿ ಬಂದು ಕುಳಿತರು. ಆಗ ಶಿಬಿಚಕ್ರವರ್ತಿಯು ಬಂದು ಆ ಇಬ್ಬರೂ ಮುನಿಮಾರ್ತಂಡರಿಗೆ ದಂಡಪ್ರಣಾಮಮಾಡಿದ. ಆ ಯಮುನಾನದಿಯ ತೀರದಲ್ಲಿರುವ ಸಾವಿರಾರು ಸುವರ್ಣದ ಯಜ್ಞಸ್ತಂಭಗಳನ್ನು ನೋಡಿದ. ಆಧ್ಯತೆಯಿಂದ ನುಡಿದ. ಅಹಂಕಾರದ ಸೊಂಕು ಎದ್ದು ಕಾಣುತ್ತಿತ್ತು. ಆ ಶಿಬಿರಾಜನ ವಚನವಿನ್ಯಾಸದಲ್ಲಿ.

**ಶಿಬಿ :-** ಮುನಿಶಾರ್ದೂಲರೇ, ಈ ಯಮುನಾ ನದಿಯ ತೀರದ ತುಂಬ ತೋರುತ್ತಿವೆಯಲ್ಲ, ಯಜ್ಞ ಸ್ತಂಭಗಳು ! ಕಾಶಿ, ಪ್ರಯಾಗ ಮುಂತಾದ ಪುಣ್ಯ ತೀರ್ಥಗಳನ್ನು ಬಿಟ್ಟು ಈ ಯಮುನೆಯ ತೀರದ ತೆರವಿನ ತುಂಬ ಸುವರ್ಣದ ಯೂಪಸ್ತಂಭಗಳನ್ನು ನೆಟ್ಟು ಯಜ್ಞ ಮಾಡಿದ ಭೂಪರು ಯಾರು? ಆ ಎಲ್ಲ ತೀರ್ಥಗಳಿಗಿಂತ ಗಂಗಾದಿತೀರ್ಥಗಳಿಗಿಂತ ಈ ತೀರ್ಥ ಹಾಗೂ ಸ್ಥಾನಗಳ ವೈಶಿಷ್ಟ್ಯವೇನು?

**ನಾರದ:-** ಪೂರ್ವಕಾಲದಲ್ಲಿ ಹಿರಣ್ಯಕಶಿಪುವು ಇಂದ್ರಾದಿದೇವತೆಗಳನ್ನು ಗೆದ್ದ ಯುದ್ಧದಲ್ಲಿ. ಅವರ ಸ್ಥಾನಮಾನಗಳನ್ನೆಲ್ಲ ಕಸಿದುಕೊಂಡ. ಮೂರು ಲೋಕಗಳ ಮೇಲೆಲ್ಲ ಹಿರಣ್ಯಕಶಿಪುವಿನದೇ ವಿಜಯಪತಾಕೆ. ಇದರಿಂದ ಸ್ವಾಭಾವಿಕವಾಗಿ ಆ ದೈತ್ಯ ಸಾರ್ವಭೌಮನ ಗರ್ವ ಗೋಪುರಗಟ್ಟಿತು. ಆದರೆ ವಿಷ್ಣುದ್ವೇಷಿಯಾದ ದೈತ್ಯೇಂದ್ರನ ಪ್ರೀತಿಯ ಪುತ್ರ ಮಾತ್ರ ನಾರಾಯಣೈಕನಿಷ್ಠನಾದ ವೈಷ್ಣವಾಗ್ರೇಸರ. ಹಿರಣ್ಯಕಶಿಪುವಿಗೆ ಅಳಿಗಾಲ ಸನ್ನಿಹಿತವಾಗಿತ್ತು. ಅವನು ವಿಷ್ಣುಭಕ್ತನಾದ ತನ್ನ ಮೆಚ್ಚಿನ ಮಗನಿಗೂ ದ್ರೋಹಬಗೆದ. ಆ ಭಕ್ತದ್ರೋಹವನ್ನು ಸಹಿಸದೇ, ವಿಷ್ಣುವು ನರಸಿಂಹ ವೇಷ ಧರಿಸಿ ಕರುಳು ಬಗಿದು ಕೊಂದು ಹಾಕಿದ ಆ ದಾನವ ಧುರೀಣನನ್ನು. ಮತ್ತು ಆ ದೈತ್ಯೇಂದ್ರನು ಕಿತ್ತಿಕೊಂಡ ದೇವೇಂದ್ರನ ನಾಕಾಧಿಪತ್ಯವನ್ನು ಮರಳಿ ಆ ಶಚೀಪತಿಗೇ ಕರುಣಿಸಿ ಕೊಟ್ಟುಬಿಟ್ಟ. ಕುಲಪತಿಯಾದ ಶಚೀಪತಿಯು ತನ್ನ ಕುಲಗುರುವಾದ ಬೃಹಸ್ಪತಿಯಲ್ಲಿಗೆ ಬಂದು, ವಂದಿಸಿ, ಕಳೆದು ಹೋದ ತನ್ನ ಸೌಭಾಗ್ಯವನ್ನು ಮರಳಿ ತಂದುಕೊಟ್ಟ. ನಾರಾಯಣನ ಗುಣಗಳನ್ನು ನೆನೆಯುತ್ತ ನುಡಿದ.

**ಇಂದ್ರ:-** ಗುರುಗಳೇ, ಶ್ರೀಹರಿಯು ಅರ್ಧ ಸಿಂಹ ಅರ್ಧ ಮಾನವ ಆಕಾರದಿಂದ ಒಡಗೂಡಿದ ನೃಸಿಂಹ ರೂಪ ತಾಳಿ ದೈತ್ಯದಾನವರ ದೊರೆಯಾದ ಹಿರಣ್ಯಕಶಿಪುವಿನ

ದಮನಮಾಡಿ ನನಗೆ ಈ ಸಂಪೂರ್ಣವಾದ ಸುರಸಾಮ್ರಾಜ್ಯವನ್ನು ದಯಪಾಲಿಸಿದ್ದಾನೆ. ಆದುದರಿಂದ ನಾನು ಆ ನರಸಿಂಹದೇವರನ್ನು ಯಜ್ಞಮಾಡಿ ಆರಾಧಿಸಬೇಕು ಎಂದು ನಿರ್ಧರಿಸಿದ್ದೇನೆ. ಅದಕ್ಕಾಗಿ ಯೋಗ್ಯವಾದ ಸ್ಥಾನವನ್ನು ತೋರಿಸು. ಮತ್ತು ಅದಕ್ಕೆ ಅರ್ಹರಾದ ಬ್ರಾಹ್ಮಣರು ಯಾರು ಎಂಬುದನ್ನೂ ನನಗೆ ಹೇಳು.

**ಬೃಹಸ್ಪತಿ:-** ಭೂಲೋಕದಲ್ಲಿ ಮೂರು ಲೋಕಗಳನ್ನೇ ಪಾವನಗೊಳಿಸುವ ಯಮುನಾ ಎಂಬ ಒಂದು ಪುಣ್ಯಪಯಸ್ವೀ ಹರಿಯುತ್ತಿದೆ. ಆ ನದಿಯ ನೀರಿನಲ್ಲಿ ಮರಣಹೊಂದಿದರೆ ಬ್ರಹ್ಮಪದ. ಅದರ ಸ್ಮರಣಮಾಡಿದರೆ ಸ್ವರ್ಗ. ಆ ಯಮುನಾ ನದಿಯ ತೀರದಲ್ಲಿ ಪರಮ ರಮಣೀಯವಾದ ಮತ್ತು ಅಷ್ಟೇ ಪಾವನವಾದ ಒಂದು ವನ ಇದೆ. ಅದಕ್ಕೆ ಖಾಂಡವವನ ಎನ್ನುವರು. ನೀನು ಆ ಯಮುನಾ ತೀರದ ಖಾಂಡವವನದಲ್ಲಿ ಅನೇಕ ಯಜ್ಞಗಳನ್ನು ಮಾಡಿ ಕೇಶವನನ್ನು ಆರಾಧಿಸು. ಅದರಿಂದ ನಿರಂತರ ಕಲ್ಯಾಣವುಂಟಾಗುವದು.

**ನಾರದ:-** ಅಮರರ ಆಚಾರ್ಯನ ಈ ವಚನವನ್ನು ಕೇಳಿ ದೇವೇಂದ್ರನು ತನ್ನ ವಾಹನವಾದ ಐರಾವತವನ್ನು ಏರಿ, ಎಲ್ಲ ದೇವತೆಗಳು, ಯಜ್ಞಸಾಮಗ್ರೀ ಮತ್ತು ಬೃಹಸ್ಪತ್ಯಾಚಾರ್ಯರನ್ನು ಕೂಡಿಕೊಂಡು ತನ್ನದೇ ಆದ ಆ ಖಾಂಡವವನಕ್ಕೆ ಆಗಮಿಸಿದ. ವಸಿಷ್ಠ ಮೊದಲಾದ ಸಪ್ತರ್ಷಿಗಳನ್ನು ಋತ್ವಿಜರನ್ನಾಗಿರಿಸಿ ಸುರಗುರುವಿನ ನೇತೃತ್ವದಲ್ಲಿ ಶ್ರೀಹರಿಯ ಪ್ರೀತ್ಯರ್ಥವಾಗಿ ಯಜ್ಞವನ್ನು ಮಾಡಿದ. ಅದರಿಂದ ಶ್ರೀಹರಿಯು ಸುಪ್ರಸನ್ನನಾಗಿ ಬ್ರಹ್ಮ, ಶಂಕರರಿಂದ ಕೂಡಿಕೊಂಡು ಅಲ್ಲಿಗೆ ಆಗಮಿಸಿದ. ಆಗ ದೇವೇಂದ್ರನು ಆ ಜಗದೀಶ್ವರನ ಪಾದಗಳನ್ನು ತೊಳೆದು ಅವನ ಪಾದೋದಕವನ್ನು ತಲೆಯ ಮೇಲೆ ಧರಿಸಿ ನುಡಿದ.

**ಇಂದ್ರ:-** ದೇವೋತ್ತಮ, ಇಂದು ನನ್ನ ಯಜ್ಞವು ಸಫಲ. ಯೋಗಿಗಳಿಗೂ ಸಹ ಕಾಣದಿರುವ ನೀನು ಇಂದು ನನಗೆ ಸಾಕ್ಷಾತ್ ದರ್ಶನವನ್ನು ನೀಡಿದಿ. ನೀನು ಎಲ್ಲ ಯೋಗಿಗಳ ಹೃದಯದಲ್ಲಿ ಗೂಢನಾಗಿರುವಿ. ಕಟ್ಟಿಗೆಯಲ್ಲಿ ಗೂಢವಾಗಿದ್ದ ಅಗ್ನಿಯು ಘರ್ಷಣದಿಂದ ವ್ಯಕ್ತವಾಗುವಂತೆ ಎಲ್ಲ ಪ್ರಾಣಿಗಳ ದೇಹದಲ್ಲಿ ಅಂತರ್ಗತನಾಗಿದ್ದ ನೀನು ಭಕ್ತಿಯಿಂದ ಪ್ರಕಟನಾಗುವಿ. ನಿನ್ನ ಕಾಲುತೊಳೆದ ನೀರನ್ನು ಶಿರಸಾಧಾರಣ ಮಾಡಿದವರು ಸಂಸಾರದಿಂದ ಪಾರಾಗುತ್ತಾರೆ. ನನಗೆ ನಿನ್ನ ಪಾದಾರವಿಂದದಲ್ಲಿ ಜನ್ಮ ಜನ್ಮಾಂತರದಲ್ಲಿ ಭಕ್ತಿಯು ಉಳಿಯಲಿ ಮತ್ತು ಬೆಳೆಯಲಿ. ದೇವೇಂದ್ರನು ಮಾಡಿದ ಆ ಸ್ತೋತ್ರವನ್ನು ವಶಿಷ್ಠಾದಿ ಮುನಿಗಳು ಹೊಗಳಿ ಆ ಇಂದ್ರನಿಗೆ ಶ್ರೀಹರಿಯಲ್ಲಿ ನಿಷ್ಕಾಮಭಕ್ತಿಯನ್ನು ಮಾಡು ಎಂದು ಸಲಹೆ ನೀಡಿದರು. ಅದನ್ನು ಕೇಳಿ ದೇವೇಂದ್ರನು ಶ್ರೀಹರಿಯಲ್ಲಿ ನಿಷ್ಕಾಮಭಕ್ತಿಯನ್ನು ಆಚರಿಸಿದನು. ಹೀಗೆ ತನ್ನಲ್ಲಿ ನಿರ್ವ್ಯಾಜ ಭಕ್ತಿಯನ್ನು ಮಾಡಿದ ಇಂದ್ರನನ್ನು ಕುರಿತು ನಾರಾಯಣನು ಮಾತನಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಕಾಲಿಂದೀ ಮಾಹಾತ್ಮ್ಯ ಇಂದ್ರಯಾಗ ವಿಧಿ ವರ್ಣನ ಎಂಬ ನೂರ ಎಂಬತ್ತೊಂದನೇಯ ಅಧ್ಯಾಯ ಮುಗಿದುದು*

—o—

## ಇಂದ್ರಪ್ರಸ್ಥದಲ್ಲಿ ನಾನಾ ತೀರ್ಥ ಸ್ಥಾಪನೆ ವಿಷ್ಣುಶರ್ಮನ ಕಥೆ

ಅಧ್ಯಾಯ - ೧೮೨

**ಶ್ರೀಹರಿ:-** ಸುರೋತ್ತಮನಾದ ದೇವೇಂದ್ರ, ನಿನಗೆ ಸಲಹೆ ಮಾಡಿದ ಈ ಋಷಿಮುನಿಗಳು ಮೂರುಲೋಕದ ಜನರೆಲ್ಲರಿಗೂ ನಿಜವಾದ ಭಗವತ್ತತ್ವದ ಜ್ಞಾನವನ್ನು ಉಪದೇಶ ಮಾಡುವ ಮಹಾನುಭಾವರು. ನಷ್ಟವಾದ ವೇದಮಾರ್ಗವನ್ನು ಪುನಃ ಪ್ರವರ್ತನ ಮಾಡುವವರೂ ಇವರೇ. ನೀನಾದರೂ ಕೂಡ ಸ್ವರ್ಗಭೋಗದಲ್ಲಿ ಆಸಕ್ತನಾಗಿದ್ದರೂ ನಿನ್ನ ಭಕ್ತಿಯಿಂದ ನಾನು ಪ್ರಸನ್ನನಾಗಿರುವೆ. ಇದು ಅಂತಹ ಆಶ್ಚರ್ಯವೇನಲ್ಲ. ಸಾಕ್ಷಾತ್ ಬೃಹಸ್ಪತ್ಯಾಚಾರ್ಯರೇ ನಿನಗೆ ಗುರುವಾಗಿದ್ದಾರೆ. ಅವರೆಲ್ಲ ಋಷಿಮುನಿಗಳೂ, ನಿನ್ನ ಗುರು ಬೃಹಸ್ಪತ್ಯಾಚಾರ್ಯರೂ ನಿವೃತ್ತಿ ಮಾರ್ಗೈಕರತರು. ಅವರು ನಿನಗೆ ನಿಷ್ಕಾಮ ಬುದ್ಧಿಯಿಂದ ಯಜ್ಞ ಮಾಡಲು ಹೇಳಿದ್ದು ಆಶ್ಚರ್ಯವೇನಲ್ಲ. ಅವರ ಉಪದೇಶದಂತೆ ನೀನು ಆಶಾ ಪಾಶ ಲೇಶ ರಹಿತನಾಗಿ ನನ್ನನ್ನು ಉದ್ದೇಶಿಸಿ ವಿಪುಲ ದಾನದಕ್ಷಿಣೆ ನೀಡಿ ಯಜ್ಞಗಳನ್ನು ಮಾಡು. ಪ್ರತಿಯೊಂದು ಯಜ್ಞದಲ್ಲಿಯೂ ಧಾನ್ಯವನ್ನು ಅಳೆಯುವ ಪ್ರಸ್ಥ ಎಂಬ ಕೊಳಗದಿಂದ ಮುತ್ತುರತ್ನಗಳನ್ನು ಅಳೆದು ವಿದ್ವಾಂಸರಿಗೆ ನೀಡು. ಆದರಿಂದ ಈ ಸ್ಥಾನವು ಇಂದ್ರಪ್ರಸ್ಥ ಎಂದು ಹೆಸರಾಗುವದು. ಈ ಇಂದ್ರಪ್ರಸ್ಥದಲ್ಲಿ, ನೀನು ಗಂಗಾ-ಯಮುನೆಗಳನ್ನು ಬರಮಾಡಿಕೊಂಡು ಅವುಗಳ ಸಂಗಮ ಮಾಡಿಸಿ ಇಲ್ಲಿ ಹೊಸ 'ಪ್ರಯಾಗ' ಎಂಬ ತೀರ್ಥ ರಚಿಸು. ಇದರಂತೆ ಸರಸ್ವತೀ, ಗಂಗಾ, ಯಮುನಾ ನದಿಗಳನ್ನು ಇಲ್ಲಿ ತಂದು ಸ್ಥಾಪಿಸು.

ಕಾಶೀ, ಕಂಚಿ, ಗೋಕರ್ಣ ಮುಂತಾದ ಪುಣ್ಯಕ್ಷೇತ್ರಗಳು ಇಲ್ಲಿಗೆ ಬರಲಿ. ಬ್ರಹ್ಮಪುತ್ರರಾದ ಸಪ್ತರ್ಷಿಗಳೇ, ನೀವು ಯೋಗಬಲದಿಂದ ಏಳು ತೀರ್ಥಗಳನ್ನು ನಿರ್ಮಿಸಿರಿ. ಇಲ್ಲಿ ಕೇವಲ ಸ್ನಾನ ಮಾತ್ರದಿಂದಲೇ ಅಧ್ಯಯನ, ಗುರೂಪದೇಶಾದಿಗಳಿಲ್ಲದೇ ಜ್ಞಾನೋದಯವಾಗಲಿ. ಮತ್ತು ಪೂರ್ವಜನ್ಮದ ಸ್ಮರಣವು ಇಲ್ಲಿ ಮಿಂದವರಿಗೆ ಉದಿಸಿಬರಲಿ. ನಾನು ಇಲ್ಲಿ ಗೋಮತೀಸಮುದ್ರದ ಸಂಗಮದಿಂದ ಹೃದಯಂಗವವಾದ ದ್ವಾರಕಾಕ್ಷೇತ್ರವನ್ನು ನಿರ್ಮಿಸುತ್ತೇನೆ. ಅದರಂತೆ ಹರಿದ್ವಾರ, ಪುಷ್ಕರ, ನೈಮಿಷಾರಣ್ಯ, ಬದರಿಕಾಶ್ರಮ, ಮುಂತಾದ ಪುಣ್ಯಪ್ರದವಾದ ಕ್ಷೇತ್ರಗಳನ್ನೆಲ್ಲ ಸ್ಥಾಪಿಸುತ್ತೇನೆ. ಹರಿಯ ಈ ಮಾತನ್ನು ಕೇಳಿ ಬ್ರಹ್ಮದೇವರೂ, ಬ್ರಹ್ಮಜ್ಞಾನಿಗಳೂ ಶ್ರೀಹರಿಯ ಆದೇಶದಂತೆ ಅನೇಕ ತೀರ್ಥಗಳನ್ನು ನಿರ್ಮಿಸಿದರು. ಅನೇಕ ತೀರ್ಥಸನ್ನಿದಾನೋಪೇತವಾದ ಈ ತೀರ್ಥದಲ್ಲಿ ಇಂದ್ರನು ವಿಪುಲ ದಾನ ದಕ್ಷಿಣೆಗಳನ್ನಿತ್ತು ಅನೇಕ ಬಂಗಾರದ ಯಜ್ಞಸ್ತಂಭಗಳನ್ನು ನೆಟ್ಟು ಶ್ರೀಹರಿಯನ್ನು ಉದ್ದೇಶಿಸಿ ಯಜ್ಞಗಳನ್ನು ಮಾಡಿದನು. ಮತ್ತು ಮುತ್ತುರತ್ನಗಳನ್ನು ಕಾಳುಕಡ್ಡಿ ಅಳೆಯುವ ಪ್ರಸ್ಥ ಎಂಬ ಕೊಳಗಗಳಲ್ಲಿ ತುಂಬಿ ವಿಪ್ರರಿಗೆ ದಾನ ನೀಡಿದ. ಅಂದಿನಿಂದ ಇದು ಇಂದ್ರಪ್ರಸ್ಥ ಎಂಬ ಹೆಸರನ್ನು ಹೊಂದಿತು. ಇಂದ್ರನಿಂದ ಕೊಡಲ್ಪಟ್ಟ ಆ ರತ್ನಪ್ರಸ್ಥಗಳನ್ನು ಪಡೆದು ಪರಮ ಪರಿತುಷ್ಟರಾದ ಆ ವಿಪ್ರೋತ್ತಮರು ಅವನಿಗೆ ಆಶೀರ್ವಚನವನ್ನು ಮಾಡಿದರು.

''ದೇವೇಂದ್ರ, ಈ ನಿನ್ನ ದಾನದಿಂದ ಜಗದೀಶ್ವರನಾದ ಗೋವಿಂದನು ತೃಪ್ತನಾಗಲಿ. ಆ ಪರಮಾತ್ಮನಲ್ಲಿ ಅವ್ಯಭಿಚರಿತವಾದ ಭಕ್ತಿಯು ನಿರಂತರವೂ ಬೆಳೆಯಲಿ. ಸುರರಾಜ, ನೀನು

ಹಿಂದೆ ಈ ಕರ್ಮಭೂಮಿಯಲ್ಲಿ ನೂರು ಯಜ್ಞಗಳನ್ನು ಮಾಡಿದೆ. ಆದರಿಂದ ನಿನಗೆ ''ಶತಕ್ರತು'' ಎಂಬ ಹೆಸರು ಬಂದಿತು. ಹಿಂದೆ ಮಾಡಿದ ನೂರು ಯಜ್ಞಗಳಿಂದ ಈಗ ನಿನಗೆ ಇಂದ್ರಪದವಿಯು ದೊರಕಿರುತ್ತದೆ. ಈ ಮೊದಲು ಮಾಡಿದ ಯಜ್ಞಗಳನ್ನು ನೀನು ಇಂದ್ರಪದವಿಯ ಆಸೆಯಿಂದ ಮಾಡಿದೆ. ಅದು ಸಕಾಮಕರ್ಮ. ಈಗ ಮಾತ್ರ ನೀನು ''ವಿಷ್ಣುಪ್ರೇರಣೆಯಾ ವಿಷ್ಣುಪ್ರೀತ್ಯರ್ಥಂ'' ಎಂದು ಸಂಕಲ್ಪಿಸಿ ಯಾವುದೇ ಕಾಮನೆಯಿಲ್ಲದೇ ಯಜ್ಞಮಾಡಿರುವೆ. ಈ ನಿಷ್ಕಾಮಕರ್ಮಗಳಿಂದ ನೀನು ಮೋಕ್ಷವನ್ನೇ ಹೊಂದುವಿ. ಅದಕ್ಕಿಂತ ಮೊದಲು ಕರ್ಮಭೂಮಿಯಾದ ಭರತಖಂಡದಲ್ಲಿ ಪರಮವಿರಕ್ತನೂ ಭಕ್ತಾಗ್ರಣಿಯೂ ಆದ ಬ್ರಾಹ್ಮಣನಾಗಿ ಜನಿಸುವಿ. ಆ ಬ್ರಾಹ್ಮಣ ಜನ್ಮದಲ್ಲಿ ಶ್ರೀಹರಿಯ ಆರಾಧನೆಯನ್ನು ಶ್ರದ್ಧೆಯಿಂದ ಮಾಡುವಿ. ನೀನು ಬ್ರಾಹ್ಮಣನಾಗಿ ಜನಿಸಿದಾಗ, ಹಿಂದಿನ ಜನ್ಮದಲ್ಲಿ ಅಂದರೆ ಈಗ ಇಂದ್ರಜನ್ಮದಲ್ಲಿ ಮಾಡಿದ ಯಜ್ಞಯಾಗಾದಿಗಳ ನೆನಪು ಬರುವುದು. ಇದರಿಂದ ನೀನು ಮನೆ, ಮಾರು, ಮಡದಿ, ಮಕ್ಕಳನ್ನು ತೊರೆದು ತೀರ್ಥಯಾತ್ರೆಗಳನ್ನು ಮಾಡುವಿ. ನಿನ್ನ ತಂದೆಯೊಡನೆ ತೀರ್ಥಾಟನವನ್ನು ಮಾಡಿ ಕೊನೆಗೆ ಚತುರ್ಥಾಶ್ರಮವನ್ನು ಸ್ವೀಕರಿಸುವಿ. ಅನಂತರ ಆ ದೇಹ ಪರಿತ್ಯಾಗವನ್ನು ಮಾಡಿ ವೈಕುಂಠದಿಂದ ಬಂದ ಸೂರ್ಯನಂತೆ ಪ್ರಕಾಶಿಸುವ ದಿವ್ಯ ವಿಮಾನವನ್ನು ಪ್ರವೇಶಿಸಿ, ಶ್ರೀಹರಿಯ ಪರಮ ಪದವನ್ನು ಹೊಂದುವೆ.

ಬ್ರಾಹ್ಮಣರ ಈ ಭವಿಷ್ಯಗರ್ಭಿತವಾದ ಉಕ್ತಿಗಳನ್ನು ಕೇಳಿ ಪರಮಾನಂದವಾಯಿತು. ಆ ಶಚೀಪತಿಗೆ. ಅವನು ವಿಧಿಪೂರ್ವಕವಾಗಿ ಯಜ್ಞಯಾಗಗಳನ್ನೆಲ್ಲ ಮಾಡಿ ಮುಗಿಸಿ ಯಮುನಾನದಿಯ ಪರಿಸರ ಪುಣ್ಯಪ್ರಾಂತದಲ್ಲಿ ಬಂಗಾರದ ಸ್ತಂಭಗಳನ್ನು ನೆಟ್ಟು ಶ್ರೀಹರಿಯ ಪೂಜೆಯನ್ನು ವಿಶೇಷ ಸಂಭ್ರಮದಲ್ಲಿ ಮಾಡಿ ಬ್ರಾಹ್ಮಣರನ್ನು, ಪುರೋಹಿತರನ್ನು, ಋತ್ವಿಜರನ್ನು ಆದರಿಸಿ, ವಿಪುಲವಾದ ಧನ, ಧಾನ್ಯ, ದಕ್ಷಿಣಾದಿಗಳನ್ನು ನೀಡಿ ಸಂತೋಷಪಡಿಸಿ ಬೀಳ್ಕೊಟ್ಟ. ಅನಂತರ ಬೃಹಸ್ಪತಿಯ ಜೊತೆಗೆ ಕೂಡಿಕೊಂಡು ತಾನು ತನ್ನ ಲೋಕಕ್ಕೆ ಪ್ರಯಾಣ ಮಾಡಿದ.

ಹೀಗೆ ಹಲವು ಕಾಲಗಳ ವರೆಗೆ ದೇವೇಂದ್ರನು ಸುರಸಾಮ್ರಾಜ್ಯದ ಸಾರ್ವಭೌಮ ಸುಖಸೌಭಾಗ್ಯಗಳನ್ನೆಲ್ಲ ಶಚೀದೇವಿಯೊಡಗೂಡಿ ಅನುಭವಿಸಿ ತನ್ನ ಪುಣ್ಯಹ್ರಾಸವಾದ ಬಳಿಕ ಭೂಲೋಕದಲ್ಲಿ ಒಬ್ಬ ಬ್ರಾಹ್ಮಣನಾಗಿ ಹುಟ್ಟಿದ.

ಈ ಭರತಖಂಡದಲ್ಲಿ ಆ ಕಾಲದಲ್ಲಿ ಶಿವಶರ್ಮ ಎಂಬೊಬ್ಬ ಬ್ರಾಹ್ಮಣನಿದ್ದ. ಈತ ವೇದದಲ್ಲಿ ವಿದ್ವಾಂಸ. ವೇದಾಂಗಗಳಲ್ಲಿಯೂ ಮಹಾಪಂಡಿತ. ಅದರಂತೆ ಆಚಾರಸಂಪನ್ನ. ಆ ಶಿವಶರ್ಮನಿಗೆ ಸುವೇದಾ ಎಂಬ ಅನುರೂಪಳೂ ಅನುಗುಣಳೂ ಆದ ಭಾರ್ಯೆಯೊಬ್ಬಳಿದ್ದಳು. ಗಂಡ-ಹೆಂಡತಿ ಇಬ್ಬರೂ ಕೂಡ ಅನ್ಯೋನ್ಯ ಅನುರಾಗದಿಂದ ಯುಕ್ತರಾಗಿ ಭಗವತ್ಸೇವೆಯನ್ನು ಮಾಡುತ್ತಲಿದ್ದರು. ಈ ಬ್ರಾಹ್ಮಣ ದಂಪತಿಗಳಲ್ಲಿ ದೇವೇಂದ್ರನು ಒಳ್ಳೇ ಸುಮುಹೂರ್ತದಲ್ಲಿ ಜನಿಸಿದ. ಆಗ ಶಿವಶರ್ಮನು ಜ್ಯೋತಿಶ್ಶಾಸ್ತ್ರ ಪಂಡಿತರನ್ನು ಕರೆಯಿಸಿ ಆ ಮಗನ ಜಾತಕವನ್ನು ತೋರಿಸಿ ಅವನ ಭವಿಷ್ಯವನ್ನು ಕೇಳಿದ. ಮಗುವಿನ ಜಾತಕವನ್ನು ನೋಡಿ ಆ ಜ್ಯೋತಿರ್ಮಾರ್ತಾಂಡರು ಹೇಳಿದರು.

**ಜ್ಯೋತಿಷಿ:-** ಶಿವಶರ್ಮ, ಈ ನಿನ್ನ ಮಗನು ಶ್ರೇಷ್ಠ ಹರಿಭಕ್ತನಾಗುವನು. ನಿನ್ನ ವಂಶವನ್ನೇ ಉದ್ಧರಿಸುವ ಮಹಾ ಪುಣ್ಯಪುರುಷ. ಇದು ಸತ್ಯ. ಇವನು ಹದಿಮೂರು

ವರ್ಷದವನಾದಾಗ ನಾಲ್ಕೂ ವೇದಗಳನ್ನು ಅದರ ಆರೂ ಅಂಗಗಳೊಂದಿಗೆ ಅಧ್ಯಯನ ಮಾಡಿ ಜ್ಞಾನಸಂಪನ್ನನಾಗುವನು. ಅನಂತರ ಅವನ ವಿವಾಹವು ಆದ ಬಳಿಕ ಮಗನನ್ನು ಹೆತ್ತು ನಿನಗೆ ಆನಂದವನ್ನುಂಟುಮಾಡುತ್ತಾನೆ. ಅನಂತರ ಅವನು ವಾನಪ್ರಸ್ಥಾಶ್ರಮಿಯಾಗಿ ತೀರ್ಥಗಳಲ್ಲಿ ಸಂಚರಿಸಿ ಸನ್ಯಾಸಿಯಾಗುತ್ತಾನೆ. ದೇವೇಂದ್ರನ ಒಡೆತನಕ್ಕೆ ಸೇರಿದ ಯಮುನಾತೀರದಲ್ಲಿ ಇರುವ ಖಾಂಡವ ವನದಲ್ಲಿ 'ಹರಿಪ್ರಸ್ಥ' ಎಂಬ ಸ್ಥಳದಲ್ಲಿ ಈ ನಿನ್ನ ಮಗನು ಮರಣವನ್ನು ಹೊಂದುವನು.

ಹೀಗೆ ಜ್ಯೋತಿಶ್ಶಾಸ್ತ್ರ ಕೋವಿದರು ಹೇಳಿದ ವಚನವನ್ನು ಕೇಳಿ ಶಿವಶರ್ಮನು ಮನಸ್ಸಿನಲ್ಲಿಯೇ ವಿಚಾರಮಾಡಿದನು - ''ನಿನಗೆ ವಿಷ್ಣು ಭಕ್ತನಾದ ಒಬ್ಬ ಮಗನು ಉಟ್ಟುವನು ಎಂದು ಈ ಜ್ಯೋತಿಷಿಗಳು ಭವಿಷ್ಯ ನುಡಿದಿದ್ದಾರೆ. ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡಿ ತಾನು ಉದ್ಧಾರವಾಗುವದಲ್ಲದೇ ನಮ್ಮ ವಂಶವನ್ನೇ ಉದ್ಧರಿಸುವನಂತೆ. ಅದರಲ್ಲಿಯೂ ಈ ನನ್ನ ಪುತ್ರನು ಬ್ರಹ್ಮಚರ್ಯ, ಗೃಹಸ್ಥಾಶ್ರಮ, ವಾನಪ್ರಸ್ಥ, ಸನ್ಯಾಸ ಈ ನಾಲ್ಕೂ ಆಶ್ರಮಗಳನ್ನು ಶಾಸ್ತ್ರೋಕ್ತವಾಗಿ ಪಾಲಿಸಿ ಶ್ರೇಷ್ಠವಾದ ತೀರ್ಥದಲ್ಲಿ ಮರಣಹೊಂದುವನು. ಜೀವನದುದ್ದಕ್ಕೂ ಶ್ರೀಹರಿಯನ್ನು ಶಾಸ್ತ್ರೋಕ್ತ ಮಾರ್ಗದಲ್ಲಿ ಸೇವಿಸುವ ಇಂಥ ಮಗನನ್ನು ಪಡೆದ ನಾನು ಧನ್ಯ.'' ಹೀಗೆ ವಿಚಾರಮಾಡಿ ಮನಸ್ಸಿನಲ್ಲಿಯೇ ಅತ್ಯಂತ ತೃಪ್ತಿಹೊಂದಿದ ಆ ಶಿವಶರ್ಮ. ಬ್ರಾಹ್ಮಣರನ್ನು ಕರೆದು ಮಗನಿಗೆ ವಿಷ್ಣುಶರ್ಮ ಎಂದು ಹೆಸರನ್ನು ಇಟ್ಟ ಶುಭಮುಹೂರ್ತದಲ್ಲಿ. ಏಳು ವರ್ಷಗಳು ಕಳೆದ ಬಳಿಕ, ಆ ತನ್ನ ಮಗನಾದ ವಿಷ್ಣುಶರ್ಮನಿಗೆ ಎಂಟನೆಯ ವರ್ಷದಲ್ಲಿ ಚೈತ್ರಮಾಸದಲ್ಲಿ ಉಪನಯನ ಮಾಡಿದ. ಅನಂತರ ಹನ್ನೆರಡು ವರ್ಷಗಳ ವರೆಗೆ ಎಲ್ಲ ವೇದಗಳನ್ನೂ ತಾನೇ ಕಲಿಸಿದ. ಹನ್ನೆರಡು ವರ್ಷ ವಯಸ್ಸಿನಲ್ಲಿಯೇ ಆ ವಿಷ್ಣುಶರ್ಮನು ವೇದ, ವೇದಾಂಗ, ವೇದಾಂತ ಮುಂತಾದ ಶಾಸ್ತ್ರಗ್ರಂಥಗಳಲ್ಲಿ ಪರಿನಿಷ್ಠಿತ ಪಂಡಿತನಾದ. ಶಿವಶರ್ಮನು ತನ್ನ ಮಗನಾದ ವಿಷ್ಣುಶರ್ಮನಿಗೆ ಮುಂದೆ ಕೆಲಕಾಲದಲ್ಲೇ ಅನುರೂಪ ಕನ್ಯೆಯೊಂದನ್ನು ಆರಿಸಿ ಮದುವೆಯನ್ನು ಮಾಡಿದ. ಆ ವಿಷ್ಣುಶರ್ಮನಿಗೆ ಒಂದು ಉತ್ತಮ ಗಂಡು ಮಗು ಜನಿಸಿತು.

ಮಗನು ಹುಟ್ಟಿದ ಬಳಿಕ ವಿಷ್ಣುಶರ್ಮನು ಸಂಸಾರದಲ್ಲಿ ವಿರಕ್ತನಾಗಿ ತಂದೆಯ ಬಳಿಗೆ ಬಂದ. ಭಕ್ತಿಯಿಂದ ತನ್ನ ಪಿತನ ಚರಣಗಳಿಗೆ ನಮಸ್ಕರಿಸಿದ. ಅವನ ಬಳಿಯಲ್ಲಿ ಕುಳಿತ. ಪೂರ್ವಜನ್ಮದಲ್ಲಿ ತಾನು ಇಂದ್ರನಾಗಿದ್ದಾಗ ಯಮುನಾ ನದೀ ತೀರದಲ್ಲಿ ಅನೇಕ ಯಜ್ಞಗಳನ್ನು ಆಚರಿಸಿದ್ದಾಗ ಸಂತುಷ್ಟರಾಗಿ ಮುನಿಗಳು ಹೇಳಿದ ಮಾತುಗಳನ್ನು ಸ್ಮರಣೆಗೆ ತಂದುಕೊಂಡ. ಈ ಜನ್ಮದಲ್ಲಿ ತನ್ನ ತಂದೆಯಾದ ಶಿವಶರ್ಮನನ್ನು ಕುರಿತು ಮಾತನಾಡಿದ.

**ವಿಷ್ಣುಶರ್ಮ:-** ನಾನು ಬ್ರಹ್ಮಚರ್ಯಾಶ್ರಮ ಹಾಗೂ ಗೃಹಸ್ಥಾಶ್ರಮಗಳಿಂದ ಇಷ್ಟು ದಿನಗಳವರೆಗೆ ಶ್ರೀಹರಿಯ ಆರಾಧನೆಯನ್ನು ಮಾಡಿದ್ದೇನೆ. ನನಗೆ ಪುತ್ರನೂ ಜನಿಸಿದ್ದಾನೆ. ಅವನಿಗೆ ಶಿಕ್ಷಣ ನೀಡಿದ್ದೇನೆ. ಗೃಹಸ್ಥಾಶ್ರಮದ ಕೆಲಸ ಪೂರೈಸಿದಂತಾಗಿದೆ. ಈಗ ಮೂರನೆಯ ಆಶ್ರಮವಾದ ವಾನಪ್ರಸ್ಥಾಶ್ರಮವನ್ನು ಪ್ರವೇಶಿಸಬೇಕು ಎಂದು ಬಯಸುತ್ತಲಿದ್ದೇನೆ. ಮಡದಿ, ಮಕ್ಕಳು, ಮನೆ, ಮಾರು, ಐಶ್ವರ್ಯ, ಮಿತ್ರರೂ ಎಲ್ಲವೂ ಸಹ ಕ್ಷಣಿಕ. ನೀರಿನ ಮೇಲಿನ ಗುಳ್ಳೆಯಂತೆ ಇದೆಲ್ಲವೂ ಅಶಾಶ್ವತ. ಇವುಗಳಲ್ಲಿ ವಿಚಾರವಂತನಾದವನು ಅತೀ ಆಸಕ್ತಿಯನ್ನು ತಳೆಯಬಾರದು. ನಾನು ಮನೆಯಲ್ಲಿ ಇದ್ದರೂ ಸಹ ಸ್ವಾಧ್ಯಾಯ, ಪಾಠ, ಪ್ರವಚನ, ಪಾರಾಯಣ ಮುಂತಾದವುಗಳಿಂದ ಋಷಿ ಋಣವನ್ನು ತೀರಿಸಿದ್ದೇನೆ. ಗಂಡು

ಮಗುವನ್ನು ಪಡೆದ ಪಿತೃಋಣದಿಂದಲೂ ಮುಕ್ತನಾಗಿದ್ದೇನೆ. ವಾನಪ್ರಸ್ಥಾಶ್ರಮದಲ್ಲಿ ಪ್ರವೇಶಿಸಿ ಅಖಂಡಭೂಮಂಡಲದಲ್ಲಿರುವ ಎಲ್ಲ ತೀರ್ಥಗಳಲ್ಲಿ ಮಿಂದು ಸಕಲ ಕ್ಷೇತ್ರಗಳಲ್ಲಿ ಭಗವದಾರಾಧನೆಯನ್ನು ಭಗವಂತನನ್ನು ಅವನನ್ನು ಸಂತೋಷ ಪಡಿಸಬೇಕೆಂದು ಕೊಳ್ಳುತ್ತಿದ್ದೇನೆ. ಆದುದರಿಂದ ಈ ಎಲ್ಲ ಸಾಂಸಾರಿಕ ವಿಷಯಗಳಿಂದ ಉಪರತನಾಗಿ ಯಾವುದಾದರೂ ಒಳ್ಳೇ ತೀರ್ಥದಲ್ಲಿ ನಿಂತುಕೊಂಡು ಬದುಕಿ ಇರುವವರೆಗೂ ತಪಾಚರಣೆ ಮಾಡಿ ಶ್ರೀಹರಿಯನ್ನು ಒಲಿಸಬೇಕೆಂದು ಸಂಕಲ್ಪಿಸಿದ್ದೇನೆ.

ಶಿವಶರ್ಮನು ತನ್ನ ಮಗನಾದ ವಿಷ್ಣುಶರ್ಮನ ಈ ಮಾತನ್ನು ಕೇಳಿ ಹಿಂದೆ ಈ ಮಗನು ಹುಟ್ಟಿದ ಸಂದರ್ಭದಲ್ಲಿ ಮನೆಗೆ ಆಗಮಿಸಿದ ಜ್ಯೋತಿರ್ವಿದ್ವಾಂಸರು ಹೇಳಿದ ಮಾತುಗಳನ್ನು ನೆನೆದುಕೊಂಡ. ಇದೆಲ್ಲವೂ ಭವಿಷ್ಯದಲ್ಲಿ ಬರೆದಿಟ್ಟ ಬ್ರಹ್ಮಲಿಪಿ, ಎಂಬುದನ್ನು ತಿಳಿದುಕೊಂಡ. ಮಗನನ್ನು ಕುರಿತು ಮಾತನಾಡಿದ.

**ಶಿವಶರ್ಮ:-** ಮಗು, ನೀನಿನ್ನೂ ಚಿಕ್ಕವ. ನೀನೇ ಈ ಎಲ್ಲ ವಿಷಯಗಳನ್ನು ವಿಷವೆಂದು ಭಾವಿಸಿ ಪರಿತ್ಯಾಗ ಮಾಡಿ ಕೇಶವನ ನಾಮರೂಪ ಅಮೃತ ಪಾನಮಾಡಲು ಹೊರಟಾಗ ಮುಪ್ಪಿನ ಮುದುಕನಾದ ನಾನು ಮಾತ್ರ ಮನೆಯಲ್ಲಿ ಹೇಗೆ ಇರಲಿ? ಆದುದರಿಂದ ನಿಜವಾಗಿ ವಿಚಾರಮಾಡಿದರೆ ನಿನಗಿಂತಲೂ ನಾನು ವಾನಪ್ರಸ್ಥ, ಅಥವಾ ಸಂನ್ಯಾಸಕ್ಕೂ ಅರ್ಹನಾಗಿದ್ದೇನೆ. ನನ್ನ ಮನಸ್ಸು ಸಾಂಸಾರಿಕ ವಿಷಯಗಳಿಂದ ವಿಮುಖವಾಗಿದೆ. ಕಾಡಿನಿಂದ ಹಿಡಿದು ತಂದ ಆನೆಯ ಮನಸ್ಸು ರಾಜಭವನದಲ್ಲಿ ಎಂದಿಗೂ ಸಮಾಧಾನವನ್ನು ಹೊಂದುವದಿಲ್ಲ. ಅದರಂತೆ ನನಗೂ ಸಹ ವೈರಾಗ್ಯ ಉದಿಸಿ, ಇಲ್ಲಿ ಸಮಾಧಾನವಿಲ್ಲ. ವಿಷವಿಷಯವಿದ್ದು, ಇದರಿಂದ ದೂರವಿರಲೇಬೇಕೆಂಬ ಬುದ್ಧಿ ತೀವ್ರವಾಗಿದೆ. ಆದುದರಿಂದ ನಾನೂ ಸಹ ನಿನ್ನೊಡನೆ ಅರಣ್ಯಕ್ಕೆ ಬಂದುಬಿಡುತ್ತೇನೆ. ಕುಟುಂಬದ ಭಾರವನ್ನು ನಿನ್ನ ತಮ್ಮನಾದ ಸುಶರ್ಮನು ನಿರ್ವಹಿಸಲು ಸಮರ್ಥನಿರುತ್ತಾನೆ. ಆದರೆ ನಾನು ಈಗ ಅರಣ್ಯಕ್ಕೆ ಹೊರಡುವ ಸಮಾಚಾರ ತಿಳಿದರೆ ನಿನ್ನ ತಾಯಿ, ಪರಮ ಪತಿವ್ರತೆ. ನನ್ನೊಡನೆಯೇ ಅರಣ್ಯಕ್ಕೂ ಬಂದು ಬಿಡುವಳು. ಆದುದರಿಂದ ನಿನ್ನ ತಾಯಿಗೆ, ಹಾಗೂ ನಿನ್ನ ಮಡದಿಗೆ ಯಾವ ಸಮಾಚಾರವನ್ನೂ ತಿಳಿಸುವದು ಬೇಡ. ಮನೆಯನ್ನು ಪರಿತ್ಯಜಿಸಿ ಅರಣ್ಯಕ್ಕೆ ಹೋಗಿ ಅಧ್ಯಾತ್ಮ ಚಿಂತನವನ್ನು ಮಾಡಿ ಶ್ರೀಹರಿಯ ಪರಮಾನುಗ್ರಹವನ್ನು ಪಡೆಯಲು ಪ್ರಯತ್ನಿಸೋಣ.

ತಂದೆಯ ಈ ಸಲಹೆ ಒಪ್ಪಿಗೆಯಾಯಿತು ವಿರಕ್ತ ಪುತ್ರನಾದ ವಿಷ್ಣುಶರ್ಮನಿಗೆ. ಇಬ್ಬರೂ ಸಮಾಲೋಚಿಸಿ ಆ ದಿನ ರಾತ್ರಿ ಕುಟುಂಬದವರೆಲ್ಲ ಮಲಗಿ ಕೊಂಡಾಗ ಮೆಲ್ಲಮೆಲ್ಲನೇ ಎದ್ದು ಮನೆಯಿಂದ ಹೊರಬಿದ್ದರು. ಊರು ಬಿಟ್ಟು ದಾರಿಗಿಳಿದು ಪುಣ್ಯ ತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತ ಯಾತ್ರಾಕ್ರಮದಿಂದ ಅವರು ಇಂದ್ರಪ್ರಸ್ಥನಗರಕ್ಕೆ ಬಂದರು. ಆ ಇಂದ್ರಪ್ರಸ್ಥಕ್ಕೆ ಬಂದಕೂಡಲೇ ಆ ವಿಷ್ಣುಶರ್ಮನಿಗೆ ತಾನು ಹಿಂದಿನ ಜನ್ಮದಲ್ಲಿ ಇಂದ್ರನಾಗಿದ್ದಾಗ ಇಲ್ಲಿ ನೆಟ್ಟ ಯಜ್ಞಸ್ತಂಭಗಳೂ, ಯೂಪಗಳೂ ಎಲ್ಲವೂ ನೆನಪಿಗೆ ಬಂದಿತು. ಆ ಜನ್ಮಾಂತರದಲ್ಲಿ ತನಗೆ ಸಾಕ್ಷಾತ್ ಶ್ರೀಹರಿಯ ಸಂದರ್ಶನವಾದದ್ದು, ಅವನ ಸ್ಮೃತಿಪಥಕ್ಕೆ ಬಂದಿತು. ಅಲ್ಲಿಯೇ ತನ್ನ ಪಕ್ಕದಲ್ಲಿರುವ ತನ್ನ ತಂದೆಯಾದ ಶಿವಶರ್ಮನನ್ನು ಕುರಿತು ಮಾತನಾಡಿದ.

**ವಿಷ್ಣುಶರ್ಮ:-** ತಂದೆಯೇ, ಹಿಂದಿನ ಜನ್ಮದಲ್ಲಿ ನಾನು ಕೇವಲ ನಿಷ್ಕಾಮನಾಗಿ "ವಿಷ್ಣುಪ್ರೇರಣಯಾ ವಿಷ್ಣುಪ್ರೀತ್ಯರ್ಥಂ" ಎಂದು ಈ ಸ್ಥಳದಲ್ಲಿಯೇ ಅನೇಕ ಯಜ್ಞಗಳನ್ನು ಮಾಡಿದ್ದೆ. ಅದರಿಂದ ಸುಪ್ರಸನ್ನನಾದ ಭಕ್ತವತ್ಸಲನಾದ ಕೇಶವ. ಅದೇ ಕಾಲದಲ್ಲಿ ನಾನು ಧಾನ್ಯಗಳನ್ನು ತುಂಬುವ 'ಪ್ರಸ್ಥ' ಎಂಬ ಮಾಪನದ ಪಾತ್ರಗಳಲ್ಲಿ ಮುತ್ತುರತ್ನಗಳನ್ನು ತುಂಬಿ ಸಪ್ತರ್ಷಿಗಳಿಗೆ, ಶ್ರೇಷ್ಠ ಬ್ರಾಹ್ಮಣರಿಗೆ ದಾನನೀಡಿದೆ. ಆ ಮಹಾನುಭಾವರಾದ ಬ್ರಹ್ಮರ್ಷಿಗಳು ನನಗೆ ಪರಮಾನುಗ್ರಹ ಮಾಡಿ ವಿಷ್ಣುವಿನಲ್ಲಿ ಅವ್ಯಭಿಚರಿತ ಭಕ್ತಿಯನ್ನು ನೀಡಿದರು. ಮತ್ತು ಸ್ವರ್ಗಕ್ಕಿಂತಲೂ ಉತ್ತಮವಾದ ಅಪವರ್ಗ 'ಅರ್ಥಾತ್ ಮೋಕ್ಷದ ಸುಖವು ನಿನಗೆ ದೊರೆಯಲಿ ಎಂದು ನನ್ನನ್ನು ಆಶೀರ್ವದಿಸಿದರು. ಮತ್ತು ಅದೇ ವೇಳೆಯಲ್ಲಿ ಬ್ರಹ್ಮಾದಿ ದೇವತೆಗಳಿಂದ ಈ ಕ್ಷೇತ್ರದಲ್ಲಿ ಅನೇಕ ತೀರ್ಥಗಳು ನಿರ್ಮಿಸಲ್ಪಟ್ಟವು. ಆದುದರಿಂದ ಈ ಇಂದ್ರಪ್ರಸ್ಥವು ಅಂದಿನಿಂದ 'ತೀರ್ಥತಮ' ಎಂದು ಪ್ರಸಿದ್ಧವಾಯಿತು, ಅಲ್ಲಿ ನೆರೆದ ಆ ಮಹಾತ್ಮರು "ಇದೇ ಸ್ಥಳದಲ್ಲಿ ನಿನಗೆ ಮರಣ" ಎಂದು ನನ್ನ ಭವಿಷ್ಯವನ್ನೂ ಉಸುರಿದ್ದಾರೆ. ಇಲ್ಲಿ ಮರಣಾನಂತರ ನನಗೆ ಜನ್ಮವಿಲ್ಲ ಕೊನೆಯ ಜನ್ಮವದೇ. ಅಲ್ಲಿಂದ ಶ್ರೀಹರಿಯ ಪಾದಕಮಲವನ್ನು ಸೇರುವೆನು. ಎಂದೂ ಅವರು ನುಡಿದಿದ್ದಾರೆ. ಈಗ ಅದೆಲ್ಲ ನನಗೆ ನೆನಪಿಗೆ ಬರತೊಡಗಿದೆ.

ಪೂಜ್ಯ ತಂದೆಯೇ, ನನ್ನ ಮಾತಿನ ಸತ್ಯತೆಯನ್ನು ನೀನು ಇಲ್ಲಿ ಕಾಣಬಹುದು. ಗಂಗಾ, ಸರಸ್ವತಿಯರನ್ನು ಆಗ ನಾನಿಲ್ಲಿ ಬರಮಾಡಿಕೊಂಡಿದ್ದೇನೆ. ಆ ಗಂಗಾ ಸರಸ್ವತಿಯರ ಸಂಗಮಸ್ಥಳವು ಇಲ್ಲಿಯೇ ನಿರ್ಮಾಣಗೊಂಡಿದೆ. ಇದು ಶಿವಕಾಂಚಿ, ಇದು ಗೋಕರ್ಣ, ಇದು ದ್ವಾರಕೆ, ಮಧುವನ, ಇದು ಕೋಶಲ, ಇದು ಅಯೋಧ್ಯೆ, ಇದು ಬದರಿಕಾಶ್ರಮ, ಇದು ಹರಿದ್ವಾರ, ಇದು ಪುಷ್ಕರ ಮತ್ತು ಇವು ಸಪ್ತರ್ಷಿಗಳ ಪುಣ್ಯಾಶ್ರಮಗಳು. ಇದು ನಿಗಮೋದ್ಬೋಧಕ ತೀರ್ಥ. ಇದನ್ನು ಬೃಹಸ್ಪತ್ಯಾಚಾರ್ಯರೇ ನಿರ್ಮಾಣಮಾಡಿದ್ದಾರೆ. ಇದು 'ಇಂದ್ರಪ್ರಸ್ಥ' ಎಂಬ ದೇವತೆಗಳಿಂದ ಪ್ರಸ್ಥಾಪಿತವಾದ ದಿವ್ಯಕ್ಷೇತ್ರ. ಇದು ಪೂರ್ವಪಶ್ಚಿಮದಲ್ಲಿ ಒಂದು ಯೋಜನ ವಿಸ್ತಾರವಾಗಿದೆ. ಕಾಲಿಂದೀನದಿಯ ದಕ್ಷಿಣಭಾಗದ ನಾಲ್ಕು ಯೋಜನ ಅವಧಿಯು ಇಂದ್ರಪ್ರಸ್ಥ ಕ್ಷೇತ್ರದ ಸೀಮೆಯಾಗಿರುತ್ತದೆ.

**ನಾರದ:-** ಮಗನ ಈ ಮಾತನ್ನು ಕೇಳಿ ಶಿವಶರ್ಮನಿಗೆ ಈ ವಿಷಯದಲ್ಲಿ ಸಂದೇಹ ಬಂದಿತು. ಅವನು ತನ್ನ ಮಗನಾದ ವಿಷ್ಣುಶರ್ಮನನ್ನು ಪ್ರಶ್ನೆ ಮಾಡಿದ.

**ಶಿವಶರ್ಮ:-** ವತ್ಸ, ನೀನೇನೋ ಹೇಳಿದೆ. ಜನ್ಮಾಂತರದಲ್ಲಿ ಇಂದ್ರನಾಗಿದ್ದೆ. ಆ ಕಾಲದಲ್ಲಿ ಇಲ್ಲಿ ಅನೇಕ ಯಜ್ಞಗಳನ್ನು ಮಾಡಿದೆ ಎಂಬುದಾಗಿ ನೀನು ಹೇಳಿದ ವಿಷಯದಲ್ಲಿ ನನಗೇಕೋ ಇನ್ನೂ ಸಂದೇಹ. ನೀನು ನನ್ನಲ್ಲಿಯೇ ವೇದ, ವೇದಾಂತಾದಿ ಶಿಕ್ಷಣ ಪಡೆದಿರುವಿ. ಆಗ ನಿನಗೆ ಪೂರ್ವಜನ್ಮದ ಸ್ಮರಣೆ ಇರಲಿಲ್ಲ. ಈ ಇಂದ್ರಪ್ರಸ್ಥದ ಪ್ರದೇಶಗಳ ವಿವರ ಪರಿಚಯವೂ ಇರಲಿಲ್ಲ. ಈ ಜಾತಿಸ್ಮರಣೆ ಹಾಗೂ ದಿವ್ಯ ಕ್ಷೇತ್ರಗಳ ಜ್ಞಾನ ನಿಗಗಾದುದು ಯಾವಾಗ? ಹೇಗೆ? ಇದಕ್ಕೆ ಕಾರಣವೇನು? ಇದೆಲ್ಲವನ್ನೂ ಕೇಳಲು ನನಗೆ ಕುತೂಹಲವುಂಟಾಗಿದೆ.

**ವಿಷ್ಣುಶರ್ಮ:-** ಪೂರ್ವಕಾಲದಲ್ಲಿ ನನಗೆ ಋಷಿಗಳು "ನಿನಗೆ ಜನ್ಮಾಂತರದಲ್ಲಿ ಪೂರ್ವಜನ್ಮಗಳು ಸ್ಮೃತಿಯು ಉದ್ಭವವಾಗಲಿ" ಎಂದು ವರವನ್ನು ನೀಡಿದ್ದಾರೆ.

ಆ ಋಷಿಗಳ ಮುಖಾಂತರವೇ ನಾನು ಈ ಇಂದ್ರಪ್ರಸ್ಥದ ಪ್ರಾದೇಶಿಕ ಅವಧಿ, ಅಂತರ, ಮೇರುಗಳನ್ನು ಚೆನ್ನಾಗಿ ಬಲ್ಲೆ. ತಂದೆಯೇ, ಈ ನಿಗಮೋದ್ಬೋಧಕ ತೀರ್ಥದಲ್ಲಿ ಸ್ನಾನ ಮಾಡು. ನಿನಗೂ ಸಹ ಜನ್ಮಾಂತರದ ಸ್ಮರಣೆಯು ಉದ್ಬುದ್ಧವಾಗುವದು. ಹಾಗೂ ನನ್ನ ಪೂರ್ವಜನ್ಮದ ವೃತ್ತಾಂತವನ್ನೂ ಈ ಜಲದ ಸ್ಪರ್ಶಮಾತ್ರದಿಂದಲೇ ಸ್ಮರಣಮಾಡಿಕೊಳ್ಳುವೆ. ನಾನು ಸತ್ಯವನ್ನೇ ನುಡಿಯುತ್ತಿದ್ದೇನೆ. ಸಂದೇಹ ಬೇಡ.

**ನಾರದ:-** ವಿಷ್ಣುಶರ್ಮನ ಈ ಮಾತನ್ನು ಕೇಳಿ ಶಿವಶರ್ಮನು ಕೂಡಲೇ ಆ ನಿಗಮೋದ್ಬೋಧಕ ತೀರ್ಥದಲ್ಲಿ ಸ್ನಾನಮಾಡಿದ. ಅವನಿಗೂ ತನ್ನ ಜನ್ಮಾಂತರದ ಸಂಗತಿಗಳನ್ನು ಅರಿಯುವ ಕುತೂಹಲ. ಅಷ್ಟರಲ್ಲಿ ಒಂದು ಸಿಂಹವು ಒಬ್ಬ ಬೇಡನನ್ನು ಬೆನ್ನಟ್ಟಿ ಅಲ್ಲಿಗೆ ಧಾವಿಸಿ ಬಂದಿತು. ಆಗ ಆ ಸಿಂಹದ ಹೆದರಿಕೆಯಿಂದ ಬೆದರಿದ ಆ ಬೇಡನು ದೀರ್ಘಉಸಿರು ಬಿಡುತ್ತ ಶ್ರಮವಿಹ್ವಲನಾಗಿ ಅಲ್ಲಿಗೆ ಬಂದ. ದಾರಿ ಹೋಕರನ್ನೆಲ್ಲ ಬೆದರಿಸಿ, ಅವರಿಗೆ ಭಯಂಕರನಾಗಿದ್ದ ಆ ಬೇಡಪುರುಷ. ಕೊಲೆ, ಸುಲಿಗೆ, ಮುಂತಾದವನ್ನು ಲೀಲಾಜಾಲವಾಗಿ ಮಾಡುತ್ತಿದ್ದ. ಬೆಕ್ಕಿನ ಕಣ್ಣು, ಕಪ್ಪುಕಾಯ, ಕೆದರಿದ ಕೆಂಗೂದಲು, ಕೈಯಲ್ಲಿ ಹರಿತ ಖಡ್ಗ, ಹಿಂದೆ ಬೆನ್ನಟ್ಟಿದ ಉಗ್ರಸ್ವರೂಪದ ಸಿಂಹವನ್ನು ಹಿಂದಿರುಗಿ ನೋಡುತ್ತ ನೋಡುತ್ತ ಮುಂದೆ ಓಡುತ್ತಲಿದ್ದ ಆ ಬೇಡನು ಶಿವಶರ್ಮ, ವಿಷ್ಣುಶರ್ಮರಿದ್ದಲ್ಲಿಗೇ ಬಂದ.

ಆ ಭಯಂಕರ ಸಿಂಹವನ್ನು ನೋಡಿ ತಂದೆ ಮಕ್ಕಳಿಬ್ಬರೂ ಗಾಬರಿಗೊಂಡು "ಗೋವಿಂದಾ ! ನಾರಾಯಣಾ ! ಈ ಅಪಮೃತ್ಯುವಿನಿಂದ ನನ್ನನ್ನು ರಕ್ಷಿಸು" ಎಂದು ಕೂಗುತ್ತ ಸಮೀಪದ ಮರವನ್ನು ಏರಿ ಕುಳಿತರು. ಬೇಡನೂ ಆ ಮರವನ್ನು ಏರಲು ಮೊದಲು ಮಾಡಿದ. ವೇಗವಾಗಿ ಅಲ್ಲಿಗೆ ಬಂದ ಸಿಂಹವು ಆ ಬೇಡನಿಗೆ ಮರ ಏರಗೊಡಲಿಲ್ಲ. ದಪ್ಪ ಬೊಡ್ಡೆಯ ಆ ಮರವನ್ನು ಅವಸರವಾಗಿ ಏರಲು ಉಪಕ್ರಮಿಸಿದ ಆ ಬೇಡನ ಕಾಲಿಗೆ ಬಾಯಿಹಾಕಿ ಜಗ್ಗಿತು. ಮುಕ್ಕರಿಸಿ ಬಿದ್ದ ಆ ಬೇಡನ ಮೇಲೆ ಆಕ್ರಮಣ ಮಾಡಿತು. ಬೋರಲಾಗಿ ನೆಲಕ್ಕೆ ಬಿದ್ದಿದ್ದರೂ ಕೈಯಿಂದ ಖಡ್ಗಬಿಟ್ಟಿರದ ಆ ಬೇಡನು, ಶಕ್ತಿಯನ್ನೆಲ್ಲ ಒಗ್ಗೂಡಿಸಿ ಕೊನೆಯ ಪ್ರಯತ್ನವೆಂದು ಆ ಹರಿತವಾದ ಖಡ್ಗವನ್ನು ತನ್ನ ಮೇಲೆ ಏರಿದ ಸಿಂಹದ ಹೊಟ್ಟೆಯೊಳಕ್ಕೆ ಚುಚ್ಚಿದ ಅದೃಷ್ಟವಶಾತ್ ನೇರವಾಗಿ ಸಿಂಹದ ಹೊಟ್ಟೆಯೊಳಕ್ಕೇ ಸೇರಿದ ಆ ಖಡ್ಗವು ಸಿಂಹದ ಕರುಳನ್ನು ಸೀಳಿಹಾಕಿತು. ಸಿಂಹವು ಭಯಂಕವರಾದ ಧ್ವನಿಯನ್ನು ಮಾಡಿ ಅಲ್ಲಿಯೇ ಕುಸಿದು ಬಿದ್ದು ಆಸು ನೀಗಿತು. ಆ ಸಿಂಹದ ಆಕ್ರಮಣದಿಂದ ಅರೆಸತ್ತ ಆ ಬೇಡನೂ ನೋವಿನಿಂದ ಚೇತರಿಸಿಕೊಳ್ಳಲಾಗದೇ ಮೃತನಾದ.

ಆ ಸಿಂಹ ಮತ್ತು ಬೇಡ ಸತ್ತು ನೆಲಕ್ಕೆ ಬಿದ್ದ ಮೇಲೆ ಚಮತ್ಕಾರವೊಂದು ಘಟಿಸಿತು. ಅಲ್ಲಿಗೆ ಆಕಾಶದಿಂದ ಎರಡು ವಿಮಾನಗಳು ಬಂದವು. ಅದರಲ್ಲಿ ಇಬ್ಬರು ಗಣಾಧೀಶರು ಕುಳಿತುಕ ಕೊಂಡಿದ್ದರು. ಸುಂದರವಾದ ಆಕಾರ ಅವರದು. ಶಂಖ, ಚಕ್ರ, ಗದಾ, ಪದ್ಮ ಧರಿಸಿ, ಪೀತಾಂಬರವುಟ್ಟು ಅನೇಕ ಮುತ್ತುರತ್ನಗಳ ಆಭರಣಯುಕ್ತರಾದ ತೇಜಃಪುಂಜ ಗಣದೇವತೆಗಳಿಬ್ಬರೂ ವಿಮಾನದಿಂದ ಇಳಿದುಬಂದು ಈ ಸಿಂಹ ಹಾಗೂ ಬೇಡ ಇಬ್ಬರೂ ಸತ್ತುಬಿದ್ದ ಸ್ಥಳಕ್ಕೆ ಆಗಮಿಸಿದರು. ಅಷ್ಟರಲ್ಲಿ ಆ ಭಿಲ್ಲ ಹಾಗೂ ಸಿಂಹದ ಚೇತನಗಳು

ತಮ್ಮ ಮೊದಲಿನ ಶರೀರ ಬಿಟ್ಟು ದಿವ್ಯವಾದ ಶರೀರ ಹೊಂದಿ ನಿಂತುಕೊಂಡಿದ್ದರು. ಆಗ ವಿಮಾನಾರೂಢರಾಗಿ ಬಂದ ಹರಿಯ ಪಾರ್ಷದರು ಇವರಿಬ್ಬರ ಹತ್ತಿರ ಬಂದು ನುಡಿದರು.

**ವೈಕುಂಠಗಣಾಧೀಶರು:-** ನರಶ್ರೇಷ್ಠನಾದ ಕಿರಾತ ! ಹಾಗೂ ಮೃಗೇಂದ್ರ ! ನಾವಿಬ್ಬರೂ ವೈಕುಂಠಲೋಕದಿಂದ ಆಗಮಿಸಿದ ಶ್ರೀಹರಿಯ ಕಿಂಕರರು, ನಿಮ್ಮನ್ನು ವೈಕುಂಠಲೋಕಕ್ಕೆ ಕರೆದೊಯ್ಯಲು ಬಂದಿದ್ದೇವೆ. ಇಲ್ಲಿ ಕಾಣುವ ವಿಮಾನವನ್ನು ಆರೋಹಣ ಮಾಡಿರಿ.

ಈ ಮಾತನ್ನು ಕೇಳಿ ಆಶ್ಚರ್ಯಚಕಿತರಾದ ಆ ಸಿಂಹ ಹಾಗೂ ಬೇಡರು ತಮಗೆ ಆಕಸ್ಮಿಕವಾಗಿ ಒದಗಿದ ಯೋಗವನ್ನು ಸ್ವೀಕರಿಸಿ ವಿಮಾನದಲ್ಲಿ ಆರೂಢರಾದರು. ಮತ್ತು ಆ ಗಣಾಧೀಶರನ್ನು ಪ್ರಶ್ನಿಸಿದರು.

**ಸಿಂಹ ಹಾಗೂ ಬೇಡ:-** ಪೂಜ್ಯರೇ, ನಿಮ್ಮ ದರ್ಶನದಿಂದ ನಮಗೆ ನಿಜವಾದ ಜ್ಞಾನವುಂಟಾಗಿದೆ. ಆದರೆ ನಾವು ಈ ಜನ್ಮದಲ್ಲಂತೂ ಪುಣ್ಯವನ್ನೂ ಮಾಡಲಿಲ್ಲ. ನಮ್ಮ ಆಹಾರ ಕೇವಲ ಮಾಂಸ. ನಮ್ಮ ಉದ್ಯೋಗ ಪ್ರಾಣಿಹಿಂಸೆ. ನಮ್ಮ ಇಂದ್ರಿಯಗಳು ಪ್ರಾಣಿಗಳನ್ನು ಹಿಂಸಿಸುವಲ್ಲಿ ಮತ್ತು ಭೋಗದಲ್ಲಿ ಸದಾ ಆಸಕ್ತ. ನಮ್ಮನ್ನು ಕಂಡರೇ ಪ್ರಾಣಿಗಳು, ಜನರು ಹೌಹಾರಿ ಹೋಗುತ್ತಿದ್ದರು. ಇಂಥ ಪಾಪಿಗಳಿಗೆ ಈ ದುರ್ಯೋನಿಯಿಂದ ಮೋಚನ, ನಿಮ್ಮಂಥ ದೈವೀಪುರುಷರ ದರ್ಶನ, ನಮಗೂ ಈ ಭವ್ಯದೇಹದ ಪ್ರಾಪ್ತಿ. ಇದೆಲ್ಲ ಹೇಗೆ? ಯಾವ ಪೂರ್ವಜನ್ಮದ ಪುಣ್ಯಪ್ರಭಾವದಿಂದ? ದಯವಿಟ್ಟು ತಿಳಿಸಿರಿ.

**ವಿಷ್ಣುದೂತರು:-** ನೀವಿಬ್ಬರೂ ಬೃಹಸ್ಪತ್ಯಾಚಾರ್ಯರು ನಿರ್ಮಿಸಿದ ನಿಗಮೋದ್ಬೋಧಕ ತೀರ್ಥದಲ್ಲಿ ಮರಣವನ್ನು ಹೊಂದಿದ್ದೀರಿ. ಹಾಗೂ ಇಲ್ಲಿಯೇ ನಿಂತುಕೊಂಡ ವಿಷ್ಣುಶರ್ಮ ಎಂಬ ಭಗವದ್ಭಕ್ತನ ದರ್ಶನವನ್ನು ಪಡೆದಿದ್ದೀರಿ. ಇದರ ಫಲವಾಗಿ ನಿಮಗೆ ಇಂಥ ವಿಷ್ಣುಪಾರ್ಷದರ ಸಮಾನವಾದ ಶರೀರ ಕಾಂತಿಗಳು ಲಭಿಸಿರುತ್ತವೆ. ಶೀಘ್ರವೇ ನಿಮಗೆ ಭಗವಂತನ ದಿವ್ಯವಾದ ಪದಪ್ರಾಪ್ತಿಯೂ ಆಗುವದು. ಇದೆಲ್ಲ ಈ ಬೃಹಸ್ಪತಿ ತೀರ್ಥದಲ್ಲಿ ಸ್ನಾನಮಾಡಿದ ಪುಣ್ಯಪ್ರಭಾವದಿಂದ ನಿಮಗೆ ಲಭ್ಯವಾಗಿದೆ. ಸೂರ್ಯೋದಯವಾದ ಕೂಡಲೇ ಅಂಧಕಾರವೆಲ್ಲ ನಾಶವಾಗುವಂತೆ ಇಲ್ಲಿನ ದರ್ಶನ ಅಥವಾ ಸ್ನಾನ ಆದ ಕೂಡಲೇ ಆ ಜೀವಿಯ ಅಜ್ಞಾನ, ದುಃಖ, ದೈನ್ಯಗಳೆಲ್ಲ ನಷ್ಟವಾಗಿ ಬಿಡುವವು ಈ ಕ್ಷೇತ್ರವು ಇಂದ್ರಪ್ರಸ್ಥ ಎಂಬ ಹೆಸರಿನಿಂದ ಮುಂದೆ ಜಗತ್ತಿನಲ್ಲಿ ಪ್ರಸಿದ್ಧವಾಗುವದು. ಸಾಕ್ಷಾತ್ ಶ್ರೀಹರಿಯು ಇಂದ್ರನಿಗೆ ಈ ಸ್ಥಳದಲ್ಲಿ ಅವನು ಮಾಡಿದ ಯಜ್ಞಗಳಿಂದ ಪರಿತುಷ್ಟನಾಗಿ ವರ ನೀಡಿದ.

**ನಾರದ:-** ಹೀಗೆ ಹೇಳಿ ಆ ಇಬ್ಬರೂ ವಿಷ್ಣುದೂತರು ತಮ್ಮ ಸ್ಥಾನವನ್ನು ಕುರಿತು ತೆರಳಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಇಂದ್ರಪ್ರಸ್ಥದಲ್ಲಿ ನಾನಾ ತೀರ್ಥ ಸ್ಥಾಪನೆ ವಿಷ್ಣುಶರ್ಮನ ಕಥೆ ಎಂಬ*
*ನೂರ ಎಂಬತ್ತೆರಡನೇಯ ಅಧ್ಯಾಯ ಮುಗಿದುದು*

—o—

## ಇಂದ್ರಪ್ರಸ್ಥದ ಮಾಹಾತ್ಮ್ಯ; ಶಿವಶರ್ಮನ ಪೂರ್ವಜನ್ಮದ ವೃತ್ತಾಂತ

ಅಧ್ಯಾಯ - ೧೮೩

**ನಾರದ:-** ಮರದ ಮೇಲೆ ಹತ್ತಿ ಕುಳಿತ ತಂದೆ, ಮಗ ಶಿವಶರ್ಮ ಹಾಗೂ ವಿಷ್ಣುಶರ್ಮರು ತಮ್ಮ ಕಣ್ಣೆದುರೇ ನೋಡಿದ ಈ ಘಟನೆಯಿಂದ ಮೂಕವಿಸ್ಮಿತರಾದರು. ಅದರೊಡನೆಯೇ ನಿಗಮೋದ್ಬೋಧ ತೀರ್ಥ ಮಹಿಮೆಯನ್ನು ಮನಗಂಡ ಶಿವಶರ್ಮನು ತನ್ನ ಮಗನನ್ನು ಕುರಿತು ಮಾತನಾಡಿದ.

**ಶಿವಶರ್ಮ:-** ಋಷಿಗಳು ತಪಸ್ಸು ಮಾಡಿಯೂ ಪಡೆಯಲಾಗದ ಶ್ರೀಹರಿಯ ಪದವನ್ನು ಈ ಕ್ರೂರ ಜೀವಿಗಳಾದ ಬೇಡ ಹಾಗೂ ಸಿಂಹ ಪಡೆದರು. ಇದೆಲ್ಲವೂ ಈ ಬೃಹಸ್ಪತಿ ತೀರ್ಥದ ಮಹಿಮೆ. ದೇವಾಧಿದೇವತೆಗಳಿಗೂ ಮಹಾ ಪ್ರಯತ್ನದಿಂದ ಪಡೆಯಲಾಗದ ಆ ಶ್ರೀಹರಿಯ ಸಾರೂಪ್ಯ ಮೋಕ್ಷವೆಲ್ಲಿ? ಈ ಭ್ರಷ್ಟ ದುಷ್ಟ ಕಿರಾತ ಸಿಂಹರೂಪವಾದ ಪಾಪಿಷ್ಠ ಜೀವಿಗಳೆಲ್ಲಿ? ಆದರೂ ಈ ತೀರ್ಥದ ಅತ್ಯದ್ಭುತ ಮಹಿಮೆಯಿಂದ ಅವರಿಬ್ಬರೂ ದುರ್ಲಭವಾದ ಮೋಕ್ಷಪದಗಾಮಿಗಳಾದರು.

ಹೀಗೆ ಪ್ರತ್ಯಕ್ಷವಾಗಿ ಆ ಬೃಹಸ್ಪತಿ ತೀರ್ಥದ ಮಹಿಮೆಯನ್ನು ಕಂಡು ಶಿವಶರ್ಮನು ಅದರಲ್ಲಿ ಸ್ನಾನಮಾಡಿದನು. ''ಅಶ್ವಕ್ರಾಂತ'' ಎಂಬ ಶ್ಲೋಕವನ್ನು ಹೇಳಿ ತೀರದ ಮೃತ್ತಿಕೆಯನ್ನು ಮೈಗೆ ಲೇಪಿಸಿಕೊಂಡು ಮೃತ್ತಿಕಾಸ್ನಾನವನ್ನು ಮಾಡಿ ಪ್ರವಾಹಕ್ಕಭಿಮುಖನಾಗಿ ಪುನಃ ಮುಳುಗಿ ಶ್ರೀಹರಿಯನ್ನು ಸ್ಮರಿಸಿ, ಲೋಕಪಾವನೆಯಾದ ಗಂಗೆಯ ಸ್ಮರಣೆಯನ್ನು ಮಾಡಿ ಅಯೋಧ್ಯಾ, ಮಥುರಾ, ಮಾಯಾ, ಎಂದು ಸಪ್ತಕ್ಷೇತ್ರಗಳನ್ನು ನೆನೆಸುತ್ತ, ಗೋವಿಂದನನ್ನು ಧ್ಯಾನಿಸುತ್ತ ನೀರಿನಲ್ಲಿ ಮುಳುಗು ಹಾಕಿದ. ಮಡಿ ಬಟ್ಟೆ ಉಟ್ಟು, ತಿಲಕಧರಿಸಿ, ಸಂಧ್ಯಾವಂದನೆ, ದೇವತರ್ಪಣ, ಪೂಜೆ, ನೈವೇದ್ಯ ಮುಂತಾದ ವಿಧಿಪೂರ್ವಕವಾದ ಭಗವಂತನ ಆರಾಧನೆಯನ್ನು ಮಾಡಿ ಮುಗಿಸಿದ. ಆಮೇಲೆ ಪೂರ್ವಜನ್ಮದ ಕರ್ಮಗಳನ್ನು ನೆನೆದು ಮಾತನಾಡಿದ.

**ವಿಷ್ಣುಶರ್ಮ:-** ಈಗ ನನಗೆ ಪೂರ್ವಜನ್ಮದ ಸ್ಮರಣೆಯು ಸ್ಪಷ್ಟವಾಗಿ ಬಂದಿರುತ್ತದೆ. ನನ್ನ ಜನ್ಮಾಂತರ ಕಥೆಯನ್ನು ನಿನಗೆ ಹೇಳುವೆ ಕೇಳು.

ನಾನು ಪೂರ್ವಕಾಲದಲ್ಲಿ ಸಿರಿವಂತರಾದ ವೈಶ್ಯರ ಕುಲದಲ್ಲಿ ಹುಟ್ಟಿದೆ. ಕಾನ್ಯಕುಬ್ಜ ನಗರದಲ್ಲಿ ವ್ಯಾಪಾರ ಉದ್ಯೋಗವನ್ನು ಮಾಡುತ್ತ ಇದ್ದ ನನ್ನ ತಂದೆಯು ಅದರಲ್ಲಿ ಹೇರಳ ಹಣಸಂಪಾದಿಸಿದ. ಮನೆಯಲ್ಲಿ ಅಪಾರವಾದ ಐಶ್ವರ್ಯವಿದ್ದರೂ 'ಶರಭ' ಎಂಬ ಹೆಸರಿನ ಆ ನನ್ನ ತಂದೆಗೆ ಬಹುಕಾಲ ಸಂತಾನವೇ ಇರಲಿಲ್ಲ. ಇದಕ್ಕಾಗಿ ಸಂತತಿಗಾಗಿ ಅಂತರಂಗದಲ್ಲಿ ಬಹುವಾಗಿ ಕೊರಗಿದ. ಮುಪ್ಪು ಆವರಿಸಿತು. ಸಂತಾನಾಭಾವದ ಚಿಂತೆ ಇನ್ನೂ ಹೆಚ್ಚಾಯಿತು. ''ನಾನು ಇಷ್ಟು ಹಣವನ್ನುಗಳಿಸಿದ್ದೆಲ್ಲವೂ ವ್ಯರ್ಥವಾಯಿತು.'' ಎಂದು ನೆನೆನೆದು ಗೋಳಾಡಿದ.

**ಪ್ರೀಣಾತಿ ಸಂತತಿಃ ಶುದ್ಧಾ ಸುಮನಃ ಪಿತೃಮಾನವಾನ್ ।**
**ಮಿತ್ರಪ್ರತ್ಯರ್ಥ್ಯದಾಸೀನಾನ್ ಸೂನೃತಾ ವಾಗ್ಯಥೇರಿತಾ ॥**

''ಸತ್ಯ ಹಾಗೂ ಮಧುರವಾದ ಮಾತು, ಮಿತ್ರರನ್ನೂ, ವೈರಿಗಳನ್ನೂ, ಉದಾಸೀನರನ್ನೂ ಸಂತೋಷಪಡಿಸಿ ಗೆಲ್ಲುವಂತೆ, ಒಳ್ಳೇ ಸದ್ಗುಣಿಯಾದ ಸಂತತಿಯು ದೇವತೆಗಳನ್ನೂ, ಪಿತೃಗಳನ್ನೂ, ಮಾನವರನ್ನೂ ಈ ಮೂವರನ್ನೂ ಸಂತೋಷ ಗೊಳಿಸುವದು.'' ಚಂದ್ರನಿಂದ ಸಮುದ್ರ ಉಕ್ಕೇರುವಂತೆ ಯೋಗ್ಯನಾದ ಪುತ್ರನಿಂದ ಮನೆತನದ ಕೀರ್ತಿಯು ದಿಗಂತ ವಿಶ್ರಾಂತವಾಗುವದು. ಆದುದರಿಂದ ಮಾನವರು

ಮಿಂಚಿನಂತೆ ಚಂಚಲವಾದ ಈ ಜೀವನದಲ್ಲಿ ಮಕ್ಕಳನ್ನು ಹೇಗಾದರೂ ಮಾಡಿ ಪಡೆಯಬೇಕು. ದೇವತಾರಾಧನೆ ಮಾಡಬೇಕು.

ಹೀಗೆ ಆ ಶರಭನು ಖೇದದಿಂದ ವಿಚಾರಮಾಡುತ್ತ ಕುಳಿತಾಗ ಒಮ್ಮೆಲೇ ಅವನ ಮನೆಗೆ ಅತೀಂದ್ರಿಯ ಜ್ಞಾನನಿಧಿಗಳಾದ ದೇವಲ ಮಹರ್ಷಿಗಳು ಆಗಮಿಸಿದರು. ಅವರನ್ನು ಕಂಡ ಶರಭನು ಎದ್ದು ನಿಂತು ಸ್ವಾಗತಿಸಿ, ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಯೋಗ್ಯವಾದ ಆಸನದಲ್ಲಿ ಕುಳ್ಳಿರಿಸಿ ಕೈಮುಗಿದು ಕುಶಲ ಪ್ರಶ್ನೆ ಮಾಡಿದ.

**ಶರಭ:-** ಮುನಿಶ್ರೇಷ್ಠರೇ, ತಾವು ನನ್ನ ಮನೆಗೆ ಬಂದದ್ದು ನನ್ನ ಭಾಗ್ಯೋದಯದ ಪರ್ವಕಾಲ ತೆರದಂತಾಗಿದೆ. ಪೂಜ್ಯರೇ, ತಾವು ಇಲ್ಲಿಯ ವರೆಗೆ ದಯೆ ಮಾಡಿಸಿದ ಕಾರಣವನ್ನು ತಿಳಿಸಿ, ಈ ಕಿಂಕರನನ್ನು ಅನುಗ್ರಹಿಸಬೇಕು. ತಮ್ಮ ಸೇವೆಗೆ ನಾನು ಸಿದ್ಧ.

**ದೇವಲ:-** ವೈಶ್ಯಶ್ರೇಷ್ಠ, ನೀನು ವಿಪುಲವಾಗಿ ದ್ರವ್ಯವನ್ನು ಸಂಪಾದಿಸಿರುವೆ ಮನೆ ಸಂಪತ್ಸಮೃದ್ಧವಾಗಿದೆ. ಆದರೂ ನಿನ್ನ ಮುಖದ ಮೇಲೆ ವಿಷಾದದ ಛಾಯೆ. ಕಣ್ಣುಗಳಲ್ಲಿ ದುಃಖದ ಮಡುವು. ಮುಖದಲ್ಲೆಲ್ಲ ದೀನತೆ ಮೂಡಿದೆ. ಉತ್ಸಾಹಶೂನ್ಯ ನಿಲುವು. ಇದಕ್ಕೆ ಕಾರಣವೇನು?

**ಶರಭ:-** ತಪೋಧನರೇ, ತಮ್ಮ ಆಶೀರ್ವಾದದಿಂದ ನಾನು ಸಂಪತ್ಸಮೃದ್ಧನಾದರೂ ನನಗೆ ಸಂತತಿಯಿಲ್ಲ. ಪಿತೃಋಣವನ್ನು ನಾನು ತೀರಿಸಲಿಲ್ಲ ಎಂಬ ಚಿಂತೆ ನನ್ನನ್ನು ಬಹುವಾಗಿ ಬಾಧಿಸುತ್ತಲಿದೆ. ಈ ಕೊರಗಿನಿಂದಲೇ ನಾನು ಕೃಶನಾಗಿದ್ದೇನೆ. ಮಹಾನುಭಾವರಾದ ತಾವು ಹೇಗಾದರೂ ಮಾಡಿ ನನ್ನ ಸಮಸ್ಯೆಯನ್ನು ಪರಿಹರಿಸಿ ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಳ್ಳುವೆ.

ದೇವಲ ಋಷಿಗಳು ಜ್ಞಾನದೃಷ್ಟಿಯಿಂದ ಆ ವೈಶ್ಯನ ಸಂತಾನ ಪ್ರತಿಬಂಧವನ್ನು ತಿಳಿದು ಮಾತನಾಡಿದರು.

**ದೇವಲ:-** ಒಮ್ಮೆ ನಿನ್ನ ಧರ್ಮಪತ್ನಿಯು ಪಾರ್ವತಿದೇವಿಯನ್ನು ಆರಾಧಿಸಿ ಹರಕೆಯೊಂದನ್ನು ಹೊತ್ತಳು. ''ಮಹಾತಾಯಿಯಾದ ಭವಾನಿ! ನಿನ್ನ ದಯೆಯಿಂದ ನಾನು ಗರ್ಭಿಣಿಯಾದರೆ ನಿನಗೆ ವಿಶೇಷ ಪೂಜೆಯನ್ನು ಮಾಡಿಸುತ್ತೇನೆ. ದಯಮಾಡಿ ನನಗೆ ಸಂತತಿಯನ್ನು ಪ್ರದಾನಮಾಡು.''

ಮುಂದೆ ಕೆಲ ದಿನ ಕಳೆದ ಬಳಿಕ ಆ ಪಾರ್ವತಿಯ ಅನುಗ್ರಹದಿಂದ ನಿನ್ನ ಹೆಂಡತಿಯು ಗರ್ಭಿಣಿಯಾದಳು. ಆದರೆ ದೇವಿಗೆ ತಾನು ಹೊತ್ತ ಹರಕೆಯನ್ನು ನೆರವೇರಿಸಲೇ ಇಲ್ಲ. ಅವಳ ಆಪ್ತಗೆಳತಿಯರು ಅವಳಿಗೆ ಅವಳು ಹೊತ್ತ ಹರಕೆಯನ್ನು ಜ್ಞಾಪಿಸಿದರು. ಇಲ್ಲದಿದ್ದರೆ ನಿನ್ನ ಸುಖಪ್ರಸವಕ್ಕೆ ತೊಂದರೆಯಾಗಬಹುದು.

**ದೋಷಿತಾ ರೋಷಿತಾಶ್ಚಾತ್ರ ದೇವ್ಯೋ ಹಿ ವರ ಶಾಪದಾಃ ।**

''ದೇವದೇವಿಯನ್ನುಸಂತೋಷಪಡಿಸಿದರೆ ವರವನ್ನು ನೀಡುತ್ತಾರೆ. ಅವರನ್ನು ನಾವು ಕುಪಿತರನ್ನಾಗಿ ಮಾಡಿದರೆ ಶಾಪವನ್ನು ಕೊಡುತ್ತಾರೆ. ಆದುದರಿಂದ ಸಖಿ ! ನೀನು ಆ ಮಹಾತಾಯಿಯ ಪೂಜೆಯನ್ನು ಮಾಡು.'' ಎಂದು ಗೆಳತಿಯರು ಉಪದೇಶಿಸಿದರು.

ಆಗ ನಿನ್ನ ಧರ್ಮಪತ್ನಿಯು ಗೆಳತಿಯರ ಮಾತಿಗೆ ಒಪ್ಪಿದಳು. ನಿನ್ನಲ್ಲಿಗೆ ಬಂದು ವಿಷಯವನ್ನು ನಿವೇದಿಸಿ ತಾನು ಗರ್ಭಿಣಿಯಾದರೆ ಪಾರ್ವತಿಗೆ ಪೂಜೆ ಸಲ್ಲಿಸುವದಾಗಿ ಹರಕೆ ಹೊತ್ತಿರುವುದಾಗಿ ಅದನ್ನು ಪೂರೈಸಬೇಕಾಗಿ ಪ್ರಾರ್ಥಿಸಿದಳು. ನೆಚ್ಚಿನ ಮಡದಿಯ ಬಯಕೆಯನ್ನು ಪೂರೈಸಲು ನೀನು ಸಿದ್ಧನಾದಿ. ಸೇವಕರನ್ನು ಕರೆದು ಜೇನು, ಪುಷ್ಪ, ಗಂಧ

ಇತ್ಯಾದಿ ನಾನಾ ಬಗೆಯ ಪೂಜಾಸಾಮಗ್ರಿಗಳನ್ನು ತರಲು ಆಜ್ಞಾಪಿಸಿದಿ. ಸಾಮಗ್ರಿಗಳು ಸಿದ್ಧವಾದವು. ಆಗ ನಿನ್ನ ಧರ್ಮಪತ್ನಿಯು ತನ್ನ ಸಖಿಯರನ್ನು ಕರೆದು ಹೀಗೆ ನುಡಿದಳು.

**ಧರ್ಮಪತ್ನಿ:-** ಪೂಜಾಸಾಮಗ್ರಿಗಳೆಲ್ಲ ಸಿದ್ಧವಾಗಿವೆ. ನೀವೆಲ್ಲ ಸೇರಿ ಈ ಸಾಮಗ್ರಿಗಳೊಡನೆ ದೇವಿಯ ಬಳಿ ಹೋಗಿ ಅವಳನ್ನು ಪೂಜಿಸಿ ಸಂತೋಷಗೊಳಿಸಿರಿ. ನಾನು ಬರುವಂತಿಲ್ಲ. ನಮ್ಮ ಮನೆತನದಲ್ಲಿ ಗರ್ಭಿಣೀ ಸ್ತ್ರೀಯರು ಮನೆಯಿಂದ ಹೊರಹೋಗುವಂತಿಲ್ಲ ಆದುದರಿಂದ ನೀವು ಹೋಗಿ ಬನ್ನಿ.

ಸಖಿಯರೆಲ್ಲ ಸೇರಿ ಹಾಗೆಯೇ ಆಗಲೆಂದು ಒಪ್ಪಿ. ಪೂಜಾಸಾಮಗ್ರಿಗಳೊಡನೆ ಆ ದೇವಿಯ ಆಲಯಕ್ಕೆ ನಡೆದರು. ಪ್ರಶಾಂತ ಪರಿಸರದಲ್ಲಿ ಪ್ರತಿಷ್ಠಾಪಿತವಾದ ಆ ದೇವಿಯನ್ನು ಬಗೆಬಗೆಯಾಗಿ ಅರ್ಚಿಸಿ ಬೇಡಿಕೊಂಡರು. ''ಜಗದಂಬೆ, ನಿನಗೆ ನಮ್ಮ ನಮಸ್ಕಾರ. ನಮ್ಮೆಲ್ಲರಿಗೂ ಕಲ್ಯಾಣವನ್ನುಂಟುಮಾಡು. ತಾಯಿ, ಶರಭನೆಂಬ ವೈಶ್ಯನ ಹೆಂಡತಿಯು ನಿನ್ನ ಅನುಗ್ರಹದಿಂದಲೇ ಗರ್ಭಿಣಿಯಾಗಿದ್ದಾಳೆ. ನಿನಗೆ ಹೊತ್ತ ಹರಕೆಯನ್ನು ತೀರಿಸಲು ಸಕಲಸಾಮಗ್ರಿಗಳೊಡನೆ ನಮ್ಮನ್ನು ನಿನ್ನ ಅರ್ಚನೆಗೆ ಕಳುಹಿಸಿದ್ದಾಳೆ. ಅವಳ ಮನೆತನದ ಸಂಪ್ರದಾಯದಂತೆ ಅವಳು ಇಲ್ಲಿಗೆ ಬರಲಾಗಲಿಲ್ಲ. ತಾಯಿ, ನಮ್ಮ ಈ ಪೂಜೆಯಿಂದ ಸಂತುಷ್ಟಳಾಗಿ ಅವಳನ್ನು ಅನುಗ್ರಹಿಸು. ಈ ಬಲಿಯನ್ನೂ ಸ್ವೀಕರಿಸು.'' ಎಂದು ಬಲಿಯನ್ನೂ ಸಮರ್ಪಿಸಿದರು.

ಆ ಮಹಾತಾಯಿಯನ್ನು ಚಂದನ, ಗಂಧಾದಿಗಳಿಂದ ಅಲಂಕರಿಸಿ ವಿಧವಿಧವಾಗಿ ಪೂಜೆಗೈದು ಆರಾಧಿಸಿದರು. ಆದರೂ ದೇವಿಯು ತನ್ನ ಪ್ರಸಾದ ಸೂಚನೆ ನೀಡಲಿಲ್ಲ. ಪ್ರತಿಯಾಗಿ ಏನೂ ಹೇಳಲಿಲ್ಲ. ಮನೆಗೆ ಮರಳಿದ ಸಖಿಯರು ಆ ವೈಶ್ಯಧರ್ಮಪತ್ನಿಗೆ ಹೇಳಿದರು. ''ದೇವಿಯು ನಮ್ಮ ಪೂಜೆ ಸ್ವೀಕರಿಸಿದಳು. ಆದರೆ ಪ್ರಸಾದ ಸೂಚನೆ ಮಾಡಲಿಲ್ಲ. ಪ್ರಸನ್ನಳಾದ ಯಾವುದೇ ಚಿಹ್ನೆ ಕಂಡು ಬರಲಿಲ್ಲ.''

ಇದರಿಂದ ಆ ವೈಶ್ಯಭಾರ್ಯೆಗೆ ಚಿಂತೆಯಾಯಿತು. ಅವಳು ಆಲೋಚಿಸಿದಳು. ''ನಾನು ಗೌರಿಯನ್ನು ವಿಧಿವತ್ತಾಗಿ ಅರ್ಚನೆ ಮಾಡಿಸಿದೆ. ನನ್ನ ಅಂತರಂಗದಲ್ಲಿ ಅವಳ ಬಗ್ಗೆ ಎಂಥ ಶ್ರದ್ಧೆಯಿದೆಯೆಂಬುದೂ ಅವಳಿಗೆ ಗೊತ್ತಿದೆ. ನಾನಲ್ಲಿಗೆ ಹೋಗದಿರಲು ಸಾಂಪ್ರದಾಯಿಕವಾದ ನಿರ್ಬಂಧವೇ ಕಾರಣವೆಂಬುದೂ ಅವಳಿಗೆ ಅವಿದಿತವಲ್ಲ. ನನ್ನ ಪ್ರಾಣಪ್ರಿಯರಾದ ವಿಶ್ವಾಸಿ ಸಖಿಯರಿಂದ ಪೂಜೆ ಮಾಡಿಸಿದ್ದೇನೆ. ನಾನೂ ಆ ಸಮಯದಲ್ಲಿ ಮನೆಯಲ್ಲಿದ್ದರೂ ಮನದಲ್ಲಿಯೇ ನೆನೆದು ಅರ್ಚಿಸಿದ್ದೇನೆ. ಇಷ್ಟಾದರೂ ಅವಳೇಕೆ ನನ್ನ ಮೇಲೆ ಪ್ರಸನ್ನಳಾಗಲಿಲ್ಲ? ಎಷ್ಟು ವಿಚಾರ ಮಾಡಿದರೂ ಬಗೆಹರಿಯಲಿಲ್ಲ. ಕೊನೆಗೆ ಹೀಗೆ ತೀರ್ಮಾನಿಸಿದಳು. ''ನಾನು ಪ್ರಸವವಾದ ನಂತರ ಹೋಗಿ ಗೌರಿಯನ್ನು ಸ್ವತಃ ಅರ್ಚಿಸಿ ಪ್ರಸನ್ನಗೊಳಿಸಿ ಬರುತ್ತೇನೆ. ಅಲ್ಲಿಯವರೆಗೆ ಆ ತಾಯಿಯನ್ನು ಪ್ರತಿನಿತ್ಯ ಮನೆಯಲ್ಲಿದ್ದೇ ನೆನೆಯುವೆ. ಆ ಮಹಾಮಹಿಮೆಯು ನನಗೆ ಕಲ್ಯಾಣವನ್ನುಂಟುಮಾಡಲಿ'' ಎಂದು ತಾನು ಇದ್ದಲ್ಲಿಂದಲೇ ಅವಳನ್ನು ನಮಸ್ಕರಿಸಿದಳು. ಇತ್ತ ಪಾರ್ವತಿಯ ಮೆಚ್ಚಿನ ಸಖಿಯಾದ ವಿಜಯೆಯು ಅವಳನ್ನು ಕೇಳಿದಳು.

**ವಿಜಯೆ:-** ಗಿರಿನಂದಿನಿ ! ಈ ವೈಶ್ಯನ ಧರ್ಮಪತ್ನಿಯ ಸಖಿಯರು ನಿನ್ನನ್ನು ಬಗೆಬಗೆಯಾಗಿ ಅರ್ಚಿಸಿ, ಆರಾಧಿಸಿದರೂ ನೀನು ಅವರಿಗೆ ಪ್ರಸಾದವನ್ನೇಕೆ ನೀಡಲಿಲ್ಲ?

**ಪಾರ್ವತಿ:-** ಸಖಿ, ನನಗೆ ಆ ಶರಭಭಾರ್ಯೆಯ ಭಕ್ತಿ ಹಾಗೂ ಆಸ್ತಿಕ್ಯ ಭಾವನೆ, ನನ್ನಲ್ಲಿ ನಿರತಿಶಯವಾದ ಪ್ರೀತಿ ಇವೆಲ್ಲ ಗೊತ್ತಿದೆ. ಆದರೆ ನಾನು ಬೇರೊಬ್ಬರಿಂದ ಪೂಜೆ ಸ್ವೀಕರಿಸುವದಿಲ್ಲ. ಹರಕೆ ಹೊತ್ತವರೇ ಬಂದು ಪೂಜೆ ಸಲ್ಲಿಸಬೇಕು. ಶರಭನ

ಧರ್ಮಪತ್ನಿಯು ಸಂಪ್ರದಾಯದಂತೆ ಮನೆಬಿಟ್ಟು ಹೊರಬರದೇ ಇರುವುದರಿಂದ ನನ್ನ ಪೂಜೆಗೆ ಬರಲಾಗದಿದ್ದುದು ನನಗೆ ಗೊತ್ತಿದೆ. ಆದುದರಿಂದ ಆ ವಿಷಯದಲ್ಲೂ ನನಗೆ ಅಸಮಾಧಾನವಿಲ್ಲ. ಆದರೆ ಆ 'ಶರಭ'ನಾದರೂ ನನ್ನ ಪೂಜೆಗೆ ಬರಬಹುದಿತ್ತಲ್ಲ? ಸತಿಗೆ ಪೂಜೆಮಾಡಲು ಆಗದಿದ್ದಾಗ ಪತಿಯಿಂದ ಪೂಜೆಮಾಡಿಸಿದರೂ ನನಗೆ ಸಲ್ಲವದು. ಆದರಿಂದಲೂ ನಾನು ತೃಪ್ತಾಳಾಗುತ್ತೇನೆ.

**ಯದ್ವ್ರತಂ ಪೂಜನಂ ಯಚ್ಚ ಕರ್ತುಂ ನಕ್ಷಮತೇಂಗನಾ ।**
**ತತ್ಕಾರಯಶಿ ನಾಥೇನ ನ ಭಂಗಃಸ್ಯಾತ್ತಯೋಃ ಸಖಿ ॥**

''ಯಾವ ಪೂಜಾವಿಧಾನವನ್ನು ಧರ್ಮಪತ್ನಿಯು ಮಾಡಲು ಸಾಧ್ಯವಿಲ್ಲವೋ, ಅಂಥದನ್ನು ತನ್ನ ಪತಿಯ ಕಡೆಯಿಂದ ಮಾಡಿಸಿದರೆ ಆ ಪೂಜಾಭಂಗವಾಗಲೀ, ವ್ರತನಾಶವಾಗಲೀ, ಆಗುವದಿಲ್ಲ.''

ಆದುದರಿಂದ ತಾನು ಬರಲು ಸಾಧ್ಯವಾಗದಿದ್ದಾಗ ಧರ್ಮಪತ್ನಿಯು ತನ್ನ ಪತಿಯನ್ನು ಪೂಜೆಗಾಗಿ ಪ್ರೇರಿಸಲಿಲ್ಲ. ಆ ಶರಭನಾದರೂ ತಾನಾಗಿ ತಿಳಿದು ಬರಲಿಲ್ಲ. ನನಗೆ ಪೂಜೆ ಮಾಡಲಿಲ್ಲ. ಹೀಗೆ ಗಂಡ-ಹೆಂಡತಿ ಇಬ್ಬರೂ ನನ್ನ ಪೂಜೆಯ ವಿಷಯದಲ್ಲಿ ಅಲಕ್ಷ್ಯ ತಳೆದಿದ್ದಾರೆ. ಹರಕೆಗೆ ಸಂಬಂಧವಿಲ್ಲದ ಯಾರದೋ ಮುಖಾಂತರ ಸಲ್ಲಿಸಿದ ಪೂಜೆಯನ್ನು ನಾನು ಹೇಗೆ ಸ್ವೀಕರಿಸಲಿ? ನನ್ನ ವಿಷಯದಲ್ಲಿ ಮಾಡಿದ ಈ ಔದಾಸೀನ್ಯದಿಂದ ನಾನು ಕುಪಿತಳಾಗಿದ್ದೇನೆ. ಇದರಿಂದಾಗಿ ಈ ಬಾರಿ ಅವಳ ಗರ್ಭಪಾತವಾಗುವದು. ಆದರೆ ಮುಂದೆ ಅವರಿಬ್ಬರೂ ಸೇರಿ ನನ್ನನ್ನು ಅರ್ಚಿಸಿದರೆ ಆಗ ಅವರಿಗೆ ಉತ್ತಮ ಪುತ್ರನು ಜನಿಸುವನು.

ಹೀಗೆ ದೇವಿಯು ಕೃದ್ಧಳಾಗಿ ನೀಡಿದ ಶಾಪವು ವೈಶ್ಯನಿಗಾಗಲೀ, ಅವನ ಭಾರ್ಯೆಗಾಗಲೀ ತಿಳಿಯಲಿಲ್ಲ. ಗೆಳತಿಯರಿಗೂ ಅದು ಸರಿಯಾಗಿ ಕೇಳಿಸಲಿಲ್ಲ. ಆದುದರಿಂದ, ಅಜ್ಞಾನದಿಂದ ನೀವಿಬ್ಬರೂ ಹರಕೆ ಹೊತ್ತು ನಡೆಸದಿದ್ದುದಕ್ಕಾಗಿ ನಿಮಗೆ ಸಂತಾನವಿಲ್ಲ.

ಎಲೈ ವೈಶ್ಯನೇ, ಈಗಲಾದರೂ, ನೀನು ನಿನ್ನ ಸತಿಯೊಡಗೂಡಿ ಆ ದೇವಿಯಲ್ಲಿಗೆ ಹೋಗಿ ಅರ್ಚಿಸು. ಇಬ್ಬರೂ ಸೇರಿ ಆ ಮಹಾತಾಯಿಯನ್ನು ಆರಾಧಿಸಿರಿ. ಇದರಿಂದಾಗಿ ಪೂರ್ವಕಾಲದಲ್ಲಿ ದಿಲೀಪನಿಗೆ ನಂದಿನಿಯ ಸೇವೆಯಿಂದ ಸಂತಾನವಾದಂತೆ, ನಿಮಗೂ ಈ ಗೌರೀದೇವಿಯ ಸೇವೆಯಿಂದ ಸಂತಾನವಾಗುವುದು.

**ವೈಶ್ಯ:-** ಯಾರು ಆ ದಿಲೀಪ ರಾಜ? ನಂದಿನಿ ಯಾರು? ಅವಳ ಆರಾಧನೆಯಿಂದ ದಿಲೀಪನಿಗೆ ಸಂತಾನವಾದ ಬಗೆ ಹೇಗೆ? ಇಂದ್ರಾದಿ ದೇವತೆಗಳನ್ನೂ ಬಿಟ್ಟು ಒಂದು ಹಸುವನ್ನು ಸಂತಾನಕ್ಕೋಸ್ಕರ ಆ ಮಹಾರಾಜ ಏಕೆ ಸೇವಿಸಿದ? ಇದೆಲ್ಲವನ್ನೂ ನನಗೆ ತಾವು ನಿರೂಪಿಸಿ. ದೃಷ್ಟಾಂತರೂಪವಾಗಿ ಹೇಳಿದ ಈ ದಿಲೀಪನ ವಿವರವಾದ ಆಖ್ಯಾನವನ್ನು ತಮ್ಮ ಮುಖದಿಂದ ಶ್ರವಣಮಾಡಿ, ನಂತರ ನಾನೂ ನನ್ನ ಹೆಂಡತಿಯೂ ತಮ್ಮ ಅನುಜ್ಞೆಯಂತೆ ದೇವಿಯನ್ನು ಆರಾಧಿಸುತ್ತೇವೆ.

**ಶಿವಶರ್ಮ:-** ಹೀಗೆ ವಿನಯದಿಂದ ಒಡಗೂಡಿದ ನನ್ನ ತಂದೆಯು ಈ ರೀತಿಯಾಗಿ ಪ್ರಾರ್ಥಿಸಿಕೊಂಡಾಗ ಮಹಾನುಭಾವರಾದ ದೇವಲ ಋಷಿಗಳು ದಿಲೀಪನ ವೃತ್ತಾಂತವನ್ನು ಹೇಳಲು ತೊಡಗಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಇಂದ್ರಪ್ರಸ್ಥದ ಮಾಹಾತ್ಮ್ಯ; ಶಿವಶರ್ಮನ ಪೂರ್ವಜನ್ಮದ ವೃತ್ತಾಂತಪೂರ್ವಜನ್ಮದ ವೃತ್ತಾಂತ ಎಂಬ ನೂರ ಎಂಬತ್ತಮೂರನೇಯ ಅಧ್ಯಾಯ ಮುಗಿದುದು*

—○—

**ದೇವಲ:-** ದಿಲೀಪ ಮಹಾರಾಜನ ದಿವ್ಯವೂ ವಿಚಿತ್ರವೂ ಆದ ಕಥೆಯನ್ನು ಹೇಳುವೆ ಕೇಳಿರಿ. ಪೂರ್ವಕಾಲದಲ್ಲಿ ವೈವಸ್ವತಮನುವಿನ ವಂಶದಲ್ಲಿ ದಿಲೀಪ ಎಂಬ ರಾಜಶ್ರೇಷ್ಠನು ಜನಿಸಿದ. ಧರ್ಮಿಷ್ಠನಾದ ಆ ರಾಜರ್ಷಿಯು ತನ್ನ ಗುಣಗಳಿಂದ ಲೋಕಪ್ರಿಯನಾಗಿದ್ದ. ಧರ್ಮದಿಂದ ಪ್ರಜೆಗಳನ್ನು ತಂದೆಯಂತೆ ರಕ್ಷಿಸುತ್ತಿದ್ದ. ಮಗಧದೇಶದ ಮಹಾರಾಜನ ಮಗಳಾದ ಸುದಕ್ಷಿಣೆಯು ಅವನ ಪಟ್ಟಮಹಿಷಿ. ಬಹುಕಾಲ ಕಳೆದರೂ ಆ ದಂಪತಿಗಳಿಗೆ ಮಕ್ಕಳು ಆಗಲಿಲ್ಲ. ಆದರಿಂದ ಚಿಂತೆಯಾಯಿತು ಆ ಮನುವಂಶದ ದೊರೆಗೆ. ಸಮುದ್ರ ವಲಯಾಂಕಿತವಾದ ಅಖಂಡಭೂಮಂಡಲದ ಸಾರ್ವಭೌಮ ಅಧಿಪತ್ಯವು ಅವನಿಗೆ ಇದ್ದರೂ, ಮನಸ್ಸಿಗೆ ಮಾತ್ರ ನೆಮ್ಮದಿ ಇರಲಿಲ್ಲ. ಅವನು ಸಂತತಿಯ ಅಭಾವದಿಂದ ಹೃದಯದಲ್ಲಿಯೇ ಚಿಂತೆಮಾಡಿ ಕೊರಗಹತ್ತಿದ. ಮನಸ್ಸಿನಲ್ಲಿ ಅವನು ಹೀಗೆ ಯೋಚಿಸಿದ.

''ನಾನು ಅನೇಕ ಯಜ್ಞಗಳನ್ನು ಮಾಡಿ ಶ್ರೀಹರಿಯನ್ನು ಆರಾಧಿಸಿದ್ದೇನೆ. ಕೆರೆ, ಕಾಲುವೆ, ಅನ್ನಛತ್ರ, ಅರವಟ್ಟಿಗೆ, ಉಪವನ ಮುಂತಾದವುಗಳನ್ನು ಅಲ್ಲಲ್ಲಿ ಮಾಡಿಸಿ ಉಚಿತ ವ್ಯವಸ್ಥೆ ಇರಿಸಿದ್ದೇನೆ ಗೋದಾನ, ಅನ್ನದಾನ, ವಸ್ತ್ರದಾನ ಮುಂತಾದವುಗಳಿಂದ ಅತಿಥಿ ಅಭ್ಯಾಗತರನ್ನು ಸಂತೋಷಪಡಿಸಿದ್ದೇನೆ. ದಶಮಿ, ಏಕಾದಶಿ, ದ್ವಾದಶಿ ದಿನಗಳಲ್ಲಿ ಸ್ತ್ರೀ ಸಹವಾಸವನ್ನು ನಾನೆಂದೂ ಮಾಡಲಿಲ್ಲ. ಋತುಕಾಲದಲ್ಲಿ ಋತುಸ್ನಾನಳಾದ ನನ್ನ ಧರ್ಮಪತ್ನಿಯನ್ನು ಎಂದೂ ತೊರೆದಿಲ್ಲ. ಹೀಗೆ ಧರ್ಮ, ಅರ್ಥ, ಕಾಮ ಮೂರು ಪುರುಷಾರ್ಥಗಳನ್ನು ಯಥೋಚಿತವಾಗಿ ಯಥಾಕಾಲದಲ್ಲಿ ಸೇವಿಸುತ್ತಿದ್ದೇನೆ. ಇಷ್ಟಾದರೂ ನನ್ನ ಮಹಿಷಿ ಸುದಕ್ಷಿಣೆಯಲ್ಲಿ ನನ್ನ ಯಾವ ದೋಷದಿಂದ ಸಂತಾನವು ಆಗಲಿಲ್ಲ? ಇದಕ್ಕೆಲ್ಲ ಭೂತ, ಭವಿಷ್ಯ ವರ್ತಮಾನ ಜ್ಞಾನಿಯಾದ ನಮ್ಮ ಕುಲಗುರು ವಶಿಷ್ಠರೇ ನನ್ನಲ್ಲಿರುವ ದೋಷವನ್ನು ಹೇಳಲು ಸಮರ್ಥರು.''

ಹೀಗೆ ವಿಚಾರಮಾಡಿ ಆ ದಿಲೀಪಮಹಾರಾಜನು ರಾಜ್ಯದ ಭಾರವನ್ನು ಮಂತ್ರಿಗಳಿಗೆ ತಾತ್ಪೂರ್ತಿಕವಾಗಿ ಒಪ್ಪಿಸಿದ. ಅನಂತರ ಸುದಕ್ಷಿಣಾ ಹಾಗೂ ದಿಲೀಪ ದಂಪತಿಗಳು ಒಂದು ಶುಭಮುಹೂರ್ತದಲ್ಲಿ ವಶಿಷ್ಠರ ಆಶ್ರಮಕ್ಕೆ ತೆರಳಿದರು. ವಶಿಷ್ಠರಿಗೆ ಸಾಷ್ಟಾಂಗ ನಮಸ್ಕಾರಮಾಡಿ ಆ ರಾಜರ್ಷಿಯು ತನ್ನ ಮನದ ದುಗುಡವನ್ನು ಹೇಳಿಕೊಂಡ. ''ಪೂಜ್ಯರೇ, ನನ್ನ ಯಾವ ದೋಷದಿಂದ ಸಂತಾನವು ಪ್ರತಿಬದ್ಧವಾಗಿದೆ? ಆ ದೋಷವನ್ನು ತಾವು ಧ್ಯಾನ ದೃಷ್ಟಿಯಿಂದ ನೋಡಿ ನನಗೆ ಹೇಳಬೇಕು. ಮತ್ತು ಆ ದೋಷಕ್ಕೆ ಯಾವ ಉಪಶಮನ ಮಾಡಬೇಕು ? ಹೇಗೆ ಮಾಡಿದರೆ ನನಗೆ ಸಂತಾನವಾಗುವದು? ಇದೆಲ್ಲವನ್ನೂ ತಿಳಿಸಿರಿ.

**ವಶಿಷ್ಠ:-** ಮಹಾರಾಜ, ಬಹಳ ವರ್ಷಗಳ ಹಿಂದೆ ನೀನು ದೇವಲೋಕಕ್ಕೆ ದೇವೇಂದ್ರನ ಕಾರ್ಯಕ್ಕಾಗಿ ಹೋಗಿದ್ದೆ. ಅಲ್ಲಿ ಆ ಸುರಕಾರ್ಯವನ್ನು ಮಾಡಿ ಮುಗಿದ ಬಳಿಕ ಋತು ಸ್ನಾನಳಾದ ನಿನ್ನ ಮಡದಿಯನ್ನು ನೆನೆಸಿಕೊಂಡು ನೀನು ಅವಸರದಿಂದ ಅಲ್ಲಿಂದ ಹೊರಟೆ. ಆಗ ದಾರಿಯಲ್ಲಿಯೇ ನಂದನವನದ ಮಧ್ಯದಲ್ಲಿ ಇರುವ ಕಲ್ಪವೃಕ್ಷದ ನೆರಳಿನಲ್ಲಿ ಕಾಮಧೇನು ವಿಶ್ರಮಿಸಿತ್ತು. ನೀನು ಮಡದಿಯ ಕಡೆಗೆ ಮನಸ್ಸು ಇಟ್ಟು,

ದಾರಿಯಲ್ಲಿದ್ದ ಆ ಕಾಮಧೇನುವನ್ನು ನಮಸ್ಕರಿಸದೇ, ಪ್ರದಕ್ಷಿಣೆ ಹಾಕದೇ, ಧೇನುವನ್ನು ಉಲ್ಲಂಘಿಸಿ ಹಾಗೆಯೇ ರಾಜಧಾನಿಗೆ ಧಾವಿಸಿದೆ. ಅದನ್ನು ನೋಡಿ ಆ ಕಾಮಧೇನವು ನಿನಗೆ ಕೋಪದಿಂದ ಶಾಪ ಕೊಟ್ಟಿತು.

''ಸಂತತಿಯನ್ನು ಸೇವೆ ಮಾಡುವವರೆಗೆ ನಿನಗೆ ಸಂತಾನವೇ ಆಗುವದಿಲ್ಲ''. ಆದರೆ ನೀನು ನಿನ್ನ ಮಹಿಷಿಯ ಜೊತೆಗೆ ಸಂಗಮಲಾಲಸನಾಗಿ ಆತುರದಿಂದ ಹೊರಟಿದ್ದರಿಂದ ಆ ಕಾಮಧೇನುವಿನ ಶಾಪಾಕ್ಷರವನ್ನೂ ಕೇಳಲಿಲ್ಲ. ರಥದ ಗಾಲಿಯ ಉರುಳುವಿಕೆಯ ಶಬ್ದದಲ್ಲಿ ಆ ಕಾಮಧೇನುವಿನ ಧ್ವನಿ ಎಲ್ಲಯೋ ಕರಗಿಹೋಯಿತು. ಕಾಮಧೇನುವಿನ ಮಗಳ ಮಗಳಾದ ನಂದಿನಿಯು ನಮ್ಮ ಆಶ್ರಮದಲ್ಲಿ ಇರುತ್ತದೆ. ಈಗ ನೀನು ಆ ನಂದಿನಿಯನ್ನು ಭಕ್ತಿಯಿಂದ ಸೇವೆಮಾಡು. ಶ್ರದ್ಧೆಯಿಂದ ಸೇವಿತವಾದ ನಂದಿನಿಯು ನಿನಗೆ ಸತ್ಪುತ್ರನನ್ನು ಪ್ರದಾನಮಾಡುವಳು.

ಹೀಗೆ ವಶಿಷ್ಠರು ಮಾತನಾಡುವಷ್ಟರಲ್ಲಿ ಅಡವಿಗೆ ಹುಲ್ಲುಮೇಯಲು ಹೋದ ನಂದಿನಿಯು ತಪೋವನಕ್ಕೆ ಮರಳಿ ಬಂದಿತು. ಆಶ್ರಮದ ಬಳಿ ಬಂದ ಆ ನಂದಿನಿಯನ್ನು ಕಂಡು ಮುನಿಗಳಿಗೆ ಪರಮಸಂತೋಷವಾಯಿತು. ಮಹಾರಾಜನಿಗೆ ಆ ನಂದಿನಿಯನ್ನು ತೋರಿಸಿ ವಶಿಷ್ಠರು ಹೀಗೆ ನುಡಿದರು.

**ವಶಿಷ್ಠ :-** ರಾಜನೇ, ನೆನೆಯುವಷ್ಟರಲ್ಲಿಯೇ ಇಲ್ಲಿಗೇ ನಂದಿನಿಯು ಆಗಮನವಾಗಿದೆ. ನಿನ್ನ ಮನೋರಥವು ಬೇಗನೇ ಸಿದ್ಧಿಸುವ ಸೂಚನೆ ಇದಾಗಿದೆ. ನೀನು ನಾಳೆಯಿಂದ ಈ ನಂದಿನಿಯನ್ನು ಭಕ್ತಿಯಿಂದ ಸೇವಿಸು. ಅರಣ್ಯದಲ್ಲಿ, ಆಶ್ರಮ ಗೋಶಾಲೆಯಲ್ಲಿ ಈ ನಂದಿನಿಯನ್ನು ಅನುಸರಣ ಮಾಡುತ್ತ ಭಕ್ತಿಯಿಂದ ಆರಾಧಿಸು. ಅರಣ್ಯದಲ್ಲಿಯೂ ಇದರ ರಕ್ಷಣೆ ಮಾಡು. ಇಲ್ಲಿಯ ನಿಬಿಡವಾದ ವನಪ್ರದೇಶಗಳಲ್ಲಿ ಕ್ರೂರ, ಹಿಂಸ್ರ ಪ್ರಾಣಿಗಳು ಈ ನಂದಿನಿಯನ್ನು ಆಕ್ರಮಿಸದಂತೆ, ಹಿಂಸಿಸದಂತೆ ನೋಡಿಕೋ. ರಾಜೇಂದ್ರ, ಕಾಮಧೇನುವಿನ ದೌಹಿತ್ರಸಂತತಿಯಾದ ಈ ನಂದಿನಿಯನ್ನು ಹಗಲಿರಲೂ ಶ್ರದ್ಧೆಯಿಂದ ಸೇವಿಸು.

ವಶಿಷ್ಠ ಋಷಿಗಳ ಈ ಮಾತನ್ನು ಕೇಳಿ ದಿಲೀಪ ಹಾಗೂ ಸುದಕ್ಷಿಣೆಯರಿಗೆ ಪರಮಾನಂದವಾಯಿತು. ಇಬ್ಬರೂ ದಂಪತಿಗಳು ವಶಿಷ್ಠರನ್ನೂ, ಧರ್ಮಪತ್ನಿ ಅರುಂಧತಿಯನ್ನೂ ವಂದನೆಗೈದು ಆನಂದದಿಂದ ಅವರು ಕೊಟ್ಟ ಒಂದು ಪರ್ಣ ಕುಟೀರದಲ್ಲಿ ಅಂದು ವಿಶ್ರಮಿಸಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ದಿಲೀಪ ಮಹಾರಾಜನ ಉಪಾಖ್ಯಾನ ಎಂಬ ನೂರ ಎಂಬತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ನಂದಿನಿಯಿಂದ ದಿಲೀಪರಾಜನ ಪರೀಕ್ಷೆ, ಮಾಯಾಸಿಂಹ ಹಾಗೂ ದಿಲೀಪರ ಸಂವಾದ, ನಂದಿನಿಯಿಂದ ವರಪ್ರದಾನ

ಅಧ್ಯಾಯ - ೧೮೫

**ದೇವಲ:-** ಮರುದಿನ ಉಷಃಕಾಲದಲ್ಲಿ ಸುದಕ್ಷಿಣಾದೇವಿಯು ಅರಿಷಿಣ, ಕುಂಕುಮ ಸೇರಿಸಿ, ಆ ನಂದಿನಿಯ ಶೃಂಗಾಗ್ರದಲ್ಲಿ ಮಾಲೆಯನ್ನು ಮುಡಿಸಿ ಪೂಜೆ ಮಾಡಿದಳು. ಅನಂತರದಲ್ಲಿ ದಿಲೀಪರಾಜನು ಆ ನಂದಿನೀ ಧೇನುವನ್ನು ಅರಣ್ಯಕ್ಕೆ ಮೇಯಲು ಕರೆದುಕೊಂಡು ಹೋದ. ಮುಂದೆ ಮುಂದೆ ನಂದಿನಿ, ಹಿಂದೆ ಅದರ ನೆರಳಿನಂತೆ ದಿಲೀಪರಾಜ. ಹೀಗೆಯೇ ಅನುಸರಣೆ ಮಾಡುತ್ತ ಅರಣ್ಯಕ್ಕೆ ನಡೆದ. ದಾರಿಯಲ್ಲಿ ಎಳೆಯ ಹಸಿರು ಹುಲ್ಲುಗರಿಕೆಗಳನ್ನು ಮೆಲ್ಲುತ್ತ ಮೆಲ್ಲಮೆಲ್ಲನೇ ನಡೆದ ಆ ನಂದಿನಿಯ ಮೈತಿಕ್ಕಿ, ಮೈಮೇಲೆ ಕುಳಿತ ಮಕ್ಷಿಕೆಗಳನ್ನು ಜಾಡಿಸಿ ಅದರ ಅಂಗಾಂಗಗಳನ್ನು ತುರಿಸಿ, ಸಾಯಂಕಾಲದವರೆಗೆ ಅದು ನಡೆದಲ್ಲಿ ಹಿಂಬಾಲಿಸಿ, ಅದನ್ನು ಚೆನ್ನಾಗಿ ಮೇಯಿಸಿಕೊಂಡು, ಪರಿಪರಿಯಾಗಿ ಸೇವಿಸಿ ಸಂಧ್ಯಾಕಾಲದ ಅಂತ್ಯದಲ್ಲಿ ಮನೆಗೆ ಮರಳುತ್ತಲಿದ್ದ. ಸಂಜೆ ಅರಣ್ಯದಿಂದ ಮರಳಿ ಬಂದ ಆ ಧೇನುವನ್ನು ಆಶ್ರಮದ ಮುಂಭಾಗದಲ್ಲಿ ಮಹಾರಾಣಿಯು ಎದುರುಗೊಂಡು ಅದಕ್ಕೆ ಪೂಜೆಯನ್ನು ಸಲ್ಲಿಸುತ್ತಿದ್ದಳು. ಹೀಗೆ ಇಬ್ಬರೂ ದಂಪತಿಗಳು ಮಾಡುವ ಸೇವೆಯನ್ನು ಆ ನಂದಿನೀಧೇನುವು ಆನಂದದಿಂದ ಸ್ವೀಕರಿಸುತ್ತಿತ್ತು.

ಹೀಗೆ ದಿಲೀಪನು ದೀಕ್ಷಾಬದ್ಧನಾಗಿ ಮಡದಿಯಾದ ಸುದಕ್ಷಿಣೆಯೊಂದಿಗೆ ಇಪ್ಪತ್ತೊಂದು ದಿನ ಆ ನಂದಿನಿಯನ್ನು ಸೇವಿಸಿದ. ಒಂದು ದಿನ ನಂದಿನಿಯು ದಿಲೀಪ ಮಹಾರಾಜನ ಭಕ್ತಿಯನ್ನು ಪರೀಕ್ಷಿಸಬೇಕೆಂದು ಹಿಮಾಲಯದ ಎತ್ತರದಲ್ಲಿನ ಗುಹೆಯೊಂದನ್ನು ಪ್ರವೇಶಿಸಿತು. ದಿಲೀಪನು ಒಂದು ಕ್ಷಣ ಆ ಹೈಮಾಚಲದ ಉತ್ತುಂಗ ಶೃಂಗದ ಹೃದಯಂಗಮವಾದ ನಿಸರ್ಗ ಸೌಂದರ್ಯದ ಶೋಭೆಯನ್ನು ನೋಡುವದರಲ್ಲಿ ತಲ್ಲೀನನಾಗಿದ್ದ. ಆ ಕ್ಷಣದಲ್ಲಿ ಒಮ್ಮೆಲೇ ಸಿಂಹವೊಂದು ಆ ಗುಹೆಯಲ್ಲಿ ಹೊಕ್ಕು ನಂದಿನಿಯನ್ನು ಬಲಾತ್ಕಾರದಿಂದ ಹಿಡಿಯಿತು.

ಸಿಂಹದ ಆಕಸ್ಮಿಕವಾದ ಆಕ್ರಮಣದಿಂದ ದಿಗಿಲುಗೊಂಡ ನಂದಿನಿಯು ಒಮ್ಮೆಲೇ ಕೆಟ್ಟದನಿಯಿಂದ ಚೀರಿತು. ಅದನ್ನು ಕೇಳಿ ಹಿಮಗಿರಿಯ ಶೈಲಶ್ರೇಣಿಯ ಹಸಿರುಕುಸಿರು ಸೌಂದರ್ಯವನ್ನು ಆಸ್ವಾದಿಸುವಲ್ಲಿ ನೆಟ್ಟ ರಾಜನ ದೃಷ್ಟಿಯು ಹಸುವಿರುವೆಡೆ ಒಮ್ಮೆಲೇ ಹೊರಳಿತು. ಹಸುವಿನ ಮೇಲೆ ಸಿಂಹವು ಕುಳಿತಿದೆ. ತನ್ನ ಪಂಜರದಿಂದ ಗಟ್ಟಿಯಾಗಿ ನಂದಿನಿಯನ್ನು ಹೊಡೆದು, ಹಿಡಿದಿದೆ. ನಂದಿನಿಯ ಕಣ್ಣಿನಿಂದ ಧಾರಾಕಾರವಾಗಿ ನೀರು ಸುರಿಯುತ್ತಲಿದೆ. ಚೂಪಾದ ಹಲ್ಲು ಹಾಗೂ ಉಗುರುಗಳಿಂದ ಭೀಕರವಾಗಿ ತೋರುವ ಆ ಸಿಂಹವನ್ನು ನೋಡಿ ಒಮ್ಮೆಲೇ ಧನುರ್ಧಾರಿಯಾದ ಆ ದಿಲೀಪನು ತನ್ನ ಬತ್ತಳಿಕೆಯಿಂದ ಬಾಣವನ್ನು ಎತ್ತಲು ಕೈಯನ್ನು ತನ್ನ ಬತ್ತಳಿಕೆ ಇದ್ದೆಡೆಗೆ ಒಯ್ದ. ಎಡಗೈಯಲ್ಲಿ ಬಿಲ್ಲನ್ನು ಬಾಗಿಸಿ ಹಿಡಿದು ಬಲಗೈಯಿಂದ ಬಾಣವನ್ನು ತೆಗೆದುಕೊಳ್ಳಬೇಕು ಎನ್ನುವಷ್ಟರಲ್ಲಿ ಬತ್ತಳಿಕೆಯಲ್ಲಿ ಇಟ್ಟ ಕೈಯನ್ನು ಅಲ್ಲಿಂದ ಸೆಳೆಯಲು ಸಾಧ್ಯವಾಗಲೇ ಇಲ್ಲ. ಎರಡೂ

ಕೈಗಳೂ ನಿಶ್ಚಲವಾದವು. ಮಹಾರಾಜನು ಗರಬಡಿದು ಜಡೀಭೂತನಾಗಿ ನಿಂತುಬಿಟ್ಟ. ಬಾಣವನ್ನು ತೆಗೆಯಲಿಕ್ಕೂ, ಆಚೀಚೆ ಅಲುಗಾಡಲಿಕ್ಕೂ ಸಾಧ್ಯವಿಲ್ಲದಂತಾಯಿತು. ಹೀಗೆ ಆಶ್ಚರ್ಯ ದುಃಖಗಳಿಂದ ಕೂಡಿ ಸ್ತಬ್ಧನಾಗಿ ನಿಂತ ಆ ಮಹಾರಾಜನನ್ನು ಕುರಿತು ಸಿಂಹವು ಮನುಷ್ಯ ಮಾತಿನಿಂದ ಮಾತನಾಡಿತು.

**ಸಿಂಹ:-** ದೀಲಿಪ, ನಾನು ನಿನ್ನನ್ನು ಚೆನ್ನಾಗಿ ಬಲ್ಲೆ. ನೀನು ಸೂರ್ಯವಂಶದಲ್ಲಿ ಹುಟ್ಟಿದ ದಿಲೀಪ ಎಂಬ ಮಹಾರಾಜ. ನಾನು ಮಹಾದೇವರ ಅನುಚರನಾದ ಕುಂಭೋದರ. ಆ ದೇವದಾರು ಮರ ಕಾಣುವದಷ್ಟೇ. ಅದನ್ನು ಪಾರ್ವತೀದೇವಿಯು ಮಗನಂತೆ ಪ್ರೀತಿಯಿಂದ ಸಾಕಿ ಸಲಹಿ ದೊಡ್ಡದನ್ನಾಗಿ ಮಾಡಿದ್ದಾಳೆ. ಒಂದು ಕಾಡಾನೆಯು ಬಂದು ಈ ದೇವದಾರು ವೃಕ್ಷಕ್ಕೆ ತನ್ನ ಗಂಡಸ್ಥಲವನ್ನು ತಿಕ್ಕತೊಡಗಿತು. ಅದರಿಂದ ಆ ವೃಕ್ಷದ ತೊಗಟೆಯು ಕಿತ್ತಿ ಕೆಳಗೆ ಬಿದ್ದಿತು. ಅದರಿಂದ ಪಾರ್ವತಿಗೆ ಬಹಳ ದುಃಖವಾಯಿತು. ತನ್ನ ಹೊಟ್ಟೆಯ ಮಗುವಿನಂತೆ ಒಳ್ಳೇ ಪ್ರೀತಿಯಿಂದ ಬೆಳೆಸಿದ ಆ ದೇವದಾರು ಮರದ ತೊಗಟೆಯು ಕಳಚಿ ಬಿದ್ದುದನ್ನು ನೋಡಿ ಅತ್ಯಂತ ವ್ಯಥಿತಳಾದಳು. ಅನಂತರ ಆ ದೇವಿಯು ಅವಳ ಸೇವಕನಾದ ನನ್ನನ್ನು ಒಂದು ಸಿಂಹವನ್ನಾಗಿ ಮಾಡಿ ಆ ದೇವದಾರು ವೃಕ್ಷದ ರಕ್ಷಣೆಗಾಗಿ ಇಲ್ಲಿ ಸ್ಥಾಪನೆ ಮಾಡಿದಳು. ಮತ್ತು ನನಗೆ ಆ ತಾಯಿಯು ಹೇಳಿದಳು.

**ಪಾರ್ವತಿ:-** ಕುಂಭೋದರ ! ಈ ಸ್ಥಳದಲ್ಲಿ ಯಾವ ಪ್ರಾಣಿಯು ಬಂದರೂ ನಿನಗೆ ಆಹಾರವಾಗಲಿ. ಇಲ್ಲಿ ನಿಂತು ಈ ದೇವದಾರು ವೃಕ್ಷವನ್ನು ಯಾವ ವನ್ಯ ಪ್ರಾಣಿಗಳೂ ಬಂದು ಹಾಳುಮಾಡದಂತೆ ಕಾಪಾಡು.

ಈ ರೀತಿಯಾಗಿ ಆ ಮಹಾದೇವಿಯು ಅಪ್ಪಣೆ ಮಾಡಿದಂದಿನಿಂದ ನಾನು ಆದೇಶವನ್ನು ಪಾಲನೆಮಾಡುತ್ತ ಈ ಹಿಮಕಂದರದಲ್ಲಿ ವಾಸಮಾಡಿದ್ದೇನೆ. ನಿನ್ನ ಕೈ ಕಾಲು ಅಲುಗಾಡದಂತೆ. ನಿನ್ನ ಬತ್ತಳಿಕ್ಕೆಯಲ್ಲಿ ನೀನಿಟ್ಟ ಕೈಯನ್ನೂ ಎಳೆಯದಂತೆ ನಿಶ್ಚಲತೆ ನಿನಗೆ ಬಂದಿದ್ದಕ್ಕೆ ನೀನು ಆಶ್ಚರ್ಯಪಡಬೇಡ. ಮಹಾದೇವರ ಶಕ್ತಿಯ ಪ್ರಭಾವ ಎಂದು ತಿಳಿದುಕೋ. ನೀನು ಬೇರೆ ಸಿಂಹಗಳ ಮೇಲೆ ಬೇಕಾದಷ್ಟು ನಿನ್ನ ಶಕ್ತಿಯನ್ನು ಮಾಡು. ಆದರೆ ನನ್ನ ಮೇಲೆ ಮಾತ್ರ ನಿನ್ನ ಯಾವ ಆಟಗಳೂ ಸಾಗವು. ಅದಕ್ಕೆ ಕಾರಣ ನಾನು ಸಾಮಾನ್ಯ ಸಿಂಹವಲ್ಲ. ಮಹಾದೇವರ ವಾಹನವಾದ ವೃಷಭವನ್ನು ಹತ್ತುವಾಗ ಅವರು ಸಿಂಹವಾದ ನನ್ನ ಬೆನ್ನ ಮೇಲೆ ಕಾಲಿಟ್ಟು ವೃಷಭವನ್ನು ಆರೋಹಿಸುತ್ತಾರೆ. ಹೀಗೆ ಮಹಾದೇವರ ಪಾದಕ್ಷೇಪದಿಂದ ಪವಿತ್ರವಾಗಿದೆ ಈ ದೇಹ. ಆದುದರಿಂದ ಇದರ ಮೇಲೆ ನೀನು ಬಾಣ ಪ್ರಯೋಗ ಮಾಡಲಾರಿ. ನನ್ನ ಸೀಮೆಯೊಳಗೆ ಬಂದ ಈ ಹಸು ನನಗೆ ಇಂದಿನ ಆಹಾರವಾಗುವದು. ನೀನು ಇಲ್ಲಿಂದ ಮರಳು. ನಿನ್ನ ದೇಹವನ್ನು ರಕ್ಷಿಸಿಕೋ. ನಿನ್ನ ದೇಹವು ಸರ್ವಸುಖಗಳಿಗೂ ಆಗರ.

**ಮಹಾರಾಜ:-** ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಕ್ಕೆ ಕಾರಣನಾದ ಆ ಜಗದಂಬೆಯ ರಮಣ ಪರಮೇಶ್ವರನು ನನಗೂ ಸಹ ನಿನ್ನಂತೆಯೇ ಪೂಜ್ಯ. ನನಗೂ ಪರಮಮಾನ್ಯ. ಆದರೆ ಸಿಂಹರಾಜ ! ನಿನ್ನಲ್ಲಿ ನನ್ನದೊಂದು ವಿಜ್ಞಾಪನೆ. ನಿನಗೆ ಬ್ರಹ್ಮರ್ಷಿಗಳಾದ, ಬ್ರಹ್ಮದೇವರ ಮಗನಾದ ವಶಿಷ್ಠ ಋಷಿಗಳು ತಿಳಿದಿರುವರಷ್ಟೇ. ಆ ಮಹಾನುಭಾವರೇ ನನ್ನ ಕುಲಗುರು.

ಈ ನಂದಿನಿಯು ಆ ವಶಿಷ್ಠರ ಹೋಮದ ಹಸುವು. ಅವರ ಸರ್ವಾರ್ಥಸಾಧಿಕಾ. ಆ ಆಶ್ರಮದ ಕಾಮಧೇನು ವಿನಂತಿರುವ ಈ ನಂದಿನಿಯನ್ನು ನನಗೆ ಸಂತಾನಪ್ರಾಪ್ತಿಗಾಗಿ ಆ ಮುನಿಗಳು ಒಪ್ಪಿಸಿ, ಆರಾಧನೆ ಮಾಡು ಎಂದು ಆದೇಶವಿತ್ತಿದ್ದಾರೆ. ಈಗ ಹಲವಾರು ದಿನಗಳಿಂದ ಈ ಹಸುವನ್ನು ನಿರಂತರ ಸೇವಿಸುತ್ತಲಿದ್ದೇನೆ. ಇದರ ಮಗು ಮನೆಯಲ್ಲಿ ತಾಯಿಯ ದಾರಿಯನ್ನು ಕಾಯುತ್ತಲಿದೆ. ಮಹಾದೇವರ ಕಿಂಕರನಾದ ನಿನ್ನಿಂದ ಈ ಹಸುವನ್ನು ಬಿಡಿಸುವದು ನನಗೆ ಅಶಕ್ಯವಾಗಿದೆ. ನನಗೆ ರಕ್ಷಿಸಲು ಒಪ್ಪಿಸಿದ ಈ ಧೇನುವನ್ನು ಇಲ್ಲಿ ಸಿಂಹದ ಬಾಯಿಗೆ ಇಟ್ಟು ನಾನು ಹೇಗೆ ಮನೆಗೆ ಹೋಗಲಿ? ಕಾಮಧೇನುವಿನ ಮೊಮ್ಮಗಳಾದ ಈ ನಂದಿನಿಯು ಜಗತ್ತಿನಲ್ಲಿಯೇ ಅಸದೃಶ್ಯವಾದ ಹಸು. ಇದರ ಬದಲಾಗಿ ನಾನು ಏನು ಕೊಟ್ಟರೆ ವಶಿಷ್ಠರಿಗೆ ಪ್ರೀತಿಯಾದೀತು? ಆದುದರಿಂದ ಸಿಂಹರಾಜ ! ಈ ಹಸುವನ್ನು ಬಿಟ್ಟುಬಿಡು. ಅದರ ಬದಲಾಗಿ ನನ್ನನ್ನೇ ನಿನ್ನ ಆಹಾರವನ್ನಾಗಿ ಮಾಡಿಕೋ. ಅಪಕೀರ್ತಿಯಿಂದ ದೂಷಿತವಾದ ಈ ನನ್ನ ದೇಹವನ್ನು ನಿನಗೆ ಅರ್ಪಿಸುತ್ತೇನೆ. ರಕ್ಷಣೆ ಮಾಡಲೊಪ್ಪಿಸಿದ ಒಂದು ಹಸುವನ್ನು ಸಹ ದಿಲೀಪ ಸಿಂಹದ ಬಾಯಿಗೆ ಬಿಟ್ಟ ಎಂದು ನನಗೆ ಅಪವಾದ ಬರುವದನ್ನು ತಪ್ಪಿಸು. ನಿನ್ನ ಇಂದಿನ ಭೋಜನಕ್ಕೆ ಚ್ಯುತಿಯಿಲ್ಲ. ಇದೋ, ನನ್ನ ಈ ಶರೀರವನ್ನೇ ಆಹಾರವನ್ನಾಗಿ ಸ್ವೀಕರಿಸು. ಇದರಿಂದ ಋಷಿಗಳ ಅತ್ಯಂತ ಪ್ರೀತಿಯ ಈ ನಂದಿನಿಯೂ ಸುರಕ್ಷಿತವಾಗುವದು. ನನಗೆ ಕರ್ತವ್ಯ ಪಾಲಿಸಿದ ಸಮಾಧಾನ.

ಹೀಗೆ ದಿಲೀಪನು ಪ್ರಾರ್ಥನೆ ಮಾಡಿಕೊಂಡ ಬಳಿಕ ನಂದಿನಿಯು ದೀನದೃಷ್ಟಿಯಿಂದ ಮಹಾರಾಜನ ಕಡೆಗೆ ನೋಡಿತು. ಸಿಂಹದೆಡೆಗೂ ನೋಡಿತು. ಸಿಂಹವು ರಾಜನ ಪ್ರಾರ್ಥನೆಯನ್ನು ಸಮ್ಮತಿಸಿತು. ದಿಲೀಪ ಮಹಾರಾಜನಿಗೆ ಕರ್ತವ್ಯ ಪಾಲಿಸಿದ ಸಂತೋಷ. ಅರೆಚಣದಲ್ಲಿಯೇ ದಿಲೀಪ ಮಹಾರಾಜನು ತನ್ನ ದೇಹವನ್ನು ಮುದುರಿಕೊಂಡು, ಪಿಂಡದಂತೆ ಸಂಕೋಚಗೊಳಿಸಿ ಸಿಂಹದ ಮುಂದೆ ತಿನ್ನಲು ಅನುಕೂಲವಾಗುವಂತೆ ಇರಿಸಿದ. 'ಸಿಂಹವು ತನ್ನ ಮೇಲೆ ಈ ಕ್ಷಣದಲ್ಲಿ ಎರಗಬಹುದು' ಎಂದು ನಿರೀಕ್ಷಿಸುತ್ತ ಕುಳಿತ ಆ ದಿಲೀಪ ಮಹಾರಾಜನ ಮೇಲೆ ಒಮ್ಮೆಲೇ ಪುಷ್ಪವೃಷ್ಟಿ. ಆಗಸದಿಂದ ದೇವತೆಗಳು ದಿಲೀಪನ ಮೇಲೆ ಸಂತಸದುಂಬಿ ಹೂಗರೆದರು. ಆ ನಂದಿನಿಯು ವತ್ಸ ! ಎದ್ದುನಿಲ್ಲು, ಎಂದು ನುಡಿಯಿತು. ಮಹಾರಾಜನು ಒಮ್ಮೆಲೇ ಮುಖ ಮೇಲೆತ್ತಿ ನೋಡಿದ. ಕಣ್ಣೆದುರು ಕ್ರೂರ ಸಿಂಹವನ್ನು ನಿರೀಕ್ಷಿಸಿದ ಅವನಿಗೆ ಆಶ್ಚರ್ಯ. ಸಿಂಹವೆಲ್ಲಿಯೂ ಕಾಣಬರಲಿಲ್ಲ. ನಂದಿನೀ ಧೇನುವು ಮಾತ್ರ ಕ್ಷೀರಧಾರೆಯನ್ನು ಸುರಿಸುತ್ತ ಅವನ ಕಣ್ಣೆದುರು ನಿಂತು ಕೊಂಡಿತ್ತು. ಆಶ್ಚರ್ಯಚಕಿತನಾಗಿ ನಂದಿನಿಯತ್ತ ನೋಡುತ್ತ ನಿಂತ ಮಹಾರಾಜನನ್ನು ಕುರಿತು ನಂದಿನಿಯು ನುಡಿಯಿತು.

**ನಂದನಿ :-** ''ಮಹಾರಾಜ ನಾನೇ ನಿನ್ನ ಶ್ರದ್ಧೆಯನ್ನು ಪರೀಕ್ಷಿಸಲೆಂದು ಮಾಯೆಯಿಂದ ಸಿಂಹವನ್ನು ಸೃಷ್ಟಿಮಾಡಿದ್ದೆ. ವಶಿಷ್ಠ ಋಷಿಗಳ ತಪಃಪ್ರಭಾವದಿಂದ ನನ್ನನ್ನು ಯಾವ ಹಿಂಸಪ್ರಾಣಿಯೂ ಹಿಂಸಿಸಲಾರದು. ಸಾಕ್ಷಾತ್ ಯಮನೂ ಸಹ ನನ್ನನ್ನು ಮುಟ್ಟಲಾರ. ಉಳಿದ ಪ್ರಾಣಿಗಳಿಗಂತೂ ನನ್ನನ್ನು ಮನಸ್ಸಿನಿಂದ ಸಹ ಆಕ್ರಮಿಸುವ ಶಕ್ತಿಯಿಲ್ಲ. ನೀನು ನಿನ್ನ ದೇಹವನ್ನೇ ಕೊಟ್ಟು ನನ್ನನ್ನು ರಕ್ಷಿಸಲು ಉದ್ಯುಕ್ತನಾಗಿದ್ದೆ. ಇದರಿಂದಾಗಿ ನಿನ್ನ ಮೇಲೆ ನಾನು ಪ್ರಸನ್ನಳಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು.

**ಮಹಾರಾಜ:-** ತಾಯಿ, ಎಲ್ಲ ಪ್ರಾಣಿಗಳ ಮನಸ್ಸಿನ ಅಪೇಕ್ಷೆಗಳನ್ನು ತಿಳಿದ ನೀನು ನನ್ನ ಮನಸ್ಸಿನ ಅಭಿಲಾಷೆಯನ್ನು ತಿಳಿಯಲಾರೆಯಾ? ನನಗೆ ಮಗಧ ರಾಜಪುತ್ರಿಯಾದ ಸುದಕ್ಷಿಣೆಯಲ್ಲಿ ನನ್ನ ವಂಶದ ಕೀರ್ತಿಯನ್ನು ಬೆಳೆಯಿಸುವ ಒಂದು ಗಂಡುಮಗುವನ್ನು ಕರುಣಿಸು. ನಿನ್ನಂಥ ದೈವೀಶಕ್ತಿಯ ಕಾಮಧೇನು ಸಂತತಿಯವರಿಗೆ ಯಾವುದು ತಾನೇ ಅಸಾಧ್ಯ?

**ನಂದಿನಿ:-** ಪುತ್ರ ! ದಿಲೀಪ, ಈಗ ನೀನು ಒಂದು ದೊನ್ನೆಯಲ್ಲಿ ನನ್ನ ಹಾಲನ್ನು ಹಿಂಡಿ ಇಲ್ಲೇ ಪಾನಮಾಡು. ಇದರ ಪ್ರಭಾವದಿಂದ ನಿನ್ನ ವಂಶವನ್ನು ಬೆಳಗುವ ಮತ್ತು ಶಸ್ತ್ರವಿದ್ಯಾ ನಿಪುಣನಾದ, ಮಹಾಪರಾಕ್ರಮಿ, ಪುತ್ರನು ನಿನಗೆ ಉತ್ಪನ್ನನಾಗುವನು.

**ದಿಲೀಪ:-** ತಾಯಿ, ನಿನ್ನ ಅಮೃತಸಮಾನವಾದ ಹಾಲನ್ನು ಗುರುಗಳು ತಮ್ಮ ಯಜ್ಞ ಕಾರ್ಯಕ್ಕಾಗಿ ಉಪಯೋಗಿಸಿದ ಮೇಲೆ ಉಳಿದ ದುಗ್ಧವನ್ನು ಗುರುಗಳ ಅಪ್ಪಣೆ ಪಡೆದು ನಾನು ಪಾನಮಾಡುತ್ತೇನೆ. ಈಗ ನಿನ್ನ ಅನುಗ್ರಹ ರೂಪವಾದ ವಚನಾಮೃತವನ್ನು ಪಾನಮಾಡಿ ತೃಪ್ತನಾಗಿದ್ದೇನೆ. ನನಗೆ ಈಗ ತಾಯಿಯಾದ ನಿನ್ನ ಸೇವೆಯ ಹೊರತು ಬೇರಾವ ಅಪೇಕ್ಷೆ ಉಳಿದಿಲ್ಲ. ತಾಯಿ, ನನಗೆ ಇಂದು ನಿನ್ನ ತಾಯಿಯ ತಾಯಿಯಾದ ಕಾಮಧೇನುವು ಕೊಟ್ಟ ಶಾಪವು ಸಹ ವರವಾಗಿ ಪರಿಣಮಿಸಿದೆ. ಕಾಮಧೇನುವು ಅಂದು ನನಗೆ ಶಾಪವನ್ನು ಕೊಡದಿದ್ದರೆ ಇಂದು ನಿನ್ನ ಸೇವೆಯ ಸೌಭಾಗ್ಯ, ದರುಶನ ಭಾಗ್ಯ ಲಭ್ಯವಿರುತ್ತಿರಲಿಲ್ಲ. ಈ ವರಪ್ರಸಾದವೂ ಸಿಗುತ್ತಿರಲಿಲ್ಲ. ಆದುದರಿಂದ ನಿನ್ನ ಮಹಾತಾಯಿ ನನ್ನ ಮೇಲೆ ಪರಮೋಪಕಾರ ಮಾಡಿದ್ದಾಳೆ.

ದಿಲೀಪರಾಜನ ಈ ವಚನವನ್ನು ಕೇಳಿ ನಂದಿನಿಯು ಸಾಧು, ಸಾಧು ಎಂದು ಅವನನ್ನು ಹೊಗಳಿ ನುಡಿಯಿತು.

ದಿಲೀಪರಾಜನು ಹಿಮಾಲಯದ ಆ ಗಹನ ಗರ್ಭದಿಂದ ಹೊರಟು ವಶಿಷ್ಠ ಋಷಿಗಳ ಆಶ್ರಮಕ್ಕೆ ಆಗಮಿಸಿದ. ರಾಜನ ಮುಖದ ಮೇಲಿನ ಪ್ರಸನ್ನ ಕಾಂತಿಯನ್ನು ನೋಡಿಯೇ ಅವನ ಪಟ್ಟಮಹಿಷಿಯಾದ ಸುದಕ್ಷಿಣೆಯು ಮನೋರಥವು ಪೂರ್ಣವಾಗಿದೆಯೆಂದು ಊಹಿಸಿದಳು. ಸಂತಸದಿಂದ ಮುಂದೆ ಬಂದು ನಂದಿನಿಯ ಪೂಜೆಗೈದಳು. ಬಳಿಕ ಆ ಸುದಕ್ಷಿಣಾ ಹಾಗೂ ದಿಲೀಪ ದಂಪತಿಗಳ ಸುಪ್ರಸನ್ನ ಮುಖಮಂಡಲಗಳನ್ನು ನೋಡಿಯೇ ವಿಷಯ ತಿಳಿದ ವಶಿಷ್ಠರು ಆನಂದದಿಂದ ಮಾತನಾಡಿದರು.

**ವಶಿಷ್ಠ:-** ಮಹಾರಾಜ, ನಿನ್ನ ಮುಖದ ಮೇಲಿನ ಕಾಂತಿಯಿಂದಲೇ ನಂದಿನಿಯ ಅನುಗ್ರಹ ನಿನಗಾಗಿದೆ ಎನ್ನುವದು ಸ್ಪಷ್ಟವಾಗುತ್ತದೆ. ಈ ನಂದಿನಿಯು ಕಲ್ಪವೃಕ್ಷದಂತೆ ಕಾಮಿತಾರ್ಥವನ್ನು ಪೂರೈಸಲು ಯಾವಾಗಲೂ ಸಮರ್ಥಳು. ಅವಳನ್ನು ಆರಾಧನೆಮಾಡಿದ ನೀನು ಅತ್ಯುತ್ತಮವಾದ ಸಂತಾನವನ್ನು ಪಡೆಯುವಿ. ನಂದಿನಿಯು ನಿನ್ನನ್ನು ಕಠೋರ ಪರೀಕ್ಷೆಗೆ ಒಳಪಡಿಸಿದರೂ ಅದರಲ್ಲಿ ನೀನು ಕರ್ತವ್ಯದಕ್ಷನಾಗಿ ಸತ್ಯನಿಷ್ಠನಾಗಿ ನಡೆದು ಯಶಸ್ವಿಯಾದೆ. ಇಂದು ರಾತ್ರಿ ನೀನು ನಿನ್ನ ಭಾರ್ಯೆಯೊಡನೆ ಕೂಡಿ ಈ ನಂದಿನಿಯ ಪೂಜೆ ಮಾಡು. ನಾಳೆ ಬೆಳಗಾದ ಬಳಿಕ ಆ ನಂದಿನಿಯ ದಿವ್ಯವಾದ ದುಗ್ಧವನ್ನು ಪಾನಮಾಡಿ ನಿನ್ನ ನಗರಕ್ಕೆ ತೆರಳು.

ಹೀಗೆ ದಿಲೀಪರಾಜನು ಆ ನಂದಿನೀಧೇನುವನ್ನು ಶ್ರದ್ಧೆಯಿಂದ ಆರಾಧಿಸಿ, ತನ್ನ ಮನೋರಥವನ್ನು ಪಡೆದು, ತನ್ನ ರಾಜಧಾನಿಗೆ ತೆರಳಿದ. ಮುಂದೆ ಕೆಲವು ದಿನಗಳ ಬಳಿಕ

ನಂದಿನಿಯ ಅನುಗ್ರಹದಿಂದ ದಿಲೀಪನಿಗೆ ರಘು ಎಂಬ ಪುತ್ರ ಜನಿಸಿದ. ಆ ರಘುವಿನಿಂದ ಸೂರ್ಯವಂಶದ ಕೀರ್ತಿಯು ದಿಗಂತ ವಿಶ್ರಾಂತವಾಯಿತು.

**ಶಿವಶರ್ಮ:-** ಈ ದಿಲೀಪರಾಜನ ಮನೋಹರವಾದ ಕಥೆಯನ್ನು ಮುನಿಯು ಶರಭನಿಗೆ ಹೇಳಿ ಚಂಡೀದೇವಿಯ ಪೂಜಾವಿಧಿಯನ್ನು ಉಪದೇಶಿಸಿ ತನಗೆ ಅಭಿಮತವಾದ ಗತಿಯನ್ನು ಹೊಂದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ನಂದಿನಿಯಿಂದ ದಿಲೀಪರಾಜನ ಪರೀಕ್ಷೆ, ಮಾಯಾಸಿಂಹ ಹಾಗೂ ದಿಲೀಪರ ಸಂವಾದ, ನಂದಿನಿಯಿಂದ ವರಪ್ರದಾನ ಎಂಬ ನೂರ ಎಂಬತ್ತೈದನೇಯ ಅಧ್ಯಾಯ ಮುಗಿದುದು*



ಅಧ್ಯಾಯ - ೧೮೬

## ದೇವಲ ಮುನಿಯ ವಚನದಂತೆ ಶರಭವೈಶ್ಯನಿಂದ ಚಂಡಿಕಾ ಪೂಜೆ ಮಹಾತಾಯಿಯ ಅಪ್ಪಣೆಯಿಂದ ಇಂದ್ರಪ್ರಸ್ಥ ತೀರ್ಥದಲ್ಲಿ ಸ್ನಾನಮಾಡುವದರಿಂದ ಶರಭವೈಶ್ಯನಿಗೆ ಪುತ್ರಪ್ರಾಪ್ತಿ; ಶರಭನಿಂದ ಗೃಹತ್ಯಾಗ; ರಾಕ್ಷಸ ಶರಭ ಸಂವಾದ

**ಶಿವಶರ್ಮ:-** ವಿಷ್ಣುಶರ್ಮನೇ, ಅನಂತರ ಆ ಶರಭವೈಶ್ಯನು ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಮಡದಿಯೊಂದಿಗೆ ಆ ಚಂಡಿಕಾ ದೇವಾಲಯಕ್ಕೆ ಹೋದ. ಅಲ್ಲಿ ಇಬ್ಬರೂ ದಂಪತಿಗಳು ವಿಧಿಪೂರ್ವಕವಾಗಿ ಸ್ನಾನ ಮಾಡಿ ಹೂವು, ಹಾರ, ಧೂಪ, ದೀಪ ಮುಂತಾದವುಗಳಿಂದ ಸಂತಾನಾಪೇಕ್ಷೆಯಿಂದ ಆ ಚಂಡಿಕಾದೇವಿಯನ್ನು ಪೂಜೆ ಮಾಡಿದರು. ಹೀಗೆ ಏಳು ದಿನ ಆ ಮಹಾತಾಯಿಯನ್ನು ಶ್ರದ್ಧೆಯಿಂದ ಆರಾಧಿಸಿದ ಬಳಿಕ ಏಳನೆಯ ದಿನ ಆ ಭವಾನಿಯು ಪ್ರಸನ್ನಳಾದಳು. ಆ ವೈಶ್ಯ ದಂಪತಿಗಳಿಗೆ ತನ್ನ ಪ್ರತ್ಯಕ್ಷ ದರ್ಶನವನ್ನು ನೀಡಿದಳು. ಅನಂತರ ಆ ವೈಶ್ಯ ದಂಪತಿಗಳ ಮೇಲೆ ಅನುಗ್ರಹೇಚ್ಛೆಯಿಂದ ಪ್ರಸನ್ನಳಾದ ಪಾರ್ವತಿಯು ಮಾತನಾಡಿದಳು.

**ಪಾರ್ವತಿ:-** ವೈಶ್ಯ, ನಿನ್ನ ಭಕ್ತಿಯಿಂದ ನಾನು ಪ್ರೀತಳಾಗಿದ್ದೇನೆ. ನೀನು ಸಂತತಿಯ ಬಯಕೆಯಿಂದ ನನ್ನ ಪೂಜೆಯನ್ನು ಮಾಡಿರುವೆಯಷ್ಟೇ. ನಿನಗೆ ಒಳ್ಳೇ ಸಂತಾನವನ್ನು ಕರುಣಿಸುವೆ. ಅದಕ್ಕಾಗಿ ನೀನು ಈಗ ಇಂದ್ರನ ಅಧಿಕಾರಕ್ಕೆ ಒಳಪಟ್ಟ ಖಾಂಡವವನಕ್ಕೆ ಹೋಗು. ಅಲ್ಲಿ ಇಂದ್ರಪ್ರಸ್ಥ ಎಂಬ ಹೆಸರಿನ ಪುಣ್ಯಕರವಾದ ತೀರ್ಥವಿದೆ. ಬೃಹಸ್ಪತ್ಯಾಚಾರ್ಯರು ನಿರ್ಮಿಸಿದ ನಿಗಮೋದ್ಬೋಧಕವು ಸರ್ವಶ್ರೇಷ್ಠ ! ಅದು ಸರ್ವಕಾಮಪ್ರದಾಯಕ. ನಿನಗೆ ಸಂತಾನದ ಅಪೇಕ್ಷೆ ಬಲವತ್ತರವಾಗಿದ್ದರೆ ನೀನು ಆ ಬೃಹಸ್ಪತೀ ತೀರ್ಥದಲ್ಲಿ ಸ್ನಾನ ಮಾಡು. ನಾನೂ ಸಹ ಪೂರ್ವಕಾಲದಲ್ಲಿ ಸಂತಾನಾಪೇಕ್ಷೆಯಿಂದ ಆ ಬೃಹಸ್ಪತೀತೀರ್ಥದಲ್ಲಿ ಸ್ನಾನಮಾಡಿದೆ. ಶ್ರೇಷ್ಠ ಸತ್ಪುತ್ರನಾದ ಸ್ಕಂದನನ್ನು ಪಡೆದೆ.

ಪಾರ್ವತಿದೇವಿಯ ಈ ವಚನವನ್ನು ಕೇಳಿ ನನ್ನ ತಂದೆಯು ತನ್ನ ಮಡದಿಯೊಡನೆ ಆ ಬೃಹಸ್ಪತೀ ತೀರ್ಥಕ್ಕೆ ತೆರಳಿದ. ಸಂತತಿಯ ಅಪೇಕ್ಷಯಿಂದ ಆ ತೀರ್ಥದಲ್ಲಿ ಸ್ನಾನ ಮಾಡಿದ. ವಸ್ತ್ರಸಹಿತವಾದ ನೂರು ಧೇನುಗಳನ್ನು ಬ್ರಾಹ್ಮಣರಿಗೆ ದಾನನೀಡಿದ. ದೇವತೆಗಳನ್ನು ಆರಾಧಿಸಿದ. ಪಿತೃಗಳಿಗೆ ತರ್ಪಣವನ್ನು ಕೊಟ್ಟ. ಹೀಗೆ ಏಳು ದಿವಸ ನಮ್ಮ ತಾಯಿ-ತಂದೆಯರು ಮನಸ್ಸನ್ನು ನಿಗ್ರಹಿಸಿ ಇಂದ್ರಿಯಗಳನ್ನು ಬಿಗಿಹಿಡಿದು ಭಗವತಿಯ ಆರಾಧನೆ ಮಾಡುತ್ತ ಏಳು ದಿನ ವಾಸಮಾಡಿದರು. ಅನಂತರ ತಮ್ಮ ಮನೆಗೆ ತೆರಳಿದರು.

ಪಾತಾಳದಲ್ಲಿ ನಮ್ಮ ತಾಯಿಯು ಒಂಭತ್ತು ತಿಂಗಳು ತುಂಬಿದ ಬಳಿಕ ಹತ್ತನೆಯ ತಿಂಗಳು ನನ್ನನ್ನು ಹಡೆದಳು. ಇದೆಲ್ಲವನ್ನೂ ನಾನು ನಮ್ಮ ತಂದೆಯ ಮುಖಾಂತರವೇ ಕೇಳಿ ತಿಳಿದೆ.

ಮುಂದೆ ನಾನು ತುಸು ದೊಡ್ಡವನಾದ ಬಳಿಕ ನನ್ನ ತಂದೆಯು ನನ್ನ ಮೇಲೆ ಮನೆತನದ ಭಾರವನ್ನೆಲ್ಲ ವಹಿಸಿದರು. ಪ್ರೌಢನಾದ ನನ್ನ ಮೇಲೆ ಕುಟುಂಬದ ಜವಾಬ್ದಾರಿಯನ್ನೆಲ್ಲ ಒಪ್ಪಿಸಿ, ನಮ್ಮ ತಂದೆಯು ವಿರಕ್ತನಾಗಿ ಅರಣ್ಯಕ್ಕೆ ಹೋಗುವ ಇಚ್ಛೆಯಿಂದ ನನ್ನನ್ನು ಕುರಿತು ಮಾತನಾಡಿದ.

**ತಂದೆ:-** ವತ್ಸ, ನಾನು ಈಗ ಮುದುಕನಾದೆ. ಕೂದಲು ಎಲ್ಲ ಬೆಳ್ಳಗಾಗಿವೆ. ಶರೀರದಲ್ಲಿ ನಡುಕ, ಶೈಥಿಲ್ಯ ಉಂಟಾಗಿದೆ. ಆದುದರಿಂದ ನಾನು ಈಗ ಅರಣ್ಯಕ್ಕೆ ಹೋಗಿ ಗೋವಿಂದನನ್ನು ಆರಾಧಿಸಿ, ಒಲಿಸುವ ಪ್ರಯತ್ನ ಮಾಡುವೆ. ವೇದೋಕ್ತವಾದ ಕರ್ಮಗಳನ್ನು ಅನುಷ್ಠಾನ ಮಾಡುತ್ತ ತೀರ್ಥಯಾತ್ರೆ ಮಾಡುತ್ತೇನೆ. ಸಕಲ ಪವಿತ್ರ ತೀರ್ಥಗಳಲ್ಲಿ ಸ್ನಾನ ಮಾಡಿ, ಅಲ್ಲಲ್ಲಿ ಇರುವ ಶ್ರೀಹರಿಯ ರೂಪಗಳನ್ನು ಆರಾಧಿಸಿ ಕೃತಾರ್ಥನಾಗುತ್ತೇನೆ. ಸಜ್ಜನರ ಸಹವಾಸ ರೂಪವಾದ ಔಷಧದಿಂದ ಈ ಸಂಸಾರವೆಂಬ ರೋಗವನ್ನು ಪರಿಹಾರ ಮಾಡಿಕೊಳ್ಳುತ್ತೇನೆ.

ತಂದೆಯ ಈ ವಚನವನ್ನು ಕೇಳಿ ನಾನು ವಿನೀತನಾಗಿ ಕೈ ಮುಗಿದು ನನ್ನ ತಂದೆಗೆ ಕೇಳಿಕೊಂಡೆ.

''ಪೂಜ್ಯನಾದ ತಂದೆಯೇ, ನಿನ್ನ ಉದ್ದೇಶವು ಸ್ತುತ್ಯ. ಶ್ಲಾಘನೀಯ. ಈ ಮುಪ್ಪಿನ ಕಾಲದಲ್ಲಿ ಮನೆಯಲ್ಲಿದ್ದು ರೋಗರುಜಿನಗಳಿಂದ ಪೀಡಿತನಾಗಿ ಆಯುಷ್ಯವನ್ನು ವ್ಯಯಿಸುತ್ತ ಮರಣವನ್ನು ನಿರೀಕ್ಷಿಸುತ್ತ ಕೂಡ್ರುವದಕ್ಕಿಂತ ಅರಣ್ಯಕ್ಕೆ ಹೋಗಿ ಅಲ್ಲಲ್ಲಿ ಸಂಚರಿಸಿ ಬದುಕಿರುವವರೆಗೂ ಶ್ರೀಹರಿಯ ಆರಾಧನೆಯನ್ನು ಮಾಡುತ್ತ ಇರುವುದು ಶ್ರೇಷ್ಠಕಾರ್ಯ. ಆದರೆ ನೀನು ಇಂಥ ಮುಪ್ಪಿನ ವಯಸ್ಸಿನಲ್ಲಿ ಮನೆ ಬಿಟ್ಟು ಹೋದರೆ ಜನರು ನನಗೆ ಅಪವಾದವನ್ನು ಕೊಡುವರು. ತಮ್ಮ ತಾಯಿ-ತಂದೆಗಳನ್ನು ರಕ್ಷಣೆ ಮಾಡದೇ ಈ ಮಗನು ಅವರನ್ನು ಮನೆಯಿಂದ ಹೊರಗೆ ಅಟ್ಟಿದ್ದಾನೆ ಎಂದು ನನ್ನನ್ನೇ ನಿಂದಿಸುವರು. ಆದುದರಿಂದ ದಯಮಾಡಿ ನೀನು ಮನೆಬಿಟ್ಟು ಹೋಗುವದು ಬೇಡ. ಇದೇ ನಮ್ಮ ಊರಲ್ಲಿ ವಿಷ್ಣುಪಾದದಿಂದ ಉದ್ಭೂತಳಾದ ಗಂಗೆಯು ಹರಿಯುತ್ತಲಿದ್ದಾಳೆ.

ಗಂಗಾ ನದಿಯು ಮೂರು ಲೋಕಗಳನ್ನೇ ಪವಿತ್ರಗೊಳಿಸುವ ಪುಣ್ಯ ಪಯಸ್ವಿನೀ, ಆ ಗಂಗೆಯಲ್ಲಿ ಯಾರ ಮೂಳೆಗಳನ್ನು ಹಾಕುತ್ತಾರೋ, ಅವರು ಅಷ್ಟು ಮಾತ್ರದಿಂದಲೇ ಸ್ವರ್ಗಲೋಕವನ್ನು ಹೊಂದುತ್ತಾರೆ. ಸಗರರಾಜನ ಅರವತ್ತು ಸಾವಿರ ಜನ ಮಕ್ಕಳು

ಕಪಿಲಋಷಿಯ ಕ್ರೋಧದಿಂದ ಸುಟ್ಟು ಹೋಗಿದ್ದರೂ ಗಂಗಾಜಲದ ಸ್ಪರ್ಶಮಾತ್ರದಿಂದ ಉದ್ಧ್ರತರಾದರು. ಇಂಥ ಸ್ವರ್ಗದ ನಿಚ್ಚಣಿಕೆಯಂತಿರುವ, ಮುಕ್ತಿದಾಯಕಳಾದ ಗಂಗೆಯನ್ನು ತೊರೆದು ನೀನು ಬೇರೆಡೆಗೆ ಏಕೆ ಹೋಗುವೆ? ಸಮೀಪದಲ್ಲಿಯೇ ಇರುವ ಗಂಗೆಯನ್ನು ಅವಮಾನಮಾಡಿ ದೂರ ಹೋದರೆ ನಿನಗೆ ಸದ್ಗತಿಯಾಗುವದಿಲ್ಲ. ಗಂಗೆಯಲ್ಲಿ ಮಿಂದಮಾತ್ರಕ್ಕೆ ಜ್ಞಾನಲೇಶ ಹೀನರಾದ ಪಶುಪಕ್ಷಿಗಳೂ ಸಹ ಉದ್ಧ್ರತರಾಗುತ್ತಾರೆ. ಇಂಥ ಗಂಗೆಯನ್ನು ನೀನು ಬಿಟ್ಟು ಹೋಗುವದು ಸರಿಯೆ?

ನನ್ನ ತಂದೆಯು ಸತ್ಯವಾದ ನನ್ನ ಮಾತನ್ನು ಕೇಳಿ ಗೃಹತ್ಯಾಗದ ವಿಚಾರವನ್ನು ಪರಿತ್ಯಜಿಸಿದ. ಮನೆಯಲ್ಲಿಯೇ ಉಳಿದುಕೊಂಡ. ಆದರೆ ಎಲ್ಲ ವಿಷಯಗಳಿಂದ ಪರಾಙ್ಮುಖನಾಗಿ ತ್ರಿಕಾಲದಲ್ಲಿ ಗಂಗಾ ಸ್ನಾನಮಾಡುತ್ತ ಪೂಜೆ, ಪಾರಾಯಣ, ಸತ್ಕಥಾ ಪ್ರಸಂಗ ಇವುಗಳಿಂದಲೇ ಕಾಲ ಕಳೆಯತೊಡಗಿದ. ಸಮೀಪದ ಯಾವ ಮನೆಯಲ್ಲಿ ಪುರಾಣ, ಪಾಠ, ಪ್ರವಚನ ಮುಂತಾದವು ನಡೆಯುತ್ತಿದ್ದರೂ ನನ್ನ ತಂದೆ ಅಲ್ಲಿಗೆ ಹೋಗುತ್ತಿದ್ದ. ಒಂದು ದಿವಸ ಅವನು ಪುರಾಣಕ್ಕೆ ಹೋದಾಗ ಪೌರಾಣಿಕರ ಬಾಯಿಂದ ಯಮುನಾತೀರ್ಥದ ಮಹಿಮೆಯನ್ನು ಕೇಳಿದ. ಅವಿಮುಕ್ತ ಕ್ಷೇತ್ರಗಳಾದ ಕಾಶಿ, ಹರಿದ್ವಾರ, ಪ್ರಯಾಗ, ಪುಷ್ಕರ, ಅಯೋಧ್ಯೆ, ದ್ವಾರಕಾ, ಕಂಚೀ, ಮಥುರಾ ಮೊದಲಾದ ತೀರ್ಥಗಳಿಗಿಂತ ನೂರುಪಟ್ಟು ಅಧಿಕ ಪುಣ್ಯಪ್ರದವಾಗಿದೆ ಈ ಯಮುನಾ ತೀರದ ನಿಗಮೋದ್ಬೋಧಕ ತೀರ್ಥ. ಹೀಗೆ ಮಹಾ ಪಂಡಿತರಾದ ಪುರಾಣೇಶರಿಂದ ನಿಗಮೋದ್ಬೋಧಕ ತೀರ್ಥದ ಮಹಿಮೆಯನ್ನು ಕೇಳಿ ತಾನೂ ಅಲ್ಲಿಗೆ ಹೋದನು. ನಿಗಮೋದ್ಬೋಧಕ ತೀರ್ಥದಲ್ಲಿ ಸ್ನಾನ ಮಾಡಿದ. ಭಗವಂತನನ್ನು ಆರಾಧಿಸಿದ. ಕೆಲವು ತಿಂಗಳುಗಳ ವರೆಗೆ ತ್ರಿಕಾಲದಲ್ಲಿ ಈ ತೀರ್ಥದಲ್ಲೇ ಸ್ನಾನ ಮಾಡಿ ಭಗವದ್ಧ್ಯಾನೈಕಪರನಾಗಿ ನೆಲೆಸಿದ.

ಕೆಲವು ದಿನಗಳ ಬಳಿಕ ನಮ್ಮ ತಂದೆಗೆ ಭಯಂಕರವಾದ ಜ್ವರ ಹಿಡಿಯಿತು. ಇದರಿಂದ ಅವನಿಗೆ ಎಚ್ಚರ ತಪ್ಪಿತು. ಮೂರ್ಛಾಕ್ರಾಂತನಾಗಿ ಬಿದ್ದುಬಿಟ್ಟ. ಹೀಗೆ ಕೆಲವೊಂದು ಕ್ಷಣಗಳ ವರೆಗೆ ಮೂರ್ಛಾವಸ್ಥೆಯಲ್ಲಿಯೇ ಇದ್ದು, ಕ್ರಮೇಣ ಚೇತರಿಸಿಕೊಂಡು, ಮತ್ತೆ ಉಜ್ಜೀವಿತನಾದ. ಎಚ್ಚರ ಬಂದ ಬಳಿಕ ಚಿಂತೆ ಪ್ರಾರಂಭವಾಯಿತು.

''ಇದೇನು ನನಗೆ ಕಷ್ಟಕಾಲ ಒದಗಿದೆ? ನನ್ನ ಮಗನು ದೇಶಾಂತರದಲ್ಲಿರುವನು. ನಾನಂತೂ ಈಗ ವ್ಯಾಧಿಗಳಿಂದ ಆಕ್ರಮಿಸಲ್ಪಟ್ಟಿದ್ದೇನೆ. ನಾನು ಹಿಂದೆ ಮಾಡಿದ ಅಗಮ್ಯಾಗಮನಕ್ಕೆ ಇನ್ನೂ ಪ್ರಾಯಶ್ಚಿತ್ತ ಮಾಡಿಕೊಂಡಿಲ್ಲ. ಇನ್ನು ನನಗೆ ಯಾವ ದುರ್ಗತಿಯಾದೀತು? ನನ್ನ ಮಗನು ಬಂದಾಗ ಕೊಡಬೇಕೆಂದು ಇಲ್ಲಿ ನಾನು ಗುಪ್ತನಾಗಿ ನಿಧಿಯನ್ನು ಹೂತು ಇಟ್ಟಿದ್ದೇನೆ. ಅದನ್ನೀಗ ಅಗೆದು ತೆಗೆಯುವಷ್ಟು ಸಾಮರ್ಥ್ಯವಿಲ್ಲ. ಇಲ್ಲಾರೂ ಜನ ಇಲ್ಲ. ಆದುದರಿಂದ ಹೇಳಿ ಕಳಿಸಲೂ ಆಗದು. ಮಗನು ಬೇಗ ಬರಲು ಯಾವ ದಾರಿಯೂ ಇಲ್ಲ.

ಹೀಗೆ ನನ್ನ ತಂದೆಯು ವಿಚಾರ ಮಾಡುತ್ತ, ತನ್ನಗುಡಿಸಲಿನಲ್ಲಿಯೇ ಚಳಿಯಿಂದ ನಡುಗುತ್ತ ಮಲಗಿಕೊಂಡಿದ್ದ. ಅಷ್ಟರಲ್ಲಿ ಒಬ್ಬ ಅತಿಥಿಯು ಅಲ್ಲಿಗೆ ಆಗಮಿಸಿದ. ಎಲ್ಲಿಯೋ ಯಾತ್ರಾರ್ಥವಾಗಿ ಹೊರಟಿದ್ದ ಆ ದಾರಿಹೋಕನು ಒಂದು ರಾತ್ರಿ ಈ ಗುಡಿಸಿಲಿನಲ್ಲಿ ತಂಗಬೇಕೆಂದು ಬಂದಿದ್ದ. ಗುಡಿಸಿಲಿನಲ್ಲಿ ಮಲಗಿದ ನನ್ನ ತಂದೆಯನ್ನು ಕಂಡು ಇವನು ಯಾವನೋ ಮುನಿ ಇರಬಹುದೆಂದು ಭಾವಿಸಿ ನನ್ನ ತಂದೆಯ ಬಳಿ ಬಂದು

ನಮಸ್ಕರಿಸಿದ. ಜ್ವರದಿಂದ, ಚಳಿಯಿಂದ ಮುದುರಿ ಮುದ್ದೆಯಾಗಿ ಮಲಗಿದ್ದ ನನ್ನ ತಂದೆಯನ್ನು ದಾರಿಹೋಕ ಪ್ರಶ್ನಿಸಿದ.

**ದಾರಿಹೋಕ:-** ಮುನಿಯೇ, ಹೀಗೇಕೆ ಮಲಗಿರುವೆ? ಇದು ಸಂಧ್ಯಾಕಾಲವಲ್ಲವೆ? ಸೂರ್ಯನು ಮುಳುಗುತ್ತಲಿದ್ದಾನೆ. ಇದು ಮಲಗುವ ಸಮಯವಲ್ಲ. ಆಗ ನನ್ನ ತಂದೆ ಕಷ್ಟಪಟ್ಟು ಮಾತನಾಡಿದ.

**ಶರಭ:-** ಪಥಿಕ, ನಾನು ಶರಭ ಎಂಬ ಹೆಸರಿನ ಒಬ್ಬ ವೈಶ್ಯ. ಕಾನ್ಯಕುಬ್ಜದಲ್ಲಿ ನನ್ನ ಮನೆಯಿರುತ್ತದೆ. ನನ್ನ ಮಡದಿ ಮಕ್ಕಳು ಬೇಡವೆಂದು ಹೇಳಿದರೂ ಈ ತೀರ್ಥದ ಮಾಹಾತ್ಮ್ಯೆಯನ್ನು ಕೇಳಿ ಇಲ್ಲಿ ಸ್ನಾನಮಾಡಿ ಕೆಲ ಕಾಲ ಭಗವದಾರಾಧನೆ ಮಾಡಬೇಕೆಂದು ಬಂದಿದ್ದೇನೆ. ನಾನು ಬಂದು ಕೆಲ ತಿಂಗಳುಗಳು ಕಳೆದವು. ಈಗ ಮೂರು ದಿನಗಳಿಂದ ಈ ಜ್ವರ ನನ್ನನ್ನು ಅಸ್ವಸ್ಥನನ್ನಾಗಿಸಿದೆ. ಉಲ್ಬಣವಾದ ಜ್ವರತಾಪವು ನನಗೆ ಈ ನಿರ್ಜನ ತಾಣದಲ್ಲಿ ಮರಣವನ್ನೇ ತಂದಂತಾಗಿತ್ತು. ಯಮನ ಮನೆಗೆ ಹೋಗಿ ಬಂದ ಅನುಭವ. ಸುದೈವದಿಂದ ಈಗ ನೀನು ಇಲ್ಲಿಗೆ ಬಂದೆ. ದಯಮಾಡಿ ನನ್ನನ್ನು ನನ್ನ ಮನೆಗೆ ಕರೆದುಕೊಂಡು ಹೋಗು. ನಿನಗೆ ಬೇಕಾದಷ್ಟು ದ್ರವ್ಯವನ್ನು ಕೊಡುತ್ತೇನೆ. ಈಗಲೇ ನಿನ್ನ ಕೈಯಲ್ಲಿ ಹಣ ಕೊಡುತ್ತೇನೆ. ನನ್ನನ್ನು ಮನೆಗೆ ಒಯ್ದು ಮುಟ್ಟಿಸಿದ ಬಳಿಕ ನೀನು ಬೇಡಿದಷ್ಟು ಹಣ ಕೊಡುತ್ತೇನೆ. ಇಲ್ಲಿ ನಾನೊಂದೆಡೆ ದ್ರವ್ಯವನ್ನು ಹುಗಿದಿಟ್ಟಿದ್ದೇನೆ. ಅದನ್ನು ನೀನು ಹೊರತೆಗೆ. ನನ್ನ ಕೈಗೆಕೊಡು.

ನನ್ನ ತಂದೆಯ ಮಾತನ್ನು ಕೇಳಿ ಧನಲುಬ್ಧನಾದ ಆ ದಾರಿಕಾರನ ಬಾಯಲ್ಲಿ ನೀರು ಬಿಟ್ಟಿತು. ಹಾಗೆಯೇ ಆಗಲಿ ಎಂದು ನನ್ನ ತಂದೆಗೆ ಹೇಳಿ ನನ್ನ ತಂದೆ ಹೇಳಿದ ಜಾಗದಲ್ಲಿ ಗುದ್ದಲಿಯಿಂದ ಅಗೆದ ಅಲ್ಲಿ ಹುಗಿದಿಟ್ಟ ಧನವನ್ನೆಲ್ಲ ಮೇಲೆ ತಂದು ನನ್ನ ತಂದೆಯ ಮುಂದೆ ಇರಿಸಿದ. ಮತ್ತು ನನ್ನ ತಂದೆಗೆ ಹೇಳಿದ. ಎಲೈ ವೈಶ್ಯನೇ, ನೀನು ಹೇಳಿದಂತೆ ನಿಧಿಯನ್ನೆಲ್ಲ ಹೊರತೆಗೆದು ನಿನ್ನ ಮುಂದೆ ತಂದಿರಿಸಿದ್ದೇನೆ. ಈಗ ಒಂದು ಮೇನೆ ಅಥವಾ ಪಲ್ಲಕಿಯನ್ನು ಹಣಕೊಟ್ಟು ಗೊತ್ತುಮಾಡಿಕೊಂಡು ತರುತ್ತೇನೆ. ನಿನ್ನನ್ನು ಅದರಲ್ಲಿ ಕುಳ್ಳಿರಿಸಿ, ಜೋಕೆಯಿಂದ ಹೊತ್ತುಕೊಂಡು ಒಯ್ಯುತ್ತೇನೆ. ನಿನ್ನ ದೇಹದಲ್ಲಿನ್ನೂ ಜ್ವರ ಅಸ್ವಾಸ್ಥ್ಯಗಳಿರುವದರಿಂದ ನೀನು ನಡೆಯಲಾರೆ. ಆದುದರಿಂದ ನನಗೆ ಹಣವನ್ನು ನೀಡು.

ಹೀಗೆ ದಾರಿಕಾರನು ಹೇಳಿದ್ದನ್ನು ಕೇಳಿ ನನ್ನ ತಂದೆಯು ಅವನಿಗೆ ಮೂರು ತೊಲೆಯಷ್ಟು ಬಂಗಾರವನ್ನು ಕೊಟ್ಟನು. ತಂದೆಯು ಕೊಟ್ಟ ಆ ಮೂರೂ ಬಂಗಾರದ ನಾಣ್ಯಗಳನ್ನು ತೆಗೆದುಕೊಂಡು ಅವನು ಪಟ್ಟಣಕ್ಕೆ ಹೋದ. ಅಲ್ಲಿ ಒಂದು ರಾತ್ರಿ ತಂಗಿ ಒಂದು ಮೇಣೆಯನ್ನು ಗೊತ್ತುಮಾಡಿ ಅದನ್ನು ಹೊರುವವರಿಗೆ ಎರಡು ಬಂಗಾರದ ನಾಣ್ಯ ನೀಡಿ ಒಂದು ನಾಣ್ಯವನ್ನು ತಾನೇ ಇಟ್ಟುಕೊಂಡು ಅವರನ್ನು ಕರೆದುಕೊಂಡು ಬಂದ. ಅನಂತರ ಆ ಮೇಣೆಯಲ್ಲಿ ಶರಭನನ್ನು ಕುಳ್ಳಿರಿಸಿಕೊಂಡು ಮೇಣೆಯ ವಾಹಕರು ಕಾನ್ಯಕುಬ್ಜದೆಡೆಗೆ ನಡೆದರು.

ಹೋಗುವಾಗ ಈ ಬೃಹಸ್ಪತಿತೀರ್ಥದ ನೀರನ್ನು ಒಂದು ಕಮಂಡಲದಲ್ಲಿ ತುಂಬಿ ಆ ಮೇಣೆಯ ಬದಿಯಲ್ಲಿರಿಸಿದರು. ಮಾರ್ಗಮಧ್ಯದಲ್ಲಿ ನೀರಡಿಕೆಯಿಂದ ನನ್ನ ತಂದೆ ಬಿಕ್ಕಳಿಸಿದಾಗ ಆ ದಾರಿಕಾರನು ಆ ಕಮಂಡಲದ ನೀರನ್ನು ತುಸು ತುಸು ಕುಡಿಸುತ್ತಲಿದ್ದ.

ಹೀಗೆ ಆ ಶಿಬಿಕಾವಾಹಕರು ಮೇಣೆಯನ್ನು ಹೊತ್ತುಕೊಂಡು ನಡೆಯುತ್ತ ಸ್ವಲ್ಪ ದೂರ ಸಾಗಿದ ನಂತರ ಒಂದು ಸರೋವರದ ದಂಡೆಯ ಮೇಲೆ ಇಳಿಸಿದರು. ತಾವೆಲ್ಲರೂ ಸ್ನಾನ ಮಾಡಿ ಊಟ ಮುಗಿಸಿದರು. ಮತ್ತೆ ಅಲ್ಲಿಂದ ಹೊರಟರು. ಬೇಗನೆ ಕಾನ್ಯಕುಬ್ಜವನ್ನು ತಲುಪಬೇಕೆಂಬ ಆತುರದಿಂದ ವೇಗವಾಗಿ ಹೆಜ್ಜೆ ಹಾಕಿದರು. ದಣಿದು ನೀರಡಿಸಿದಾಗ ಮೇಣೆಯ ಬದಿಯಲ್ಲಿನ ಕಮಂಡಲದಲ್ಲಿದ್ದ ನೀರನ್ನೇ ಪಾನಮಾಡಿದರು. ಜ್ವರದಿಂದ ನರಳುತ್ತ ಮೇಣೆಯಲ್ಲಿ ಒರಗಿದ್ದ ಶರಭವೈಶ್ಯನಿಗೂ ತುಸು ನೀರನ್ನು ಕುಡಿಸಿದರು. ಮುಂದೆ ಸಾಗಿದರು. ನಿರ್ಜನವಾದ ಮಾರ್ಗದಲ್ಲಿ ಈ ಬೋಯಿಗಳು ಮತ್ತು ಪಥಿಕ ಮಾತ್ರ ಸಾಗುತ್ತಿದ್ದರು. ಅವರಿಗೆದುರಾಗಿ ಅಲ್ಲೊಬ್ಬ ಭೀಕರಾಕಾರದ ರಾಕ್ಷಸನು ಬಂದನು. ಆತನು ಬಹಳ ಹಸಿದಿದ್ದರಿಂದ ಬಾಯಿಯನ್ನು ತೆರೆದುಕೊಂಡೇ ಬಂದ. ಈ ಪಲ್ಲಕ್ಕಿಯನ್ನು ಹೊತ್ತ ಬೋಯಿಗಳನ್ನು ಒಮ್ಮೆ ನೋಡಿದ. ಮರುಕ್ಷಣ ಭೂಮಿಯನ್ನು ಒದ್ದ. ಅದರಿಂದ ಭೂಮಿಯೇ ನಡುಗಿತು. ವಾಹಕರೆಲ್ಲ ಕಂಗಾಲಾದರು. ರಾಕ್ಷಸನು ಅವರ ಜುಟ್ಟನ್ನು ಹಿಡಿದು, ಎಳೆದು ಮುಗಿಲಿನಲ್ಲಿ ತಿರುಗಿಸಿದ. ಅದರಿಂದ ಅವರೆಲ್ಲ ನಿಶ್ಚೇಷ್ಟರಾದರು. ಆಗ ಉನ್ಮತ್ತ ರಾಕ್ಷಸನು ಈ ವಾಹಕರನ್ನು ನೆಲಕ್ಕೆ ಅಪ್ಪಳಿಸಿ ಕೊಂದುಹಾಕಿದ. ಅವರ ದೇಹಗಳಲ್ಲಿನ ರಕ್ತವನ್ನು ಕುಡಿದ. ಮಾಂಸವನ್ನು ತಿಂದ. ಅನಂತರ ಆ ಶಿಬಿಕೆಯಲ್ಲಿರುವ (ಮೇಣೆಯಲ್ಲಿ) ಕಮಂಡಲದಲ್ಲಿ ತುಂಬಿಟ್ಟ ನೀರನ್ನು ನೋಡಿದ. ಅಲ್ಲಿ ಶಿಬಿಕೆಯಲ್ಲಿ ರೋಗಾರ್ತನಾಗಿ ಕುಳಿತುಕೊಂಡ ನನ್ನ ತಂದೆಯನ್ನು ನೋಡಿದ ಆ ವಿಕಟ ರಾಕ್ಷಸ. ಪಲ್ಲಕ್ಕಿಯನ್ನು ಹೊರುವ ಬೋಯಿಗಳನ್ನೆಲ್ಲ ಕೊಂದು ತಿಂದ ಬಳಿಕ ಆ ಮೇಣೆಯಲ್ಲಿ ಕುಳಿತ ರೋಗಿ ಶರಭವೈಶ್ಯನು ಮಾತ್ರ ಬದುಕಿ ಉಳಿದಿದ್ದ. ''ನನ್ನ ಕೈಯಿಂದ ಪಾರಾಗಿ ಇವನು ಎಲ್ಲಿ ಹೋಗುತ್ತಾನೆ? ಬೇನೆಯಿಂದ ನರಳುತ್ತ ಬಿದ್ದಿರುತ್ತಾನೆ. ಇವನನ್ನು ನಾನು ಆ ಮೇಲೆ ತಿನ್ನುವೆನು. ಈ ಮೇಣೆಯನ್ನು ಹೊತ್ತ ಬೋವಿಗಳನ್ನು ಹೊಟ್ಟೆತುಂಬ ತಿಂದು ತೇಗಿದ ಬಳಿಕ ಈಗ ನನಗೆ ನೀರಡಿಕೆ ಆಗಿದೆ. ಈ ಮೇಣೆಯಲ್ಲಿ ಕಮಂಡಲದಲ್ಲಿ ತುಂಬಿಟ್ಟ ನೀರನ್ನು ಕುಡಿದು ಅನಂತರ ಅದರಲ್ಲಿ ಕುಳಿತ ಆ ರೋಗಿಯನ್ನೂ ತಿಂದು ಬಿಡುವೆನು.'' ಎಂದು ನಿರ್ಧರಿಸಿದ ಆ ವಿಕಟ ರಾಕ್ಷಸ. ಅನಂತರ ತನ್ನ ಈ ನಿರ್ಧಾರದಂತೆ ಅವನು ಆ ಮೇಣೆ ಇದ್ದಲ್ಲಿಗೆ ಬಂದ. ಅಲ್ಲಿ ಇದ್ದ ನೀರು ತುಂಬಿದ ಕಮಂಡಲವನ್ನು ಎತ್ತಿದ. ಅದರಲ್ಲಿ ಇರುವ ನಿಗಮೋದ್ಬೋಧ ತೀರ್ಥದ ಪವಿತ್ರವಾದ ನೀರನ್ನು ಗಟಗಟ ಕುಡಿದ. ಆ ತೀರ್ಥ ಜಲವು ಅವನ ಗಂಟಲಲ್ಲಿ ಇಳಿದ ಕೂಡಲೇ ಜನ್ಮಾಂತರದ ನೆನಪು ಒಮ್ಮೆಲೇ ಅವನಿಗೆ ಒದಗಿ ಬಂದಿತು. ಹಿಂದಿನ ಜನ್ಮದಲ್ಲಿ ತಾನು ಮಾಡಿದ ಪಾಪ ಹಾಗೂ ಬ್ರಾಹ್ಮಣ ಶಾಪ ಅದರಿಂದ ತನಗೆ ಬಂದ ರಾಕ್ಷಸ ಜನ್ಮ ಎಲ್ಲವೂ ಸ್ಮರಣಕ್ಕೆ ಬಂದವು. ಕೂಡಲೇ ಅವನು ಮೇಣೆಯಲ್ಲಿ ಬೇನೆಯಿಂದ ನರಳುತ್ತ ಕುಳಿತ ಶರಭವೈಶ್ಯನ ಸಮೀಪಕ್ಕೆ ಬಂದ. ಅವನ ಪಾದ ಮುಟ್ಟಿ ನಮಸ್ಕಾರ ಮಾಡಿದ. ಮತ್ತು ಕೈ ಜೋಡಿಸಿ ನನ್ನ ತಂದೆಯಾದ ಶರಭವೈಶ್ಯನನ್ನು ಕೇಳಿದ.

**ರಾಕ್ಷಸ:-** ಪುಣ್ಯಾತ್ಮ, ನೀನು ಯಾರು? ಇವರೆಲ್ಲರೂ ನಿನ್ನನ್ನು ಈ ಮೇಣೆಯಲ್ಲಿ ಕುಳ್ಳಿರಿಸಿ ಹೊರಟಿದ್ದಾರಲ್ಲಾ ಇವರು ಯಾರು? ಅವರೆಲ್ಲರನ್ನು ಕೂಡ ಈಗ ನಾನು ಕೊಂದು ತಿಂದುಹಾಕಿದೆ. ನಿನ್ನ ಪಕ್ಕದಲ್ಲಿಟ್ಟ ಕಮಂಡಲದಲ್ಲಿಯ ನೀರು ಯಾವುದು? ಯಾವ ನೀರು ಇದು? ಅದರ ಮಹಿಮೆಯಿಂದ ನನ್ನಂಥ ಪಾಪಿಗಳಿಗೂ ಕೂಡ ಜನ್ಮಾಂತರದ ಸ್ಮರಣೆ ಬಂದಿದೆ.

**ವೈಶ್ಯ:-** ರಾಕ್ಷಸಶ್ರೇಷ್ಠ, ನಾನೊಬ್ಬ ವೈಶ್ಯ. ಕಾನ್ಯಕುಬ್ಜದಲ್ಲಿ ನನ್ನ ಮನೆ. ತೀರ್ಥ ಯಾತ್ರೆಗೈದು ತಿರುಗಾಡುತ್ತ ನಾನು ಇಂದ್ರಪ್ರಸ್ಥಕ್ಕೆ ಬಂದಿದ್ದೇನೆ. ಆದರೆ ದುರ್ದೈವದಿಂದ ನನಗೆ ಅಲ್ಲಿ ಜ್ವರವು ತಗುಲಿತು. ಅದರಿಂದ ನನಗೆ ಮನೆಗೆ ಹೋಗಬೇಕೆಂದು ವಿಚಾರವು ಬಂದಿತು. ಅಷ್ಟರಲ್ಲಿ ಒಬ್ಬ ದಾರಿಕಾರ ಮಳೆಯಿಂದ ನೆಂದು ನಾನಿದ್ದಲ್ಲಿಗೆ ಬಂದ. ನಾನು ಅವನನ್ನು ಬಿನ್ನವಿಸಿದೆ -''ಮಹಾನುಭಾವ, ನನ್ನನ್ನು ಹೇಗಾದರೂ ಮಾಡಿ ಮನೆಗೆ ಮುಟ್ಟಿಸು. ನನ್ನ ದೇಹದಲ್ಲಿ ಬಹಳ ಅಶಕ್ತಿ ಉಂಟಾಗಿದೆ.''

ಈ ನನ್ನ ಮಾತನ್ನು ಕೇಳಿ ಆ ಪಥಿಕನು ಒಂದು ಶಿಬಿಕೆಯನ್ನು ಅರ್ಥಾತ್ ಮೇಣೆಯನ್ನು ಗೊತ್ತುಮಾಡಿಕೊಂಡು ಬಂದ. ಆ ಮೇಣೆಯಲ್ಲಿ ನಾನು ಇಲ್ಲಿಯವರೆಗೆ ಬಂದಾಗ ಶಿಬಿಕೆಯನ್ನು ಹೊರುವ ಎಲ್ಲ ಬೋವಿಗಳೂ ಮತ್ತು ಆ ಪಥಿಕನೂ ನಿನ್ನಿಂದ ಈಗ ತಿನ್ನಲ್ಪಟ್ಟಿದ್ದಾರೆ. ಈಗ ನಿನ್ನ ಜನ್ಮಾಂತರದ ಸ್ಮರಣಕ್ಕೆ ಕಾರಣವಾದುದು ಖಾಂಡವ ವನದಲ್ಲಿರುವ ಪವಿತ್ರ ನದಿಯಾದ ಯಮುನೆಯ ನೀರು. ಯಮುನೆಯ ತೀರದಲ್ಲಿರುವ ಇಂದ್ರಪ್ರಸ್ಥ ಎಂಬ ಕ್ಷೇತ್ರದ ನಿಗಮೋದ್ಬೋಧಕ ಎಂಬ ತೀರ್ಥದ ನೀರನ್ನು ನಾನು ಈಗ ತೆಗೆದುಕೊಂಡು ಹೊರಟಿದ್ದೆ. ನೀನು ಆ ನೀರನ್ನು ಪಾನಮಾಡಿ ಜನ್ಮಾಂತರದ ಎಲ್ಲ ಕರ್ಮಗಳನ್ನು ನೆನಪು ಮಾಡಿಕೊಳ್ಳುತ್ತಲಿರುವೆ. ರಾಕ್ಷಸ, ಯಾವ ಪಾಪವನ್ನು ಹಿಂದೆ ನೀನು ಮಾಡಿದ್ದೆ? ಹಿಂದೆ ನೀನು ಏನು ಆಗಿದ್ದೆ? ಈ ಜನ್ಮವು ಬರಲು ಕಾರಣವೇನು? ಈ ನೀಚಯೋನಿಯು ಬರಲು ಕಾರಣವೇನು?

**ರಾಕ್ಷಸ:-** ಪುಣ್ಯಾತ್ಮ, ನಾನು ಹಿಂದೆ ವೇದಶಾಸ್ತ್ರ ವಿದ್ವಾಂಸರ ಮನೆಯಲ್ಲಿ ಒಬ್ಬ ದುರಾಚಾರಿ ಆಗಿ ಹುಟ್ಟಿದ್ದೆ. ನನಗೆ ಜೂಜಾಟದ ಒಂದು ಕೆಟ್ಟ ವ್ಯಸನ ಅಂಟಿಕೊಂಡಿತ್ತು. ಅದರಿಂದ ನಾನು ನಮ್ಮ ಮನೆಯಲ್ಲಿ ನಮ್ಮ ತಂದೆಯು ಗಳಿಸಿದ ಹಣವನ್ನೆಲ್ಲ ಈ ಆಟದಲ್ಲಿ ಕಳೆದುಕೊಂಡೆ. ಆಗ ನಮ್ಮ ತಂದೆಯು ರಾಜನ ಬಳಿಗೆ ಹೋಗಿ ದೂರು ಕೊಟ್ಟ. ಆಗ ರಾಜನು ನನ್ನನ್ನು ಆ ಪಟ್ಟಣದಿಂದ ಹೊರಗೆ ಹಾಕಿದ. ದರಿದ್ರನಾದ ನಾನು ಊರ ಹೊರಗೆ ಇರುವ ಒಬ್ಬ ಗೆಳೆಯನ ಮನೆಗೆ ಹೋದೆ. ದೇವಕಾ ಎನ್ನುವ ಬ್ರಾಹ್ಮಣೋತ್ತಮ ನನ್ನ ಗೆಳೆಯ. ಅವನು ನನ್ನನ್ನು ಅತ್ಯಾದರದಿಂದ ತನ್ನ ಮನೆಯಲ್ಲಿ ಇಟ್ಟುಕೊಂಡು ನನ್ನನ್ನು ರಕ್ಷಣೆ ಮಾಡಿದ. ಆದರೆ ಕಾಮಿಯಾದ ನಾನು ನನ್ನ ಮಿತ್ರನಾದ ದೇವಕನು ಇಲ್ಲದಾಗ ರೂಪವತಿಯಾದ ಅವನ ಮಡದಿಯನ್ನು ಕಾಮಿಸಿದೆ.

ಸತೀ ಶಿರೋಮಣಿಯಾದ ಅವಳು ನನ್ನ ಪ್ರೇಮಯಾಚನೆಯನ್ನು ತಿರಸ್ಕರಿಸಿದಾಗ ಬಲಾತ್ಕಾರದಿಂದ ಅವಳನ್ನು ನಾನು ಭೋಗಿಸಿದೆ. ಆದರೆ ಆ ನನ್ನ ಮಿತ್ರನ ಪತ್ನಿ ಪರಮ ಸಾಧ್ವಿ. ನನ್ನಿಂದ ಬಲಾತ್ಕಾರದಿಂದ ಅವಳು ಭುಕ್ತಳಾದ ಬಳಿಕ ವಿಷ ತಿಂದು ಆ ಸಾಧ್ವಿಯು ಪ್ರಾಣಪರಿತ್ಯಾಗ ಮಾಡಿದಳು. ಅದನ್ನು ನೋಡಿ ನಾನು ರಾತ್ರಿಯಲ್ಲಿಯೇ ಅಲ್ಲಿಂದ ಓಟ ಕಿತ್ತಿದೆ. ನಾನು ಅಂಜಿ ಓಡಿ ಹೋಗುವಾಗ ದಾರಿಯಲ್ಲಿ ರಾಜದೂತರು ಯಾವನೋ ಒಬ್ಬ ಚೋರ ಎಂದು ನನ್ನನ್ನು ತಡೆದರು. ನಂತರ ಕ್ರೂರರಾದ ಆ ರಾಜದೂತರು ಖಡ್ಗದಿಂದ ತನ್ನ ತಲೆಯನ್ನು ಕಡಿದು ಹಾಕಿದರು. ಅನಂತರ ಮರಣ ಹೊಂದಿದ ನಾನು ಯಾತನಾ ದೇಹದಿಂದ ಯಮಪಟ್ಟಣಕ್ಕೆ ಹೋದೆ. ಅಲ್ಲಿ ಘೋರವಾದ ರೌರವ ನರಕದಲ್ಲಿ ಹೊರಳಾಡಿ ಅರವತ್ತು ಸಾವಿರ ವರ್ಷ ಪಡಬಾರದ ದುಃಖ ಪಟ್ಟೆ. ಅನುಭವಿಸಲಾಗದ

ಯಾತನೆ ಅನುಭವಿಸಿದೆ. ಹೀಗೆ ಬಹುಕಾಲ ಪರ್ಯಂತ ನರಕದಲ್ಲಿ ದಾರುಣವಾದ ದುಃಖವನ್ನು ಅನುಭವಿಸಿ ಮತ್ತೆ ಪುನಃ ರಾಕ್ಷಸ ಜನ್ಮ ತಾಳಿದ್ದೇನೆ. ರಾಕ್ಷಸನಾಗಿಯೂ ಒಂದು ನೂರು ವರ್ಷ ಕಳೆದವು. ಈಗ ನಿನ್ನ ಪುಣ್ಯದಿಂದ, ಈ ನಿಗಮೋದ್ಬೋಧಕ ತೀರ್ಥದ ಪವಿತ್ರವಾದ ನೀರು ನನ್ನ ಮುಖದಲ್ಲಿ ಬಿದ್ದಿತು. ತಕ್ಷಣದಲ್ಲಿ ನನಗೆ ಜನ್ಮಾಂತರದ ಸ್ಮರಣವು ಉಂಟಾಯಿತು. ಈ ರಾಕ್ಷಸ ಜನ್ಮದಲ್ಲಿ ನನಗೆ ಇಂಥ ಪವಿತ್ರವಾದ ಜಲಪ್ರಾಶನದ ಸುಸಂದರ್ಭವು ಒದಗಿದ್ದು ಕೂಡ ನನ್ನ ಜನ್ಮಾಂತರದ ಪುಣ್ಯ ಫಲವೆ.

ನಾನು ಹೋದ ಜನ್ಮದಲ್ಲಿ ಒಂದು ದಿನ ಏಕಾದಶೀ ವ್ರತವನ್ನು ಮಾಡಿದ್ದೆ. ನನ್ನ ಇಚ್ಛೆಯಿಂದ ಅಲ್ಲ. ನನ್ನ ಮಡದಿಯ ಒತ್ತಾಯದಿಂದ. ಅಂದು ರಾತ್ರಿ ಜಾಗರಣವನ್ನು ಕೂಡ ಆಚರಿಸಿದೆ. ದ್ವಾದಶಿಯ ದಿನ ಸ್ನಾನಮಾಡಿ ದೇವರ ಪೂಜೆ ಮುಗಿಸಿ ಊಟಕ್ಕೆ ನಾನು ಕೂಡ ಬೇಕೆನ್ನುವಷ್ಟರಲ್ಲಿ ಮನೆಗೆ ಒಬ್ಬ ವಿಷ್ಣು ಭಕ್ತನಾದ ಒಬ್ಬ ವೈಷ್ಣವನು ಅತಿಥಿಯಾಗಿ ಆಗಮಿಸಿದ.

ಅವನನ್ನು ಕಂಡ ಕೂಡಲೇ ನನಗೆ ಮೈ ತುಂಬ ಉರಿದುಹೋಯಿತು. ನಾನು ಅವನಿಗೆ ಕಟು ಮಾತಿನಿಂದ ಪೂತ್ಕಾರ ಮಾಡಿ ತಿರಸ್ಕರಿಸಿದೆ. "ಮೂರ್ಖ, ನಮ್ಮ ಮನೆಗೆ ಬರಲು ನಾಚಿಕೆ ಇಲ್ಲವೆ? ನೇರವಾಗಿ ನೀನು ಸ್ತ್ರೀಯರು ಇರುವ ಅಡಿಗೆ ಮನೆಗೆ ಆಗಮಿಸಿರುವೆ. ಈಗಲೇ ನನ್ನ ಮನೆಯನ್ನು ಬಿಟ್ಟು ಹೊರಗೆ ಹೋಗು." ಹೀಗೆ ಅವಮಾನ ಮಾಡಿ ಮನೆಗೆ ಬಂದ ಆ ಅತಿಥಿಯನ್ನು ನಾನು ಮನೆ ಬಿಟ್ಟು ಹೊರಗೆ ಕಳಿಸಿದೆ. ನಿರುಪಾಯನಾದ ಆ ಸಾಧು ಪ್ರಾಣಿಯು ನನ್ನ ಮನೆ ಬಿಟ್ಟು ತುಸು ಮುಂದೆ ಹೋಗಿದ್ದ. ಅಷ್ಟರಲ್ಲಿ ಹೊರಗೆ ಹೋದ ನನ್ನ ಧರ್ಮಪತ್ನಿಯು ಆ ಮಹಾನುಭಾವನಾದಂಥಾ ಆ ಅತಿಥಿಗೆ ನಮಸ್ಕಾರ ಮಾಡಿ ಮನೆಗೆ ಕರೆದುಕೊಂಡು ಬಂದಳು. ಸಾಧುವಾದ ಆ ಮನುಷ್ಯನು ಅವಳ ಮಾತನ್ನು ಕೇಳಿ ಯಾವ ಮಾತನ್ನೂ ಆಡದೆ ನಮ್ಮ ಮನೆಗೆ ಬಂದ. ಅವನನ್ನು ಮನೆಯಲ್ಲಿ ತಂದು ಕೂಡಿಸಿ ನನಗೆ ಛೀ ಮಾಡಿ ಹೇಳಿದಳು. ಮನೆತನಕ ಬಂದ ಅತಿಥಿಯನ್ನು ಅವಮಾನ ಮಾಡಿ ಕಳಿಸುವುದು ಘೋರ ಪಾಪ. ಆದುದರಿಂದ ಆ ಬಂದ ಅತಿಥಿಗಳಲ್ಲಿ ಕ್ಷಮೆ ಕೇಳಿಕೊಂಡು ಅವರಿಗೆ ಆತಿಥ್ಯ ನೀಡಿರಿ.

ಸಾಧ್ವೀಮಣಿಯಾದ ನನ್ನ ಪತ್ನಿಯ ಆ ಮಾತನ್ನು ಕೇಳಿ ನಾನು ಆ ಅತಿಥಿಯ ಬಳಿಗೆ ಹೋದೆ. ಅವರಿಗೆ ನನ್ನ ಅಪರಾಧವನ್ನು ಕ್ಷಮಿಸಬೇಕೆಂದು ಹೇಳಿದೆ. ಅವರನ್ನು ನಮಸ್ಕರಿಸಿ ಅವರ ಪಾದಪ್ರಕ್ಷಾಳನವನ್ನು ಮಾಡಿದೆ. ಉತ್ತಮವಾದ ಆಸನದ ಮೇಲೆ ಕುಳ್ಳಿರಿಸಿದೆ. ಅನಂತರ ಅವರಿಗೆ ಭೋಜನವನ್ನು ಮಾಡಿಸಿ, ಆನಂದಪಡಿಸಿ ದಕ್ಷಿಣೆ ಕೊಟ್ಟು ಬೀಳ್ಕೊಟ್ಟೆ. ಆ ಅತಿಥಿಯು ಹರೇ ರಾಮ, ಹರೇ ಕೃಷ್ಣ ಎಂದು ಜಪವನ್ನು ಮಾಡುತ್ತ ನನ್ನ ಮನೆಯಿಂದ ಹೊರಟು ಹೋದ. ನಾನು ಜನ್ಮಾಂತರದಲ್ಲಿ ನನ್ನ ಮಡದಿಯ ಪ್ರೇರಣೆಯಿಂದ ಮಾಡಿದ ಆ ಅತಿಥಿ ಸತ್ಕಾರದ ಪುಣ್ಯದಿಂದ ಈ ಜನ್ಮದಲ್ಲಿ ನನಗೆ ಯಮುನಾ ನದಿಯ ನಿಗಮೋದ್ಬೋಧಕ ತೀರ್ಥದ ಜಲ ಪ್ರಾಶನ ಮಾಡುವ ಸೌಭಾಗ್ಯವು ಒದಗಿ ಬಂದಿತು. ಬೃಹಸ್ಪತ್ಯಾಚಾರ್ಯರಿಂದ ನಿರ್ಮಿತವಾದ ಈ ನಿಗಮೋದ್ಬೋಧಕ ತೀರ್ಥದ ಜಲಪ್ರಾಶನದಿಂದ ಜನ್ಮಾಂತರದ ಸ್ಮರಣವು ಉಂಟಾಗಿದೆ. ಜನ್ಮಾಂತರ ಸ್ಮರಣಕ್ಕೆ ಈ ತೀರ್ಥದ ಜಲಪಾನ ಕಾರಣ. ಈ ಜಲಪಾನವನ್ನು ಮಾಡಲು ನನ್ನ ಮನೆಗೆ ಬಂದ ಬ್ರಾಹ್ಮಣನನ್ನು ಪತ್ನಿಯ ಪ್ರೇರಣೆಯಿಂದ ಸತ್ಕರಿಸಿ ಪಾದ ಪ್ರಕ್ಷಾಳನ ಮಾಡಿ ಅನ್ನದಾನ ಮಾಡಿದ್ದು ಮುಖ್ಯ ಕಾರಣ.

ಹೀಗೆ ಹೇಳಿ ಆ ರಾಕ್ಷಸನು ತನ್ನ ಮಾತನ್ನು ಮುಗಿಸಿದ. ಇತ್ತ ಆ ರಾಕ್ಷಸನಿಂದ ಕೊಲ್ಲಲ್ಪಟ್ಟ ಆ ಮೇಣೆಯ ವಾಹಕರೂ ಆ ದಾರಿಕಾರನೂ ನಿಗಮೋದ್ಬೋಧಕ ತೀರ್ಥದ ಜಲವನ್ನು ದಾರಿಯಲ್ಲಿ ಕುಡಿದಿದ್ದರ ಪುಣ್ಯದಿಂದ ಮರಣಾನಂತರ ಮರುಕ್ಷಣದಲ್ಲಿಯೇ ದಿವ್ಯ ದೇಹವನ್ನು ಹೊಂದಿದರು. ತಮ್ಮನ್ನು ಸಂಹಾರ ಮಾಡಿ ಒಂದು ರೀತಿಯಿಂದ ಉಪಕಾರವನ್ನೇ ಮಾಡಿದ ಆ ರಾಕ್ಷಸನನ್ನು ಕುರಿತು ನುಡಿದರು.

**ದಾರಿಕಾರ ಮತ್ತು ವಾಹಕರು:-** ವೈಶ್ಯೋತ್ತಮಾ, ನಾವು ಈ ರಾಕ್ಷಸನಿಂದ ಕೊಲ್ಲಲ್ಪಟ್ಟಿದ್ದೆವು. ಈ ರಾಕ್ಷಸನ ಬಾಯಿಗೆ ಬಿದ್ದು ಮರಣ ಹೊಂದುವದು ಅಪಮಾನ. ಆದರೂ ಕೂಡ ಇಂಥ ದುರ್ಮರಣ ನಾವು ಹೊಂದಿದ್ದರೂ ನಿನ್ನ ಅನುಗ್ರಹದಿಂದ ನಿನ್ನ ಮೇಣೆಯಲ್ಲಿ ತಂದು ಇಟ್ಟುಕೊಂಡ ಆ ನಿಗಮೋದ್ಬೋಧಕ ತೀರ್ಥದ ನೀರನ್ನು ಕುಡಿದು ನಾವು ಈಗ ದೈವತ್ವವನ್ನೇ ಹೊಂದಿದ್ದೇವೆ. ನಾವು ಹಣದ ಲೋಭದಿಂದ ನಿನ್ನ ಜೊತೆಗೆ ಹೊರಟಿದ್ದೆವು. ನಿನ್ನನ್ನು ಹೊತ್ತಿದ್ದೆವು. ಮರಣ ಕಾಲದಲ್ಲಿಯೂ ನಮಗೆ ದ್ರವ್ಯದ ವಾಸನೆ ಮತ್ತು ಹಣದ ಆಶೆ. ಆದುದರಿಂದ ಈ ತೀರ್ಥರಾಜವಾದ ನಿಗಮೋದ್ಬೋಧಕದ ನೀರು ನಮ್ಮ ಹೊಟ್ಟೆಯಲ್ಲಿ ಹೋದದ್ದರಿಂದ ನಾವು ಕುಬೇರನ ಮಿತ್ರರಾಗಿ ಈಗ ದಿವ್ಯ ದೇಹವನ್ನು ಧರಿಸಿದ್ದೇವೆ.

ನಮ್ಮನ್ನು ಬದುಕಿಸಿದ್ದಕ್ಕಾಗಿ ನಿನಗೆ ನಮ್ಮ ವಂದನೆಗಳು. ಕುಬೇರನ ದೂತರು ನಮ್ಮನ್ನು ಕರೆದೊಯ್ಯಲು ಬಗೆಬಗೆಯ ರತ್ನಾಭರಣಗಳಿಂದ ಅಲಂಕೃತವಾದ ವಿಮಾನಗಳನ್ನು ತಂದಿರುವರು. ನಿನ್ನ ದಯೆಯಿಂದ ನಾವು ನಮ್ಮ ಮೊದಲಿನ ದುಷ್ಟ ಸ್ವಭಾವದ ಮನುಷ್ಯ ಜನ್ಮದಿಂದ ಉದ್ಧಾರ ಹೊಂದಿ ದೈವೀ ಪುರಷರಾಗಿ ಕುಬೇರನ ಮೈತ್ರಿಯನ್ನು ಸಂಪಾದಿಸಿ, ಈಗ ಅಲಕಾ ನಗರಕ್ಕೆ ನಡೆದಿದ್ದೇವೆ ನೀನು ಕೂಡ ನಿಗಮಮೋದ್ಬೋಬೋಧಕ ತೀರ್ಥಕ್ಕೆ ಪ್ರಯಾಣ ಮಾಡು. ನೀನು ನಿನ್ನ ಜೊತೆಗೆ ಈ ರಾಕ್ಷಸನನ್ನೂ ಉದ್ಧಾರ ಮಾಡು.

ಹೀಗೆ ಹೇಳಿ ಆ ಎಲ್ಲ ದಿವ್ಯಪುರುಷರ ದೇಹವನ್ನು ತಳೆದ ಆ ದಾರಿಕಾರನೂ ಮತ್ತು ಶರಭವೈಶ್ಯನ ಮೇಣೆಯನ್ನು ಹೊತ್ತ ಬೋವಿಗಳೂ ಉತ್ತರ ದಿಕ್ಕಿನಲ್ಲಿರುವ ಕುಬೇರನ ರಾಜಧಾನಿಯನ್ನು ಕುರಿತು ಪ್ರಯಾಣ ಬೆಳೆಸಿದರು. ವಿಮಾನದಿಂದ ಅವರು ಹೋದಬಳಿಕ ನನ್ನ ತಂದೆಯಾದ ಶರಭವೈಶ್ಯನು ಆ ರಾಕ್ಷಸನನ್ನು ಕುರಿತು ಮಾತನಾಡಿದ.

**ಶರಭ:-** ರಾಕ್ಷಸೋತ್ತಮ, ಏಳು. ನಾನು ಇನ್ನು ಮೇಲೆ ಮನೆಗೆ ಹೋಗುವದಿಲ್ಲ. ನನ್ನನ್ನು ಆ ನಿಗಮೋದ್ಬೋಧಕ ತೀರ್ಥಕ್ಕೆ ಕರೆದುಕೊಂಡು ಹೋಗು. ನಾನು ಈಗ ಜ್ವರದಿಂದ ಪೀಡಿತನಾಗಿದ್ದೇನೆ. ನನ್ನ ಕಾಲುಗಳಲ್ಲಿ ಶಕ್ತಿ ಇಲ್ಲ. ನಡೆದುಕೊಂಡು ನನಗೆ ಆ ತೀರ್ಥಕ್ಕೆ ಹೋಗಲು ಸಾಧ್ಯವಾಗಲಾರದು. ನಿನ್ನ ಹೊರತು ನನ್ನನ್ನು ಆ ತೀರ್ಥದವರೆಗೆ ಒಯ್ದು ಮುಟ್ಟಿಸುವವರು ಬೇರೆ ಯಾರೂ ಇಲ್ಲ.

ವೈಶ್ಯನ ಮಾತನ್ನು ಕೇಳಿ, ಹಾಗೇ ಆಗಲಿ ಎಂದು ಹೇಳಿ, ಆ ರಾಕ್ಷಸನು ಆ ಶರಭ ವೈಶ್ಯನನ್ನು ತನ್ನ ಹೆಗಲಮೇಲೆ ಹೊತ್ತುಕೊಂಡು ನಿಗಮೋದ್ಬೋಧಕ ತೀರ್ಥಕ್ಕೆ ಕರೆದುಕೊಂಡು ಹೋದ. ಅಲ್ಲಿಯೇ ಅವರಿಬ್ಬರೂ ಕೆಲವು ಕಾಲ ವಾಸಮಾಡಿದರು. ಎಲ್ಲ ತೀರ್ಥಗಳಿಗಿಂತ ಅತ್ಯುತ್ತಮವಾದ ಬೃಹಸ್ಪತಿಯ ಆ ನಿಗಮೋದ್ಬೋಧಕ ತೀರ್ಥದಲ್ಲಿ

ಕೆಲವರು ಸ್ನಾನ ಮಾಡುತ್ತಿದ್ದರು. ದೇವರ ಪೂಜೆಯನ್ನು ತಮತಮಗೆ ಉಚಿತವಾದ ರೀತಿಯಲ್ಲಿ ಮಾಡುತ್ತಿದ್ದರು.

ಇತ್ತ ಶರಭವೈಶ್ಯನಿಗೆ ದೇಹದಲ್ಲಿ ಜ್ವರ ಹಿಡಿದು ತಲೆಶೂಲೆ ಎದ್ದು ನರಳುತ್ತ ಆಶ್ರಮದಲ್ಲಿ ಮಲಗಿದ್ದ ಸಮಾಚಾರವನ್ನು ಕೇಳಿ ಅವನ ಮಗನಾದ ನಾನು ಮನಸ್ಸಿನಲ್ಲಿಯೇ ಮರುಗಿದೆ. ನನ್ನ ತಾಯಿಯು ನೀನು ಆಶ್ರಮಕ್ಕೆ ಹೋಗಿ ನಿನ್ನ ತಂದೆಯನ್ನು ನೋಡಿಕೊಂಡು ಬಾ ಅಥವಾ ಮನೆಗೆ ಕರೆದುಕೊಂಡು ಬಾ ಎಂದು ಹೇಳಿದಳು. ನಾನು ಚಿಂತಾಕ್ರಾಂತನಾಗಿ ತಂದೆಯನ್ನು ನೋಡಲು ಅವಸರದಿಂದ ಆತುರಗೊಂಡು ಅವನ ಆಶ್ರಮಕ್ಕೆ ಬಂದೆ. ಜ್ವರದಿಂದ ಪೀಡಿತನಾಗಿ ಮಲಗಿಕೊಂಡಿದ್ದ ಅವನನ್ನು ನಾನು ವಂದಿಸಿದೆ. ನನಗೆ ಆಶೀರ್ವಾದವನ್ನು ಮಾಡಿ ಆ ನನ್ನ ತಂದೆಯಾದ ಶರಭವೈಶ್ಯನು ನುಡಿದನು.

**ಶರಭ:-** ಮಗು, ಇಷ್ಟು ದೂರ ನೀನು ಏತಕ್ಕೆ ಬಂದೆ? ಆಗಲಿ. ಇನ್ನು ಕೆಲವು ದಿನ ಇಲ್ಲಿಯೇ ವಾಸ ಮಾಡು. ಇಲ್ಲಿ ನನಗೆ ವಿಕಟ ಎಂಬ ಒಬ್ಬ ಮಿತ್ರನು ಅತುಲ ಮಿತ್ರನಾಗಿದ್ದಾನೆ. ಅವನು ಬಂದ ಕೂಡಲೇ ನೀನು ಎದ್ದು ನಿಂತು ಅವನಿಗೆ ದಂಡಪ್ರಣಾಮ ಮಾಡು. ಅವನು ರಾಕ್ಷಸ ಎಂದು ನೀನು ಹೆದರಬೇಡ. ಅವನು ರಾಕ್ಷಸನಾದರೂ ಹಿಂಸಾದಿ ಕರ್ಮಗಳನ್ನು ಎಂದೋ ಬಿಟ್ಟುಬಿಟ್ಟಿದ್ದಾನೆ. ಅವನಲ್ಲಿ ಈಗ ಮೊದಲಿನ ಕ್ರೌರ್ಯ ಹಾಗೂ ಹಿಂಸ ವ್ಯಾಪಾರ ಯಾವುದೂ ಇರುವುದಿಲ್ಲ. ಅವನು ಈಗ ಈ ತೀರ್ಥದಲ್ಲಿ ಶಾಂತನಾಗಿ ಇಲ್ಲಿಯೇ ಇರುತ್ತಾನೆ.

ಅವನ ಮಾತನ್ನು ಕೇಳಿ ನಾನು ಆ ವಿಕಟ ರಾಕ್ಷಸನಿಗೆ ಪಾದ ಮುಟ್ಟಿ ನಮಸ್ಕಾರ ಮಾಡಿದೆ. ಅವನು ನನ್ನನ್ನು ಎಬ್ಬಿಸಿ ಗಟ್ಟಿಯಾಗಿ ಆಲಿಂಗಿಸಿಕೊಂಡ. ''ಮಿತ್ರನ ಮಗನಾದ ಶಿವಶರ್ಮನಿಗೆ ಸುಸ್ವಾಗತ. ನಿನಗೆ ಒಳ್ಳೆಯದಾಗಲಿ'' ಎಂದು ಆಶೀರ್ವಚನವನ್ನು ನೀಡಿದ. ಮತ್ತು ನನಗೆ ಉಪದೇಶಿಸುವ ರೀತಿಯಲ್ಲಿ ಹೇಳಿದ. ''ತಂದೆಯ ಜ್ವರಪೀಡೆಯ ಸಮಾಚಾರವನ್ನು ಕೇಳಿ ನೀನು ಇಲ್ಲಿಗೆ ಬಂದದ್ದು ಒಳ್ಳೆಯದಾಯ್ತು. ನೀನು ಇಲ್ಲಿ ಸ್ನಾನವನ್ನು ಮಾಡು. ತಂದೆಯ ಸೇವೆಯನ್ನು ಮಾಡು. ಇದರಿಂದ ನಿನಗೆ ಪಿತೃಋಣ ಮುಟ್ಟಿದಂತೆ ಆಗುವದು. ನೀನು ಈ ನಿಗಮೋದ್ಬೋಧಕ ತೀರ್ಥದಲ್ಲಿ ಸ್ನಾನ ಮಾಡಿದರೆ ನಿನಗೂ ಕೂಡ ಜನ್ಮಾಂತರದ ಸ್ಮರಣ ಬರುವುದು.''

ಹೀಗೆ ರಾಕ್ಷಸನು ಹೇಳಿದ ಬಳಿಕ ನಾನು ಸ್ನಾನ ಮಾಡಲು ಆ ನಿಗಮೋದ್ಬೋಧಕ ತೀರ್ಥದಲ್ಲಿ ಇಳಿದೆ. ಆದರ ನೀರಿನಲ್ಲಿ ಮುಳುಗು ಹಾಕಿದ ಕೂಡಲೇ ಪೂರ್ವಜನ್ಮದ ಅಶುಭ ಕಾರ್ಯಗಳೆಲ್ಲವೂ ನೆನಪಿಗೆ ಬಂದವು. ವಿಧಿಪೂರ್ವಕವಾಗಿ ಅಲ್ಲಿ ಸ್ನಾನ ಮಾಡಿ ನಮ್ಮ ತಂದೆಯ ಬಳಿಗೆ ನಾನು ಬಂದೆ. ಮತ್ತು ಆ ರಾಕ್ಷಸನ ಸಮಾಚಾರವನ್ನು ಕೇಳಿದೆ. ಜಾತ್ಯಾ ಕ್ರೂರನೂ ಕಠೋರನೂ ಆದ ಈ ರಾಕ್ಷಸ ಇಂಥ ಧಾರ್ಮಿಕ ಬುದ್ಧಿವುಳ್ಳವನು ಹೇಗೆ ಆಗಿರುತ್ತಾನೆ? ಎಂದು ಪ್ರಶ್ನೆ ಮಾಡಿದೆ. ಅದಕ್ಕೆ ನನ್ನ ತಂದೆಯಾದ ಶರಭವೈಶ್ಯನು ಆ ರಾಕ್ಷಸನ ಸಮಾಚಾರವನ್ನು ತಿಳಿಸಿದ. ತನಗೆ ದಾರಿತೋರುತ್ತ ತನ್ನನ್ನು ವಾಹನದಿಂದ ಊರಿಗೆ ಕರೆದುಕೊಂಡು ಹೋದ ಶಿಬಿಕ ಹಾಗೂ ಆ ಶಿಬಿಕೆಯ ವಾಹಕರು ರಾಕ್ಷಸನಿಂದ ತಿನ್ನಲ್ಪಟ್ಟು ಈ ತೀರ್ಥದಿಂದ ದಿವ್ಯ ದೇಹ ಪಡೆದ ಸಮಾಚಾರವನ್ನು ನನ್ನ ತಂದೆ ನನಗೆ ನಿರೂಪಿಸಿದರು. ಅದನ್ನು ಕೇಳಿ ನಾನು ಆ ನಿಗಮೋದ್ಬೋಧಕ ತೀರ್ಥದ ಮಹಿಮೆಯನ್ನು ಕೊಂಡಾಡಿದೆ.

ಅನಂತರ ನಮ್ಮ ತಂದೆಯ ಜ್ವರ ಅಶಕ್ತತೆ ಕಡಿಮೆಯಾಗಿ ಅವರು ಪೂರ್ಣ ನಿರೋಗಿ ಆದ ಬಳಿಕ ಊರಿಗೆ ಹೋಗಬೇಕು. ಅಲ್ಲಿಯವರೆಗೆ ಇಲ್ಲಿಯೇ ಇರಬೇಕು ಎಂದು ನಾನು ನಿರ್ಧರಿಸಿದೆ. ಅದರಂತೆ ನಾನು ಹತ್ತು ದಿನಗಳವರೆಗೆ ಆ ನಿಗಮೋದ್ಬೋಧಕ ತೀರ್ಥದಲ್ಲಿ ತಂದೆ ಹಾಗೂ ಆ ರಾಕ್ಷಸನ ಜೊತೆಗೆ ವಾಸ ಮಾಡಿದೆ. ಒಂದು ದಿನ ನಮ್ಮ ತಂದೆ ಆ ನಿಗಮೋದ್ಬೋಧಕ ತೀರ್ಥದಲ್ಲಿ ಸ್ನಾನಕ್ಕೆಂದು ಇಳಿದಿದ್ದಾರೆ. ಆ ತೀರ್ಥದಲ್ಲಿ ನಿಂತುಕೊಂಡಾಗಲೇ ಜ್ವರದಿಂದ ಅಶಕ್ತನಾದ್ದರಿಂದ ಮರಣವು ಬಂದಿತು. ಆ ನಿಗಮೋದ್ಬೋಧಕ ತೀರ್ಥದ ನೀರಿನ ನಟ್ಟನಡುವೆ ಅವನ ದೇಹಪಾತವಾಯಿತು.

ತಕ್ಷಣದಲ್ಲಿ ವಿಮಾನಾರೂಢನಾಗಿ, ವಕ್ಷಸ್ಥಳದಲ್ಲಿ ಲಕ್ಷ್ಮಿಯನ್ನಿರಿಸಿಕೊಂಡು ಪೀತಾಂಬರಧಾರಿಯಾಗಿ ವಿಷ್ಣುವು ಅಲ್ಲಿಗೆ ಬಂದ. ಹಾಹಾ, ಹುಹು ಮೊದಲಾದ ಗಂಧರ್ವರು ಭಗವಂತನನ್ನು ಗಾಯನ ಮಾಡುತ್ತಿದ್ದರು. ಆ ಶ್ರೀಹರಿಯು ಅಲ್ಲಿಗೆ ಬಂದು ನೀರಿನಲ್ಲಿ ದೇಹತ್ಯಾಗ ಮಾಡಿದ ನನ್ನ ತಂದೆಯನ್ನು ತನ್ನ ಸಾರೂಪ್ಯ ಅಂದರೆ ಸಮಾನವಾದ ರೂಪವನ್ನು ಕರುಣಿಸಿ ಗರುಡನ ಮೇಲೆ ಕುಳ್ಳಿರಿಸಿ ಬ್ರಹ್ಮಾದಿ ದೇವತೆಗಳೊಡನೆ ವೈಕುಂಠ ಲೋಕಕ್ಕೆ ಪ್ರಯಾಣ ಮಾಡಿದ. ತಂದೆ ನನ್ನ ಕಣ್ಣೆದುರೇ ಶಂಖ ಚಕ್ರ ಗದಾಧಾರಿಯಾಗಿ ಪೀತಾಂಬರದಿಂದ ಶೋಭಿಸುತ್ತ ಭಗವಂತನ ದಾಸನಾಗಿ ವೈಕುಂಠ ವಿಮಾನವನ್ನು ಆರೋಹಣ ಮಾಡಿದ್ದು ನೋಡಿ ನನಗೆ ಅತ್ಯಾಶ್ಚರ್ಯವಾಯ್ತು. ಇದೆಲ್ಲವೂ ಆ ನಿಗಮೋದ್ಬೋಧಕ ತೀರ್ಥದ ಪ್ರಭಾವ ಎಂದು ನಾನು ತಿಳಿದುಕೊಂಡೆ. ಆ ತೀರ್ಥ ಶಿರೋಮಣಿಯ ಮಹಿಮೆಯನ್ನು ವರ್ಣಿಸಲು ನನಗೆ ಶಕ್ತಿ ಸಾಲದು. ನೀರಿನಲ್ಲಿ ಮುಳುಗಿದ ಅಥವಾ ಮರಣ ಹೊಂದಿದ ಎಲ್ಲಪ್ರಾಣಿಗಳು ಚತುರ್ಭುಜರಾಗಿ ವಿಷ್ಣುಲೋಕವನ್ನು ಹೊಂದುತ್ತಾರೆ. ಆದುದರಿಂದ ಈ ತೀರ್ಥವನ್ನು ಹಣದ ಆಶೆಯಿಂದ ಅಥವಾ ರೋಗದ ನೆವದಿಂದ ಬಿಟ್ಟು ಹೋಗಬಾರದು. ಏನಾದರೂ ನಾನು ಇಲ್ಲಿಯೇ ತಂದೆಯ ಆಶ್ರಮದಲ್ಲಿ ಆಯುಷ್ಯ ಇರುವವರೆಗೆ ನಿಗಮೋದ್ಬೋಧಕ ತೀರ್ಥದಲ್ಲಿ ವಾಸಮಾಡಿ ಅದರಂತೆ ಅದೇ ತೀರ್ಥದ ದಂಡೆಯಲ್ಲಿ ನನ್ನ ತಂದೆಯ ಎಲ್ಲ ಕ್ರಿಯೆಗಳನ್ನೂ ಮಾಡಿ ಮುಗಿಸಿದೆ. ಅನಂತರ ಅಂದಿನಿಂದ ನಾನು ಈ ಸ್ಥಳವನ್ನು ಬಿಟ್ಟು ಎಲ್ಲಿಯೂ ಹೋಗದೆ ರಾಕ್ಷಸನೊಡನೆ ಮೋಕ್ಷದ ಅಪೇಕ್ಷೆಯಿಂದ ಈ ನಿಗಮೋದ್ಬೋಧಕ ತೀರ್ಥದ ದಂಡೆಯಲ್ಲಿ ನೆಲೆಸಿದ್ದೇನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ದೇವಲ ಮುನಿಯ ವಚನದಂತೆ ಶರಭವೈಶ್ಯನಿಂದ ಚಂಡಿಕಾ ಪೂಜೆ ಮಹಾತಾಯಿಯ ಇಂದ್ರಪ್ರಸ್ಥ ತೀರ್ಥದಲ್ಲಿ ಸ್ನಾನಮಾಡುವದರಿಂದ ಶರಭವೈಶ್ಯನಿಗೆ ಪುತ್ರಪ್ರಾಪ್ತಿ; ಶರಭನಿಂದ ಗೃಹತ್ಯಾಗ; ರಾಕ್ಷಸ ಶರಭ ಸಂವಾದ ಎಂಬ ನೂರ ಎಂಬತ್ತಾರನೇಯ ಅಧ್ಯಾಯ ಮುಗಿದುದು*

—o—

## ಇಂದ್ರಪ್ರಸ್ಥದಲ್ಲಿ ಶರಭಮಿತ್ರನಾದ ರಾಕ್ಷಸನ ಉದ್ಧಾರದ ವರ್ಣನೆ

**ಅಧ್ಯಾಯ - ೧೮೭**

**ಶಿವಶರ್ಮ:-** ಒಂದು ದಿನ ನಿಗಮೋದ್ಬೋಧಕ ತೀರ್ಥದ ಕೆಸರಿನಲ್ಲಿ ಒಂದು ಹಸು ಸಿಕ್ಕುಬಿದ್ದಿತ್ತು. ಅದನ್ನು ಕಂಡು ಆ ರಾಕ್ಷಸನು ''ಸಂಕಟದಲ್ಲಿ ಸಿಲುಕಿರುವ ಈ ಹಸುವನ್ನು ರಕ್ಷಿಸುವದು ಮಹಾಧರ್ಮ'' ಎಂದು ವಿಚಾರಮಾಡಿ ನೀರಿಗೆ ಇಳಿದ. ಆಗ ಒಂದು ನೀರಾನೆಯು ಆ ರಾಕ್ಷಸನನ್ನು ಒಳಗೆ ಎಳೆದುಕೊಂಡಿತು. ಅದರಿಂದ ಆಳವಾದ ನೀರಿನಲ್ಲಿ ನೀರು ಕುಡಿದು, ಕುಡಿದು ಹೊಟ್ಟೆಯುಬ್ಬಿ ಉಸಿರುಗಟ್ಟಿ ರಾಕ್ಷಸ ಮೃತನಾದ. ಆ ದಿವ್ಯವಾದ ತೀರ್ಥದಲ್ಲಿ ಮರಣ ಪ್ರಾಪ್ತವಾದದ್ದರಿಂದ ಆತನಿಗೆ ರಾಕ್ಷಸಜನ್ಮ ಕಳೆದು ಉತ್ತಮ ಶರೀರ ಲಭಿಸಿತು. ದಿವ್ಯ ಶರೀರಯುಕ್ತನಾದ ಆತನನ್ನು ತಮ್ಮ ಲೋಕಕ್ಕೆ ಬರಮಾಡಿಕೊಳ್ಳಲು ಇಂದ್ರಾದಿ ದೇವತೆಗಳು ದೂತರನ್ನು ವಿಮಾನದಲ್ಲಿ ಕೊಟ್ಟು ಕಳುಹಿಸಿದರು. ರಾಕ್ಷಸಜನ್ಮ ಕಳೆದು ದಿವ್ಯ ಶರೀರಯುಕ್ತನಾದ ಆತನನ್ನು ದೇವದೂತರು ಕೈ ಹಿಡಿದು ವಿಮಾನದಲ್ಲಿ ಕುಳ್ಳಿರಿಸಿ ದೇವಲೋಕದೆಡೆಗೆ ಪಯಣಿಸಿದರು. ಹೋಗುವಾಗ ಆ ರಾಕ್ಷಸನು ನನಗೆ ಅಭಿನಂದನೆ ಸಲ್ಲಿಸಿ ಹೋಗಿ ಬರುತ್ತೇನೆ ಎಂದು ಹೇಳಿದ. ಆಗ ನಾನು ಆ ರಾಕ್ಷಸನನ್ನು ಪ್ರಶ್ನಿಸಿದೆ. ''ಮಹಾನುಭಾವ, ಮುಕ್ತಿಪ್ರದವಾದ ಈ ನಿಗಮೋದ್ಬೋಧಕ ತೀರ್ಥದಲ್ಲಿ ಮರಣವುಂಟಾದುದರಿಂದ ನಿನಗೆ ದಿವ್ಯ ಶರೀರ ಮಾತ್ರ ಏಕೆ ಪ್ರಾಪ್ತವಾಯಿತು ? ಇಲ್ಲಿ ಮರಣಹೊಂದಿದವರಿಗೆ ಮೋಕ್ಷವೇ ನಿಜವಾದ ಫಲ. ನಿನಗೆ ಆ ಮೋಕ್ಷಫಲ ದೊರಕದೇ ಕೇವಲ ದೈವತ್ವ ಮಾತ್ರ ಪ್ರಾಪ್ತವಾದದ್ದು ಏಕೆ?

ವಿಮಾನರೂಢನಾದ ರಾಕ್ಷಸನು ಪ್ರಶ್ನೆಗೆ ಉತ್ತರಿಸಿದ.

**ರಾಕ್ಷಸ:-** ನಾನು ಈ ಪವಿತ್ರ ತೀರ್ಥದಲ್ಲಿ ಸ್ನಾನಮಾಡುವಾಗ ಮನಸ್ಸಿನಲ್ಲಿ ನನಗೆ ದೈವತ್ವ ಪ್ರಾಪ್ತವಾಗಬೇಕೆಂದು ಆಶೆಪಡುತ್ತಲಿದ್ದೆ. ನನ್ನ ಆಶೆಗೆ ಅನುಗುಣವಾಗಿ ನನಗೆ ಈ ದೈವೀದೇಹವು ಬಂದಿದೆ. ಇದೆಲ್ಲವೂ ಬೃಹಸ್ಪತ್ಯಾಚಾರ್ಯರು ನಿರ್ಮಿಸಿದ ಈ ನಿಗಮೋದ್ಬೋಧಕ ತೀರ್ಥದ ಪ್ರಭಾವ.

ಹೀಗೆ ನನ್ನಿಂದ ಬೀಳ್ಕೊಡಲ್ಪಟ್ಟು ಆ ದೈವತ್ವವನ್ನು ಹೊಂದಿದ ರಾಕ್ಷಸನು ಸುರಲೋಕವನ್ನು ಕುರಿತು ಪ್ರಯಾಣ ಮಾಡಿದ. ಅವನು ಹೋದ ನಂತರ ಅದೇ ಬೃಹಸ್ಪತ್ಯ ತೀರ್ಥದ ದಂಡೆಯ ಮೇಲೆ ನಿಂತು ಅಖಂಡವಾಗಿ ಭಗವಂತನನ್ನು ಚಿಂತಿಸತೊಡಗಿದೆ. ಕುಳಿತಾಗ, ನಿಂತಾಗ, ಮಲಗಿದಾಗ, ಎಚ್ಚರವಿದ್ದಾಗ, ಸ್ನಾನಮಾಡುವಾಗ, ಊಟಮಾಡುವಾಗ, ಸರ್ವದಾ ಅನನ್ಯ ಭಕ್ತಿಯಿಂದ ಪುಂಡರೀಕಾಕ್ಷನನ್ನು ಧ್ಯಾನಿಸತೊಡಗಿದೆ. ''ಸ್ವಾಮಿ, ನನಗೆ ನಿನ್ನ ಪಾದಾಂಭೋಜದಲ್ಲಿ ಭಕ್ತಿಯನ್ನು ಮಾತ್ರ ಕೊಡು. ನನಗೆ ಇಂದ್ರಪದವಿ ಬೇಡ, ಚಂದ್ರಪದವಿ ಬೇಡ, ಬ್ರಹ್ಮಪದವಿ ಬೇಡ. ನಿನ್ನ ಪಾದಾರವಿಂದದಲ್ಲಿ ನಿಶ್ಚಲವಾದ ಭಕ್ತಿಯ ಹೊರತು ಮತ್ತೇನನ್ನೂ ಬಯಸುವದಿಲ್ಲ'' ಎಂದು ಪ್ರತಿದಿನವೂ ಭಗವಂತನನ್ನು ಬೇಡುತ್ತ ಮನಸ್ಸನ್ನು ಸಂಪೂರ್ಣ ಶ್ರೀಹರಿಯಲ್ಲೇ ನೆಟ್ಟು ಆರಾಧಿಸಿದೆ.

**ವಿಷ್ಣುಶರ್ಮ:-** ನಿನಗೆ ಆ ನಿಗಮೋದ್ಬೋಧಕ ತೀರ್ಥದಲ್ಲಿ ಮರಣವು ಆಗಿದ್ದು ನಿಜವಿದ್ದರೆ ಪುನರ್ಜನ್ಮವು ಹೇಗೆ ಬಂದಿದೆ? ಮತ್ತೆ ಮಾನವನಾಗಿ, ನನ್ನ ತಂದೆಯ ರೂಪದಲ್ಲಿ ಹೇಗೆ ಜನ್ಮ ತಳೆದು ಬಂದೆ? ನೀನು ಹಿಂದಿನ ಜನ್ಮದಲ್ಲಿ ಈ ತೀರ್ಥದಲ್ಲಿ ಮೃತನಾದ ಬಗ್ಗೆಯೇ ಸಂದೇಹವಿದೆ. ಏಕೆಂದರೆ ನೀರಾನೆಯಿಂದ ನೀರೊಳಗೆ ಸೆಳೆಯಲ್ಪಟ್ಟು ಅಪಮೃತ್ಯುವಿಗೀಡಾದರೂ ಈ ತೀರ್ಥದಲ್ಲಿ ಮೃತನಾದುದರಿಂದ ರಾಕ್ಷಸನು ದಿವಂಗತನಾದನು. ಮತ್ತು ರಾಕ್ಷಸನು ಕೊಂದು ತಿಂದ ದಾರಿಕಾರನು ಮತ್ತು ಆ ಪಲ್ಲಕ್ಕಿಯನ್ನು ಹೊತ್ತವರು ಮುಂತಾದ ಇಲ್ಲಿ ಮರಣವನ್ನು ಪಡೆದವರೆಲ್ಲ ದಿವ್ಯಲೋಕಕ್ಕೆ ಹೋಗಿದ್ದಾರೆ. ಹೀಗೆ ಅನುಷಂಗಿಕವಾಗಿ ಇಲ್ಲಿ ಮರಣಹೊಂದಿದವರೂ ಸದ್ಗತಿ ಪಡೆದಾಗ ನೀನು ಮಾತ್ರ ಇಲ್ಲಿ ಮರಣಹೊಂದಿಯೂ ಪುನಃ ಮಾನವಜನ್ಮ ಪಡೆದದ್ದು ಏಕೆ? ಹೇಗೆ? ಇದರಿಂದಾಗಿ ನೀನು ಈ ತೀರ್ಥದಲ್ಲಿ ಹಿಂದೆ ಮರಣಹೊಂದಲೇ ಇಲ್ಲ ಎಂದು ನನಗೆನಿಸುತ್ತಲಿದೆ.

**ಶಿವಶರ್ಮ:-** ವಿಷ್ಣುಶರ್ಮ, ನಾನು ಪೂರ್ವಜನ್ಮದಲ್ಲಿ ಈ ತೀರ್ಥದಲ್ಲಿ, ಮರಣಹೊಂದಿದ್ದೂ ಆದರೂ ಈ ಜನ್ಮದಲ್ಲಿ ಮಾನವನಾಗಿ ಪುನಃ ಜನಿಸಿದ್ದೂ, ಇವೆರಡೂ ನಿಜ. ಆದರೆ ಇದಕ್ಕೆ ವಿಶೇಷ ಕಾರಣವೊಂದಿದೆ. ಆ ಹಿನ್ನೆಲೆಯನ್ನು ನಿನಗೆ ತಿಳಿಸುವೆ ಕೇಳು.

ನಾನು ಸಾಕ್ಷಾತ್ ಶ್ರೀಹರಿಯ ಪೂಜೆಯಲ್ಲಿಯೇ ಆಸಕ್ತನಾಗಿ ಆಶ್ರಮದಲ್ಲಿದ್ದು ಕೊಂಡು ಅವನನ್ನೇ ಸಂತತ ಚಿಂತನೆ ಮಾಡುತ್ತಲಿದ್ದೆ. ಒಂದು ದಿನ ಚಂಡಕೋಪನಾದ ದುರ್ವಾಸ ನನ್ನ ಆಶ್ರಮಕ್ಕೆ ಆಗಮಿಸಿದ. ಆತ ನನ್ನ ಆಶ್ರಮಕ್ಕೆ ಬಂದಾಗ ನಾನು ಶ್ರೀಹರಿಯ ಅಖಂಡಧ್ಯಾನದಲ್ಲಿ ನಿರತನಾಗಿದ್ದೆ. ಸಂಪ್ರಜ್ಞಾತ ಅವಸ್ಥೆಯಿಂದ ನನ್ನ ಧ್ಯಾನವು ಅಸಂಪ್ರಜ್ಞಾತ ಅವಸ್ಥೆಯನ್ನು ಮುಟ್ಟಿತ್ತು. ಹೊರಗಿನಿಂದ ಬಂದ ದುರ್ವಾಸ ಮಹರ್ಷಿಯು ಆಶ್ರಮದೊಳಕ್ಕೆ ಬಂದರೂ, ನನ್ನೆದುರಿಗೆ ನಿಂತರೂ, ನನ್ನ ಹೆಸರು ಹಿಡಿದು ಕೂಗಿದರೂ ಕರೆದರೂ ನನಗೆ ಎನಿತೂ ಅದರ ಅರಿವು ಆಗಲಿಲ್ಲ. ಭಗವಂತನ ಧ್ಯಾನೈಕತಾನಲೀನಮಾನಸನಾದ ನನಗೆ ದುರ್ವಾಸರು ಬಂದದ್ದೇ ಗೊತ್ತಾಗಲಿಲ್ಲ. ಆಗ ಸ್ವಭಾವತಃ ಕೋಪಿಷ್ಠನಾದ ಆ ಮುನಿಶ್ರೇಷ್ಠನು ಕ್ರೋದಾಂಧನಾಗಿ ನನಗೆ ಶಾಪ ನೀಡಿದ.

**ದುರ್ವಾಸ:-** ಎಲೈ ಮೂರ್ಖ ತಪಸ್ವಿಯೇ, ನನ್ನನ್ನು ಏನೆಂದು ತಿಳಿದಿರುವಿ? ನಾನು ಅತ್ರಿಯ ಮಗ. ಅನಸೂಯೆಯ ಹೊಟ್ಟೆಯಿಂದ ಮಹಾದೇವರ ಅಂಶದಿಂದ ಜನಿಸಿದ್ದೇನೆ. ನಾನೊಬ್ಬ ಸಾಮಾನ್ಯ ಮಾನವನೆಂದು ನೀನು ಉದಾಸೀನ ಮಾಡಿದಂತೆ ಕಾಣುತ್ತದೆ. ನನ್ನ ಮಹಿಮೆ ನಿನಗಿನ್ನೂ ತಿಳಿದಿಲ್ಲ. ಸಾಕ್ಷಾತ್ ದೇವೇಂದ್ರನನ್ನೂ ಅವನ ಸ್ವರ್ಗ ಸಿಂಹಾಸನದಿಂದ ಉರುಳಿಸಿ ಶಾಸನ ಮಾಡಿದ್ದೇನೆ. ಇಂಥ ನಾನು ಎದುರು ಬಂದು ನಿಂತರೂ ಕೂಗಿ ಕರೆದರೂ ಮಾತನಾಡಿಸದೇ, ಉಪಚರಿಸದೇ, ಧ್ಯಾನಮಾಡುತ್ತ ಕುಳಿತುಕೊಂಡಿರುವೆ. ಇದರಿಂದ ನನಗೆ ಅವಮಾನವಾಗಿದೆ. ''ಇಗೋ ನೀನು ಯಾವ ಉದ್ದೇಶವನ್ನಿರಿಸಿಕೊಂಡು ಧ್ಯಾನಮಾಡುತ್ತಿರುವೆಯೋ ಆ ಉದ್ದೇಶವು ಈ ಜನ್ಮದಲ್ಲಂತೂ ಈಡೇರುವದಿಲ್ಲ. ಇದು ಖಂಡಿತ'' ಕೊಪೋದ್ರೇಕದಿಂದ ಶಾಪಚೆಲ್ಲಿ ಮುನಿ ಅಲ್ಲಿಂದ ತೆರಳಿದ.

ಅನಂತರ ಆ ದುರ್ವಾಸ ಮುನಿಯ ಕೋಪಾಟೋಪಕೂಡಿದ ಗುಡುಗಿನಂತಹ ಧ್ವನಿಯಿಂದ ನನ್ನ ತಪಸ್ಸಮಾಧಿಗೆ ಆಡಚಣೆಯುಂಟಾಗಿ ನನಗೆ ಆ ಸಮಾಧ್ಯವಸ್ಥೆಯಿಂದ

ಎಚ್ಚರವಾಯಿತು. ನಡೆದ ವಿಷಯ ತಿಳಿಯಿತು. ಆದರೆ ದುರ್ವಾಸರು ಅಲ್ಲಿಂದ ಹೋಗಿಬಿಟ್ಟಿದ್ದರು. ಗಾಬರಿಯಿಂದ ಓಡುತ್ತ ಅವರನ್ನು ಹುಡುಕುತ್ತ ಹೊರಟೆ. ಮಾರ್ಗ ಮಧ್ಯದಲ್ಲಿ ದುರ್ವಾಸರು ಗೋಚರಿಸಿದರು. ಧಾವಿಸಿ ಅವರ ಪಾದಗಳಿಗೆರಗಿ ''ಸ್ವಾಮಿನ್, ಅಪರಾಧವಾಯಿತು. ಕ್ಷಮಿಸಬೇಕು. ಪ್ರಸನ್ನರಾಗಬೇಕು. ತಮ್ಮಂಥ ಮಹಾತ್ಮರನ್ನು ಸೇವೆ ಮಾಡುವ ಬಗೆಯನ್ನು ಪಾಮರನಾದ ನಾನು ಅರಿಯೆನು. ತಾವು ಬಂದಾಗ ನಿಜವಾಗಿಯೂ ನನಗೆ ಮೈಮೇಲೆ ಪ್ರಜ್ಞೆಯಿರಲಿಲ್ಲ. ಆದುದರಿಂದ ಈ ಪ್ರಮಾದ ಘಟಿಸಿತು. ನಿಷ್ಪಾಪಿಯಾದ ನನ್ನ ಮೇಲೆ ಈ ಘೋರ ಶಾಪವನ್ನು ತಾವು ನೀಡಿದ್ದೀರಿ ಪ್ರಸನ್ನರಾಗಿರಿ. ನನ್ನನ್ನು ಅನುಗ್ರಹಿಸಿರಿ. ನನ್ನಿಂದ ಆದ ತಪ್ಪಿಗಾಗಿ ಕ್ಷಮೆ ಕೇಳುತ್ತಿದ್ದೇನೆ ಕ್ಷಮಿಸಿರಿ.''

ಎಂದು ಅವರ ಪಾದಗಳನ್ನು ಹಿಡಿದು ಬಾರಿಬಾರಿಗೆ ಬೇಡಿಕೊಂಡೆ. ಇದರಿಂದ ದುರ್ವಾಸರು ಕೋಪರಹಿತರಾಗಿ ಸಮಾಧಾನದಿಂದ ನನ್ನನ್ನು ಅನುಗ್ರಹಿಸಿದರು. ಸಾಕ್ಷಾತ್ ಚಂದ್ರಶೇಖರನ ಅವತಾರರಲ್ಲವೇ ಆ ಮಹಾನುಭಾವರು! ಅಂತಃಕರಣದುಂಬಿದ ಧ್ವನಿಯಿಂದ ಉಪಶ್ಶಾಪವನ್ನು ನುಡಿದರು.

**ದುರ್ವಾಸ:-** ನಾನು ಒಮ್ಮೆ ನೀಡಿದ ಶಾಪ ಸುಳ್ಳಾಗಲಾರದು. ನಿನಗೆ ಈ ಜನ್ಮದಲ್ಲಿ ಮೋಕ್ಷ ಸಿಗುವದಿಲ್ಲ. ಮುಂದಿನ ಜನ್ಮದಲ್ಲಿ ಒಳ್ಳೇ ಜ್ಞಾನ-ಆಚಾರಗಳಿಂದ ಸಂಪನ್ನರಾದ ಬ್ರಾಹ್ಮಣ ವಂಶದಲ್ಲಿ ಜನಿಸುವಿ. ಆಗಲೂ ಪುನಃ ಸಾಧನೆ ಮಾಡಿಕೊಳ್ಳುವಿ. ಕೊನೆಗೆ ಈ ನಿಗಮೋದ್ಬೋಧಕ ತೀರ್ಥದಲ್ಲಿ ಮರಣ ಹೊಂದುವಿ. ಮತ್ತು ಅದೇ ನಿನಗೆ ಚರಮ ಜನ್ಮ ! ಕೊನೆಯ ದೇಹ. ಅದರ ನಂತರ ನಿಶ್ಚಿತವಾಗಿ ಮೋಕ್ಷವಾಗುವದು.

ಹೀಗೆ ನುಡಿದು ದಿಗಂಬರನಾದ ಆ ದುರ್ವಾಸ ಮಹರ್ಷಿಯು ಅಲ್ಲಿಂದ ಹೊರಟುಹೋದ. ಅನಂತರ ನನಗೆ ಬಹಳ ದುಃಖವಾಯಿತು. ಇದೇ ಜನ್ಮದ ಕೊನೆಗೆ ಮೋಕ್ಷ ಸಿಗುವದೆಂದು ಸಾಧನೆಗೆ ತೊಡಗಿದ ನನಗೆ ದುರ್ವಾಸರ ಅವಾಂತರದಿಂದಾಗಿ ಮತ್ತೊಂದು ಜನ್ಮ ಕಾಯುತ್ತ ಮತ್ತೆ ಈ ಮಾನುಷ್ಯ ಜನ್ಮದಲ್ಲಿಯೇ ಇರಬೇಕಾದುದು ಬಹಳ ಬೇಸರದಾಯಕವೆನಿಸಿತು. ಆದರೆ ಬೇರೆ ಉಪಾಯವಿರಲಿಲ್ಲ. ಆಗಲಿ ಇದು ಶ್ರೀಹರಿಯ ಇಚ್ಛೆಗನುಗುಣವಾಗಿಯೇ ನಡೆದಿದೆ ಎಂದು ಭಾವಿಸಿ, ಆ ಜನ್ಮಪೂರ್ತಿ ವಿರಕ್ತನಾಗಿ ರಾಮ, ಕೃಷ್ಣ, ಗೋವಿಂದ, ಪರಮಾನಂದ ಎಂದು ಬಗೆಬಗೆಯಾಗಿ ನಾಮಸ್ಮರಣೆ ಮಾಡುತ್ತ ಹೇಗೋ ಸವೆಸಿದೆ. ಕೊನೆಗೆ ಗಂಗಾತೀರದಲ್ಲಿ ಮರಣಹೊಂದಿದೆ.

ಮಹಾಮನೀಷಿ ಮುನಿವರೇಣ್ಯರಾದ ದುರ್ವಾಸರ ಶಾಪದಂತೆ ನಾನು ಮರಣಾನಂತರ ಶ್ರೇಷ್ಠರಾದ ವೈಷ್ಣವ ಕುಟುಂಬದಲ್ಲಿ ಜನಿಸಿದೆ. ಆ ಜನ್ಮವೇ ಇದು. ಈಗ ನಿನ್ನ ತಂದೆಯಾದ ಶಿವ ಶರ್ಮನಾಗಿ, ಸಂಸಾರದಲ್ಲಿ ವಿರಕ್ತನಾಗಿ ಈ ತೀರ್ಥಕ್ಕೆ ನಿನ್ನೊಡನೆ ಬಂದಿದ್ದೇನೆ. ಜನ್ಮಾಂತರದ ಸ್ಮರಣೆಯಿಂದ ಈ ತೀರ್ಥದ ಮಹಾಮಹಿಮೆಯನ್ನು ಅರಿತುಕೊಂಡು ನಿನ್ನ ಜೊತೆಗೆ ಈ ತೀರ್ಥಕ್ಕೆ ಬಂದು ಇಲ್ಲಿ ಮರಣಹೊಂದುವ ಇಚ್ಛೆಯಿಂದ ಇಲ್ಲಿ ವಾಸಿಸುತ್ತಿದ್ದೇನೆ.

**ನಾರದ:-** ಸುರಗುರುವಾದ ಬೃಹಸ್ಪತ್ಯಾಚಾರ್ಯರು ನಿರ್ಮಿಸಿದ ಈ ತೀರ್ಥದಲ್ಲಿ ಭಗವದಾರಾಧನೆ ಮಾಡುತ್ತ ತಂದೆಯಾದ ಶಿವಶರ್ಮ, ಮಗನಾದ ವಿಷ್ಣುಶರ್ಮ ಇಬ್ಬರೂ ಕೆಲಕಾಲ ವಾಸಿಸಿದರು. ತಂದೆ ವಿರಕ್ತ. ಮಗ ಮಹಾಜ್ಞಾನಿ. ಸತತವಾಗಿ ಹರಿಪಾದಪಲ್ಲವಗಳನ್ನು ಆರಾಧಿಸಿ, ಆ ತೀರ್ಥದಲ್ಲೇ ದೇಹತ್ಯಾಗ ಮಾಡಿ ಶ್ರೀಹರಿಯ ಸಾರೂಪ್ಯವೆಂಬ ಮೋಕ್ಷವನ್ನು ಪಡೆದರು.

ಪರಮ ಪವಿತ್ರವಾದ ಈ ಇಂದ್ರಪ್ರಸ್ಥ ಕ್ಷೇತ್ರದ ಹಾಗೂ ನಿಗಮೋದ್ಬೋಧಕ ತೀರ್ಥದ ಮಹಿಮೆಯನ್ನು ಶ್ರವಣಮಾಡಿದವರಿಗೆ, ಪಠನಮಾಡಿದವರಿಗೆ ಗಂಗಾಸ್ನಾನದ ಪುಣ್ಯಕ್ಕೆ ಸಮವಾದ, ಕನ್ಯಾದಾನ ಪುಣ್ಯಕ್ಕೆ ಸಮವಾದ, ಬೃಹಸ್ಪತಿಯು ಸಿಂಹಸ್ಥನಾಗಿರುವಾಗ ಗೋದಾನಮಾಡಿದರೆ ಬರುವ ಪುಣ್ಯಕ್ಕೆ ಸಮವಾದ ಪುಣ್ಯವನ್ನು ಹೊಂದುವರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಇಂದ್ರಪ್ರಸ್ಥದಲ್ಲಿ ಶರಭಮಿತ್ರನಾದ ರಾಕ್ಷಸನ ಉದ್ಧಾರದ ವರ್ಣನೆ ಎಂಬ ನೂರ ಎಂಬತ್ತೇಳೇಯ ಅಧ್ಯಾಯ ಮುಗಿದುದು*



## ಕಾಂಪಿಲ್ಯ ನಗರದ ಬ್ರಾಹ್ಮಣನಿಂದ ನಗರ ವಧುಗಳ ಉದ್ಧಾರವು

**ಅಧ್ಯಾಯ - ೧೮೮**

**ಸೌಭರಿ:-** ಧರ್ಮರಾಜ, ಶಿಬಿಚಕ್ರವರ್ತಿಯು ಮುನೀಶ್ವರರಾದ ನಾರದರ ಮಾತನ್ನು ಕೇಳಿ ಪರಮ ಪರಿತುಷ್ಟನಾಗಿ ಈ ರೀತಿಯಾಗಿ ಮಾತನಾಡಿದನು.

**ಶಿಬಿಚಕ್ರವರ್ತಿ :-** ಮಹಾಮುನಿಗಳೇ, ನಾನು ನಿಮ್ಮ ಮುಖದಿಂದ ನಿಗಮೋದ್ಬೋಧಕ ತೀರ್ಥದ ಮಹಿಮೆಯನ್ನು ಕೇಳಿದೆ. ಈಗ ಇಂದ್ರಪ್ರಸ್ಥದಲ್ಲಿರುವ ಇನ್ನಿತರ ತೀರ್ಥಗಳ ಮಾಹಾತ್ಮೆಯನ್ನು ನನಗಾಗಿ ನಿರೂಪಿಸಿರಿ.

**ನಾರದ:-** ಮಹಾರಾಜ, ಇಂದ್ರಪ್ರಸ್ಥದಲ್ಲಿ ಶ್ರೀಕೃಷ್ಣ ಪರಮಾತ್ಮನು ಹೊಸದಾದ ಒಂದು ದ್ವಾರಕಾಕ್ಷೇತ್ರವನ್ನು ನಿರ್ಮಿಸಿದ್ದಾನೆ. ಅದರ ಪ್ರಭಾವವನ್ನು ದೃಷ್ಟಾಂತ ಪೂರ್ವಕವಾಗಿ ನಿರೂಪಿಸುತ್ತೇನೆ. ಆಲಿಸು.

ಪೂರ್ವಕಾಲದಲ್ಲಿ ಕಾಂಪಿಲ್ಯ ನಗರದಲ್ಲಿ ಓರ್ವ ಬ್ರಾಹ್ಮಣ. ಅವನೊಬ್ಬ ರೂಪದಿಂದ ಮೂರ್ತಿವಂತ ಮನ್ಮಥ. ಸಂಗೀತದಲ್ಲಿಯಂತೂ ಅವನು ಗಾನ ಗಂಧರ್ವ. ಕೋಗಿಲೆಯಂತೆ ಮಧುರ ಅವನ ಧ್ವನಿ. ಒಂದು ದಿನ ಆ ವಿಪ್ರ ಯುವಕ ಕೈಯಲ್ಲಿ ತಂಬೂರಿಯನ್ನು ಹಿಡಿದು ಅದನ್ನು ಕೌಶಲ್ಯದಿಂದ ಬಾರಿಸುತ್ತ ಅದಕ್ಕೆ ತನ್ನ ಸುಸ್ವರವಾದ ಕಂಠಮಾಧುರ್ಯವನ್ನು ಬೆರೆಸಿ ಗಾಯನಗೈಯುತ್ತ ಆ ಕಾಂಪಿಲ್ಯ ನಗರದ ಬೀದಿಬೀದಿಯಲ್ಲಿ ತಿರುಗಾಡಿದ. ಅವನ ಗಾನ, ಗಿರಡಿಯ ತಾನ ವಿತಾನಗಳ ಆ ರಾಗರಾಗಿಣಿ ಸ್ವರಮಾಧುರ್ಯವನ್ನು ಕೇಳಿ ಆ ನಗರದ ಎಲ್ಲ ಸ್ತ್ರೀಯರು ಮೋಹಿತರಾದರು. ಬ್ರಹ್ಮ ಹಾಗೂ ಶಿವ, ಇಂದ್ರ ಮೊದಲಾದ ದೇವತೆಗಳನ್ನೆಲ್ಲ ತನ್ನ ಬೆರಳಿನ ತುದಿಯಲ್ಲಿ ಕುಣಿಸಿದ ಕಾಮನಿಗೆ ಯಾರು ತಾನೇ ಅಶಕ್ಯರು ಮಣಿಸಲು? ಆ ಕಾಂಪಿಲ್ಯನಗದ ಎಲ್ಲ ಯುವತಿಯರು ಮಧುರ ಕಂಠದಿಂದ ಗಾಯನ ಮಾಡುತ್ತ ನಗರದ ರಾಜಬೀದಿಗಳಲ್ಲಿ ಸಂಚರಿಸುತ್ತಿರುವ ಆ ದ್ವಿಜನನ್ನು ಕಂಡು ಮುಗ್ಧರಾದರು. ಅವನ ಹಿಂದೆ ಹಿಂದೆ ಅಲೆದಾಡತೊಡಗಿದರು.

ಆಗ ನಾರಿಯರ ಗಂಡ, ಮಕ್ಕಳು, ಅಣ್ಣ, ತಮ್ಮ, ತಾಯಿ ತಂದೆಗಳು ಬಂದು ಅವರನ್ನು ಬಯ್ದು ತಮ್ಮ ತಮ್ಮ ಮನೆಗಳಿಗೆ ಎಳೆದುಕೊಂಡು ಹೋದರು. ಹೀಗೆ ಮನೆಗೆ

ಬಲುಮೆಯಿಂದ ಕರೆದುಕೊಂಡು ಹೋದರೂ, ಆ ಯುವತಿಯರು ಈ ಯುಕ ರಸ್ತೆಗಿಳಿದು ಮಧುರ ಕಂಠದಿಂದ ಆಲಾಪಮಾಡತೊಡಗಿದ ಕೂಡಲೇ ಮನೆಯ ಜನರ ಯಾವ ನಿಬಂಧನಗಳನ್ನೂ ಕೇಳದೇ ಧಾವಿಸಿ ಬರತೊಡಗಿದರು. ಅವನ ಹಿಂದೆ ಹಿಂದೆಯೇ ನಾಚಿಕೆ ಬಿಟ್ಟು ಅಲೆಯತೊಡಗಿದರು. ಆಗ ಪುರಜನರು ಈ ಎಲ್ಲ ಸಮಾಚಾರವನ್ನು ಆ ನಗರದ ಮಹಾರಾಜನ ಎದುರಿಗೆ ಹೋಗಿ ತಿಳಿಸಿದರು.

ಒಂದು ದಿನ ಆ ಮಹಾರಾಜನು ಈ ಗಾನಗಂಧರ್ವನನ್ನು ಕರೆದು ಕೇಳಿದ.

**ರಾಜ:-** ವಿಪ್ರೋತ್ತಮ, ನೀನು ಈ ನಗರದಲ್ಲಿಯ ಕುಲೀನ ಸ್ತ್ರೀಯರನ್ನೆಲ್ಲ ಮಂತ್ರಮುಗ್ಧರನ್ನಾಗಿಸಿರುವೆ. ಇದರ ರಹಸ್ಯವೇನು? ಅದನ್ನು ಹೇಳು. ನೀನು ಬೇಡಿದಷ್ಟು ಹಣ ಕೊಡುತ್ತೇನೆ. ನೀನು ತಿಳಿಸದಿದ್ದರೆ ನಿನ್ನನ್ನು ರಾಜ್ಯ ಬಿಟ್ಟು ಹೊರಹಾಕುವೆ.

**ಬ್ರಾಹ್ಮಣಯುವಕ:-** ರಾಜನ್, ನನ್ನಲ್ಲಿ ಯಾವ ಅಂಥ ರಹಸ್ಯವೂ ಇಲ್ಲ. ನಿನ್ನ ನಗರದ ನಾರಿಯರು ಚಂಚಲ ಮನಸ್ಕರು. ಸಹಜವಾಗಿ ನಾನು ಗಾಯನಗೈಯುತ್ತ ಬೀದಿಯಲ್ಲಿ ಸಂಚರಿಸಿದರೆ ಮುಗ್ಧರಾಗಿಬಿಡುತ್ತಾರೆ. ನನ್ನನ್ನು ಹಿಂಬಾಲಿಸತೊಡಗುತ್ತಾರೆ. ಇದರಲ್ಲಿ ನನ್ನ ತಪ್ಪು ಏನಿದೆ? ನಾನು ಯಾರನ್ನೂ ನನ್ನ ಹಿಂದೆ ಬರಲು ಕರೆದಿಲ್ಲ. ಅವರಿಗಾಗಿ ಹಾಡುವದೂ ಇಲ್ಲ. ನನ್ನ ಪಾಡಿಗೆ ನಾನು ಇಚ್ಛೆ ಬಂದಾಗ ಹಾಡುತ್ತ ಬೀದಿಗಳಲ್ಲಿ ತಿರುಗಿದರೆ ಇವರೇಕೆ ನನ್ನ ಬೆನ್ನ ಹಿಂದೆ ಬರಬೇಕು? ಅವರನ್ನು ತಡೆಯುವ ಶಕ್ತಿ ಅವರ ಗಂಡ-ಮಕ್ಕಳಲ್ಲಿ ಇಲ್ಲವೆ? ಊರಿನ ಶಾಸಕನಾದ ನಿನ್ನಲ್ಲಿ ಇಲ್ಲವೆ?

ಹೀಗೆ ಆ ಬ್ರಾಹ್ಮಣನು ನುಡಿದದ್ದನ್ನು ಕೇಳಿ ನಗರದ ನಾಗರಿಕರು ಮಹಾರಾಜನನ್ನು ಕುರಿತು ನುಡಿದರು.

**ನಾಗರಿಕರು:-** ಪ್ರಭು, ಈ ಯುವಕನ ಸಂಗೀತಕ್ಕೆ ನಮ್ಮ ನಾರಿಯರೆಲ್ಲ ವಶರಾಗಿದ್ದಾರೆ. ಇವನ ಗಂಧರ್ವ ಕಂಠದಿಂದ ಆಕೃಷ್ಟರಾಗಿ ಮನೆ ಬಿಟ್ಟು ಹೋಗಿ ಬಿಡುತ್ತಾರೆ. ನಮ್ಮ ಮಾತನ್ನು ಕೇಳುವದೇ ಇಲ್ಲ. ಇವನು ಇದೇ ಊರಲ್ಲಿದ್ದರೆ ನಮ್ಮ ಮಡದಿ ಮಕ್ಕಳು ನಮ್ಮ ಮನೆಯನ್ನೇ ನಂಬುವದಿಲ್ಲ. ಇವನು ಇಲ್ಲಿಯೇ ಇರಬೇಕೆಂದು ನೀವೂ ಅಪೇಕ್ಷಿಸುವದಾದರೆ ನಾವೇ ಈ ಸ್ಥಳ ಬಿಟ್ಟು ಬೇರೆಡೆಗೆ ಸಾಗುತ್ತೇವೆ. ಇವನಿಂದಾಗಿ ನಮ್ಮ ಸ್ತ್ರೀಯರೆಲ್ಲ ಮನೆ ತೊರೆದಿದ್ದಾರೆ. ಹೀಗಾಗಿ ನಮ್ಮ ಯಜ್ಞ, ಯಾಗ, ದಾನ, ಧರ್ಮ, ಪುಣ್ಯಕರ್ಮಗಳೆಲ್ಲ ನಿಂತುಹೋಗಿವೆ. ಮನೆ ಶೂನ್ಯವೆನಿಸಿದೆ.

ಹೀಗೆ ಆ ನಗರದ ಸಮಸ್ತ ಪುರುಷ ಪ್ರಜೆಗಳು ರಾಜನಲ್ಲಿಗೆ ಆಗಮಿಸಿ ತಮ್ಮ ದೂರನ್ನು ಹೇಳಿದ್ದನ್ನು ಕೇಳಿ, ಹಿಂದೆ ಉಳಿತ ಸ್ತ್ರೀಯರು ತಮ್ಮ ತಮ್ಮೊಳಗೆ ಮಾತನಾಡತೊಡಗಿದರು. ನಮ್ಮ ನಮ್ಮ ಪತಿಯರು ನಮ್ಮ ಬಗ್ಗೆ ರಾಜನಲ್ಲಿ ಎಷ್ಟೇ ದೂರಗಳನ್ನು ಹೇಳಲಿ, ನಮಗೆ ಮಾತ್ರ ಈ ಗಾನಗಂಧರ್ವನಿಂದ ದೂರವಿರುವದು ಶಕ್ಯವಿಲ್ಲ. ಸೂರ್ಯನ ಉದಯದಿಂದ ಕಮಲಗಳು ಅರಳುವಂತೆ ಈ ಗಾನ ಗಂಧರ್ವನ ಮಧುರ ಭಂಗಿಯನ್ನು ಕಂಡು ನಮ್ಮ ಹೃದಯಗಳು ಅರಳುವವು. ಚಂದ್ರನ ದರ್ಶನದಿಂದ ಕನ್ನೈದಿಲೆಗಳು ಪಕಳೆಗರೆಯುವಂತೆ ಈ ಮನೋಹರ ತರುಣನ ಮುಖದರ್ಶನದಿಂದ ನಮ್ಮ ಹೃದಯ ಸುಪ್ರಸನ್ನವಾಗುವದು. ಆದುದರಿಂದ ನಾವೆಲ್ಲರೂ ಸೇರಿ ಆ ತರುಣನಿಗೆ ಯಾವುದೇ ಶಿಕ್ಷೆ ಅಥವಾ ದಂಡ ಮಾಡಕೂಡದೆಂದು ಮಹಾರಾಜರಲ್ಲಿ ವಿಜ್ಞಾಪಿಸೋಣ.

ಇಂಥ ಸುಂದರ, ಸುಕುಮಾರನನ್ನು ಅಪರಾಧವಿಲ್ಲದೇ ಶಿಕ್ಷಿಸುವದು. ಊರನ್ನು ಬಿಟ್ಟು ಹೊರಹಾಕುವುದು ಅನ್ಯಾಯ.

ಹೀಗೆ ಮಾತನಾಡಿ ಎಲ್ಲ ಸ್ತ್ರೀಯರು ರಾಜನ ಸಮ್ಮುಖದಿಂದ ಹೊರಹೊರಟ ಯುವಕನ ಹಿಂದೆಯೇ ಸಾಗಿದರು. ಮತ್ತು ಅವರ ಗಂಡ, ಮಕ್ಕಳು, ತಂದೆ, ರಾಜ ಇವರೆಲ್ಲರೂ ನೋಡುತ್ತಲಿದ್ದರೂ, ತಡೆದು ನಿಲ್ಲಿಸಿದರೂ ಕೇಳದೇ ಆ ಯುವಕನ ಹಿಂದೆ ಹಿಂದೆ ಹೋಗಿ ಅವನನ್ನು ಕುರಿತು ದೀನ ದನಿಯಿಂದ ಕೇಳಿಕೊಂಡರು.

**ಪುರಸ್ತ್ರೀಯರು:-** ಮನೋನಾಥ, ನೀನು ನಮ್ಮ ಮನೆಗೆ ಬಾ. ನಮ್ಮ ಹೃದಯದಲ್ಲಿ ನಿನ್ನ ಬಗ್ಗೆ ಉದಿಸಿದ ಕಾಮಪ್ರೇಮಗಳನ್ನು ತಣಿಸು. ನಾವು ನೀನಿಲ್ಲದೇ ಬದುಕಲಾರೆವು ಆ ಪುರ ಪುರಂಧ್ರಿಯರ ಈ ನುಡಿಯನ್ನು ಕೇಳಿ ಆ ಯುವಕ ವಿಪ್ರನು ಉತ್ತರವನ್ನು ನೀಡಿದ.

**ಯುವಕ:-** ಶುಭಾಂಗಿಯರೇ, ನೀವೆಲ್ಲರೂ ನನಗೆ ತಾಯಂದಿರು. ನಾನು ನಿಮ್ಮ ಮಗ. ನೀವು ಮನೆ ಬಿಟ್ಟು ಪತಿ, ಪುತ್ರರನ್ನು ಬಿಟ್ಟು ನನ್ನ ಹಿಂದೆ ಹಿಂದೆ ಏಕೆ ಅಲೆಯುತ್ತಿದ್ದೀರಿ? ನೀವು ಭರತಖಂಡದ ಪರಮ ಪತಿವ್ರತೆಯರಾದ ನಾರೀಮಣಿಯರು. ಪತಿಯೇ ನಿಮಗೆ ಪರದೈವತೆ. ಅವನನ್ನೇ ನೀವು ಆರಾಧಿಸಿರಿ. ನಿಮ್ಮ ಕೈ ಹಿಡಿದು ಪ್ರೀತಿವೃಷ್ಟಿಯನ್ನೇ ಕರೆಯುವ ನಿಮ್ಮ ಗಂಡಂದಿರನ್ನೇ ಆರಾಧಿಸಿದರೆ ಈ ಲೋಕದಲ್ಲಿ ಸುಖ, ಪರಲೋಕದಲ್ಲಿ ಸದ್ಗತಿ, ಪತಿಯ ಸೇವೆಯನ್ನು ಮಾಡುವದರಿಂದ ಜಗದೀಶ್ವರನು ಪ್ರಸನ್ನನಾಗಿ ಉತ್ತಮ ಗತಿಯನ್ನು ಕರುಣಿಸುತ್ತಾನೆ.

ಪತಿಯನ್ನು ತೊರೆದು ಪರಪುರುಷನನ್ನು ಸೇವಿಸುವ ಅಥವಾ ಕಾಮವಾಸನೆಯಿಂದ ಭಾವಿಸುವ ಮಹಿಳೆಯು ಈ ಲೋಕದಲ್ಲಿ ಅಪವಾದವನ್ನು ಕಲಂಕವನ್ನು ಹೊಂದುತ್ತಾಳೆ. ಮರಣಾನಂತರ ನರಕದಲ್ಲಿ ಅನಂತ ಕಾಲದವರೆಗೆ ನರಳುತ್ತಾಳೆ. ಆಮೇಲೆ ನರಕ ದುಃಖಗಳನ್ನೂ, ಘೋರ ಯಾತನೆಗಳನ್ನೂ ಅನುಭವಿಸಿ, ಕಲ್ಲು, ಮಣ್ಣು, ಮುಳ್ಳು ಇತ್ಯಾದಿ ಜಡರೂಪ ಧರಿಸಿ ಎಲ್ಲಿಯಾದರೂ ಬೀಳುವ ಪ್ರಸಂಗ ಬರುವದು. ಅನಂತರ ಬಹುಜನ್ಮಗಳಲ್ಲಿ ಪಶುವಾಗಿ ಕಾಡಿನಲ್ಲಿ ಅಲೆಯಬೇಕಾಗುವದು. ಕೊನೆಗೆ ಅನೇಕ ನೀಚಾತಿನೀಚ ಜನ್ಮಗಳಲ್ಲಿ ತೊಳಲಿ, ಬಳಲಿದ ಬಳಿಕ ಮನುಷ್ಯ ಯೋನಿಯಲ್ಲಿ ಕುರುಡ, ಕುಂಟ, ಮೂಕ, ಕೆಪ್ಪ, ಹೆಳವ ಆಗಿ ಜನಿಸುವರು. ಆದುದರಿಂದ ಸತೀಶಿರೋಮಣಿಗಳಾದ ನೀವೆಲ್ಲರೂ ನಿಮ್ಮ ನಿಮ್ಮ ಮನೆಗಳಿಗೆ ಹೊರಟು ಹೋಗಿರಿ. ನನಗೆ ಅಪವಾದವನ್ನು ನೀಡಬೇಡಿರಿ. ನಾನು ಎಂದೂ ಪ್ರೇಮದೃಷ್ಟಿಯಿಂದ, ಕಾಮವಾಸನೆಯಿಂದ ನಿಮ್ಮನ್ನು ನೋಡಿದ್ದಿಲ್ಲ.

**ನಾರದ:-**ಸ್ವರ ಸಮ್ರಾಟನಾದ ಆ ಯುವಕನ ಉಪದೇಶಪರವಾದ ಈ ಮಾತುಗಳನ್ನು ಕೇಳಿ ಕಾಮಾರ್ತರಾಗಿ ಬಂದ ಆ ಎಲ್ಲ ಕಾಮಿನಿಯರ ಕಾಮವಾಸನೆಯು ತೊಲಗಿತು. ಅವರ ಮನಸ್ಸು, ಇಂದ್ರಿಯ ಚಾಂಚಲ್ಯದಿಂದ ಮುಕ್ತವಾಯಿತು. ಅವರ ಹೃದಯವು ಶಾಂತವಾಯಿತು. ಆ ಬ್ರಹ್ಮಚಾರಿಯ ಮಾತುಗಳನ್ನು ಕೇಳಿ ಅವರೆಲ್ಲರೂ ಕಾಮನನ್ನು ಹಳಿಯುತ್ತ ತಮ್ಮ ಮನೆಗಳ ಕಡೆಗೆ ತಿರುಗಿದರು. ಅವರ ಎದುರು ಬಂದ ಗಂಡಂದಿರ ಮುಖಗಳನ್ನು ಕಂಡು ನಾಚಿಕೆಯೆನಿಸಿತು. ತಮ್ಮ ಪತಿದೇವತೆಯಲ್ಲಿ ಕ್ಷಮೆಯನ್ನು ಕೇಳಿದರು. ಕೂಡಿ ಮನೆಗಳಿಗೆ ತೆರಳಿದರು.

ಅನಂತರ ಕಾಂಪಿಲ್ಯದ ದೊರೆಯು ಆ ಗಾನಗಂಧರ್ವನನ್ನು ವಸ್ತ್ರ, ಆಭರಣಗಳಿಂದ ಪೂಜೆಗೈದು, ಅವನ ಮನಸ್ಥೈರ್ಯವನ್ನು, ಬ್ರಹ್ಮಚರ್ಯ ದೀಕ್ಷೆಯನ್ನು, ಪ್ರಶಂಸಿಸಿ ಅವನನ್ನು ಕಳುಹಿಸಿಕೊಟ್ಟ.

ಮುಂದೆ ಆ ಕಾಂಪಿಲ್ಯ ದೇಶದ ರಾಜಬೀದಿಯಲ್ಲಿ ಆ ಸ್ವರಸಮ್ರಾಟನು ಬಂದು ಮಧುರವಾದ ವೀಣೆಯನ್ನು ತರಳಬೆರಳುಗಳಿಂದ ಸಂಗೀತದ ನಾದತರಂಗಗಳನ್ನು ಹೊರಡಿಸಿದಾಗಲೆಲ್ಲ ಆ ಅಂಗನೆಯರ ಹೃದಯವು ಶೃಂಗಾರರಸದಿಂದ ಉತ್ತರಂಗಿತವಾಗುತ್ತಿತ್ತು. ಅವರು ಅವನಿಂದ ಅನುಶಾಸಿತರಾಗಿದ್ದರಿಂದ ಮೊದಲಿನಂತೆ ಅವನ ಬೆನ್ನು ಹತ್ತಿ ಹೋಗದಿದ್ದರೂ ಅವರ ಮನಸ್ಸು ಮಾತ್ರ ಆ ಸುಂದರ ಸುಕುಮಾರನಾದ ಗಾನಗಂಗಾಧರನ ಸಂಗೀತದಿಂದ ಚಿತ್ತವು ಚಂಚಲಿತವಾಗುತ್ತಿತ್ತು. ಅವರು ತಮ್ಮ ತಮ್ಮಲ್ಲಿ ಮಾತನಾಡುತ್ತಿದ್ದರು.

**ಸ್ತ್ರೀಯರು:-** ಪಾಪಿಯಾದ ಈ ಕಾಮನಿಗೆ ಧಿಕ್ಕಾರವಿರಲಿ. ನಮ್ಮ ಶೀಲವೆಂಬ, ಸತೀತ್ವವೆಂಬ ಕಾಷ್ಠವು ಕಾಮನಿಂದ ಕಡಿದು ತುಂಡುತುಂಡಾಗುತ್ತಿದೆ. ಆ ಕಾಮನನ್ನು ಸಂಹರಿಸಿದ ಮಹಾದೇವನೇ ನಿಜವಾಗಿಯೂ ದೊಡ್ಡ ದೇವ. ಸ್ತ್ರೀಯರ ಶೀಲ, ನಡತೆಗಳ ಚಂದ್ರನನ್ನು ನುಂಗುವ ವಿಷಯದಲ್ಲಿ ಈ ಕಾಮ ಒಬ್ಬ ರಾಹುವಿದ್ದಂತೆ. ಇಂಥ ವಾಮಾಚಾರಿಯಾದ ಕಾಮನನ್ನು ಹೊಟ್ಟೆಯಲ್ಲಿ ಹೊತ್ತು ಹೆತ್ತ ಜಗತ್ಪೂಜ್ಯಳಾದ ರುಕ್ಮಿಣಿಯ ಬಗೆಗೆ ನಾವು ಏನು ಹೇಳೋಣ? ಒಂದು ವೇಳೆ ಆ ಕಾಮನು ನಮಗೆ ಕಾಣಿಸಿದರೆ ಅವನನ್ನು ನಾವೇ ಕೊಂದುಹಾಕಿ ಮಹಾದೇವರ ಮೂರನೆಯ ಕಣ್ಣಿನ ಕಾಡ್ಗಿಚ್ಚಿನಲ್ಲಿ ಹಾಕಿ ಸುಟ್ಟು ಬಿಡುವೆವು. ಸಾಕ್ಷಾತ್ ಶ್ರೀಹರಿಯೇ ಆ ಕಾಮನ ವಶನಾಗಿ ಹದಿನಾರು ಸಾವಿರ ಸ್ತ್ರೀಯರೊಡನೆ ರಮಿಸಿದ. ಮದುವೆಯಾಗುವದಕ್ಕಿಂತ ಮೊದಲು ಗೋಕುಲ ವೃಂದಾವನದಲ್ಲಿ ಅನೇಕ ತರುಣಿಯರೊಡನೆ ವಿಹರಿಸಿದ. ಅಂದ ಬಳಿಕ ನಮ್ಮಂಥವರ ಪಾಡೇನು?

ಹೀಗೆ ಆ ಕಾಮನನ್ನು ಮನಸೋಕ್ತವಾಗಿ ಬೈದು, ತಮ್ಮ ಸತೀತ್ವಗಳನ್ನು ಕಾಪಾಡಿದ ಆ ವಿಪ್ರೋತ್ತಮನನ್ನು ಬಾಯಿತುಂಬ ಹೊಗಳುತ್ತಿದ್ದರು. ಇಂಥ ಮದನಸುಂದರನಾದ ಗಾನಗಂಧರ್ವನನ್ನು ಹಡೆದ ಆ ತಾಯಿಯು ಧನ್ಯಳು. ಆದರೆ ನಮ್ಮ ಪತಿ, ಪುತ್ರ, ಬಂಧುಗಳ ಎದುರಲ್ಲಿಯೇ ಕಾಮಾಂಧರಾಗಿ ಪ್ರೇಮಾತುರ ಪ್ರಮದೆಯರಂತೆ ತಿರುಗಾಡಿದ ನಮ್ಮ ನಿರ್ಲಜ್ಜ ಜೀವನಕ್ಕೆ ಧಿಕ್ಕಾರ. ನಮಗೆ ಈ ತರುಣ ಯುವಕನ ಸಂದರ್ಶನದಿಂದ ಕಾಯಿಕವಾಗದಿದ್ದರೂ ವಾಚಿಕ, ಮಾನಸಿಕ ಮಹಾಘೋರವಾದ ಪಾಪವು ಮಾತ್ರ ನಮ್ಮ ಪದರಿಗೆ ಬಿದ್ದಿತು. ಆ ಸ್ತ್ರೀಯರು ಹೀಗೆ ತಮ್ಮ ತಮ್ಮಲ್ಲಿ ಮಾತನಾಡಿಕೊಂಡು, ತಮ್ಮ ಹೃದಯದಲ್ಲಿ ಸುಪ್ತವಾದ ಆ ಪರಪುರುಷನ ಪ್ರೇಮಾದರಗಳನ್ನು ಪರಸ್ಪರ ವ್ಯಕ್ತಗೊಳಿಸುತ್ತಲಿದ್ದರು. ಕೆಲವು ದಿವಸಗಳ ಬಳಿಕ ಆ ಕಾಂಪಿಲ್ಯ ನಗರವನ್ನು ಕಾರೂಷ ದೇಶದ ಬಲಿಷ್ಠನಾದ ರಾಜನು ಆಕ್ರಮಣಮಾಡಿದ. ಆ ಕಾಂಪಿಲ್ಯ ರಾಜನಿಗೂ, ಕಾರೂಷ ರಾಜನಿಗೂ ಘನಘೋರ ಯುದ್ಧ ನಡೆಯಿತು. ಕಾಂಪಿಲ್ಯ ಭೂಪಾಲನನ್ನು ಹೊಡೆದು, ಬಡೆದು, ಸೋಲಿಸಿ ಅವನ ಅಂತಃಪುರದ ಸರ್ವಸಂಪತ್ತನ್ನೂ ಕಾರೂಷ ದೇಶದ ದೊರೆಯು ಅಪಹರಿಸಿದ. ನಗರದ ಎಲ್ಲ ಭಾಗಗಳಲ್ಲೂ ಅವನ ಅನುಚರರು ತಿರುಗಾಡಿ ಸಂಪತ್ತನ್ನೆಲ್ಲ ದೋಚಿದರು. ಆ ನಗರದಲ್ಲಿಯ ಗಂಡಸರನ್ನೆಲ್ಲ ಸಂಹರಿಸಿದರು.

ಆಗ ಆ ನಗರದಲ್ಲಿನ ಎಲ್ಲ ಸ್ತ್ರೀಯರೂ ಶತ್ರುಗಳ ವಶರಾಗದೇ ಕಾಲಕೂಟ ವಿಷವನ್ನು ಸೇವಿಸಿ ಮರಣವಶರಾದರು. ಅವರು ಬದುಕಿರುವವರೆಗೆ ತಾವು ಮಾಡಿದ ಪಾಪಕ್ಕೆ ಯಾವ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಲಿಲ್ಲ. ಮತ್ತು ಸಾಯುವವರೆಗೂ ಅವರಿಗೆ ಆ ಸ್ವರಸಮ್ರಾಟನ ಮೇಲಿನ ಪ್ರೇಮ ಕಡಿಮೆಯಾಗಲಿಲ್ಲ. ಕಾಮ ಅಳಿದಿರಲಿಲ್ಲ. ದೇಹದಿಂದ ಅವರು ಅವನಿಂದ ದೂರವಿದ್ದರೂ, ಮನಸ್ಸಿನಿಂದ ಅವನನ್ನು ಆಗಾಗ ಅನುಸ್ಮರಣ ಮಾಡುತ್ತಲೇ ಇದ್ದರು. ಮರಣ ಕಾಲದಲ್ಲಿ ಕಾಲಕೂಟ ವಿಷಭಕ್ಷಿಸಿ ಮರಣಿಸಿದ್ದರಿಂದ ಅವರೆಲ್ಲರೂ ರಾಕ್ಷಸಿಯರಾಗಿ ಜನಿಸಿದರು. ಭಯಂಕರ ಆಕಾರದ ವಿಕಾರಮುಖದ ರಾಕ್ಷಸಿಯರು ಅದೇ ಮುಖದಲ್ಲಿ ತಿರುಗತೊಡಗಿದರು. ಅವರು ಮಾನವರಾಗಿದ್ದಾಗ ಪರಪುರುಷನ ಧ್ಯಾನಮಾಡಿದ್ದರೆ ಫಲವಾಗಿ ಈಗ ಭಯಂಕರ ದುಃಖವನ್ನು ಅನುಭವಿಸಿದರು. ಮುಂದೆ ಅರ್ಜುನನು ಧರ್ಮರಾಜನ ರಾಜಸೂಯಯಾಗದ ಪ್ರಸಂಗದಲ್ಲಿ ದೇಶ ದಿಗ್ವಿಜಯಕ್ಕೆ ಹೊರಟಾಗ ಕಾಂಪಿಲ್ಯ ನಗರಕ್ಕೆ ಆಗಮಿಸಿದ. ಆ ಎಲ್ಲ ರಾಕ್ಷಸಿಯರೂ ಅರ್ಜುನನ ರಥದ ಮೇಲೆ ಧ್ವಜದಲ್ಲಿ ಕುಳಿತ ಹನುಮಂತನ ಪರಾಕ್ರಮದಿಂದ ಹತರಾಗಿ ಮರುಭೂಮಿಯಲ್ಲಿ ಮತ್ತೆ ರಾಕ್ಷಸರಾಗಿ ಹುಟ್ಟಿದರು. ನೀರಡಿಕೆ, ಸಂಕಟ, ಉರಿ, ತಾಪಗಳಿಂದ ತೊಳಲಿ ಬಹು ವರ್ಷಗಳವರೆಗೆ ದುಃಖಪಟ್ಟರು. ಅವರ ಪಾಪದಿಂದ ಎರಡು ನಗರಗಳು ಸಂಪೂರ್ಣ ನಷ್ಟವಾಗಿ ಹೋದವು.

ಆದುದರಿಂದ ಸ್ತ್ರೀಯರು ಪರಪುರುಷನ ಮೇಲೆ ಸ್ನೇಹವಾಗಲೀ, ಮೋಹವನ್ನಾಗಲೀ ಹೊಂದಕೂಡದು. ಪ್ರದರ್ಶಿಸಕೂಡದು.

**ನಾರೀಭಿಃ ಪಾಪಭೀತಾಭಿಃ ವಾಙ್ಮನೋಭ್ಯಾಮಪಿ ಪ್ರಭೋ ।**
**ಅತ ಏವ ಕರ್ತವ್ಯಂ ಪರಕಾಂತನಿಕ್ಷೇಪಣಂ ॥**

ಪಾಪಕ್ಕಾಗಿ ಹೆದರುವ ಮಹಿಳೆಯರು ಮಾತಿನಿಂದಾಗಲೀ, ಮನಸ್ಸಿನಿಂದಾಗಲೀ ಪರಪುರುಷರನ್ನು ಪ್ರೇಮಿಸತಕ್ಕದ್ದಲ್ಲ. ಸೇವಿಸತಕ್ಕದ್ದಲ್ಲ.

**ರೋಗೀ, ಜಡೋ, ದರಿದ್ರೋ ವಾ ಮಿತ್ರಾಭ್ಯಾಂ ವರ್ಜಿತೋಪಿ ವಾ ।**
**ನ ತ್ಯಾಜ್ಯಃ ಸ್ವಪತಿಃ ಸ್ತ್ರೀಭಿಃ ಇಚ್ಛಂತೀಭಿಸ್ತು ಸದ್ಗತಿಮ್ ॥**

"ಸದ್ಗತಿಯನ್ನು ಅಪೇಕ್ಷಿಸುವ ಸ್ತ್ರೀಯರು ದಡ್ಡನಾಗಲೀ, ಹೆಡ್ಡನಾಗಲೀ, ಕಡುಬಡವನಾಗಲೀ, ಮಿತ್ರರಿಂದ ತಿರಸ್ಕೃತನಾಗಲೀ ಹೇಗಿದ್ದರೂ ತನ್ನ ಪತಿಯನ್ನು ಬಿಡಕೂಡದು.

ಈ ಕಾಂಪಿಲ್ಯ ನಗರದ ನಾರಿಯರು ತಮ್ಮ ಮನಸ್ಸು ಹಾಗೂ ಮಾತಿನಿಂದ ಪರಪುರುಷನನ್ನು ಧ್ಯಾನಿಸಿ, ಮೋಹಿಸಿ ಎರಡು ಜನ್ಮಗಳಲ್ಲಿ ರಾಕ್ಷಸಿಯರಾಗಿ ತಾವಿದ್ದ ಎರಡೂ ನಗರಗಳನ್ನೂ ಹಾಳುಮಾಡಿ ಅತಿಯಾದ ದುಃಖವನ್ನು ಅನುಭವಿಸಿದರು. ಮುಂದೆ ಆ ಎಲ್ಲ ಪೌರಸ್ತ್ರೀಯರು ಅಂಡಲೆಯುತ್ತ ಇಂದ್ರಪ್ರಸ್ಥ ತೀರಕ್ಕೆ ಬಂದರು. ಆ ಇಂದ್ರಪ್ರಸ್ಥದ ದಂಡೆಯ ಮೇಲಿರುವ ದ್ವಾರಕಾ ಪಟ್ಟಣದಲ್ಲಿ ಅಂತರ್ಪಿಶಾಚಿಯರಾಗಿ ಅಲೆಯುತ್ತಲಿರುವಾಗ ಅವರ ದೇಹದ ಮೇಲೆ, ಸ್ನಾನಮಾಡಿದ ಜನರ ನೀರಿನ ಹನಿಗಳು ಬಿದ್ದವು. ಹೀಗೆ ಆಕಸ್ಮಿಕವಾಗಿ ಮೈಮೇಲೆ ಬಿದ್ದ ಇಂದ್ರಪ್ರಸ್ಥ ತೀರ್ಥ ಜಲಬಿಂದುಗಳಿಂದ

ಆ ಎಲ್ಲ ಸ್ತ್ರೀಯರ ಪಾಪವು ನಾಶವಾಗಿ ಅವರು ಆ ರಾಕ್ಷಸೀಜನ್ಮದಿಂದ ಮುಕ್ತರಾದರು. ದಿವ್ಯವಾದ ದೇವತಾಸ್ತ್ರೀಯರ ದೇಹವು ಅವರಿಗೆ ಪ್ರಾಪ್ತವಾಯಿತು. ಹೀಗೆ ಈ ಇಂದ್ರಪ್ರಸ್ಥ ತೀರ್ಥದ ಜಲಸ್ಪರ್ಶ ಮಾತ್ರದಿಂದಲೇ ಪರಪುರುಷರ ಬಯಕೆಯಿಂದುಂಟಾದ ಘೋರ ಪಾಪದಿಂದ ಮುಕ್ತರಾದರು. ದೈವೀಭಾವವನ್ನು ಹೊಂದಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಕಾಂಪಿಲ್ಯ ನಗರದ ಬ್ರಾಹ್ಮಣನಿಂದ ನಗರ ವಧುಗಳ ಉದ್ಧಾರವು ಎಂಬ ನೂರ ಎಂಬತ್ತೆಂಟನೇಯ ಅಧ್ಯಾಯ ಮುಗಿದುದು*



## ವಿಮಲ ಬ್ರಾಹ್ಮಣನ ಕಥಾನಕ — ಅಧ್ಯಾಯ - ೧೮೯

**ಸೌಭರಿ:-** ಧರ್ಮರಾಜ, ನಾರದರ ಈ ನುಡಿಗಳನ್ನು ಕೇಳಿ ಶಿಬಿಚಕ್ರವರ್ತಿಯು ನಮ್ರನಾಗಿ ಮಾತನಾಡಿದ.

**ಶಿಬಿಚಕ್ರವರ್ತಿ:-** ಪೂಜ್ಯರೇ, ಮರುದೇಶದಲ್ಲಿ ರಾಕ್ಷಸಿಯರಾಗಿ ಅಂಡಲೆಯುತ್ತಿದ್ದ ಅವರು ದ್ವಾರಕಾಪಟ್ಟಣಕ್ಕೆ ಹೇಗೆ ಬಂದರು? ದ್ವಾರಕಾಪಟ್ಟಣದಲ್ಲಿ ಇರುವ ಇಂದ್ರಪ್ರಸ್ಥ ತೀರ್ಥ ನೀರಿನ ಸ್ಪರ್ಶವು ಅವರಿಗೆ ಹೇಗೆ ಆಯಿತು? ಇಲ್ಲಿ ಖಾಂಡವವನದಲ್ಲಿ ನವನಿರ್ಮಿತವಾದ ಈ ಇಂದ್ರಪ್ರಸ್ಥ ತೀರ್ಥಕ್ಕೂ ಮರುದೇಶಕ್ಕೂ ಬಹಳ ದೂರದ ಅಂತರ. ಹಾಗಿರುವಾಗ ರಾಕ್ಷಸಜನ್ಮದಲ್ಲಿ ಕಾಂಪಿಲ್ಯದಲ್ಲಿ ತೊಳಲಾಡುತ್ತಲಿದ್ದ ನಾರಿಯರಿಗೆ ಇಂದ್ರಪ್ರಸ್ಥದ ತೀರ್ಥ ಜಲದ ಸ್ಪರ್ಶ ಹೇಗಾಯಿತು?

**ನಾರದ :-** ರಾಜನೇ, ಹಿಮಾಚಲ ಪರ್ವತದಲ್ಲಿ ಒಂದು ಕಂದರದಲ್ಲಿ ವಾಸಮಾಡುತ್ತಿದ್ದ ವಿಮಲ ಎಂಬ ಒಬ್ಬ ಬ್ರಾಹ್ಮಣನು ಅಖ್ಯಾನವನ್ನು ಹೇಳುವೆ ಕೇಳು.

ವಿಮಲ ಎಂಬ ಸದಾಚಾರ ಸಂಪನ್ನನಾದ ಬ್ರಾಹ್ಮಣ. ದೇವತಾರಾಧನೆ, ಋಷಿ ಪೂಜನ, ಅಗ್ನಿಕಾರ್ಯ ಮುಂತಾದ ಎಲ್ಲ ಧಾರ್ಮಿಕ ವಿಧಿಗಳನ್ನು ಅನೂಚಾನವಾಗಿ ತಪ್ಪದೇ ಆಚರಿಸುತ್ತಲಿದ್ದ. ಮನೆಗೆ ಬಂದ ಅತಿಥಿ ಅಭ್ಯಾಗತರಿಗೆ ಸ್ವಾಗತ ನೀಡಿ, ಮೃಷ್ಟಾನ್ನ ಬಡಿಸಿ ತೃಪ್ತಿಗೊಳಿಸುತ್ತಲಿದ್ದ. ಶ್ರೀಹರಿಯ ಪಾದಪೂಜೆಯನ್ನು ಪ್ರತಿದಿನವೂ ಭಕ್ತಿಯಿಂದ ಆಚರಿಸುತ್ತಲಿದ್ದ. ವೇದಗಳಲ್ಲಿ, ವೇದಾಂಗಗಳಲ್ಲಿ ವಿದ್ವಾಂಸ, ವಾಸುದೇವನ ಗುಣಗಳನ್ನು ವರ್ಣಿಸುವ ಅಷ್ಟಾದಶ ಪುರಾಣಗಳನ್ನೂ ಶ್ರವಣಮಾಡಿ ಉಪನಿಷತ್ತ್ವಗಳನ್ನು ಮನಗೊಂಬುವ ರೀತಿಯಲ್ಲಿ ಜನರಿಗೂ ಶ್ರವಣ ಮಾಡಿಸುತ್ತಲಿದ್ದ.

ಆ ವಿಮಲ ಬ್ರಾಹ್ಮಣನಿಗೆ ಮುಪ್ಪಿನ ಕಾಲದಲ್ಲಿ ಮಗನೊಬ್ಬನು ಜನಿಸಿದ. ಅವನಿಗೆ ಹರಿದತ್ತ ಎಂದು ಹೆಸರನ್ನಿಡಲಾಯಿತು. ಆ ಹರಿದತ್ತ ಕುಮಾರನಿಗೆ ಸಕಾಲದಲ್ಲಿ ಚೌಲ, ಉಪನಯನ ಮುಂತಾದ ವೇದೋಕ್ತ ಸಂಸ್ಕಾರಗಳನ್ನು ಮಾಡಿದ ಆ ವಿಮಲ ಬ್ರಾಹ್ಮಣ. ಅನಂತರ ಆ ಹರಿದತ್ತನು ಗುರುಕುಲಕ್ಕೆ ಹೋಗಿ ವಿಧಿಪೂರ್ವಕವಾಗಿ ಎಲ್ಲ ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿದ. ಗುರುದಕ್ಷಿಣೆಯನ್ನು ಕೊಟ್ಟು ಮನೆಗೆ ಬರುವಷ್ಟರಲ್ಲಿ ಈ ಸಂಸಾರವೆಲ್ಲವೂ ಅಸಾರ ಎನಿಸಿತು. ವಿಷಯದಲ್ಲಿ ವೈರಾಗ್ಯ ಮೂಡಿತು. ಅವನು ಗೃಹಸ್ಥಾಶ್ರಮ, ವಾನಪ್ರಸ್ಥಾಶ್ರಮ ಎರಡನ್ನೂ ಬಿಟ್ಟು ಒಮ್ಮೆಲೇ

ಬ್ರಹ್ಮಚರ್ಯಾಶ್ರಮದಿಂದ ಸನ್ಯಾಸವನ್ನು ಸ್ವೀಕರಿಸಿದ. ಚಿಕ್ಕ ವಯಸ್ಸಿನ ತನ್ನ ಮಗನು ವೇದಶಾಸ್ತ್ರಾದಿಗಳನ್ನು ಅಧ್ಯಯನ ಮಾಡಿ ಮನೆಗೆ ಬಾರದೇ ಸನ್ಯಾಸಾಶ್ರಮವನ್ನು ಸ್ವೀಕರಿಸಿದುದು ಅವನ ತಾಯಿಗೆ ಬಹಳ ದುಃಖವನ್ನುಂಟುಮಾಡಿತು. ಮಗನ ಈ ಯತ್ಯಾಶ್ರಮವನ್ನು ಕುರಿತು ಬಹಳ ಸಂಕಟಪಟ್ಟು ಅವಳು ದುಃಖದಿಂದ ಮಾತನಾಡಿದಳು.

**ತಾಯಿ:-** ಮಗು, ನನ್ನನ್ನು ಅನಾಥಳನ್ನಾಗಿ ಮಾಡಿ, ಮುಪ್ಪಿನ ಮುದುಕರಾದ ನಿಮ್ಮ ತಂದೆಯನ್ನೂ ಬಿಟ್ಟು ನೀನು ಎಲ್ಲಿಗೆ ಹೊರಟು ಹೋದಿ? ವಾರ್ಧಕ್ಯದಲ್ಲಿ ಅಶಕ್ತರಾದ ತಾಯಿ ತಂದೆಗಳ ಸೇವೆಯೇ ಶ್ರೀಹರಿಯ ಸೇವೆ. ಇಂಥ ಮುದುಕರಾದ ನಮ್ಮಿಬ್ಬರನ್ನೂ ತೊರೆದು ಭಗವಂತನ ಚರಣಾರವಿಂದಗಳನ್ನು ಧ್ಯಾನಮಾಡುತ್ತ ಕುಳಿತುಕೊಳ್ಳಲು ನಿನಗೆ ಮನಸ್ಸಾದರೂ ಹೇಗೆ ಬರುವದು? ಇನ್ನು ಮೇಲೆ ನಿನ್ನನ್ನು ತೊರೆದು ನಾನು ಹೇಗೆ ಜೀವಿಸಲಿ? ಎಂದು ದುಃಖದಿಂದ ನೆಲದ ಮೇಲೆ ಬಿದ್ದು ವಿಲಾಪಿಸತೊಡಗಿದಳು.

ಆಗ ವಿಮಲ ಬ್ರಾಹ್ಮಣನು ಮನೆಯಲ್ಲಿ ಇರಲಿಲ್ಲ. ಮನೆಗೆ ಬಂದ ಕೂಡಲೇ ನೆಲದ ಮೇಲೆ ಬಿದ್ದು ಉರುಳಾಡಿ, ಹೊರಳಾಡಿ, ಶೋಕಮಾಡುತ್ತಿರುವ ಪತ್ನಿಯ ದೀನ ಅವಸ್ಥೆಯನ್ನು ಕಂಡ. ಅವನ ಮನಸ್ಸಿಗೂ ಆಘಾತವೆನಿಸಿತು. ಅಲ್ಲಿಯೇ ಅವಳ ಪಕ್ಕದಲ್ಲಿ ಕುಳಿತ ಗೆಳತಿಯನ್ನು ಕೇಳಿದ.

**ಗೆಳತಿಯರು:-** ಮಗನನ್ನು ಕುರಿತು ವಿಲಪಿಸುತ್ತಿದ್ದಾಳೆ. ವಿದ್ಯಾಭ್ಯಾಸ ಮುಗಿಸಿದ ಮಗನು ಗುರುದಕ್ಷಿಣೆ ಒಪ್ಪಿಸಿ, ಸನ್ಯಾಸ ಸ್ವೀಕರಿಸಿಯೇ ಮನೆಯವರೆಗೆ ಬಂದು, ಒಳಗೆ ಬಾರದೇ 'ನಾನು ಸನ್ಯಾಸ ಸ್ವೀಕರಿಸಿದ್ದೇನೆ, ಎಂದು ತಿಳಿಸಿ ನಡೆದೇ ಬಿಟ್ಟ. ತಾಯಿಗೂ ಸರಿಯಾಗಿ ಮುಖವನ್ನು ತೋರಿಸಲಿಲ್ಲ. ಇದಕ್ಕಾಗಿ ಇವಳು ಮಗನ ವಿರಹದಿಂದ ನೆಲದ ಮೇಲೆ ಬಿದ್ದು ವಿಲಪಿಸುತ್ತಿದ್ದಾಳೆ.

ಗೆಳತಿಯರ ಈ ಮಾತುಗಳನ್ನು ಕೇಳಿ ವಿವೇಕಿಯಾದ ಆ ವಿಮಲ ಬ್ರಾಹ್ಮಣನು ಶಾಂತಭಾವದಿಂದ ತನ್ನ ಮಡದಿಯನ್ನು ಕುರಿತು ನುಡಿದ.

**ವಿಮಲ ಬ್ರಾಹ್ಮಣ:-** ಕಲ್ಯಾಣಿ, ನೀನು ವ್ಯರ್ಥವಾಗಿ ಏಕೆ ಶೋಕಿಸುವಿ? ಸಂಸಾರವನ್ನು ಪರಿತ್ಯಜಿಸಿ. ಶ್ರೀಹರಿಯ ಪಾದಪಲ್ಲವಗಳನ್ನು ಸೇವಿಸುತ್ತ ನಿರಂತರ ಭಕ್ತಿಯಿಂದ ಅವನನ್ನು ಧ್ಯಾನಿಸುವ ಅಧ್ಯಾತ್ಮ ಮಾರ್ಗವನ್ನು ಹಿಡಿದ ನಮ್ಮ ಮಗನು ಧನ್ಯ. ಅಂಥ ವಿರಕ್ತ ಶಿಖಾಮಣಿ. ಅತ್ಯಂತ ವಿವೇಕಿಯಾದ ಮಗನಿಗೆ ಜನ್ಮಕೊಟ್ಟ ನೀನೂ ಧನ್ಯಳೇ. ಅವನಿಂದ ನಾನು, ನೀನು ನಮ್ಮ ಕುಲ ಎಲ್ಲವೂ ಉದ್ಧೃತವಾಗುವದು.ಈ ಜಗತ್ತೆಲ್ಲವೂ ಮಿಂಚಿನ ಗೊಂಚಲಿನಂತೆ ಚಂಚಲ, ಈ ಪ್ರಪಂಚದಲ್ಲಿ ಶಾಶ್ವತ ಸಮಾಧಾನ ನೀಡುವ ಸ್ಥಾನವೆಂದರೆ ವೈಕುಂಠವೊಂದೇ, ಸಂಸಾರವು ನೀರಿನ ಮೇಲಿನ ಗುಳ್ಳೆಯಂತೆ ಕ್ಷಣಭಂಗುರ. ಪ್ರಾಚೀನ ಕಾಲದ ಭರತ ಮೊದಲಾದ ಮಹಾತ್ಮರು ರಾಜ್ಯ, ಭೋಗ, ಐಶ್ವರ್ಯ, ಅಧಿಕಾರ ಎಲ್ಲವನ್ನೂ ತೊರೆದು ಅರಣ್ಯಕ್ಕೆ ಹೋಗಿ ತಪಸ್ಸನ್ನಾಚರಿಸಿ ಉತ್ತಮ ಗತಿಯನ್ನು ಹೊಂದಿದರು. ಹೆಂಡತಿ, ಹಣ, ಕಾಮ, ಶರೀರ ಇವೆಲ್ಲವೂ ಪ್ರಾಣಿಗಳಿಗೆ ಪ್ರತಿಯೊಂದು ಜನ್ಮದಲ್ಲೂ ದೊರೆಕುತ್ತವೆ. ಮತ್ತು ದುಃಖವನ್ನೂ ನೀಡುತ್ತವೆ. ಶ್ರೀಹರಿಯ ಸಾಕ್ಷಾತ್ ದರ್ಶನವಾಗುವವರೆಗೆ ಈ ದುಃಖದಿಂದ ಯಾರಿಗೂ ಬಿಡುಗಡೆಯಿಲ್ಲ. ಆದುದರಿಂದ ನಿಜವಾದ ವಿವೇಕಿಗಳು ಈ ದುಃಖಮಯ ಸಂಸಾರ ತೊರೆದು ಏಕಾಂತ ಅರಣ್ಯಕ್ಕೆ ನಡೆದು

ಭಗವಂತನನ್ನು ಧ್ಯಾನಿಸಿ, ಒಲಿಸಿ ಜೀವನ ಸಾರ್ಥಕ್ಯ ಮಾಡಿಕೊಳ್ಳುತ್ತಾರೆ. ನಮ್ಮ ಮಗನು ಈ ಚಿಕ್ಕ ವಯಸ್ಸಿನಲ್ಲೇ ಇಂಥ ವಿವೇಕವನ್ನು ಹೊಂದಿ. ತಾನೂ ಧನ್ಯನಾಗಿ ನಮ್ಮನ್ನೂ ಧನ್ಯರಾಗಿಸಿದ್ದಕ್ಕೆ ನಾವು ಸಂತೋಷಪಡಬೇಕು. ನೀನು ಶೋಕಿಸಬೇಡ.

**ಧರ್ಮಪತ್ನಿ:-** ನಾಥ, ನೀನು ಹೇಳುವ ವಿಷಯವೆಲ್ಲವೂ ನನಗೆ ಗೊತ್ತು. ನಮ್ಮ ಮಗನೇನೋ ಆತ್ಮೋದ್ಧಾರ ಸಾಧಿಸಿಕೊಂಡಿರಬಹುದು. ಸಂನ್ಯಾಸ ಮಾರ್ಗ ಹಿಡಿದು ಅನೇಕ ಶಿಷ್ಯರನ್ನೂ, ಭಕ್ತರನ್ನೂ ಮುಕ್ತಿಮಾರ್ಗಕ್ಕೆ ಹಚ್ಚಬಹುದು. ಆದರೆ ನನ್ನ ಗತಿಯೇನು? ಇದ್ದೊಬ್ಬ ಮಗ ಮದುವೆಯಾಗದೇ, ಮನೆಯಲ್ಲಿ ಉಳಿಯದೇ ಮುಂದೆ ವಂಶಪರಂಪರೆಯನ್ನು ಬೆಳೆಸುವ ಸಂತತಿಯನ್ನು ಉತ್ಪಾದಿಸದೇ ಸನ್ಯಾಸಿಯಾಗಿ ಹೊರಟುಹೋದರೆ ನಮ್ಮ ಮನೆತನದ ಸ್ಥಿತಿಯೇನು? ಮನುಷ್ಯರು ಒಳ್ಳೇ ಪುತ್ರರನ್ನು ಹೆತ್ತು ಅಂಥವರಿಂದ ತಮ್ಮ ವಂಶವನ್ನು ರಕ್ಷಿಸಿಕೊಳ್ಳಬೇಕು. ಹೀಗೆ ಮಾಡುವುದರಿಂದ ಪಿತೃಋಣವೂ ತೀರಿದಂತಾಗುವದು. ಆದುದರಿಂದ ಈಗಲಾದರೂ ನೀವೂ ಭಗವಂತನ ಸೇವೆ ಮಾಡಿರಿ. ಅವನ ಅನುಗ್ರಹದಿಂದ ಇನ್ನೊಬ್ಬ ಮಗನನ್ನು ಪಡೆಯೋಣ.

ಧರ್ಮಪತ್ನಿಯ ಈ ಹಿತವಚನಕ್ಕೆ ಅಸ್ತು ಎಂದ ಆ ವಿಮಲ ಬ್ರಾಹ್ಮಣ. ಪ್ರಯಾಗ ಕ್ಷೇತ್ರಕ್ಕೆ ಬಂದು ಅಲ್ಲಿನ ಸಂಗಮದಲ್ಲಿ ಸ್ನಾನಗೈದು ಹರಿದ್ವಾರಕ್ಕೆ ಬಂದ. ಅಲ್ಲಿ ಕೆಲ ದಿನ ಗಂಗಾಸ್ನಾನ, ದೇವತಾರ್ಚನ ಮುಂತಾದ ಧಾರ್ಮಿಕ ವಿಧಿಗಳನ್ನು ಪೂರೈಸಿಕೊಂಡು, ಇಂದ್ರಪ್ರಸ್ಥ ತೀರ್ಥಕ್ಕೆ ಬಂದು ಅಲ್ಲಿಯೂ ಸ್ನಾನ-ದಾನಾದಿ ಪುಣ್ಯಕಾರ್ಯಗಳನ್ನು ನೆರವೇರಿಸಿದ.

ಒಂದು ದಿನ ಆ ಯಮುನೆಯ ತೀರದಲ್ಲಿ ಮಲಗಿಕೊಂಡಿದ್ದ. ಅವನು ಯಮುನಾತಟದಲ್ಲಿ ನಿದ್ರಾಲೀನನಾದಾಗ ಬ್ರಹ್ಮದೇವರು ತಮ್ಮ ವಾಹನವನ್ನು ಹತ್ತಿಕೊಂಡು ಎಲ್ಲ ತೀರ್ಥಗಳ ಸಹಿತರಾಗಿ ಅಲ್ಲಿಗೆ ಆಗಮಿಸಿದರು. ಮಲಗಿದ ಆ ವಿಮಲ ಬ್ರಾಹ್ಮಣನನ್ನು ವಾತ್ಸಲ್ಯದಿಂದ ಎಚ್ಚರಗೊಳಿಸಿ, ಮಧುರವಾದ ಮಾತಿನಿಂದ ಹೇಳಿದರು.

**ಬ್ರಹ್ಮ:-** ವಿಮಲ, ನಿನ್ನ ಮನಸ್ಸಿನಲ್ಲಿದ್ದ ಅಪೇಕ್ಷೆಯನ್ನು ನಾನು ಬಲ್ಲೆ. ಆದರೆ ನಿನ್ನ ಮನೋರಥವನ್ನು, ಪೂರ್ಣಮಾಡುವದು ಮಾತ್ರ ನನ್ನಿಂದ ಸಾಧ್ಯವಿಲ್ಲ. ಅದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳು.

ಹಿಂದೆ ಒಂದು ಸಲ ನಾವೆಲ್ಲ ದೇವತೆಗಳು ಮೇರುಶಿಖರದಲ್ಲಿ ಕೂಡಿದೆವು. ನಮ್ಮ ದೇವತಾಕಾರ್ಯಸಿದ್ಧಿಗಾಗಿ ನಾನು, ಇಂದ್ರ, ಮಹಾದೇವ ಎಲ್ಲರೂ ಸೇರಿ ಶ್ರೀಹರಿಯ ಪ್ರಾರ್ಥನೆಯನ್ನು ಮಾಡಿದೆವು. ಕರುಣಾವರುಣಾಲಯನಾದ ಶ್ರೀಹರಿಯು ನಮ್ಮ ಸ್ತೋತ್ರದಿಂದ ಸಂತುಷ್ಟನಾಗಿ ಪ್ರತ್ಯಕ್ಷ ದರ್ಶನ ನೀಡಿದ. ವರಕೇಳಿರಿ ಎಂದು ನುಡಿದ.

ಆಗ ಎಲ್ಲ ದೇವತೆಗಳೂ ಆ ಲಕ್ಷ್ಮೀಕಾಂತನಿಗೆ ನಮಸ್ಕರಿಸಿ ತಮಗೆ ಅಭಿಲಷಿತವಾದ ವರಗಳನ್ನು ಪಡೆದುಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಅನಂತರ ನಾನು ಎದ್ದು ನಿಂತು ಪಾದಾಂಬೋಜಗಳಿಗೆ ಭಕ್ತಿಯುಕ್ತನಾಗಿ ಎರಗಿದೆ. ಒಂದು ವರವನ್ನೂ ಕೇಳಿಕೊಂಡೆ. ''ಸ್ವಾಮಿ, ನನಗೆ ನೀನು ಒಂದು ವರವನ್ನು ದಯವಿಟ್ಟು ನೀಡು. ಈ ನನ್ನ ಕ್ಷೇತ್ರವಾದ ಪ್ರಯಾಗವು ಎಲ್ಲ ಮನೋರಥಗಳನ್ನೂ ಪೂರೈಸುವ ಉತ್ತಮ ಕ್ಷೇತ್ರವಾಗಲಿ. ಈ ಪ್ರಯಾಗ ಕ್ಷೇತ್ರವು ಉತ್ತಮವಾದ ನೂರುಪಟ್ಟು ಅಧಿಕ ಪುಣ್ಯಪ್ರದವಾಗಲಿ.

ಹೀಗೆ ನಾನು ಬೇಡಿದ ವರವನ್ನು ಭಗವಂತನು ಸಂತೋಷದಿಂದ ನೀಡಿದ. ಮತ್ತು ನುಡಿದ.

''ದೇವೇಂದ್ರನ ಒಡೆತನಕ್ಕೆ ಸೇರಿದ ಖಾಂಡವವನದಲ್ಲಿರುವ ಈ ಇಂದ್ರಪ್ರಸ್ಥ ಎಂಬ ಯಮುನಾತೀರದಲ್ಲಿರುವ ಕ್ಷೇತ್ರವು ಎಲ್ಲ ಕ್ಷೇತ್ರಗಳಿಗಿಂತಲೂ ಉತ್ತಮ. ಇಲ್ಲಿ ಮರಣವನ್ನು ಹೊಂದಿದವರು ನನ್ನ ಸಾರೂಪ್ಯವನ್ನು ಪಡೆಯಲಿ. ಬ್ರಹ್ಮ, ನಾನು ಆ ಇಂದ್ರಪ್ರಸ್ಥದಲ್ಲಿ ಹೊಸದಾಗಿ ನಿರ್ಮಿಸಿದ, ದ್ವಾರಕಾ ಪಟ್ಟಣವು ನಾನು ಹಿಂದೆ ಸಮುದ್ರ ಮಧ್ಯದಲ್ಲಿ ನಿರ್ಮಿಸಿದ ದ್ವಾರಕಾ ಪಟ್ಟಣಕ್ಕಿಂತಲೂ ನೂರುಪಟ್ಟು ಅಧಿಕ ಪುಣ್ಯಪ್ರದವಾಗಲಿ. ಈ ದ್ವಾರಕಾ ಕ್ಷೇತ್ರವನ್ನು ಉಲ್ಲಂಘಿಸಿ ಯಾರು ಬೇರೆ ಕ್ಷೇತ್ರವನ್ನು, ತೀರ್ಥವನ್ನು ಸೇವಿಸುವರೋ ಅವರಿಗೆ ಯಾವ ಪುಣ್ಯವೂ ಬರಲಾರದು.

ಹೀಗೆ ಹೇಳಿ ಆ ಮಹಾವಿಷ್ಣುವು ಅಂತರ್ಧಾನವನ್ನು ಹೊಂದಿದ. ಆ ಶ್ರೀಹರಿಯ ವಚನದಂತೆ ಈ ನವೀನವಾದ ದ್ವಾರಕಾ ಪಟ್ಟಣವು ಪ್ರಯಾಗ ಮುಂತಾದ ತೀರ್ಥಗಳಿಗಿಂತ ಶ್ರೇಷ್ಠ ಎನಿಸಿದೆ. ಪ್ರಾಚೀನ ಹಿರಿಯರು ಹೇಳುವ

**''ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚೀ ತಥೈವ ಚ ।**
**ಅವಂತಿಕಾ ಪುರೀ ದ್ವಾರಾವತೀ ಚೈವ ಸಪ್ತೈತಾ ಮೋಕ್ಷದಾಯಿಕಾ ॥**

ಎಂಬ ಸುಪ್ರಸಿದ್ಧವಾದ ಏಳು ತೀರ್ಥಗಳಿಗೆ ಸಮಾನವಾದ ತೀರ್ಥವೆಂದರೆ ಕಾಶೀ, ಪ್ರಯಾಗ ಮತ್ತು ಈ ನಿಗಮೋದ್ಬೋಧಕ ತೀರ್ಥ. ಈ ಮೂರು ತೀರ್ಥಗಳನ್ನು ಬಿಟ್ಟು ಬೇರೆ ತೀರ್ಥಗಳಿಗೆ ಹೋದವರು ತೀರ್ಥಸ್ನಾನದ ಪುಣ್ಯವನ್ನು ಪಡೆಯುವದಿಲ್ಲ. ಶ್ರೀಕೃಷ್ಣಪರಮಾತ್ಮನು ನಿರ್ಮಿಸಿದ ದ್ವಾರಕಾ ಎಂಬ ಈ ನವೀನವಾದ ಕ್ಷೇತ್ರವು ಬ್ರಹ್ಮಾಂಡದ ಒಳಗೆ ಇರುವ ಸಕಲ ಕ್ಷೇತ್ರಗಳಿಗಿಂತ ನೂರುಪಟ್ಟು ಅಧಿಕ ಪುಣ್ಯಪ್ರದವಾಗಿದೆ. ಆದುದರಿಂದ ನೀನು ಈ ತೀರ್ಥದಲ್ಲಿ ಸ್ನಾನಮಾಡಿದರೆ ನಿನಗೆ ಕುಲಭೂಷಣವಾದ ಮಗನು ದೊರಕುವನು. ಈ ದ್ವಾರಕಾ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಭಗವಾನ್ ಗೋವಿಂದನು ಸುಪ್ರಸನ್ನನಾಗಿ ನಿನ್ನ ಇಷ್ಟಾರ್ಥಗಳನ್ನು ಪೂರ್ಣ ಮಾಡುವನು.

ಹೀಗೆ ಹೇಳಿ ಬ್ರಹ್ಮದೇವರು ಅಲ್ಲಿಯೇ ಅಂತರ್ಧಾನ ಹೊಂದಿದರು. ವಿಮಲ ಬ್ರಾಹ್ಮಣನು ಅಲ್ಲಿ ಸ್ನಾನ ಮಾಡಿದ. ದೇವತಾತರ್ಪಣ, ಋಷಿತರ್ಪಣ, ಭಗವತ್ಪೂಜಾದಿಗಳನ್ನು ಮಾಡಿ ಪರಮಾತ್ಮನನ್ನು ಭಕ್ತಿಯಿಂದ ಆರಾಧಿಸಿದ. ಮತ್ತು ದ್ವಾರಕಾ ಕ್ಷೇತ್ರ ಮೂರ್ತಿಯನ್ನು ಪ್ರಾರ್ಥಿಸಿದ.

**ದ್ವಾರಕೇ ಕೃಷ್ಣವಲ್ಲಭೇ ಸುತಂ ವಂಶಕರಂ ದೇಹಿ**
**ಮಹ್ಯಂ ಭಕ್ತಾಯ ತೇ ನಮಃ**

ಶ್ರೀ ಕೃಷ್ಣನಿಗೆ ಪರಮ ಪ್ರೀತ್ಯಾಸ್ಪದಳಾದ ದ್ವಾರಕೆಯೇ, ನನ್ನ ವಂಶವನ್ನು ಅಭಿವೃದ್ಧಿಗೊಳಿಸುವ ಒಬ್ಬ ಮಗನನ್ನು ಭಕ್ತನಾದ ನನಗೆ ನೀನು ನೀಡು. ಈ ರೀತಿಯಾಗಿ ಆ ಬ್ರಾಹ್ಮಣನು ಪ್ರಾರ್ಥನೆಯನ್ನು ಮಾಡಿಕೊಂಡ ಕೂಡಲೇ ಆಕಾಶವಾಣಿಯಾಯಿತು.

**ಆಕಾಶವಾಣಿ:-** ಎಲ್ಲ ತೀರ್ಥಗಳಲ್ಲಿ ಶಿರೋರತ್ನದಂತಿರುವ ಈ ತೀರ್ಥದ ಪ್ರಸಾದದಿಂದ ತತ್ವಜ್ಞಾನಿಯೂ, ವಂಶಾವೃದ್ಧಿಕಾರಿಯೂ ಆದ ಒಳ್ಳೇ ಸತ್ಪುತ್ರನು ನಿನಗೆ ಜನಿಸುವನು.

ಈ ಆಕಾಶವಾಣಿಯನ್ನು ಕೇಳಿ ವಿಮಲ ಬ್ರಾಹ್ಮಣನಿಗೆ ಗಂಡುಮಗ ಹುಟ್ಟುವನೆಂದು ನಿಶ್ಚಯವಾಯಿತು. ಈ ದ್ವಾರಕಾ ತೀರ್ಥದ ನೀರನ್ನು ತನ್ನ ಕಮಂಡಲು ವಿನಲ್ಲಿ ಹಿಡಿದುಕೊಂಡು ತನ್ನ ಮನೆಗೆ ಹೊರಟ. ದಾರಿಯಲ್ಲಿ ಮಲಯಾಚಲದಲ್ಲಿ ಇರುವ ಗೆಳಯನಾದ ಬ್ರಾಹ್ಮಣನು ಭೇಟಿಯಾದ. ಅವನಿಗೆ ಈ ಎಲ್ಲ ತನ್ನ ಸಮಾಚಾರವನ್ನು ವಿಮಲ ಬ್ರಾಹ್ಮಣನು ತಿಳಿಸಿದ. ಸಂತಾನಕ್ಕಾಗಿ ತಪಸ್ಸು ಮಾಡುವ ತನಗೆ ಬ್ರಹ್ಮದೇವರು ಪ್ರಸನ್ನರಾಗಿ ದ್ವಾರಕಾ ಕ್ಷೇತ್ರದಲ್ಲಿ ಸ್ನಾನವನ್ನು ಮಾಡಿ ಭಗವದಾರಾಧನೆಯನ್ನು ಮಾಡು ಎಂದು ಅಪ್ಪಣೆ ನೀಡಿದ್ದನ್ನೂ ಸಹ ಹೇಳಿದ. ಇದನ್ನೆಲ್ಲ ಕೇಳಿ ಅವನ ಮಿತ್ರನಾದ ಬ್ರಾಹ್ಮಣನು ಆಶ್ಚರ್ಯಚಕಿತನಾಗಿ ದ್ವಾರಕಾತೀರ್ಥದ ಮಹಾಮಹಿಮೆಯಿಂದ ಪ್ರಭಾವಿತನಾಗಿ ನುಡಿದ.

**ಮಿತ್ರಬ್ರಾಹ್ಮಣ:-** ಪ್ರಿಯಮಿತ್ರ, ಈ ಭಾರತಕ್ಷೇತ್ರದಲ್ಲಿ ಎಷ್ಟು ಕ್ಷೇತ್ರಗಳಿರುವವೋ ಅವೆಲ್ಲವುಗಳಲ್ಲಿಯೂ ನಾನು ಸ್ನಾನಮಾಡಿ ಬಂದೆ. ನೀನು ಹೇಳಿದ ಈ ನವೀನವಾದ ದ್ವಾರಕಾಕ್ಷೇತ್ರದಲ್ಲಿ ಮಾತ್ರ ನಾನು ಸ್ನಾನ ಮಾಡಲಿಲ್ಲ. ಅದು ಎಲ್ಲಿ ಇದೆ ಎನ್ನುವದು ಸಹ ನನಗೆ ತಿಳಿದಿಲ್ಲ. ನೀನು ನನ್ನನ್ನು ಕರೆದುಕೊಂಡು ಹೋಗಿ ಆ ದ್ವಾರಕಾ ತೀರ್ಥದ ದರ್ಶನ ಮಾಡಿಸು. ನೀನು ನನ್ನ ಪರಮ ಪ್ರೀತಿಯ ಮಿತ್ರ. ನಿಜವಾದ ಮಿತ್ರನು ತಂದೆ, ತಾಯಿ, ಬಂಧು ಎಲ್ಲರಿಗಿಂತ ಹಿತಕಾರಕ. ನಿರ್ಧನನಾದ ದರಿದ್ರ ಮನುಷ್ಯನನ್ನು ಎಲ್ಲ ಬಾಂಧವರೂ ತೊರೆದು ಹೋಗುವರು. ನಿಜವಾದ ಮಿತ್ರನು ಮಾತ್ರ ಎಂದಿಗೂ ತ್ಯಜಿಸುವದಿಲ್ಲ. ಸಂಸಾರ ಸಮುದ್ರದಲ್ಲಿ ಮುಳುಗಿ ದುಃಖಪಡುವ ಮನುಷ್ಯರನ್ನು ವಾಸ್ತವಿಕವಾಗಿ ಮಿತ್ರನಾದ ಮನುಷ್ಯನು ಮುಕ್ತಿಮಾರ್ಗಕ್ಕೆ ಹಚ್ಚುವನು. ಅದರಿಂದ ಪ್ರಾಣಸಖನಾದ ನೀನು ನನಗಿದೊಂದು ಉಪಕಾರ ಮಾಡು. ಆ ದ್ವಾರಕಾತೀರ್ಥವನ್ನು ತೋರಿಸಿ, ಅದರಲ್ಲಿ ನನಗೆ ಸ್ನಾನಮಾಡಲು ಅನುವು ಕಲ್ಪಿಸು. ನನ್ನ ಉದ್ಧಾರಕ್ಕೆ ದಾರಿತೋರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ವಿಮಲ ಬ್ರಾಹ್ಮಣನ ಕಥಾನಕ ಎಂಬ ನೂರ ಎಂಬತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ವಿಮಲ ಬ್ರಾಹ್ಮಣನಿಂದ ರಾಕ್ಷಸಯೋನಿಯಲ್ಲಿ ಹುಟ್ಟಿದ ಕಾಂಪಿಲ್ಯ ನಗರದ ನಾರಿಯರ ಉದ್ಧಾರ

ಅಧ್ಯಾಯ - ೧೯೦

**ನಾರದ:-** ಮಿತ್ರನ ಅಪೇಕ್ಷೆಯಂತೆ ವಿಮಲ ಬ್ರಾಹ್ಮಣನು ಅವನನ್ನು ಕರೆದುಕೊಂಡು ಈ ದ್ವಾರಕಾ ಪಟ್ಟಣಕ್ಕೆ ಬಂದ. ಅವರಿಬ್ಬರೂ ಸ್ನೇಹಿತರು ಅತಿಶಯವಾದ ಭಕ್ತಿಯಿಂದ ಆ ಯಮುನಾ ನದಿಯಲ್ಲಿ ಸ್ನಾನಮಾಡಿದರು.

**ಆಕಾಶವಾಣಿ:-** ದ್ವಿಜಶ್ರೇಷ್ಠ, ಇದು ಶ್ರೀಹರಿಯ ಪರಮ ಪವಿತ್ರವಾದ ಕ್ಷೇತ್ರ, ಸ್ನಾನ ಮಾಡುವದರಿಂದ ನಿಮಗೆ ಈ ತೀರ್ಥದ ಪ್ರಸಾದವುಂಟಾಗಿ ಅದರಿಂದ ಶ್ರೀಹರಿಯಲ್ಲಿ ನಿಶ್ಚಲ ಭಕ್ತಿಯುಂಟಾಗುವದು.

ಈ ಆಕಾಶವಾಣಿಯನ್ನು ಕೇಳಿ, ಇದು ಶ್ರೀಹರಿಯ ಇಚ್ಛೆಯಿಂದ ಬಂದ ಆಕಾಶವಾಣಿ, ಅವನ ಅನುಗ್ರಹಸೂಚಕ ಎಂದೂ ಇಬ್ಬರೂ ಭಾವಿಸಿದರು. ಶ್ರೀಹರಿಯನ್ನು ಆರಾಧಿಸಿದರು. ನಂತರ ಕೃತಕೃತ್ಯರಾಗಿ ಇಬ್ಬರೂ ಅಲ್ಲಿಂದ ಪ್ರಯಾಣ ಬೆಳೆಸಿದರು. ತುಸು

ಅಂತರದ ವರೆಗೆ ಅವರಿಬ್ಬರೂ ಸೇರಿ ನಡೆದು ಮುಂದೆ ತಮ್ಮ ದಾರಿಯು ಕವಲೊಡೆದ ಬಳಿಕ ಪರಸ್ಪರರನ್ನು ಬೀಳ್ಕೊಂಡು ಅಲ್ಲಿಂದ ಹೊರಟರು. ಆ ವಿಪ್ರನು ವಿಮಲನನ್ನು ಬೀಳ್ಕೊಂಡು ತನ್ನ ಊರಿಗೆ ಪ್ರಯಾಣ ಬೆಳೆಸಿದನು. ದಾರಿಯಲ್ಲಿ ಅವನಿಗೆ ಮರುದೇಶವು ಸಿಕ್ಕಿತು. ಆ ಮರುದೇಶದಲ್ಲಿ ಕಾಂಪಿಲ್ಯ ನಗರದ ನಾರಿಯರು ತಮ್ಮ ಕಾಮವಾಸನೆಯಿಂದ ರಾಕ್ಷಸಿಯರಾಗಿ ಅಲೆಯುತ್ತಿದ್ದರು. ಕೈಯಲ್ಲಿ ಯಮುನೆಯ ನೀರನ್ನು ತುಂಬಿಕೊಂಡು ಹೊರಟ ಈ ಬ್ರಾಹ್ಮಣನನ್ನು ಅವರು ನೋಡಿ ಅವನನ್ನು ಕೊಂದು ತಿನ್ನಬೇಕೆಂದು ಅಲ್ಲಿಗೆ ಧಾವಿಸಿದರು. ನಾಲಿಗೆಯನ್ನು ತೆರೆದು ಆಸೆಯಿಂದ ಕೊಂದು ತಿನ್ನಬೇಕೆಂದು ತನ್ನ ಸಮೀಪಕ್ಕೆ ಬರುತ್ತಿರುವ ಪ್ರೇತಪಿಶಾಚಿನಿಯರನ್ನು ಕಂಡು ಆ ಬ್ರಾಹ್ಮಣನು ಗಾಬರಿಯಾದ. ಧೈರ್ಯವನ್ನು ತಂದುಕೊಂಡು ವೇದಮಂತ್ರಗಳಿಂದ ತನ್ನ ಸುತ್ತಲೂ ಒಂದು ರಕ್ಷಾಚಕ್ರವನ್ನೇ ನಿರ್ಮಿಸಿದ. ಅವನುಚ್ಚರಿಸಿದ ಮಂತ್ರಗಳಿಂದ ಭೀತರಾಗಿ ದೂರ ನಿಂತುಕೊಂಡು ಆ ಪಿಶಾಚಿನಿಯರು ಅವನನ್ನು ಕೇಳಿದರು.

**ಪಿಶಾಚಿನಿಯರು:-** ನೀನು ಯಾರು? ನಿನ್ನಿಂದ ನಮ್ಮ ಶಕ್ತಿಯೇ ಕುಂಠಿತವಾಗಿದೆ. ನಿನ್ನ ದರ್ಶನದಿಂದ ನಮ್ಮ ಮನಸ್ಸಿಗೆ ಒಂದು ಪ್ರಸನ್ನತೆ ಬಂದಿದೆ ನಿನ್ನ ದರ್ಶನದಿಂದಲೇ ನಮಗೆ ಇಂಥ ಶಾಂತಿ, ಸಮಾಧಾನ ದೊರೆತ ಬಳಿಕ ನಿನ್ನ ಪಾದಸ್ಪರ್ಶವನ್ನು ಮಾಡಿದರೆ ನಮಗೆ ಎಂಥ ಫಲವುಂಟಾಗಬೇಡ! ಆದುದರಿಂದ ಪುಣ್ಯಾತ್ಮ, ನಮ್ಮ ತಲೆಯ ಮೇಲೆ ನಿನ್ನ ಅಡಿದಾವರೆಯನ್ನು ಇರಿಸು. ಆ ರಾಕ್ಷಸಿಯರ ಈ ಮಾತನ್ನು ಕೇಳಿ ಹರಿದತ್ತನು ನುಡಿದ.

**ಹರಿದತ್ತ:-** ನಾನು ಒಬ್ಬ ಬ್ರಾಹ್ಮಣ. ಹರಿದತ್ತನೆಂದು ನನ್ನ ಹೆಸರು. ತೀರ್ಥಯಾತ್ರೆಯನ್ನು ಮಾಡಿ ನಾನು ಇಲ್ಲಿಗೆ ಬಂದಿದ್ದೇನೆ. ಇಲ್ಲಿಂದ ಪುಷ್ಕರ ಕ್ಷೇತ್ರಕ್ಕೆ ಹೊರಟಿದ್ದೇನೆ. ನಿಮಗೆ ನನ್ನಿಂದ ಏನಾಗಬೇಕು ಹೇಳಿರಿ. ನನಗೆ ಶಕ್ತಿ ಇದ್ದರೆ ನಾನು ನಿಮ್ಮ ಅಭೀಷ್ಟವನ್ನು ಪೂರ್ಣಗೊಳಿಸುವೆ.

**ರಾಕ್ಷಸಿಯರು:-** ಪುಣ್ಯಾತ್ಮ, ಈ ತೀರ್ಥಯಾತ್ರೆಯ ಸಂದರ್ಭದಲ್ಲಿ ಯಾವ ಯಾವ ತೀರ್ಥಗಳಿಗೆ ಹೋಗಿದ್ದೆ? ಯಾವ ಯಾವ ಕ್ಷೇತ್ರಗಳನ್ನು ಸಂದರ್ಶಿಸಿದೆ? ಇದನ್ನು ನಮಗೆ ತಿಳಿಸು. ಬೇರೆ ಪವಿತ್ರ ತೀರ್ಥಕ್ಷೇತ್ರಗಳ ವೃತ್ತಾಂತವನ್ನು ಶ್ರವಣಮಾಡಿಯಾದರೂ ಈ ನಮ್ಮ ದುಷ್ಟದೇಹದಿಂದ ನಮಗೆ ವಿಮೋಚನೆಯಾಗಬಹುದು.

**ಬ್ರಾಹ್ಮಣ:-** ನಾನು ಅವಂತಿಯ ಕ್ಷೇತ್ರದಲ್ಲಿರುವ ನಮ್ಮ ಆಶ್ರಮದಿಂದ ಹರಿದ್ವಾರವನ್ನು ಕುರಿತು ಹೋಗಿದ್ದೆ. ಅಲ್ಲಿಂದ ದ್ವಾರಕಾಕ್ಷೇತ್ರ, ಪ್ರಭಾಸಕ್ಷೇತ್ರ, ಸೇತು, ಕಿಷ್ಕಿಂಧೆ, ಶಿವಕಾಂಚಿ, ವಿಷ್ಣುಕಾಂಚಿ ಮುಂತಾದ ಕ್ಷೇತ್ರಗಳನ್ನು ಕುರಿತು ಪ್ರಯಾಣ ಮಾಡಿದೆ. ಬಳಿಕ ಜಗನ್ನಾಥಪುರಿಗೆ ಹೋಗಿ ಜಗನ್ನಾಥಸ್ವಾಮಿಯ ದರ್ಶನವನ್ನು ಮಾಡಿದೆ. ಗಂಗಾಸಾಗರ ಸಂಗಮಕ್ಕೆ ಹೋಗಿ ಸ್ನಾನಮಾಡಿ ಋಷಿತರ್ಪಣ, ಪಿತೃತರ್ಪಣ ನೀಡಿದೆ. ಅಲ್ಲಿ ಗಂಗೆಯು ಮೂರು ಮುಖಗಳಿಂದ ಸಮುದ್ರನಾಥನನ್ನು ಬಿಗಿದಪ್ಪುತ್ತಾಳೆ. ಗಯಾಕ್ಷೇತ್ರದಲ್ಲಿ ವಿಧಿಪೂರ್ವಕವಾಗಿ ಪಿಂಡದಾನ ಮಾಡಿದೆ. ಸರಯೂ ನದಿಯ ತೀರದಲ್ಲಿರುವ ಕೋಸಲ ಕ್ಷೇತ್ರಕ್ಕೆ ನಾನು ಹೋಗಿದ್ದೆ.

ಗೋಪ್ರತಾರ ತೀರ್ಥಕ್ಕೂ ಕಾಶೀಕ್ಷೇತ್ರಕ್ಕೂ ಹೋಗಿದ್ದೆ. ಕಾಶಿಯಲ್ಲಿರುವ ವಿಶ್ವೇಶ್ವರನನ್ನೂ, ಬಿಂದುಮಾಧವನನ್ನೂ ನೋಡಿ ಧನ್ಯನಾದೆ. ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನವನ್ನು ಮಾಡಿದೆ. ಜ್ಞಾನವಾಡಿಯಲ್ಲಿ ಮುಳುಗು ಹಾಕಿದೆ. ಅನೇಕ ದಿನಗಳವರೆಗೆ ಕಾಶೀಕ್ಷೇತ್ರದಲ್ಲಿದ್ದು ಗಂಗಾಸ್ನಾನಮಾಡಿ, ಶ್ರೀಹರಿಯ ಸೇವೆಗೈದು ಮತ್ತೆ ಪ್ರಯಾಗಕ್ಕೆ

ಬಂದೆ. ಪುಷ್ಯ ಶುಕ್ಲಪಕ್ಷ ಚತುರ್ದಶೀ ದಿನ ಗಯಾಕ್ಷೇತ್ರದಲ್ಲಿ ನೆಲೆಸಿದೆ. ಮಾಘಮಾಸದಲ್ಲಿ ಸಂಪೂರ್ಣ ಒಂದು ತಿಂಗಳು ಅಲ್ಲಿಯೇ ಇದ್ದು ಅರುಣೋದಯ ಕಾಲದಲ್ಲಿ ಪ್ರತಿನಿತ್ಯ ಗಂಗಾಯಮುನಾ ಸಂಗಮದಲ್ಲಿ ಸ್ನಾನಮಾಡುತ್ತಿದ್ದೆ. ಗೋಮತೀ ತೀರದಲ್ಲಿರುವ ನೈಮಿಷಾರಣ್ಯಕ್ಕೆ ಅನಂತರ ಹೋದೆ. ಅಲ್ಲಿಯೂ ಸ್ನಾನ-ದಾನಾದಿಗಳನ್ನು ಆಚರಿಸಿದೆ. ಬಳಿಕ ಮಥುರಾ ವಿಕ್ರಾಂತಿ, ಅಸಿಕುಂಡ, ಕೃಷ್ಣಗಂಗಾ, ಧ್ರುವಾ, ಅಕ್ರೂರ, ಕೇಶಿ, ಕಾಲೀಯ ಮೊದಲಾದ ತೀರ್ಥಗಳನ್ನು ನಾನು ಸುತ್ತಾಡಿ, ಸ್ನಾನಮಾಡಿ ಭಕ್ತಿಯಿಂದ ಭಗವದಾರಾಧನೆಗೈದೆ. ಅನಂತರ ಯಮುನಾ ನದಿಯ ಎರಡೂ ದಂಡೆಗುಂಟ ಇರುವ ಹನ್ನೆರಡು ವನಗಳಗುಂಟ ಇರುವ ಸಮಸ್ತ ಕಾಂಕ್ಷಿತಗಳನ್ನೂ ಕರುಣಿಸುವ ಪುಣ್ಯತೀರ್ಥಗಳನ್ನು ಸಂದರ್ಶಿಸಿ ಸ್ನಾನಮಾಡಿ ಹಸ್ತಿನಾವತೀ ಪಟ್ಟಣಕ್ಕೆ ಬಂದೆ. ಅನಂತರ ಹಿಮಗಿರಿಯ ಶೃಂಗದಲ್ಲಿರುವ ಬದರೀನಾರಾಯಣ ಕ್ಷೇತ್ರ ಹಾಗೂ ಕೇದಾರ ಕ್ಷೇತ್ರಗಳಿಗೆ ಹೋಗಿ ಶ್ರೀಹರಿಯನ್ನೂ ಮಹಾದೇವನನ್ನೂ ಪೂಜಿಸಿ ಹರಿದ್ವಾರಕ್ಕೆ ಬಂದೆ. ಅಲ್ಲಿ ಗಂಗೆಯಲ್ಲಿ ಸ್ನಾನಮಾಡಿ ದೇವ, ಪಿತೃ, ಋಷಿಗಳಿಗೆ, ತರ್ಪಣ ನೀಡಿ ಕುರುಕ್ಷೇತ್ರಕ್ಕೆ ಆಗಮಿಸಿದೆ. ಪುಷ್ಕರಕ್ಕೆ ಮತ್ತೆ ತೆರಳಿದೆ.

ದಾರಿಯಲ್ಲಿ ವಿಮಲ ಎಂಬ ನನ್ನ ಒಬ್ಬ ಮಿತ್ರನು ಭೇಟಿಯಾದ. ಇಂದ್ರಪ್ರಸ್ಥದಿಂದ ಹೊರಟು ನನ್ನನ್ನು ಮತ್ತೆ ಅದೇ ಇಂದ್ರಪ್ರಸ್ಥಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಸಾಕ್ಷಾತ್ ವಿಷ್ಣುವಿನಿಂದ ನಿರ್ಮಿತವಾದ ದ್ವಾರಕಾ ಪಟ್ಟಣವನ್ನು ತೋರಿಸಿದ. ಅಲ್ಲಿ ವಿಷ್ಣುವನ್ನು ಸಾಕ್ಷಾತ್ ಕಾಣದಿದ್ದರೂ ಅಶರೀರ ವಾಣಿಯು ರೂಪದಿಂದ ಅನುಗ್ರಹವನ್ನು ಪಡೆದೆ. ಅಲ್ಲಿ ಭಕ್ತಿಯಿಂದ ಸ್ನಾನಮಾಡಿ ಹರಿಯಲ್ಲಿ ವಿಶೇಷ ಶ್ರದ್ಧೆಯನ್ನು ನಾನು ಹೊಂದಿದೆ. ನಾನು ಅಲ್ಲಿಂದ ಬರುವಾಗ ದ್ವಾರಕಾ ತೀರ್ಥದ ಜಲವನ್ನು ನನ್ನ ಕಮಂಡಲುವಿನಲ್ಲಿ ತುಂಬಿಕೊಂಡು ಬಂದಿದ್ದೇನೆ. ನಿಮ್ಮ ಈ ದುರ್ದೆಶೆಯನ್ನು ಕಂಡು ನನ್ನ ಕರುಳುಕರಗಿದೆ. ನಾನು ನಿಮ್ಮ ವಶವರ್ತಿ. ನಿಮ್ಮ ಯಾವ ಸೇವೆಯನ್ನು ಮಾಡಲಿ?

ಹೀಗೆ ಹೇಳಿ ಅವನು ಕಮಂಡಲುವಿನಲ್ಲಿರುವ ನೀರನ್ನು ತೆಗೆದುಕೊಂಡು ಆ ರಾಕ್ಷಸಿಯರ ಮೈ ಮೇಲೆ ಉಗ್ಗಿದ. ಆ ಜಲಸ್ಪರ್ಶ ಆದ ಕೂಡಲೇ ಅವರೆಲ್ಲರೂ ತಮ್ಮ ರಾಕ್ಷಸ ದೇಹ ಬಿಟ್ಟು ದೇವತಾ ದೇಹವನ್ನು ಪಡೆದರು. ಅವರನ್ನು ಕರೆಯಲು ಒಂದುನೂರು ವಿಮಾನಗಳು ಬಂದವು. ಆ ಎಲ್ಲ ರಾಕ್ಷಸಿಯರೂ ದ್ವಾರಕಾ ಜಲದಿಂದ ಅಪ್ಸರೆಯರಾಗಿ, ಬ್ರಾಹ್ಮಣನಿಗೆ ನಮಸ್ಕರಿಸಿ ಭಕ್ತಿಯಿಂದ ನುಡಿದರು.

**ರಾಕ್ಷಸಿಯರು:-** ದ್ವಿಜಶ್ರೇಷ್ಠ, ದ್ವಾರಕಾ ಜಲದ ಸಂಗದಿಂದ ನಮ್ಮ ರಾಕ್ಷಸ ಜನ್ಮವು ಕಳೆದು ದಿವ್ಯವಾದ ಅಪ್ಸರಾದೇಹವು ಪ್ರಾಪ್ತವಾಗಿದೆ. ನಾವು ಈಗ ಸ್ವರ್ಗಕ್ಕೆ ಹೋಗುತ್ತೇವೆ. ನಮಗೆ ಅಪ್ಪಣೆ ನೀಡು. ನಮ್ಮ ಮೇಲೆ ಅನುಗ್ರಹವಿರಲಿ.

ಹೀಗೆ ಹೇಳಿ ದೇವಲೋಕದಿಂದ ಬಂದ ವಿಮಾನಗಳನ್ನು ಆರೋಹಣ ಮಾಡಿ ಪೂರ್ವ ದಿಕ್ಕಿಗೆ, ಬ್ರಾಹ್ಮಣನಿಂದ ಅಪ್ಪಣೆ ಪಡೆದು ಪ್ರಯಾಣ ಬೆಳೆಸಿದರು.

ಯಮುನಾ ತೀರ್ಥದಲ್ಲಿರುವ ಈ ದ್ವಾರಕಾ ತೀರ್ಥದ ವೃತ್ತಾಂತವನ್ನು ಕೇಳಿದ ಮಾನವರು ಪಾಪಗಳಿಂದ ಮೋಚನ ಹೊಂದುವರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ವಿಮಲ ಬ್ರಾಹ್ಮಣನಿಂದ ರಾಕ್ಷಸಯೋನಿಯಲ್ಲಿ ಹುಟ್ಟಿದ ಕಾಂಪಿಲ್ಯ ನಗರದ ನಾರಿಯರ*
*ಉದ್ಧಾರ ಎಂಬ ನೂರ ತೊಂಬತ್ತನೇಯ ಅಧ್ಯಾಯ ಮುಗಿದುದು*

**ಶಿಬಿರಾಜ:-** ನಾರದ, ಅಯೋಧ್ಯೆಯ ಮಹಿಮೆಯನ್ನು ಹೇಳು. ಇಂದ್ರಪ್ರಸ್ಥದಲ್ಲಿರುವ ಅಯೋಧ್ಯೆಯ ಮಹಿಮೆಯನ್ನು ಕೇಳಬೇಕೆಂಬ ಅಪೇಕ್ಷೆಯಾಗಿದೆ.

**ನಾರದ:-** ಚಂದ್ರಭಾಗಾ ನದಿಯ ತೀರದಲ್ಲಿ ಕೋಸಲ ಎಂಬ ಪಟ್ಟಣವಿರುತ್ತದೆ. ಆ ಪಟ್ಟಣದಲ್ಲಿ ಚಂಡಕ ಎಂಬ ಹೆಸರಿನ ಒಬ್ಬ ಕ್ಷೌರಿಕನು ವಾಸಿಸಿದ್ದ. ಅವನು ಪರದ್ರವ್ಯವನ್ನು ಅಪಹರಿಸಿ, ಶಸ್ತ್ರಪಾಶಗಳಿಂದ ದಾರಿಕಾರರನ್ನು ಕೊಳ್ಳೆಹೊಡೆದು ಲೂಟಿಮಾಡಿ ಮದ್ಯಪಾನ, ಜೂಜಾಟ, ವೇಶ್ಯಾಗಮನ ಮುಂತಾದ ದುರ್ವ್ಯಾಪಾರಗಳನ್ನು ಮಾಡುತ್ತಲಿದ್ದ. ದೇವಾಲಯದ ಗೋಡೆಯನ್ನು ಸಹ ಒಡೆದು ಅಲ್ಲಿನ ಕಲ್ಲು ಇಟ್ಟಿಗೆಗಳನ್ನು ಮಾರಾಟ ಮಾಡಿ ಹಣವನ್ನು ಗಳಿಸುತ್ತಲಿದ್ದ. ಪರಸ್ತ್ರೀ ಲಂಪಟನಾದ ಆ ನೀಚ ನಾಪಿತ ಮಾಡದ ಪಾಪಕೃತ್ಯಗಳೇ ಇರಲಿಲ್ಲ.

ಆ ಕ್ಷೌರಕನ ಮನೆಯ ಪಕ್ಕದಲ್ಲಿ ಮುಕುಂದ ಎಂಬ ಕರ್ಮಠನಾದ ಒಬ್ಬ ಬ್ರಾಹ್ಮಣ ಇರುತ್ತಲಿದ್ದ. ಅವನು ಒಂದು ದಿನ ತನ್ನ ಮನೆಯಲ್ಲಿ ರಾತ್ರಿ ಕಾಲದಲ್ಲಿ ಸ್ವಸ್ತ್ರೀಸಂಗದಿಂದ ಸಂತೋಷಚಿತ್ತನಾಗಿ ದಣಿದು ಮಲಗಿಕೊಂಡಿದ್ದ. ಚೌರ್ಯಕಾರ್ಯದಲ್ಲಿ ಅತ್ಯಂತ ಪ್ರವೀಣನಾದ ಆ ಚಂಡನೆಂಬ ನಾಪಿತನು ಮುಕುಂದನ ಮನೆಯಲ್ಲಿ ಕಳ್ಳತನಕ್ಕಾಗಿ ಪ್ರವೇಶಿಸಿದ. ರಾತ್ರಿಯ ಸಮಯ. ಸುತ್ತಲೂ ಗಾಢಾಂಧಕಾರ. ಮುಕುಂದನ ಮನೆಯಲ್ಲಿರುವ ಬಂಗಾರ, ಮುತ್ತು ರತ್ನಗಳನ್ನೂ, ಆಭರಣಗಳನ್ನೂ ಅಪಹರಿಸುವ ಉದ್ದೇಶದಿಂದ ಅತ್ತಿತ್ತ ನೋಡಿದ. ಹೊರಗಿನ ಮೊಗಸಾಲೆಯಲ್ಲಿರುವ ಪದಾರ್ಥಗಳನ್ನು ಎಲ್ಲವನ್ನೂ ದೋಚಿದ. ನಂತರ ಒಳಗೆ ಪ್ರವೇಶಿಸಿ ನಡುಮನೆಯ ಕಪಾಟ ತೆರೆಯಲು ಪ್ರಯತ್ನಿಸಿದ. ಆದರೆ ಕಬ್ಬಿಣದ ಗಟ್ಟಿಯಾದ ಕವಚಗಳಿಂದ ಬಿಗಿಯಾದ ಆ ಕಪಾಟನ್ನು ತೆರೆಯಲಾಗಲಿಲ್ಲ. ಆಗ ಅವನು ಕೈಯಲ್ಲಿ ಕ್ರೂರವಾದ ಖಡ್ಗವನ್ನು ಹಿಡಿದು ಅಟ್ಟದ ಮೇಲೆ ಏರಿದ. ಕಾಮಕೇಳಿಯಿಂದ ದಣಿದ ತೃಪ್ತ ದಂಪತಿಗಳು ಅಲ್ಲಿಯೇ ನಿದ್ರೆಹೋಗಿದ್ದರು. ಈ ಪಾಪಿ ಬಂದಿದ್ದು ಅವರಿಗೆ ಗೊತ್ತಾಗಲಿಲ್ಲ. ಇವನು ಅವರ ಹತ್ತಿರ ಹೋಗಿ ಮುಕುಂದನ ಹೆಂಡತಿಯ ಮೈ ಮೇಲಿನ ಬಂಗಾರದ ಆಭರಣಗಳನ್ನು ತೆಗೆದುಕೊಳ್ಳಲು ಉದ್ಯುಕ್ತನಾದನು. ಒಮ್ಮೆಲೇ ಮುಕುಂದನಿಗೆ ಎಚ್ಚರವಾಯಿತು. ಕಳ್ಳ ಬಂದಿದ್ದು ಆಭರಣಕ್ಕಾಗಿ ಪ್ರಯತ್ನಿಸುತ್ತಿದ್ದುದು ತಿಳಿದುಹೋಯಿತು. ಆದರೆ ಭಯದಿಂದ ಕಣ್ಣು ತೆರೆಯದೇ ನಿದ್ದೆ ಬಂದವರಂತೆಯೇ ಮಲಗಿದರು.

ಆ ನಾಪಿತನು ಇಬ್ಬರ ಮೈಮೇಲಿನ ಆಭರಣಗಳನ್ನೂ ದೋಚಿ, ಅಲ್ಲಿಂದ ಹೊರಟ. ಆಗ ಮುಕುಂದನು ಎದ್ದು ಬಂದು ಹಿಂದಿನಿಂದ ಆ ಕ್ಷೌರಿಕನನ್ನು ಗಟ್ಟಿಯಾಗಿ ಹಿಡಿದ. ಅವನ ಕೈಯಲ್ಲಿರುವ ತಮ್ಮ ಆಭರಣಗಳನ್ನೆಲ್ಲ ಕಸಿದುಕೊಳ್ಳಲು ಕೊಸರಾಡಿದ. ಆದರೆ ಚತುರ ಚೋರನಾದ ಕ್ಷೌರಿಕನು ತನ್ನ ಕೈಯಲ್ಲಿನ ಆಯುಧದಿಂದ ಮುಕುಂದನ ಹೊಟ್ಟೆಯನ್ನು ತೀಕ್ಷ್ಣವಾಗಿ ಇರಿದ. ಅಯ್ಯೋ! ಎಂದು ಚೀರುತ್ತ ನೆಲದ ಮೇಲೆ ಬಿದ್ದ ಮುಕುಂದ.

ಅವನ ದನಿಯನ್ನು ಕೇಳಿ ನೆರೆಹೊರೆಯ ಜನರೆಲ್ಲರೂ ಓಡಿ ಅಲ್ಲಿಗೆ ಬಂದರು. ಹೊಟ್ಟೆಯಿಂದ ಕರುಳು ಕತ್ತರಿಸಿ ಹೊರಚೆಲ್ಲಿದ್ದವು. ನೆತ್ತರಿನ ಮಡುವಿನಲ್ಲಿ ಮುಕುಂದ

ಬಿದ್ದಿದ್ದ. ಯಾರು ಈ ದುಷ್ಕೃತ್ಯವನ್ನು ಎಸಗಿದವರು? ಎಂದು ಜನರೆಲ್ಲ ಕೇಳಿದರು. ಮುಕುಂದನು ಮರಣೋನ್ಮುಖನಾಗಿ ಶ್ವಾಸೋಚ್ಛ್ವಾಸವನ್ನು ಕಷ್ಟದಿಂದ ಮಾಡುತ್ತಲಿದ್ದ. ''ಪೂರ್ವಜನ್ಮದ ದುರ್ದೈವದಿಂದ ಹೀಗಾಗಿದೆ.'' ಎಂದು ಹೇಳಿ ಪ್ರಾಣಬಿಟ್ಟ. ಆಗ ಅವನ ತಾಯಿಯು ಹಾಗೂ ಹೆಂಡತಿಯು ಮುಕುಂದನ ಶವವನ್ನು ತೊಡೆಯ ಮೇಲಿರಿಸಿಕೊಂಡು ಭಯಂಕರ ಶೋಕವನ್ನು ಮಾಡಿದರು. ಅವನ ಭಾರ್ಯೆಯಂತೂ ನೆಲದ ಮೇಲೆ ಹೊರಳಾಡಿ ಗಂಡನ ಗುಣಗಾನ ಮಾಡುತ್ತ ಪ್ರಲಾಪಿಸಿದಳು.

**ಭಾರ್ಯೆ :-** ಗುಣಗಳ ನಿಧಿಯಾದ ಮುಕುಂದ, ನನ್ನ ಮೇಲೆ ನೀನು ಸಿಟ್ಟಾಗಿರುವೆಯಾ? ನಾನೆಂದೂ ನಿನ್ನ ಮನಸ್ಸಿನ ವಿರುದ್ಧ ನಡೆದಿಲ್ಲ. ನೀನು ಎಂದೂ ಹೀಗೆ ಮೌನವಾಗಿ ಮಲಗಿಕೊಂಡದ್ದು ಇಲ್ಲ. ಇವತ್ತು ಏಕೆ ಮಾತನಾಡಲೊಲ್ಲೆ? ಈ ಪಂಜರದಲ್ಲಿರುವ ಗಿಳಿಗೆ ನೀನು ಪ್ರತಿದಿನ ''ರಾಮ, ರಾಮ ಹರೇ ಕೃಷ್ಣ, ನಾರಾಯಣ ಪ್ರಭೋ'' ಎಂದು ಮುಂತಾಗಿ ಹರಿನಾಮಸ್ಮರಣೆ ಪಾಠಮಾಡಿಸುತ್ತಿದ್ದಿ. ನೀನು ಇಲ್ಲದೇ ಆ ಗಿಳಿಯು ಆಹಾರವನ್ನೇ ಸ್ವೀಕರಿಸುತ್ತಿಲ್ಲ. ಎದ್ದೇಳು.

ನೀನು ನನ್ನ ಗರ್ಭದಲ್ಲಿರಿಸಿದ ನಿನ್ನ ಮಗು ಸುರಕ್ಷಿತವಾಗಿ ಬೆಳೆಯುತ್ತಲಿದೆ. ಆದರೆ ನಾನು ಪ್ರಸವಕಾಲದವರೆಗೆ ನಿನ್ನನ್ನು ಅಗಲಿ ಇರಲಾರೆ. ಮಗುವನ್ನು ನೋಡಲಾದರೂ ನೀನು ಎಚ್ಚರಗೊಳ್ಳು. ನೀನು ನಾನು ಹೇಳಿದಂತೆ ಕೇಳದಿದ್ದರೆ ನಾನೂ ನಿನ್ನೊಡನೆ ಬರುತ್ತೇನೆ. ಸಹಗಮನ ಮಾಡಿಕೊಂಡು ಬಿಡುತ್ತೇನೆ.

ಆ ಮುಕುಂದನ ಮಡದಿಯು ಗಂಡನ ಜೊತೆಗೆ ಸಹಗಮನ ಮಾಡಬೇಕೆಂದು ಸಿದ್ಧಳಾದಳು. ಆ ಕ್ಷಣದಲ್ಲಿ ಮುಕುಂದನಿಗೆ ವಿದ್ಯಾದಾನ ಮಾಡಿದ ವೇದಾಯನ ಎಂಬ ಸ್ವಾಮಿಗಳು ಅಲ್ಲಿಗೆ ಆಗಮಿಸಿದರು. ಪೃಥ್ವೀ ಪ್ರದಕ್ಷಿಣೆಗೈಯುತ್ತ ಹೊರಟ ಆ ಸ್ವಾಮಿಗಳ ಸಂಚಾರ ಕ್ರಮದಿಂದ ಅಂದು ಅಲ್ಲಿಗೆ ಅಕಸ್ಮಾತ್ತಾಗಿ ಆಗಮಿಸಿದ್ದರು. ಅವರು ಮನೆಗೆ ಬಂದಾಗ ಅಲ್ಲಿ ಯಾರೂ ಕಾಣಲಿಲ್ಲ. ಅವರು ಅಲ್ಲಿರುವ ಪರಿಚಾರಕರನ್ನು ಕೇಳಿದರು. ''ಮುಕುಂದ ಕಾಣಿಸುತ್ತಿಲ್ಲವಲ್ಲಾ, ಅವನ ತಾಯಿ, ಹೆಂಡತಿ ಯಾರೂ ಇಲ್ಲವಲ್ಲ. ಎಲ್ಲರೂ ಎಲ್ಲಿಗೆ ಹೋಗಿದ್ದಾರೆ?''

ಮನೆಯ ದಾಸಿಯು ಕೈ ಮುಗಿದು ವೇದಾಯನರಿಗೆ ಹೇಳಿದಳು. ಪೂಜ್ಯರೇ, ಪಾಪಿಯೊಬ್ಬನು ನಮ್ಮ ಯಜಮಾನರಾದ ಮುಕುಂದರನ್ನು ನಿನ್ನೆ ರಾತ್ರಿ ಚೂರಿಯಿಂದ ಇರಿದು ಕೊಂದನು. ಮತ್ತು ಮನೆಯಲ್ಲಿರುವ ಎಲ್ಲ ಅಮೂಲ್ಯ ಪದಾರ್ಥಗಳನ್ನೂ ಕದ್ದುಕೊಂಡು ಓಡಿಹೋಗಿದ್ದಾನೆ. ನಮಗೆ ಒಡೆಯನಾದ ಮುಕುಂದನ ಶವ ಅಟ್ಟದ ಮೇಲೆ ಇದೆ. ಅವನ ತಾಯಿ, ಹೆಂಡತಿ ಎಲ್ಲರೂ ಅದರ ಬಳಿಯಲ್ಲಿದ್ದಾರೆ.

**ವೇದಾಯನರು:-** ತಾಯಿ, ನೀವು ಈಗ ಮುಕುಂದನ ದೇಹವನ್ನು ಕುರಿತು ಶೋಕವನ್ನು ಮಾಡುವಿರೋ? ಅಥವಾ ಮುಕುಂದನ ಆತ್ಮವನ್ನು ಕುರಿತು ಶೋಕಿಸುವಿರೋ? ಈ ದೇಹವು ಪಂಚಭೂತಗಳಿಂದ ನಿರ್ಮಿತವಾಗಿದೆ. ಪಂಚಭೂತಾತ್ಮಕವಾದ ದೇಹದಲ್ಲಿ ಪಂಚಭೂತಗಳು ಕ್ಷೀಣವಾಗಿ ಪಂಚತ್ವವನ್ನು ಹೊಂದಿ ಬಿಡುತ್ತವೆ. ಅದಕ್ಕಾಗಿ ಶೋಕ ಅನವಶ್ಯಕ. ಈ ಪದಾರ್ಥವು ಒಂದಿಲ್ಲಾ ಒಂದು ದಿನ ನಾಶಹೊಂದುವ ಸ್ವಭಾವವುಳ್ಳ ಪದಾರ್ಥವೇ. ಆದುದರಿಂದ ಮುಕುಂದನ ದೇಹನಾಶಕ್ಕಾಗಿ ಶೋಕಮಾಡುತ್ತೇವೆ ಎನ್ನುವ ನಿಮ್ಮ ಮಾತು

ಸರಿಯಲ್ಲ. ಮುಕುಂದನ ಆತ್ಮನಾಶಕ್ಕಾಗಿ ನೀವು ದುಃಖಪಡುವುದೂ ಅನುಚಿತ. ಏಕೆಂದರೆ ಆತ್ಮವು ಅನಾದಿ, ನಿತ್ಯ. ಅದಕ್ಕೆಂದೂ ನಾಶವಿಲ್ಲ ಆದುದರಿಂದ ಮಾನವರು ತಮ್ಮ ತಮ್ಮ ಪೂರ್ವಕರ್ಮಕ್ಕನುಸಾರವಾಗಿ ಜನನ, ಮರಣಗಳನ್ನು ಹೊಂದುತ್ತಲೇ ಇರುತ್ತಾರೆ. ಅದಕ್ಕಾಗಿ ಯಾರೂ ಶೋಕವನ್ನು ಮಾಡತಕ್ಕದ್ದಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಅಯೋಧ್ಯಾ ಮಾಹಾತ್ಮ್ಯ ಎಂಬ ನೂರ ತೊಂಬತ್ತೊಂದನೇಯ ಅಧ್ಯಾಯ ಮುಗಿದುದು*

—o—

## ಮುಕುಂದನ ಅಸ್ಥಿಗಳನ್ನು ಕೋಶಲಪುರಿಯಲ್ಲಿ ಇರುವ ತೀರ್ಥದಲ್ಲಿ ವಿಸರ್ಜಿಸಿದುದು; ಮುಕುಂದನ ಉದ್ಧಾರ

## ಅಧ್ಯಾಯ - ೧೯೨

**ನಾರದ :-** ವೇದಾಯನ ಮಹರ್ಷಿಗಳು ತಮ್ಮ ತತ್ತ್ವೋಪದೇಶದಿಂದ ಆ ಮುಕುಂದನ ಬಂಧುಬಳಗದವರನ್ನೆಲ್ಲ ಸಾಂತ್ವನಗೊಳಿಸಿದರು. ಅನಂತರ ಅವನಿಗೆ ಮರಣಾನಂತರ ಮಾಡಬೇಕಾದ ಎಲ್ಲ ಕ್ರಿಯೆಗಳನ್ನು ವಿಧಿಪೂರ್ವಕವಾಗಿ ಮಾಡಿಸಿದರು. ಮುಕುಂದನ ಗರ್ಭಿಣಿಯಾದ ಹೆಂಡತಿಯು ಸಹಗಮನಕ್ಕೆ ಆತುರಳಾಗಿ ಹೊರಟದ್ದನ್ನು ಗಮನಿಸಿದ ವೇದಾಯನ ಮಹರ್ಷಿಗಳು ಅವಳಿಗೆ ತಿಳುವಳಿಕೆ ನೀಡಿ, ಅದನ್ನು ತಡೆದರು. ಆ ಮುಕುಂದನ ಸಹೋದರರು ಆ ಸಂನ್ಯಾಸಿ ಶ್ರೇಷ್ಠರಾದ ವೇದಾಯನ ಮಹರ್ಷಿಗಳೊಂದಿಗೆ ಮುಕುಂದನ ಅಸ್ಥಿಯನ್ನು ಗಂಗಾಜಲದಲ್ಲಿ ವಿಸರ್ಜಿಸಲು ಹೊರಟನು. ಅನಂತರ ಆ ಮುಕುಂದನ ಸೋದರ ಹಾಗೂ ವೇದಾಯನ ಮಹರ್ಷಿಗಳು ಇಬ್ಬರೂ ಸೇರಿ ಇಂದ್ರಪ್ರಸ್ಥಕ್ಷೇತ್ರಕ್ಕೆ ಆಗಮಿಸಿದರು. ಇಂದ್ರಪ್ರಸ್ಥಕ್ಷೇತ್ರದ ಪ್ರದೇಶದಲ್ಲಿರುವ ಕೋಶಲ ತೀರ್ಥಕ್ಕೆ ಬಂದರು.

ಆ ಕೋಸಲ ತೀರ್ಥದ ದಂಡೆಯ ಮೇಲೆ ಒಂದು ರಾತ್ರಿ ಮಲಗಿಕೊಂಡಿದ್ದರು. ಯಮುನಾ ತೀರದ ಸ್ವಚ್ಛವಾದ ಭೂಭಾಗದಲ್ಲಿ ಅವರಿಬ್ಬರೂ ಮಲಗಿ ತಮ್ಮ ಮಧ್ಯೆ ಮುಕುಂದನ ಮೂಳೆತುಂಬಿದ ಚೀಲವನ್ನು ಇರಿಸಿಕೊಂಡಿದ್ದರು. ಆಯಾಸಗೊಂಡ ಅವರಿಬ್ಬರಿಗೂ ನೆಲಕ್ಕೆ ಮೈಹಚ್ಚಿದ ಮರುಕ್ಷಣದಲ್ಲಿಯೇ ಗಾಢವಾದ ನಿದ್ದೆ. ಅವರೊಟ್ಟಿಗೆ ಅನೇಕ ಜನ ವ್ಯಾಪಾರಿಗಳೂ, ಯಾತ್ರಿಕರೂ ಅಲ್ಲಿ ಬಂದು ಮಲಗಿಕೊಂಡಿದ್ದರು.

ಹೀಗೆ ಎಲ್ಲರೂ ಮಲಗಿಕೊಂಡಾಗ ಒಂದು ನಾಯಿಯು ಪಕ್ವಾನ್ನವನ್ನು ಹುಡುಕುತ್ತ ಶಿಬಿರದ ತುಂಬ ತಿರುಗಾಡುತ್ತಿತ್ತು. ಅಡಿಗೆ ಮಾಡಿದ ಸ್ಥಳಕ್ಕೆ ಬಂದು ಅಲ್ಲಿಯ ಪಾತ್ರೆಗಳನ್ನು ಮೂಸಿ, ನೆಕ್ಕಿ ಹೋಗುತ್ತಿತ್ತು. ಅನೇಕ ಸಲ ಅಲ್ಲಿನ ಜನ ಅದನ್ನು ಹೊಡೆದಟ್ಟಿದ್ದರು. ಆದರೂ ಅದು ಪುನಃ ಅಲ್ಲಿಗೇ ಬಂದು ಸುತ್ತಾಡುತ್ತಿತ್ತು. ಆ ನಾಯಿಯು ಈ ರಾತ್ರಿ ಹೀಗೆಯೇ ಅಲ್ಲಲ್ಲಿ ಸುತ್ತಾಡುತ್ತ ವೇದಾಯನ ಹಾಗೂ ಮುಕುಂದನ ಸೋದರ ಮಲಗಿದ ಸ್ಥಳಕ್ಕೆ ಬಂದಿತು. ಅವರಿಬ್ಬರ ಮಧ್ಯದಲ್ಲಿದ್ದ ಮುಕುಂದನ ಮೂಳೆಯ ಸಂಪುಟ ಅದರ ಕಣ್ಣಿಗೆ ಬಿದ್ದದ್ದೇ ತಡ, ಬಾಯಲ್ಲಿ ಕಚ್ಚಿಕೊಂಡು ಹೋಗಿಬಿಟ್ಟಿತು. ಸಂಪುಟ ಬಿಡಿಸಿ ನೋಡಿದಾಗ ನಾಯಿಗೆ ನಿರಾಶೆ ಆ ಮೂಳೆಗಳಿಗೆ ಸ್ವಲ್ಪವೂ ರಕ್ತ, ಮಾಂಸಗಳ ಲೇಪವಿರಲಿಲ್ಲ.

ರಕ್ತ ಮೂಳೆಗಳನ್ನು ಆಚೀಚೆ ಎಳೆದಾಡಿ ಕೊನೆಗೆ ನಿರಾಶೆಗೊಂಡ ಆ ನಾಯಿಯು ಬದಿಯಲ್ಲಿನ ತೀರ್ಥದಲ್ಲಿ ಆ ಮೂಳೆಯ ಗಂಟನ್ನು ಬಿಸಾಡಿತು. ಮುಕುಂದನ ಮೂಳೆಗಳು ಹೀಗೆ ಅ ಪವಿತ್ರ ತೀರ್ಥವನ್ನು ಸೇರಿದವು ಮೂಳೆಗಳು ತೀರ್ಥದ ಪವಿತ್ರ ಜಲಕ್ಕೆ ಸೇರಿದೊಡನೆಯೇ ಮುಕುಂದನ ಉದ್ಧಾರವಾಯಿತು.

ಮುಕುಂದನಿಗೆ ದಿವ್ಯ ಶರೀರ ಲಭಿಸಿತು. ಅವನ್ನನು ಕರೆಯಲು ದೇವಲೋಕದಿಂದ ವಿಮಾನವು ಬಂದಿತು. ಆಗ ದಿವ್ಯ ರೂಪವನ್ನು ಪಡೆದ ಮುಕುಂದನು ತೀರ್ಥದ ದಂಡೆಯ ಮೇಲೆ ನಿದ್ದೆ ಹತ್ತಿ ಮಲಗಿದ ತನ್ನ ಗುರುಗಳಾದ ವೇದಾಯನರು ಹಾಗೂ ಸೋದರರನ್ನು ನೋಡಿದ. ಬಳಿಗೆ ಬಂದು ಎಚ್ಚರಿಸಿದ. ಎದ್ದ ಕೂಡಲೇ ಗುರುವಿಗೆ ನಮಸ್ಕರಿಸಿ ಮಾತನಾಡಿದ.

**ಮುಕುಂದ :-** ಗುರು ವೇದಾಯನರೇ, ಇದೋ ನಿಮಗೆ ನನ್ನ ಅನಂತ ಪ್ರಣಾಮಗಳು. ಅನುಜನೇ, ನಿನಗೆ ಆಶೀರ್ವಾದಗಳು ನೀವಿಬ್ಬರೂ ನನ್ನ ಅಸ್ಥಿಗಳನ್ನು ಈ ದಿವ್ಯವಾದ ಕೋಶಲ ಕ್ಷೇತ್ರಕ್ಕೆ ತೆಗೆದುಕೊಂಡು ಬಂದಿರಿ. ನಾಯಿಯು ನಿಮ್ಮಿಬ್ಬರ ನಡುವೆ ಇಟ್ಟಿದ್ದ ಆ ಮೂಳೆಯ ಕರಂಡಕವನ್ನು ಎಳೆದು ನದಿಯ ನೀರಿನಲ್ಲಿ ಹಾಕಿತು. ಅದರಿಂದ ನಾನು ಆ ತೀರ್ಥದ ಮಹಿಮೆಯಿಂದ ಉದ್ಧೃತನಾದೆ. ನಾನು ಅಪಮೃತ್ಯುವನ್ನು ಹೊಂದಿ ನರಕಲೋಕಕ್ಕೆ ಹೋಗಿದ್ದೆ. ಅಲ್ಲಿ ಭಯಂಕರವಾದ ಯಮಯಾತನೆಯನ್ನು ಅನುಭವಿಸಿ ಈ ತೀರ್ಥದ ಮಹಿಮೆಯಿಂದ ಈಗ ದೈವೀ ಶರೀರವನ್ನು ಹೊಂದಿದ್ದೇನೆ. ನನ್ನನ್ನು ಇಂದ್ರಲೋಕಕ್ಕೆ ಕರೆದೊಯ್ಯಲು ವಿಮಾನ ಸಿದ್ಧವಾಗಿದೆ. ಅದಕ್ಕಿಂತ ಮುಂಚೆ ನನ್ನ ಅಸ್ಥಿಗಳಿಗೆ ಈ ದಿವ್ಯ ಜಲದ ಸ್ಪರ್ಶಮಾಡಿಸಲೆಂದು ಬಂದ ನಿಮ್ಮನ್ನು ಅಭಿನಂದಿಸಿ ಹೋಗೋಣವೆಂದು ಬಂದೆ. ನನ್ನ ಕೆಲಸವಾಯಿತು. ನನಗೆ ಅಪ್ಪಣೆ ನೀಡಿ.

**ವೇದಾಯನ :-** ಮುಕುಂದ, ನೀನು ನಾಪಿತನಿಂದ ದುರ್ಮರಣವನ್ನು ಹೊಂದಿದೆಯಷ್ಟೇ. ಮರಣಾನಂತರ ನೀನು ಎಲ್ಲಿಗೆ ಹೋಗಿದ್ದೆ? ನರಕಕ್ಕೆ ಎಂದು ಹೋದೆ. ಆ ನರಕವೆಂಥದು? ಅಲ್ಲಿಯ ಜನರು ಹೇಗೆ ಇರುತ್ತಾರೆ? ಅವರಲ್ಲಿ ಏನು ಮಾಡುತ್ತಾರೆ? ಇದೆಲ್ಲವನ್ನೂ ನನಗೆ ಹೇಳು.

**ಮುಕುಂದ :-** ಗುರುಗಳೇ, ನಾನು ಮರಣಾನಂತರ ಯಮಲೋಕದಲ್ಲಿ ದುಃಖವನ್ನು ಅನುಭವಿಸಿದ್ದು ಈ ತೀರ್ಥೋಕದ ಸ್ಪರ್ಶದಿಂದ ಮತ್ತೆ ಸ್ಮರಣೆಗೆ ಬರುತ್ತಲಿದೆ. ಕೇಳಿರಿ ಹೇಳುತ್ತೇನೆ.

ಚಂಡಕ ಎಂಬ ನಾಪಿತ ನನ್ನನ್ನು ಇರಿದು ಕೊಂದ ಕೂಡಲೇ ಯಮನದೂತರು ಅಲ್ಲಿಗೆ ಆಗಮಿಸಿದರು. ನನ್ನನ್ನು ಸಂಯಮಿನೀಪುರಕ್ಕೆ ಕರೆದೊಯ್ದರು. ಅಲ್ಲಿ ನನ್ನನ್ನು ಯಾತನಾದೇಹದಿಂದ ಅನೇಕ ವಿಧವಾದ ನರಕದ ದುಃಖಗಳನ್ನು ಅನುಭವಿಸಲು ಹಚ್ಚಿದರು. ಭಯಂಕರವಾದ ಉಕ್ಕಿನ ಸರಳುಗಳಿಂದ ಹೊಡೆದು, ಪಾಶಗಳಿಂದ ಬಿಗಿದು ಎಣ್ಣೆಯ ಕೊಪ್ಪರಿಗೆಯಲ್ಲಿ ಕರಿದು, ಅಸ್ತ್ರಗಳಿಂದ ಚುಚ್ಚಿ, ನಾನಾ ಬಗೆಯ ಹಿಂಸೆಗಳಿಂದ ಪ್ರಾಣಾಂತಿಕವಾದ ವೇದನೆಯನ್ನುಂಟು ಮಾಡಿದರು. ಸುಡುವ ಉಸುಕಿನಲ್ಲಿ ಬರಿಮೈಯಿಂದ ಹೊರಳಿಸಿದರು. ಮೈಮೇಲೆ ಯಮದೂತರ ಪ್ರಹಾರ ನನ್ನ ಮೇಲೆ ಏಟು ಹಾಕುತ್ತ ಯಮದೂತರು ಮಾತನಾಡುತ್ತಿದ್ದರು.

**ಯಮದೂತರು :-** ನೀನು ಗುರುದ್ರೋಹವನ್ನು ಮಾಡಿದೆ. ಆದುದರಿಂದ ಭೀಕರಯಾತನೆ ತಪ್ಪಿದ್ದಲ್ಲ. ಎಂದು ಹೇಳುತ್ತ ಸಂಯಮಿನೀಪುರಕ್ಕೆ ಎಳೆದುಕೊಂಡು ಹೋದರು. ಯಮನೆದುರು ಒಯ್ದು ಯಮನಿಗೆ ನನ್ನ ಹಿಂದಿನ ಇತಿಹಾಸವನ್ನು ತಿಳಿಸಿದರು. ಅದನ್ನು ಕೇಳಿ ಯಮಧರ್ಮನು ಮಾತನಾಡಿದ.

**ಯಮ:-** ದೂತರೇ, ಬ್ರಹ್ಮದೇವರು ನನಗೆ ಒಂದು ಕಟ್ಟಪ್ಪಣೆಯನ್ನು ಮಾಡಿದ್ದಾನೆ. ''ಯಮಧರ್ಮ, ನೀನು ನಿನ್ನ ಶಾಸನಗಳನ್ನು ಸರಿಯಾಗಿ ಪಾಲಿಸು. ಮುಪ್ಪಿನ ತಂದೆ-ತಾಯಿಗಳನ್ನು, ಚಿಕ್ಕ ಮಕ್ಕಳನ್ನು ಸರಿಯಾಗಿ ಪೋಷಿಸದಿರುವವರಿಗೆ ಕಠೋರ ಶಿಕ್ಷೆನೀಡು. ಅದರಂತೆ ಗುರುದ್ರೋಹಿಗಳನ್ನು ನಿರ್ದಯದಿಂದ ಮರ್ದಿಸು. ಈ ಇಬ್ಬರು ಪಾಪಿಗಳ ಮಟ್ಟಿಗೆ ನೀನೆಂದೂ ದಯೆದೋರಬೇಡ.''

ಹೀಗೆ ಬ್ರಹ್ಮದೇವರು ನನಗೆ ಅಪ್ಪಣೆ ಮಾಡಿದ್ದಾರೆ. ಈ ಬ್ರಾಹ್ಮಣನು, ಗುರುದ್ರೋಹವನ್ನು ಮಾಡಿದ್ದರಿಂದ ಅಪಮೃತ್ಯುವನ್ನು ಹೊಂದಿದ್ದಾನೆ. ಇವನಿಗೆ ಘೋರವಾದ ದುಃಖವುಂಟಾಗುವಂತೆ ಇವನನ್ನು ಬೇರೆ ಬೇರೆ ನರಕಗಳಲ್ಲಿ ಹಾಕಿರಿ. ಹೀಗೆ ಯಮದೇವರ ಅಪ್ಪಣೆಯಂತೆ ಯಮದೂತರು ನನ್ನನ್ನು ರೌರವ ನರಕಗಳಲ್ಲಿ ಹಾಕಿ ಘೋರಶಿಕ್ಷೆ ನೀಡಿದರು. ಅಲ್ಲಿ ಒಂದೊಂದು ಕ್ಷಣವೂ ನನಗೆ ಯುಗವಾಗುತ್ತಿತ್ತು. ಸಹಿಸಲಶಕ್ಯವಾದ ದುಃಖ, ದಾರುಣ ಸಂಕಟ, ಎದೆಯೊಡೆಯುವಂಥ ಪ್ರಹಾರಗಳು. ಇವುಗಳಿಂದ ನಾನು ಅನುಭವಿಸಿದ ದುಃಖ ಏನೆಂದು ಹೇಳಲಿ? ಈ ದುಃಖವನ್ನು ನಾನು ಮೂವತ್ತು ದಿವಸಗಳವರೆಗೆ ಅನುಭವಿಸಿದೆ. ಆದರೆ ಸುದೈವದಿಂದ ಮೂವತ್ತೊಂದನೆಯ ದಿನ ಈ ಕೋಸಲಾತೀರ್ಥದಲ್ಲಿ ನಾಯಿಯಿಂದ ನನ್ನ ಮೂಳೆಯ ತುಂಡುಗಳು ಎಳೆದೊಗೆಯಲ್ಪಟ್ಟವು. ತಕ್ಷಣದಲ್ಲಿ ನನಗೆ ಆ ನರಕದಿಂದ ಬಿಡುಗಡೆಯಾಯಿತು. ಗುರುದ್ರೋಹದಿಂದ ಬಂದ ಪಾಪವು ಪೂರ್ತಿ ನಷ್ಟವಾಯಿತು. ದಿವ್ಯದೇಹವು ಆ ಕ್ಷಣದಲ್ಲಿ ನನಗೆ ಒಡಮೂಡಿತು. ದೈವೀಭಾವವು ನನ್ನಲ್ಲಿ ನಖಶಿಖಾಂತವಾಗಿ ಅಭಿವ್ಯಕ್ತವಾಯಿತು. ನಾನು ನರಕದಿಂದ ನೇರವಾಗಿ ನಾಕಲೋಕಕ್ಕೇ ನಡೆದಿದ್ದೇನೆ. ಇನ್ನು ಮೇಲೆ ಹದಿನಾಲ್ಕು ಇಂದ್ರರು ಸ್ವರ್ಗದಲ್ಲಿ ಶಾಸನ ಮಾಡುವ ಅವಧಿ ಪೂರ್ತಿಯ ಕಾಲದವರೆಗೆ ನಾನು ಅಮರಾವತಿಯಲ್ಲಿಯೇ ಸ್ವರ್ಗೀಯ ಸುಖೋಪಭೋಗಗಳನ್ನು ಅನುಭವಿಸುತ್ತ ವಾಸಮಾಡುತ್ತೇನೆ. ಯಮಪಟ್ಟಣದಲ್ಲಿ ನಾನು ನರಕಯಾತನೆಗಳನ್ನು ಅನುಭವಿಸುವಾಗ ನನ್ನ ಕಣ್ಣಿಗೆ ಭೀಕರರೂ, ವಿಕಾರಮುಖರೂ, ಹಿಂಸಕರೂ, ಸಿಂಹದ ಮುಖದವರೂ, ಆನೆಯ ತಲೆಯವರೂ, ಚೂಪಾದ ಕೋರೆದಾಡೆಯುಳ್ಳವರೂ, ಬೆಕ್ಕಿನ ಮುಖದವರೂ ಆಗಿ ಕರಾಳ ಸ್ವರೂಪವುಳ್ಳವರಂತೆ ಕಂಡ ಯಮಕಿಂಕರರು ನಾನು ದೈವತಸ್ವರೂಪವನ್ನು ಹೊಂದಿ ದಿವ್ಯದೇಹಧರನಾಗಿ ನಿಂತುಕೊಂಡ ಕೂಡಲೇ ದಿವ್ಯ ಭೂಷಣವುಳ್ಳವರೂ ಸೌಮ್ಯ, ಶಾಂತ ಸುಂದರಸ್ವರೂಪದ ಸಜ್ಜನರಾಗಿ ತೋರಿಬಂದರು. ನೀವು ಕೇಳಿದ ಯಮಲೋಕದ ವಿಷಯವಾದ ಎಲ್ಲ ಪ್ರಶ್ನೆಗಳಿಗೂ ನಾನು ಉತ್ತರ ನೀಡಿದ್ದೇನೆ.

ಇನ್ನು ನಾನು ದೇವೇಂದ್ರನ ಸ್ವರ್ಗಪುರಿಗೆ ತೆರಳುತ್ತೇನೆ. ನನಗೆ ಅಪ್ಪಣೆ ನೀಡಿರಿ.

ಸನ್ಯಾಸಿ ಶ್ರೇಷ್ಠರಾದ ವೇದಾಯನರು ತಮ್ಮ ಶಿಷ್ಯನಾದ ಮುಕುಂದನು ವರ್ಣಿಸಿದ ನರಕದ ಸಮಾಚಾರವನ್ನೂ ಮತ್ತು ಕೋಸಲಾತೀರ್ಥದ ಮಹಿಮೆಯನ್ನೂ ಕೇಳಿ ಸಮಾಧಾನ ಹೊಂದಿ ಮತ್ತೆ ಆ ತಮ್ಮ ಶಿಷ್ಯನನ್ನು ಕುತೂಹಲದಿಂದ ಕೇಳಿದರು.

**ವೇದಾಯನ :-** ಮುಕುಂದ, ನೀನು ಬಾಲ್ಯದಿಂದಲೇ ನನ್ನ ಬಳಿಯಲ್ಲಿ ಸಕಲ ವೇದಗಳನ್ನು ಅಭ್ಯಾಸ ಮಾಡಿದೆ. ವ್ಯಾಕರಣ, ವೇದಾಂತ ಮುಂತಾದವುಗಳನ್ನು ನಾನೇ ನಿನಗೆ ಪಾಠ ಹೇಳಿದೆ. ನೀನು ಭಕ್ತಿಯಿಂದ ನನ್ನ ಸೇವೆ ಶುಶ್ರೂಷೆಗಳನ್ನು ಮಾಡುತ್ತಲೇ ಇದ್ದೆ. ಗುರುಭಕ್ತಿ, ಹರಿಭಕ್ತಿ, ಶಮ, ದಮ ಮುಂತಾದ ಉತ್ತಮ ಗುಣಗಳು ನಿನ್ನಲ್ಲಿ ಬಾಲ್ಯದಲ್ಲೇ ಇದ್ದು ಮುಂದೆ ಅವೇ ವಿಕಾಸಗೊಂಡದ್ದನ್ನೂ ನಾನು ನೋಡಿದ್ದೇನೆ. ಇಂಥ ನಿನಗೆ ಗುರುದ್ರೋಹ, ತನ್ಮೂಲಕವಾದ ಪಾಪ ಬಂದದ್ದು ಹೇಗೆ? ಗುರುಲೋಪವನ್ನು ನೀನು ಯಾವಾಗ ಮಾಡಿದ್ದೆ? ಇದನ್ನೆಲ್ಲವನ್ನೂ ಹೇಳು.

**ಮುಕುಂದ :-** ಶಾಸ್ತ್ರದಲ್ಲಿ 'ನಾಲ್ಕು ಜನರು ಪಿತೃಸಮಾನರು. ಅವರ ಸೇವೆ ಶುಶ್ರೂಷೆ ಮಾಡುವದು ಕರ್ತವ್ಯಕ್ಕೇ ಸೇರಿದ್ದು' ಎಂದು ಹೇಳಿದ್ದಾರೆ. ಜನ್ಮಕೊಟ್ಟವ, ಉಪನಯನ ಮಾಡಿದವ, ಕನ್ಯಾಕೊಟ್ಟವ ಹಾಗೂ ವೇದಶಾಸ್ತ್ರ ವಿದ್ಯೆಯನ್ನು ಕಲಿಸಿದವ ಇವರೇ ಆ ನಾಲ್ಕು ಮಂದಿ ತಂದೆಗೆ ಸಮರು.

ನಾನು ನನಗೆ ಜನ್ಮಕೊಟ್ಟು ಉಪನಯನ ಮಾಡಿ, ನನ್ನ ಪಾಲನೆ ಪೋಷಣೆ ಮಾಡಿದ ತಾಯಿ-ತಂದೆಗಳ ಸೇವೆಗಳನ್ನು ಮೊದಲಿನಿಂದಲೂ ಮಾಡಿದ್ದೇನೆ. ಅವರ ಅಪ್ಪಣೆಯನ್ನು ಎಂದೂ ಮೀರಲಿಲ್ಲ. ಅದರಂತೆ ನನಗೆ ಕನ್ಯೆಕೊಟ್ಟ ಅತ್ತೆ-ಮಾವಂದಿರ ಸೇವೆಯನ್ನೂ ತಪ್ಪದೇ ಮಾಡಿದ್ದೇನೆ. ನನಗೆ ವೇದಶಾಸ್ತ್ರ ವಿದ್ಯೆಯನ್ನು ಕಲಿಸಿದ, ತಮ್ಮ ಸೇವೆಯನ್ನೂ ಭಕ್ತಿಯಿಂದ ಯಥಾಶಕ್ತಿ ಮಾಡಿದ್ದೇನೆ. ತಮ್ಮ ಅಪ್ಪಣೆಯನ್ನು ಜನ್ಮದಲ್ಲಿ ಒಮ್ಮೆಯೂ ಮೀರಿ ನಡೆದಿಲ್ಲ. ಆದರೆ ನಮ್ಮ ಕುಲದ ಆಚಾರ್ಯರು ವೇದಶಾಸ್ತ್ರ ಪಾರಂಗತರು. ಅವರ ವಿಷಯದಲ್ಲಿ ಮಾತ್ರ ನನ್ನಿಂದ ಒಂದು ಚಿಕ್ಕ ಅಪರಾಧವು ಮಾಡಲ್ಪಟ್ಟಿದೆ. ನಮ್ಮ ಮನೆತನದಲ್ಲಿ ಯಾರಿಗಾದರೂ ಸಂತಾನವಾದರೆ ನಮ್ಮ ಕುಲಪುರೋಹಿತರಿಗೆ ಒಂದು ಹಸುವನ್ನು ದಾನನೀಡಿ, ದಕ್ಷಿಣೆನೀಡಿ ಆ ನಂತರವೇ ಮಗುವಿನ ಹುರಿಕೊಯ್ಯುವ ಕಾರ್ಯಕ್ರಮವನ್ನು ಮಾಡುತ್ತಲಿದ್ದಾರೆ. ಈ ಸಂಪ್ರದಾಯಕ್ಕೆ ನಾನು ತುಸು ವ್ಯತ್ಯಾಸವಾಗಿ ನಡೆದೆ. ನಾನು ಗಂಡುಮಗು ಹುಟ್ಟಿದ ತಕ್ಷಣ ಗುರುಗಳಿಗೆ ಒಂದು ಧೇನುವನ್ನು ದಕ್ಷಿಣಾಸಹಿತವಾಗಿ ದಾನ ನೀಡಲಿಲ್ಲ. ಹೀಗೆ ಕುಲಾಚಾರ್ಯರ ಗೌರವವನ್ನು ಸಂಪ್ರದಾಯ ಪ್ರಾಪ್ತವಾದ ದಾನ ಪದ್ಧತಿಯನ್ನು ಅತಿಕ್ರಮಿಸಿದ್ದರಿಂದ ನನಗೆ ಗುರುದ್ರೋಹದ ಪಾಪ ಅಂಟಿಕೊಂಡಿತು. ತತ್ಫಲವಾಗಿ ನಾನು ಅಕಾಲಮರಣಹೊಂದಿ ನರಕಲೋಕದಲ್ಲಿ ಮೂವತ್ತು ದಿನಗಳವರೆಗೆ ಘೋರವಾದ ದುಃಖವನ್ನು ಅನುಭವಿಸಬೇಕಾಯಿತು. ತೀರ್ಥ ಜಲದ ಸ್ಪರ್ಶದಿಂದ ನಾನು ದಿವ್ಯದೇಹ ಧರಿಸಿ ಸ್ವರ್ಗಲೋಕಕ್ಕೆ ಹೊರಟುನಿಂತಿದ್ದೇನೆ. ನನ್ನ ಈ ಪ್ರಯಾಣಕ್ಕೆ ದಯವಿಟ್ಟು ಅನುಮತಿ ನೀಡಬೇಕು.

**ವೇದಾಯನ :-** ಮುಕುಂದ, ನಿನಗೆ ಈಗ ಜನ್ಮಾಂತರದ ಸ್ಮರಣೆ ಬಂದಿದ್ದು ಈ ಕೋಸಲತೀರ್ಥ ಸ್ನಾನದ ಪ್ರಭಾವ. ಆದರೆ ಈ ತೀರ್ಥದಲ್ಲಿ ನಿನ್ನ ಮೂಳೆಗಳು ಬಂದು ಬೀಳಲು ಯಾವ ಪುಣ್ಯವು ಕಾರಣವಾಗಿದ್ದಿತು? ನಿನ್ನ ಸ್ಮೃತಿಪಥದಲ್ಲಿ ಈ ವಿಷಯಗಳನ್ನೆಲ್ಲ ಈಗ ಹೊಳೆಯುವವು. ಅವನನ್ನು ನನಗೆ ಹೇಳು.

**ಮುಕುಂದ:-** ಒಂದು ದಿನ ಸಾಯಂಕಾಲ ಸಮಯಕ್ಕೆ ನನ್ನ ಮನೆಗೆ ಒಬ್ಬ ಬ್ರಾಹ್ಮಣನು ಅತಿಥಿಯಾಗಿ ಬಂದನು. ಅವನಿಗೆ ನಾನು ಸ್ವಾಗತ ನೀಡಿ, ಸತ್ಕರಿಸಿ ಉತ್ತಮ ಭೋಜನವನ್ನೂ

ಮಾಡಿಸಿದೆ. ನಾನು ನೀಡಿದ ಭೋಜನದಿಂದ ಆ ಅತಿಥಿಯು ತೃಪ್ತನಾದ. ಅವನಿಗೆ ವಿಶ್ರಾಂತಿಗಾಗಿ ಮೆತ್ತಗಿನ ಹಾಸಿಗೆಯನ್ನೂ ಹಾಸಿ ಕೊಟ್ಟೆ. ಅವನು ಮಲಗಿದ ರಾತ್ರಿ ಅವನಿಗೆ ಭಯಂಕರ ಜ್ವರವು ಹಿಡಿಯಿತು. ಅವನ ಸರ್ವಾಂಗಗಳಲ್ಲೂ ಉರಿ, ಸಂಕಟ, ವಿಚಿತ್ರವೇದನೆ, ಬೆಳಗಾಗುವವರೆಗೆ ಹಾಸಿಗೆಯ ಮೇಲೆ ಹೊರಳಾಡಿದ, ಗೋಳಾಡಿದ. ವೇದನೆ ತಾಳಲಾರದೇ ಕೊನೆಗೆ ಬೆಳಗಾದಾಗ ಅವನು ಅಲ್ಲಿಯೇ ಮೃತನಾಗಿದ್ದ. ಅವನಿಗೆ ನಾನು ಅಂತ್ಯಸಂಸ್ಕಾರವನ್ನು ಮಾಡಿದೆ. ಅವನ ಮೂಳೆಗಳನ್ನು ತಂದು ಗಂಗೆಯ ನೀರಿಗೆ ಹಾಕಿದೆ.

ಮನೆಗೆ ಬಂದ ಬ್ರಾಹ್ಮಣನನ್ನು ಉಪಚರಿಸಿ, ಯಥೇಷ್ಟ ಭೋಜನದಿಂದ ಉತ್ತಮ ಹಾಸಿಗೆಯಿಂದ ಬದುಕಿದ್ದಾಗ ಸಂತೃಪ್ತಿಪಡಿಸಿ, ಆತ ಮೃತನಾದ ಮೇಲೂ ವಿಧಿಪೂರ್ವಕವಾಗಿ ಸಂಸ್ಕಾರ ನೆರವೇರಿಸಿ, ಅನಂತರ ಗಂಗೆಯಲ್ಲಿ ಆತನ ಅಸ್ಥಿಗಳನ್ನು ಹಾಕಿದ್ದುದರ ಫಲವಾಗಿ ನನ್ನ ಅಸ್ಥಿಗಳಿಗೆ ಬ್ರಹ್ಮದೇವರು ನಿರ್ಮಿಸಿದ ಈ ಕೋಸಲ ತೀರ್ಥದ ಸ್ಪರ್ಶವಾಗುವ ಯೋಗ ಒದಗಿತು. ನನ್ನ ಅಸ್ಥಿಗಳನ್ನು ನನ್ನ ಸೋದರ ಮತ್ತು ನೀವು ಇಬ್ಬರೂ ಸಂಚಯನ ಮಾಡಿ ಈ ತೀರ್ಥದ ತಡಿಯಲ್ಲಿ ಇಟ್ಟುಕೊಂಡು ಮಲಗಿದಾಗ ನಾಯಿಯೊಂದು ಅದನ್ನೊಯ್ದು ತೀರ್ಥದಲ್ಲಿ ಎಸೆದಿದ್ದರಿಂದ ನನಗೆ ಈ ದಿವ್ಯದೇಹ ಪ್ರಾಪ್ತವಾಯಿತು. ಆದಕ್ಕಾಗಿ ನಾನು ಈಗ ಸುರರಂತೆ ಸುಂದರ ಶರೀರವನ್ನು ಹೊಂದಿ ಸ್ವರ್ಗಲೋಕದ ಪ್ರಯಾಣವನ್ನು ಕೈಗೊಂಡಿದ್ದೇನೆ. ನನಗೆ ಅಪ್ಪಣೆ ನೀಡಿರಿ.

ಹೀಗೆ ನುಡಿದು, ಗುರುಗಳ ಅಪ್ಪಣೆ ಪಡೆದು ವಿಮಾನಾರೋಹಣಮಾಡಿ ಸ್ವರ್ಗಲೋಕವನ್ನು ಕುರಿತು ಪ್ರಯಾಣವನ್ನು ಬೆಳೆಸಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಮುಕುಂದನ ಅಸ್ಥಿಗಳನ್ನು ಕೋಶಲಪುರಿಯಲ್ಲಿ ಇರುವ ತೀರ್ಥದಲ್ಲಿ ವಿಸರ್ಜಿಸಿದುದು;*
*ಮುಕುಂದನ ಉದ್ಧಾರ ಎಂಬ ನೂರ ತೊಂಬತ್ತೆರಡನೇಯ ಅಧ್ಯಾಯ ಮುಗಿದುದು*



## ಚಂಡಕ ನಾಪಿತನ ಅಖ್ಯಾನ

ಅಧ್ಯಾಯ - ೧೯೩

**ನಾರದ:-** ಶಿಬಿರಾಜ, ನಿನ್ನ ಮುಂದೆ ಮುಕುಂದ ಬ್ರಾಹ್ಮಣನ ಉಪಾಖ್ಯಾನವನ್ನು ನಿರೂಪಿಸಿದೆ. ಈಗ ಚಂಡಕ ಎಂಬ ಹೆಸರಿನ ಕ್ಷೌರಿಕನ ಉಪಾಖ್ಯಾನವನ್ನೂ ನಿರೂಪಿಸುತ್ತೇನೆ ಕೇಳು.

ಸದಾಕೋಪಿಯೂ, ವ್ಯಭಿಚಾರಿಯೂ, ಅನಾಚಾರಿಯೂ ಆದ ಚಂಡಕನೆಂಬ ಒಬ್ಬ ನಾಪಿತ. ಈತನು ತನ್ನ ನೆರೆಮನೆಯ ಮುಕುಂದನ ಮನೆಗೆ ಕನ್ನಕೊರೆದು. ಮನೆಯಲ್ಲಿದ್ದ ಹಣವನ್ನು ದೋಚಿ, ತನ್ನನ್ನು ಹಿಡಿಯಲು ಬಂದ ಮುಕುಂದನನ್ನು ಚೂರಿಯಿಂದ ಇರಿದು ಕೊಂದ ಸಮಾಚಾರವನ್ನು ನಿನಗೆ ಈಗಾಗಲೇ ನಿರೂಪಿಸಿದ್ದೇನೆ. ಆ ಮುಕುಂದನನ್ನು ಸಂಹರಿಸಿ ಅವನ ಮನೆಯಲ್ಲಿದ್ದ ಬಂಗಾರ, ಮುತ್ತು ರತ್ನಗಳೊಡನೆ ಓಡಿ ಹೋಗಿ ಪಾರಾದ ಚಂಡಕ ನಾಪಿತ. ಈ ಸಮಾಚಾರ ಆ ನಗರದ ಜನರೆಲ್ಲರಿಗೂ ತಿಳಿಯಿತು. ಜನರು ಮಹಾರಾಜರ ಬಳಿಗೆ ಹೋಗಿ ದೂರು ನೀಡಿದರು.

**ನಾಗರೀಕರು :-** ನಮ್ಮೂರಿನಲ್ಲಿ ಮುಕುಂದ ಎಂಬ ಒಬ್ಬ ವಿದ್ವಾಂಸನು ಬಹುಕಾಲದಿಂದ ವಾಸವಾಗಿದ್ದ. ಅವನು ನಿರುಪದ್ರವಿ. ಯಾರಿಗೂ ಎಂದಿಗೂ ಮನನೋಯುವ ಮಾತನ್ನೂ ಆಡಿದವನಲ್ಲ. ಇಂಥ ಸಾದಚಾರ ಸಂಪನ್ನನಾದ ಬ್ರಾಹ್ಮಣನ ಮನೆಹೊಕ್ಕು ಚಂಡಕನೆಂಬ ನಾಪಿತನು ಆಭರಣ, ಧನಗಳನ್ನೆಲ್ಲ ದೋಚಿ ತಡೆಯಬಂದ ಮುಕುಂದನನ್ನು ಕೊಂದುಹಾಕಿದ. ಪ್ರಜೆಗಳ ರಕ್ಷಕರಾದ ಮಹಾಪ್ರಭುಗಳು ಈ ವಿಷಯದಲ್ಲಿ ತಮಗೆ ಸರಿಕಂಡಂತೆ ಶಾಸನಗೈಯಬೇಕು.

ನಾಗರಿಕರ ಈ ಬಿನ್ನಹವನ್ನು ಕೇಳಿ ತಕ್ಷಣದಲ್ಲಿ ಆ ದೊರೆಯು ಮಂತ್ರಿಗೆ ಅಪ್ಪಣೆ ನೀಡಿದ.

**ಮಹಾರಾಜ :-** ಮಂತ್ರಿಯೇ, ಆ ಚಂಡಕನೆಂಬ ನಾಪಿತನು ಇದ್ದಲ್ಲಿಂದ ಹಿಡಿದು ತರಿಸು. ಅವನನ್ನು ದಂಡಿಸಬೇಕು.

ನೂರು ಜನ ಸೈನಿಕರೊಡನೆ, ಇನ್ನಿತರ ಅವಶ್ಯಕ ಪರಿಚಾರಕರೊಡನೆ ಮಂತ್ರಿಯು ಮುಕುಂದನ ಮನೆಗೆ ಹೋದ. ಅವನ ಬಂಧುಬಾಂಧವರನ್ನು ಕೇಳಿದ.

**ಮಂತ್ರಿ:-** ಮುಕುಂದನ ಬಾಂಧವರೇ, ನಿಜ ಹೇಳಿರಿ. ಮುಕುಂದನನ್ನು ಕೊಂದ ಪಾಪಿ ಯಾರು ? ಮಹಾರಾಜರ ಆಜ್ಞೆಯಾಗಿದೆ. ಆ ಅಪರಾಧಿಯನ್ನು ನಾನು ಶಿಕ್ಷೆಗೊಳಪಡಿಸುತ್ತೇನೆ.

ಆಗ ಮುಕುಂದನ ಬಳಗದವರು ''ಮಂತ್ರಿ ಮಹೋದಯರೇ, ಈ ಮುಕುಂದ ಬ್ರಾಹ್ಮಣ ತನ್ನಷ್ಟಕ್ಕೆ ತಾನು ವೇದಶಾಸ್ತ್ರ ಅಧ್ಯಯನ ಮಾಡುತ್ತ, ಪಾಠ, ಪ್ರವಚನ ಮಾಡುತ್ತ ಈ ನಗರದಲ್ಲಿ ವಾಸವಾಗಿದ್ದ. ಯಾರಿಗೂ ಎಂದೂ ಮನಸ್ಸಿನಲ್ಲೂ ಕೇಡನ್ನು ಚಿಂತಿಸದವನಲ್ಲವೆಂಬುದು ಇಡೀ ಊರಿಗೇ ಗೊತ್ತು. ನೆರೆಮನೆಯ ಚಂಡಕನೆಂಬ ನಾಪಿತನು ಒಂದು ದಿನ ರಾತ್ರಿಯ ವೇಳೆಯಲ್ಲಿ ಬಂದು ಅಟ್ಟದ ಮೇಲೆ ಮಲಗಿದ ಮುಕುಂದನನ್ನು ಚೂರಿಯಿಂದ ಇರಿದು ಮುಕುಂದನ ಸಂಪತ್ತನ್ನು ಕೊಳ್ಳೆಹೊಡೆದು ಓಡಿಹೋದ, ಅವನು ಓಡಿ ಹೋಗುವಾಗ ಅವನ ತಲೆಯ ಮೇಲಿನ ವಸ್ತ್ರವೊಂದು ಇಲ್ಲಿ ಬಿದ್ದಿದೆ. ಇಗೋ-ಇದೇ ಆ ನಾಪಿತನ ರುಮಾಲು. ಮುಕುಂದನ ಹೆಂಡತಿಯು ನಡೆದ ಘಟನೆಗೆ ಸಾಕ್ಷಿ ಹೇಳುತ್ತ ಕಣ್ಣೀರು ಸುರಿಸಿದಳು.

**ಮುಕುಂದನ ಪತ್ನಿ :-** ಮಂತ್ರಿಗಳೇ, ನಾವಿಬ್ಬರೂ ಅಟ್ಟದ ಮೇಲೆ ಮಲಗಿ ಕೊಂಡಾಗ, ಈ ಚಂಡಕ ನಾಪಿತನು ನಮ್ಮ ಮನೆಯಲ್ಲಿನ ಹಾಗೂ ನನ್ನ ಮೈಮೇಲಿನ ಆಭರಣಗಳನ್ನೂ ನನ್ನ ಪತಿಯ ಕೊರಳೊಳಗಿನ ಮಾಲೆಯನ್ನೂ ಅಪಹರಿಸಲು ಕೈ ಹಾಕಿದ. ನಮ್ಮಿಬ್ಬರಿಗೂ ಎಚ್ಚರವಾಯಿತು. ಆ ಕ್ರೂರ ಸ್ವರೂಪದ ಚಂಡಕನನ್ನು ನೋಡಿ ಗಾಬರಿಯಿಂದ ನಮಗೆ ಮಾತೇ ಹೊರಡಲಿಲ್ಲ. ಭಯದಿಂದ ಕಣ್ಮುಚ್ಚಿ ಹಾಗೆಯೇ ಮಲಗಿದ್ದೆವು. ಆ ಪಾಪಿಯು ನನ್ನ ಮೈಮೇಲಿನ ಆಭರಣಗಳನ್ನು ತೆಗೆದುಕೊಂಡು, ನನ್ನ ಪತಿಯ ಕೊರಳೊಳಗಿನ ಹಾರವನ್ನೂ ತೆಗೆದುಕೊಂಡು ಹೊರಟ. ಹಿಂದಿನಿಂದ ಹೋಗಿ ಅವನನ್ನು ನನ್ನ ಪತಿ ಹಿಡಿದರು. ಆಗ ಆ ದುಷ್ಟನು ಚೂಪಾದ ಚೂರಿಯಿಂದ ನನ್ನ ಪತಿಯ ಹೊಟ್ಟೆಯಲ್ಲಿ ಇರಿದನು. ಮತ್ತು ಅಲ್ಲಿಂದ ಓಡಿಹೋದನು. ಇದನ್ನೆಲ್ಲವನ್ನೂ ನಾನು ಅಲ್ಲಿಯೇ ಇದ್ದು ನನ್ನ ಕಣ್ಣುಗಳಿಂದಲೇ ನೋಡಿದ್ದೇನೆ.

ಅಲ್ಲಿನ ಜನರ ಹತ್ತಿರವೂ ವಿಚಾರ ಮಾಡಿ ಮಂತ್ರಿಯು ಕೊಲೆಗಾರ ನಾಪಿತನೇ ಎಂಬ ನಿರ್ಣಯಕ್ಕೆ ಬಂದ ಮತ್ತು ಆ ನಾಪಿತನ ಮನೆಗೆ ಹೋದ. ಮಂತ್ರಿಯು ಅಲ್ಲಿಗೆ ಹೋದಾಗ ಚಂಡಕನು ಮನೆಯಲ್ಲಿಯೇ ಮಲಗಿಕೊಂಡಿದ್ದ. ಮಂತ್ರಿಯ ಆಜ್ಞೆಯಿಂದ ಸೈನಿಕರು ಕೂದಲು ಹಿಡಿದು ಅವನನ್ನು ಜಗ್ಗಿ ಎಚ್ಚರ ಗೊಳಿಸಿದರು. ದಿಗ್ಗನೆದ್ದು ಕುಳಿತ ಆ ನಾಪಿತಾಧಮನು ಯಾರು ! ಯಾರು ! ಇಲ್ಲೇಕೆ ಒಳಗೆ ಬಂದಿದ್ದೀರಿ? ಹೇಗೆ ಬಂದಿರಿ? ಎಂದು ಬಡಬಡಿಸಿದ. ಅವನ ಅಬ್ಬರಕ್ಕೆ ಸೊಪ್ಪುಹಾಕದ ಮಂತ್ರಿಯು ಸೈನಿಕರು ಅವನ ಕೈಕಾಲುಗಳಿಗೆ ಬೇಡಿ ಜಡಿದು, ರಾಜನಲ್ಲಿಗೆ ಎಳೆದು ತಂದರು.

**ರಾಜ :-** ಧರ್ಮಜ್ಞನಾದ ಮಂತ್ರಿಯೇ, ಇವನ ಸಂಹಾರ ಈಗಲೇ ಆಗಬೇಕು. ಆದರೆ ನಮ್ಮ ಪಟ್ಟಣದ ಹೊರಗೆ ಚಂದ್ರಭಾಗಾ ನದಿಯು ಪ್ರವಹಿಸುತ್ತಲಿದೆ. ಚಂದ್ರಭಾಗಾ ನದಿಯ ದಡಪ್ರದೇಶದಲ್ಲಿ ಮರಣಿಸಿದವರೆಲ್ಲ ಆ ನದಿಯ ಪುಣ್ಯ ದಿಂದ ಮರಣಾನಂತರ ಸ್ವರ್ಗಲೋಕವನ್ನು ಹೊಂದುವರು. ಈ ಪಾಪಿಗೆ ಸ್ವರ್ಗಪ್ರಾಪ್ತಿ ಯಾಗಬಾರದು. ಆದುದರಿಂದ ಇವನನ್ನು ಇಲ್ಲಿ ಕೊಲ್ಲದೇ ಚಂದ್ರಭಾಗಾ ನದಿಯ ಸೀಮೆಯನ್ನು ದಾಟಿ ಆಚೆ ಪ್ರದೇಶಕ್ಕೆ ಕರೆದೊಯ್ಯಿರಿ. ಈ ಚಂದ್ರಭಾಗಾ ನದಿಯ ಸುತ್ತಮುತ್ತಲಿನ ಐದು ಕ್ರೋಷದಷ್ಟು ಪ್ರದೇಶವೆಲ್ಲವೂ ಚಂದ್ರಭಾಗಾ ನದಿಯ ತೀರವೆಂದು ಕರೆಯಲ್ಪಡುತ್ತದೆ. ಈ ಪಾಪಿಯನ್ನು ಆ ಪ್ರದೇಶವನ್ನು ದಾಟಿಸಿ ತಲೆಯೊಡೆದು, ಮರಣ ಶಿಕ್ಷೆ ವಿಧಿಸಿ.

ಹೀಗೆ ರಾಜನಿಂದ ಆಜ್ಞಪ್ತನಾದ ಮಂತ್ರಿಯು ಹಂತಕರನ್ನು ಕರೆಯಿಸಿದ. ರಾಜನ ಅಪ್ಪಣೆಯನ್ನು ಅವರಿಗೆ ತಿಳಿಸಿದ. ಆ ಹಂತಕರು ಮಂತ್ರಿಯ ಆಜ್ಞೆಯಂತೆ, ಮಂತ್ರಿಯು ನಿಗದಿಪಡಿಸಿದ ಪ್ರದೇಶದಲ್ಲಿ ಆ ದುಷ್ಟನ ಶಿರಸ್ಸನ್ನು ಕಡಿದುಹಾಕಿದರು.

ಅನಂತರ ಆ ನಾಪಿತನು ಮರಣಹೊಂದಿ ಮರುದೇಶದಲ್ಲಿ ಘೋರ ವಿಷದಿಂದ ಫೂತ್ಕರಿಸುವ ಹಾವ ಆಗಿ ಹುಟ್ಟಿದ. ಧವ ಎಂಬ ಹೆಮ್ಮರದ ಹೊದರಿನಲ್ಲಿ ಭೀಕರವಾದ ವಿಷವನ್ನು ಕಕ್ಕುವ ಆ ಹಾವು ಸೇರಿಕೊಂಡಿತು. ಈ ಕ್ರೂರ ಹಾವಿನ ಫೂತ್ಕಾರದ ಬಿಸಿಯಿಂದ ಹಚ್ಚುಹಸಿರು ಮೆರೆಯುವ, ಕುಡಿಮಿಡಿ ದಾಂಗುಡಿಯಿಟ್ಟು ಬಾನಿನುದ್ದ ಬೆಳೆದು ನಿಂತ ಆ ಹೆಮ್ಮರವು ಒಣಗಿಹೋಗಿತ್ತು. ಈ ಪಾಪಿಯಾದ ಸರ್ಪದ ಪ್ರವೇಶದಿಂದ ವೃಕ್ಷದ ಕಾಂಡ, ಚಿಗುರು, ಫಲ ಎಲ್ಲವೂ ಒಣಗಿ ಉದುರಿ ಮೋಟುಮರವಾಗಿ ನಿಂತುಕೊಂಡಿತು. ಸುತ್ತುಮುತ್ತಲಿನ ಹಸಿರುಹುಲ್ಲೂ ಸಹ ಆ ಘೋರ ಹಾವಿನ ಫೂತ್ಕಾರದಿಂದ ವಿಷಮಯವಾಗಿ ಪರಿಣಮಿಸಿತ್ತು.

ಮುಂದೆ ಒಂದು ದಿನ ದಕ್ಷಿಣ ದೇಶದಿಂದ ಒಬ್ಬ ವ್ಯಾಪಾರಿಯು ಯಾತ್ರಾರ್ಥಿಯಾಗಿ ಅಲ್ಲಿಗೆ ಬಂದ. ಅವನು ಹಿಮಾಲಯ ಪರ್ವತದಲ್ಲಿರುವ ನಾರಾಯಣದೇವರ ನಿವಾಸಸ್ಥಾನವಾದ ಬದರಿಕಾಶ್ರಮವನ್ನು ಕುರಿತು ಪ್ರಯಾಣ ಮಾಡುತ್ತಲಿದ್ದ. ಅವನು ಅಲ್ಲಿಗೆ ಬಂದು ಕುಳಿತಾಗ, ಇನ್ನೂ ಒಬ್ಬ ಬ್ರಾಹ್ಮಣ ಅಲ್ಲಿಗೆ ಬಂದನು. ಅವನು ತನ್ನ ಹೆಗಲಮೇಲೆ ಪೆಟ್ಟಿಗೆಗಳನ್ನು ಹೊತ್ತಿದ್ದ. ಅದರಲ್ಲಿ ತನ್ನ ತಂದೆ ತಾಯಿಯರ ಮೂಳೆಗಳಿದ್ದವು. ಆ ಬ್ರಾಹ್ಮಣನು ತನ್ನ ತಾಯಿ ತಂದೆಯರ ಅಸ್ಥಿವಿಸರ್ಜನೆಗಾಗಿ ಗಂಗಾ ನದಿಗೆ ಹೊರಟಿದ್ದ. ಹೀಗೆ ಕಾರ್ಯಾರ್ಥವಾಗಿ ಹೊರಟ ಆ ಬ್ರಾಹ್ಮಣ ಮತ್ತು ವ್ಯಾಪಾರಿ

ಇಬ್ಬರೂ ಆ ಮರದ ಕೆಳಗೆ ಮಿಲಿತರಾದರು. ಬ್ರಾಹ್ಮಣನು ತಾನು ಹೊತ್ತಿದ್ದ ಪೆಟ್ಟಿಗೆಯನ್ನು ಮರದ ಕೆಳಗೆ ಇರಿಸಿದ. ಅನಂತರ ಅವರಿಬ್ಬರೂ ಅಲ್ಲಿಯೇ ತುಸು ಅಂತರದಲ್ಲಿ ವಿಶ್ರಮಿಸಿದರು. ಆ ಧವವೃಕ್ಷದ ಹೊದರಿನಲ್ಲಿದ್ದ ಸರ್ಪವು ಹೊರಗೆ ಬಂದು ಆ ಪೆಟ್ಟಿಗೆಯನ್ನು ತನ್ನ ಹೆಡೆಯಿಂದ ಹೊಡೆಯಿತು. ಅದರಿಂದ ಪೆಟ್ಟಿಗೆಯ ಬಾಯಿಯು ತುಸು ತೆರೆದುಕೊಂಡಿತು. ತೆರೆದ ಬಾಯಿಯ ಮೂಲಕ ಹಾವು ಪೆಟ್ಟಿಗೆಯೊಳಗೇ ಪ್ರವೇಶಿಸಿತು.

ಆದರೆ ಹೊರಬರಲಾಗಲಿಲ್ಲ. ಬೆಳಗಾಗುವವರೆಗೆ ಪೆಟ್ಟಿಗೆಯಿಂದ ಹೊರಬರಲು ಒದ್ದಾಡಿತು. ಪೆಟ್ಟಿಗೆಯ ಭಾರವಾದ ದ್ವಾರವು ತಾನಾಗಿಯೇ ಮುಚ್ಚಿಕೊಂಡುಬಿಟ್ಟಿತ್ತು. ಪ್ರಯತ್ನಮಾಡಿತು ಹೊರಬರಲು ವಿಫಲವಾಗಿ ಪೆಟ್ಟಿಗೆಯೊಳಗೇ ಬಿದ್ದುಕೊಂಡಿತು. ಬೆಳಗಾದ ಬಳಿಕ ಆ ವ್ಯಾಪಾರಿ, ತಂದೆ-ತಾಯಿಯರ ಅಸ್ಥಿಗಳನ್ನು ಪೆಟ್ಟಿಗೆಯಲ್ಲಿ ಸಂಗ್ರಹಿಸಿ ತಂದ ಆ ಬ್ರಾಹ್ಮಣ ಮತ್ತು ಇನ್ನೂ ಕೆಲ ಯಾತ್ರಾರ್ಥಿಗಳು ಅವರೊಡನೆ ಸೇರಿ ಪ್ರಯಾಣ ಮುಂದುವರೆಯಿತು. ಬ್ರಾಹ್ಮಣನು ಆ ಪೆಟ್ಟಿಗೆಯನ್ನು ಕಂಬಳಿಯಿಂದ ಸುತ್ತಿ ಯಥಾಪ್ರಕಾರ ತನ್ನ ತಲೆಯ ಮೇಲೆ ಹೊತ್ತನು ಪಾದಚಾರಿಗಳಾದ ಅವರು ಹಾಗೆಯೇ ನಡೆಯುತ್ತ ಈ ಕೋಸಲಾ ತೀರ್ಥಕ್ಕೆ ಬಂದರು. ಆಗ ಇಲ್ಲಿನ ಚಳಿಗಾಳಿಯಿಂದ ನಡುಗುತ್ತ ಇದ್ದ ಆ ಬ್ರಾಹ್ಮಣನು ತನ್ನ ಸಂದೂಕಕ್ಕೆ ಸುತ್ತಿದ್ದ ಕಂಬಳಿಯನ್ನು ಹೊದ್ದುಕೊಂಡನು.

ಅಷ್ಟು ಹೊತ್ತಿನಿಂದ ಕಂಬಳಿಯ ಆವರಣದಿಂದ ಉಸಿರುಗಟ್ಟಿದಂತಾಗಿದ್ದ ಹಾವು, ಬ್ರಾಹ್ಮಣನು ಕಂಬಳಿಯನ್ನು ಪೆಟ್ಟಿಗೆಯಿಂದ ತೆಗೆದುಕೊಂಡ ಕೂಡಲೇ ಪುನಃಶ್ಚೇತನ ಗೊಂಡಿತು. ಗಾಳಿಯನ್ನು ಕುಡಿದು ಅದಕ್ಕೆ ಮೈಯಲ್ಲಿ ಬಲಬಂದಿತು. ಆ ಹಾವು ಕೊನೆಗೂ ತನ್ನ ಹೆಡೆಯಿಂದ ಮುಚ್ಚಳವನ್ನಪ್ಪಳಿಸಿ, ತೆರೆದು ಹೊರಬಂದಿತು. ಜನರೆಲ್ಲರೂ ಸರ್ಪ, ಸರ್ಪ ಎಂದು ಕೂಗಿದರು. ಆಗ ಕೆಲವರು ಕೈಯಲ್ಲಿ ಕಲ್ಲು, ಕಟ್ಟಿಗೆ, ಇಟ್ಟಿಗೆಗಳನ್ನು ಹಿಡಿದು ಹೊಡೆಯಬಂದರು. ಅವರೆಲ್ಲರಿಂದ ತಪ್ಪಿಸಿಕೊಂಡು ಚಪಲಗತಿಯ ಆ ಹಾವು ಹೋಗಲು ಹವಣಿಸಿತು. ಧೈರ್ಯಶಾಲಿಯೊಬ್ಬನು ತನ್ನ ಕೈಯಲ್ಲಿನ ಕಟ್ಟಿಗೆಯಿಂದ ಸರ್ಪದ ನೆತ್ತಿಯ ಮೇಲೆ ಬಲವಾಗಿ ಹೊಡೆದನು. ಆ ಹೊಡೆತನದಿಂದ ಅದು ಸತ್ತುಬಿದ್ದಿತು. ಅದರಿಂದ ಆ ಹಾವು ಕೋಸಲಾನದಿಯ ದಂಡೆಯ ಮೇಲೆ ಮೃತವಾಯಿತು. ಆ ತೀರ್ಥದ ದಡದಲ್ಲಿ ಮರಣ ಪ್ರಾಪ್ತವಾದುದರಿಂದ ಅದು ದಿವ್ಯ ದೇವತಾದೇಹವನ್ನು ಪಡೆಯಿತು. ಅದನ್ನು ಕರೆಯಲು ದೇವಲೋಕದಿಂದ ವಿಮಾನವು ಬಂದಿತು. ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಸಾಗುವ ಮುನ್ನ ಆ ದಿವ್ಯ ದೇಹಧಾರಿಯು ನೆರೆದ ಜನರನ್ನು ಕುರಿತು ಮಾತನಾಡಿದ.

''ದಾಕ್ಷಿಣಾತ್ಯ ದೇಶದಿಂದ ಬಂದ ವ್ಯಾಪಾರಿಗಳೇ ಮತ್ತು ಬ್ರಾಹ್ಮಣರೇ, ನನ್ನ ಮಾತನ್ನು ಕೇಳಿರಿ. ನಾನು ಪೂರ್ವಕಾಲದಲ್ಲಿ ಚಂಡಕನೆಂಬ ದುಷ್ಟ ಕ್ಷೌರಿಕನಾಗಿದ್ದೆ. ಒಂದು ದಿನ ನನ್ನ ನೆರೆಮನೆಯ ಮುಕುಂದ ಎಂಬ ಸದಾಚಾರ ಸಂಪನ್ನನಾದ ಬ್ರಾಹ್ಮಣನನ್ನು ಕೊಂದು, ಹಣ, ಆಭರಣ ಮುಂತಾದ ಅವನ ಸಂಪತ್ತೆಲ್ಲವನ್ನೂ ಕದ್ದುಕೊಂಡು ಓಡಿಹೋದೆ. ಬ್ರಾಹ್ಮಣ ಹತ್ಯೆಯ ಪಾಪದಿಂದ ನನಗೆ ಘೋರವಾದ ನರಕವು ಆಯಿತು. ಐದುಲಕ್ಷ ವರ್ಷಗಳವರೆಗೆ ನಾನು ನರಕ ದುಃಖವನ್ನನುಭವಿಸಿ ಆಮೇಲೆ ಸರ್ಪಯೋನಿಯಲ್ಲಿ ಜನಿಸಿದೆ. ಆದರೆ ಈ ಕೋಸಲಾತೀರ್ಥದ ದಂಡೆಯ ಮೇಲೆ ನನಗೆ ಮರಣ ಸಂಭವಿಸಿದ್ದರಿಂದ ಈಗ ಉತ್ತಮ ಜನ್ಮ ಪಡೆದಿದ್ದೇನೆ. ನೀವೆಲ್ಲರೂ

ಈ ಕೋಸಲಾತೀರ್ಥವನ್ನು ಬಿಟ್ಟು ಹೋಗಬೇಡಿರಿ. ಈ ತೀರ್ಥವು ಪರಮ ಪವಿತ್ರ. ಸಕಲ ಪಾಪಪರಿಹಾರಕ. ಸರ್ವಾಭೀಷ್ಟಪ್ರದ. ಈ ವಿಷಯದಲ್ಲಿ ನಾನೇ ಪ್ರತ್ಯಕ್ಷ ಸಾಕ್ಷಿ.

ಹೀಗೆ ಹೇಳಿ ಆ ದಿವ್ಯ ದೇಹ ಧರಿಸಿದ ಆ ಚಂಡಕನು ವಿಮಾನವನ್ನು ಆರೋಹಣ ಮಾಡಿ ಸ್ವರ್ಗಲೋಕಕ್ಕೆ ತೆರಳಿದನು.

ಅನಂತರ ದಕ್ಷಿಣ ದೇಶದಿಂದ ಬಂದ ಅನೇಕ ಯಾತ್ರಿಕರು ತಾವು ಮಡದಿ, ಮಕ್ಕಳು, ಮನೆ, ಮಾರು, ಸರ್ವಸಂಗ ಪರಿತ್ಯಾಗ ಮಾಡಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಶ್ರೀಹರಿಯ ಪಾದಾರವಿಂದವನ್ನು ಧ್ಯಾನಮಾಡುತ್ತ ಆ ತೀರ್ಥದ ದಂಡೆಯ ಮೇಲೆಯೇ ವಾಸಿಸಿದರು. ನನ್ನ ತಾಯ್ತಂದೆಗಳ ಮೂಳೆಗಳನ್ನು ಗಂಗಾ ನದಿಯಲ್ಲಿ ವಿಸರ್ಜಿಸಬೇಕೆಂದು ಮೂಳೆಗಳುಳ್ಳ ಪೆಟ್ಟಿಗೆಯನ್ನು ಹೊತ್ತು ಸಾಗುತ್ತಿದ್ದ ಬ್ರಾಹ್ಮಣನೂ ಸಹ, ಆ ಕೋಸಲತೀರ್ಥದಲ್ಲಿಯೇ ಅಸ್ಥಿಗಳನ್ನು ವಿಸರ್ಜಿಸಿದನು. ಅಸ್ಥಿಗಳು ಆ ತೀರ್ಥದ ನೀರನ್ನು ಸ್ಪರ್ಶಿಸಿದ ಕೂಡಲೇ ಅವನ ತಂದೆ ತಾಯಿಯರಿಗೆ ದೈವೀದೇಹವು ಪ್ರಾಪ್ತವಾಯಿತು. ವಿಮಾನ ಆಗಮಿಸಿತು. ಅದನ್ನು ಆರೋಹಣ ಮಾಡುವ ಮುನ್ನ ಅವರು ತಮ್ಮ ಮಗನ ಬಳಿ, ಅಲ್ಲಿ ನೆರೆದ ಎಲ್ಲ ಜನರಿಗೆ ಕೇಳುವಂತೆ ಮಾತನಾಡಿದರು.

**ತಾಯ್ತಂದೆಗಳು:-** ವತ್ಸ, ಚಿರಂಜೀವಿಯಾಗು. ಧನ, ಧಾನ್ಯಾದಿಗಳಿಂದ ಸಮೃದ್ಧ ಜೀವನ ನಡೆಸು. ನೀನು ನಮ್ಮ ಮೂಳೆಗಳನ್ನು ಈ ಕೋಸಲ ನದಿಗೆ ತಂದು ಹಾಕಿದ್ದರಿಂದ ನಾವು ಈಗ ಸ್ವರ್ಗಲೋಕವನ್ನು ಕುರಿತು ಪಯಣಿಸ ಹೊರಟಿದ್ದೇವೆ. ಗಂಗಾ ತೀರ್ಥದಲ್ಲಿ ಅಸ್ಥಿವಿಸರ್ಜನದಿಂದ ಬರುವ ಪುಣ್ಯವು ಈ ಕೋಸಲ ತೀರ್ಥದಲ್ಲಿ ಅಸ್ಥಿ ವಿಸರ್ಜನೆದಿಂದಲೇ ಪ್ರಾಪ್ತವಾಯಿತು. ಈ ತೀರ್ಥದ ಮಹಿಮೆಯಿಂದ ನಾವು ಸದ್ಗತಿಯನ್ನು ಹೊಂದಿದೆವು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಚಂಡಕ ನಾಪಿತನ ಆಖ್ಯಾನ ಎಂಬ ನೂರ ತೊಂಬತ್ತಮೂರನೇಯ ಅಧ್ಯಾಯ ಮುಗಿದುದು*



## ಇಂದ್ರಪ್ರಸ್ಥ ಹಾಗೂ ಕೋ.ಲಾ ಮಾಹಾತ್ಮ್ಯ ವರ್ಣನ | ಅಧ್ಯಾಯ - ೧೯೪

**ನಾರದ:-** ಆ ಬ್ರಾಹ್ಮಣನ ತಾಯ್ತಂದೆಗಳು ದಿವ್ಯಗತಿಯನ್ನು ಹೊಂದಿದ ನಂತರ, ಅವರ ಮೂಳೆಯನ್ನು ಹೊತ್ತು ತಂದಿದ್ದ ಪುತ್ರನು ಮೂರುದಿನ ಕೋಸಲಾ ತೀರ್ಥದ ದಂಡೆಯ ಮೇಲೆ ಸ್ನಾನಮಾಡಿ ಭಗವದರ್ಚನೆಗೈದು, ಆ ತೀರ್ಥದ ಮಹಿಮೆಯನ್ನು ಧ್ಯಾನಮಾಡುತ್ತ ತನ್ನ ಮನೆಗೆ ಪ್ರಯಣಮಾಡಿದ. ಪಂಡಿತರು ಇದಕ್ಕೆ ಕೋಸಲಾತೀರ್ಥ ಎಂದು ಕರೆಯುತ್ತಾರೆ.

ಅನಂತರ ದಕ್ಷಿಣ ದೇಶದಿಂದ ಯಾತ್ರಾರ್ಥವಾಗಿ ಬಂದು ಆ ಧವವೃಕ್ಷದ ಕೆಳಗೆ ವಿರಮಿಸಿದ ಯಾತ್ರಿಕರು ಅಲ್ಲಿಯೇ ಕೋಸಲತೀರ್ಥದಲ್ಲಿಯೇ ವಾಸಮಾಡಿದರು. ಆದರೆ ಅವರಲ್ಲಿ ಒಬ್ಬನು ಮಾತ್ರ ಬದರಿಕಾಶ್ರಮಕ್ಕೆ ಹೋಗಬೇಕೆಂದು ಹೊರಟ. ಆಗ ಸಾಕ್ಷಾತ್ ಶ್ರೀಹರಿಯು ಒಬ್ಬ ವೃದ್ಧ ಬ್ರಾಹ್ಮಣನ ವೇಷಧರಿಸಿ ಅವನ ಎದುರು ಬಂದು ಮಾರ್ಗದಲ್ಲಿ ಅವನನ್ನು ತಡೆದು ನುಡಿದ.

**ವೃದ್ಧ:-** ವಿಪ್ರೋತ್ತಮ, ಈ ಇಂದ್ರಪ್ರಸ್ಥದಲ್ಲಿರುವ ಪುಣ್ಯಕರವಾದ ತೀರ್ಥವನ್ನು ಬಿಟ್ಟು ಎಲ್ಲಿಗೆ ಹೊರಟೆ? ಈ ಕೋಸಲಾತೀರ್ಥವು ಸರ್ವತೀರ್ಥಗಳಿಗಿಂತಲೂ ಉತ್ತಮವಾಗಿದೆ. ಇದು ಮೋಕ್ಷವನ್ನು ದಯಪಾಲಿಸಬಲ್ಲ ಕ್ಷೇತ್ರ. ವಿಷ್ಣುವಿಗೆ ಪರಮಪ್ರೀತ್ಯಾಸ್ಪದ. ನೀನು ಇದನ್ನು ತೊರೆದು ಎಲ್ಲಿಗೆ ಹೋದರೂ ನಿನಗೆ ಭಗವತ್ಪ್ರಸಾದ ಆಗುವದಿಲ್ಲ. ನಿನಗೆ ಮುಕ್ತಿಯನ್ನು ಹೊಂದಲೇಬೇಕೆಂಬ ಅಪೇಕ್ಷೆ ಇದ್ದರೆ, ಸರ್ವವನ್ನೂ ಪರಿತ್ಯಜಿಸಿ ಸನ್ಯಾಸಿಯಾಗು. ಈ ತೀರ್ಥದಲ್ಲೇ ವಾಸಿಸು. ಈ ತೀರ್ಥದಲ್ಲಿ ಸ್ನಾನಮಾಡಿ ಏಕಾಗ್ರ ಮನಸ್ಸಿನಿಂದ ಭಗವಂತನನ್ನು ಅರ್ಚಿಸು. ಈ ತೀರ್ಥದಲ್ಲಿ ಯಾರು ಯಾರು ಯಾವ ಯಾವ ಅಪೇಕ್ಷೆಯಿಂದ ಸ್ನಾನ ಮಾಡುವರೋ, ಭಗವಂತನು ಅವರವರಿಗೆ ಆಯಾ ಅಪೇಕ್ಷೆಗಳನ್ನು ಪೂರ್ಣಗೊಳಿಸುವನು.

ನಿನ್ನ ಕಣ್ಣೆದುರಿಗೆ ಆ ಸರ್ಪವು ದೇವತ್ವವನ್ನು ಹೊಂದಿ ವಿಮಾನ ಏರಿ ಸ್ವರ್ಗಲೋಕಕ್ಕೆ ತೆರಳಿತು. ಇದೇ ತೀರ್ಥದ ಪ್ರಭಾವದಿಂದಲೇ ಮೂಳೆಯನ್ನು ಹೊತ್ತು ತಂದ ಬ್ರಾಹ್ಮಣನ ತಾಯ್ತಂದೆಯರು ಸ್ವರ್ಗಕ್ಕೆ ಹೋದರು. ನಿನ್ನ ಕಣ್ಣೆದುರು ಪ್ರತ್ಯಕ್ಷವಾಗಿಯೇ ನಡೆದ ಘಟನೆಗಳನ್ನು ಅರಿತೂ ನೀನು ಇದನ್ನು ಬಿಟ್ಟು ಹೋಗುತ್ತಲಿರುವಿ. ಇದು ಶುದ್ಧ ಅವಿವೇಕ. ಕೈಯ ಅಳತೆಯಲ್ಲಿಯೇ ಇರುವ ಅಮೃತ ಸಮುದ್ರವನ್ನು ಬಿಟ್ಟು ಕೆಸರಿನಿಂದ ಕಲುಷಿತವಾದ ನೀರಿಗೆ ಕೈ ಒಡ್ಡಿದಂತೆ ನೀನು ಮೂರ್ಖನಾಗಿ ಕಾಣುವಿ. ಕೈಯಲ್ಲಿದ್ದ ಚಿಂತಾಮಣಿಯನ್ನು ಬಾವಿಯಲ್ಲಿ ಎಸೆದು ದುಃಖಪಡುತ್ತಲಿರುವ ಅವಿವೇಕಿ ಮನುಷ್ಯನಂತೆ ನೀನು ಮೂರ್ಖತನವನ್ನು ಮಾಡಬೇಡ. ಈ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಸ್ವರ್ಗ. ಮರಣಹೊಂದಿದವರಿಗೆ ಮೋಕ್ಷ.

**ಬ್ರಾಹ್ಮಣ:-** ವಿಪ್ರೋತ್ತಮ, ನಿನ್ನ ಮಾತಿನಿಂದ ನನಗೂ ಸಹ ಕೋಸಲ ತೀಥದಲ್ಲಿ ಆಸಕ್ತಿ, ಭಕ್ತಿ ಹುಟ್ಟಿದೆ. ನಿನ್ನ ಮಾತಿನಿಂದ ಈ ಇಂದ್ರಪ್ರಸ್ಥ ತೀರ್ಥಶ್ರೇಷ್ಠವೆಂದು ನನಗೆ ಮನದಟ್ಟಾಗಿದೆ. ಆದರೆ ಇದಕ್ಕಿಂತ ಮೊದಲು ಬದರೀಕ್ಷೇತ್ರದ ಮಹಿಮೆಯನ್ನು ನಾನು ಎಲ್ಲರ ಬಾಯಿಯಿಂದ ಕೇಳಿದ್ದೇನೆ. ಈ ಇಂದ್ರಪ್ರಸ್ಥ ಹಾಗೂ ಇದರಲ್ಲಿರುವ ಕೋಸಲತೀರ್ಥ ಇವುಗಳ ಮಹಿಮೆಯನ್ನು ಮಾತ್ರ ಯಾರ ಬಾಯಿಯಿಂದಲೂ ಕೇಳಲಿಲ್ಲ. ಬದರಿಕಾಶ್ರಮವು ಸಾಕ್ಷಾತ್ ನಾರಾಯಣದೇವರ ಮನೆ, ಮುಕ್ತಿಕ್ಷೇತ್ರ. ಅಲ್ಲಿ ನಿಂತು ತಪಸ್ಸನ್ನು ಮಾಡಿದ ಎಲ್ಲ ಯೋಗಿಗಳೂ ಮುಕ್ತರಾಗಿದ್ದಾರೆ. ಪರಮ ಪವಿತ್ರವಾದ ಸಾಕ್ಷಾತ್ ಶ್ರೀಹರಿಯು ನೆಲೆನಿಂತ ತಾಣವಾದ ಬದರೀಕ್ಷೇತ್ರವನ್ನು ಬಿಟ್ಟು ಇಂದ್ರಪ್ರಸ್ಥದಲ್ಲಿನ ಕೋಸಲತೀರ್ಥಕ್ಕೆ ಹೋಗಿ ಸಾಧನೆ ಮಾಡು ಎಂದು ಹೇಳಿದರೆ ಮಾತ್ರ ನಾನು ಕೋಸಲತೀರ್ಥಕ್ಕೆ ಬರುವೆನು.

ಈ ರೀತಿಯಾಗಿ ಆ ಬ್ರಾಹ್ಮಣನು ನುಡಿದ ಕೂಡಲೇ ಶಂಖಚಕ್ರ ಗದಾಪದ್ಮಧಾರಿಯಾದ ವನಮಾಲಿಯಿಂದ ಅಲಂಕೃತನಾದ ಚತುರ್ಭುಜನಾದ ಸ್ವಾಮಿ ಶ್ರೀಹರಿಯು ಅಲ್ಲಿ ಪ್ರಕಟನಾದ. ಆ ಬ್ರಾಹ್ಮಣನನ್ನು ಕುರಿತು ಮಾತನಾಡಿದ.

**ವಿಷ್ಣು :-** ವಿಪ್ರ, ಈ ಇಂದ್ರಪ್ರಸ್ಥವು ಅತ್ಯುತ್ಕೃಷ್ಟವಾದದ್ದು. ಬ್ರಹ್ಮಜ್ಞಾನಿಗಳಲ್ಲಿ ಮಹಾದೇವ, ನದಿಗಳಲ್ಲಿ ಗಂಗೆ, ಗಿರಿಗಳಲ್ಲಿ ಹಿಮಾಲಯ, ಪಕ್ಷಿಗಳಲ್ಲಿ ಗರುಡ, ದೇವತೆಗಳಲ್ಲಿ ಇಂದ್ರ, ವಿಷ್ಣುಭಕ್ತರಲ್ಲಿ ನಾರದ, ತೇಜಸ್ವಿಗಳಲ್ಲಿ ಸೂರ್ಯ,

ಸಮುದ್ರಗಳಲ್ಲಿ ಕ್ಷೀರಸಮುದ್ರ, ವರ್ಣಗಳಲ್ಲಿ ಬ್ರಾಹ್ಮಣ ಹೇಗೆ ಶ್ರೇಷ್ಠರೋ, ಅತ್ಯುತ್ತಮರೆಂದು ಸರ್ವಮಾನ್ಯರೋ, ಈ ಇಂದ್ರಪ್ರಸ್ಥ ಕ್ಷೇತ್ರದಲ್ಲಿನ ಕೋಸಲ ತೀರ್ಥವು ಸರ್ವತೀರ್ಥ ಕ್ಷೇತ್ರಗಳಿಗಿಂತ ಅತ್ಯುತ್ತಮ. ವಿಷ್ಣುವಿನ ಅನೇಕ ಅವತಾರಗಳಲ್ಲಿ ಶ್ರೀರಾಮಚಂದ್ರಾವತಾರವು ಹೇಗೆ ಜನಪ್ರಿಯವಾಗಿದೆಯೋ, ಈ ಇಂದ್ರಪ್ರಸ್ಥತೀರ್ಥವು ಸರ್ವಜನಪ್ರಿಯವಾಗಿದೆ. ನಿಷ್ಕಾಮ, ಅಥವಾ ಸಕಾಮ ಬುದ್ಧಿಯಿಂದ ಇಲ್ಲಿ ಸ್ನಾನಮಾಡಿದವರಿಗೆ ಅತ್ಯುತ್ತಮ ಗತಿಯನ್ನು ನಾನು ನೀಡುತ್ತೇನೆ.

ಈ ರೀತಿಯಾಗಿ ಸಾಕ್ಷಾತ್ ಭಗವಂತನ ವಚನವನ್ನು ಕೇಳಿ ಆ ವಿಪ್ರನು ಗರುಡಾರೂಢ ಸ್ವಾಮಿಯೆದುರು ಅಡ್ಡಬಿದ್ದ. ನಮಸ್ಕಾರ ಮಾಡಿ ಕೈ ಮುಗಿದು ಪ್ರಾರ್ಥನೆ ಸಲ್ಲಿಸುವಷ್ಟರಲ್ಲಿಯೇ ಶ್ರೀಹರಿಯು ಅಂತರ್ಧಾನನಾಗಿದ್ದ. ಅನಂತರ ಆ ಬ್ರಾಹ್ಮಣನು ಬದರಿಗೆ ಹೋಗುವದನ್ನು ರದ್ದುಪಡಿಸಿ ಪುನಃ ಕೋಸಲಕ್ಷೇತ್ರಕ್ಕೆ ತಿರುಗಿದ. ಎಲ್ಲ ಯಾತ್ರಿಕರಿಗೂ, ತನಗೆ ವಿಷ್ಣುವು ಸಾಕ್ಷಾತ್ ದರ್ಶನವಿತ್ತು ಹೇಳಿದುದನ್ನು ತಿಳಿಸಿದ. ಅದನ್ನು ಕೇಳಿ ಅಲ್ಲಿರುವ ಯಾತ್ರಿಕರು ಕೋಸಲತೀರ್ಥದ ದಂಡೆಯಲ್ಲಿಯೇ ಸರ್ವಪರಿತ್ಯಾಗ ಭಾವದಿಂದ ಬಹುಕಾಲ ತಪಸ್ಸನ್ನು ಆಚರಿಸುತ್ತಲೇ ಮರಣ ಹೊಂದಿದರು.

ಅವರ ಈ ತಪೋನುಷ್ಠಾನಕ್ಕೆ ಮೆಚ್ಚಿದ ಶ್ರೀಹರಿಯು ಗರುಡನನ್ನು ಏರಿಕೊಂಡು ಶೀಘ್ರವಾಗಿ ಅಲ್ಲಿಗೆ ಬಂದನು. ಪರಮಾತ್ಮನ ದರ್ಶನಮಾಡಿದ ಆ ಎಲ್ಲ ಬ್ರಾಹ್ಮಣರು ಭಕ್ತಿತುಂಬಿದ ಗದ್ಗದ ಕಂಠದಿಂದ ಅವನನ್ನು ಸ್ತೋತ್ರಮಾಡಿದರು.

ನಮಸ್ತೇಽತಸೀ ಪುಷ್ಪಸಂಕಾಶಭಾಸಂ ತನುಂ ಬಿಭ್ರತ್ ಪೀತವಾಸೋ ವೃತಾಯ ।
ಲಸತ್ ಕುಂಡಲಪ್ರೋತ ನಾನೋಪಲಾಯ ಶ್ರುತೌ ಚಂಚಾಲ
ವ್ಯಾಪಿನೀಲಾಂಬುದಾಯ ।

ಭಕ್ತಿಸ್ತ್ವದೀಯಾ ಕಿಲ ಕಲ್ಪವಲ್ಲೀ ಸಮಾಶ್ರಿತಾ ಯ ಚ್ಛತಿ ಚಿತ್ತವಾಂಛಿತಮ್ ।
ಯಥಾ ತಥೈಷಾ ತವ ಕೋಶಲಾ ವಿಭೋ । ಜನ್ಯೈರುಭೇ ತೇ ಕೃಪಯಾ ತವಾಪ್ಯತೇ ॥

ವಂದಾಮಹೇ ತೇ ಚರಣಾರವಿಂದಂ ವೃಂದಾರಕೈರ್ವಂದಿತ ಮೀಶ್ವರರಾದ್ಯೈ ।
ವಿಚಿಂತ್ಯಮಾನಂ ಹೃದಿ ಯೋಗಿವೃಂದ್ಯೈಃ ಕಂದಂ ಪರಾನಂದಭುವೋ ವಿಮುಕ್ತೇಃ ॥

ಪ್ರಾಪ್ತಾಃ ಕಾಮಂ ಶ್ರೀಪತೇ ತ್ವತ್ಸರೂಪಂ ಶ್ರೀವತ್ಸಾದ್ಯೈರ್ಲಕ್ಷಿತಂ ಬಾರುಚಿಹ್ನೈಃ ।
ವಾಂಛಾಮಸ್ತೇ ದಾಸಭಾವಂ ತಥಾಪಿ ಪ್ರಾಪ್ತಂ ಸರ್ವೈರಾದೃತಂ ನಾರದಾದ್ಯೈಃ ।

ಯತ್ಸೌಖ್ಯಂ ತೇ ದಾಸಭಾವಂ ಗತಾನಾಂ ತನ್ನೋ ಲಕ್ಷ್ಮ್ಯಾ ವಕ್ಷಸೋಽತರ್ವಸಂಸ್ಥಾಃ।
ತಜ್ಜಾನಾತಿ ಶ್ರೀಪತೇ ಶ್ರೀಮಹೇಶೋ ನಾನ್ಯೋ ಲೋಕೇ ಯೇನ ತಚ್ಚಾನುಭೂತಮ್।

ಮಧ್ಯೇಽಸ್ಮಾಕಂ ಶ್ರೀಪತೇ ಸೇವಕಾನಾಂ ನೀರಾಗಾಣಾಮಪ್ಯಸೌ ಮಾನನೀಯಃ ।
ಅತ್ಮಾತ್ತಂ ತೇ ನಾರದಾದ್ಯಾ ಮುನೀಶಾಃ ತ್ವದ್ಭಕ್ತ್ಯಾಪ್ತೈರ್ಲೋಕನಾಥಂ ಭಜಂತೇ ।

ಕಾಮಂ ಬ್ರಹ್ಮಾನಂದಮಾಪ್ತೋಂತರಾತ್ಮಾ ತ್ವದ್ದಾಸ್ಯೇ ನೋ ತೃಪ್ತಿ ಮಾಯಾತಿ ಶಂಭುಃ।
ವಾರಂ ವಾರಂ ತ್ವದ್ಗುಣಾ ನಾಗ್ರಹೀತುಂ ನೃತ್ಯತ್ಯುಚ್ಚೈಸ್ತ್ವತ್ಪರೋ ಭಾವಯುಕ್ತಃ ।

**ಹೇತೋರಸ್ಮಾತ್ ದೇಹಿನಃ ಸ್ವಸ್ಯ ದಾಸ್ಯಂ ಯತ್ರಾಪ್ತಾನಾಂ ನೋರ್ಮಯಃ ಸಂಭವಂತಿ।**
**ತ್ವಚ್ಚಿಂಹ್ನಾಂಗೌ ದ್ವಾರಪಾಲೌ ತ್ವದೀಯೌ ಮೋಹದ್ಧಾಮ ಪ್ರಾಪ್ಯತೌ ತತ್ಸ್ವಕೀಯಮ್।**
**ಲೋಕಾದಸ್ಮಾದಂಶರೇಣ ತ್ವದಿಚ್ಛಾಂ ತ್ವಲ್ಲೋಕಾನಾಂ ನೋದ್ಯತ ಚಾಽಽಶುಪಾತಃ ।**
**ಕೋ ಜಾನೀಯಾತ್ ತಾವಕೀ ಮತ್ರ ಮಾಯಾಂ ದುರ್ವಿಜ್ಞೇಯಾಂ**
**ಬ್ರಹ್ಮಶರ್ವಾದಿದೇವೈಃ ॥**

''ಅಗಸೀಹೂವಿನಂತೆ ಕಪ್ಪು ಬಣ್ಣದಿಂದ ಒಪ್ಪುವ ದೇಹಕಾಂತಿಯುಳ್ಳ, ಪೀತಾಂಬರವನ್ನು ಧರಿಸಿದ ಮಣಿಮಯ ಕುಂಡಲಗಳಿಂದ ಹೊಳೆಯುವ ನೀಲಮೇಘ ಶ್ಯಾಮ ಸುಂದರನಾದ ಮಹಾವಿಷ್ಣುವಿಗೆ ನಮಸ್ಕಾರ. ಭಗವನ್, ನಿನ್ನ ಭಕ್ತಿಯು ಒಂದು ಕಲ್ಪವೃಕ್ಷವಿದ್ದಂತೆ. ಅದನ್ನು ಆಶ್ರಯಿಸಿದವರ ಮನೋರಥಗಳೆಲ್ಲವೂ ಪೂರ್ಣವಾಗುತ್ತವೆ. ಈ ಕೋಸಲತೀರ್ಥವೂ ಸಹ ಆ ಕಲ್ಪವೃಕ್ಷದಂತೆ ಇಷ್ಟಾರ್ಥಪ್ರದವೇ ಸರಿ. ಆದುದರಿಂದ ಆ ಕಲ್ಪವೃಕ್ಷ ಹಾಗೂ ಈ ಕೋಸಲಾತೀರ್ಥ ಎರಡೂ ನಿನ್ನ ಕೃಪೆಯಿಂದಲೇ ಜನರಿಂದ ಹೊಂದಲ್ಪಡುತ್ತವೆ. ಭಗವನ್, ಮಹಾದೇವರೇ ಮೊದಲಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟ ಹಾಗೂ ಎಲ್ಲ ಯೋಗಿಗಳಿಂದಲೂ ಧ್ಯಾನಮಾಡಲ್ಪಡುವ, ಪರಮಾನಂದ ರೂಪವಾದ, ಮೂಲಕಾರಣವಾದ ನಿನ್ನ ಎರಡೂ ಚರಣಾರವಿಂದಗಳನ್ನು ನಾವು ವಂದಿಸುತ್ತೇವೆ. ಸ್ವಾಮಿ, ಲಕ್ಷ್ಮೀಪತಿಯಾದ ನಾರಾಯಣ, ನಿನ್ನ ಪರಮಾನುಗ್ರಹದಿಂದ ನಾವು ಶ್ರೀವತ್ಸ ಚಿಹ್ನಗಳಿಂದ ಲಕ್ಷ್ಮೀಪತಿಯಾದ ನಿನ್ನ ಸಾರೂಪ್ಯವನ್ನು ಹೊಂದಿದ್ದೇವೆ. ಆದರೂ ಸಹ ನಮಗೆ ನಿನ್ನ ಸಾದೃಶ್ಯ, ಸಾರೂಪ್ಯ ಇದಾವುದೂ ವಾಂಛಿತವಲ್ಲ. ನಮಗೆ ನಾರದಾದಿಗಳಿಂದ ಹೊಂದಲ್ಪಟ್ಟ ನಿನ್ನ ದಾಸ್ಯಭಾವವನ್ನೇ ಅಪೇಕ್ಷೆಮಾಡುತ್ತೇವೆ.

ನಿನ್ನ ಸಾರೂಪ್ಯಕ್ಕಿಂತ ನಮಗೆ ನಿನ್ನ ದಾಸ್ಯತ್ವದಲ್ಲಿಯೇ ಹೆಚ್ಚಿನ ಪ್ರೀತಿ, ಅಪೇಕ್ಷೆ ಇರುತ್ತದೆ. ಭಗವನ್ ಶ್ರೀಪತಿಯೇ, ನಿನ್ನ ಕಿಂಕರತ್ವವನ್ನು ಹೊಂದಿದ ನಮಗೆ ಯಾವ ತೃಪ್ತಿ ದೊರೆಯುವದೋ, ನಿನ್ನ ಹೃದಯದಲ್ಲಿ ವಾಸಿಮಾಡಿದ ಲಕ್ಷ್ಮೀದೇವಿಗೂ ಆ ಆನಂದ ದೊರೆಯುವದೋ, ಇಲ್ಲವೋ, ಸಂಶಯ. ನಮಗಂತೂ ನಿನ್ನ ದಾಸ್ಯದಲ್ಲಿ ಪರಮಾನಂದದ ಅನುಭವವಾಗುತ್ತಲಿದೆ. ನಿನ್ನ ದಾಸ್ಯಭಾವದ ನಿಜವಾದ ಅನುಭವ, ಪೂರ್ಣ ಸುಖ ಮಹಾದೇವನಿಗೊಬ್ಬನಿಗೇ ಇದೆ. ಮತ್ತು ಶ್ರೀಹರಿಯ ಕೈಂಕರ್ಯದ ಸುಖವನ್ನು ಪರಮೇಶ್ವರನೊಬ್ಬನೇ ಪೂರ್ಣವಾಗಿ ಅನುಭವಿಸಿದ್ದಾನೆ. ಆದುದರಿಂದ ಶ್ರೀಹರಿ, ನಿನ್ನ ಅಚ್ಛಿನ್ನಭಕ್ತರಾದ, ವಿರಕ್ತ ಶಿಖಾಮಣಿಗಳಾದ, ವೈಷ್ಣವಾಗ್ರೇಸರರಾದ ಭಕ್ತರಲ್ಲಿ ಮಹಾದೇವರು ಎಲ್ಲ ಮುನಿಮಹರ್ಷಿಗಳಿಂದ ಮಾನಿತನಾಗಿದ್ದಾನೆ. ಪರಿಭಕ್ತರಲ್ಲಿ ಅವನೇ ಶ್ರೇಷ್ಠ. ಆದುದರಿಂದಲೇ ನಾರದಾದಿ ಮಹರ್ಷಿಗಳು ನಿನ್ನಲ್ಲಿ ಭಕ್ತಿ ಹಾಗೂ ಅತ್ಯರ್ಥ ಪ್ರಸಾದವನ್ನು ಹೊಂದಲಿಕ್ಕಾಗಿ ಲೋಕನಾಥನಾದ ಆ ಮಹಾದೇವನನ್ನೇ ಭಜಿಸುತ್ತಾರೆ. ಆಶ್ರಮಿಸುತ್ತಾರೆ. ಆ ಪರಮೇಶ್ವರನು ಬ್ರಹ್ಮಾನಂದವನ್ನು ಹೊಂದಿ ತೃಪ್ತಿಯಲ್ಲಿದ್ದರೂ ಸಹ ಅವನಿಗೆ ನಿನ್ನ ಕೈಂಕರ್ಯವನ್ನು ಎಷ್ಟು ಎಸಗಿದರೂ ಕಡಮೆ. ನಿನ್ನ ದಾಸ್ಯವನ್ನು ಎಷ್ಟು ಪರಿಯಿಂದ ಮಾಡಿದರೂ ಅವನಿಗೆ ಅಲ್ಪಬುದ್ಧಿಯಿಲ್ಲ. ಆದುದರಿಂದಲೇ ನಿನ್ನ ಗುಣಗಳನ್ನು ಹಗಲಿರುಳು ನೆನೆಯುತ್ತ ಭಕ್ತಿಭಾವದ ಪರವಶತೆಯಿಂದ ನರ್ತನವನ್ನು ಮಾಡುತ್ತಲೇ ಇರುತ್ತಾನೆ.

ಹೀಗೆ ಎಲ್ಲ ಯೋಗಿಗಳಿಂದಲೂ, ಬ್ರಾಹ್ಮಣರಿಂದಲೂ ಸನ್ಯಾಸಿಗಳಿಂದಲೂ ಸ್ತುತಿಸಲ್ಪಟ್ಟ ಶ್ರೀಹರಿಯು ಸಂತುಷ್ಟನಾಗಿ ಅವರನ್ನು ಕುರಿತು ಮೇಘ ಗಂಭೀರವಾದ ಧ್ವನಿಯಿಂದ ಮಾತನಾಡಿದ.

**ಶ್ರೀಹರಿ:-** ವಿಪ್ರೋತ್ತಮರೇ, ನೀವು ಈ ಕೋಸಲತೀರ್ಥದ ಪ್ರಭಾವದಿಂದ ನನ್ನ ಸಾರೂಪ್ಯ ಹೊಂದಿದಿರಿ. ಈ ಸಾರೂಪ್ಯವಿದ್ದರೂ ನನ್ನ ದಾಸ್ಯಭಾವವನ್ನು ನೀವು ಬೇಡುತ್ತಲಿರುವಿರಿ. ನಿಮ್ಮ ಅಪೇಕ್ಷೆಯಂತೆ ನನ್ನ ಸಾರೂಪ್ಯ ಹಾಗೂ ಕೈಂಕರ್ಯ ಎರಡನ್ನೂ ನಿಮಗೆ ಕರುಣಿಸಿದ್ದೇನೆ. ಈ ಕ್ಷೇತ್ರವು ದಕ್ಷಿಣಕೋಸಲ ಎಂದು ಪ್ರಸಿದ್ಧವಾಗುವದು. ದಕ್ಷಿಣದೇಶದಿಂದ ಯಾತ್ರೆಗಾಗಿ ಬಂದ ನೀವು ಇಲ್ಲಿಯೇ ನಿಂತು ನನ್ನ ದರ್ಶನವನ್ನು ಮಾಡಿ ಉದ್ಧೃತರಾದದ್ದರಿಂದ ನಿಮ್ಮ ಹೆಸರಿನಿಂದ ಇದು ದಕ್ಷಿಣಕೋಸಲ ಎಂದು ಪ್ರಸಿದ್ಧವಾದ ನಾನು ರಾಮಾವತಾರವನ್ನು ಮಾಡಿದಾಗ, ದಶರಥನಿಂದ ಜನಿಸಿ ರಾವಣನನ್ನು ಸಂಹರಿಸುತ್ತೇನೆ. ಆ ಪಟ್ಟಣವು ಉತ್ತರ ಕೋಸಲ ಎಂದು ಜಗತ್ತಿನಲ್ಲಿ ಪ್ರಸಿದ್ಧವಾಗಿರುತ್ತದೆ. ಯಾರು ಈ ದಕ್ಷಿಣ ಕೋಸಲದಲ್ಲಿ ನಿಂತು ದಿವ್ಯವಾದ ಬ್ರಹ್ಮಜ್ಞಾನವನ್ನು ಸಂಪಾದಿಸಿ ಈ ತೀರ್ಥದಲ್ಲಿ ಸ್ನಾನಮಾಡಿ ಭಗವದಾರಾಧನೆಯನ್ನು ಮಾಡುವರೋ, ಅವರು ವೈಕುಂಠಲೋಕವನ್ನು ಹೊಂದುತ್ತಾರೆ. ಜ್ಞಾನವಿಲ್ಲದೇ ಇದ್ದರೂ ಈ ಕ್ಷೇತ್ರದಲ್ಲಿ ನೆಲೆಸಿ, ಇಲ್ಲಿ ಸ್ನಾನಮಾಡಿದವರು ಸ್ವರ್ಗಲೋಕವನ್ನು ಪಡೆಯುತ್ತಾರೆ. ಈ ದಕ್ಷಿಣಕೋಸಲವು ಉತ್ತರಕೋಸಲಕ್ಕಿಂತ ಹತ್ತುಪಟ್ಟು ಹೆಚ್ಚಿನ ಪುಣ್ಯಪ್ರಭಾವವುಳ್ಳದ್ದು. ಆ ಉತ್ತರ ಕೋಸಲದಲ್ಲಿ ಮರಣಹೊಂದಿದವರನ್ನು ನನ್ನ ಪಾರ್ಷದರು ಬಂದು ವೈಕುಂಠಲೋಕಕ್ಕೆ ಕರೆದೊಯ್ದಿರುತ್ತಾರೆ. ಈ ದಕ್ಷಿಣ ಕೋಸಲದಲ್ಲಿ ಮರಣಹೊಂದಿದವರನ್ನು ಮಾತ್ರ ಸ್ವಯಂ ನಾನೇ ಬಂದು ನನ್ನ ಗರುಡನ ಮೇಲೆ ಕೂಡಿಸಿಕೊಂಡು, ಮೋಕ್ಷ ಮಂದಿರಕ್ಕೆ ಕರೆದೊಯ್ಯುತ್ತೇನೆ.

ಹೀಗೆ ಮಹಾವಿಷ್ಣುವು ಅಲ್ಲಿ ನೆರೆದ ಬ್ರಾಹ್ಮಣರನ್ನು, ಭಕ್ತರನ್ನು ಕುರಿತು ಮಾತನಾಡಿ ವೈಕುಂಠಲೋಕಕ್ಕೆ ತೆರಳಿದ. ಅಂದಿನಿಂದ ಈ ಕ್ಷೇತ್ರವು ದಕ್ಷಿಣಕೋಸಲ ಎಂದು ಜಗತ್ತಿನಲ್ಲಿ ಪ್ರಸಿದ್ಧವಾಗಿರುತ್ತದೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಇಂದ್ರಪ್ರಸ್ಥ ಹಾಗೂ ಕೋಶಲಾ ಮಾಹಾತ್ಮ್ಯ ವರ್ಣನ ಎಂಬ ನೂರ ತೊಂಬತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

## ಕುಶಲ ಬ್ರಾಹ್ಮಣ ಪತ್ನಿಯ ದುರಾಚಾರ, ಮಧುವನ ತೀರ್ಥದ ಮಾಹಾತ್ಮ್ಯ, ಹಲ್ಲಿಯ ಯೋನಿಯಲ್ಲಿದ್ದ ಅವಳ ಉದ್ಧಾರ, ಮಗನ ಮುಖಾಂತರ

ಅಧ್ಯಾಯ - ೧೫೫

**ನಾರದ:-** ಶಿಬಿರಾಜ, ದೇವೇಂದ್ರನ ಮೇಲೆ ಪರಿತುಷ್ಟನಾದ ಶ್ರೀಹರಿಯು ಇಲ್ಲಿ ಮಧುವನ ಎಂಬ ಒಂದು ವನವನ್ನು ನಿರ್ಮಿಸಿದ್ದಾನೆ. ಅದರಲ್ಲಿ ವಿಶ್ರಾಂತಿ ತೀರ್ಥವೆಂಬ ಒಂದು ಪವಿತ್ರವಾದ ತೀರ್ಥವು ಇರುತ್ತದೆ. ಈ ಪುಣ್ಯತೀರ್ಥದಲ್ಲಿ ಸ್ನಾನ ಮಾಡಿ. ಶ್ರೀಹರಿಯನ್ನು ಆರಾಧಿಸುವವರು ಮರಣಾನಂತರ ಮೋಕ್ಷವನ್ನು ಹೊಂದುತ್ತಾರೆ. ಇದೇ ವಿಶ್ರಾಂತಿ ತೀರ್ಥದ ದಂಡೆಯ ಮೇಲೆ ಶ್ರೀಹರಿಯು ಕಂಸನನ್ನು ಸಂಹರಿಸಿದ. ಈ ತೀರ್ಥದ ಮಹಾಮಹಿಮೆಯನ್ನು ನಿನಗೆ ಹೇಳುತ್ತೇನೆ ಕೇಳು.

ಹಿಮಾಚಲದ ತಪ್ಪಲ ಪ್ರದೇಶದಲ್ಲಿ ಒಂದು ಬೇಡರ ನಗರ. ಅದಕ್ಕೆ ಕಿರಾತನಗರ ಎಂದೇ ಹೆಸರು. ಅದರಲ್ಲಿ ಕುಶಲ ಎಂಬೊಬ್ಬ ಬ್ರಾಹ್ಮಣ. ಮಹಾದರಿದ್ರ. ಅವನ ಹೆಂಡತಿ ದುರಾಚಾರ, ವ್ಯಭಿಚಾರ, ವಂಚನೆ ಮುಂತಾದ ದುರ್ಗುಣಗಳ ತವರು. ಆದರೆ ಅವಳ ಗಂಡನಾದ ಕುಶಲ ಬ್ರಾಹ್ಮಣ ಮಡದಿಯ ಮೋಹಕ ಸೌಂದರ್ಯದಿಂದ ಮುಗ್ಧನಾಗಿದ್ದ.

ಆದರೂ ಸ್ವೈರಿಣಿಯೂ ಜಾರಿಣಿಯೂ ಆದ ಆ ಮಡದಿಯೊಡನೆ ಮನೆಯಲ್ಲಿ ಬಾಳಲಾರದೇ, ಜನರ ಅಪಶಬ್ದ, ವ್ಯಂಗೋಕ್ತಿಗಳನ್ನು ತಾಳಲಾರದೇ ದುಃಖಿಸಹಿಸುತ್ತ, ನಂಜುನುಂಗಿ ಒಳಗೊಳಗೇ ನೋಯುತ್ತಿದ್ದ. ಆ ಬ್ರಾಹ್ಮಣ ಅದೇ ಚಿಂತೆಯಿಂದ ಒಂದು ರಾತ್ರಿ ಮರಣಹೊಂದಿದ. ಇದರಿಂದ ಆ ಕುಲಟೆಗೆ ದುಃಖವಾಗದಿದ್ದರೂ, ರಾಜಾಧಿಕಾರಗಳ ಹೆದರಿಕೆಯಿಂದ ಚಿಂತೆಯಾಯಿತು. ಅದರಿಂದ ಅವಳು ತನ್ನ ಪತಿಯ ಮೃತಶರೀರವನ್ನು ಮೊಗಸಾಲೆಯಲ್ಲಿ ತಂದು ಹಾಕಿ ಅದನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ದೊಡ್ಡ ಧ್ವನಿಯಿಂದ ಶೋಕಾಕ್ರಾಂತವಾದವಳಂತೆ ಅಳತೊಡಗಿದಳು. ಜನರು ನೆರದರು. ಕೂಡಿದ ಜನರೆಲ್ಲರನ್ನೂ ನೋಡಿ "ನಾನು ನಿನ್ನನ್ನು ಬಿಟ್ಟು ಬಾಳಲಾರೆ ನಿನ್ನೊಡನೆ ಸಹಗಮನ ಮಾಡುತ್ತೇನೆ" ಎಂದು ವಿಲಾಪವನ್ನು ಮೊದಲು ಮಾಡಿದಳು. ಮತ್ತು ತನ್ನ ಸಮೀಪದಲ್ಲಿದ್ದ ಪ್ರಾಣಪ್ರಿಯ ಗೆಳತಿಯರನ್ನು ಒಳಗೆ ಕರೆದೊಯ್ದು, ಅವರಿಗೆ ಹೀಗೆ ಪಿಸುನುಡಿದಳು. "ನಾನು ಸತೀ ಹೋಗುತ್ತೇನೆ ಎಂದು ಎಲ್ಲೆಡೆ ಪ್ರಚಾರ ಮಾಡಿ ರಾಜನ ಕಿವಿಗೂ ಮುಟ್ಟಿಸಿರಿ, ಮತ್ತು ನಾನು ಆ ಸಮಯದಲ್ಲಿ ಸತೀ ಹೋಗಲು ಪ್ರಯತ್ನಿಸುವವಳಂತೆ ನಟಿಸುತ್ತೇನೆ. ನೀವು ನನ್ನನ್ನು ಬಲಾತ್ಕಾರದಿಂದ ತಡೆದು ಈಚೆ ತನ್ನಿರಿ."

ಅದರಂತೆ ಅವಳ ಹಿಂದೆ ಉಪಕೃತರಾದ ಆ ಗೆಳತಿಯರು, ಇವಳು ಸಹಗಮನ ಮಾಡುತ್ತೇನೆಂದು ಗಟ್ಟಿಯಾಗಿ ವಿಲಪಿಸತೊಡಗಿದಾಗ ಅವಳನ್ನು ತಡೆದು ಜನರೆಲ್ಲರ ಎದುರಿಗೆ ಮಾತನಾಡಿದರು.

**ಸಖಿಯರು :-** "ಸುಂದರಿ, ನೀನು ವ್ಯರ್ಥವಾಗಿ ಏಕೆ ಶೋಕ ಮಾಡುವೆ? ಸಹಗಮನಕ್ಕೆ ಏಕೆ ಸಿದ್ಧಳಾಗಿರುವೆ? ಬಂಗಾರ ಬಣ್ಣದ ಇಂಥ ನಿನ್ನ ಚೆಲುವಿನ ದೇಹವನ್ನು

ಬೆಂಕಿಯಲ್ಲಿ ಈಡಾಡ ಬೇಡ. ಈ ದರಿದ್ರನಾದ ಮತ್ತು ಯಾವ ವ್ಯವಸಾಯ ಉದ್ಯೋಗವನ್ನು ಮಾಡದ ಗಂಡನಿಂದ ನೀನು ಏನು ಸುಖ ಕಂಡೆ? ಎಂದೂ ಮನೆಗೆ ದ್ರವ್ಯ ತಾರದೇ, ಕುಟುಂಬ ರಕ್ಷಣೆಮಾಡದೇ ಇದ್ದ ಆ ಪತಿಯ ಸಲುವಾಗಿ ನೀನೇಕೆ ಪ್ರಾಣಕೊಡುತ್ತಿ? ಹೇಗೂ ನಿನಗೊಬ್ಬ ಉತ್ತಮ ಮಗನಿರುತ್ತಾನೆ. ಅವನನ್ನು ನೀನು ರಕ್ಷಣೆ ಮಾಡು. ನೀನು ಸತಿ ಹೋದರೆ ಈ ಮಗನನ್ನು ರಕ್ಷಿಸುವವರು ಯಾರು? ನೀನು ಮರಣ ಹೊಂದಿದರೆ ನಾವೆಲ್ಲರೂ ನಿನ್ನೊಡನೆಯೇ ಬೆಂಕಿಯಲ್ಲಿ ಹಾರಿಕೊಳ್ಳುತ್ತೇವೆ. ಆದುದರಿಂದ ನೀನು ಸಹಗಮನಕ್ಕೆ ಹೋಗದೇ ಮನೆಯೆಡೆಗೆ ಮಗನೆಡೆಗೆ ಲಕ್ಷ್ಯಕೊಡು. ಈ ಮಗನು ಬೆಳೆದು ದೊಡ್ಡವನಾಗಿ ನಿನಗೆ ಸಂತೋಷ ನೀಡುತ್ತಾನೆ. ನಿನ್ನ ಪರಿವಾರದವರೂ ನೀನು ಬದುಕಿರಬೇಕೆಂದು ಅಪೇಕ್ಷೆಸುತ್ತಿದ್ದಾರೆ. ಬದುಕಿದ್ದು ಅವರ ಮನಸ್ಸಿಗೂ ಸಮಾಧಾನವನ್ನುಂಟು ಮಾಡು.''

ಗೆಳತಿಯರ ಈ ಮಾತನ್ನು ಕೇಳಿ ಆ ಪಾಪಿಷ್ಠ ಕುಲಟೆಯು ಮಾತನಾಡಿದಳು ''ನೀವು ಹೇಳಿದ ಮಾತು ನಿಜ. ಚಿಕ್ಕ ಮಗುವಾದ ಈ ನನ್ನ ಪುತ್ರನನ್ನು ರಕ್ಷಿಸುವದು ನನ್ನ ಕರ್ತವ್ಯ. ಆದರೆ ಇಹಲೋಕ ಹಾಗೂ ಪರಲೋಕಗಳೆರಡರಲ್ಲೂ ಸ್ತ್ರೀಯರಿಗೆ ಮನೆ, ಮಾರು, ಮಕ್ಕಳು, ಎಲ್ಲಕ್ಕಿಂತ ಪತಿಯೇ ಅತ್ಯಂತ ಪ್ರಿಯತಮ. ಧರ್ಮಶಾಸ್ತ್ರದಲ್ಲಿ ಪತಿಯೊಡನೆ ಸಹಗಮನ ಮಾಡಿದ ಸ್ತ್ರೀಯು ಅವನೊಡನೆ ಸ್ವರ್ಗಲೋಕದಲ್ಲಿ ಸುಖದಿಂದ ವಾಸಮಾಡುತ್ತಾಳೆ. ಸ್ತ್ರೀಯರು, ಪತಿಯು ದರಿದ್ರನೇ ಇರಲಿ, ರೋಗಿಷ್ಠನೇ ಇರಲಿ, ಬದುಕಿರಲಿ, ಸತ್ತೇ ಇರಲಿ ಅವನನ್ನು ಅನುಸರಿಸಬೇಕು. ಅವನ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಬಾಳಬೇಕು. ಜೀವನದಲ್ಲೂ, ಮರಣದಲ್ಲೂ ಸತಿಯು ಪತಿಗೆ ಸಹಚಾರಿಣಿ ಆಗಿರಬೇಕು. ಇದು ವೇದದ ಆಜ್ಞೆ. ಇದೆಲ್ಲವನ್ನೂ ವಿಚಾರಮಾಡಿ ಗೆಳತಿಯರೇ, ನಾನು ಮೃತನಾದ ನನ್ನ ಪತಿಯನ್ನು ಅನುಸರಿಸಿ ಸತಿ ಹೋಗಬೇಕೆಂದು ತೀರ್ಮಾನಿಸಿದ್ದೇನೆ. ಈ ನನ್ನ ಮಗನು ತನ್ನ ಭಾಗ್ಯದಿಂದ ಬದುಕಿ ದೊಡ್ಡವನಾಗುತ್ತಾನೆ. ನನಗೆ ಈ ಮಗನಿಂದ ಏನಾಗಬೇಕಾಗಿದೆ? ನನ್ನ ಪತಿಯೇ ನನಗೆ ಸರ್ವಸ್ವ.

**ಗೆಳತಿಯರು :-** ಸಖಿ, ನೀನು ನಿನ್ನ ಪತಿಯೊಡನೆ ಸಹಗಮನ ಮಾಡುವದೇ ನಿಶ್ಚಿತವಾದರೆ ಮೊದಲು ವಿಷಕೊಟ್ಟು ನಮ್ಮನ್ನು ಕೊಂದುಬಿಡು. ನಿನ್ನ ವಿರಹವನ್ನು ತಾಳಿಕೊಂಡು ನಾವು ಬದುಕಿರಲಾರೆವು. ಬದುಕಿರುವವರೆಗೆ ನೀನು ನಿನ್ನ ಪತಿಯನ್ನು ಬಹಳ ಪ್ರೀತಿಯಿಂದ ಪಾಲಿಸಿದೆ. ರಕ್ಷಿಸಿದೆ. ಯೋಗಕ್ಷೇಮವನ್ನು ವಿಚಾರಿಸಿದೆ. ನಿನ್ನ ಪತಿ ಹೇಳಿದ ಒಂದು ಮಾತನ್ನೂ ನೀನು ಮೀರಲಿಲ್ಲ. ಅವನು ನಿನ್ನ ಪಾಲನೆ, ಪೋಷಣೆ ಮಾಡದಿದ್ದರೂ ಅವನಿಗೆ ನೀನು ಅನ್ನ, ಪಾನ ಯಾವುದಕ್ಕೂ ಕೊರತೆಯಾಗದಂತೆ ತ್ಯಾಗ ಭಾವದಿಂದ ಪೋಷಿಸಿದೆ. ನೀನು ಸಂಪಾದಿಸಿದ ದ್ರವ್ಯದಿಂದ ನಿನ್ನ ಗಂಡನು ಬದುಕಿರುವವರೆಗೆ ಸುಖವಾಗಿ ಬಾಳಿದ. ಮುಂದೆ ನಿನ್ನ ಮಗನೂ ಸಹ ನೀನು ದ್ರವ್ಯ ಸಂಪಾದಿಸಿದರೇ ಸುಖವಾಗಿ ಬಾಳಿ ಬದುಕುತ್ತಾನೆ.''

ಹೀಗೆ ಎಲ್ಲ ಗೆಳತಿಯರು ಬಹಳ ಆಗ್ರಹವನ್ನು ಮಾಡಿದ ಬಳಿಕ ಆ ಜಾರಿಣಿಯು ಸಹಗಮನದಿಂದ ನಿವೃತ್ತಳಾಗಿ ಮಗನಿಂದ ಪತಿಯು ಔರ್ಧ್ವದೈಹಿಕ ಸಂಸ್ಕಾರಗಳನ್ನು ಮಾಡಿಸಿದಳು.

ಕೆಲವು ದಿನಗಳು ಕಳೆದ ಬಳಿಕ ಆ ಕುಲಟೆಯು ಬ್ರಾಹ್ಮಣರನ್ನು ಕರೆದು ತನ್ನ ಪ್ರಿಯರಾದ ವಿಟಪುರುಷರು ನೀಡಿದ ಹಣದಿಂದ ತನ್ನ ಮಗನ ಉಪನಯನವನ್ನು ನೆರವೇರಿಸಿದಳು. ಉಪನಯನ ಮಾಡಿಕೊಂಡು ಬಳಿಕ ತತ್ವಜ್ಞಾನೋದಯವಾದ ಆ ಮಗನು ಮನೆಯಿಂದ ಹೊರಟು ಬಿಟ್ಟ. ಸಜ್ಜನರ ಸಹವಾಸಮಾಡಿ, ಭಗವದ್ವಿಷಯಕ ಜ್ಞಾನಸಂಪಾದಿಸಿ ಅಹರ್ನಿಶಿ ಭಗವಂತನನ್ನು ಚಿಂತಿಸುತ್ತ ಅಧ್ಯಾತ್ಮ ಸಾಧನ ಮಾಡಿಕೊಂಡ. ನಿತ್ಯ ನಿರಂತರವೂ ಶ್ರೀಹರಿಯ ಆರಾಧನೆಯನ್ನು ನಿರತಿಶಯ ಶ್ರದ್ಧೆಯಿಂದ ಬದುಕಿರುವವರೆಗೂ ಮಾಡಿ ಈ ಪ್ರಾಕೃತಶರೀರವನ್ನು ತ್ಯಜಿಸಿ ಯೋಗಿಗಮ್ಯವಾದ ಸದ್ಗತಿಯನ್ನು ಹೊಂದಿದ.

ಹೀಗೆ ಮಗನು ಮನೆಬಿಟ್ಟು ಹೊರಟು ಹೋದ ಬಳಿಕ ಆ ಜಾರಿಣೀ ಸ್ತ್ರೀಯು ಮನಸ್ಸಿಗೆ ದುಃಖವೆನಿಸಿದರೂ ಅದೇ ದಿನ ಅನೇಕ ಜಾರರೊಡನೆ ಸರಸಾಲಾಪ, ಸರಸವಿಹಾರ ಮಾಡಿದಳು. ಪ್ರತಿದಿನ ಹೊಸ ಹೊಸ ಪ್ರಿಯಕರರೊಂದಿಗೆ ತನ್ನ ನಿಂದ್ಯವಾದ ಜೀವನವನ್ನು ನಡೆಸಿ ಅವಳಿಗೆ ಅದರಲ್ಲಿಯೇ ಮುಪ್ಪು ಬಂದಿತು. ಅವಳ ರೂಪ, ಸೌಂದರ್ಯ ಎಲ್ಲವೂ ನಷ್ಟವಾಯಿತು. ಅವಳ ಕಳೆಗೆಟ್ಟ ಕಾಯವನ್ನು ಕಂಡು ಅವಳ ಉಪಪುರುಷರೆಲ್ಲರೂ ಅವಳಿಂದ ದೂರವಾದರು. ಮುದಿತನವು ನಖಶಿಖಾಂತವಾಗಿ ಅವಳ ದೇಹವನ್ನು ವ್ಯಾಪಿಸಿತು. ಇಷ್ಟು ದಿನ ಅವಳ ಮನೆಗೆ ಬರುತ್ತಿದ್ದ ಜಾರಪುರುಷರೆಲ್ಲರೂ ದೂರ ಹೋದ ಬಳಿಕ ಅವಳಿಗೆ ಉಪಜೀವನವೇ ಅತ್ಯಂತ ಕಷ್ಟಕರವಾಯಿತು. ಅನಂತರ ಅವಳು ಬೇರೆಯವರ ಮನೆಯಲ್ಲಿ ಸೇವಕಿಯಾಗಿ ಕೆಲಸಕ್ಕೆ ನಿಂತುಕೊಂಡಳು. ಮತ್ತೊಂದು ದಿನ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಆಕಳನ್ನೂ, ಕರುವನ್ನೂ ಕದ್ದು ಅದನ್ನು ಬೇರೆಯವರಿಗೆ ಮಾರಿ ಆ ಹಣದಿಂದ ಕೆಲದಿನ ಉಪಜೀವನ ನಡೆಸಿದಳು. ಹೀಗೆ ಕಂಡವರ ಮನೆಯಲ್ಲಿ ಕಸ, ಮುಸುರೆ, ಬಟ್ಟೆ ಸ್ವಚ್ಛಮಾಡುವದು ಮುಂತಾದ ಕೆಲಸಗಳನ್ನು ಮಾಡುತ್ತ ದಿನಗಳನ್ನು ನೂಕಿದಳು.

ಹೀಗೆ ಹೆರವರ ಮನೆಯಲ್ಲಿ ದುಡಿದು, ದುಃಖದಿಂದ ಹೇಗೋ ಬಾಳು ಸವೆಸುತ್ತಲಿರುವ ಆ ಕುಲಟೆಗೆ ಕೊನೆಗಾಲದಲ್ಲಿ ಕುಷ್ಠರೋಗವು ಅಂಟಿಕೊಂಡಿತು. ಕೈ, ಕಾಲು, ಮೂಗು ಮೊದಲಾದ ಐದು ಅವಯವಗಳಲ್ಲಿ ಕುಷ್ಠರೋಗವು ಸ್ಪಷ್ಟವಾಗಿ ಕಾಣತೊಡಗಿತು. ಒಂದೊಂದೇ ಬೆರಳು ಹಾಗೂ ಉಳಿದ ಅವಯವಗಳು ಕಡಿದು ಕತ್ತರಿಸಿ ಬೀಳತೊಡಗಿದವು. ಅವಳಿಗೆ ಹೊಟ್ಟೆಗೆ ಹಿಟ್ಟು, ಉಡಲು ಬಟ್ಟೆ, ಇಷ್ಟು ಸಹ ಯಾರಿಂದಲೂ ದೊರಕುತ್ತಿರಲಿಲ್ಲ. ಕೊನೆಗೊಂದು ದಿನ ಅವಳು ಯಾವಳೋ ಒಬ್ಬ ದಯಾಳುವಾದ ದಾಸಿಯಿಂದ ಅಂಗಡಿಯ ಸಾಲುಗಳು ಇರುವಲ್ಲಿ ತಂದು ಇರಿಸಲ್ಪಟ್ಟಳು. ಅವಳು ಆ ವ್ಯಾಪಾರ ಮಾಡುವ ಸ್ಥಳದಲ್ಲಿ ಕುಳಿತು ಬೀದಿಯಲ್ಲಿಯೇ ಒಂದು ಸ್ಥಳವನ್ನು ತಾನು ಮಾಡಿಕೊಂಡು ಹೋಗಬರುವ ಜನರನ್ನು ಅಂಗಲಾಚಿ ಹಣ ಕೇಳುತ್ತಿದ್ದಳು. ಕುಷ್ಠರೋಗ ಹಿಡಿದ ಅವಳನ್ನು ನೋಡಿ ದೂರದಿಂದಲೇ ಅಸಹ್ಯಪಟ್ಟು, ಅಲ್ಪಸ್ವಲ್ಪ ಎಸೆದು ಮುಖತಿರುವಿಕೊಂಡು ಹೋಗುತ್ತಿದ್ದರು. ಹೀಗೆ ಆ ಪಾಪಿಷ್ಠ ಕುಲಟೆಯು ಈ ಜನ್ಮದಲ್ಲಿ ಮಾಡಿದ ತನ್ನ ಪಾಪಕೃತ್ಯದ ಫಲವನ್ನು ಈ ಜನ್ಮದಲ್ಲೇ ಅನುಭವಿಸುತ್ತ ಅನೇಕ ವರ್ಷಗಳ ವರೆಗೆ ಪದೇ ಪದೇ ಅನ್ನಾಹಾರಗಳಿಲ್ಲದೇ ಉಪವಾಸ ಅನುಭವಿಸಿ, ರೋಗಗಳು ಉಲ್ಬಣಿಸಿ, ಸಂಕಟ, ಪಡಬಾರದ ಕಷ್ಟಪಟ್ಟು ಹೀಗೆಯೇ ಒಂದು ದಿನ ಜನ್ಮ ನೀಗಿದಳು.

ಅನಾಥಳಾದ ಅವಳ ಮರಣಾನಂತರ ಯಾರೂ ಅವಳ ಅಗ್ನಿ ಸಂಸ್ಕಾರ ಮಾಡಲಿಲ್ಲ. ನಂತರ ಊರಲ್ಲಿಯ ಅವಳ ಶವದಿಂದ ಪರಿಸರವೆಲ್ಲ ಕಲುಷಿತವಾಗುವದೆಂದು ಬಗೆದು ಅವಳ ಕೂದಲುಗಳನ್ನು ಎಳೆದು ಹಂತಕರಕಡೆಯಿಂದ ಅವಳ ಶವವನ್ನು ಊರ ಹೊರಗೆ ಹಾಕಿಸಿದರು ಅಲ್ಲಿ ನರಿ, ನಾಯಿ, ಹದ್ದುಗಳು ಕುಕ್ಕಿ ಅವಳ ಉತ್ತರ ಕ್ರಿಯೆಯನ್ನು ಮುಗಿಸಿದವು.

ಅನಂತರ ಆ ಪಾಪಿಷ್ಠೆಯು ಯಾತನಾ ದೇಹವನ್ನು ಹೊಂದಿ ಯಮಪಟ್ಟಣ್ಣಕೆ ಹೋಗಿ ಅಲ್ಲಿ ರೌರವ ನರಕದಲ್ಲಿ ಬಹುಕಾಲದವರೆಗೆ ಯಮಯಾತನೆಗಳನ್ನು ಅನುಭವಿಸಿದಳು. ಸಂಯಮಿನೀಪುರದಲ್ಲಿ ಯಮನು ಅವಳ ಮುಖವನ್ನು ನೋಡದೇ ತನ್ನ ದೂತರಿಗೆ ರೌರವ ನರಕದಲ್ಲಿ ಇವಳನ್ನು ಬೇಯಿಸಿ, ಕುದಿಸಿ, ಹೊಡೆದು, ಬಡಿದು, ಶಿಕ್ಷೆ ವಿಧಿಸುವಂತೆ ಹೇಳಿದ, ಸಾಧ್ಯವಿದ್ದಷ್ಟು ದುಃಖ ಅನುಭವಿಸುವಾಗ, ತಾನು ಬ್ರಾಹ್ಮಣಪತ್ನಿಯಾಗಿದ್ದಾಗ ಮಾಡಿದ ವ್ಯಭಿಚಾರ, ಅನಾಚಾರ, ಪಾಪಾಚಾರಗಳನ್ನು ನೆನೆದು ಕಣ್ಣೀರು ಕರೆಯುತ್ತಲಿದ್ದಳು. ಹೀಗೆ ಒಂದು ಮನ್ವಂತರ ಪರ್ಯಂತ ಘೋರತರವಾದ ದುಃಖಗಳನ್ನು ನರಕದಲ್ಲಿ ಅನುಭವಿಸಿ, ಅವಳು ಈ ಭೂಲೋಕದ ಸ್ಮಶಾನವೊಂದರಲ್ಲಿ ಹಲ್ಲಿಯಾಗಿ ಹುಟ್ಟಿದಳು. ಸತ್ತ ಮಾನವರ ಶವದ ಮಾಂಸವನ್ನು ತಿನ್ನುತ್ತ ನೂರು ವರ್ಷ ಸ್ಮಶಾನದಲ್ಲಿ ವಾಸಮಾಡಿದಳು.

ಹೀಗೆ ಇವಳ ಹೊಟ್ಟೆಯಲ್ಲಿ ಹುಟ್ಟಿ ಉಪನಯನವಾದ ಬಳಿಕ ವಿರಕ್ತ, ಸನ್ಯಾಸಿಯಾಗಿ, ಭಗವದಾರಾಧನೆ ಮಾಡಿ ಆ ಜನ್ಮದಿಂದ ಮುಕ್ತನಾದ ಬ್ರಾಹ್ಮಣನು ಮತ್ತೆ ಬೇರೊಂದು ಬ್ರಾಹ್ಮಣೋತ್ತಮನ ಮನೆಯಲ್ಲಿ ಯೋಗಿಯಾಗಿ ಜನಿಸಿದ. ವಿರಕ್ತ ಶಿಖಾಮಣಿಯಾದ ಅವನು ಆ ಜನ್ಮದಲ್ಲೂ ಬಾಲ್ಯದಲ್ಲೇ ತೀರ್ಥಕ್ಷೇತ್ರ ಯಾತ್ರೆ ಮಾಡುತ್ತ ಹೊರಟಿದ್ದ. ದಾರಿಯಲ್ಲಿ ಸ್ಮಶಾನದಲ್ಲಿ ಶವದ ಮಾಂಸವನ್ನು ತಿನ್ನುತ್ತ ಇರುವ ಹಲ್ಲಿಯನ್ನು ಕಂಡು ಅವನಿಗೆ ಕೂಡಲೇ ಇವಳು ತನ್ನ ಪೂರ್ವಜನ್ಮದ ತಾಯಿ ಎಂಬುದು ತಿಳಿದುಹೋಯಿತು. ಆಗ ಅವನು ತನ್ನ ಮನಸ್ಸಿನಲ್ಲಿ ''ಈ ಭಯಂಕರವಾದ ಜನ್ಮದಿಂದ ಇವಳನ್ನು ಉದ್ಧರಿಸುವೆ. ಪ್ರಾಣಿಗಳಿಗೆ ಎಷ್ಟು ದಿನಗಳು ಕಳೆದರೂ ಮಾಡಿದ ಕರ್ಮ ಅನುಭವಿಸದೇ ತೀರುವುದಿಲ್ಲ. ಇವಳು ನೀಚವಾದ ಆ ಕುಲಟಾಜನ್ಮದಿಂದ ಮರಣ ಹೊಂದಿದ ಬಳಿಕ ಸ್ಮಶಾನದಲ್ಲಿಯೇ ನೂರು ವರ್ಷ ಹಲ್ಲಿಯಾಗಿ ಬಿದ್ದುಕೊಂಡಿದ್ದಳು. ಇನ್ನೂ ಇವಳ ದುಷ್ಕರ್ಮದ ಫಲವನ್ನು ಭೋಗಿಸುವ ಅವಧಿಯ ಪೂರ್ಣ ಮುಗಿದಿಲ್ಲ. ಆ ಪಾಪಾಚಾರದ ದುಷ್ಪರಿಣಾಮದ ಫಲವನ್ನು ಅವಳಿನ್ನೂ ಎಷ್ಟು ಅನುಭವಿಸಬೇಕೋ ತಿಳಿಯದು. ಹೇಗಾದರೂ ಮಾಡಿ ನನಗೆ ಜನ್ಮಾಂತರದಲ್ಲಿ ಜನ್ಮ ಕೊಟ್ಟ ಇವಳನ್ನು ಉದ್ಧಾರ ಮಾಡುವದು ನನ್ನ ಕರ್ತವ್ಯ'' ಹೀಗೆ ವಿಚಾರಮಾಡಿ ಆ ಯೋಗೀ ಮಗನು ತನ್ನ ಪೂರ್ವಜನ್ಮದ ತಾಯಿಯ ಭವಿಷ್ಯದ ಸ್ಥಿತಿಗತಿಗಳನ್ನು ಕಣ್ಮುಚ್ಚಿ ಯೋಗದೃಷ್ಟಿಯಿಂದ ಪರಿಕರಿಸಿದ. ಅನಂತರ ತನ್ನ ಮನಸ್ಸಿನಲ್ಲಿಯೇ ಹೀಗೆ ಅಂದುಕೊಂಡ. ''ಒಂದುನೂರು ಕಲ್ಪ ಹೀಗೆ ದುಃಖಪಟ್ಟರೂ ಇವಳ ದುಃಖವು ಸವೆಯಲಾರದು. ಇವಳಿಗೆ ಉದ್ಧಾರ ಸಾಧ್ಯವೇ ಇಲ್ಲ. ಆದುದರಿಂದ ಇವಳು ಯಾವುದಾದರೂ ತೀರ್ಥದಲ್ಲಿ ಮರಣ ಹೊಂದಬೇಕು. ಇಲ್ಲವೇ ಶ್ರೀಹರಿಗೆ ಶರಣು ಹೋಗಬೇಕು. ಅಥವಾ ನಾನು ಗಯಾಕ್ಕೆ ಹೋಗಿ ವಿಷ್ಣುಪಾದದ ಮೇಲೆ ಇವಳ ಹೆಸರಿನಿಂದ ಪಿಂಡವನ್ನು ಹಾಕಬೇಕು. ಈ ಮೂರು ಹೊರತು ಎಂದೂ ಇವಳ ಉದ್ಧಾರ

ಸಾಧ್ಯವೇ ಇಲ್ಲ. ಈಗ ಸ್ಮಶಾನದಲ್ಲಿ ಹಲ್ಲಿಯಾದ ಇವಳಿಗೆ ಪುಣ್ಯತೀರ್ಥದ ಮರಣವಾಗಲೀ, ಲಕ್ಷ್ಮೀಪತಿಯ ಚರಣಗಳಿಗೆ ಶರಣು ಹೋಗುವದಾಗಲೀ ಶಕ್ಯವಿಲ್ಲ. ಆದುದರಿಂದ ಮೊದಲಿನ ಎರಡು ಉಪಾಯಗಳು ಇಲ್ಲವೆಂದು ಆದ ಬಳಿಕ ಈಗ ಮೂರನೆಯದಾದ ವಿಷ್ಣು ಪಾದದ ಮೇಲೆ ಪಿಂಡದಾನವೊಂದೇ ಇವಳಿಗೆ ತಾರಕ ಉಪಾಯ. ಆದುದರಿಂದ ನಾನೇ ಗಯಾಕ್ಷೇತ್ರಕ್ಕೆ ಹೋಗಿ ನನ್ನ ಜನ್ಮಾಂತರದ ತಾಯಿಯಾದ ಇವಳ ಶ್ರಾದ್ಧವನ್ನು ಮಾಡಿ, ವಿಷ್ಣುಪಾದದ ಮೇಲ ಇವಳ ಹೆಸರಿನಿಂದ ಪಿಂಡದಾನ ಮಾಡಿದರೆ ಮಾತ್ರ ಪಾಪಸಮುದ್ರದಲ್ಲಿ ಮುಳುಗಿದ ಇವಳ ಉದ್ಧಾರವಾಗುವದು.''

ಹೀಗೆ ವಿಚಾರಮಾಡಿ ಆ ಯೋಗಿಪುತ್ರನು ತನ್ನ ಈ ಜನ್ಮದ ತಂದೆಯಾದ ಮುನೀಶ್ವರರ ಬಳಿಗೆ ಹೋದ. ಅವರಿಗೆ ನಮಸ್ಕರಿಸಿ 'ತನ್ನ ಜನ್ಮಾಂತರದ ತಾಯಿಯು ಸುಡುಗಾಡ ಗಟ್ಟೆಯಲ್ಲಿ ಕೆಟ್ಟ ಹಲ್ಲಿಯಾಗಿ ಜನಿಸಿದ್ದನ್ನು ಹೇಳಿದ. ಅದನ್ನು ಕೇಳಿ ದಯೆದುಂಬಿದ ಆ ಮುನಿಮುನೀಷಿಗಳು ನುಡಿದರು.

**ಮುನಿ:-** ವತ್ಸ, ನಿನ್ನ ಆ ಹಿಂದಿನ ತಾಯಿಯನ್ನು ಬೇಗ ಉದ್ಧರಿಸು. ತನ್ನ ತಾಯಿ-ತಂದೆಗಳನ್ನು ಪಾರುಮಾಡದಿರುವ ಮಗನು ತಾನೇ ನರಕಕ್ಕೆ ಬೀಳುವನು.

**ಸ್ವಪುತ್ರಾತ್ ಪ್ರಾಪ್ಯ ಪಾನೀಯಂ ಪಿಂಡಾಂಶ್ಚಾವರತೀರ್ಥಕೇ ।**
**ಪಿತರೋ ನರಕಾತ್ ಸ್ವರ್ಗಂ ಸ್ವರ್ಗಾದ್ಯಾಂತಿ ಹರೇಃ ಪದಂ ॥**

ತಮ್ಮ ಮಗನಿಂದ ಶ್ರೇಷ್ಠ ತಿಲೋದಕ ತರ್ಪಣವನ್ನೂ ಶ್ರಾದ್ಧಪಿಂಡವನ್ನೂ ಪಡೆದ ಪಿತೃಗಳು ನರಕದಿಂದ ಸ್ವರ್ಗಕ್ಕೂ ಸ್ವರ್ಗದಿಂದ ಮೋಕ್ಷಕ್ಕೂ ಹೋಗುತ್ತಾರೆ. ಆದುದರಿಂದ ನೀನು ಬೇಗ ಏಳು. ಖಾಂಡವವನಕ್ಕೆ ಹೋಗು. ಮುನಿವರ್ಯರಿಂದ ಸೇವಿತಳಾದ ಯಮುನೆಯು ಅಲ್ಲಿ ಹರಿಯುತ್ತಲಿದ್ದಾಳೆ. ಅದರ ತೀರದಲ್ಲಿ ಸರ್ವತೀರ್ಥಮಯವಾದ ಇಂದ್ರಪ್ರಸ್ಥವು ಇರುತ್ತದೆ. ಅಲ್ಲಿ ಸಾಕ್ಷಾತ್ ಶ್ರೀಹರಿಯೇ ಸ್ಥಾಪಿಸಿದ ಮಧುವನ ಇರುತ್ತದೆ. ಅಲ್ಲಿರುವ ಪಾವನ ತೀರ್ಥದಲ್ಲಿ ಸ್ನಾನಮಾಡಿ, ಪೂಜಾದಿಗಳನ್ನು ಮುಗಿಸಿ ನಿನ್ನ ಜನ್ಮಾಂತರದ ತಾಯಿಯನ್ನುದ್ದೇಶಿಸಿ ಶ್ರಾದ್ಧ ಮಾಡು. ಆ ಮಧುವನ ತೀರ್ಥದಲ್ಲಿ ಶ್ರಾದ್ಧ ಮಾಡುವದರಿಂದ, ಗಯಾ ಕ್ಷೇತ್ರದಲ್ಲಿ ಶ್ರಾದ್ಧ ಮಾಡುವದರಿಂದ ಬರುವ ಪುಣ್ಯದ ನೂರುಪಟ್ಟು ಮಿಗಿಲಾದ ಪುಣ್ಯ ಪ್ರಾಪ್ತವಾಗುವದು. ಈಗ ಸೂರ್ಯನು ಕನ್ಯಾರಾಶಿಯಲ್ಲಿ ಇರುತ್ತಾನೆ. ನೀನು ಈಗ ಅಲ್ಲಿಗೆ ಹೋಗಿ, ಹಿಂದಿನ ನಿನ್ನ ಪಿತೃಗಳು ಹಾಗೂ ಬಾಂಧವರನ್ನು ಉದ್ದೇಶಿಸಿ ಶ್ರಾದ್ಧಮಾಡಿ ಅವರೆಲ್ಲರನ್ನೂ ಉದ್ಧರಿಸು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಕುಶಲ ಬ್ರಾಹ್ಮಣ ಪತ್ನಿಯ ದುರಾಚಾರ, ಮಧುವನ ತೀರ್ಥದ ಮಾಹಾತ್ಮ್ಯ, ಹಲ್ಲಿಯ ಯೋನಿಯಲ್ಲಿದ್ದ ಅವಳ ಉದ್ಧಾರ, ಮಗನ ಮುಖಾಂತರ ಎಂಬ ನೂರ ತೊಂಬತ್ತೈದನೇಯ ಅಧ್ಯಾಯ ಮುಗಿದುದು*

—o—

## ಯೋಗಿಪುತ್ರನಿಂದ ತಂದೆಯ ವಚನದಂತೆ ಮಧುವನದಲ್ಲಿ ತಾಯಿಯ ಉದ್ಧಾರಕ್ಕಾಗಿ ಶ್ರಾದ್ಧವಿಧಾನ

**ಅಧ್ಯಾಯ - ೧೯೬**

**ನಾರದ:-** ತನ್ನ ಈ ಜನ್ಮದ ತಂದೆಯ ವಚನದಂತೆ ಆ ಕುಲಟೆಯ ಜನ್ಮಾಂತರದಲ್ಲಿ ಪುತ್ರನಾಗಿದ್ದ ಈ ಜನ್ಮದ ಯೋಗೀಶ್ವರನು ಗಯಾಕ್ಕಿಂತ ನೂರುಪಟ್ಟು ಅಧಿಕ ಪುಣ್ಯಪ್ರದವಾದ ಮಧುವನಕ್ಕೆ ಅವಸರದಿಂದ ತೆರಳಿದ. ಅಂದೇ ಸಾಯಂಕಾಲದಲ್ಲಿ ಈ ತೀರ್ಥವಾಸಿಗಳಾದ ಬ್ರಾಹ್ಮಣರನ್ನು ಕರೆಯಿಸಿ ಅವರಿಗೆ, ಮರುದಿನ ತಾನು ಮಾಡುವ ತಾಯಿಯ ಶಾದ್ಧಕ್ಕಾಗಿ ಆಗಮಿಸಬೇಕು ಎಂದು ಬೇಡಿಕೊಂಡ. ಮರುದಿನ ಸಕಾಲದಲ್ಲಿ ತಾನು ಇದ್ದಲ್ಲಿಗೆ ಆಗಮಿಸಿದ ಆ ಎಲ್ಲ ವೇದಾಧ್ಯಯನಯ ಸಂಪನ್ನರಾದ ಬ್ರಾಹ್ಮಣರನ್ನು ಸ್ವಾಗತಗೈದು, ಪಾದಪ್ರಕ್ಷಾಲನೆ ಮಾಡಿ ಅರ್ಘ್ಯ ಪಾದ್ಯಾದಿಗಳನ್ನು ಇತ್ತು ಪೂಜಿಸಿ ಒಂದು ಮಣೆಯ ಮೇಲೆ ಕೂಡಿಸಿದ. ನಂತರ ಅವರೆಲ್ಲರನ್ನೂ ಶ್ರಾದ್ಧದ ಸ್ಥಾನಕ್ಕೆ ಕರೆದುಕೊಂಡು ಹೋಗಿ ದರ್ಭೆ, ನೀರು, ಪುಷ್ಪ, ತುಳಸೀ, ಗಂಧ, ಅಕ್ಷತೆ, ತಿಲ ಮುಂತಾದ ಎಲ್ಲ ಪದಾರ್ಥಗಳನ್ನೂ ಹಾಕಿ ಒಂದು ಕರ್ಮಪಾತ್ರವನ್ನು ಮಾಡಿ ಪುಂಡರೀಕಾಕ್ಷನ ಸ್ಮರಣ ಮಾಡುತ್ತ "ದೇವತಾಭ್ಯ" ಎಂಬ ಮಂತ್ರವನ್ನು ಮೂರು ಸಲ ಪಠಿಸಿದ. ವಿಧಿಪೂರ್ವಕವಾಗಿ ಚಟಕಶ್ರಾದ್ಧವನ್ನು ಮಾಡಿ ಬ್ರಾಹ್ಮಣರೆಲ್ಲರಿಗೂ ತೃಪ್ತಿಯಾಗುವಂತೆ ಸುಗ್ರಾಸ ಭೋಜನ ಮಾಡಿಸಿದ. ಹೀಗೆ ವೇದೋಕ್ತ ಪ್ರಕಾರದಿಂದ ಯಾವ ಲೋಪವೂ ಬಾರದಂತೆ ಶ್ರಾದ್ಧ ಮಾಡಿ, ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಅವರಿಗೆ ದಕ್ಷಿಣೆ ದಾನಗಳನ್ನು ವಿಶೇಷವಾಗಿ ನೀಡಿದ. ತನ್ನ ಬಂಧ ಬಾಂಧವರಿಂದ ಕೂಡಿಕೊಂಡು ಅನಂತರ ತಾನೂ ಸಹ ಬ್ರಾಹ್ಮಣರಿಂದ ಅಪ್ಪಣೆಪಡೆದು ಭೋಜನ ಮಾಡಿದ. ಅನಂತರ ಬಾಗಿಲವರೆಗೆ ಹೋಗಿ ಬ್ರಾಹ್ಮಣರನ್ನು ಕಳಿಸಿಕೊಟ್ಟು ಬಂದನು. ಹೀಗೆ ಶ್ರಾದ್ಧ ವಿಧಿಯು ಪೂರ್ಣಗೊಂಡ ಬಳಿಕ ಅಲ್ಲಿ ಆರು ವಿಮಾನಗಳು ಬಂದವು. ಅದರಲ್ಲಿ ಇವನ ಶ್ರಾದ್ಧದಿಂದ ತೃಪ್ತಿಗೊಂಡ ಪಿತೃಗಳು ದಿವ್ಯ ವಸ್ತ್ರ, ಆಭರಣಗಳನ್ನು ಧರಿಸಿ ಕುಳಿತಿದ್ದರು. ಅವರು ಇವನನ್ನುದ್ದೇಶಿಸಿ ಮಾತನಾಡಿದರು.

**ಪಿತೃಗಳು:-** ವತ್ಸ, ನೀನು ಈ ಪರಮ ಪವಿತ್ರವಾದ ಮಧುವನ ತೀರ್ಥದಲ್ಲಿ ನಮ್ಮ ಶ್ರಾದ್ಧಮಾಡಿ ನಮ್ಮನ್ನು ಭವಸಾಗರದಿಂದ ಪಾರುಮಾಡಿದೆ. ನಾವೆಲ್ಲರೂ ಶ್ರೀಪತಿಯ ಅಂಗಸೇವಕರಾಗಿದ್ದೇವೆ. ನೀನು ಮಾಡಿದ ಈ ಪಾವನವಾದ ತೀರ್ಥದಲ್ಲಿನ ಶ್ರಾದ್ಧದಿಂದ ನಾವು ಉದ್ಧೃತರಾಗಿ ಇಂಥ ಉತ್ತಮಗತಿಯನ್ನು ಹೊಂದಿದ್ದೇವೆ. ನಿನಗೆ ಬೇಕಾದ ವರವನ್ನು ಬೇಡು ಕೊಡುತ್ತೇವೆ.

**ಮುನಿಪುತ್ರ:-** ಪೂಜ್ಯರೇ, ನೀವು ಯಾರು? ಎಲ್ಲಿಂದ ಬಂದಿರಿ? ವಿಷ್ಣುದೂತರ ಗಣದಲ್ಲಿ ನಿಮ್ಮ ಗಣನೆ ಹೇಗಾಯಿತು? ನಾನು ನಿಮಗೆ ಯಾವ ಉಪಕಾರವನ್ನೂ ಮಾಡಲಿಲ್ಲ. ಹೀಗಿದ್ದರೂ ನನಗೆ ಬೇಕಾದ ವರ ಬೇಡಲು ಹೇಳುತ್ತಿದ್ದೀರಿ ಇದೇಕೆ?

ಹೀಗೆ ಆ ಮುನಿಪುತ್ರನು ಪ್ರಶ್ನೆ ಮಾಡಿದ್ದನ್ನು ಕೇಳಿ, ವಿಮಾನದಲ್ಲಿ ಕುಳಿತ ಆ ಆರು ಪಿತೃಗಳಲ್ಲಿ ಇವನ ತಂದೆಯಾದವನು ಮೊದಲು ಮುಂದೆ ಬಂದು ಮಾತನಾಡಿದ.

**ತಂದೆ:-** ವತ್ಸ, ನಾನು ನಿನ್ನ ತಂದೆ. ನಾನು ಪೂರ್ವಜನ್ಮದಲ್ಲಿ ವ್ಯಭಿಚಾರಿಣಿಯಾದ ಹೆಂಡತಿಯಿಂದ ವಿಚಿತ್ರವಾದ ಹಿಂಸೆಯನ್ನು ಅನುಭವಿಸಿದೆ. ಅವಳು ಮಾಡುವ ಅವ್ಯಾಪಾರ,

ವ್ಯಭಿಚಾರಗಳನ್ನು ಕಂಡು ನನ್ನ ಮನಸ್ಸು ರೋಸಿಹೋಯಿತು. ಈ ಪರಪುರುಷರ ಸಂಸರ್ಗದಂಥ ಹೇಯವಾದ ಅವಳ ಕೃತ್ಯಗಳನ್ನು ನೋಡಲಾಗದೇ ಒಂದು ರಾತ್ರಿ ವಿಷ ತಿಂದು ಸಾವನಪ್ಪಿದೆ. ಅದರಿಂದ ನನಗೆ ಅಪಮೃತ್ಯು ಒದಗಿ ನಾನು ರಾಕ್ಷಸನಾಗಿ ಅಲೆಯಬೇಕಾಯಿತು. ಒಂದು ಮನ್ವಂತರ ಕಾಲ ನಾನು ರಾಕ್ಷಸನಾಗಿ ತಿರುಗಾಡಿ ಈಗ ಈ ಮಧುವನದಲ್ಲಿ ನೀನು ಮಾಡಿದ ಶ್ರಾದ್ಧದ ಪ್ರಭಾದಿಂದ ರಾಕ್ಷಸಯೋನಿಯಿಂದ ಮುಕ್ತನಾಗಿ ದೈವತ್ವವನ್ನು ಹೊಂದಿದ್ದೇನೆ. ನನ್ನನ್ನು ಕರೆದುಕೊಂಡು ಒರಲು ಸ್ವರ್ಗಲೋಕದಿಂದ ಇಂದ್ರನು ವಿಮಾನ ಕಳಿಸಿಕೊಟ್ಟಿದ್ದಾನೆ. ಆ ವಿಮಾನದಲ್ಲಿ ಅಪ್ಸರಾಸ್ತ್ರೀಯರು, ದೇವದೂತರು ನನ್ನ ದಾರಿಕಾಯುತ್ತ ಕುಳಿತಿದ್ದಾರೆ. ಆದರಿಂದ ನಿನಗೆ ಬೇಕಾದ ವರವನ್ನು ಕೊಟ್ಟು ಹೋಗಲು ನಾನು ಬಂದಿದ್ದೇನೆ. ತಡಮಾಡದೇ ನಿನಗೆ ಬೇಕಾದ ವರವನ್ನು ಕೇಳು.

ಹೀಗೆ ತಂದೆಯು ನುಡಿದದ್ದನ್ನು ಕೇಳಿ ಆ ಯೋಗಿಪುತ್ರನು ಕೈ ಮುಗಿದು ಕೇಳಿದ.

**ಮುನಿಪುತ್ರ :-** ಪೂಜ್ಯ ತಂದೆಯೇ, ನನಗೆ ಯಾವ ಭೋಗ ಭಾಗ್ಯವೂ ಬೇಡ. ಶ್ರೀಹರಿಯಲ್ಲಿ ಅವಿಚ್ಛಿನ್ನವಾದ ಭಕ್ತಿಯೊಂದೇ ನನಗೆ ಸಾಕು. ಅದನ್ನೇ ಕರುಣಿಸು.

ಮಗನ ಈ ಮಾತನ್ನು ಕೇಳಿ ತಂದೆಗೆ ಇನ್ನೂ ಆನಂದವಾಯಿತು. ''ಶ್ರೀಹರಿಯಲ್ಲಿ ಅವಿಚ್ಛಿನ್ನವಾದ ಭಕ್ತಿಯು ಸತತವೂ ಅಭಿವೃದ್ಧಿಗೊಳ್ಳಲಿ'' ಎಂದು ಆಶೀರ್ವದಿಸಿ ಸ್ವರ್ಗಕ್ಕೆ ನಡೆದ. ಅನಂತರ ಇವನ ಜನ್ಮಾಂತರ ತಾಯಿಯಾದ ಕುಲಟೆಯು ದಿವ್ಯಾಂಗನೆಯಾಗಿ ವಿಮಾನದಲ್ಲಿದ್ದುಕೊಂಡು ಮಗನನ್ನು ಕುರಿತು ಮಾತನಾಡಿದಳು.

**ಕುಲಟಾ :-** ವತ್ಸ, ನಾನು ಕಳೆದ ಜನ್ಮದಲ್ಲಿ ನಿನಗೆ ಜನ್ಮವಿತ್ತೆ. ನಿನ್ನಂಥ ಭಗವದ್ಭಕ್ತನೂ, ವಿರಕ್ತನೂ ಆದ ಮಗನಿಗೆ ನಾನು ಸರಿಯಾದ ತಾಯಿಯಾಗಿರಲಿಲ್ಲ. ನಾನು ಸ್ವೈರ ಆಚಾರವುಳ್ಳವಳಾಗಿದ್ದು, ಸತೀಸ್ತ್ರೀಯರಿಗೆ ಅನುಚಿತವಾದ ಕಾರ್ಯಗಳನ್ನೇ ಬದುಕಿರುವವರೆಗೂ ಮಾಡಿದೆ. ಆ ಭಯಂಕರವಾದ ನನ್ನ ಪಾಪಕೃತ್ಯದ ಫಲವಾಗಿ ನರಕದಲ್ಲಿ ನಾನು ಬಹುಕಾಲ ದುಃಖಪಟ್ಟೆ. ಅನಂತರ ಸ್ಮಶಾನದಲ್ಲಿ ಹಲ್ಲಿಯಾಗಿ ಹುಟ್ಟಿದೆ. ಈಗ ನೀನು ಮಧುವನದಲ್ಲಿ ಮಾಡಿದ ಶ್ರಾದ್ಧದಿಂದ ಆ ಹಲ್ಲಿಯ ಜನ್ಮದಿಂದ ಉದ್ಧೃತಳಾಗಿ ದೇವತಾಸ್ತ್ರೀಯ ರೂಪವನ್ನು ಪಡೆದಿದ್ದೇನೆ. ಇಂದ್ರನ ಮಡದಿಯಾದ ಶಚೀದೇವಿಯು ನನ್ನ ಗೆಳತಿ. ನಿನ್ನ ಈ ಶ್ರಾದ್ಧವಿಧಾನದ ಪ್ರಭಾವದಿಂದ ನಾನು ಇಂಥ ದಿವ್ಯಸ್ಥಾನವನ್ನು ಪಡೆದಿದ್ದೇನೆ. ಆದುದರಿಂದ ನಾನು ಈಗ ಆ ದೇವಾಂಗನೆಯರೊಡನೆ ಕೂಡಿಕೊಂಡು ಸ್ವರ್ಗಕ್ಕೆ ಹೋಗುತ್ತೇನೆ.

ಹೀಗೆ ಹೇಳಿ ಅವನ ಜನ್ಮಾಂತರದ ತಾಯಿಯಾದ ಕುಲಟೆಯು ಅವನಿಂದ ವಂದಿತಳಾಗಿ ಸ್ವರ್ಗಕ್ಕೆ ಹೊರಟು ಹೋದಳು. ತಾಯಿ-ತಂದೆ ಇಬ್ಬರೂ ಸ್ವರ್ಗಲೋಕಕ್ಕೆ ತೆರಳಿದ ಬಳಿಕ, ಈ ಯೋಗಿಪುತ್ರನ ಜನ್ಮಾಂತರದ ಅಜ್ಜನು ಈ ಯೋಗಿಪುತ್ರನನ್ನು ಕುರಿತು ಮಾತನಾಡಿದ.

**ಪಿತಾಮಹ :-** ವತ್ಸ, ದೀರ್ಘಾಯುಷಿಯಾಗಿ ಬಾಳು, ಬದುಕು, ನಿನ್ನ ಇಷ್ಟಾರ್ಥಗಳೆಲ್ಲವೂ ಪೂರ್ಣವಾಗಲಿ. ನೀನು ಮಾಡಿದ ಈ ಮಧುವನದ ಪಿತೃಕಾರ್ಯದಿಂದ ನಾವೆಲ್ಲರೂ ಉದ್ಧೃತರಾಗಿದ್ದೇವೆ. ನಿನ್ನ ಅಜ್ಜನಾದ ನಾನು ಮತ್ತು ನನ್ನ ಹೆಂಡತಿಯಾದ ಈ ನಿನ್ನ ಅಜ್ಜಿ ಇವರೆಲ್ಲರೂ ಸೇರಿ ಈಗ ಸ್ವರ್ಗಲೋಕವನ್ನು ಕುರಿತು ಹೊರಟಿದ್ದೇವೆ. ನಾನು

ಭೂಲೋಕದಲ್ಲಿದ್ದಾಗ ಮರಣಹೊಂದಿದೆ. ಆಗ ನನ್ನ ವಿರಹದುಃಖವನ್ನು ತಾಳಲಾರದೇ ಇವಳೂ ಸಹಗಮನ ಮಾಡಿದಳು. ಈಗ ಹರಿಪದವನ್ನು ಕುರಿತು ಪ್ರಯಾಣಿಸುತ್ತಿದ್ದೇವೆ. ಹೀಗೆ ಹೇಳಿ ಅವರಿಬ್ಬರೂ ವಿಷ್ಣುಲೋಕಕ್ಕೆ ಪ್ರಯಾಣ ಬೆಳೆಸಿದರು.

ಅನಂತರ ಈ ಯೋಗಿಪುತ್ರನ ಜನ್ಮಾಂತರದ ಮುತ್ತಾತನು ಅಂದರೆ ತಂದೆಯ ತಂದೆಯ ತಂದೆಯು ಮುಂದೆ ಬಂದು ಈ ಯೋಗಿಪುತ್ರನನ್ನು ಕುರಿತು ಮಾತನಾಡಿದ.

**ಪ್ರಪಿತಾಮಹ:-** ಮಗುವೇ, ನಾನು ನಿನ್ನ ಪ್ರಪಿತಾಮಹ (ನಿನ್ನ ತಂದೆಯ ತಂದೆಯ ತಂದೆ). ನಾನು ಹಿಂದಿನ ಜನ್ಮದಲ್ಲಿ ಭ್ರೂಣಹತ್ಯಾ ಪಾಪದಿಂದ ಹಂದಿಯಾಗಿ ಹುಟ್ಟಿದೆ. ಅನಂತರ ಜನ್ಮದಲ್ಲಿ ನಾಯಿಯಾದೆ. ಅನಂತರ ವಿಂಧ್ಯಪರ್ವತದಲ್ಲಿ ಒಂದು ಮರವಾಗಿ ಹುಟ್ಟಿದೆ. ಬಹುಕಾಲದವರೆಗೆ ಮೋಟುಮರವಾಗಿ ನಿಂತು ಕೊಂಡು ಬಿಸಿಲಿಗೆ ಒಣಗಿ ಚಿಗಿತು. ಆ ಪರ್ವತದ ನಡುನೆತ್ತಿಯ ಮೇಲೆ ಬಾಳನ್ನು ಸವೆಸುತ್ತಲಿದ್ದೆ. ಒಂದು ದಿನ ಆನೆಯೊಂದು ಬಂದು ತನ್ನ ಗಂಡಸ್ಥಳವನ್ನು ತಿಕ್ಕಿ ನನ್ನನ್ನು ಕಿತ್ತೊಗೆಯಿತು. ಹೀಗೆ ನಾನು ಆ ವಿಂಧ್ಯದ ಪ್ರಾಂತದಲ್ಲಿ ಕಿತ್ತೊಗೆಯಲ್ಪಟ್ಟ ಮೋಟುಮರವಾಗಿ ಬಿದ್ದುಕೊಂಡಾಗಲೇ ನೀನು ಇಲ್ಲಿ ಶ್ರಾದ್ಧವನ್ನು ಮಾಡಿದೆ. ನಿನ್ನ ಶ್ರಾದ್ಧದಲ್ಲಿ ಕೇವಲ ನಿನ್ನ ತಂದೆಯಷ್ಟೇ ಅಲ್ಲ; ನಾವೆಲ್ಲರೂ ಅವಿಷ್ಟರಾಗಿದ್ದೆವು. ಇದರ ಪರಿಣಾಮವಾಗಿ ನನಗೆ ಆ ಸ್ಥಾವರ ಜನ್ಮದಿಂದ ಮುಕ್ತಿಯಾಯಿತು. ನಾನೀಗ ದಿವ್ಯರೂಪವನ್ನು ಪಡೆದಿದ್ದೇನೆ ಇನ್ನು ಮೇಲೆ ನನ್ನ ವಾಸವು ಕುಬೇರನ ನಗರದಲ್ಲಿ. ಪುಣ್ಯಾತ್ಮ ! ನಾನು ಘೋರಪಾಪಗಳನ್ನೆಸಗಿದ್ದರೂ ನೀನು ಮಾಡಿದ ಮಧುವನ ತೀರ್ಥಶ್ರಾದ್ಧ ಪ್ರಭಾವದಿಂದ ಈ ದಿವ್ಯಯೋನಿಯನ್ನು ಹೊಂದಿದ್ದೇನೆ. ಅದಕ್ಕಾಗಿ ಈಗ ನಿನ್ನನ್ನು ನೋಡಲೆಂದು ಬಂದಿದ್ದೇನೆ. ಎಲ್ಲ ತೀರ್ಥಗಳಿಗಿಂತಲೂ ಈ ಮಧುವನ ತೀರ್ಥವು ಶ್ರೇಷ್ಠವಾಗಿರುತ್ತದೆ.

**ಯೋಗಿಪುತ್ರ :-** ಮುತ್ತಾತ, ನೀನು ಹಿಂದೆ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದ್ದೆ. ಸದ್ವಂಶಲ್ಲಿ ಹುಟ್ಟಿದರೂ ನೀನು ಕೀಳು ಕಾರ್ಯವನ್ನು ಏಕೆ ಮಾಡಿದೆ? ಅದರಿಂದ ನಿಂದ್ಯವಾದ ಯೋನಿಪರಂಪರೆಯನ್ನು ಅನುಭವಿಸಬೇಕಾಯಿತು. ಇಷ್ಟು ಉತ್ತಮಕುಲದಲ್ಲಿ ಜನಿಸಿದರೂ ಅಧರ್ಮವನ್ನಾಚರಿಸುವ ಸಂದರ್ಭ ನಿನಗೇನು ಬಂದಿತ್ತು?

**ಮುತ್ತಜ್ಜ:-** ನನ್ನ ಹಿಂದಿನ ಕಥೆಯನ್ನು ಕೇಳು. ನಾನು ನನ್ನ ಪೂರ್ವಜನ್ಮದಲ್ಲಿ ಬ್ರಾಹ್ಮಣನಾಗಿದ್ದರೂ ಮಂತ್ರ, ಯಂತ್ರ ವಿಧಾನಗಳನ್ನು ಹೊಟ್ಟೆ ಹೊರೆಯುವ ಸಾಧನವಾಗಿಸಿಕೊಂಡಿದ್ದೆ. ದುಡ್ಡಿನ ಆಸೆಯಿಂದ ಹೆಣ್ಣುಮಕ್ಕಳಿಗೆ ಸಂತಾನವಾಗುವ ಔಷಧ ನೀಡುತ್ತಿದ್ದೆ.

**ಲೋಭೇ ಹಿ ಧನಹೀನಾನಾಂ ಜನಾನಾಂ ಜ್ಞಾನಮಾಹರೇತ್ ।**
**ಶುಚಿಕಾಲೇ ದಿನಾಧೀಶಃ ಕುಲ್ಯಾನಾಮಿಮ ಜೀವನಮ್ ॥**

ಮಳೆಗಾಲದಲ್ಲಿ ಸೂರ್ಯನು ಝುರಿ ತೊರೆಗಳ ನೀರನ್ನೆಲ್ಲ ಒಣಗಿಸಿಬಿಡುವಂತೆ ದರಿದ್ರರಾದ ಮನುಷ್ಯರ ಲೋಭವು ಅವರ ಜ್ಞಾನವನ್ನೂ ನಾಶಮಾಡಿ ಬಿಡುವದು.

**ಜ್ಞಾನೇ ನಷ್ಟೇ ಜನಸ್ತಾತ ಪಾಪಮಾಚರತೇ ಧ್ರುವಮ್ ।**
**ಪಾಪಾನ್ನರಕಮಾಪ್ನೋತಿ ತತೋ ಯಾತಿ ಕುಯೋನಿತಾಮ್ ॥**

ಜ್ಞಾನ, ಅರ್ಥಾತ್ ಕಾರ್ಯಾಕಾರ್ಯ ವಿವೇಕ, ಇದೇ ನಷ್ಟವಾದ ಬಳಿಕ ಮನುಷ್ಯನು

ಪಾಪವನ್ನು ಮಾಡುವದು ನಿಶ್ಚಿತ. ಆ ಪಾಪದಿಂದ ನರಕವನ್ನು ಹೊಂದುತ್ತಾನೆ. ಅನಂತರ ನಾಯಿ, ಕತ್ತೆ, ಕುದುರೆ ಮುಂತಾದ ದುರ್ಯೋನಿಗಳಲ್ಲಿ ಜನಿಸಿ ಕಷ್ಟಪಡುತ್ತಾನೆ.

ನನಗೂ ಕೂಡ ಧನದ ಲೋಭ ಪಿಶಾಚಿಯಂತೆ ಹಿಡಿದುಕೊಂಡಿತ್ತು. ನಾನು ಆ ಧನಕ್ಕಾಗಿ ಮಾಡಬಾರದ ಕೆಲಸಗಳನ್ನೆಲ್ಲ ಮಾಡುತ್ತಿದ್ದೆ.

ಒಂದು ದಿನ ಒಬ್ಬ ಗರ್ಭಿಣಿ ಹೆಣ್ಣು ಮಗಳು ನನ್ನ ಕಡೆಗೆ ಬಂದಳು. ಮತ್ತು ನನ್ನನ್ನು ಕೇಳಿದಳು. ''ವಿಪ್ರೋತ್ತಮ, ನಾನು ಹೆರುವದು ಹೆಣ್ಣೋ ಅಥವಾ ಗಂಡೋ, ಹೇಳು.'' ಅವಳ ಮಾತನ್ನು ಕೇಳಿ ಅವಳಿಗೆ ಉತ್ತರಿಸಿದೆ ''ನಿನಗೆ ಗಂಡು ಮಗು ಜನಿಸಲು ನಾನು ಔಷಧ ನೀಡುತ್ತೇನೆ.'' ಆಗ ಗರ್ಭಿಣಿ ನುಡಿದಳು. ಪೂಜ್ಯರೇ, ನನಗೆ ಈಗಾಗಲೇ ಆರು ಕನ್ನೆಯರಿರುತ್ತಾರೆ. ಏಳನೆಯದದಾದ ಇದಾದರೂ ಗಂಡಾಗುವಂತೆ ತಾವು ಔಷಧ ನೀಡಿರಿ. ಹೇಗಾದರೂ ಮಾಡಿ ನನಗೆ ಕನ್ಯೆ ಜನಿಸಲಾರದಂತೆ ಉಪಾಯ ಮಾಡಿರಿ. ಅವಳ ಈ ಮಾತುಗಳನ್ನು ಕೇಳಿ ನಾನು ನುಡಿದೆ. ದಿನತುಂಬಿದ ಬಳಿಕ ನಿನಗೆ ಗಂಡು ಮಗು ಹುಟ್ಟುವಂತೆ ಔಷಧ ನೀಡುತ್ತೇನೆ. ಇನ್ನೂ ಕೆಲದಿನ ಕಳೆಯಲಿ. ಹೀಗೆ ಹೇಳಿ ನಾನು ಅವಳನ್ನು ಸಮಾಧಾನಪಡಿಸಿದೆ.

ಆದರೆ ಅವಳು ಹೋದ ಬಳಿಕ ನನಗೆ ಚಿಂತೆ ಪ್ರಾರಂಭವಾಯಿತು. ''ಈ ಗರ್ಭಿಣಿ ಹೆಂಗಸು ನನ್ನ ಉಪಾಯದಿಂದಾಗಿ ಅವಳಿಗೆ ಗಂಡು ಜನಿಸುವದೆಂಬುದನ್ನು ನಂಬಿ ನನ್ನ ಒಂದು ಪಲ ತೂಕದ ಬಂಗಾರವನ್ನು ಕೊಟ್ಟಿದ್ದಾಳೆ. ಒಂದು 'ಪಲ' ತೂಕ ಬಂಗಾರವೆಂದರೆ ನಾಲ್ಕು ಕರ್ಷ ಅರ್ಥಾತ್ ಮೂರುವರೆ ತೊಲ. ಇಷ್ಟು ಬಂಗಾರವನ್ನು ದರಿದ್ರನಾದ ನಾನು ದಕ್ಕಿಸಿಕೊಳ್ಳುವದು ಹೇಗೆ? ಇದಕ್ಕೆ ಏನಾದರೂ ಉಪಾಯ ಮಾಡಬೇಕು.''

ಎಂದು ಯೋಚಿಸಿ ಯುಕ್ತಿಯೊಂದನ್ನು ಹುಡುಕಿದೆ. ಔಷಧವೊಂದನ್ನು ತಯಾರಿಸಿ ನನ್ನ ದಾಸಿಯ ಕೈಯಿಂದ ಅವಳಿಗೆ ಕೊಟ್ಟು ಕಳುಹಿಸಿದೆ. ಅದೊಂದು ಗರ್ಭಪಾತ ಮಾಡಿಸುವ ಭೀಕರ ಔಷಧವಾಗಿತ್ತು. ನನ್ನ ಮೇಲಿನ ವಿಶ್ವಾಸದಿಂದ, ಗಂಡುಪುತ್ರನ ಆಸೆಯಿಂದ ಗರ್ಭಿಣಿಯು ಆ ಔಷಧವನ್ನು ಸ್ವೀಕರಿಸಿದಳು. ಆದರಿಂದ ಮೂರನೆಯ ತಿಂಗಳಲ್ಲಿ ಅವಳ ಗರ್ಭಸ್ರಾವವಾಯಿತು. ಮೂರನೆಯ ತಿಂಗಳಲ್ಲಿ ಗರ್ಭವು ಗಂಡು ಅಥ ಹೆಣ್ಣು ಯಾವುದೇ ಚಿಹ್ನಗಳನ್ನು ತೋರುವದಿಲ್ಲ.

ಗರ್ಭಸ್ರಾವವಾದ ಬಳಿಕವೂ ಖಿನ್ನಳಾದ ಆ ಹೆಣ್ಣುಮಗಳು ನನ್ನ ಮನೆಗೆ ಬಂದಳು. ಗಂಡುಸಂತಾನದ ವಿಷಯದಲ್ಲಿ ನಿರಾಶೆಗೊಂಡಿದ್ದ ಆಕೆ, ತಾನು ಕೊಟ್ಟ ಮೂರೂವರೆ ತೊಲ ಬಂಗಾರವನ್ನು ತಿರುಗಿಕೊಡಬೇಕೆಂದು ನನ್ನನ್ನು ಕೇಳಿದಳು. ಆಗ ನಾನು ಅವಳಿಗೆ ಬೂದಿ ಹಾಗೂ ಇಟ್ಟಂಗಿಯ ಪುಡಿ ಮತ್ತು ಅರಷಿಣ ನೀರು ಕಲಿಸಿ ಮಾಡಿದ ಔಷಧದ ಮುದ್ದೆಯನ್ನು ಅವಳಿಗೆ ತೋರಿಸಿದೆ. ಮತ್ತು ಹೇಳಿದೆ. ''ನಿನಗೆ ಗಂಡುಮಗು ಹುಟ್ಟಲಿಕ್ಕಾಗಿ ಈ ಉತ್ತಮವಾದ ಔಷಧವನ್ನು ತಯಾರಿಸಿ ಇಟ್ಟಿದ್ದೇನೆ. ನೀನು ಕೊಟ್ಟ ಮೂರೂವರೆ ತೊಲಿ ಬಂಗಾರದ ಬೆಲೆಗಿಂತ ಹೆಚ್ಚಿನ ಬೆಲೆ ಇದಕ್ಕೆ ತಗಲಿದೆ.

ಆ ಗರ್ಭಿಣಿಯು ''ಮತ್ತೊಮ್ಮೆ ಗರ್ಭಿಣಿಯಾದಾಗ ಈ ನಿನ್ನ ಔಷಧವನ್ನು ತೆಗೆದುಕೊಳ್ಳುತ್ತೇನೆ'' ಎಂದು ಹೇಳಿ ಆ ಔಷಧವನ್ನು ನನ್ನ ಮನೆಯಲ್ಲೇ ಬಿಟ್ಟು ನಡೆದಳು. ಹೀಗೆ ನಾನು ದ್ರವ್ಯದ ಆಸೆಯಿಂದ ಅವಳ ಗರ್ಭದಲ್ಲಿ ಮೂಡಿದ ಪಿಂಡವನ್ನು ನಾಶಮಾಡಿ

ಭ್ರೂಣಹತ್ಯಾ ಪಾಪವನ್ನು ಕಟ್ಟಿಕೊಂಡೆ. ಅದರಿಂದ ನಾನು ಮೂರು ಕುತ್ಸಿತಯೋನಿಗಳಲ್ಲಿ ದುಃಖ ಅನುಭವಿಸಿ, ಇದೀಗ ನೀನು ಮಾಡಿದ ಮಧುವನ ಶ್ರಾದ್ಧದಿಂದ ಸ್ಥಾವರತ್ವದಿಂದ ಮುಕ್ತನಾಗಿ ದಿವ್ಯರೂಪವನ್ನು ಪಡೆದು, ಕುಬೇರನ ಅಲಕಾಪಟ್ಟಣಕ್ಕೆ ಹೊರಟಿದ್ದೇನೆ.

ಹೀಗೆ ಹೇಳಿ ಯೋಗಿಪುತ್ರನಿಗೆ ಆಶೀರ್ವಾದ ಮಾಡಿದ. ಯೋಗಿಪುತ್ರನು ಪ್ರಪಿತಾಮಹನಿಗೆ ನಮಸ್ಕರಿಸಿದ ಮತ್ತು ಆನಂದದಿಂದ ಅವನನ್ನು ಬೀಳ್ಕೊಟ್ಟ. ಅನಂತರ ಗಂಧರ್ವರ ಗಾಯನ, ನರ್ತನ, ಮುಂತಾದ ವೈಭವಗಳಿಂದ ಕೂಡಿದ ಕಿರುಗಂಟೆಗಳ ಶೃಂಖಲೆಯನ್ನು ಸುತ್ತಲು, ಜೋಡಿಸಿದ ಬಂಗಾರದ ವಿಮಾನದಲ್ಲಿ ಕುಳಿತು ಕುಬೇರ ಲೋಕಕ್ಕೆ ಹೊರಟು ನಿಂತ.

ಅನಂತರ ಪ್ರಪಿತಾಮಹಿಯು ಮಾತನಾಡಿದಳು.

**ಪ್ರಪಿತಾಮಹಿ :-** ವತ್ಸ, ನಿಜವಾಗಿಯೂ ನೀನು ಇಷ್ಟು ಜನ ಪಿತೃಗಳನ್ನು ಉದ್ಧಾರಮಾಡಿದ ಪುಣ್ಯದಿಂದ ಸಾಕ್ಷಾತ್ ಶ್ರೀಹರಿಯ ಪಾದಪದ್ಮಗಳಿಂದ ಅಂಕಿತವಾದ ಆ ದೇವಮಂದಿರವನ್ನು ಪ್ರವೇಶಮಾಡುವೆ. ನನ್ನ ಪತಿಯಾದ ಈ ನಿನ್ನ ಮುತ್ತಜ್ಜನು ನಾನು ಬೇಕಾದಷ್ಟು ಬೇಡ ಎಂದು ಹೇಳಿದರೂ ಕೇಳದೆ ಅನೇಕ ಪಾಪವನ್ನು ಆಚರಿಸಿದ. ಅದರಿಂದ ದುರ್ಯೋನಿಯನ್ನು ಹೊಂದಿ ಈಗ ನಿನ್ನ ಪುಣ್ಯದ ಪ್ರಭಾವದಿಂದ ಈ ದುಃಖಸಾಗರದಿಂದ ಉದ್ಧೃತನಾದ. ನಿನ್ನ ಉಪಕಾರವನ್ನು ನಾವೆಷ್ಟು ಸ್ಮರಿಸಿದರೂ ತೀರದು.

ಹೀಗೆ ಹೇಳಿ ಆ ಸ್ತ್ರೀಯು ತನ್ನ ಪತಿಯೊಡನೆ ಅಲಕಾಪಟ್ಟಣಕ್ಕೆ ಪ್ರಯಾಣ ಮಾಡಿದಳು.

ಅನಂತರ ಆ ಮುನಿಪುತ್ರನ ಜನ್ಮಾಂತರದ ಅಜ್ಜ ಎಂದರೆ ಮಾತಾಮಹ, ತಾಯಿಯ ತಾಯಿ ಮತ್ತು ಅವರ ತಾಯ್ತಂದೆ ಎಲ್ಲರೂ ಮಧುವನದಲ್ಲಿ ಅವನು ಮಾಡಿದ ಶ್ರಾದ್ಧದ ಫಲವಾಗಿ ದಿವ್ಯರೂಪ ಪಡೆದು ದೇವಲೋಕದ ವಿಮಾನವನ್ನು ಆರೋಹಣಮಾಡಿ ಸ್ವರ್ಗಕ್ಕೆ ಪಯಣಿಸಿದರು.

ಅನಂತರ ಆ ಯೋಗಿಪುತ್ರನು ಆ ತೀರ್ಥದಿಂದ ತನ್ನ ತಂದೆಯ ಆಶ್ರಮಕ್ಕೆ ಬಂದು ಅವನಿಗೆ ತಾನು ಮಾಡಿದ ಶ್ರಾದ್ಧ, ಮಧುವನದಲ್ಲಿ ಮಾಡಿದ ಆ ಶ್ರಾದ್ಧದ ಪುಣ್ಯ ಪ್ರಭಾವದಿಂದ ಜನ್ಮಾಂತರದ ತನ್ನ ಆರು ಜನ ಪಿತೃಗಳೂ ತಂದೆ, ತಾಯಿ, ತಂದೆಯ ತಾಯಿ, ಅವರ ತಾಯಿ-ತಂದೆಗಳು ಹೀಗೆ ಆರು ಜನರು ಮತ್ತು ತಾಯಿಯ ತಾಯಿ-ತಂದೆ, ಅವರ ತಾಯಿ-ತಂದೆ, ಅವರ ತಾಯಿ-ತಂದೆಗಳು ಎಲ್ಲರೂ ಉದ್ಧಾರವಾದ ಸಮಾಚಾರವನ್ನು ತಿಳಿಸಿದ. ಇದನ್ನು ಕೇಳಿ ಈ ಯೋಗಿಪುತ್ರನ ತಂದೆಯೂ ಸಹ ಆ ಮಧುವನ ತೀರ್ಥದ ಸಮೀಪದಲ್ಲಿಯೇ ಒಂದು ಪರ್ಣಶಾಲೆಯನ್ನು ಕಟ್ಟಿಸಿದ. ತಾನು ಅಲ್ಲಿಯೇ ಇದ್ದು ತ್ರಿಕಾಲದಲ್ಲೂ ಸ್ನಾನಮಾಡಿ, ಸಂತತವೂ ಭಗವಚ್ಚಿಂತನ, ಕಾಲಕಾಲಕ್ಕೆ ಪರಮಾತ್ಮನ ಪೂಜೆ, ನಿರಂತರ ಭಗವಂತನ ಉಪಾಸನೆ, ಧ್ಯಾನ, ಗಾನ ಇವುಗಳನ್ನು ಮಾಡುತ್ತ ನಿಷ್ಠಹನಾಗಿ ಮಧುವನದಲ್ಲಿಯೇ ವಾಸಮಾಡಿದ.

ಒಂದು ದಿನ ಆ ಮುನೀಶ್ವರನು ಆ ಮಧುವನ ತೀರ್ಥದ ನೀರಿನ ನಟ್ಟನಡುವೆ ನಿಂತುಕೊಂಡು ಅತ್ಯಂತ ಆತುರತೆಯಿಂದ ಅಪೇಕ್ಷಿಪಟ್ಟ. ''ನನಗೆ ಶ್ರೀಹರಿಯ ದರ್ಶನವು ಈ ಜನ್ಮದಲ್ಲಿ ಬೇಗನೇ ಆಗಬೇಕು. ಭಗವಂತನ ಸಾಕ್ಷಾತ್ಕಾರಕ್ಕಾಗಿ ನಾನು ಹಂಬಲಿಸಿದ್ದೇನೆ. ಆ ಸ್ವಾಮಿ ಶ್ರೀಹರಿಯು ಎಂದು ನನಗೆ ದಿವ್ಯದರ್ಶನವನ್ನು ನೀಡುತ್ತಾನೆ?'' ಎಂದು.

ಹೀಗೆ ಮಧುವನದಲ್ಲಿರುವ ವಿಶ್ರಾಂತಿ ತೀರ್ಥದ ಪುಣ್ಯೋದಕದ ಮಧ್ಯೆ ನಿಂತು ಭಗವದ್ದರ್ಶನವನ್ನು ಆ ಮುನೀಶ್ವರನು ಅಪೇಕ್ಷೆ ಮಾಡಿದ ಕೂಡಲೇ ಲಕ್ಷ್ಮೀಪತಿಯಾದ ನಾರಾಯಣನು ಪಕ್ಷಿರಾಜ ಗರುಡನ ಮೇಲೆ ಕುಳಿತು ಅಲ್ಲಿಗೆ ಅವಸರದಿಂದ ಆಗಮಿಸಿದ. ನೀಲಮೇಘಶ್ಯಾಮಸುಂದರನಾದ ಆ ಭಗವಂತ ಉಟ್ಟಿದ್ದು ಮಿಂಚಿನ ಕಾಂತಿಯಂತೆ ಹೊಳೆಯುವ ದಿವ್ಯವಾದ ಪೀತಾಂಬರ, ವಕ್ಷಸ್ಥಳದಲ್ಲಿ ಲಕ್ಷ್ಮೀದೇವಿ, ನಾಲ್ಕು ಬಾಹುಗಳಲ್ಲಿ ಶಂಖಚಕ್ರ ಗದಾಪದ್ಮಗಳು, ಹೃದಯದಲ್ಲಿ ಕೌಸ್ತುಭರತ್ನ ಕಂಗೊಳಿಸುತ್ತಲಿದೆ. ಕಂಠದಲ್ಲಿ ವನಮಾಲೆ ಥಳಥಳ ಹೊಳೆಯುತ್ತಿದೆ. ಕಿವಿಗಳಲ್ಲಿ ಮಕರಕುಂಡಲಗಳು, ಹೊಂದಾವರೆಯಂತೆ ಸುಂದರವಾದ ನೇತ್ರಗಳು. ಇಂಥ ಶರತ್ಕಾಲದ ಪೂರ್ಣಿಮೆಯ ಚಂದ್ರನ ಕಾಂತಿಯಿಂದ ಬೆಳಗುವ ಆ ಶ್ರೀಹರಿಯು ತನ್ನ ದಂತದ್ಯುತಿಯಿಂದ ದಶದಿಕ್ಕುಗಳನ್ನೂ ಪ್ರಭಾಸಿತವಾಗಿ ಮಾಡಿದ.

ದ್ವಿಜಶ್ರೇಷ್ಠ, ಈ ಮಧುವನವು ಪರಮಪಾವನ. ಇಲ್ಲಿನ ಈ ವಿಶ್ರಾಂತಿ ತೀರ್ಥವೂ ಸಕಲ ಜನರ ಅಪೇಕ್ಷೆಗಳನ್ನೂ ಪೂರ್ಣಮಾಡುವ ತೀರ್ಥ. ನೀನು ಈ ವಿಶ್ರಾಂತಿ ತೀರ್ಥದ ಪುಣ್ಯೋದಕದ ಮಧ್ಯದಲ್ಲಿ ನಿಂತು ನನ್ನ ಸಾಕ್ಷಾತ್ಕಾರವನ್ನು ಅಪೇಕ್ಷಿಸಿದೆ. ಇಲ್ಲಿಯ ತೀರ್ಥೋದಕದ ಮಧ್ಯದಲ್ಲಿ ನಿಂತು ಜನರು ಯಾವ ಅಪೇಕ್ಷೆಯನ್ನು ಮಾಡಿದರೂ ನಾನದನ್ನು ಪೂರೈಸುತ್ತೇನೆ. ಬ್ರಹ್ಮಾದಿದೇವತೆಗಳಿಗೂ ದುರ್ಲಭವಾದ ಸಾಕ್ಷಾತ್ಕಾರವನ್ನು ನೀನು ಪಡೆದಿರುವೆ. ಆದುದರಿಂದ ಇನ್ನು ಮೇಲೆ ನೀನು ಈ ಮನುಷ್ಯ ದೇಹವನ್ನು ತೊರೆದು ದಿವ್ಯ ಶರೀರವನ್ನು ಹೊಂದು. ಮತ್ತು ನನ್ನ ಜೊತೆಗೆ ಈ ಖಗೇಶ್ವರನನ್ನು ಆರೋಹಣಮಾಡಿ ವೈಕುಂಠಲೋಕಕ್ಕೆ ಬಾ.

ಲಕ್ಷ್ಮೀಪತಿಯ ಈ ಮಾತುಗಳನ್ನು ಕೇಳಿ ಪರಮಪ್ರಹೃಷ್ಟನಾದ ಆ ಮುನಿಪುಂಗವ ಸಾಷ್ಟಾಂಗವಂದನೆ ಮಾಡಿ, ಕೈಜೋಡಿಸಿ, ಗದ್ಗದಕಂಠದಿಂದ ನುಡಿದ.

**ಮುನಿ:-**

**ಶ್ರೀಪತೇ ಶ್ರೀಮದಂಭೋಜ ಸಂಮರ್ದಿತ ಪದಾಂಬುಜಮ್ ।**
**ಭವತೋ ಭವತಾಪಘ್ನಂ ವಂದೇ ತ್ರಿದಶವಂದಿತಮ್ ॥**

ಲಕ್ಷ್ಮೀಪತಿಯಾದ ಮುಕುಂದ, ಕಾಂತಿಯುಕ್ತವಾದ, ಕಮಲದ ದಿವ್ಯದೀಪ್ತಿಯಿಂದ ಬೆಳಗುವ ನಿನ್ನ ಪಾದಕಮಲಗಳನ್ನು ನಾನು ವಂದಿಸುತ್ತೇನೆ. ದೇವದೇವಾದಿಗಳಿಂದ ವಂದಿತವಾದ ಆ ನಿನ್ನ ಪಾದವು ಸಂಸಾರದ ತಾಪವನ್ನೆಲ್ಲ ಕಳೆದುಬಿಡುತ್ತದೆ.

**ತ್ವದೀಯ ಮಾಯಯಾ ನಾಥ ಮೋಹಿತಾ ಯೇಽತ್ರ ಜಂತವಃ ।**
**ತೇಷಾಂ ಕದಾಚಿನ್ನಿಸ್ತಾರೋ ನ ಕೃಪಾಮಂತರೇಣ ತೇ ॥**

ಸ್ವಾಮಿ, ನಿನ್ನ ಮಾಯೆಯಿಂದ ಮೋಹಿತರಾದ ಈ ಪ್ರಾಣಿಗಳಿಗೆ ಕರುಣೆಯಿಲ್ಲದೇ ಉದ್ಧಾರದ ಮಾರ್ಗವೇ ಇಲ್ಲ.

**ಸತ್ತೀರ್ಥಸೇವನಾದೀಶ ತಥಾ ಸಜ್ಜನಸಂಗಮಾತ್ ।**
**ಪುಂಸಾಂ ಭಕ್ತಿಸ್ತು ಯೇಷಾಂ ವೈ ಜಾಯತೇ ಕೃಪಯಾ ತವ ॥**

ಒಳ್ಳೆಯ ತೀರ್ಥಗಳ ಸೇವೆಯಿಂದ ಸಜ್ಜನರ ಸಹವಾಸದಿಂದ, ನಿನ್ನಲ್ಲಿ ಮಾನವರಿಗೆ ನಿನ್ನ ಕರುಣೆಯಿದ್ದರೆ ಮಾತ್ರ, ಭಕ್ತಿಯು ಉತ್ಪನ್ನವಾಗುತ್ತದೆ.

**ಸಾಧುಭಿರ್ಬಹುಭಿರೀರಿತಂ ಹರೇ ! ಯೋ ನಿಶಮ್ಯ ಗುಣಕೀರ್ತನಂ ತವ ।**
**ಕೀರ್ತಯತ್ಯ ಖಿಲಪಾಪನಾಶನಂ ಮಾತೃಗರ್ಭ ಕಂಹರೇ ಸನೋ ಪತೇತ್ ॥**

ಅಪರೋಕ್ಷ ಜ್ಞಾನಿಗಳೂ, ಮಹಾ ಯೋಗಿಶ್ವರರೂ ನಿರ್ಮಿಸಿದ ನಿನ್ನ ಗುಣಗಾಯನವನ್ನು ಪದ, ಪದ್ಯ, ಸ್ತೋತ್ರರೂಪದಿಂದ ಯಾರು ನುಡಿಯುವರೋ, ಪಠಿಸುವರೋ, ಪಾರಾಯಣ ಮಾಡುವರೋ ಅವರ ಪಾಪಗಳು ಪರಿಹಾರವಾಗಿ ಅವರು ಪುನಃ ತಾಯಿಯ ಗರ್ಭದಲ್ಲಿ ಎಂದೂ ಪ್ರವೇಶಿಸುವದಿಲ್ಲ.

**ಶ್ರೀಪತೇ ತವ ಜನಸ್ಯ ಮಾನಸಂ ದೈವತಸ್ತು ಪತಿತಂ ಮಹಾರಣೇ ।**
**ಗುಂಠಿತಂ ಚ ರಜಸಾ ಜಹಾತಿ ನೋ ನಿರ್ಮಲತ್ವಮಿವ ರತ್ನಮುತ್ತಮಮ್॥**

ಶ್ರೀಹರಿಯೇ, ದೈವದಿಂದ ನಿನ್ನ ಭಕ್ತನು ಯುದ್ಧದಲ್ಲಿ ಮಡಿದು ಪ್ರಾಣಾಂತಿಕ ಪ್ರಸಂಗದಲ್ಲಿ ಸಂಕಟಪಡುತ್ತಲಿದ್ದರೂ ಅವನ ಮನಸ್ಸು ಮಾತ್ರ ಎಂದಿಗೂ ನಿನ್ನನ್ನು ಬಿಟ್ಟು ಬೇರೆ ವಸ್ತುವನ್ನು ಚಿಂತಿಸುವದಿಲ್ಲ. ರತ್ನವು ಧೂಳಿಯಿಂದ ಧೂಸರಿತವಾದರೂ ನೈರ್ಮಲ್ಯವನ್ನೂ ಕಾಂತಿಯನ್ನೂ ಕಳೆದು ಕೊಳ್ಳುವದಿಲ್ಲ.

**ಯಃ ಪ್ರಮಾನ್ ಪತತಿ ತೇ ಪದಾಂಬುಜೇ ದಂಡವತ್ಪುಲಕ ಮಂಗಕೇ ದಧತ್ ।**
**ಸೋನ್ವಯಂ ನಯತಿ ತಾವಕಂ ಪದಂ ಸ್ವಂ ಚ ವಾಂಛಿತಮಶೇಷಯೋಗಿಭಿಃ ॥**

ಯಾವ ಮನುಷ್ಯನು ನಿನ್ನ ಪಾದಾರವಿಂದಗಳಲ್ಲಿ ದಂಡಪ್ರಣಾಮ ಮಾಡಿ, ಭಕ್ತಿಯಿಂದ ರೋಮಾಂಚಿತದೇಹನಾಗಿ ನಿನ್ನ ನಿತ್ಯ ನಿರಂತರ ಧ್ಯಾನವನ್ನು ಮಾಡುವನೋ ಅವನು ಅಶೇಷ ಯೋಗಿಗಳಿಂದ ಅಪೇಕ್ಷಿತವಾದ ನಿನ್ನ ಸ್ಥಾನವನ್ನು ಹೊಂದುವದಲ್ಲದೇ, ತನ್ನ ವಂಶವನ್ನೂ ಕೂಡ ಉದ್ಧಾರಮಾಡುವನು.

**ಜೀವ ಏವ ತವ ಮಾಯಯಾ ವಿಭೋ ! ಮೋಹಿತೋ ಭ್ರಮತಿ ವಿಶ್ವವರ್ತ್ಮಸು ।**
**ತ್ವತ್ಕೃಪಾಲಲಿತಲೋಚನಾಚಲೈಃ ತಕ್ಷಣ ತರತಿ ವಿಶ್ವವಾರಿಧಿಮ್ ॥**

ಈ ಜೀವನು ನಿನ್ನ ಮಾಯೆಯಿಂದಲೇ ಮೋಹಿತನಾಗಿ ಜಗತ್ತಿನ ಬೇರೆ ಬೇರೆ ಮಾರ್ಗ ಹಾಗೂ ವಿಷಯಗಳಲ್ಲಿ ಭ್ರಮಿಸುತ್ತ ಇರುತ್ತಾನೆ. ನಿನ್ನ ಕೃಪಾದೃಷ್ಟಿಯು ಅವನ ಮೇಲೆ ಬಿದ್ದ ತಕ್ಷಣದಲ್ಲಿ ಈ ಸಂಸಾರದ ಸಮುದ್ರವನ್ನು ಅವನು ದಾಟಿ ಪಾರುಗುತ್ತಾನೆ.

ಈ ರೀತಿಯಾಗಿ ಗೋವಿಂದನನ್ನು ಸ್ತೋತ್ರಮಾಡಿ ಅವನ ಪಾದಾರವಿಂದದಲ್ಲಿ ದಂಡಪ್ರಣಾಮಗೈದು ಆ ಮುನಿಶ್ರೇಷ್ಠನು ''ಜಯ ಜಯ ಜಗನ್ನಾಥ ನಿನಗೆ ನಮೋ ನಮಃ ನಮೋ ನಮಃ'' ಎಂದು ಮತ್ತೆ ಮತ್ತೆ ಸಾಷ್ಟಾಂಗ ನಮಸ್ಕಾರ ಮಾಡಿದ. ತನ್ನ ಪಾದಾರವಿಂದದಲ್ಲಿ ಬಿದ್ದು ಭಕ್ತಿಯಿಂದ ಪುಲಕಿತನಾಗಿ ಪುನಃ ಪುನಃ ತನ್ನ ನಾಮೋಚ್ಚಾರ ಮಾಡುತ್ತಲಿರುವ ಆ ಮುನಿಶ್ರೇಷ್ಠನನ್ನು ಭಕ್ತವತ್ಸಲನಾದ ಭಗವಂತನು ತನ್ನ ಬಾಹುಗಳಿಂದ ಹಿಡಿದೆತ್ತಿ ತನ್ನ ಜೊತೆಗೇ ಗರುಡನ ಹೆಗಲ ಮೇಲೆ ಕುಳ್ಳಿರಿಸಿ ಭಗವಂತನ ಕೃಪೆಗೆ ಒಳಗಾದ ಮುನಿಶ್ರೇಷ್ಠನು ಶ್ರೀಹರಿಯೊಡನೇ ವೈಕುಂಠಲೋಕಕ್ಕೆ ತೆರಳಿದ. ಅವನ ಹೆಂಡತಿಯೂ ಸಹ ಶ್ರೀಹರಿಯ ಅನುಗ್ರಹದಿಂದ ಮಧುವನ ತೀರ್ಥದಿಂದ ವೈಕುಂಠಲೋಕಕ್ಕೆ ಪಯಣಿಸಿದಳು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಯೋಗಿಪುತ್ರನಿಂದ ತಂದೆಯ ವಚನದಂತೆ ಮಧುವನದಲ್ಲಿ ತಾಯಿಯ ಉದ್ಧಾರಕ್ಕಾಗಿ*
*ಶ್ರಾದ್ಧವಿಧಾನ ಎಂಬ ನೂರ ತೊಂಬತ್ತಾರನೇಯ ಅಧ್ಯಾಯ ಮುಗಿದುದು*

## ಮುನಿಪುತ್ರನು ಕುಂಡನಾಗಿ ಜನಿಸಲು ಪೂರ್ವಜನ್ಮದ ಕಾರಣ ನಿರೂಪಣ

**ಅಧ್ಯಾಯ - ೧೯೭**

**ಸೌಭರಿ :-** ನಾರದನ ಈ ಮಾತನ್ನು ಕೇಳಿ ಉಶೀನರನ ಮಗನಾದ ಶಿಬಿಚಕ್ರವರ್ತಿಯು ವಿನೀತನಾಗಿ ಮಾತನಾಡಿದ.

**ಶಿಬಿರಾಜ :-** ನಾರದರೇ, ನಿಮ್ಮ ಮುಖದಿಂದ ಮಧುವನದ ಮಹಿಮೆಯನ್ನು ಕೇಳಿದೆ. ಆದರೆ ಇದರಲ್ಲಿ ಒಂದು ಸಂದೇಹ. ಯಾವ ಧರ್ಮಾತ್ಮನು ತನ್ನ ಎರಡು ಜನ್ಮದ ಪಿತೃಗಳನ್ನು ಸಂಸಾರಸಾಗರದಿಂದ ಪಾರುಮಾಡಿದನೋ ಅಂಥ ಪುಣ್ಯಪುರುಷ 'ತ್ರಿಜಾತ'ನಾಗಿ ಅರ್ಥಾತ್ ಕುಲಟೆಯ ಮಗನಾಗಿ ಹೇಗೆ ಹುಟ್ಟಿದ? ತ್ರಿಕಾಲಜ್ಞಾನಿಗಳಾದ ತಾವು ಎಲ್ಲವನ್ನೂ ಚೆನ್ನಾಗಿ ಬಲ್ಲಿರಿ.

**ನಾರದ :-** ಪೂರ್ವಕಾಲದಲ್ಲಿ ಒಂದು ದಿನ ಹರಿದ್ವಾರ ಕ್ಷೇತ್ರದಲ್ಲಿ ಎಲ್ಲ ಮುನಿಗಳೂ ಮಿಲಿತರಾಗಿದ್ದರು. ಅಂದು ಜ್ಯೇಷ್ಠ ಶುಕ್ಲ ದಶಮೀ, ಗಂಗಾ ಜಯಂತೀ. ಆ ಪುಣ್ಯದಿನದಂದು ಎಲ್ಲ ಋಷಿಮುನಿಗಳೂ ವಿಧಿಪೂರ್ವಕವಾಗಿ ಗಂಗೆಯಲ್ಲಿ ಸ್ನಾನಮಾಡಿ ಹಿಮಾಚಲ ಪರ್ವತದ ಪ್ರತ್ಯಂತ ಪ್ರದೇಶದಲ್ಲಿ ಶಾಂತಮನಸ್ಸಿನಿಂದ ಕುಳಿತುಕೊಂಡರು. ಆ ವೇಳೆಯಲ್ಲಿ ಅಲ್ಲಿಗೆ ತಾರಾದೇವಿಯ ಮಗನಾದ ಬುಧನು ಆಗಮಿಸಿದ. ನೋಡಲು ಅನಿಂದ್ಯವಾದ ಸೌಂದರ್ಯದಿಂದ ಶೋಭಿಸುವ ಆ ಬುಧಕುಮಾರ ಮತ್ತೊಬ್ಬ ಮನ್ಮಥನಂತೆ ಕಾಣುತ್ತಲಿದ್ದ. ಅವನನ್ನು ಕಂಡ ಕೂಡಲೇ ಎಲ್ಲ ಋಷಿಗಳೂ ಅವನಿಗೆ ನಮಸ್ಕರಿಸಿ ಆದರಿಸಿದರು. ಬುಧನಿಗೆ ಈ ತರಹದ ಗೌರವಾದರಗಳು ಕೊಡಲ್ಪಟ್ಟದ್ದನ್ನು ಕಂಡು ಆ ಮುನಿಪುತ್ರನು ತಂದೆಗೆ ಪ್ರಶ್ನಿಸಿದ.

**ಮುನಿಪುತ್ರ:-** ಇವನು ಯಾರು? ಇವನು ಮತ್ತೊಬ್ಬ ಮದನನಂತೆ ಸುಂದರನಾಗಿ ಕಾಣುತ್ತಲಿದ್ದಾನೆ. ವೇದವ್ಯಾಸರು ಮೊದಲಾದ ಮಹಾಮನೀಷಿಗಳೂ ಅವನನ್ನು ಆದರಿಸುತ್ತಲಿದ್ದಾರೆ.

**ತಂದೆ :-** ಇವನು ದೇವತೆಗಳ ಆಚಾರ್ಯನಾದ ಬೃಹಸ್ಪತಿಯ ಮಗ. ತಾರೆಯ ಹೊಟ್ಟೆಯಿಂದ ಹುಟ್ಟಿದ ಈ ಬುಧನು ಚಂದ್ರವಂಶ ಭೂಷಣನು ಆಗಿರುತ್ತಾನೆ. ಇವನಿಂದ ಆ ಚಂದ್ರವಂಶವು ಅಭಿವೃದ್ಧಿ ಹೊಂದಿತು.

**ಮುನಿಪುತ್ರ:-** ತಂದೆಯೇ, ಇದೇನು ! ನಿಮ್ಮ ಹೇಳಿಕೆ ಅಸಂಬದ್ಧವಾಗಿದೆಯಲ್ಲ? ಬೃಹಸ್ಪತಿಯ ಮಗನು ಚಂದ್ರವಂಶದ ಅಭಿವೃದ್ಧಿಯನ್ನು ಹೇಗೆ ಸಾಧಿಸಿದ? ಚಂದ್ರನು ಅನಸೂಯಾ ದೇವಿಯಲ್ಲಿ ಅತ್ರಿ ಮುನಿಗಳಿಂದ ಪುತ್ರನಾಗಿ ಹುಟ್ಟಿದ್ದ. ಆ ಅತ್ರಿ ಅನಸೂಯ ಋಷಿದಂಪತಿಗಳ ವಂಶಕರ್ತಾರನಾದ ಆ ಚಂದ್ರ, ಸುರಗುರವಾದ ಬೃಹಸ್ಪತ್ಯಾಚಾರ್ಯರ ವಂಶಕರ್ತಾರನು ಹೇಗೆ ಆಗುತ್ತಾನೆ? ನನ್ನ ಈ ಸಂಶಯವನ್ನು ದೂರಮಾಡಿರಿ.

**ತಂದೆ:-** ಹಿಂದೆ ಬೃಹಸ್ಪತಿಯ ಮಡದಿಯಾದ ತಾರಾ ಎಂಬ ಸುಂದರಿಯನ್ನು ಚಂದ್ರನು ಬಲಾತ್ಕಾರದಿಂದ ಅಪಹರಿಸಿದ. ಆ ಚೆಲುವಿನ ಚಂದ್ರಾಮನು ಚಿಗರೆಗಂಗಳ ಚೆಲುವೆಯನ್ನು ಕರೆದುಕೊಂಡು ಹೋಗಿ ಅವಳ ಜೊತೆಗೆ ಬಹುಕಾಲ ವಿಹಾರ, ವಿನೋದಗಳನ್ನು ಮಾಡಿದ. ಆದರಿಂದ ಆ ತಾರಾದೇವಿಯು ಗರ್ಭವನ್ನು ಧರಿಸಿದಳು. ಸುರಗುರುವಾದ

ಬೃಹಸ್ಪತ್ಯಾಚಾರ್ಯರು ಚಂದ್ರನ ಮನೆಯವರೆಗೆ ಬಂದು ತಮ್ಮ ಹೆಂಡತಿಯನ್ನು ಬಿಟ್ಟುಕೊಡು ಎಂದು ಕೇಳಿದರು. ಆ ಚಂದ್ರ ಲಾವಣ್ಯ, ತಾರುಣ್ಯ, ಅಧಿಕಾರ, ಸಂಪತ್ತು ಎಲ್ಲ ಕೂಡಿ ಮದೋನ್ಮತ್ತನಾಗಿದ್ದ. ತನ್ನ ಮನೆಗೆ ಕರೆದು ತಂದ ಆ ತರುಳೆಯಾದ ತಾರೆಯನ್ನು ತಿರುಗಿಕೊಡಲು ಚಂದ್ರನು ಸಮ್ಮತಿಸಲಿಲ್ಲ. ಇಂದ್ರಾದಿ ದೇವತೆಗಳು ಬಂದು ಹೇಳಿದರೂ ಕೇಳಲಿಲ್ಲ. ಕೊನೆಗೆ ಆ ತಾರೆಯ ಸಲುವಾಗಿ ದೇವತೆಗಳ ಅಧಿಪತಿಯಾದ ಇಂದ್ರನಿಗೂ ಹಾಗೂ ಚಂದ್ರನಿಗೂ ಮಹಾಯುದ್ಧವೇ ನಡೆಯಿತು. ಬೃಹಸ್ಪತ್ಯಾಚ್ಯಾರರ ಪಕ್ಷವನ್ನು ಅವಲಂಬಿಸಿ ಇಂದ್ರಾದಿ ಎಲ್ಲ ದೇವತೆಗಳೂ ಯುದ್ಧ ಪ್ರವೃತ್ತರಾದರು. ಚಂದ್ರನಿಗೆ ಬೆಂಬಲವಾಗಿ ಶುಕ್ರಾಚಾರ್ಯರು ದೈತ್ಯಗಣ, ದೈತ್ಯಾಸೇನಾಪತಿಗಳೊಂದಿಗೆ ರಣರಂಗಕ್ಕೆ ಆಗಮಿಸಿದರು. ತಾರೆಯ ನಿಮಿತ್ತಕವಾಗಿ ದೇವತೆಗಳಿಗೂ, ದಾನವರಿಗೂ, ಭಯಂಕರ ಯುದ್ಧವೇ ನಡೆಯಿತು. ಆದುದರಿಂದಲೇ ಈ ಸಂಗ್ರಾಮಕ್ಕೆ ತಾರಕಾಮಯ ಸಂಗ್ರಾಮ ಎಂದು ಹೆಸರು ಬಂದಿತು.

ತಾರಕಾಮಯ ಸಂಗ್ರಾಮದಲ್ಲಿ ಅನೇಕಾನೇಕ ದೇವದಾನವರು ಹತಪತಿತರಾದರು. ಯಾರಿಗೂ ಜಯ-ಪರಾಜಯ ಸ್ಪಷ್ಟವಾಗಿ ಆಗಲಿಲ್ಲ. ಜಯಲಕ್ಷ್ಮಿಯು ಎರಡೂ ಕಡೆಗಳಲ್ಲಿ ಒಂದೊಂದು ಸಲ ವಾಲುತ್ತಿದ್ದಳು. ಕೊನೆಗೆ ಬ್ರಹ್ಮದೇವರು ಬಂದು ಚಂದ್ರನಿಗೆ ಬುದ್ಧಿ ಹೇಳಿ ತಾರೆಯನ್ನು ಅವಳ ಗಂಡನಾದ ಬೃಹಸ್ಪತ್ಯಾಚಾರ್ಯರಿಗೆ ಕೊಡಿಸಿದರು. ತಾರೆಯು ಬೃಹಸ್ಪತಿಯ ಸಮೀಪದಲ್ಲಿ ಬಂದು ನಿಂತು ಕೊಂಡಾಗ ಅವಳು ಗರ್ಭಿಣಿಯಿದ್ದುದನ್ನು ಗಮನಿಸಿದ ಆ ಸುರಗುರು. ಅವನಿಗೆ ಶೀಘ್ರವೇ ಕೋಪವುಂಟಾಯಿತು. ಆ ದೇವದೈತ್ಯರ ಸಭೆಯಲ್ಲಿಯೇ ಅವಳನ್ನು ಕುರಿತು ಹೇಳಿದ.

**ಬೃಹಸ್ಪತಿ:-** ತಾರೆ, ನಿನ್ನ ಗರ್ಭದಲ್ಲಿ ಇರುವ ಆ ಮಗುವು ಯಾರದು? ನನ್ನದೋ ಅಥವಾ ಚಂದ್ರನದೋ?

ಹೀಗೆ ಕೋಪಗೊಂಡ ಗಂಡ ತನ್ನನ್ನು ಮತ್ತೆ ಮತ್ತೆ ಪ್ರಶ್ನಿಸಿದಾಗ ನಾಚಿಕೆಯಿಂದ ಆ ತಾರೆಗೆ ಉತ್ತರ ಕೊಡಲು ಆಗಲೇ ಇಲ್ಲ. ಅವಳು ಏನೂ ಮಾತನಾಡದೇ ಮೌನವಾಗಿ ನಿಂತುಕೊಂಡಳು. ಆಗ ಅವಳ ಈ ಮೌನವನ್ನು ಕಂಡು ಅವಳ ಹೊಟ್ಟೆಯಿಂದ ಕೂಡಲೇ ಮಗುವೊಂದು ಹೊರಬಂದು, ತನ್ನ ತಾಯಿಯನ್ನು ಕುರಿತು ಕೋಪದಿಂದ ನುಡಿಯಿತು.

**ಮಗು:-** ದುಷ್ಟಳೇ, ನನ್ನ ತಂದೆ ಯಾರು? ಬೇಗನೇ ಹೇಳು. ಇದಕ್ಕೇಕೆ ನಾಚಿಕೆ? ನಾನು ಯಾರ ಮಗುವೆಂಬುದನ್ನು ಹೇಳದಿದ್ದರೆ ಈಗಲೇ ನಿನಗೆ ಶಾಪಕೊಟ್ಟುಬಿಡುವೆ.

ಹೀಗೆ ಹೇಳಿ ಅದೇ ಹುಟ್ಟಿದ ಆ ಮಗು ತಾಯಿಗೆ ಶಾಪವನ್ನು ಕೊಡಲು ಹೊರಟಾಗ ಅವಳು ಹೆದರಿ ಮೆಲ್ಲಮೆಲ್ಲನೇ ನುಡಿದಳು. ''ವತ್ಸ ! ನಿನ್ನ ತಂದೆ ಚಂದ್ರ.''

ತಾರಾದೇವಿಯು ಆ ಮಗು ಚಂದ್ರನದೆಂದು ಸಾರಿದ ಬಳಿಕ ಚಂದ್ರನು ತನ್ನ ಮಗು ಬುಧನನ್ನು ಕರೆದುಕೊಂಡು ತನ್ನ ಮನೆಗೆ ಆನಂದದಿಂದ ಹೊರಟುಹೋದ. ಬೃಹಸ್ಪತಿಗಳೂ ತಮ್ಮ ಮಡದಿಯಾದ ತಾರೆಯನ್ನು ಕರೆದುಕೊಂಡು ಮನೆಗೆ ಹೊರಟುಹೋದರು. ಬ್ರಹ್ಮಾದಿದೇವತೆಗಳೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

**ನಾರದ :-** ತಾರೆಯ ಈ ಪ್ರಕರಣ ನಡೆದಾಗ ಮುನಿಪುತ್ರ ಅಲ್ಲಿಯೇ ಇದ್ದರು. ಮುನಿಪುತ್ರನಿಗೆ ಈ ಬುಧನ ಉತ್ಪತ್ತಿಯ ಈ ಎಲ್ಲ ಅವಾಂತರ, ಅಧಾನವನ್ನು ಕಂಡು ನಗೆ ಬಂದಿತು. ಅವನು ತನ್ನ ತಂದೆಯನ್ನು ಕುರಿತು ಮಾತನಾಡಿದ.

**ಮುನಿಪುತ್ರ:-** ತಾತ, ಈ ಬುಧನು ಹಾಗಾದರೆ 'ಕುಂಡಜಾತ' ಎಂದಂತೆ ಆಯಿತು. 'ಕುಂಡಜಾತ' ಎಂದರೆ ಸ್ವೈರಿಣೀಪುತ್ರ. ಮಗನ ಈ ಮಾತನ್ನು ಕೇಳಿ ಅಲ್ಲಿಯೇ ಇದ್ದ ಆ ಮುನಿಯು ನುಡಿದ.

**ಮುನಿ:-** ಪುತ್ರ, ನೀನು ಹೀಗೆ ಮಾತನಾಡಬೇಡ. ಚಂದ್ರನ ಮಗನಾದ ಬುಧನು ಸಾಮಾನ್ಯ ಮನುಷ್ಯನಲ್ಲ. ಅವನು ಮನುಷ್ಯರ ಮನಸ್ಸಿನಲ್ಲಿರುವ ಭಾವಗಳನ್ನೆಲ್ಲ ಚೆನ್ನಾಗಿ ತಿಳಿಯಬಲ್ಲ. ಅವನ ಬಗೆಗೆ ಲಘುವಾಗಿ ಮಾತನಾಡಿದವರನ್ನು ಶಪಿಸಲೂ ಬಲ್ಲ. ನೀನು ಹೀಗೆ 'ಕುಂಡಜಾತ' ಎಂದು ಅವನನ್ನು ನಿಂದಿಸಿದರೆ ಅವನು ನಿನ್ನನ್ನು ಶಪಿಸುತ್ತಾನೆ.

**ನಾರದ:-** ಹೀಗೆ ತಂದೆಯು ಮಗನನ್ನು ಕುರಿತು ಮೆಲ್ಲನೇ ಮಾತನಾಡಿದರೂ ಚಂದ್ರಪುತ್ರನಾದ ಬುಧನು ಅವನು ಹೇಳಿದ್ದನ್ನು ಕೇಳಿಸಿಕೊಂಡಿದ್ದ. ಎಲ್ಲ ಋಷಿಮುನಿಗಳೂ ಕೇಳುತ್ತ ಇರುವಾಗಲೇ ಅವರ ಎದುರು ಈ ರೀತಿ ಮಾತನಾಡಿದ.

**ಬುಧ:-** ಮುನಿಶ್ರೇಷ್ಠರೇ, ನನ್ನ ಮಾತನ್ನು ಕೇಳಿರಿ. ನಾನು ತತ್ವಜ್ಞಾನಿಗಳಾದ ನಿಮ್ಮ ದರ್ಶನಕ್ಕಾಗಿ ಇಲ್ಲಿ ಬಂದಿದ್ದೆ. ನಾನು ಎಂದೂ ಯಾರ ವಿಷಯದಲ್ಲೂ ಅಪರಾಧವೆಸಗಲಿಲ್ಲ. ಯಾರನ್ನೂ ನಿಂದಿಸಲಿಲ್ಲ. ಆದರೂ ನನ್ನನ್ನು ಮದಾಂಧರಾದ ಈ ಜನರು ಏಕೆ ಅವಮಾನಪಡಿಸುತ್ತಾರೆ?

**ಸ್ವಭಾವ ಏವ ದುಷ್ಟಾನಾಂ ಸಾಧೂನಪಿ ನಿರೇನಸಃ ।**
**ಉದ್ವೇಜಯಂತಿ ಯತ್ಕಾಕಾಃ ಮಿಷ್ಟವಾಚಃ ಪಿಕಾನ್ ಇವ ॥**

''ಮಧುರ ಮಾತನ್ನಾಡುವ ಕೋಗಿಲೆಗಳನ್ನು ಉದ್ವೇಗೊಳಿಸುವದು, ಪೀಡಿಸುವದು ಕಾಗೆಗಳ ಸ್ವಭಾವವಾದಂತೆ ನಿರಪರಾಧಿಗಳಾದ ಸಾಧುಗಳನ್ನು ಪೀಡಿಸುವದು. ಉದ್ವೇಗಜನಕವಾದ ನುಡಿಗಳನ್ನಾಡುವದು ದುಷ್ಟರ ಸ್ವಭಾವವೇ ಆಗಿರುತ್ತದೆ.

**ದುಃಸ್ವಭಾವಂ ನ ಮುಂಚಂತಿ ದುಷ್ಟಾಃ ಸತ್ಸಂಗಮಾದಪಿ ।**
**ಗಂಗಾಂಬು ಸಂಗಮೇನಾಽಪಿ ಕ್ಷಾರತಾಮಿವ ನೀರಧಿಃ ॥**

ಸಮುದ್ರಕ್ಕೆ ಗಂಗೆಯ ನೀರು ಮಿಳಿತವಾದರೂ ಅದು ತನ್ನ ಉಪ್ಪನ್ನು ಬಿಟ್ಟುಕೊಡುವದಿಲ್ಲ. ಅದರಂತೆ ದುರ್ಜನರು ಸಜ್ಜನರ ಸಹವಾಸದಿಂದಲೂ ತಮ್ಮ ಸ್ವಭಾವವನು ಬಿಟ್ಟುಕೊಡುವದಿಲ್ಲ.

**ಅಹೋ ವ್ಯಾಧಸ್ಯ ದುಷ್ಟತ್ವಂ ಮುನಿವೃತ್ತಿನ್ಯತೋ ಮೃಗಾನ್ ।**
**ವನೇ ಮೃಗಚರಾನ್ ಹಂತಿ ನಿಜಗಾನದಿದೋಽಪಿ ಸಃ ॥**

ಬೇಟಾಗರರ ದುಷ್ಟತ್ವವು ಮುನಿವೃತ್ತಿಯಿಂದ ಕುಂಡಿದ್ದರೂ, ಅರಣ್ಯದಲ್ಲಿ ಹರಿವ ನೀರು ಕುಡಿದು ಬೆಳೆವ ಹುಲ್ಲು ತಿಂದು, ನಿರುಪದ್ರವಿಯಾಗಿರುವ, ಅವರು ನುಡಿಸುವ ವಾದ್ಯ ಅಥವಾ ಮಧುರ ಸಂಗೀತವನ್ನು ಕೇಳುತ್ತ ತಲ್ಲೀನವಾಗಿ ನಿಂತುಕೊಂಡ ಮೃಗಗಳನ್ನು ವ್ಯರ್ಥವಾಗಿ ಕೊಂದುಹಾಕುತ್ತಾರೆ.

**ಮತ್ಸ್ಯೈಃ ಕಿಮರಾದ್ಧಂ ಹಿ ಧೀವರಾಣಾಂ ದುರಾತ್ಮನಾಮ್ ।**
**ಯಜ್ಜಲೇ ಧರತಸ್ತೀರ್ಥೇ ಘ್ನಂತಿ ತತ್ಕೃತಿರ್ಹಿಸಾ ॥**

ದುಷ್ಟರಾದ ಮೀನುಗಾರರಿಗೆ ಮೀನುಗಳು ಯಾವ ಅಪರಾಧವನ್ನು ಮಾಡಿರುತ್ತವೆ? ಆದರೂ ಅವರು ನೀರಿನಲ್ಲಿ ಜಾಲಹಾಕಿ ನಿರ್ದೋಷಿಗಳಾದ ಮೀನುಗಳನ್ನು ಹಿಡಿದು ಕೊಲ್ಲುತ್ತಾರೆ. ಅದು ಆ ದುಷ್ಟರ ಸ್ವಭಾವವಷ್ಟೇ.

**ಸಾಧವೋऽಪಿ ನ ಮುಂಚಂತಿ ಸ್ವಭಾವಂ ದುಷ್ಟಸಂಗತಃ ।**
**ವೃತಾವಿಷಾಗ್ನಿಯುಕ್ಸರ್ಪೈಃ ಶ್ರೀಖಂಡಾ ಇವ ಶೀತತಾಮ್ ॥**

ವಿಷಸರ್ಪಗಳು ಚಂದನಗಿಡದ ತುಂಬ ಸುತ್ತಿ ಕೊಂಡಿದ್ದರೂ ಆ ಚಂದನಗಿಡವು ತನ್ನ ತಂಪುಗುಣವನ್ನು ಎಂದಾದರೂ ಬಿಟ್ಟುಕೊಡುವದೇ? ಅದರಂತೆ ದುಷ್ಟರ ಸಹವಾಸವು ಎಷ್ಟೇ ಆದರೂ ಸಜ್ಜನರು ತಮ್ಮ ಸುಸ್ವಭಾವವನ್ನು ಬಿಡುವದಿಲ್ಲ.

**ಪರೋ ದಯೇऽಪಿ ನೃತ್ಯಂತಿ ಕಿಂ ಸ್ವಪಕ್ಷಸ್ಯ ಸಾಧವಃ ।**
**ಯಥೋನ್ನನಾ ಮುನಿವರಾ ವಾರಿವಾಹಸ್ಯ ಬರ್ಹಿಣಃ ॥**

ಸಜ್ಜನರು ಇನ್ನೊಬ್ಬರ ಉದಯವಾದರೂ ಆನಂದದಿಂದ ಕುಣಿಯುತ್ತಾರೆ. ತಮ್ಮ ಪಕ್ಷಕ್ಕೇ ಉದಯವಾದರೆ ಕೇಳುವದೇನು? ಆಕಾಶದಲ್ಲಿ ಮೋಡವು ಉನ್ನತಿಯನ್ನು ಹೊಂದಿ ಸಂಚರಿಸುತ್ತಲಿದ್ದರೂ, ಭೂಲೋಕದಲ್ಲಿನ ನವಿಲುಗಳು ಅದನ್ನು ಕಂಡು ಆನಂದದಿಂದ ಕುಣಿಯುತ್ತವೆ.

**ನಿಜೋದಯಸ್ತು ಸಾಧೂನಾಂ ಸ್ವಚ್ಛಸ್ಯಾऽऽನಂದ ಹೇತವಃ ।**
**ಯಥಾ ಕುಮುದ ಪುಷ್ಪಾಣಾಂ ಮತ್ವಿತುಃ ಶೀತಲತ್ವಿಷಃ ॥**

ನನ್ನ ತಂದೆಯಾದ ಚಂದ್ರನ ಉದಯವು ಕನ್ನೈದಿಲೆ ಹೂಗಳಿಗೆ ಆನಂದದಾಯಕವಾಗಿ ವಿಕಾಸಕ್ಕೆ ಕಾರಣವಾಗಿರುತ್ತದೆ. ಅದರಂತೆ ಸಾಧುಗಳಿಗೆ ತನ್ನ ಆತ್ಮೀಯರಾದ ಜನರು ಉದಯವು ಆನಂದದಕ್ಕೆ ಕಾರಣವಾಗುತ್ತದೆ.

ಹೀಗೆ ಹೆರವರ ಆನಂದವನ್ನು ಕಂಡು ತಾವೂ ಸಂತೋಷಿಸುವುದು ಸಜ್ಜನರ ಸ್ವಭಾವವಾದರೆ ಇನ್ನೊಬ್ಬರ ಉತ್ಕರ್ಷವನ್ನು ಕಂಡು ಕೊರಗುವದು ದುಷ್ಟರ ಸ್ವಭಾವ. ನಿರಪರಾಧಿಗಳಾದ ಸಜ್ಜನರನ್ನು ನಿಂದಿಸುವದು ದುರುಳರ ಜನ್ಮಜಾತವಾದ ಗುಣ. ಈ ಮುನಿಕುಮಾರನು ನಿರಪರಾಧಿಯಾದ ನನ್ನನ್ನು ಕಂಡು ಉಪಹಾಸಗೈದು, ತಿರಸ್ಕಾರ ದೃಷ್ಟಿಯಿಂದ ನನ್ನನ್ನು ಕಂಡಿದ್ದಾನೆ. ಆದುದರಿಂದ ಭೂಲೋಕದಲ್ಲಿ ಇವನು ಸ್ವೈರಿಣಿಯಾದ ಸ್ತ್ರೀಯ ಹೊಟ್ಟೆಯಿಂದ ಹುಟ್ಟಿ 'ಕುಂಡಭವ' ಎಂದು ಪ್ರಸಿದ್ಧನಾಗಲಿ.

ಹೀಗೆ ಬುಧನು ಆ ಮುನಿಬಾಲಕನನ್ನು ಶಪಿಸಿದ. ಇದನ್ನು ಕೇಳಿ ಆ ಮುನಿಯ ತಂದೆಯು ಮಗನನ್ನು ಹೀಗಳೆದು ಬುಧನ ಪಾದದ ಮೇಲೆ ಹಾಕಿದ. ಮತ್ತು ತಿಳಿಯದೇ ಮಾಡಿದ ಈ ಬಾಲಕನ ಅಪರಾಧವನ್ನು ಕ್ಷಮಿಸು ಎಂದು ಪ್ರಾರ್ಥಿಸಿದ. ಕೈ ಮುಗಿದು ಅವನಿಗೆ ಕರುಣೆ ಬರುವಂತೆ ಬಿನ್ನವಿಸಿದ.

**ಮುನಿಯ ತಂದೆ:-** ದೇವತಾ ಪುರುಷನಾದ ಬುಧನೇ, ಎಷ್ಟೆಂದರೂ ಈ ನನ್ನ ಮಗನು ಇನ್ನೂ ಬಾಲಕ. ನಿನ್ನಂಥ ಉತ್ತಮ ಜನರು ಬಾಲಕರ ಮೇಲೆ ಕೋಪ ಮಾಡುವದು ಉಚಿತವಲ್ಲ. ಸಜ್ಜನರಿಗೆ ಕ್ಷಮೆಯೇ ಭೂಷಣ. ನೀರಿನ ಸ್ವಭಾವವು ಶೈತ್ಯವು ಇದ್ದಂತೆ ದೊಡ್ಡವರ ಸ್ವಭಾವವು ಸ್ವಾಭಾವಿಕವಾಗಿ ಕ್ಷಮಾಭೂಯಿಷ್ಠವಾಗಿರುತ್ತದೆ. ಆದುದರಿಂದ ವಿವೇಕರಹಿತನಾದ ಈ ಬಾಲಕನ ಮೇಲೆ ನೀನು ಬೇಗ ಕ್ಷಮೆದೋರಿ, ಅನುಗ್ರಹವನ್ನು ಮಾಡು.

''ಕ್ಷಮಾಸಾರಾ ಹಿ ಸಾಧವಃ'' ಸಾಧುಗಳು ಕ್ಷಮಯೇ ಪ್ರಧಾನಗುಣವಾಗಿವುಳ್ಳವರು.

ಆ ಮುನಿಯ ಮಾತುಗಳನ್ನು ಕೇಳಿ ಚಂದ್ರಪುತ್ರನಾದ ಆ ಬುಧನು ಶಾಂತನಾದ. ಅವನ ಮೇಲೆ ಅನುಗ್ರಹವನ್ನು ಮಾಡಿದ. ಹೀಗೆ ನುಡಿದ.

**ಬುಧ:-** ಮುನಿಯೇ, ಈ ನಿನ್ನ ಬಾಲಕನು ನನ್ನ ಶಾಪದಂತೆ ಭೂಮಿಯಲ್ಲಿ ಕುಂಡನಾಗಿ ಹುಟ್ಟುತ್ತಾನೆ. ಜಾರಿಣಿಯಾದ ಒಬ್ಬ ಸ್ತ್ರೀಯಿಂದ ಅವನ ಜನ್ಮವು ಆಗುತ್ತದೆ. ಆದರೆ ಅವನ ಉಪನಯನ ಆದ ಬಳಿಕ ಅವನು ತನ್ನ ಉತ್ತಮವಾದ ಪದವನ್ನು ಹೊಂದುತ್ತಾನೆ.

ಹೀಗೆ ಬುಧನ ಶಾಪದಿಂದ ಆ ಮುನಿಯ ಪುತ್ರನು ಭೂಲೋಕದಲ್ಲಿ ಜಾರಿಣಿಯ ಉದರದಲ್ಲಿ ಜನಿಸಿದ. ಉಪನಯನ ಆದ ಬಳಿಕ ಅವನು ತನ್ನ ಮೊದಲಿನ ಸ್ಥಾನ ತಪಶ್ಶಕ್ತಿಗಳನ್ನು ಪಡೆದು, ತನ್ನ ಪಿತೃಗಳನ್ನೂ ಸಹ ಉದ್ಧಾರಮಾಡಿದ.

ಈ ಮಧುವನದ ಪವಿತ್ರವಾದ ಮಾಹಾತ್ಮ್ಯವನ್ನು ಕೇಳಿದವರು ಅಶ್ವಮೇಧಯಾಗ ಮಾಡಿದರೆ ಬರುವಷ್ಟು ಫಲವನ್ನು ಹೊಂದುತ್ತಾರೆ. ಭಕ್ತಿಯಿಂದ ಈ ಭಾಗವನ್ನು ಪಾರಾಯಣ, ಪಠಣ, ಮನನ ಮುಂತಾದವನ್ನು ಮಾಡಿದವರು ದೇಹಾಂತವಾದ ಬಳಿಕ ವಿಷ್ಣುವಿನ ಸಾಲೋಕ್ಯರೂಪ ಮೋಕ್ಷ ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಮುನಿಪುತ್ರನು ಕುಂಡನಾಗಿ ಜನಿಸಲು ಪೂರ್ವಜನ್ಮದ ಕಾರಣ ನಿರೂಪಣ ಎಂಬ*
*ನೂರ ತೊಂಬತ್ತೇಳನೇಯ ಅಧ್ಯಾಯ ಮುಗಿದುದು*



## ಬದರಿಕಾಶ್ರಮ ಮಾಹಾತ್ಮ್ಯ

**ಅಧ್ಯಾಯ - ೧೯೮**

**ನಾರದ:-** ರಾಜನೇ, ಈ ಮಧುವನದಿಂದ ಹನ್ನೊಂದು ಬಿಲ್ಲಿನ ಅಂತರದಲ್ಲಿಯೇ ಬದರಿಕಾಶ್ರಮವು ಇರುತ್ತದೆ. ಈ ತೀರ್ಥದ ದಿವ್ಯ ಮಹಿಮೆಯನ್ನು ನಾನು ನಿನಗಾಗಿ ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಮಗಧದೇಶದಲ್ಲಿ ದೇವದಾಸ ಎಂಬ ಸತ್ಯವಂತನಾದ ಬ್ರಾಹ್ಮಣನಿದ್ದ. ಅವನೊಂದು ಮೂರ್ತಿಮಂತ ಧರ್ಮವೆ. ಸರ್ವ ವಿದ್ಯೆಗಳಲ್ಲೂ ನಿಷ್ಣಾತ. ಬುದ್ಧಿಯಲ್ಲಿ ಅವನೊಬ್ಬ ಭೂಲೋಕದ ಬೃಹಸ್ಪತಿ. ಪ್ರಹ್ಲಾದನಂತೆ ಹರಿಪ್ರೀತಿಕರವಾದ ವ್ಯಾಪಾರವನ್ನು ಸರ್ವದಾ ಮಾಡುತ್ತಲೇ ಇರುತ್ತಿದ್ದ. ಮಡದಿಯೊಡನಿದ್ದರೂ ಪಾರ್ವತೀವಲ್ಲಭನಂತೆ ಕಾಮನನ್ನು ಜಯಿಸಿದ್ದ. ವಿಶ್ವಾಮಿತ್ರ ಮುನಿಯಂತೆ ಸದಾಚಾರಸಂಪನ್ನ. ದ್ರೋಣಾಚಾರ್ಯರು ಕೌರವರ ರಾಜ್ಯದಲ್ಲಿ ಮಾನ್ಯರಾದಂತೆ ಮಗಧರಾಜನ ರಾಜ್ಯದಲ್ಲಿ ದೇವದಾಸನೂ ಪರಮಮಾನ್ಯನಾಗಿದ್ದ. ದೈತ್ಯರಾಜನಾದ ಬಲಿಚಕ್ರವರ್ತಿಯಂತೆ ಸತ್ಪಾತ್ರರಲ್ಲಿ ದಾನಶೀಲ.

ಅವನ ಹೆಂಡತಿಯ ಹೆಸರು ಉತ್ತಮಾ. ಇವಳು ಲಕ್ಷ್ಮೀದೇವಿಯಂತೆ ಗುಣದಿಂದಲೂ ಉತ್ತಮಳಾಗಿದ್ದಳು. ಸೀತೆಯಂತೆ ಪತಿಸೇವಾತತ್ಪರಳು. ಅವಳಿಗೊಬ್ಬ ಮಗ. ಅವನ ಹೆಸರು ಅಂಗದ. ಅತ್ಯಂತ ಬುದ್ಧಿವಂತ. ಈ ದಂಪತಿಗಳಿಗೆ ಒಂದೇ ಒಂದು ಕನ್ಯಾಮಣಿಯೂ

ಇದ್ದಿತು. ಅವಳ ಹೆಸರು ವಲಯಾ. ಒಳ್ಳೆಯ ಸ್ತ್ರೀಯರಲ್ಲಿ ಇರಬೇಕಾದ ಎಲ್ಲ ಲಕ್ಷಣಗಳು ಇದ್ದವು ಆ ವಲಯಾಳಲ್ಲಿ.

ಅಂಗದನು ಪ್ರೌಢನಾದ ಬಳಿಕ ದೇವದಾಸನು ಶುಭಲಕ್ಷಣ ಸಂಪನ್ನಳಾದ ಕನ್ಯೆಯೊಂದಿಗೆ ಒಂದು ಸುಮುಹೂರ್ತದಲ್ಲಿ ವಿವಾಹವನ್ನು ಜರುಗಿಸಿದ ಅದರಂತೆ ತನ್ನ ಮಗಳನ್ನೂ ಉತ್ತಮ ವರನಿಗೆ ಮದುವೆಮಾಡಿ ಕೊಟ್ಟ.

ಪರಮ ಪತಿವ್ರತೆಯಾದ ಆ ವಲಯಾ ಎಂಬ ಸ್ತ್ರೀಯೂ ಅತ್ತೆಯ ಮನೆಯಲ್ಲಿ ಶೀಘ್ರವೇ ಎಲ್ಲರ ಮೆಚ್ಚುಗೆಗೆ ಪಾತ್ರಳಾದಳು. ಸರೀಕರಲ್ಲಿ ಪತಿವ್ರತಾಶಿರೋರತ್ನ ಎನ್ನಿಸಿದಳು. ತಂದೆಯಂತೆಯೇ ಸಕಲ ಶಾಸ್ತ್ರಗಳಲ್ಲೂ ನಿಷ್ಣಾಣತನಾದ ಅಂಗದನೂ ಸಹ ಯೌವನದ ಅಂಗಳದಲ್ಲಿ ಕಾಲಿರಿಸುತ್ತಿದ್ದಂತೆಯೇ, ಕುಟುಂಬದ ಭಾರವನ್ನೆಲ್ಲ ತಾನೇ ಹೊತ್ತು ತಂದೆಗೆ ಸಂಸಾರದ ಚಿಂತೆಯನ್ನು ಕಡಮೆ ಮಾಡಿದ. ಹೀಗೆ ತನ್ನ ಮಗನು ಕುಟುಂಬ ಭಾರವನ್ನು ಸಮರ್ಥ ರೀತಿಯಿಂದ ನಿರ್ವಹಿಸುತ್ತಿರುವದನ್ನು ಕಂಡು ಪರಮ ಸಂತುಷ್ಟನಾದ ದೇವದಾಸನು ಮಡದಿಯನ್ನು ಕರೆದು ಹೇಳಿದ. ''ಭದ್ರೆ ! ಈಗ ನನಗೆ ಮುಪ್ಪು ಸಮೀಪಿಸುತ್ತಲಿದೆ. ತಲೆ ನಡುಗುತ್ತಲಿದೆ. ಕಣ್ಣುಗಳು ಮಂದವಾಗುತ್ತಲಿವೆ. ದೇಹದಲ್ಲಿ ಆಗಾಗ ಕಂಪನವೂ ಉಂಟಾಗುತ್ತಲಿದೆ. ಮನೆ, ಮಡದಿ, ಮಕ್ಕಳು, ಐಶ್ವರ್ಯ ಎಲ್ಲವೂ ಅಶಾಶ್ವತ. ಅನುಪಾದೇಯ, ಹೇಯ. ನಾನು ಜಿತೇಂದ್ರಿಯನಾಗಿ ಸರ್ವ ತೀರ್ಥಯಾತ್ರೆಗಳನ್ನು ವಾನಪ್ರಸ್ಥವಿಧಿಯಿಂದ ಮಾಡಿ ಕೊನೆಗೆ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಯಾವುದಾದರೂ ಉತ್ತಮವಾದ ತೀರ್ಥದಲ್ಲಿ ಪ್ರಾರಬ್ಧಕರ್ಮಗಳನ್ನು ಸವೆಸಿ ಈ ದೇಹವನ್ನು ಪರಿತ್ಯಜಿಸಬೇಕು ಎಂದು ಸಂಕಲ್ಪಿಸಿದ್ದೇನೆ.

**ಉತ್ತಮಾ :-** ಪೂಜ್ಯ, ನಶ್ವರವಾದ ಈ ಸಂಸಾರದಲ್ಲಿಯೇ ಕೊನೆಯವರೆಗೂ ಆಸಕ್ತರಾಗಿ ಶ್ರೀಹರಿಯ ಉಪಾಸನೆಯನ್ನು ಮರೆತು ಹೆಂಗಸಾಗಲೀ, ಗಂಡಸಾಗಲೀ ಇರುವುದು ತರವಲ್ಲ. ಆದುದರಿಂದ ನಿಮ್ಮ ಪಾದಸೇವಕಿಯಾದ ನಾನೂ ಸಹ ನೀವೆಲ್ಲಿ ಹೋಗುವಿರೋ, ಅಲ್ಲಿಗೆ ಬರುತ್ತೇನೆ. ನನ್ನನ್ನೂ ನಿಮ್ಮೊಡನೆ ಕರೆದುಕೊಂಡು ಹೋಗಿರಿ. ಇಬ್ಬರೂ ಸೇರಿಯೇ ತೀರ್ಥಗಳಲ್ಲಿ ಸ್ನಾನಮಾಡಿ, ಭಗವಂತನ ಸೇವೆಯನ್ನು ಮಾಡೋಣ. ನಿಮ್ಮೊಡನೆಯೇ ನನ್ನನ್ನೂ ಈ ಸಂಸಾರ ಸಾಗರದಿಂದ ಉದ್ಧರಿಸಿರಿ. ನಮ್ಮ ಏಕಮಾತ್ರ ಪುತ್ರನಾದ ಅಂಗದನು ಕುಟುಂಬದ ಭಾರವನ್ನು ನಿರ್ವಹಿಸುತ್ತಿದ್ದಾನೆ. ಮನೆಯ ಕೆಲಸಗಳನ್ನೆಲ್ಲ ನನ್ನ ಸೊಸೆಯಾದ ಕಲ್ಯಾಣಿಯು ಅವನಿಗೆ ಅನುಕೂಲಳಾಗಿದ್ದುಕೊಂಡು ಮಾಡಿಕೊಂಡು ಹೋಗುತ್ತಿದ್ದಾಳೆ.

**ಪುತ್ರೇ ಸಮರ್ಥೇ ಯೋ ಮೂಢಃ ಪುರುಷಃ ಸ್ತ್ರೀಜನೋಽಥವಾ ।**
**ನ ವಿರಜ್ಯೇತ ಯೋ ಮೂಢೋ ವಂಚಿತಃ ಶ್ರೇಯಸಾ ಹಿ ಸಃ ॥**

ಯಾವ ಮನುಷ್ಯನು ತನ್ನ ಮಗನು, ಅಥವಾ ಸೊಸೆಯು ಸಮರ್ಥ ರೀತಿಯಿಂದ ಕುಟುಂಬದ ಭಾರವನ್ನೆಲ್ಲ ಹೊತ್ತು ಗೃಹಕೃತ್ಯಗಳನ್ನು ಸಾಂಗವಾಗಿ ನೆರವೇರಿಸುತ್ತಲಿದ್ದರೂ, ತಾನು ಅಧ್ಯಾತ್ಮಸಾಧನೆ ಮಾಡಿಕೊಳ್ಳದಿದ್ದರೆ ಶ್ರೇಯಸ್ಸಿನಿಂದ ವಂಚಿತನಾದಂತೆಯೇ ಸರಿ. ಮೂಢನಾಗದ ಯಾವನೂ ಇಂಥ ತಪ್ಪನ್ನು ಮಾಡಲಾರ. ಆದುದರಿಂದ ನಾನೂ ತಮ್ಮ ಜೊತೆಗೇ ಅಧ್ಯಾತ್ಮ ಜೀವನದಲ್ಲಿಯೂ ಅರ್ಧಾಂಗಿಯಾಗಿ

ಪುಣ್ಯಸಾಧನವನ್ನು ಮಾಡಿಕೊಳ್ಳಲು ನನಗೆ ಅವಕಾಶ ಕೊಡಿರಿ. ದಯಮಾಡಿ ನನ್ನೊಬ್ಬಳನ್ನೇ ಈ ಸಂಸಾರದಲ್ಲಿ ಬಿಟ್ಟು ಹೋಗಬೇಡಿರಿ.

ಹೀಗೆ ಅವರಿಬ್ಬರೂ ದಂಪತಿಗಳು ಪರಸ್ಪರವಾಗಿ ಮಾತನಾಡಿಕೊಂಡು, ತಮ್ಮ ಮಗನಾದ ಅಂಗನನ್ನು ಕರೆದು ಹೇಳಿದರು. ''ಅಂಗದ ! ನಾವಿಬ್ಬರೂ ಮುಪ್ಪಿನಿಂದ ಹಣ್ಣಾಗಿದ್ದೇವೆ. ನಮ್ಮ ದೇಹವು ಶಿಥಿಲವಾಗುತ್ತಲಿದೆ. ಇನ್ನು ಮೇಲೆ ನಾವು ಯಾವುದಾದರೂ ಪುಣ್ಯಕ್ಷೇತ್ರದಲ್ಲಿ ನಿಂತು ನಮ್ಮ ಅಧ್ಯಾತ್ಮ ಶ್ರೇಯಸ್ಸಾಗಗಿ ಶ್ರಮಿಸುತ್ತೇವೆ. ಮಾನವರಿಗೆ ಈ ಭೂಲೋಕದಲ್ಲಿ ಮುಪ್ಪಿನ ಕಾಲಕ್ಕೆ ಶ್ರೀಹರಿಯ ಆರಾಧನೆಯು ಪರಮ ಶ್ರೇಯಸ್ಸಾಧನ ಎಂದು ಶಾಸ್ತ್ರದಲ್ಲಿ ಹೇಳಲ್ಪಟ್ಟದೆ.

**ವಿಷಯೇಷು ನ ಸಂಸಕ್ತಿಃ ಸಮತ್ವಂ ಸರ್ವ ಜಂತುಷು ।**
**ಯೇಷಾಂ ಹರ್ಷವಿಷಾದೌ ಚ ನ ಜಾತು ಸುಖದುಃಖಯೋಃ ॥**

''ಯಾರಿಗೆ ವಿಷಯಗಳಲ್ಲಿ ಆಸಕ್ತಿ ಇಲ್ಲವೋ ಮತ್ತು ಪ್ರಾಣಿಗಳಲ್ಲೂ ಶ್ರೀಹರಿಯು ಸಮಾನವಾಗಿ ವಾಸವಾಗಿದ್ದಾನೆ ಎಂದು ಯಾರು ತಿಳಿದಿರುವರೋ, ಮತ್ತು ಯಾರು ಸುಖ ಬಂದಾಗ ಹಿಗ್ಗುವದಿಲ್ಲವೋ, ದುಃಖ ಬಂದಾಗ ಕುಗ್ಗುವದಿಲ್ಲವೋ ಅವರೇ ಸಾಧುಗಳು.

**ತ ಏವ ಸಾಧವೋ ಲೋಕೇ ಗೋವಿಂದ ಪದಸೇವಿನಃ ।**
**ಯೇಷಾಂ ದರ್ಶನಮಾತ್ರೇಣ ಕೃತಾರ್ಥೋ ಜಾಯತೇ ನರಃ ॥**

ಶ್ರೀಹರಿಯ ಪಾದವನ್ನು ಹಗಲಿರುಳೂ ಸೇವಿಸುವ ಸಜ್ಜನರೇ ಸಾಧುಗಳು ಎಂದು ಕರೆಯಲ್ಪಡುತ್ತಾರೆ. ಅಂಥವರ ದರ್ಶನಮಾತ್ರದಿಂದಲೇ ಮನುಷ್ಯನು ಕೃತಾರ್ಥನಾಗುವನು.

**ತೀರ್ಥಾನಿ ಪರ್ಯಟನ್ ಧೀರಃ ತದ್ದರ್ಶನ ಸಮುತ್ಸುಕಃ ।**
**ಭಾಗ್ಯೋದಯೇನ ಕೇನಾಽಪಿ ತದ್ದರ್ಶನ ಮವಾಪ್ನುಯಾತ್ ॥**

ತೀರ್ಥಯಾತ್ರೆಗೆಂದು ಮಾನವನು ಸಂಚಾರಗೈಯುತ್ತಿರುವಾಗ, ಅದೃಷ್ಟದಿಂದ ಒಮ್ಮೊಮ್ಮೆ ಅಂಥ ಪುರುಷರು ಕಣ್ಣಿಗೆ ಬೀಳುವರು. ಅಂಥ ಮಹಾಪುರುಷರು ಪವಿತ್ರ ತೀರ್ಥಗಳಲ್ಲಿ ಸ್ನಾನ ಮಾಡುತ್ತ ಕ್ಷೇತ್ರ ಮೂರ್ತಿದರ್ಶನಕ್ಕಾಗಿ ಸಂಚರಿಸುತ್ತಿರುತ್ತಾರೆ. ಮಾನವನು ತೀರ್ಥಕ್ಷೇತ್ರಯಾತ್ರೆ ಮಾಡುವಾಗ ತೀರ್ಥಸ್ನಾನ, ಭಗವದ್ದರ್ಶನ ಲಾಭವಷ್ಟೇ ಅಲ್ಲದೇ ಇಂಥ ಪುಣ್ಯಪುರುಷರ ಸಮಾಗಮವೂ ಒಮ್ಮೊಮ್ಮೆ ಒದಗಿಬರುವದು.

ಆದುದರಿಂದ ಕುಟುಂಬ ಭಾರವನ್ನೆಲ್ಲ ನಿನಗೆ ವಹಿಸಿ ನಾವು ತೀರ್ಥಯಾತ್ರೆಗೆ ಹೋಗುವದಾಗಿ ಸಂಕಲ್ಪಿಸಿದ್ದೇವೆ ನಮಗೂ ಸಹ ಇಂಥ ತೀರ್ಥಯಾತ್ರಾ ಪ್ರಸಂಗದಿಂದ ಯಾರಾದರೂ ಮಹಾನುಭಾವರ ಸಂದರ್ಶವಾಗಬಹುದು.

**ಅಂಗದ :-** ಪೂಜ್ಯರಾದ ತಾಯ್ತಂದೆಗಳೇ, ನೀವು ಈಗ ಹೇಳಿದ ಮಾತು, ಈ ತೀರ್ಥಯಾತ್ರಾ ಪ್ರಸಂಗ, ಸಾಧುಸಜ್ಜನ ಸಮಾಗಮ, ಕೇವಲ ನಿಮ್ಮ ಆತ್ಮೋದ್ಧಾರಕ್ಕಾಗಿ ಮಾತ್ರವಲ್ಲ. ನಮ್ಮ ಸಕಲ ಕುಟುಂಬವೇ ಇದರಿಂದ ಪುಣ್ಯಭಾಗಿಯಾಗುವದು. ಸಂಸಾರದಿಂದ ಉದ್ಧಾರಹೊಂದುವ ಶ್ರೇಷ್ಠ ಉಪಾಯವನ್ನೇ ನೀವೀಗ ಕೈಗೊಳ್ಳಲಿರುವಿರಿ. ಇದಕ್ಕಾಗಿ ನಾನು ನಿಮ್ಮ ಯಾವ ಸೇವೆಯನ್ನು ಮಾಡಲಿ? ಅಪ್ಪಣೆ ನೀಡಿರಿ. ಪುಣ್ಯತೀರ್ಥಗಳಲ್ಲಿ, ಕ್ಷೇತ್ರಗಳಲ್ಲಿ ದಾನ ನೀಡಲು ಎಷ್ಟು ಧನ ಬೇಕಾಗಬಹುದೋ ಅಷ್ಟೆಲ್ಲ ಧನವನ್ನೂ ನೀವು ತೆಗೆದುಕೊಳ್ಳಿರಿ.

ನನ್ನನ್ನೂ ನಿಮ್ಮ ಜೊತೆಗೆ ಕರೆದುಕೊಂಡು ಹೋಗಿರಿ. ನಿಮ್ಮ ಸೇವೆಯನ್ನು ಬದುಕಿರುವವರೆಗೂ ಮಾಡಬೇಕೆಂದು ನಾನು ಸಂಕಲ್ಪಿಸಿದ್ದೇನೆ.

ಮಗನ ಈ ಮಾತುಗಳನ್ನು ಕೇಳಿ ಪರಮ ಸಂತೋಷವಾಯಿತು ಆ ದಂಪತಿಗಳಿಗೆ. ತಮಗೆ ಪುಣ್ಯತೀರ್ಥ ಕ್ಷೇತ್ರದಲ್ಲಿ ದಾನಕ್ಕಾಗಿ ಬೇಕಾಗುವ ಹಣವನ್ನು ಮಗನಿಂದ ಸ್ವೀಕರಿಸಿ ಅಲ್ಲಿಂದ ಹೊರಟರು. ಮಗನೂ ಸಹ ಅವರ ಸೇವೆಯನ್ನು ಮಾಡಲಿಕ್ಕಾಗಿ ಅವರ ಬೆನ್ನುಹತ್ತಿದ. ಹದಿನಾರು ಮೈಲುಗಳವರೆಗೆ ಮಗ ಹಿಂಬಾಲಿಸಿ ಬಂದದ್ದನ್ನು ಕಂಡು ಆ ದಂಪತಿಗಳು "ಮನೆಗೆ ಹಿಂದಿರುಗು. ಕುಟುಂಬ ರಕ್ಷಣೆ ನಿನ್ನ ಕರ್ತವ್ಯ. ಇದು ನಮ್ಮೊಡನೆ ಬರುವ ಸಮಯವಲ್ಲ." ಎಂದು ಮೃದುವಾಗಿ ಉಪದೇಶಿಸಿ ಮನೆಗೆ ಕಳುಹಿಸಿದರು. ತಾವು ಮಾತ್ರ ಮುಂದೆ ನಡೆದರು. ದಾರಿಯಲ್ಲಿನ ಗೆಡ್ಡೆ-ಗೆಣಸು, ಹಣ್ಣು ಹಂಪಲುಗಳೇ ಅವರ ಆಹಾರವಾಗಿದ್ದವು. ಹೀಗೆ ಆ ದಂಪತಿಗಳು ಮುನಿವೃತ್ತಿಯಿಂದಲೇ ತೀರ್ಥಕ್ಷೇತ್ರಗಳಲ್ಲಿ ಸಾಧನೆಗೈಯುತ್ತ ಸಂಚರಿಸುತ್ತಿದ್ದರು.

ಒಂದು ದಿನ ಅವರಿಗೆ ಸಿದ್ಧಪುರುಷನೊಬ್ಬನು ಕಂಡ. ಅವನನ್ನು ನೋಡಿದ ಕೂಡಲೇ ಈ ದಂಪತಿಗಳು ತಲೆಬಾಗಿ ನಮಸ್ಕರಿಸಿ, ಗೌರವಾದರಗಳನ್ನು ಸಲಿಸಿದರು. ನಮ್ರತೆಯಿಂದ ಪ್ರಶ್ನೆ ಮಾಡಿದರು.

**ದಂಪತಿಗಳು:-** ತಾವು ಯಾರು? ಎಲ್ಲಿಂದ ಬಂದಿರಿ? ತಾವು ಯಾವ ಕಾರ್ಯವನ್ನು ಮಾಡಬೇಕೆಂದು ಬಯಸುತ್ತಲಿರುವಿರಿ? ಎಂದು ಪ್ರಶ್ನೆ ಮಾಡಿದರು.

**ಸಿದ್ಧ:-** ತಾಪಸಶ್ರೇಷ್ಠನೇ, ನಾನು ಕಲ್ಪಗ್ರಾಮದಲ್ಲಿ ವಾಸಮಾಡುತ್ತಲಿರುವ ಒಬ್ಬ ಸಿದ್ಧ. ನಾನು ಇಂದ್ರಪ್ರಸ್ಥದಿಂದ ಇಲ್ಲಿಗೆ ಬಂದಿದ್ದೇನೆ. ಆ ಇಂದ್ರಪ್ರಸ್ಥದಲ್ಲಿ ನಾರಾಯಣನಿಗೆ ಸಮನಾದ ಗುಣಗಳುಳ್ಳ ಕಪಿಲನೆಂಬ ಮುನಿಯು ವಾಸಿಸುತ್ತಿದ್ದಾನೆ. ಅವನ ಬಳಿಯಲ್ಲಿ ನಾನು ಸಾಂಖ್ಯಶಾಸ್ತ್ರವನ್ನು ಅಭ್ಯಾಸ ಮಾಡುತ್ತ ಅವನ ಆಶ್ರಮದಲ್ಲಿ ವಾಸಮಾಡಿದೆ. ಒಂದು ದಿನ ನನ್ನ ಗುರುಗಳಾದ ಕಪಿಲ ಮಹರ್ಷಿಗಳು ಸ್ನಾನ ಮಾಡಲಿಕ್ಕಾಗಿ ಬದರೀಕ್ಷೇತ್ರಕ್ಕೆ ಹೋಗಿದ್ದರು. ಮಧುವನದಲ್ಲಿರುವ ಯಮುನಾತೀರದ ದಂಡೆಯ ಮೇಲೆ ಆ ಬದರೀಕ್ಷೇತ್ರದಲ್ಲಿ ಸ್ನಾನವನ್ನು ಮಾಡುವದರಿಂದ ಮಾನವರ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ಈ ಬದರೀಕ್ಷೇತ್ರದ ಮಹಾಮಹಿಮೆಯನ್ನು ತಿಳಿದ ಕಪಿಲರು ತಮ್ಮ ಆಶ್ರಮದಿಂದ ಯಮುನಾ ತೀರದಲ್ಲಿರುವ ಆ ಬದರೀ ಕ್ಷೇತ್ರಕ್ಕೆ ಪ್ರಯಾಣ ಮಾಡಿದರು. ಅಲ್ಲಿ ಒಂದು ಕಾಡುಕೋಣವು ನೀರು ಕುಡಿಯಲಿಕ್ಕಾಗಿ ನದಿಗೆ ಬಂದಿತ್ತು. ಯಮುನೆಯ ನೀರನ್ನು ಪಾನ ಮಾಡಿದ ಕೂಡಲೇ ಆ ಕಾಡುಕೋಣಕ್ಕೆ ಪೂರ್ವಜನ್ಮದ ಸ್ಮರಣೆಯು ಒದಗಿ ಬಂದಿತು. ಜನ್ಮಾಂತರದ ಸ್ಮರಣವು ಉದ್ಬುದ್ಧವಾದ ಕೂಡಲೇ ಆ ಅಡವಿಕೋಣವು ನೀರಿನಿಂದ ಒಮ್ಮೆಲೇ ಹೊರಗೆ ಬಂದು, ಕುಳಿತುಕೊಂಡು ಮುನಿಪುಂಗವರಾದ ಕಪಿಲ ಮಹರ್ಷಿಗೆ ವಂದನೆ ಮಾಡಿತು. ಮಾನವರ ಭಾಷೆಯಿಂದಲೇ ಅದು ಮಾತನಾಡತೊಡಗಿತು. ಆಗ ನಾನೂ ನನ್ನ ಗುರುಗಳ ಜೊತೆಗೆ ಸ್ನಾನ ಮಾಡಿ ನಿಂತುಕೊಂಡಿದ್ದೆ. ಆ ಕೋಣವು ಮನುಷ್ಯ ವಾಣಿಯಿಂದ ನಮ್ಮ ಗುರುಗಳನ್ನು ಕುರಿತು ಹೇಳಿತು.

**ಕೋಣ:-** ಮುನೀಶ್ವರರೇ, ನಾನು ಪೂರ್ವಜನ್ಮದಲ್ಲಿ ಕಳಿಂಗ ದೇಶದ ಮಹಾಬಲಿಷ್ಠನಾದ ಮಹಾರಾಜನಾಗಿದ್ದೆ. ಅಧಿಕಾರ, ಐಶ್ವರ್ಯ, ತಾರುಣ್ಯ ಎಲ್ಲವೂ ನನ್ನಲ್ಲಿ

ಮೇಳವಿಸಿದ್ದವು. ಅದರಿಂದ ನಾನು ಕಾಮಾಂಧನಾಗಿ ಕಂಡ ಕಂಡ ಸ್ತ್ರೀಯರನ್ನೆಲ್ಲ ಭೋಗಿಸುತ್ತಿದ್ದೆ. ಸುಸ್ವಭಾವಿಗಳಿಂದ ದುಡ್ಡನ್ನು ಕಿತ್ತಿಕೊಳ್ಳುತ್ತಿದ್ದೆ. ರಾತ್ರಿ ಕಾಲದಲ್ಲಿ ಸುಂದರ ಸ್ತ್ರೀಯರ ಕಾಮಕೇಳಿ ವಿಲಾಸಗಳನ್ನರಸುತ್ತ ನಿರ್ಲಜ್ಜನಾಗಿ ತಿರುಗಾಡುತ್ತಿದ್ದೆ. ಯಾರ ಮನೆಯಲ್ಲಾದರೂ ಒಳ್ಳೇರೂಪವತಿಯಾದ ಸ್ತ್ರೀ ಇದ್ದರೆ, ಅದು ನನಗೆ ತಿಳಿದ ದಿನದಿಂದಲೇ ಅವರ ಮನೆಗೆ ಹೋಗಿ ಒಂದು ದಿನ ಅಲ್ಲಿಯೇ ಇದ್ದು, ಆ ಸ್ತ್ರೀಯರೊಡನೆ ಸ್ವಚ್ಛಂದ ಭೋಗಮಾಡಿ ಮರಳಿ ಬರುತ್ತಲಿದ್ದೆ. ಆ ಸ್ತ್ರೀಯರನ್ನು ಭೋಗಿಸವದಲ್ಲದೇ ಬರುವಾಗ ಅವರ ಮನೆಯಲ್ಲಿನ ಹಣವನ್ನು ದೋಚಿಕೊಂಡು ಬರುತ್ತಿದ್ದೆ.

ಒಂದು ದಿನ ಬಂದು ಸಭೆಯಲ್ಲಿ ಕುಳಿತು ಇಬ್ಬರು ಪಟ್ಟಣದ ಬಾಲಕರನ್ನು ಬಾಹು ಯುದ್ಧದಿಂದ ಅಲ್ಲಿ ನೆರೆದ ಜನರನ್ನು ರಂಜಿಸಬೇಕು ಎಂದು ಹೇಳಿದೆ. ಅವರಲ್ಲಿ ಒಬ್ಬನು ಶ್ರೀಮಂತ ತರುಣ. ಅವನು ಇನ್ನೊಬ್ಬನೊಡನೆ ಮುಷ್ಟಿಯುದ್ಧವನ್ನು ನನ್ನ ಅಪ್ಪಣೆಪಡೆದು ಪ್ರಾರಂಭಿಸಿದ. ಆ ಹೋರಾಟದಲ್ಲಿ ಗೆದ್ದ ಬಾಲಕನಿಗೆ ಸೇರಿದ ಹಣವನ್ನು ನಾನು ಕಸಿದುಕೊಂಡೆ. ಪರಾಜಿತನಾದ ಬಾಲಕ ದರಿದ್ರನಾಗಿದ್ದರಿಂದ ಅವನು ನನಗೇನೂ ಹಣವನ್ನು ಕೊಡಲು ಸಮರ್ಥನಾಗಿರಲಿಲ್ಲ. ''ನೀನು ನನ್ನ ಎದುರು ನಿಲ್ಲಲು ಅಯೋಗ್ಯನಾಗಿರುವಿ.'' ಎಂದು ಹೇಳಿ ನಾನು ಅವನನ್ನು ಹೊಡೆದು ಸಂಹರಿಸಿದೆ. ಹೀಗೆ ನನ್ನ ಪಟ್ಟಣಿಗರನ್ನು ಹಣ ದೋಚುವದು, ಕೊಲ್ಲುವುದು, ಸ್ತ್ರೀ ಬಲಾತ್ಕಾರ ಮುಂತಾದ ನಾನಾ ಪ್ರಕಾರಗಳಿಂದ ಹಿಂಸೆ ನೀಡುತ್ತಿದ್ದೆ. ಸದಾ ಶೃಂಗಾಲೋಲುಪನಾಗಿ ಪ್ರಜಾಪೀಡಕನಾಗಿ ಸ್ವಚ್ಚಂದ ಜೀವನ ಸಾಗಿಸುತ್ತಲಿದ್ದೆ.

ಹೀಗಿರಲು ಒಂದು ದಿನ ನಮ್ಮ ನಗರಕ್ಕೆ ದೂರ್ವಾಸರ ಆಗಮನವಾಯಿತು. ರುದ್ರಾಂಶಸಂಭೂತರಾದ ಆ ಮುನೀಶ್ವರರಿಗೆ ನಾಗರಿಕರೆಲ್ಲರೂ ಸೇರಿ ಸ್ವಾಗತ ಸತ್ಕಾರ ಕೋರಿ ಅವರನ್ನು ಕುರಿತು ಮಾತನಾಡಿದರು.

**ನಾಗರಿಕರು:-** ಮುನಿಸಿಂಹ ದೂರ್ವಾಸರೇ, ನಮ್ಮ ಮೇಲೆ ದಯೆದೋರಿರಿ. ನಮ್ಮ ರಾಜನು ಸರ್ವದಾ ಅಧರ್ಮ, ಹಿಂಸೆ, ಮುಂತಾದ ವಾಮ ಮಾರ್ಗಗಳಲ್ಲೇ ಆಸಕ್ತ. ಪ್ರತಿನಿತ್ಯ ಅವನಿಂದ ನಾವು ಪೀಡಿತಾರಗುತ್ತಿದ್ದೇವೆ. ಇಂಥ ಸಂದರ್ಭದಲ್ಲಿ ನಮ್ಮ ಭಾಗ್ಯೋದಯದಿಂದಲೇ ತಾವು ನಮ್ಮ ನಗರಕ್ಕೆ ಆಗಮಿಸಿದ್ದೀರಿ. ನಮಗೆ ಈ ಮಹಾರಾಜ ನಿಂದಾಗುವ ಉಪಟಳ, ಸಮುದ್ರದಂತೆ ಅಪಾರ. ದುರ್ಗುಣಗಳಿಗೆಲ್ಲ ಈ ರಾಜನು ತವರುಮನೆ, ಏನಾದರೂ ಮಾಡಿ ಈ ದುಷ್ಟ ರಾಜನಿಂದ ನಮ್ಮನ್ನು ಕಾಪಾಡಿರಿ.

ಹೀಗೆ ಎಲ್ಲ ನಾಗರಿಕರೂ ಬಂದು ವಿಜ್ಞಾಪನೆ ಮಾಡಿಕೊಂಡಾಗ ಮುನಿಮಂಡಲದ ಮಾರ್ತಂಡರಂತಿದ್ದ ಆ ದೂರ್ವಾಸ ಮುನಿಗಳು ನನ್ನನ್ನು ದಂಡಿಸಬೇಕು ಎಂದು ಆಲೋಚಿಸಿ, ಸಭಾಮಧ್ಯದಲ್ಲಿ ಕುಳಿತಿದ್ದ ನನ್ನೆಡೆಗೆ ಬರತೊಡಗಿದರು. ಆಗ ನಾನದನ್ನು ಕಂಡು ಪಕ್ಕದಲ್ಲಿದ್ದ ರಾಜದೂತರಿಗೆ ಹೇಳಿದೆ.

**ರಾಜ:-** ''ಇವನು ಒಬ್ಬ ಅವಧೂತ. ಮೈಮೇಲೆ ತುಂಡು ಬಟ್ಟೆಯಿಲ್ಲ. ಮೈ ತುಂಬ ಬೂದಿ ಬಳಿದಿದ್ದಾನೆ. ಇಂಥ ಕಾಡುಕೋಣದಂತೆ ಆಕಾರವುಳ್ಳ ಈ ಮುನಿ ದರ್ಶನಕ್ಕೂ ಅಯೋಗ್ಯನಾಗಿದ್ದಾನೆ. ಇವನನ್ನು ದೂರತಳ್ಳಿರಿ.''

ಎಂದು ಆಜ್ಞೆ ನೀಡಿದೆ. ರಾಜನಾದ ನನ್ನ ಅಪ್ಪಣೆಯನ್ನು ಕೇಳಿದ ಕೂಡಲೇ ಭೃತ್ಯರು ಆ ಮುನಿಯನ್ನು ಅಲ್ಲಿಂದ ಹೊರಗೆ ಹಾಕಲು ಎದ್ದರು. ಅದನ್ನು ಕಂಡು ಆ ತಪಸ್ವೀವರೇಣ್ಯರು ಕಣ್ಣು ಕೆಂಪಗೆ ಮಾಡಿ 'ಹುಂ' ಎಂದು ಧ್ವನಿಯನ್ನು ಮಾಡಿದರು. ಅವರ ಹೂಂಕಾರ ಧ್ವನಿಯಿಂದ ನನ್ನ ದೂತರೆಲ್ಲ ಸುಟ್ಟುಬೂದಿಯಾದರು. ಹಿಂದೆ ಸಗರರಾಜಕುಮಾರರೆಲ್ಲರೂ ಕಪಿಲಮುನಿಯ ನೇತ್ರಾಗ್ನಿಯಿಂದ ದಗ್ಧರಾದಂತೆ ನನ್ನ ಭೃತ್ಯರು ಹಾಗೂ ಸೈನಿಕರು ದೂರ್ವಾಸ ಮುನಿಯ ಹುಂಕಾರದಿಂದಲೇ ಸುಟ್ಟು ಬೂದಿಯಾಗುತ್ತಿರುವದನ್ನು ನೋಡಿ ಆ ಕಳಿಂಗ ಭೂಪತಿಯು ಅಲ್ಲಿಂದ ಎದ್ದು ತನ್ನ ಮನೆಯ ಕಡೆಗೆ ಹೊರಟುನಿಂತ. ಅದನ್ನು ಕಂಡು ಆ ಮುನಿವರ್ಯರು ಅವನನ್ನು ಗದಿರುಸುತ್ತ ಸಂಬೋಧಿಸಿ ಹೀಗೆ ಹೇಳಿದರು.

**ದೂರ್ವಾಸ :-** ಎಲೈ ಪಾಪಿಯೇ, ನೀನು ಕಾಡುಕೋಣನಂತೆ ವರ್ತಿಸಿ, ಪ್ರಜಾಜನರಿಗೆ ಪೀಡೆಯನ್ನು ಉಂಟು ಮಾಡಿ, ನನ್ನನ್ನೇ ಮಹಿಷಾಕೃತಿಯ ಮುನಿ ಎಂಬುದಾಗಿ ಹೀಯಾಳಿಸಿ, ನಿನ್ನ ಭೃತ್ಯರಿಗೆ ಹೊರತಳ್ಳಲು ಆಜ್ಞೆ ನೀಡಿದೆ. ಮದಾಂಧನಾದ ನೀನು ಗೊಂಡಾರಣ್ಯದಲ್ಲಿ ಕೋಣವೇ ಆಗು.'' ಹೀಗೆ ಶಪಿಸಿರು.

ಆ ಮುನಿಮಹಾನುಭಾವರ ಶಾಪ ಹುಸಿಹೋಗಲಿಲ್ಲ. ನನ್ನ ರಾಜದೇಹ ಕಳೆದು ಮರುದೇಶದಲ್ಲಿನ ಈ ಗೊಂಡಾರಣ್ಯದಲ್ಲಿ ಕೋಣನಾಗಿ ಹುಟ್ಟಿದ್ದೇನೆ. ಇಲ್ಲಿದ್ದು ಬಹಳ ದಿನಗಳಾದವು. ಮುನಿವರ್ಯರೇ, ಇಂಥ ಈ ಕುಕೃತ್ಯಗಳನ್ನು ಮಾಡಿದ ನಾನೂ ಸಹ ಇಂಥ ಪುಣ್ಯ ಕ್ಷೇತ್ರಕ್ಕೆ ಬರಲು ಕಾರಣವಿದೆ. ನಾನು ಕಳಿಂಗದೇಶದ ರಾಜನಾಗಿದ್ದಾಗ ಅನೇಕ ಬಾವಿಗಳನ್ನು ತೋಡಿಸಿದೆ. ಕೆರೆ-ಕಾಲುವೆಗಳನ್ನೂ ನಿರ್ಮಿಸಿದೆ. ಸರೋವರಗಳನ್ನೂ ಅಲ್ಲಲ್ಲಿ ಏರ್ಪಡಿಸಿದೆ. ಮಾವು ಬೇವು ಮುಂತಾದ ಮರಗಳನ್ನೂ, ರಸ್ತೆಯ ಇಬ್ಬದಿಗಳಲ್ಲೂ ನೆಟ್ಟು ಪ್ರಜೆಗಳಿಗೆ ಉಪಕಾರಮಾಡಿದೆ. ಆ ಪುಣ್ಯದಿಂದ ನರಕದಲ್ಲಿ ಬೀಳುವ ಪ್ರಸಂಗ ತಪ್ಪಿತು. ಅಷ್ಟೇ ಅಲ್ಲದೆ ಆ ಪುಣ್ಯ ಪ್ರಭಾವದಿಂದಲೇ ಈ ತೀರ್ಥಜಲವನ್ನು ಸ್ಪರ್ಶಿಸುವ ಭಾಗ್ಯ ಒದಗಿತು. ಮಹಿಷ ಜನ್ಮದಲ್ಲಿದ್ದ ನನಗೆ ಈ ಪುಣ್ಯ ಜಲದ ಸ್ಪರ್ಶಮಾತ್ರದಿಂದಲೇ ಜನ್ಮಾಂತರದ ಸ್ಮರಣೆ ಬಂದಿತು. ಆದರೆ ಮುನೀಶ್ವರರೇ, ನನಗೆ ಈ ಪಾಪಿ ಜನ್ಮದಿಂದ ಮುಕ್ತಿ ಹೇಗೆಂದೇ ತೋಚುತ್ತಿಲ್ಲ. ದಯವಿಟ್ಟು ತಾವು ತಿಳಿಸಿರಿ.

**ಕಪಿಲ :-** ಸಾಕ್ಷಾತ್ ಶ್ರೀಹರಿಯೇ ಹಾಟಕೇಶ್ವರದಲ್ಲಿ ನಿರ್ಮಿಸಿದ ನವೀನವಾದ ಬದರೀಕ್ಷೇತ್ರವಿದು. ಇಲ್ಲಿನ ತೀರ್ಥದಲ್ಲಿ ನೀನು ಸ್ನಾನಮಾಡು. ನಿನ್ನ ಮನೋರಥವು ಪೂರ್ಣವಾಗುವದು.

ಆ ಮಹಾಮುನಿಯ ಆದೇಶವನ್ನು ಕೇಳಿ ಕಾಡುಕೋಣವು ಸ್ವರ್ಗವನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ ಅಲ್ಲಿನ ನೀರಿನಲ್ಲಿ ಇಳಿಯಿತು. ಶ್ರದ್ಧೆಯಿಂದ ಆ ತೀರ್ಥದಲ್ಲಿ ಮಿಂದಿತು. ತಕ್ಷಣವೇ ದೇವೇಂದ್ರನು ಐರಾವತವನ್ನು ಏರಿಕೊಂಡು ಅಲ್ಲಿಗೆ ಆಗಮಿಸಿದ. ಮತ್ತು ಆ ಕಾಡುಕೋಣವನ್ನು ಕುರಿತು ನುಡಿದ. ''ಕಳಿಂಗರಾಜನೇ, ನೀನು ಈ ತೀರ್ಥದಲ್ಲಿ ಸ್ನಾನ ಮಾಡಿದ್ದರಿಂದ ನಿನ್ನ ಮಹಿಷದೇಹವನ್ನು ತ್ಯಜಿಸು. ನಾನು ಅನುಗ್ರಹಿಸುವ ಈ ದಿವ್ಯಶರೀರವನ್ನು ಧಾರಣೆಮಾಡು. ನನ್ನೊಡನೆ ಸ್ವರ್ಗಕ್ಕೆ ಹೊರಡಲು ಸನ್ನದ್ಧನಾಗು. ನೀನು ಸ್ವರ್ಗದ ಅಪೇಕ್ಷೆಯಿಂದಲೇ ಈ ತೀರ್ಥದಲ್ಲಿ

ಸ್ನಾನಮಾಡಿದೆಯಷ್ಟೇ. ನಿನ್ನ ಅಪೇಕ್ಷೆಯಂತೆ ಸ್ವರ್ಗನೀಡಲು, ನಾನಿಲ್ಲಿಗೆ ನಿನ್ನನ್ನು ಕರೆದೊಯ್ಯಲು ಬಂದಿದ್ದೇನೆ.

ದೇವೇಂದ್ರನ ಅಪ್ಪಣೆಯಂತೆ ಕಳಿಂಗರಾಜನು ತನ್ನ ಮಹಿಷ ಶರೀರವನ್ನು ತ್ಯಜಿಸಿ ದಿವ್ಯವಾದ ಶರೀರವನ್ನು ಪಡೆದು, ಅಲ್ಲಿಯೇ ಇದ್ದ ಕಪಿಲಮುನೀಶ್ವರರಿಗೆ ಸಾಷ್ಟಾಂಗ ಪ್ರಣಾಮಗೈದು ಸ್ತೋತ್ರಮಾಡಿದನು.

**''ನಮಸ್ತೇ ಪರಮೇಶಾನ ಕೇವಲಜ್ಞಾನಹೇತವೇ ।**
**ಸೇತವೆ ವೇದವಿದ್ಯಾನಾಂ ರಿಪವೇ ತದ್ವಿರೋಧಿನಾಮ್ ॥''**

ಪರಮೇಶ್ವರನ ಸ್ವರೂಪಿಯಾದ ಕಪಿಲದೇವಾ, ನೀನು ಮೋಕ್ಷದ ಜ್ಞಾನಕ್ಕೆ ಮುಖ್ಯ ಕಾರಣ ವೇದವಿದ್ಯಾ ಸಮುದ್ರಕ್ಕೆ ಒಂದು ಸೇತುವೆ. ವೇದವಿರೋಧಿಗಳಾದ ರಾಕ್ಷಸರ ವೈರಿ. ನಿನ್ನಿಂದಲೆ ಸಾಂಖ್ಯ ಶಾಸ್ತ್ರವು ಜಗತ್ತಿನಲ್ಲಿ ಪ್ರವೃತ್ತವಾಗಿದೆ. ಮಾಯೆಯಿಂದ ಅರ್ಥಾತ್ ಅಜ್ಞಾನದಿಂದ ಆವೃತ್ತರಾದ ಮನುಷ್ಯರ ಅಜ್ಞಾನವನ್ನು ಕಳೆದು ತತ್ವಜ್ಞಾನವನ್ನು ತಿಳಿತಿಳಿಯಾಗಿ ತಿಳಿಸಿಕೊಡುವ ಶಾಸ್ತ್ರವೇ ಅಂಥ ಸಾಂಖ್ಯಶಾಸ್ತ್ರ. ಅಂಥ ಸಾಂಖ್ಯ ಶಾಸ್ತ್ರಕ್ಕೆ ಮೂಲ ಪ್ರವರ್ತಕನೇ ನೀನು. ವೇದವಿಹಿತವಾದ ಸದಾಚಾರವನ್ನು ಧಿಕ್ಕರಿಸಿ ತಮ್ಮ ಸ್ವೇಚ್ಛಾನುಸಾರವಾಗಿ ತಿರುಗುವ ದಂಡನೀಯರಾದ ದುಷ್ಟರನ್ನು ನೀನು ನೀಚಯೋನಿಗಳಲ್ಲಿ ದುಃಖಪಡಿಸಿ ಶಿಕ್ಷಿಸು.

**''ಇಂದ್ರಾದಯೋ ಲೋಕಪಾಲಾಃ ಸರ್ವೇ ತ್ವದಧೀನಾಃ ।**
**ತ್ವದಿಚ್ಛಾ ಅನುವರ್ತಂತೇ ಭೀತಾ ದಂಡಕೃತೋ ಹಿತೇ ॥**

ಜಗತ್ತಿನ ಜನರು ಮಾಡಿದ ಅಪರಾಧಗಳಿಗೆ ಇಂದ್ರಾದಿ ಲೋಕಪಾಲಕರೂ ಸಹ ಸರ್ವಲೋಕಾಧಿಪತಿಯಾದ, ಸರ್ವೇಶ್ವರನಾದ, ನಿನ್ನ ಇಚ್ಛೆಯನ್ನೇ ಅನುವರ್ತಿಸಿಕೊಂಡು ನಡೆಯುತ್ತಾರೆ.

**''ತ್ರಯೀ ಧರ್ಮವಿರೋದ್ಧಾರಃ ಪೂರ್ವದೇವಾ ಯುಗೇ ಯುಗೇ ।**
**ಅವತೀರ್ಯ ವಿನಾಶಾಯ ಕೃತಾ ಸರ್ವಾತ್ಮನಾ ತ್ವಯಾ ॥''**

ವೇದಧರ್ಮಕ್ಕೆ ವಿರೋಧವನ್ನು ಮಾಡುವ ದೈತ್ಯರು ಪಾಖಂಡ ಧರ್ಮವನ್ನು ಜಗತ್ತಿನಲ್ಲಿ ಪ್ರಸಾರ ಮಾಡಿದಾಗ ನೀನು ಯುಗಯುಗಗಳಲ್ಲಿ ಅವತರಿಸಿ, ಅವರನ್ನು ನಾಶಗೊಳಿಸಿ, ವೇದಧರ್ಮವನ್ನು ಪುನಃ ಪ್ರತಿಷ್ಠಾಪನೆ ಮಾಡಿದೆ. ಆದುದರಿಂದ

**''ಅಜ್ಞಾಪಯ ಜಗನ್ನಾಥ ಗತುಂ ಮಾಂ ತ್ರಿದಶಾಲಯಂ ।**
**ಅನುಗೃಹ್ಣೀಷ್ವ ಶಕ್ರಂ ತಂ ನಮಂ ತಂವೀಕ್ಷಣಾಮೃತೈಃ ॥**

ಸ್ವರ್ಗಲೋಕಕ್ಕೆ ನನ್ನನ್ನು ಕರೆದೊಯ್ಯಲು ಬಂದಿರುವ ನಿನಗೆ ನಮಸ್ಕರಿಸುತ್ತಿರುವೆ. ಈ ದೇವೇಂದ್ರನನ್ನು ನೀನು ಕೃಪಾದೃಷ್ಟಿಯಿಂದ ನೋಡು. ನನಗೂ ಸ್ವರ್ಗಕ್ಕೆ ಸಾಗಲು ಆಜ್ಞೆ ನೀಡು.

**''ಪ್ರಸಾದಾತ್ತವ ದೇವೇಶ ಬದರ್ಯಾಖ್ಯಸ್ಯ ಚ ಪ್ರಭೋ ।**
**ತೀರ್ಥಸ್ಯ ಸ್ವತನುಂ ಹಿತ್ವಾ ತಾಮಸೀಂ ಸಾತ್ವಿಕೀಂ ಗತಃ ॥''**

ದೇವತೆಗಳ ಒಡೆಯನಾದ ಕಪಿಲದೇವಾ, ನಿನ್ನ ಪ್ರಸಾದದಿಂದ ಈ ಬದರೀಕ್ಷೇತ್ರದಲ್ಲಿ ಸ್ನಾನವನ್ನು ಮಾಡಿ, ನನ್ನ ಈ ಕೋಣರೂಪದ ತಾಮಸದೇಹವನ್ನು ಬಿಟ್ಟು ಸಾತ್ವಿಕವಾದ ದಿವ್ಯ ದೇಹವನ್ನು ಪಡೆದಿದ್ದೇನೆ.

''ಇಂದ್ರೇಣ ಸಹ ನಾಗೇಂದ್ರಂ ಆರುಹ್ಯ ತ್ರಿದಶಾಲಯಂ ।
ಗಚ್ಛಾಮಿ ಸ್ವೇಚ್ಛಯಾ ನಾಥ ಕೃಪಾತಸ್ತೇ ಕೃಪಾನಿಧೇ ॥''

ಕೃಪಾನಿಧಿಯಾದ ಕಪಿಲದೇವಾ, ನಿನ್ನ ಕೃಪೆಯಿಂದ ನಾನು ಈ ಐರಾವತವನ್ನು ಆರೋಹಣ ಮಾಡಿ ದೇವೇಂದ್ರನ ಜೊತೆಗೆ ಸ್ವರ್ಗಲೋಕಕ್ಕೆ ಹೋಗುತ್ತಿದ್ದೇನೆ. ಅಪ್ಪಣೆ ನೀಡು. ನನ್ನ ಮೇಲೆ ಅನುಗ್ರಹವಿರಲಿ.

ಹೀಗೆ ದೇವದೇವೋತ್ತಮನಾದ ಕಪಿಲಮುನಿಯನ್ನು ಆ ಕಳಿಂಗರಾಜನು ಸ್ತೋತ್ರಮಾಡಿ, ಅವನ ಪಾದಗಳನ್ನು ಸ್ಪರ್ಶಿಸಿ ಮತ್ತೊಮ್ಮೆ ನಮಸ್ಕರಿಸಿ, ಅಲ್ಲಿಂದ ಊರ್ಧ್ವಲೋಕಕ್ಕೆ ತೆರಳಿದನು.

**ಸಿದ್ಧ:-** ಬ್ರಾಹ್ಮಣ, ನಾನು ಈ ಬದರಿಕಾಶ್ರಮ ಕ್ಷೇತ್ರದಲ್ಲಿ ಗುರುಗಳ ಸೇವೆಯನ್ನು ಮಾಡುತ್ತಲಿರುವ ನನ್ನ ಕಣ್ಣಿನಿಂದಲೇ ಇದನ್ನು ಸಾಕ್ಷಾತ್ತಾಗಿ ನೋಡಿದೆ. ಆದುದರಿಂದಲೇ ಮೂರು ಲೋಕಗಳಲ್ಲೇ ಇಂಥ ತೀರ್ಥವಿಲ್ಲ ಎಂದು ನಿರ್ಧರಿಸಿದೆ. ನೀನೂ ಸಹ ನಿನ್ನ ಮಡದಿಯೊಂದಿಗೆ ಆ ಪುಣ್ಯಕ್ಷೇತ್ರಕ್ಕೆ ಹೋಗು. ನಾನಾದರೂ ನನ್ನ ತಾಯ್ತಂದೆಯರನ್ನು ಈ ಪರಮಪವಿತ್ರ ಬದರೀಕ್ಷೇತ್ರಕ್ಕೆ ಕರೆದುಕೊಂಡು ಬರಲು ಹೊರಟಿದ್ದೇನೆ. ಅವರಿಬ್ಬರಿಗೂ ಮೋಕ್ಷವಾಗಲಿ ಎಂಬ ಹಿರಿಯಾಸೆಯಿಂದ ನನ್ನ ವೃದ್ಧ ಮಾತಾಪಿತೃಗಳನ್ನು ಇಲ್ಲಿಗೆ ಕರೆತರುತ್ತಿದ್ದೇನೆ.

ಹೀಗೆ ಆ ಸಿದ್ಧಪುರುಷನು ಈ ನವೀನ ಬದರೀಕ್ಷೇತ್ರದ ಮಹಾಮಹಿಮೆಯನ್ನು ವಿವರಿಸಿ ತನ್ನ ಮನೆಗೆ ತೆರಳಿದನು. ನಂತರ ಕೆಲವು ದಿನಗಳ ಬಳಿಕ ತನ್ನ ತಾಯ್ತಂದೆ ಹಾಗೂ ಮಡದಿಯನ್ನೂ ಕರೆದುಕೊಂಡು ಈ ಇಂದ್ರಪ್ರಸ್ಥಕ್ಕೆ ಆಗಮಿಸಿದ. ಅವರನ್ನು ಇಲ್ಲಿ ಸ್ನಾನಮಾಡಿಸಿದ. ಹೀಗೆ ಅವರ ಉದ್ಧಾರಕ್ಕೆ ಕಾರಣನಾದ.

ಹೀಗೆ ಈ ಪುಣ್ಯಕ್ಷೇತ್ರದಲ್ಲಿ ಸ್ನಾನಮಾಡಿ ಇಲ್ಲಿಯ ಬದರೀಶನನ್ನು ಭಕ್ತಿಯಿಂದ ಆರಾದನೆಗೈದ ಮಾನವರು ತಮ್ಮ ಐಹಿಕ ಇಷ್ಟಾರ್ಥಗಳನ್ನು ಪಡೆದು, ಸ್ವರ್ಗ, ಅಪರ್ಗವನ್ನೂ ಹೊಂದಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಬದರಿಕಾಶ್ರಮ ಮಾಹಾತ್ಮ್ಯ ಎಂಬ ನೂರ ತೊಂಬತ್ತೆಂಟನೇಯ ಅಧ್ಯಾಯ ಮುಗಿದುದು*

—o—

## ಹರಿದ್ವಾರಮಾಹಾತ್ಮ್ಯ ವರ್ಣನ ಕಳಿಂಗದೇಶದ ಶ್ವಪಚನ ವೃತ್ತಾಂತದ ಮುಖಾಂತರ ವೈಶ್ಯನ ವೃತ್ತಾಂತ ವರ್ಣನೆ

**ಅಧ್ಯಾಯ - ೧೯೯**

**ರಾಜ:-** ಪೂಜ್ಯರೇ, ತಾವು ಮಾಡಿದ ಬದರೀಕ್ಷೇತ್ರದ ವರ್ಣನೆಯನ್ನು ಕೇಳಿ ನನ್ನ ಮನಸ್ಸು ನಿರ್ಮಲವಾಯಿತು. ಈ ಇಂದ್ರಪ್ರಸ್ಥದ ಮಹಿಮೆಯನ್ನು ತಾವು ನನಗೆ ನಿರೂಪಿಸಿದಿರಿ. ತಿರ್ಯಗ್‌ಯೋನಿಯಲ್ಲಿರುವ ಅಜ್ಞವಾದ ಪ್ರಾಣಿಗಳಿಗೂ ಸಹ ಮೋಕ್ಷವನ್ನು ಕೊಡುವ ಇಂಥ ಕ್ಷೇತ್ರವು ಜಗತ್ತಿನಲ್ಲಿ ಬೇರೆಲ್ಲೂ ಇಲ್ಲ. ದರ್ಶನದಿಂದಲೇ ಸರ್ವ ಪಾಪಗಳನ್ನು ಕಳೆಯುವ ಈ ತೀರ್ಥವು ಪರಮ ಶ್ರೇಷ್ಠ.

ಹಾಟಕೇಶ್ವರ ಕ್ಷೇತ್ರದಲ್ಲಿರುವ 'ಹರಿದ್ವಾರ'ದ ಮಹಿಮೆಯನ್ನೂ ನನಗೆ ಹೀಗೆಯೇ ತಿಳಿಸಿ ಹೇಳಿರಿ.

**ನಾರದ:-** ಈ ಹಾಟಕೇಶ್ವರ ಕ್ಷೇತ್ರದಲ್ಲಿರುವ ಹರಿದ್ವಾರದ ಮಹಿಮೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಕುರುಕ್ಷೇತ್ರದಲ್ಲಿ ಕಾಲಿಂಗ ಎಂಬ ಹೆಸರಿನ ಒಬ್ಬ ಪಾಪಿಯಾದ ಶ್ವಪಚನು ವಾಸವಾಗಿದ್ದ. ಅವನು ಐದು, ಆರು ವರ್ಷದ ಊರಲ್ಲಿನ ಬಾಲಕರನ್ನು ಕದ್ದು ಒಯ್ದು, ಅರಣ್ಯದಲ್ಲಿ ಕೊಂದುಹಾಕುತ್ತಿದ್ದ. ಅವರ ಮೈಮೇಲಿನ ಬೆಳ್ಳಿ, ಬಂಗಾರ ಮುಂತಾದ ಆಭರಣಗಳ ಆಶೆಗಾಗಿ ಅವರನ್ನು ಹಿಂಸೆಗೊಳಪಡಿಸುತ್ತಿದ್ದ.

ಒಂದು ದಿನ ಅವನು ಹಣವನ್ನು ಕದಿಯಬೇಕೆಂದು ರಾತ್ರಿಯಲ್ಲಿ ಯೋಚಿಸಿ, ಅಂತೆಯೇ ಶ್ರೀಮಂತರ ಹಣವನ್ನೆಲ್ಲ ಲಪಟಾಯಿಸಿದ. ಹಣವನ್ನು ಕೈಯಲ್ಲಿ ಹಿಡಿದುಕೊಂಡು ಪ್ರಯಾಣ ಮಾಡುವ ಪಥಿಕರನ್ನು ಮಾರ್ಗದಲ್ಲೇ ಅವಿತಿಟ್ಟುಕೊಂಡು ಕುಳಿತು ಸಂಹರಿಸಿ ಅವನ ಹಣವನ್ನೆಲ್ಲ ದೋಚುತ್ತಿದ್ದ.

ಒಂದು ದಿನ ಸೂರ್ಯಗ್ರಹಣದ ಸಮಯಕ್ಕೆ ನಾನಾದೇಶಗಳಿಂದ ಸ್ನಾನಮಾಡಲು ಕುರುಕ್ಷೇತ್ರಕ್ಕೆ ಅನೇಕ ಜನ ಸಿರಿವಂತರು ಆಗಮಿಸಿದರು. ಅವರೆಲ್ಲರೂ ತಾವು ತಂದ ನಗ, ನಾಣ್ಯ ಮುಂತಾದ ಅಮೂಲ್ಯ ವಸ್ತುಗಳನ್ನು ಕುರುಕ್ಷೇತ್ರದಂಥ ಪುಣ್ಯಕ್ಷೇತ್ರದಲ್ಲಿ ದಾನನೀಡಿ ತಮ್ಮ ತಮ್ಮ ನಗರಗಳಿಗೆ ತೆರಳಿದರು. ಅವರಲ್ಲಿ ಓರ್ವ ಧನವಂತನಾದ ವೈಶ್ಯನು ಬಹಳಷ್ಟು ಐಶ್ವರ್ಯವನ್ನು ತನ್ನೊಡನೆ ತಂದು ಆ ಪುಣ್ಯಕ್ಷೇತ್ರದಲ್ಲಿ ಬಹಳ ಜನ ವಿದ್ವಾಂಸರಿಗೂ ಋಷಿಗಳಿಗೂ ದಾನನೀಡಿದ. ಆದರೂ ಅವನಲ್ಲಿ ಇನ್ನೂ ವಿಪುಲ ದ್ರವ್ಯ ಉಳಿದಿತ್ತು. ಅದನ್ನೆಲ್ಲ ತೆಗೆದುಕೊಂಡು ಅವನು ತನ್ನ ಊರಿಗೆ ಹೊರಟ. ತನ್ನಲ್ಲಿದ್ದ ಆಭರಣಾದಿ ಐಶ್ವರ್ಯಗಳನ್ನು ಕಾಯಲು ತನ್ನ ಮುಂದೆ ಇಪ್ಪತ್ತು ರಕ್ಷಕರನ್ನು ಇಟ್ಟಿದ್ದ. ದುಷ್ಟನಾದ ಕಾಲಿಂಗನು ಆ ವೈಶ್ಯನ ಐಶ್ವರ್ಯವನ್ನು ಹೇಗಾದರೂ ಮಾಡಿ ಕಿತ್ತುಕೊಂಡು ಬಿಡಬೇಕೆಂದು ಹೊಂಚುಹಾಕಿ ಅವನ ಹಿಂದೆ ನಡೆದ. ಅವರು ಇಪ್ಪತ್ತು ಜನ ಇವನೊಬ್ಬ.

ಅವರೆಲ್ಲರ ಕಣ್ಣು ತಪ್ಪಿಸಿ ಕಳವು ಮಾಡುವ ಅವಕಾಶ ಸಿಗಲೇ ಇಲ್ಲ. ಆದರೂ ಸಹ ದೂರದಿಂದಲೇ ಅನೇಕ ದಿನಗಳವರೆಗೆ ಅವರನ್ನು ಅನುಸರಿಸುತ್ತಲೇ ನಡೆದ.

ಒಂದು ದಿನ ದಾರಿಯಲ್ಲಿ ಆ ಎಲ್ಲ ಸೇವಕರಿಂದ ಒಡಗೂಡಿ ವೈಶ್ಯನು ಒಂದು ಸ್ಥಳದಲ್ಲಿ ತಂಗಿದ. ಅಲಲ್ಲಿ ಕಳವಿಗೆ ಈತ ಪ್ರಯತ್ನಿಸಿದ. ಸಾಧ್ಯವಾಗಲಿಲ್ಲ. ಹೀಗೆಯೇ ಅನೇಕ ತಂಗು ಠಾಣ್ಯಗಳಲ್ಲಿ ಪ್ರಯತ್ನಿಸಿ ಸಾಧ್ಯವಾಗದೇ ಇರುವಾಗ ಕೊನೆಗೊಮ್ಮೆ ಧೈರ್ಯಮಾಡಿದ. ಒಂದು ರಾತ್ರಿ ಆ ವೈಶ್ಯನು ತನ್ನ ಇಪ್ಪತ್ತು ಜನ ಅನುಚರರೊಂದಿಗೆ ಮಲಗಿದಾಗ ಈ ಕಾಳಿಂಗನು ಆ ಶಿಬಿರವನ್ನು ಪ್ರವೇಶಿಸಿದ. ಎಷ್ಟೇ ಜಾಗರೂಕನಾಗಿ ಪ್ರವೇಶಿದರೂ, ಅನುಚರನೊಬ್ಬ ಎಚ್ಚರಗೊಂಡು ಇವನನ್ನು ನೋಡಿಯೇ ಬಿಟ್ಟ. ಎದ್ದು ಬಂದವನೇ ದುಷ್ಟ ಕಾಳಿಂಗನ ಕಾಲು ಹಿಡಿದು ಜಗ್ಗಿ ಕೆಳಹಾಕಿ ಬಿರುಸಾಗಿ ಮುಷ್ಟಿಪ್ರಹಾರಗೈದ. ಒಂದು ಕೈಯಿಂದ ಅವನನ್ನು ನೆಲಕ್ಕೆ ಅಮುಕಿ, ಇನ್ನೊಂದು ಕೈಯಿಂದ ಒಂದೇ ಸಮನೆ ಹೊಡೆಯತೊಡಗಿದ ಕಾಲಿಂಗನು ಎಲ್ಲ ಸಾಮರ್ಥ್ಯವನ್ನೂ ಒಗ್ಗೂಡಿಸಿ, ಅಲ್ಲಿಂದೆದ್ದು ಓಡತೊಡಗಿದ. ಈ ಗಲಾಟೆಯಿಂದ ಎಚ್ಚೆತ್ತ ವೈಶ್ಯನ ಇತರ ಅನುಚರರೂ ಅವನನ್ನು ಹಿಡಿಯಲು ಅವನ ಹಿಂದೆ ಓಡಿದರು. ಅವರಲ್ಲಿ ಚುರುಕುಗತಿಯುಳ್ಳ ಒಬ್ಬ ಧಾವಿಸಿ ಅವನನ್ನು ಹಿಡಿದೇ ಬಿಟ್ಟ. ಆದರೆ ಕಂಟಲನಾದ ಕಾಳಿಂಗನು ಅವನನ್ನು ಒದ್ದು ಕೆಳಗೆ ಬೀಳಿಸಿ ಮತ್ತೆ ಓಡಿದ. ವೇಗವಾಗಿ ಓಡುತ್ತಲಿರುವ ಕಾಳಿಂಗನನ್ನು ಹಿಡಿಯಲು ಬಂದಿದ್ದ ಮತ್ತೊಬ್ಬ ಸೇವಕನ ಮರ್ಮಸ್ಥಳಕ್ಕೆ ಹೊಡೆದು ಓಡಿದ. ಆದರೆ ಆ ಅನುಚರರಲ್ಲಿ ಒಬ್ಬ ಗುರಿಯಿಡುವದರಲ್ಲಿ ನಿಸ್ಸೀಮನಾಗಿದ್ದ. ಆತನು ತನ್ನ ಬಿಲ್ಲು ಬಾಣಗಳನ್ನು ಹೊರತೆಗೆದು ಗುರಿಯಿಟ್ಟು ಓಡುತ್ತಿದ್ದ ಕಾಳಿಂಗನಿಗೆ ಬಾಣಬಿಟ್ಟ. ಬಾಣತಾಗಿದ ಕಾಳಿಂಗ ಅಲ್ಲಿಯೇ ಬಿದ್ದು ಪ್ರಾಣಬಿಟ್ಟ.

ದಿಕ್ಕೆಟ್ಟು ಓಡಿ ಹೋಗುವಾಗ ಪಾಪಿಯಾದ ಆ ಕಾಳಿಂಗನು ಇಬ್ಬರನ್ನು ತನ್ನ ಕೈಯಲ್ಲಿನ ತೀಕ್ಷ್ಣವಾದ ಆಯುಧದಿಂದ ಪ್ರಾಣಾಂತಿಕವಾಗಿ ಪ್ರಹರಿಸಿದ್ದ. ಅದರಿಂದ ನೋವು ಅನುಭವಿಸುತ್ತ ಇದ್ದ ಅವರೂ ಆಗಲೇ ಸತ್ತು ಬಿದ್ದರು. ಹೀಗೆ ಮೂವರೂ ಮರಣಹೊಂದಿದ ಆ ಸ್ಥಳವು ಯೋಗಾಯೋಗದಿಂದ ಹಾಟಕೇಶ್ವರದ ಇಂದ್ರಪ್ರಸ್ಥ ಸ್ಥಳವೇ ಆಗಿದ್ದಿತು. ಇದರಿಂದ ಆ ಪಾಪಿಗಳು ಪಾಪಮುಕ್ತರಾಗಿ ದಿವ್ಯ ದೇಹ ಧರಿಸಿ, ತಮ್ಮನ್ನು ಕರೆಯಲು ಬಂದ ಪುಷ್ಪಕ ವಿಮಾನವನ್ನು ಆರೋಹಣ ಮಾಡಿ, ಆ ವೈಶ್ಯನನ್ನು ಕುರಿತು ನುಡಿದರು.

**ಕಾಳಿಂಗ ಹಾಗೂ ರಕ್ಷಕರಾದ ವೈಶ್ಯನ ದೂತರು:-** ವೈಶ್ಯನೇ, ನಮ್ಮ ಸುದೈವದಿಂದ ನಾವು ಇಂದ್ರಪ್ರಸ್ಥದಲ್ಲಿರುವ ಈ ನವೀನವಾದ ಹರಿದ್ವಾರ ಕ್ಷೇತ್ರದಲ್ಲಿ ಮರಣ ಹೊಂದಿದ್ದೇವೆ. ಈ ಸ್ಥಳವು ಪಾಪಿಗಳಿಗೂ ಪುಣ್ಯಗತಿಯನ್ನು ಪ್ರಧಾನ ಮಾಡುವ ಸಾಮರ್ಥ್ಯವುಳ್ಳದ್ದು. ನಾವು ಮೂವರೂ ಈ ಪುಣ್ಯತೀರ್ಥದಲ್ಲಿ ಮರಣಸಿದ್ದರಿಂದ ಈಗ ಸ್ವರ್ಗಕ್ಕೆ ಹೊರಟು ನಿಂತಿದ್ದೇವೆ. ನಿನಗೆ ಒಳ್ಳೆಯದಾಗಲಿ.

**ನಾರದ:-** ಹೀಗೆ ಹೇಳಿ ವೈಶ್ಯನ ಇಬ್ಬರು ಸೇವಕರೂ ಆ ದುಷ್ಟ ಕಾಳಿಂಗನೂ ಸ್ವರ್ಗಲೋಕಕ್ಕೆ ಪಯಣಿಸಿದರು. ಅನಂತರ ಬೆಳಗಾದ ಮೇಲೆ ಆ ವೈಶ್ಯನು ತನ್ನ ಸೇವಕರ ಮೃತಶರೀರಗಳಿಂದ ಅಸ್ಥಿಗಳನ್ನಾರಿಸಿ ಅಲ್ಲಿನ ಪವಿತ್ರ ತೀರ್ಥದಲ್ಲಿ ಹಾಕಿದ ಅವರ ಅಸ್ಥಿಗಳಿಗೆ ತೀರ್ಥಜಲ ಸ್ಪರ್ಶವಾದ ಕೂಡಲೇ ಆ ಇಬ್ಬರೂ ಸೇವಕರೂ ಸ್ವರ್ಗದಿಂದ ಮರಳಿ ವೈಶ್ಯನಲ್ಲಿಗೆ ಬಂದು ನುಡಿದರು.

**ವೈಶ್ಯಸೇವಕರು:-** ಈ ಪುಣ್ಯ ತೀರ್ಥದಲ್ಲಿ ಮರಣಿಸುವದರಿಂದ ಮಾನವರಿಗೆ ನಿಜವಾಗಿಯೂ ಸ್ವರ್ಗಪ್ರಾಪ್ತಿಯಾಗುವದರಲ್ಲಿ ಸಂದೇಹವಿಲ್ಲ. ಇಲ್ಲಿನ ಪವಿತ್ರ ತೀರ್ಥದ ಸ್ಪರ್ಶ ಯಾರ ಅಸ್ಥಿಗಳಿಗೆ ಆಗುವದೋ ಅವರಿಗೆ ಬ್ರಹ್ಮಲೋಕ ಪ್ರಾಪ್ತಿಯು ನಿಶ್ಚಿತ. ಪ್ರಕೃತ ನೀನು ನಮ್ಮ ಅಸ್ಥಿಗಳನ್ನು ಆರಿಸಿ ತೀರ್ಥದಲ್ಲಿ ಹಾಕಿದ್ದರಿಂದ ನಮಗೆ ಸ್ವರ್ಗಲೋಕಕ್ಕಿಂತಲೂ ಮೇಲೆ ಇರುವ ಬ್ರಹ್ಮಲೋಕದ ಪ್ರಾಪ್ತಿಯಾಗಿದೆ. ನಾವೀಗ ಅಲ್ಲಿಗೆ ಹೊರಟಿದ್ದೇವೆ. ಈ ಕಲ್ಪದ ಅಂತ್ಯದವರೆಗೆ ನಾವು ಬ್ರಹ್ಮದೇವರೊಡನೆ ಇದ್ದು ಮುಂದೆ ವೈಕುಂಠ ಲೋಕಕ್ಕೆ ಪಯಣಿಸಲಿದ್ದೇವೆ. ಆದರೆ ನಮ್ಮನ್ನು ಹೊಡೆದು ಗಾಯಗೊಳಿಸಿ ಮರಣಕ್ಕೀಡುಮಾಡಿ, ತಾನೂ ಮಡಿದ ಆ ಕಾಳಿಂಗನು ಈಗ ಸ್ವರ್ಗದಲ್ಲೇ ಇದ್ದಾನೆ. ಅವನ ಮೃತ ಮಾನವೀಯ ಶರೀರವು ನಿನ್ನ ಸಮೀಪದಲ್ಲೇ ಆ ಇಂದ್ರಪ್ರಸ್ಥ ಕ್ಷೇತ್ರದಲ್ಲಿ ಬಿದ್ದು ಕೊಂಡಿದೆ. ಆ ದೇಹಕ್ಕೆ ಅಗ್ನಿಸಂಸ್ಕಾರ ಮಾಡಿ ಅವನ ಅಸ್ಥಿಗಳನ್ನೂ ಈ ತೀರ್ಥದಲ್ಲಿ ವಿಸರ್ಜಿಸು. ಅದರಿಂದ ಕೇವಲ ಸ್ವರ್ಗಲೋಕವನ್ನು ಮಾತ್ರ ಪಡೆದ ಆತನು ನಮ್ಮಂತೆ ಸತ್ಯಲೋಕವನ್ನು ಪಡೆಯುವನು. ಇಷ್ಟು ಉಪಕಾರವನ್ನು ಅವನಿಗಾಗಿ ಮಾಡಿರಿ. ಅವನು ದುರ್ಬುದ್ಧಿಯಿಂದಲೇ ಆದರೂ ಪುಣ್ಯ ಕ್ಷೇತ್ರದಲ್ಲಿ ನಮ್ಮ ಸಂಹಾರ ಮಾಡಿದ್ದರಿಂದ ನಮಗೆ ಈ ಉತ್ತಮಗತಿ ಒದಗಿದೆ. ಅದರಿಂದ ಅವನಿಗೂ ನಮ್ಮಿಂದಾದ ಉಪಕಾರ ಮಾಡಬೇಕೆಂದು ನಮ್ಮ ಅಪೇಕ್ಷೆಯಾಗಿದೆ.

**''ಉಪಕಾರಃ ಸದಾ ಕಾರ್ಯಃ ಪರೇ ಷಾಮಪಿ ಸಾಧುಭಿಃ ।**
**ಅಪಕಾರೋ ನಮಂತವ್ಯಃ ಕೃತೋ ಭೃಶಮಸಜ್ಜನೈಃ ॥**

''ಸಾಧು ಸಜ್ಜನರು ಹೆರವರಿಗೂ ಯಾವಾಗಲೂ ಉಪಕಾರ ಮಾಡಬೇಕು. ದುರ್ಜನರು ಮಾಡಿದ ಅಪಕಾರವನ್ನು ಎಂದಿಗೂ ನೆನೆಯಬಾರದು.''

ಹೀಗೆ ವೈಶ್ಯಸೇವಕರಿಬ್ಬರೂ ನುಡಿದದ್ದನ್ನು ಕೇಳಿ ಆ ವೈಶ್ಯನು ಚೋರ ದೇಹವನ್ನು ಎಲ್ಲ ಕಡೆಗೂ ಹುಡುಕಿಸಿದ. ಆದರೆ ಆ ದೇಹವು ಎಲ್ಲಿಯೂ ದೊರಕಲಿಲ್ಲ. ಸೇವಕರಿಂದ ಹುಡುಕಿಸಿದರೂ ಸಿಗದಾದಾಗ ಸ್ವಯಂ ತಾನೇ ಹುಡುಕ ಹೊರಟ. ಆ ವೈಶ್ಯ ಎಲ್ಲೆಡೆಗೆ ಅಲೆದಾಡಿ ಎಲ್ಲಿಯೂ ಕಾಣದೇ ತೀರ್ಥಕ್ಕೆ ಮರಳಿದ. ತೀರ್ಥದಲ್ಲಿ ಸ್ನಾನ ಮುಗಿಸಿ, ಮನೆಗೆ ತೆರಳಿದ. ಊರಿಗೆ ಹೋಗಿ ತಾನು ನ್ಯಾಯಮಾರ್ಗದಿಂದ ಸಂಪಾದಿಸಿದ ದ್ರವ್ಯದಿಂದ ಅನೇಕ ಪುಣ್ಯಕಾರ್ಯಗಳನ್ನು ನೆರವೇರಿಸಿದ. ದಾನ, ದಕ್ಷಿಣೆಗಳಿಂದ ಬ್ರಾಹ್ಮಣರನ್ನೂ, ಶ್ರೀಹರಿಯನ್ನೂ, ಸಂತೋಷಗೊಳಿಸಿ ತನ್ನ ದ್ರವ್ಯವನ್ನು ಸಾರ್ಥಕ ಮಾಡಿಕೊಂಡ. ತನ್ನ ಮಕ್ಕಳು ಪ್ರಬುದ್ಧರಾದ ಬಳಿಕ, ವೃದ್ಧಾಪ್ಯ ಪ್ರಾಪ್ತವಾದ ಕೂಡಲೇ ಮತ್ತೆ ಈ ತೀರ್ಥಕ್ಕೇ ಮರಳಿ ಸಾಧನೆಗೈದು ಈ ತೀರ್ಥದಲ್ಲೇ ಮರಣಹೊಂದಿದ. ಈ ತೀರ್ಥ ಸ್ನಾನದ ಪುಣ್ಯದಿಂದ ಮರಣಾನಂತರ ವೈಕುಂಠಲೋಕವನ್ನು ಹೊಂದಿ ಕೃತಕೃತ್ಯನಾದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಹರಿದ್ವಾರಮಾಹಾತ್ಮ್ಯ ವರ್ಣನ ಕಲಿಂಗದೇಶದ ಶ್ವಪಚನ ವೃತ್ತಾಂತದ ಮುಖಾಂತರ ವೈಶ್ಯನ*
*ವೃತ್ತಾಂತ ವರ್ಣನೆ ಎಂಬ ನೂರ ತೊಂಬತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ವಿದರ್ಭ ನಗರದಲ್ಲಿದ್ದ ಮಾಲವ ಬ್ರಾಹ್ಮಣನ ಆಖ್ಯಾನ

ಅಧ್ಯಾಯ - ೨೦೦

**ನಾರದ:-** ಈ ಇಂದ್ರಪ್ರಸ್ಥದಲ್ಲಿರುವ ಪುಷ್ಕರಕ್ಷೇತ್ರದ ಪ್ರಸಾದದಿಂದ ಸರ್ವ ದೇವತಾ ಸಾರ್ವಭೌಮನಾದ ಶ್ರೀಹರಿಯು ಪುಂಡರೀಕ ಎಂಬ ಭಕ್ತನಿಗೆ ಸುಪ್ರಸನ್ನನಾಗಿ ಅವನ ಮನೆಯಲ್ಲಿ ಒಂದು ತಿಂಗಳು ವಾಸಮಾಡಿದ. ಆ ಪುಂಡರೀಕನ ತಮ್ಮನು ಮಹಾ ಪಾಪಿಷ್ಠನಾದರೂ ಈ ತೀರ್ಥದ ಪುಣ್ಯದಿಂದ ಪಾಪಮುಕ್ತನಾಗಿ ಮುಕ್ತಿಯನ್ನು ಹೊಂದಿದ.

**ಶಿಬಿಚಕ್ರವರ್ತಿ:-** ಧರ್ಮಾತ್ಮನಾದ ಈ ಪುಂಡರೀಕನು ಯಾರು? ಅವನು ಯಾವ ಪುಣ್ಯ ಕರ್ಮವನ್ನು ಮಾಡಿದ್ದ? ಭಗವಂತನು ಒಂದು ತಿಂಗಳಕಾಲ ಅವನ ಮನೆಯಲ್ಲಿ ನಿಂತು ದರ್ಶನವನ್ನು ನೀಡಬೇಕಾದರೆ, ಪುಂಡರೀಕನ ಪುಣ್ಯರಾಶಿ ಅಪಾರ ಇರಬಹುದಲ್ಲವೇ? ಭಗವಂತನನ್ನು ಪ್ರಸನ್ನೀಕರಿಸಿಕೊಂಡ ಆ ಪುಂಡರೀಕನೆಂಬ ಪುಣ್ಯಾತ್ಮ ಯಾವ ಊರಿನವನು? ಎಲ್ಲಿ ಇರುತ್ತಿದ್ದ? ಅವನು ಮಾಡಿದ ಪುಣ್ಯಕರ್ಮವಾವುದು? ಅವನ ತಮ್ಮನು ಮಹಾಪಾಪಿಯಾದರೂ ಈ ತೀರ್ಥ ಪ್ರಭಾವದಿಂದ ಶ್ರೀಹರಿಯ ಮಂದಿರವನ್ನು ಸೇರಿದನೆಂದು ಹೇಳಿದಿರಿ. ಅವನ ಆಖ್ಯಾನವನ್ನು ನಮಗೆ ನಿರೂಪಿಸಿರಿ.

**ನಾರದ:-** ವಿದರ್ಭ ನಗರದಲ್ಲಿ ಮಾಲವ ಎಂಬ ಬ್ರಹ್ಮಜ್ಞಾನಿಯಾದ ಓರ್ವ ವಿಷ್ಣುಭಕ್ತನು ಇರುತ್ತಿದ್ದ. ದೇವ, ಋಷಿ, ಪಿತೃಗಳ ಆರಾಧನೆಯನ್ನು ಶಾಸ್ತ್ರೋಕ್ತವಾಗಿ ಮಾಡುತ್ತಲಿದ್ದ. ಆ ಮಾಲವ ಬ್ರಾಹ್ಮಣನಿಗೆ ವಿಷಯಗಳಲ್ಲಿ ವಿಶೇಷ ಆಸಕ್ತಿ ಇರಲಿಲ್ಲ. ಲೋಭ-ಮೋಹಾದಿಗಳಿಗಂತೂ ಅವನಲ್ಲಿ ಇಂಬೇ ಇರಲಿಲ್ಲ. ಒಂದು ದಿನ ಆ ಮಹಾನುಭಾವನಾದ ಮಾಲವ ಬ್ರಾಹ್ಮಣನು ಸಿಂಹರಾಶಿಗೆ ಗುರು ಬಂದ ಸಂದರ್ಭದಲ್ಲಿ ಗೋದಾವರೀ ಸ್ನಾನಮಾಡಬೇಕೆಂದು ಗೋದಾತೀರಕ್ಕೆ ಹೊರಟು ನಿಂತ. ಹೋಗುವಾಗ ಅವನು ಆ ಕ್ಷೇತ್ರದಲ್ಲಿ ದಾನ ಕೊಡಲಿಕ್ಕಾಗಿ ಸಾವಿರ ತೊಲೆಯ ಬಂಗಾರವನ್ನು ತೆಗೆದುಕೊಂಡು ಹೊರಟ. ದಾರಿಯಲ್ಲಿ ಅವನು ಈ ಬಂಗಾರವನ್ನು ಸತ್ಪಾತ್ರರಲ್ಲಿ ದಾನಕೊಡಬೇಕು ಎಂದು ಯೋಚಿಸುತ್ತ ನಡೆದ.

**''ನಿಷ್ಕಿಂಚನಾಯ ವಿಪ್ರಾಯ ಪಾತ್ರಾಯಾऽನುಪಕಾರಿಣೇ ।**
**ಪೂಜ್ಯಾಯ ದೇಶೇ ಕಾಲೇ ಚ ದತ್ತಮಕ್ಷಯತಾಂ ವ್ರಜೇತ್ ॥''**

ದಾನವು ಸತ್ಪಾತ್ರರಲ್ಲಿ ನೀಡಲ್ಪಡಬೇಕು. ಅಂದರೆ ಅದು ಅಕ್ಷಯವಾಗುತ್ತದೆ. ಸತ್ಪಾತ್ರ ಎಂದರೆ ದರಿದ್ರನೂ, ತನಗೆ ಉಪಕಾರ ಮಾಡದೇ ಇರುವವನೂ, ಸದಾಚಾರ ಸಂಪನ್ನನೂ ಆದ ವಿಪ್ರನು ಸತ್ಪಾತ್ರ ಎನಿಸಿಕೊಳ್ಳುತ್ತಾನೆ. ಅಂಥ ಪೂಜ್ಯನಾದ ವ್ಯಕ್ತಿಗೆ ಪುಣ್ಯಪ್ರದೇಶದಲ್ಲಿ, ಪುಣ್ಯಕಾಲದಲ್ಲಿ ನೀಡಿದ ದಾನವು ಅಕ್ಷಯವಾಗುತ್ತದೆ.

ಪೂರ್ವಕಾಲದಲ್ಲಿ ಶಿಲೋಂಛವೃತ್ತಿಯಿಂದ ಇರುವ ಓರ್ವ ಧರ್ಮಾತ್ಮನು ತಾನು ಉಂಛವೃತ್ತಿಯಿಂದ ಸಂಗ್ರಹಿಸಿ ತೆಗೆದುಕೊಂಡು ಬಂದ ಧನವನ್ನು ದೂರ್ವಾಸರಿಗೆ ದಾನನೀಡಿ ಉದ್ಧೃತನಾದ. ದೈತ್ಯಶ್ರೇಷ್ಠನಾದ ಬಲಿರಾಜನು ವಾಮನದೇವರು ತಮ್ಮ

ಕುಲವೈರಿಯೆಂದು ಅರಿತರೂ ಸತ್ಪಾತ್ರ ಎಂದು ತಿಳಿದು ಮೂರು ಲೋಕವನ್ನೇ ದಾನಕೊಟ್ಟು ಧನ್ಯನಾದ. ಆದುದರಿಂದ ನಾನು ಧರ್ಮದಿಂದ ಸಂಪಾದಿಸಿದ ಈ ಸುವರ್ಣ ಹಾಗೂ ದ್ರವ್ಯವನ್ನು ಒಳ್ಳೇ ಪಾತ್ರರಲ್ಲಿ ದಾನನೀಡಿ ಶ್ರೀಹರಿಯ ಅನುಗ್ರಹವನ್ನು ಸಂಪಾದಿಸಬೇಕು. ನನ್ನ ತಂಗಿಯ ಮಗನಾದ ಪುಂಡರೀಕನು ಹಸ್ತಿನಾವತಿಯಿಂದ ಇಲ್ಲಿಗೆ ಬಂದು ನನ್ನ ದಾನವನ್ನು ಸ್ವೀಕರಿಸಿದರೆ ಅದು ಸತ್ಪಾತ್ರದಾನವೆನಿಸುವದು. ಸದಾಚಾರಸಂಪನ್ನನೂ, ನಿಸ್ಪೃಹಿಯೂ ಶ್ರೀಹರಿಯ ಪರಮಭಕ್ತನೂ ಧರ್ಮಾತ್ಮನೂ ಆದ ಆ ಪುಂಡರೀಕನು ಎಲ್ಲ ದಾನಪಾತ್ರರಲ್ಲಿ ಶಿರೋಮಣಿಯಂತೆ ಇರುತ್ತಾನೆ. ಆ ನನ್ನ ತಂಗಿಯ ಮಗನಿಗೆ ನಾನು ತಂದ ಈ ಸಾವಿರ ತೊಲೆಯ ಬಂಗಾರದಲ್ಲಿ ಅರ್ಧ ಭಾಗವನ್ನು ಕೊಟ್ಟು ಉಳಿದ ಭಾಗವನ್ನು ಶ್ರೋತ್ರಿಯರಾದ ಸದಾಚಾರಸಂಪನ್ನ ಬ್ರಾಹ್ಮಣರಿಗೆ ದಾನ ನೀಡುತ್ತೇನೆ.

ಹೀಗೆ ಮನಸ್ಸಿನಲ್ಲಿ ಆ ಮಾಲವ ದ್ವಿಜನು ವಿಚಾರಮಾಡಿ ಕೆಲವೊಂದು ದಿನಗಳ ಬಳಿಕ ಗೋದಾತೀರಕ್ಕೆ ಬಂದ. ದೈವಯೋಗದಿಂದ ಅಲ್ಲಿಗೆ ಇದಕ್ಕೂ ಮೊದಲು ಪುಂಡರೀಕನು ತೀರ್ಥಯಾತ್ರೆಗೆಂದು ಆಗಮಿಸಿದ್ದ. ಗುರುವು ಸಿಂಹರಾಶಿಗೆ ಬಂದ ಈ ಶುಭಸಂದರ್ಭದಲ್ಲಿ ಮಾಲವ ಬ್ರಾಹ್ಮಣನು ಶ್ರದ್ಧೆಯಿಂದ ಗೋದಾವರೀ ಸ್ನಾನ ಮಾಡಿ ತಾನು ತಂದ ಸುವರ್ಣ ಹಾಗೂ ಧನದ ಅರ್ಧಭಾಗವನ್ನು **"ಶ್ರೀಹರಿಃ ಪ್ರೀಯತಾಂ"** ಎಂದು ಸಂಕಲ್ಪಿಸಿ ತನ್ನ ಭಾಗಿನೇಯನಾದ ಪುಂಡರೀಕನಿಗೆ ಸಮರ್ಪಿಸಿದ, ಪುಂಡರೀಕನು ಸಹ ಆ ಪವಿತ್ರಜಲದಲ್ಲಿ ಮಿಂದು ತನ್ನ ಹಣದ ಕಾಲುಭಾಗವನ್ನು ಶ್ರೋತಿಯರೂ ಸದಾಚಾರಸಂಪನ್ನರೂ, ಧರ್ಮಾತ್ಮರೂ ಆದ ಬ್ರಾಹ್ಮಣರಿಗೆ ದಾನ ನೀಡಿದ ಅನಂತರ ವಿಧಿಪೂರ್ವಕ ಸ್ನಾನದಾನ ಮುಗಿಸಿ ತನ್ನ ಮನೆಗೆ ಹೊರಟ ಪುಂಡರೀಕನನ್ನು ಕುರಿತು ಈ ಮಾಲವ ವಿಪ್ರನು ನುಡಿದ.

**ಮಾಲವ:-** ಪುಂಡರೀಕ ಮನೆಯಲ್ಲಿ ಇರುವ ಎಲ್ಲ ಹಿರಿಯರಿಗೂ, ಗುರುಗಳಿಗೂ ನನ್ನ ಸಾಷ್ಟಾಂಗ ವಂದನೆಗಳನ್ನು ತಿಳಿಸು. ಕಿರಿಯರಿಗೆ ನನ್ನ ಆಶೀರ್ವಾದಗಳನ್ನು ತಿಳಿಸು. ನಾವಿಬ್ಬರೂ ಕೆಲವು ಕ್ಷಣಗಳವರೆಗೆ ಇಲ್ಲಿ ಕೂಡಿದ್ದೆವು. ಮತ್ತೆ ಈಗ ನಮ್ಮ ನಮ್ಮ ತಾಣಗಳಿಗೆ ಹೊರಟುನಿಂತಿದ್ದೇವೆ. ಈ ಸಂಸಾರವೂ ಸಹ ಇದರಂತೆಯೇ ಒಂದು ತಾತ್ಕಾಲಿಕವಾದ ಪ್ರಾಣಿಗಳ ಸಮಾಗಮವಾಗಿದೆ. ಮಕ್ಕಳು, ಮಡದಿ, ಬಂಧು, ಬಳಗ, ಆಪ್ತರು, ಇಷ್ಟರು, ಇವರೆಲ್ಲರೂ ಈ ಸಂಸಾರದಲ್ಲಿ ಮಿಲಿತರಾಗಿ ಶ್ರೀಹರಿಯ ಸೇವೆಯಿಂದ ಬಾಳನ್ನು ಸಾರ್ಥಕಪಡಿಸಿಕೊಳ್ಳಬೇಕು. ವಿರಕ್ತನಾಗಿ ಶ್ರೀಹರಿಯ ಆರಾಧನೆಯನ್ನು ಮಾಡಬೇಕು. ಸತ್ಸಂಗವನ್ನು ಸಾಧಿಸುವದು ಈ ಸಂಸಾರದಲ್ಲಿ ಮುಖ್ಯವಾದ ಕರ್ತವ್ಯ. ದೊಡ್ಡವರ ಸಹವಾಸದಿಂದ ಶ್ರೀಹರಿಯ ಲೀಲೆಯನ್ನು ಶ್ರವಣಮಾಡಬೇಕೆಂಬ ಇಚ್ಛೆ ಉತ್ಪನ್ನವಾಗುತ್ತದೆ. ಮಹಾನುಭಾವರ ಬಾಯಿಯಿಂದ ಶ್ರೀಹರಿಯ ಕಥೆಯನ್ನು ಶ್ರವಣಮಾಡಿದ ಬಳಿಕ ಅದನ್ನು ತನಗೂ ಪಠಿಸಬೇಕು. ಹೇಳಬೇಕು ಎಂಬ ಇಚ್ಛೆಯು ಸ್ವಯಂ ಉತ್ಪನ್ನವಾಗುತ್ತದೆ. ಹಾಗೆ ಸತ್‌ಸಹವಾಸ ಸಾಧಿಸಿದವನು ತಾನು ಒಬ್ಬನೇ ಇದ್ದಾಗಲೂ ಭಕ್ತಿಯಿಂದ ಶ್ರೀಹರಿಯ ನಾಮಸಂಕೀರ್ತನೆಯನ್ನು ಮಾಡುತ್ತಾನೆ. ಸಂತತ ಹರಿಕೀರ್ತನೆಯಿಂದ ಶ್ರೀಹರಿಯಲ್ಲಿ ದೃಢತರವಾದ ಭಕ್ತಿಯು ಉಂಟಾಗುತ್ತದೆ. ಆ ಭಕ್ತಿಯು ಉತ್ಪನ್ನವಾದ ಬಳಿಕ ಅದೇ ಸಂಸಾರಸಾಗರವನ್ನು ದಾಟಿಸುವ ಒಂದು ನೌಕೆಯು ಆಗುತ್ತದೆ. ಆದುದರಿಂದ ಸಾಧುಗಳೂ, ಜ್ಞಾನಿಗಳೂ, ಭಗವದ್ಭಕ್ತರೂ, ವಿರಕ್ತರೂ ಆದ ಮಹಾತ್ಮರ ಸಹವಾಸವನ್ನು ಮಹಾಪ್ರಯತ್ನದಿಂದ ಮಾನವನು

ಸಾಧಿಸಬೇಕು. ಹೀಗೆ ಮಾಲವ ವಿಪ್ರನು ಪುಂಡರೀಕನೊಡನೆ ಸಂಭಾಷಿಸಿ, ಅವನನ್ನು ಆದರದಿಂದ ಬೀಳ್ಕೊಟ್ಟ. ಧರ್ಮಾತ್ಮನಾದ ಪುಂಡರೀಕನೂ ಸಹ ತನ್ನ ಮನೆಗೆ ಹೋಗಿ ಮನೆಯಲ್ಲಿ ಹಲವಾರು ದಿನಗಳವರೆಗೆ ಇದ್ದ ಬಳಿಕ ಮತ್ತೆ ಒಂದು ದಿನ ಈ ಪುಣ್ಯಕ್ಷೇತ್ರಕ್ಕೆ ಆಗಮಿಸಿದ. ಅವನು ಇಲ್ಲಿಗೆ ಬಂದಾಗ ಅವನ ಕೊನೆಯ ತಮ್ಮನಾದ ಭರತ ಎನ್ನುವವನು ಇಲ್ಲಿ ನೆಲದ ಮೇಲೆ ಬಿದ್ದು ನೆತ್ತರವನ್ನು ಕಾರಿ, ಶ್ವಾಸಹೊರಹಾಕುತ್ತ ಒರಗಿದ್ದ. ಗಾಯಗಳಿಂದ ಬಸಿಯುತ್ತಲೇ ಇತ್ತು ಧಾರಾಕಾರವಾಗಿ ರಕ್ತ. ತನ್ನ ತಮ್ಮನ ಈ ದುರವಸ್ಥೆಯನ್ನು ಕಂಡಕೂಡಲೇ ಮಾಲವವಿಪ್ರನಿಗೆ ಬಹಳ ದುಃಖವಾಯಿತು. ಧಾವಿಸಿ ಬಂದು ಅಳುತ್ತ ಆ ತಮ್ಮನನ್ನು ಕೇಳಿದ. ''ಇದೇನು ನಿನ್ನ ದುರ್ದಶೆ? ಹೀಗೇಕೆ ಆಗಿದೆ? ನೀನು ಮನೆಯಿಂದ ಇಲ್ಲಿಗೆ ಏಕೆ ಬಂದೆ?''

ಅಣ್ಣನಾದ ಪುಂಡರೀಕನ ಮಮತಾಪೂರ್ಣವಾದ ಈ ಮಾತುಗಳನ್ನು ಕೇಳಿ ಮರಣೋನ್ಮುಖನಾದ ಭರತನಿಗೆ ದುಃಖವು ಒತ್ತರಿಸಿ ಬಂದಿತು. ಏನೂ ಹೇಳಲು ಆಗಲಿಲ್ಲ. ಅಸಹನೀಯವಾದ ವೇದನೆಯಿಂದ ಸ್ವಲ್ಪ ಹೊರಳಾಡಿ, ಅಲ್ಲಿಯೇ ಪ್ರಾಣಬಿಟ್ಟ ಆ ಭರತ. ಅಷ್ಟರಲ್ಲಿ ಎಲ್ಲ ಜನರೂ ನೋಡುತ್ತಿರುವಂತೆಯೇ ಆಕಾಶದಿಂದ ಒಂದು ವಿಮಾನವು ಬಂದಿತು. ಆ ನೆಲದಲ್ಲಿ ಗಾಯಗೊಂಡು ಶವವಾಗಿ ಬಿದ್ದಿದ್ದ ಭರತನು ದಿವ್ಯದೇಹ ಧರಿಸಿ ವಿಮಾನವನ್ನೇರಿದ. ಮಹಾ ಪಾಪಿಷ್ಠನಾದ ಭರತನು ಜ್ಯೇಷ್ಠ ಭ್ರಾತನಾದ ಪುಂಡರೀಕನನ್ನು ಕುರಿತು ಭಕ್ತಿಯಿಂದ ಕೈ ಮುಗಿದು, ಈ ರೀತಿ ನುಡಿದ.

**ಭರತ:-** ಪುಂಡರೀಕ ನಾನು ಈ ತೀರ್ಥದ ಪುಣ್ಯದಿಂದ ನನ್ನ ಪಾಪಿಜನ್ಮದಿಂದ ಮುಕ್ತನಾದೆ. ಬದುಕಿರುವವರೆಗೆ ಭೂಲೋಕದಲ್ಲಿ ನಾನು ಮಾಡಿದ ಅನ್ಯಾಯ ಕರ್ಮಗಳನ್ನು ಎಲ್ಲವನ್ನೂ ನೀನು ಚೆನ್ನಾಗಿ ಬಲ್ಲೆ. ಆದರೂ ಸಹ ನಿನಗೆ ತಿಳಿಯದ ಪಾಪವನ್ನೂ ನಾನು ಮಾಡಿದ್ದೇನೆ. ಅದನ್ನು ಹೇಳುತ್ತೇನೆ ಕೇಳು.

ನಿನಗೆ ತಿಳಿದಂತೆ ನಾನು ಪ್ರಭಾವತಿಯೆಂಬ ವೇಶ್ಯೆಯೊಂದಿಗೆ ರಮಿಸುತ್ತಲಿದ್ದೆ. ಮನೆಯಲ್ಲಿ ಇರುವ ಹಣವನ್ನೆಲ್ಲ ಆ ಹೆಣ್ಣಿನ ನಾದದಿಂದ ಕಳೆದುಕೊಂಡೆ. ಸೆರೆ ಕುಡಿದು, ಜೂಜಾಟ ಆಡಿ, ಕಳವು ಮಾಡಿ, ಕೊಲೆ ಸುಲಿಗೆ ನಡೆಸಿ, ಮದಿರೆ, ಮೀನಾಕ್ಷಿ ಮೋಸ ಮುಂತಾದ ದಕ್ಷತೆಗಳನ್ನು ಆಚರಿಸುತ್ತಲೇ ಆಯುಷ್ಯ ಕಳೆದೆ. ನಾನು ಶಿವರಾತ್ರಿಯ ದಿನ ಶಂಭುವಿನ ನಿರ್ಮಾಲ್ಯವನ್ನೂ ಭಕ್ಷಣ ಮಾಡಿದೆ. ಅದಕ್ಕಾಗಿ ಜಂಬುಕನೆಂಬ ವಿಪ್ರನನ್ನೂ ನೀನು ಹಳಿದು ತಿರಸ್ಕರಿಸಿದೆ. ಈ ನನ್ನ ಅನೇಕ ದುಷ್ಕರ್ಮಗಳು ನಿನಗೆ ಗೊತ್ತಿದ್ದವೇ.

ಸಹೋದರ! ನೀನು ಗುರುವು ಸಿಂಹರಾಶಿಗೆ ಬಂದುದನ್ನು ಗಮನಿಸಿ ಗೋದಾವರೀ ಸ್ನಾನಕ್ಕಾಗಿ ಹೊರಟುಹೋದೆ. ನೀನು ಹೋದ ಬಳಿಕ ಹದಿನೈದು ದಿನಗಳನಂತರ ನನಗೆ ಒಂದು ಸಮಾಚಾರ ತಿಳಿದು ಬಂದಿತು. ''ಪುಂಡರೀಕನು, ತನ್ನ ಸೋದರಮಾವನಾದ ಮಾಲವನಿಂದ (ಐದು) ಸಾವಿರಾರು ತೊಲೆಯಷ್ಟು ಬಂಗಾರವನ್ನು ದಾನ ಕೊಡಲಿಕ್ಕಾಗಿ ಆಮಂತ್ರಿಸಲ್ಪಟ್ಟಿದ್ದಾನೆ. ವಿಪುಲವಾಗಿ ಧನ, ಕನಕ ಮುಂತಾದ ದ್ರವ್ಯರಾಶಿಯನ್ನೇ ಅವನಿಗೆ ದಾನರೂಪವಾಗಿ ನೀಡಿದ್ದಾನೆ. ಆ ಬಂಗಾರ ಹಾಗೂ ನಗನಾಣ್ಯಗಳನ್ನೆಲ್ಲ ತೆಗೆದುಕೊಂಡು ನೀನು ಮನೆಗೆ ಹೊರಟಿರುವೆ'' ಎಂಬ ಸುದ್ದಿಯನ್ನು ನಾನು ವಿಶ್ವಸನೀಯವಾಗಿ ತಿಳಿದುಕೊಂಡೆ.

ಈ ಸಮಾಚಾರವು ನನಗೆ ತಿಳಿದಕೂಡಲೇ ನಾನು "ನಿನಗೆ ದಾನ ಬಂದ ಹಣವನ್ನೆಲ್ಲ ಲಪಟಾಯಿಸಬೇಕು. ಆ ಹಣವನ್ನು ಕದ್ದು ನನ್ನ ಪ್ರೇಯಸಿಯಾದ ಪ್ರಭಾವತಿಗೆ ಕೊಟ್ಟು ಅವಳನ್ನು ಸಂತೋಷಪಡಿಸಬೇಕು ಮತ್ತು ಅದೇ ಹಣದಿಂದ, ಜೂಜು ಅಡಿ ಅದರಿಂದಲೂ ಹಣಗಳಿಸಿ ಅದನ್ನೆಲ್ಲ ಪ್ರಭಾವತಿಯ ಪಾದಾರವಿಂದಗಳಲ್ಲಿ ಅರ್ಪಿಸಿ ಸಂತೋಷಪಡಬೇಕು. ಎಂದು ಆಲೋಚನೆ ಗೈದು ನಿನ್ನ ದಾರಿಗೆ ನಾನು ಅಡ್ಡವಾಗಿ ನಿಂತುಕೊಂಡೆ. ದಾರಿಯಲ್ಲಿಯೇ ನಿನ್ನನ್ನು ಸಂಹರಿಸಿ ನಿನಗೆ ಮಾಲವ ಮಾವನು ಕೊಟ್ಟ ಅರ್ಧಸಾವಿರ ತೊಲೆಯ ಬಂಗಾರವನ್ನು ಅಪಹರಿಸಿ ಪ್ರಭಾವತಿಗೆ ಕೊಡಬೇಕೆಂದು ನೀನು ಬರಬಹುದಾದ ದಾರಿಯಲ್ಲಿ ಹೊಂಚುಹಾಕಿಕೊಂಡು ಕುಳಿತಿದ್ದೆ. ಆಗ ಆ ದಾರಿಯಿಂದ ಬೇರೆ ಒಬ್ಬ ವ್ಯಾಪಾರಸ್ಥನು ಬಂದ. ನಾನು ವ್ಯಾಪಾರಸ್ಥನು ಮಲಗಿದ ಶಿಬಿರದ ಬಳಿಯಲ್ಲೇ ಜಪ್ಪಿಸಿಕೊಂಡು ಕುಳಿತಿದ್ದೆ. ಅದೇ ವೇಳೆಯಲ್ಲಿ ಬೇರೊಬ್ಬ ತುಡುಗನು ಬಂದು ಆ ವ್ಯಾಪಾರಸ್ಥನ ಹಣವನ್ನು ಕಳವು ಮಾಡುವ ಉದ್ದೇಶದಿಂದ ಅವನ ತಂಬುವಿನಲ್ಲಿ ಪ್ರವೇಶ ಮಾಡಿದ. ಚಾತುರ್ಯದಿಂದ ತನ್ನ ಕೈಗೆ ಸಿಕ್ಕಷ್ಟು ಧನವನ್ನು ದೋಚಿ ಅಲ್ಲಿಂದ ಓಡತೊಡಗಿದ. ಹೋಗುವಾಗ ತುಸು ಸದ್ದಾಗಿ ಕಾವಲುಗಾರರು ಎದ್ದು "ಕಳ್ಳ ! ಕಳ್ಳ ! ಹಿಡಿಯಿರಿ ! ಹೊಡೆಯಿರಿ !" ಎಂದು ಕೂಗತೊಡಗಿದರು. ಆಗ ಆ ಕಳ್ಳನು ಓಡಿ ದೂರ ಹೋಗುವದರೊಳಗಾಗಿ ನಾನೇ ಮೊದಲು ಹಿಡಿಯಬೇಕೆಂದು ಅವನ ಹಿಂದೆ ಬೆನ್ನಟ್ಟಿದೆ. ಓಡುತ್ತಿದ್ದ ನನ್ನ ಹಿಂದೆ ವೇಗವಾಗಿ ಓಡುತ್ತ ಬಂದ ವ್ಯಾಪಾರಿಯ ಸೇವಕರು ನನ್ನನ್ನೇ ಕಳ್ಳನೆಂದು ಭಾವಿಸಿದರು. ಒಟ್ಟುಗೂಡಿ ನನ್ನನ್ನೇ ಎಲ್ಲರೂ ಸೇರಿ ಬಲವಾಗಿ ಪ್ರಹರಿಸತೊಡಗಿದರು. ಆಗ ಆತ್ಮರಕ್ಷಣೆಗಾಗಿ ನಾನು ಒಬ್ಬನನ್ನು ಹೊಡೆದೆ. ಆತನು 'ನಾನು ಬ್ರಾಹ್ಮಣ, ನನ್ನನ್ನು ಕೊಲ್ಲಬೇಡ' ಎಂದು ಹೇಳಿದರೂ ಕೇಳದೇ ಖಡ್ಗದಿಂದ ಅವನ ತಲೆಯನ್ನು ಕತ್ತರಿಸಿದೆ. ಅದನ್ನು ಕಂಡು ರೊಚ್ಚಿಗೆದ್ದ ಆ ವ್ಯಾಪಾರಿಯ ಸೇವಕರು ತೀಕ್ಷ್ಣವಾಗಿ ತಮ್ಮ ಖಡ್ಗಗಳಿಂದ ನನ್ನನ್ನು ಪ್ರಹರಿಸಿದರು. ಅದರಿಂದ ಪ್ರಾಣಾಂತಿಕ ಪೆಟ್ಟಾಗಿ ಮೈತುಂಬ ಗಾಯ, ಅಲ್ಲಲ್ಲಿ ಬಸಿಯುವ ನೆತ್ತರು ಇವುಗಳಿಂದ ನರಳುತ್ತ ನೆಲದ ಮೇಲೆ ಮರಣವನ್ನೇ ನಿರೀಕ್ಷಿಸುತ್ತ ನಾನು ಮಲಗಿರುವಾಗ ನೀನು ಆಗಮಿಸಿದೆ. ಮುಂದೆ ಕೆಲ ಹೊತ್ತಿನಲ್ಲೇ ನಾನು ಮರಣಿಸಿದ್ದು ನಿನಗೆ ತಿಳಿದೇ ಇದೆ. ಈ ಪುಣ್ಯಕ್ಷೇತ್ರದಲ್ಲಿ ನನಗೆ ಮರಣ ಪ್ರಾಪ್ತವಾದ್ದರಿಂದ ಈಗ ನಾನು ದಿವ್ಯದೇಹವನ್ನು ಪಡೆದು ಸ್ವರ್ಗಕ್ಕೆ ಹೊರಟಿರುವೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ವಿದರ್ಭ ನಗರದಲ್ಲಿದ್ದ ಮಾಲವ ಬ್ರಾಹ್ಮಣನ ಆಖ್ಯಾನ ಎಂಬ ಎರಡುನೂರನೇ ಅಧ್ಯಾಯ ಮುಗಿದುದು*

—o—

## ಪುಂಡರೀಕ ಭರತರ ಸಂವಾದ; ಪುಷ್ಕರಕ್ಷೇತ್ರದ ಹಾಗೂ ಪ್ರಯಾಗ ಕ್ಷೇತ್ರದ ಮಹತ್ವ ವರ್ಣನೆ, ಪುಂಡರೀಕನ ಮನೆಯಲ್ಲಿ ಒಂದು ತಿಂಗಳವರೆಗೆ ಶ್ರೀಹರಿಯವಾಸ್ತವ್ಯ.

**ಅಧ್ಯಾಯ - ೨೦೧**

**ನಾರದ:-** ಮಹಾತ್ಮನಾದ ಪುಂಡರೀಕನು ತನ್ನ ಸೋದರನು ತನ್ನ ಹಿಂದಿನ ಎಲ್ಲ ದುರ್ವ್ಯಾಹಾರ ದುಷ್ಕೃತ್ಯಗಳನ್ನು ನಿವೇದಿಸಿದ ಬಳಿಕ ಅವನನ್ನು ಕುರಿತು ಪ್ರಶ್ನಿಸಿದ.

**ಪುಂಡರೀಕ:-** ತಮ್ಮ ಭರತ, ನೀನು ಇಷ್ಟೆಲ್ಲ ಪಾಪ ಮಾಡಿದೆ. ಆದರೂ ನಿನಗೆ ಇಂಥ ಪುಣ್ಯ ತೀರ್ಥದಲ್ಲಿ ಮರಣ ಹೊಂದುವ ಸುಯೋಗವು ಹೇಗೆ ಪ್ರಾಪ್ತವಾಯಿತು? ನಿನಗೆ ಗೊತ್ತಿದ್ದರೆ ಹೇಳು.

**ಭರತ:-** ನೀನು ಸರಿಯಾಗಿ ಪ್ರಶ್ನೆ ಮಾಡಿದೆ. ನನಗೆ ಈ ಪುಣ್ಯತೀರ್ಥದಲ್ಲಿ ಮರಣ ಬಂದುದೂ ಸಹ ಒಂದು ಯೋಗಾಯೋಗವೇ. ಅದಕ್ಕೆ ನಾನು ಹಿಂದಿನ ಜನ್ಮದಲ್ಲಿ ಮಾಡಿದ ಸುಕೃತ ವಿಶೇಷವು ಕಾರಣ. ಅದನ್ನೂ ನಿನಗೆ ನಿರೂಪಿಸುವೆ.

ಒಂದು ದಿನ ನಾನು ಬಹಳ ಹೊತ್ತು ಜೂಜಾಟ ಆಡಿ ಮನೆಗೆ ಬರುತ್ತಲಿದ್ದೆ. ದಾರಿಯಲ್ಲಿ ಒಂದು ಅಂಗಡಿಯ ಎದುರು ಬಾಲಕನೊಬ್ಬ ಮರಣಹೊಂದಿ ಬಿದ್ದಿದ್ದ, ಆ ಅನಾಥ ಬಾಲಕನ ಶವ ಕಂಡು ನನಗೆ ಕರುಣೆಯುಕ್ಕಿತು. ಕೂಡಲೇ ನಾನು ಆ ಬಾಲಕನ ಶವವನ್ನು ಹೊತ್ತುಕೊಂಡು ಗಂಗಾತೀರಕ್ಕೆ ಹೋಗಿ ಗಂಗೆಯಲ್ಲಿ ಆ ದೇಹಕ್ಕೆ ಸಂಸ್ಕಾರ ನಡೆಸಿದೆ. ಅದಕ್ಕಾಗಿ ಬೇಕಾದ ಹಣವನ್ನು ನಾನೇ ವ್ಯಯಿಸಿದೆ. ಆ ಹಣವು ಅದೇ ಜೂಜಾಟದಿಂದ ಗೆದ್ದುದಾಗಿತ್ತು. ಒಬ್ಬ ಅನಾಥ ಬಾಲಕನಿಗೆ ಗಂಗೆಯ ತಡಿಯಲ್ಲಿ ಯಾವ ಸ್ವಾರ್ಥವೂ ಇಲ್ಲದೇ ಸಂಸ್ಕಾರ ನಡೆಸಿದ ಪುಣ್ಯದಿಂದ ನನಗೆ ಈ ಪುಣ್ಯಕರವಾದ ಪುಷ್ಕರಕ್ಷೇತ್ರದಲ್ಲಿ ಮರಣಹೊಂದುವ ಯೋಗವು ಲಭಿಸಿತು.

ಹೀಗೆ ಭರತನು ಮಹಾ ಪಾಪಿಷ್ಠನಾದರೂ ಸಹ ಆ ಪುಣ್ಯ ಕ್ಷೇತ್ರದಲ್ಲಿ ಒದಗಿದ ಮರಣದ ಪ್ರಭಾವದಿಂದ ಆ ಪಾಪಗಳಿಂದ ಮುಕ್ತನಾಗಿ ದಿವ್ಯ ದೇಹವನ್ನು ಧರಿಸಿ ದೇವಿವಿಮಾನವನ್ನು ಆರೋಹಣ ಮಾಡಿ ಪುಂಡರೀಕನ ಎದುರು ವೃತ್ತಾಂತವನ್ನು ನಿವೇದಿಸಿ ಅವನಿಂದ ಅಪ್ಪಣೆ ಪಡೆದು ಸ್ವರ್ಗಲೋಕವನ್ನು ಕುರಿತು ಪ್ರಯಾಣ ಮಾಡಿದ.

ಇದನ್ನು ಕಂಡ ಪುಂಡರೀಕನಿಗೆ ಆ ತೀರ್ಥದ ಮಹಿಮೆಯು ಮನದಟ್ಟಾಯಿತು. ಆದುದರಿಂದ ಆ ಬಂಧು-ಬಾಂಧವರಿಗೆಲ್ಲ ತನ್ನ ತಮ್ಮನಾದ ಭರತನ ಮರಣದ ಸಮಾಚಾರವನ್ನು ತಿಳಿಸಿದ.

ಅನಂತರ ಆ ಪುಂಡರೀಕನು ಇಂದ್ರಪ್ರಸ್ಥದಲ್ಲಿದ್ದ ಈ ಪುಷ್ಕರ ತೀರ್ಥದಲ್ಲಿ ''ಮಾಘಮಾಸ ಒಂದು ತಿಂಗಳು ಶ್ರೀಹರಿಯು ನನ್ನ ಮನೆಯಲ್ಲಿ ಇರಲಿ'' ಎಂದು ಸಂಕಲ್ಪಿಸಿ ಸ್ನಾನ ಮಾಡಿದ. ಈತನ ಅಪೇಕ್ಷೆಯು ವ್ಯರ್ಥವಾಗಲಿಲ್ಲ. ಮನೆಗೆ ತೆರಳಿ ಶ್ರೀಹರಿಯ ಆರಾಧನೆಯನ್ನೂ ಭಕ್ತಿಯಿಂದ ಮಾಡತೊಡಗಿದ. ಪ್ರತಿನಿತ್ಯವೂ ಶ್ರೀಹರಿಯ ಆರಾಧನೆ,

ಉಪಾಸನೆ, ಪೂಜೆ, ಕೃಷ್ಣಮಂತ್ರ, ಜಪ, ವ್ರತ, ಮುಂತಾದವುಗಳಿಂದ ಶ್ರೀಹರಿಯ ಸೇವೆಯನ್ನು ಎಡೆಬಿಡದೇ ಮಾಡಿದ. ಹೀಗೆ ಸತತ ಧ್ಯಾನರೂಪವಾದ ತಪಸ್ಸನ್ನು ಒಂದು ತಿಂಗಳವರೆಗೆ ಮಾಡುತ್ತಲೇ ಇದ್ದ. ಮುಂದೆ ಪುಷ್ಯಶುದ್ಧ ಪೌರ್ಣಿಮೆಯ ದಿನ ಒಂದು ದೊಡ್ಡ ಉತ್ಸವವನ್ನೂ ಅಲ್ಲಿ ನೆರವೇರಿಸಿದ. ಅದರ ಮರುದಿನ ಅಂದರ ಮಾಘ ಶುದ್ಧ ಪ್ರತಿಪದೆಯ ದಿನ ಶ್ರೀಹರಿಯು ತನ್ನ ಮನೆಗೆ ಬರುವನು ಎಂದು ನಿರ್ಧರಿಸಿ, ಅದಕ್ಕಾಗಿ ತನ್ನ ಮನೆಗೆ ಸಾರಣಿ, ಕಾರಣಿ ಮಾಡಿದ. ಚಂದನಜಲದಿಂದ ಮನೆಯ ಅಂಗಳವನ್ನೆಲ್ಲ ಪ್ರೋಕ್ಷಿಸಿ, ಸಾರಿಸಿದ. ಮನೆಗೆ ಸುಣ್ಣ ಹಚ್ಚಿಸಿ ಅಲಂಕಾರ ಮಾಡಿದ. ಅಲ್ಲಲ್ಲಿ ಮಂಡಲಗಳನ್ನು ಬರೆದ. ರಂಗವಲ್ಲಿ ಹಾಕಿದ. ಬಾಗಿಲುಗಳಿಗೆ ತಳಿರು ತೋರಣ ಕಟ್ಟಿದ. ಭವನವನ್ನು ಸುಂದರವಾಗಿ ಶೃಂಗರಿಸಿದ. ಮರುದಿನ ಸದಾಚಾರ ಸಂಪನ್ನರಾದ ಎರಡುನೂರು, ಜನ ಬ್ರಾಹ್ಮಣರನ್ನು ಬರಮಾಡಿಕೊಂಡು ಅವರಿಗೆ ಬಗೆಬಗೆಯ ಪಕ್ವಾನ್ನಗಳನ್ನು ಮಾಡಿಸಿ ಊಟಕ್ಕೆ ಹಾಕಿ ವಿಪುಲವಾಗಿ ದಕ್ಷಿಣೆ ಭೂರಿದಾನಗಳನ್ನು ನೀಡಿ ಅವರನ್ನು ಸಂತೋಷಪಡಿಸಿದ. ನಾನಾವಿಧವಾದ ಮಂಗಳವಾದ್ಯಗಳನ್ನು ಮೊಳಗಿಸಿದ. ಗಾಯಕರನ್ನು ಕರೆಯಸಿ ಶ್ರೀಹರಿಯ ಗುಣಗಾನವನ್ನು ಮಾಡಿಸಿದ. ರಾತ್ರಿಕಾಲದಲ್ಲಿ ಜಾಗರೋತ್ಸವವನ್ನು ಭಕ್ತಿಯಿಂದ ನೆರವೇರಿಸಿದ. ಬೆಳಗಾದ ಬಳಿಕ ಗಾಯರಕನ್ನು ಮನೆಗೆ ಬೀಳ್ಕೊಟ್ಟು, ಶ್ರೀಗೋವಿಂದನ ಆಗಮನವನ್ನೇ ನಿರೀಕ್ಷಿಸುತ್ತ, ಮನೆಯ ನಟ್ಟನಡುವೆ ಕುಳಿತುಕೊಂಡ. ಮನಸ್ಸಿನಲ್ಲಿ ಸತತವಾದ ಧ್ಯಾನ, ಗಾನ, ಭಜನೆ, ಸ್ಮರಣೆ, ಚಿಂತನೆ ಮುಂತಾದ ಶ್ರೀಹರಿಯ ಬಗೆಬಗೆಯ ಆರಾದನೆಯು ಅವಿಚ್ಛಿನ್ನವಾಗಿ ನಡದೇ ಇದ್ದಿತು. ಅಷ್ಟರಲ್ಲಿ ಶ್ರೀಹರಿಯು ತನ್ನ ವಾಹನವಾದ ಗರುಡನನ್ನು ಆರೋಹಣಮಾಡಿಕೊಂಡು ಮನೆಯ ನಟ್ಟನಡುವೆ ಕುಳಿತುಕೊಂಡ ಪುಂಡರೀಕನ ಬಳಿಗೆ ಹೋಗಿ ನಿಂತುಕೊಂಡ, ಸಾಕ್ಷಾತ್ ಭಗವಂತನನ್ನು ಕಣ್ಣೆದುರು ಕಂಡ ಪುಂಡರೀಕನು ಹರ್ಷಪುಲಕಿತನಾಗಿ ಆಸನದಿಂದೆದ್ದು ಸಾಷ್ಟಾಂಗ ನಮಸ್ಕಾರಗೈದ. ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದ. ಕೈ ಮುಗಿದು ಶ್ರೀಹರಿಯನ್ನು ಪ್ರಾರ್ಥಿಸಿದ.

**ಪುಂಡರೀಕ:-** ಭಗವನ್, ನೀನು ಈ ಮಾಘ ಮಾಸ ಪೂರ್ತಿ ನಾನು ಪ್ರಾರಂಭಿಸಿದ ಆರಾಧನೆ ಮುಗಿಯುವವರೆಗೂ ನನ್ನ ಮನೆಯಲ್ಲೇ ಇರಬೇಕು.

**ಯತ್ರ ತ್ವಂ ಸೇವಕಾಸ್ತೇಚ ವಸಂತಿ ಪರಿಚರ್ಯಯಾ ।**
**ತತ್ರೈವಖಲು ವೈಕುಂಠಃ ಸರ್ವ ದೋಷವಿವರ್ಜಿತಃ ॥**

ಎಲ್ಲಿ ನಿನ್ನ ಸೇವಕರು ನಿನ್ನ ಸೇವೆ, ಶುಶ್ರೂಷೆ, ಪರಿಚರ್ಯ, ಉಪಾಸನೆಗಳನ್ನು ಮಾಡುತ್ತ ಇರುತ್ತಾರೋ ಅದೇ ವೈಕುಂಠ, ಯಾವ ಮನೆಯಲ್ಲಿ, ನಿನ್ನಿಂದ ಶ್ರುತಿ ಸ್ಮೃತಿಗಳಲ್ಲಿ ಉಪದೇಶಿಸಲ್ಪಟ್ಟ ವರ್ಣಾಶ್ರಮೋಚಿತ ಕರ್ಮಗಳು ಮಾಡಲ್ಪಡುತ್ತವೆಯೋ, ಅಲ್ಲಿಯೇ ನೀನು ನೆಲೆಸಿರುತ್ತಿ ಎಂದು ಸಜ್ಜನರರ ಬಾಯಿಂದ ನಾನು ಕೇಳಿದ್ದೇನೆ. ಸಜ್ಜನರು ಎಂದರೆ -

**''ಯೇಷಾಂ ವಚಸಿ ತೇ ನಾಮ ಹೃದಿ ರೂಪಂ ಚ ಸುಂದರಂ'**
**ಕರ್ಣಯೋಶ್ಚಗುಣಾರೋಪಃ ತ ಏವ ಖಲು ಸಾಧವಃ ॥**

ಯಾರ ಮಾತಿನಲ್ಲಿ ಭಗವಂತನ ನಾಮ, ಹೃದಯದಲ್ಲಿ ಭಗವಂತನ ಸುಂದರವಾದ

ರೂಪ, ಕಿವಿಗಳಲ್ಲಿ ಭಗವಂತನ ಸುಂದರವಾದ ಗುಣಗಾನಗಳ ಶ್ರವಣ ತುಂಬಿರುವದೋ ಅವರೇ ಸಜ್ಜನರು.

**''ಭವತೋ ಭವತಿ ಸ್ವಾಂತಂ ಯೇಷಾಂ ಶುಶ್ರೂಷಣೇ ವಿಭೋ ।**
**ಉತ್ತಮಾಂಗೇ ಚ ನಿರ್ಮಾಲ್ಯಂ ತ ಏವ ಖಲು ಸಾಧವಃ ॥**

ಯಾರ ಅಂತರಂಗವು ಶ್ರೀಹರಿಯಾದ ಸಾಕ್ಷಾತ್ ನಿನ್ನ ಧ್ಯಾನ, ನಿನ್ನ ಮಹಾಮಹಿಮಾ ಶ್ರವಣ, ಗಾನ ಇವುಗಳಲ್ಲಿ ಮಾತ್ರ ತೊಡಗಿರುವದೋ, ಮತ್ತು ಯಾರ ತಲೆಯ ಮೇಲೆ ನಿನ್ನ ನಿರ್ಮಾಲ್ಯವು ಶೋಭಿಸುತ್ತಿರುತ್ತದೆಯೋ, ಅವರೇ ಸಾಧುಗಳು.

**''ಯೇಷಾಂ ತು ಬುದ್ಧಿಃ ಶತ್ರೌ ಚ ಮಿತ್ರೇ ಚ ಕಮಲಾಪತೇ ।**
**ಜಯಾಪಚಯ ಯೋಶ್ಚೈವ ತ ಏ ವ ಖಲು ಸಾಧವ ॥''**

ಯಾರ ಬುದ್ಧಿಯು ಶತ್ರುವಿನಲ್ಲೂ ಮಿತ್ರನಲ್ಲೂ ಸಮಾನವಾಗಿದೆಯೋ, ಮತ್ತು ವೃದ್ಧಿ ಹ್ರಾಸಗಳಲ್ಲಿ ಹಿಗ್ಗದೇ ಕುಗ್ಗದೇ ಭಗ್ವದೈಕನಿಷ್ಠವಾಗಿದೆಯೋ, ಅವರೇ ನಿಜವಾದ ಸಾಧುಗಳು.

**''ಯೇಷಾಂ ವಿಕುರುತೇ ಚೇತೋ ನ ವಿಕಾರಸ್ಯ ಕಾರಣೇ**
**ಸತೀ ಲಕ್ಷ್ಮೀಪತೇ ನೂನಂ ತ ಏವ ಖಲು ಸಾಧವಃ ॥**

ಯಾರ ಮನಸ್ಸು ವಿಕಾರದ ಕಾರಣಗಳು ಒದಗಿ ಬಂದರೂ ವಿಕಾರ ಗೊಳ್ಳುವದಿಲ್ಲವೋ ಮತ್ತು ಲಕ್ಷ್ಮೀ ಧ್ಯಾನದಲ್ಲಿಯೇ ನಿರ್ವಿಕಾರವಾಗಿ ತಲ್ಲೀನವಾಗಿರುವದೋ ಅವರೇ ನಿಜವಾದ ಸಾಧುಗಳು.

**''ಯತ್ರ ತ್ವಂ ಮಾಧವಸ್ತತ್ರ ಸಂತೋಯತ್ರ ತತೋ ಭವಾನ್ ।**
**ಅತೋ ವಿಜ್ಞಾಪಯಾಮಿ ತ್ವಾಂ ಮಾಘೇ ಮಮ ಗೃಹೇ ವಸ ॥''**

ಭಗವಂತ ! ಲಕ್ಷ್ಮೀಪತಿಯಾದ ನೀನು ಎಲ್ಲಿರುವೆಯೋ, ಅಲ್ಲಿ ಸಜ್ಜನರು ಇರುತ್ತಾರೆ. ಎಲ್ಲಿ ಸಜ್ಜನರು ಇರುತ್ತಾರೋ, ಅಲ್ಲಿ ನೀನಿರುತ್ತಿ. ಆದುದರಿಂದ ಸ್ವಾಮಿ, ನನ್ನ ಒಂದೇ ಒಂದು ಪ್ರಾರ್ಥನೆ ನಿನ್ನ ಸನ್ನಿಧಿಯಲ್ಲಿ. ಈ ವರ್ಷದ ಮಾಘ ಮಾಸದ ಸಂಪೂರ್ಣ ಮೂವತ್ತು ದಿನಗಳವರೆಗೆ ನೀನು ನನ್ನ ಮನೆಯಲ್ಲಿ ವಾಸಮಾಡಬೇಕು.

ಇದಕ್ಕಾಗಿ ನಾನು ನಿನ್ನನ್ನು ಕುರಿತು ಇಷ್ಟು ಕಾಲದವರೆಗೆ ಘೋರವಾದ ತಪಸ್ಸನ್ನು ಆಚರಿಸಿದ್ದೇನೆ.

**ನಾರದ:-** ಪುಂಡರೀಕನ ಈ ಮಾತನ್ನು ಕೇಳಿ ಶ್ರೀಹರಿಯು ದಶದಿಕ್ಕುಗಳನ್ನು ಸಹ ತನ್ನ ಹಲ್ಲಿನ ಹೊಳಪಿನಿಂದ ಬೆಳಗುತ್ತ ನುಡಿದ.

**ಶ್ರೀಹರಿ:-** ಬುದ್ಧಿವಂತ ಪುಂಡರೀಕ! ನೀನು ಸಾಧುಗಳಲ್ಲಿಯೇ ಸರ್ವಶ್ರೇಷ್ಠ. ನೀನು ನನ್ನ ಸಂಗವನ್ನೂ ಮತ್ತು ನಿನ್ನ ಮನೆಯಲ್ಲಿ ನಾನು ಇರಬೇಕೆಂಬ ಆಪೇಕ್ಷೆಯನ್ನೂ ಮಾಡಿ ಸಂಕಲ್ಪ ಪೂರ್ವಕವಾಗಿ ಆ ಪುಷ್ಕರ ತೀರ್ಥದಲ್ಲಿ ಸ್ನಾನಮಾಡಿದೆ. ಇನ್ನು ಮೇಲೆ ನೀನು ಮಾಘಮಾಸ ಪೂರ್ತಿ ಒಂದು ತಿಂಗಳವರೆಗೆ ಗಂಗಾ ನದಿಯಲ್ಲಿ ಸ್ನಾನಮಾಡು. ಬಳಿಕ ನಾನು ಮಾಘದ ಕೊನೆಯಲ್ಲಿ ಪೂರ್ಣಿಮಾ ತಿಥಿಯ ದಿನ ಪುಷ್ಕರ ಕ್ಷೇತ್ರದಲ್ಲಿ ನಿನಗೆ

ಸ್ನಾನಮಾಡಿಸುತ್ತೇನೆ. ಪ್ರಯಾಗ ಕ್ಷೇತ್ರದಲ್ಲಿ ಮಾಘ ಸಂಪೂರ್ಣ ಸ್ನಾನ ಮಾಡುವದರಿಂದ ಬರುವ ಫಲವು, ಈ ಪುಷ್ಕರದಲ್ಲಿ ಒಂದು ದಿನ ಸ್ನಾನ ಮಾಡಿದರೂ ಲಭಿಸುವದು.

**ನಾರದ :-** ಹೀಗೆ ಶ್ರೀಹರಿಯು ಹೇಳಿದ್ದನ್ನು ಆಲಿಸಿ ಪುಂಡರೀಕನು ಸೂರ್ಯೋದಯ ಸಮಯಕ್ಕೆ ಸರಿಯಾಗಿ ಗಂಗೆಯಲ್ಲಿ ಸ್ನಾನ ಮಾಡಿದ. ತನಗೆ ಪ್ರತ್ಯಕ್ಷನಾದ ಭಗವಂತನನ್ನು ತುಳಸಿ, ಹೂವು, ಕುಂಕುಮ, ಗಂಧ, ಧೂಪ, ದೀಪ, ಅಗರು, ನೈವೇದ್ಯ, ನೀರಾಜನ, ಮಂತ್ರಪುಷ್ಪ ಮೊದಲಾದವುಗಳಿಂದ ಪೂಜಿಸಿದ, ಐದು ಕರ್ಪೂರದ ಆರತಿಗಳನ್ನು ಬೆಳಗಿ ಪಂಚಭಕ್ಷ ಪಕ್ವಾನ್ನಗಳನ್ನು ನಿರ್ಮಿಸಿ ನೈವೇದ್ಯ ಸಮರ್ಪಿಸಿದ. ಮಣಿಮಯವಾದ ಮಂಚದ ಮೇಲೆ ಮಂಡಿಸಿದ ಆ ಶ್ರೀಹರಿಯನ್ನು ಚಾಮರ ಬೀಸಿ ಸೇವೆಗೈದ. ಅವನ ಪಾದಸಂವಾಹನವನ್ನು ಭಕ್ತಿಯಿಂದ ಮಾಡಿದ. ಕರ್ಪೂರ, ಲವಂಗ, ಯಾಲಕ್ಕಿ, ಪರಿಮಳ ದ್ರವ್ಯಗಳು ಇವುಗಳಿಂದ ಕೂಡಿದ ತಾಂಬೂಲವನ್ನು ಶ್ರೀಹರಿಗೆ ನೀಡಿದ. ಇದಕ್ಕೆ ಮೊದಲು ಶ್ರೀಹರಿಗೆ ಸ್ನಾನಮಾಡಿಸಿದ ಬಳಿಕ, ಅವನಿಗೆ ಉಷ್ಣೀಷ ರುಮಾಲವನ್ನೂ ಸುತ್ತಿದ. ಇಷ್ಟೆಲ್ಲ ಅಲಂಕಾರ ಮಾಡಿ, ಅವನ ಕೈಯಲ್ಲಿ ಕನ್ನಡಿಯನ್ನು ತಂದು ಕೊಟ್ಟು. ತಾನು ಅವನೆದುರು ಕೈ ಮುಗಿದುಕೊಂಡು ನಿಂತ. ಶ್ರೀಹರಿಯ ಸರ್ವವಿಧವಾದ ಸೇವೆ ಮುಗಿದ ಬಳಿಕ ಅವನ ಉಚ್ಛಿಷ್ಟವನ್ನು ಪ್ರಸಾದವೆಂದು ಬಗೆದು ತಾನು ಕೂಡ ಭಕ್ಷಣ ಮಾಡಿದ್ದ.

ಹೀಗೆ ಮಾಘ ಮಾಸದ ಒಂದು ತಿಂಗಳ ಅವದಿ ಮುಗಿಯುವವರೆಗೆ ಶ್ರೀಹರಿಯು ಭಕ್ತನಾದ ಪುಂಡರೀಕನ ಮನೆಯಲ್ಲಿ ವಾಸಮಾಡಿದ. ಅನಂತರ ಮಾಘಪೂರ್ಣಿಮೆಯ ದಿನ ಶ್ರೀಹರಿಯು ಗರುಡನನ್ನು ನೆನೆದ ಕ್ಷಣದಲ್ಲಿ ಆ ವಿನತಾನಂದನನು ಮುಂದೆ ಬಂದು ಸನ್ನದ್ಧನಾಗಿ ನಿಂತುಕೊಂಡ. ಹೊರಡುವ ಮುನ್ನ ಶ್ರೀಹರಿಯು ಪುಂಡರೀಕನನ್ನು ಕುರಿತು ಮಾತನಾಡಿದ.

**ಶ್ರೀಹರಿ:-** ಪುಂಡರೀಕ! ನಾನು ಈಗ ಹೇಳಲಿರುವ ಮಾತನ್ನು ಸಾವಧಾನವಾಗಿ ಕೇಳು. ಇಂದ್ರಪ್ರಸ್ಥದಲ್ಲಿರುವ ಪುಷ್ಕರದಲ್ಲಿ ನೀನು ಸ್ನಾನಮಾಡುವಾಗ ಒಂದು ತಿಂಗಳವರೆಗೆ ಶ್ರೀಹರಿಯು ನನ್ನ ಮನೆಯಲ್ಲಿ ಇರಲಿ ಎಂದು ಅಪೇಕ್ಷೆಪಟ್ಟು ಸ್ನಾನಮಾಡಿದ್ದೆ. ಈಗ ನಾನು ಒಂದು ತಿಂಗಳವರೆಗೆ ನಿನ್ನ ಮನೆಯಲ್ಲಿ ಇದ್ದು ನೀನು ಮಾಡಿದ ಸೇವೆಯನ್ನು ಸ್ವೀಕರಿಸಿದ್ದೇನೆ. ನಿನ್ನ ಸತತ ಧ್ಯಾನೋಪಾಸನಗಳಿಂದ ನಾನು ಪರಿತುಷ್ಟ. ನೀನು ಈಗ ನನ್ನೊಡನೆ ಈ ಗರುಡನ ಮೇಲೇರಿ ನನ್ನ ದಿವ್ಯಲೋಕಕ್ಕೆ ಬಾ. ನಾನು ನಿನ್ನನ್ನು ಈಗ ಮೊದಲು ಎಲ್ಲ ತೀರ್ಥಗಳ ಶಿರೋರತ್ನದಂತಿರುವ ಇಂದ್ರಪ್ರಸ್ಥಾಂತರ್ಗತವಾದ ಪುಷ್ಕರತೀರ್ಥಕ್ಕೆ ಕರೆದುಕೊಂಡು ಹೋಗುತ್ತೇನೆ. ಆ ಪುಷ್ಕರವು ಪವಿತ್ರತ್ರೋತಮ. ಮಹಾಪಾಪಿಷ್ಠನೂ, ದುಷ್ಟನೂ ಆದ ಭರತನೂ ಅಲ್ಲಿ ಮರಣ ಹೊಂದಿದ್ದರಿಂದ ಸ್ವರ್ಗಪಡೆದ. ಅಂದ ಬಳಿಕ ಆ ತೀರ್ಥದ ಮಹಿಮೆಯ ವಿಷಯದಲ್ಲಿ ಬೇರೆ ದೃಷ್ಟಾಂತ ಅಗತ್ಯವೇ ಇಲ್ಲ.

**ನಾರದ:-** ಹೀಗೆ ಹೇಳಿ ದೇವದೇವೋತ್ತಮನಾದ ಶ್ರೀಹರಿಯು ಗರುಡನ ಮೇಲೆ ಆ ಪುಂಡರೀಕನನ್ನು ಹತ್ತಿಸಿಕೊಂಡು ಹೊರಟ. ಸರ್ವತೀರ್ಥಶ್ರೇಷ್ಠವಾದ ಪುಷ್ಕರಕ್ಕೆ ಬಂದ. ಪುಂಡರೀಕನು ಅಲ್ಲಿ ಸ್ನಾನ ಮಾಡಿದ. ಆಗ ಅವನ ದೇಹದಿಂದ ಪ್ರಾಣವಾಯುವಿನೊಡನೆ ಜ್ಯೋತಿಷ್ಪುಂಜದಂತಿರುವ ಒಂದು ತೇಜಸ್ಸು ಹೊರಹೊರಟಿತು. ಅದು ನೇರವಾಗಿ ಭಗವಂತನ ಪಾದಾರವಿಂದಗಳಲ್ಲಿ ಹೋಗಿ ಲೀನವಾಯಿತು.

ಹೀಗೆ ಇಂದ್ರಪ್ರಸ್ಥದಲ್ಲಿರುವ ಪುಷ್ಕರಕ್ಷೇತ್ರದಲ್ಲಿ ಸ್ನಾನ ಮಾಡಿ ಪುಂಡರೀಕನು ಸಾಯುಜ್ಯ ಮೋಕ್ಷವನ್ನು ಹೊಂದಿದ. ಆ ತೀರ್ಥದಲ್ಲಿ ಶ್ರದ್ಧೆಯಿಂದ ಸ್ನಾನಮಾಡಿ, ಸಂಕಲ್ಪ ಪೂರ್ವಕವಾಗಿ ಇಚ್ಛೆ ಮಾಡಿದ್ದರಿಂದಲೇ ಶ್ರೀಹರಿಯು ಅವನ ಮನೆಯಲ್ಲಿ ಒಂದು ತಿಂಗಳು ವಾಸಮಾಡಿದ.

ಇಂದ್ರಪ್ರಸ್ಥಗತವಾದ ಈ ಪುಷ್ಕರದ ಮಹಿಮೆಯನ್ನು ಯಾರು ತಾನೇ ಪೂರ್ಣವಾಗಿ ಬಣ್ಣಿಸಬಲ್ಲರು? ಈ ತೀರ್ಥದ ಮಹಾಮಹಿಮೆಯಲ್ಲಿ ಕೋಟ್ಯಂಶವನ್ನು ಮಾತ್ರ ನಾನು ಬಣ್ಣಿಸಿದ್ದೇನೆ. ಈ ತೀರ್ಥದ ಮಾಹಾತ್ಮ್ಯವನ್ನು ಶ್ರದ್ಧೆಯಿಂದ ಶ್ರವಣಮಾಡಿದ ಮಾನವನು ಅಶ್ವಮೇಧಯಾಗದಿಂದ ಪಡೆಯುವಷ್ಟು ಫಲವನ್ನು ಪಡೆಯುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಪುಂಡರೀಕ ಭರತರ ಸಂವಾದ; ಪುಷ್ಕರಕ್ಷೇತ್ರದ ಹಾಗೂ ಪ್ರಯಾಗ ಕ್ಷೇತ್ರದ ಮಹತ್ವ ವರ್ಣನೆ, ಪುಂಡರೀಕನ ಮನೆಯಲ್ಲಿ ಒಂದು ತಿಂಗಳವರೆಗೆ ಶ್ರೀಹರಿಯವಾಸ್ತವ್ಯ. ಎಂಬ ಎರಡು ನೂರ ಒಂದನೇಯ ಅಧ್ಯಾಯ ಮುಗಿದುದು*



## ಇಂದ್ರಪ್ರಸ್ಥದಲ್ಲಿರುವ ಪ್ರಯಾಗತೀರ್ಥದ ಮಾಹಾತ್ಮ್ಯ; ವಿಶ್ವಾವಸು ಎಂಬ ಗಂಧರ್ವನ ಕಥಾನಕ ವರ್ಣನೆ; ಮಾಹಿಷ್ಮತೀ ನಗರದಲ್ಲಿರುವ ಮೋಹಿನಿಯ ವೃತ್ತಾಂತ.

**ಅಧ್ಯಾಯ - ೨೦೨**

**ನಾರದ:-** ಈ ಇಂದ್ರಪ್ರಸ್ಥ ಕ್ಷೇತ್ರದ ಪರಿಸರದಲ್ಲಿ ಇರುವ ಪ್ರಯಾಗ ತೀರ್ಥದ ಮಹಿಮೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ವಿಶ್ವಾವಸು ಎಂಬ ಗಂಧರ್ವನು ಒಂದು ದಿನ ಸಂಗೀತ ಸೇವೆಯನ್ನು ಸಲ್ಲಿಸಲು ಸತ್ಯಲೋಕಕ್ಕೆ ಹೋಗಿದ್ದ. ಅಲ್ಲಿನ ಬ್ರಹ್ಮಸಭೆಯಲ್ಲಿ ಎಲ್ಲ ದೇವಾಧಿದೇವತೆಗಳು ಆಸೀನರಾಗಿದ್ದರು. ಅವರ ಮಧ್ಯದಲ್ಲಿ ಬ್ರಹ್ಮದೇವರು ಕುಳಿತಿದ್ದರು. ಆ ಬ್ರಹ್ಮದೇವರ ಆಸನದ ಬದಿಯಲ್ಲಿಯೇ ಇಂದ್ರಪ್ರಸ್ಥ ತೀರ್ಥರಾಜನು ಕುಳಿತುಕೊಂಡಿದ್ದ. ಇಂದ್ರಪ್ರಸ್ಥ ತೀರ್ಥರಾಜ ಹಾಗೂ ಬ್ರಹ್ಮ ಇವರಿಬ್ಬರಿಗೂ ದೇವೇಂದ್ರ ಹಾಗೂ ಪ್ರಯಾಗ ತೀರ್ಥಗಳು ಚಾಮರವನ್ನು ಹಾಕುತ್ತಿದ್ದವು. ದೇವೇಂದ್ರನು ದೇವತಾ ಸಾರ್ವಭೌಮರಾದ ಬ್ರಹ್ಮದೇವರಿಗೆ ಚಾಮರ ಸೇವೆಯನ್ನು ಸಲ್ಲಿಸುತ್ತಿದ್ದರೆ, ತೀರ್ಥರಾಜವಾದ ಪ್ರಯಾಗವು ಇಂದ್ರಪ್ರಸ್ಥ ತೀರ್ಥದ ಮೇಲೆ ಚಾಮರ ಬೀಸುತ್ತಿತ್ತು. ಉಳಿದೆಲ್ಲ ದೇವತೀರ್ಥಗಳೂ ಕೈ ಮುಗಿದುಕೊಂಡು ಅವರಿಂದ ದೂರದಲ್ಲಿ ನಿಂತುಕೊಂಡಿದ್ದವು. ಆ ದೇವರಾಜ ಹಾಗೂ ತೀರ್ಥರಾಜರಾದ ಬ್ರಹ್ಮ ಹಾಗೂ ಇಂದ್ರಪ್ರಸ್ಥರ ಎದುರು ಗಂಧರ್ವರು ಗಾಯನ ಮಾಡಿದರು. ಅದರಲ್ಲೂ ವಿಶ್ವಾವಸುವು ವಿಶೇಷವಾಗಿ ಸಂಗೀತಸೇವೆಯನ್ನು ಸಲ್ಲಿಸಿದ. ಇಂದ್ರಪ್ರಸ್ಥ ತೀರ್ಥದ ಈ ಮಹಾವೈಭವವನ್ನು ಕುರಿತು ವಿಶ್ವಾವಸುವು ಹಾಹಾ ಎಂಬ ಗಂಧರ್ವನಲ್ಲಿ ಹೀಗೆ ಮಾತನಾಡಿದ.

**ವಿಶ್ವಾವಸು:-** ಗಂಧರ್ವಶ್ರೇಷ್ಠನೇ, ನೋಡಿದೆಯಾ ಈ ಇಂದ್ರಪ್ರಸ್ಥ ತೀರ್ಥದ ವೈಭವವನ್ನು, ದೇವೋತ್ತಮನಾದ ಬ್ರಹ್ಮನು ಚರಾಚರ ಪ್ರಪಂಚಕ್ಕೇ ಗುರು. ಇಂಥ ಬ್ರಹ್ಮದೇವರ ಆಸನಸಮೀಪದಲ್ಲೇ ಈ ತೀರ್ಥರಾಜನಾದ ಇಂದ್ರಪ್ರಸ್ಥನು ಈಗ ಬಂದು ಆಸೀನನಾಗಿದ್ದಾನೆ. ತೀರ್ಥರಾಜ ಎಂದೆನಿಸಿದ ಗಯಾತೀರ್ಥವೂ ಸಹ ಈ ಇಂದ್ರಪ್ರಸ್ಥ ತೀರ್ಥದ ತಲೆಯ ಮೇಲೆ ಚಾಮರವನ್ನು ಬೀಸುತ್ತಲಿದೆ. ಪ್ರಯಾಗ ತೀರ್ಥವು ಇಂದ್ರಪ್ರಸ್ಥನಿಗೆ ದಾಸಾನುದಾಸನಾಗಿ ಸೇವೆಯನ್ನು ಸಲ್ಲಿಸುತ್ತಲಿದೆ. ಪೃಥಿವಿಯಲ್ಲಿ ಎಷ್ಟು ತೀರ್ಥಗಳಿವೆಯೋ, ಅವೆಲ್ಲವೂ ತ್ರಿವರ್ಗಫಲವನ್ನು ಅಂದರೆ ಧರ್ಮ, ಅರ್ಥ, ಕಾಮ ಎಂಬ ಮೂರು ಫಲಗಳನ್ನು ಮಾತ್ರ ನೀಡುತ್ತಲಿವೆ. ಆದರೆ ಈ ಇಂದ್ರಪ್ರಸ್ಥವು ಮಾತ್ರ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಚತುರ್ವಿಧ ಪುರುಷಾರ್ಥಗಳನ್ನು ಕೊಟ್ಟು, ತನ್ನಲ್ಲಿ ಸ್ನಾನ ಮಾಡಿದ ಜನರನ್ನು ಮೋಕ್ಷಕ್ಕೆ ಕಳಿಸುತ್ತಲಿದೆ.

**ಶರಭ:-** ವಿಶ್ವಾವಸು ಗಂಧರ್ವನು ಇಂದ್ರಪ್ರಸ್ಥದ ವೈಭವವನ್ನು ತಿಳಿದು ಅದರ ಮನೆಗೆ ಹೋಗಿ ಅದನ್ನು ಸ್ತೋತ್ರಮಾಡಿದ. ಆ ಇಂದ್ರಪ್ರಸ್ಥತೀರ್ಥದ ಪರಿಸರದಲ್ಲಿರುವ ಪ್ರಯಾಗತೀರ್ಥವು, ಪರಮಪಾವನ. ಈ ವಿಷಯದಲ್ಲಿ ಒಂದು ಆಖ್ಯಾನವನ್ನು ಹೇಳುವೆ ಕೇಳು.

ನರ್ಮದಾನದಿಯ ತೀರದಲ್ಲಿ ಮಾಹಿಷ್ಮತೀ ಎಂಬ ಒಂದು ಪಟ್ಟಣ. ಅಲ್ಲಿ ಮೋಹಿನಿಯೆಂಬ ಓರ್ವ ಬೆಲೆವಣ್ಣು ತನ್ನ ಸೌಂದರ್ಯದಿಂದ ಎಲ್ಲ ಯುವಕರ ಮನಸ್ಸನ್ನೂ ಸೆಳೆಯುತ್ತಲಿದ್ದಳು. ಅವಳು ತನ್ನ ತಾರುಣ್ಯ, ಹಾಗೂ ಲಾವಣ್ಯ ಎರಡನ್ನೂ ಮಾರಾಟಕ್ಕೆ ಇಟ್ಟು ಅಪರಿಮಿತವಾದ ಸಂಪತ್ತನ್ನು ಗಳಿಸಿದಳು. ರೂಪಸಂಪನ್ನಳೂ, ತಾರುಣ್ಯದ ಕಾಂತಿಭರಿತಳೂ ಆದ ಆ ಮೋಹಿನಿಯು ನೃತ್ಯದಲ್ಲಿ ನಿಪುಣೆ, ಸಂಗೀತದಲ್ಲಿ ಸಾಕ್ಷಾತ್ ಸರಸ್ವತೀ, ಸೌಂದರ್ಯದಿಂದ ನವರತಿಯೇ ಸರಿ. ಆದರೆ ಅವಳೊಂದು ಧನಪಿಶಾಚಿ. ದುಡ್ಡಿನ ಆಸೆಯಿಂದ ಅವಳು ಮಾಡದಪಾಪವೇ ಇಲ್ಲ. ಧನಿಕರಾದ ಏಳು ಬ್ರಾಹ್ಮಣರನ್ನು ತಲೆಹೊಡಿಸಿ ಅವರ ಐಶ್ವರ್ಯವನ್ನೆಲ್ಲ ವಶಪಡಿಸಿಕೊಂಡಿದ್ದಳು. ಅವಳು ಕೊಲ್ಲಿಸಿದ ದಾಸಿಯರಿಗಂತೂ ಲೆಕ್ಕವೇ ಇಲ್ಲ. ಎಷ್ಟೋ ಜನ ಗರ್ಭಿಣಿಯರ ಗರ್ಭವನ್ನು ಅವಳು ನಾಶಮಾಡಿದ್ದಳು. ಹೀಗೆ ನಾನಾವಿಧವಾದ ಪಾಪಕೃತ್ಯಗಳನ್ನು ಮಾಡುತ್ತಲೇ ತನ್ನ ತಾರುಣ್ಯವನ್ನು ಕಳೆದಳು. ಇಂಥ ದುರ್ವ್ಯಾಹಾರಮಾಡುತ್ತಲೇ ಅವಳಿಗೆ ಮುಪ್ಪು ಬಂದಿತು. ಮುದಿತನದಿಂದ ಅವಳ ಸೌಂದರ್ಯ, ಶೃಂಗಾರ, ವಿಲಾಸ ಎಲ್ಲವೂ ಕಳಾಹೀನವಾದವು. ಯಾವ ಯುವಕನೂ ಅವಳನ್ನು ಆಸೆಯಿಂದ ನೋಡುತ್ತಿರಲಿಲ್ಲ. ಅವಳು ತನ್ನ ತಾರುಣ್ಯದಲ್ಲಿ ಸ್ವೈರಾಚಾರ, ಹಾಗೂ ವೇಶ್ಯಾವೃತ್ತಿಯಿಂದ ಅಪರಿಮಿತವಾದ ಐಶ್ವರ್ಯವನ್ನು ಸಂಪಾದಿಸಿದ್ದಳು. ತಾನು ಗಳಿಸಿದ ಹಣವನ್ನು ಅವಳು ಯಾರ ಕೈಗೂ ಕೊಡುತ್ತಲಿರಲಿಲ್ಲ. ಎಲ್ಲರಲ್ಲೂ ಅವಳಿಗೆ ಸಂದೇಹ. ಬೇಕಾದಷ್ಟು ಸಂಪತ್ತಿದ್ದರೂ ಯಾರಿಗೂ ಬಿಡಿಕಾಸನ್ನೂ ನೀಡುತ್ತಿರಲಿಲ್ಲ. ತಾನೂ ಭೋಗಿಸುತ್ತಲಿರಲಿಲ್ಲ. ಒಂದೇ ಕಡೆಗೆ ಹಣವನ್ನಿಟ್ಟರೆ ಯಾರಿಗಾದರೂ ತಿಳಿದೀತೆಂದು ಪ್ರತಿದಿನವೂ ಸ್ಥಳ ಬದಲಿಸಿ, ಬದಲಿಸಿ ಹಣವನ್ನಿಡುತ್ತಿದ್ದಳು.

ಒಂದು ದಿನ ಅವಳು ರಾತ್ರಿ ಕಾಲದಲ್ಲೆದ್ದು ವಿಚಾರಮಾಡಿದಳು. ನಾನು ಬದುಕಿರುವವರೆಗೆ ಅನೇಕ ಅನ್ಯಾಯ, ಅನನ್ವಿತ ಕೃತ್ಯ, ಪಾಪಕಾರ್ಯ, ಕಳವು, ಕೊಲೆ,

ಆದರಲ್ಲೂ ಬ್ರಹ್ಮಹತ್ಯೆ, ಶಿಶುಹತ್ಯೆ, ಸ್ತ್ರೀಹತ್ಯೆಗಳಂಥ ಘೋರ ಪಾಪಗಳನ್ನು ಮಾಡಿ ಇಷ್ಟೆಲ್ಲ ಐಶ್ವರ್ಯವನ್ನು ಗಳಿಸಿ ಇಟ್ಟಿದ್ದೇನೆ. ನಾನು ಸತ್ತ ಬಳಿಕ ನನ್ನ ದಾಸಿಯರು ಇದನ್ನು ಭೋಗಿಸುತ್ತಾರೆ. ಆ ಎಲ್ಲ ಕಾಮುಕರೂ, ಕಾಮಿನಿಯರೂ ಮದ್ಯಪಾನ, ಮಾಂಸಭಕ್ಷಣ ಮುಂತಾದವನ್ನು ನನ್ನ ಈ ಹಣದಿಂದಲೇ ಆನಂದವಾಗಿ ಮಾಡುತ್ತಾರೆ. ಇವರ ಈ ಅನ್ಯಾಯಗಳಿಗೆ ನಾನು ಹೊಣೆಯಾಗಿ ನರಕದಲ್ಲಿ ದುಸ್ಸಹವಾದ ಯಮಯಾತನೆಯನ್ನು ಅನುಭವಿಸುತ್ತೇನೆ. ಹೀಗಾಗಗೊಡದಂತೆ ಈ ಐಶ್ವರ್ಯವನ್ನು ನಾನು ಸಾಯುವುದ ರೊಳಗಾಗಿ ಸದ್ವಿನಿಯೋಗ ಮಾಡಿಬಿಡಬೇಕು, ಎಂದು. ಹೀಗೆ ವಿಚಾರಮಾಡುತ್ತ ಅವಳಿಗೆ ನಿದ್ರೆ ಬಂದಿತು. ಮರುದಿನ ಬೆಳಗಾದ ಬಳಿಕ ಅವಳು ಸೇವಕರನ್ನು ಕರೆಯಿಸಿ, ಅನೇಕ ವಿಧವಾದ ಕೆರೆ, ಕಾಲುವೆ, ಹೊಂಡ ಮುಂತಾದವನ್ನು ನಿರ್ಮಿಸಿ, ಜನರಿಗೆ ಯಾತ್ರಿಕರಿಗೆ ಜಲಸೌಕರ್ಯವನ್ನೊದಗಿಸಿದಳು. ದೇವಾಲಯಗಳನ್ನು ನಿರ್ಮಿಸಿದಳು. ಉಪವನಗಳನ್ನು ಅಲ್ಲಲ್ಲಿ ಏರ್ಪಡಿಸಿದಳು. ಕ್ಷೇತ್ರಗಳಲ್ಲಿ ಧರ್ಮಛತ್ರಗಳನ್ನು ಕಟ್ಟಿಸಿ, ಅಲ್ಲಿ ಯಾತ್ರಿಕರಿಗೆ ಸಾಧುಗಳಿಗೆ ಉಚಿತವಾಗಿ ಅನ್ನ ಸಂತರ್ಪಣೆ ವ್ಯವಸ್ಥೆ ಮಾಡಿದಳು.

ಹೀಗೆ ಆ ಮೋಹಿನಿಯು ಧರ್ಮಮಾರ್ಗದಿಂದ ಅನೇಕ ಪುಣ್ಯಕಾರ್ಯಗಳನ್ನು ಮಾಡುತ್ತ ತಾನು ಅನ್ಯಾಯದಿಂದ ಗಳಿಸಿದ ಹಣವನ್ನೆಲ್ಲ ಸದ್ವಿನಿಯೋಗ ಮಾಡತೊಡಗಿದಳು. ಕೆಲಕಾಲಾನಂತರ ಅವಳಿಗೆ ಜ್ವರ ಹಿಡಿಯಿತು. ಆಗ ಮನಸ್ಸಿನಲ್ಲಿ ಹೀಗೆ ಆಲೋಚಿಸಿದಳು.

''ನಾನು ಈಗ ಧರ್ಮಕಾರ್ಯ ಪುಣ್ಯಕಾರ್ಯಗಳಿಗಾಗಿ ನನ್ನ ಧನದ ಬಹು ಭಾಗವನ್ನು ವ್ಯಯಿಸಿದ್ದೇನೆ. ಆದರೂ ಇನ್ನೂ ಮನೆಯಲ್ಲಿ ಬಂಗಾರ-ಬೆಳ್ಳಿ ಸಮೃದ್ಧವಾಗಿದೆ. ನಗ-ನಾಣ್ಯಗಳಿಗಂತೂ ಲೆಕ್ಕವೇ ಇಲ್ಲ. ಸದಾಚಾರ ಸಂಪನ್ನರೂ, ವಿದ್ವಾಂಸರೂ, ಕುಟುಂಬಿಗಳೂ ಆದ ಬ್ರಾಹ್ಮಣರನ್ನು ಕರೆಯಿಸಿ ಇದನ್ನೆಲ್ಲ ದಾನ ನೀಡುವೆ.''

ಹೀಗೆ ವಿಚಾರ ಮಾಡಿ, ಶ್ರೋತ್ರಿಯರನ್ನೂ, ವಿದ್ವಾಂಸರನ್ನೂ, ಪುರೋಹಿತರನ್ನೂ ತನ್ನ ಮನೆಗೆ ಬಂದು ದಾನ ಸ್ವೀಕರಿಸಲು ಹೇಳಿಕಳುಹಿಸಿದಳು. ಆದರೆ ಆ ಪಾಪಿಸ್ತ್ರೀಯಿಂದ ದಾನಸ್ವೀಕಾರ ಮಾಡಲು ಒಬ್ಬ ಬ್ರಾಹ್ಮಣನೂ ಬರಲಿಲ್ಲ. ಆಗ ಅವಳು ತನ್ನ ಹಣವನ್ನೆಲ್ಲ ಎರಡು ಭಾಗ ಮಾಡಿದಳು. ಒಂದು ಭಾಗವನ್ನು ಇಷ್ಟು ದಿನಗಳವರೆಗೆ ತನ್ನ ಸೇವೆಯನ್ನು ಮಾಡಿದ ದಾಸಿಯರಿಗೆ ಹಂಚಿಕೊಟ್ಟಳು. ಇನ್ನೊಂದು ಭಾಗವನ್ನು ತಾನು ಅಲ್ಲಲ್ಲಿ ಏರ್ಪಡಿಸಿದ ಅನ್ನಛತ್ರ, ಅರವಟ್ಟಿಗೆ, ಧರ್ಮಶಾಲೆ ಮುಂತಾದ ವಿವಿಧೋದ್ದೇಶಗಳ ಪೂರೈಕೆಗಾಗಿ ತೆಗೆದಿರಿಸಿದಳು. ಅವಳ ಕೈಯಲ್ಲಿ ಯಾವ ಹಣವೂ ಉಳಿಯಲಿಲ್ಲ. ಅವಳು ದಟ್ಟದರಿದ್ರಳಾದಳು. ಈ ಸಂದರ್ಭದಲ್ಲಿ ಅವಳು ಜ್ವರದಿಂದ ಪುನಃ ಆಕ್ರಾಂತಳಾದಳು. ಅವಳ ಬಳಿಯಲ್ಲಿರುವ ದಾಸಿಯರೆಲ್ಲರೂ ಅವಳನ್ನು ಬಿಟ್ಟು ಹೋಗಲು ನಿರ್ಧರಿಸಿದರು. ಅವಳು ಜ್ವರದಿಂದ ಮುಕ್ತಳಾದ ಬಳಿಕ ತಾನು ಮೊದಲು ಕೊಟ್ಟ ನಗ-ನಾಣ್ಯಗಳನ್ನು ತಿರುಗಿ ಕೇಳಬಹುದೆಂಬ ಯೋಚನೆಯಿಂದ ಅವಳಿಗೆ ಹೇಳದೇ ಕೇಳದೇ ಅಲ್ಲಿಂದ ನಗ-ನಾಣ್ಯ ಆಭರಣಾದಿಗಳಿಂದ ಸಹಿತರಾಗಿ ಪಲಾಯನ ಮಾಡಿದರು.

ಹದಿನೆಂಟು ದಿನ ಉಪವಾಸಾದಿ ಕಷ್ಟ ಅನುಭವಿಸಿ ಮೋಹಿನಿಯು ತನಗೆ ಹಿಡಿದಿದ್ದ ಜ್ವರದಿಂದ ಮುಕ್ತಳಾದಳು. ಅವಳ ಆಯುಷ್ಯವು ಗಟ್ಟಿಯಿದ್ದುದರಿಂದ ಮತ್ತು ಈ ಜನ್ಮದಲ್ಲೇ

ಮಾಡಿದ ಜನೋಪಯೋಗಿ ಕಾರ್ಯಗಳ ಪುಣ್ಯ ಪ್ರಭಾವದಿಂದ ಅವಳು ಬದುಕಿ ಉಳಿದಳು. ಕ್ರಮೇಣ ಮೊದಲಿನಂತೆ ಆರೋಗ್ಯವಂತಳಾದಳು. ಅವಳಿಗೆ ಅನಾರೋಗ್ಯವೊದಗಿದ ಈ ಸಂದರ್ಭದಲ್ಲೂ ಮತ್ತೆಲ್ಲ ಸಖಿಯರು ಬಿಟ್ಟುಹೋದರೂ 'ಜರದ್ಗವಾ' ಎಂಬ ಸಖಿಯು ಅವಳನ್ನು ಪರಿಪರಿಯಾಗಿ ಉಪಚರಿಸಿದ್ದಳು. ಎಲ್ಲ ರೀತಿಯಿಂದಲೂ ಸೇವೆ ಮಾಡಿದ್ದಳು. ಯಾವ ಸಂದರ್ಭದಲ್ಲೂ ಅವಳನ್ನು ಬಿಟ್ಟು ಹೋಗುವ ವಿಚಾರಮಾಡಿರಲಿಲ್ಲ. ಮೋಹಿನಿಯು ರೋಗದಿಂದ ಗುಣಮುಖವಾಗಲು 'ಜರದ್ಗವಾ' ಎಂಬ ಸಖಿಯ ಉಪಚಾರವು ಬಹಳ ಸಹಾಯಕವಾಗಿದ್ದಿತು. ಆದರೆ ಆ ಮನೆಯಲ್ಲಿದ್ದುದನ್ನು ಎಲ್ಲವನ್ನೂ ಆ ಮೋಹಿನಿಯು ದಾನ ನೀಡಿಬಿಟ್ಟಿದ್ದರಿಂದ ಅವಳಿಗೆ ಕಡು ದಾರಿದ್ರ್ಯ ಬಂದಿತ್ತು. ಆರೋಗ್ಯವು ಉತ್ತಮಗೊಂಡಿದ್ದರೂ ತಿನ್ನಲು ಉತ್ತಮ ಆಹಾರವಿರಲಿಲ್ಲ. 'ಜರದ್ಗವಾ' ಎಂಬ ಸಖಿಯ ಮನೆಯಲ್ಲಿಯೇ ಇವಳ ಊಟ ಪ್ರಾರಂಭ. ಇವಳಿಗೋ ಅತ್ಯಂತ ಸಂಕೋಚವೆನಿಸಿತು. ''ದರಿದ್ರಳಾದ ನಾನು ನನ್ನ ಸಖಿಗೆ ಭಾರವಾಗಿ ಹೆಚ್ಚು ದಿವಸ ಬದುಕಿರಬಾರದು'' ಎಂದು ವಿಚಾರಮಾಡಿ ಅವಳು ಮನೆ ಬಿಟ್ಟು ಹೊರಟಳು.

ಮೋಹಿನೀ ವೇಶ್ಯೆಯು ತನ್ನ ವೇಶ್ಯಾವೃತ್ತಿಯಿಂದ ವಿಪುಲವಾದ ಹಣವನ್ನು ಗಳಿಸಿದ್ದಾಳೆ. ಎಂದು ಎಲ್ಲ ಕಡೆಗೂ ಪ್ರಚಾರವಿದ್ದಿತು. ಇವಳು ಹೋಗುವಾಗ ತಾನು ಕೂಡಿಸಿದ್ದ ಐಶ್ವರ್ಯವನ್ನೆಲ್ಲ ಕೈಯಲ್ಲಿ ಹಿಡಿದುಕೊಂಡೇ ಹೊರಟಿರಬಹುದೆಂದು ಭಾವಿಸಿದ ಕೆಲವು ಕಳ್ಳರು ಮನೆಯಿಂದ ಹೊರಟ ಅವಳ ಬೆನ್ನುಹತ್ತಿದರು. ಕೆಲವೊಂದು ಮೈಲು ಸಾಗಿದ ಬಳಿಕ ಕಾಡಿನ ಏಕಾಂತ ಪರಿಸರದಲ್ಲಿ ಕಳ್ಳರು ಇವಳನ್ನು ಹೊಡೆದು ಗಾಯಗೊಳಿಸಿದರು. ನೆಲಕ್ಕೆ ಬೀಳಿಸಿ ಅವಳ ಬಟ್ಟೆ-ಬರೆಗಳನ್ನು ಶೋಧಿಸಿ, ಏನೂ ಧನ ಸಿಗದೇ ಇದ್ದುದರಿಂದ ಅವಳನ್ನು ಅಲ್ಲಿಯೇ ಬಿಟ್ಟು ಹೋದರು. ಕಳ್ಳರ ಹೊಡೆತ, ಒದೆತಗಳಿಂದ ಮೋಹಿನಿಯ ದೇಹದಲ್ಲೆಲ್ಲ ನೆತ್ತರು ಬಸಿಯುತ್ತಲಿತ್ತು. ನಿಟ್ಟುಸಿರು ಬಿಡುತ್ತ ನೆಲದ ಮೇಲೆ ಬಿದ್ದು ಕೊಂಡಿದ್ದಳು. ಹಾಗೆಯೇ ಬಿದ್ದುಕೊಂಡಿರುವಾಗ, ಕೆಲಹೊತ್ತಿನ ನಂತರ ಅಲ್ಲಿಗೆ ಓರ್ವ ವಾನಪ್ರಸ್ಥಾಶ್ರಮಿಯಾದ ಮುನಿಯು ಪ್ರಯಾಗತೀರ್ಥ ಯಾತ್ರೆ ಮುಗಿಸಿ ಕೈಯಲ್ಲಿನ ಕಮಂಡಲದಲ್ಲಿ ಆ ಪವಿತ್ರ ಜಲವನ್ನು ಹಿಡಿದು ಆಗಮಿಸಿದ. ಮಾರ್ಗಮಧ್ಯದಲ್ಲೇ ನಿಟ್ಟುಸಿರುಬಿಡುತ್ತ ಸಂಕಟ ಅನುಭವಿಸುತ್ತಿರುವ ಮೋಹಿನಿಯನ್ನು ನೋಡಿದನು. ಮೋಹಿನಿಯೂ ಸಹ ಆ ಯೋಗಿಯನ್ನು ಕಂಡು ಕಷ್ಟಪಟ್ಟು ಕೈಯಿಂದ ಸನ್ನೆ ಮಾಡಿ ನೀರನ್ನು ಕೇಳಿದಳು. ಅವಳ ನಾಲಿಗೆ ಒಣಗಿ ಮಾತನಾಡಲೂ ಅಶಕ್ಯವಾಗಿದ್ದಿತು.

ಅವಳ ದುರವಸ್ಥೆಯನ್ನು ಕಂಡ ವೈಖಾನಸ ಎಂಬ ಹೆಸರಿನ ಆ ಮುನಿಗಳು ತಮ್ಮ ಕಮಂಡಲದಲ್ಲಿನ ಪ್ರಯಾಗ ತೀರ್ಥದಿಂದ ತಂದ ನೀರನ್ನು ಅವಳ ಬಾಯಿಗೆ ಹಾಕಲು ಪ್ರವೃತ್ತರಾದರು. ಅವರನ್ನು ತಡೆದ ಮೋಹಿನಿಯು ಇದು ಎಲ್ಲಿಯ ನೀರು ಎಂದು ಸನ್ನೆ ಮಾಡಿ ಪ್ರಶ್ನಿಸಿದಳು ಆಗ ವೈಖಾನಸರು

''ಇದು ಸರ್ವ ಅಪೇಕ್ಷೆಯನ್ನು ಪೂರೈಸುವ ಪ್ರಯಾಗತೀರ್ಥದಲ್ಲಿನ ಪವಿತ್ರಜಲ, ನಾನು ಪ್ರಯಾಗತೀರ್ಥದಿಂದ ನನಗಾಗಿ ಈ ತೀರ್ಥವನ್ನು ಕಮಂಡಲದಲ್ಲಿ ಒಯ್ಯುತ್ತಿರುವೆ. ಅದನ್ನೇ ಈಗ ನಿನಗೂ ಹನಿಸುತ್ತೇನೆ.'' ಎಂದು ನುಡಿದರು.

"ಸೇವಿಸುವ ಸರ್ವರ ಅಪೇಕ್ಷೆಯನ್ನು ಪೂರೈಸುವ ಪವಿತ್ರ ಪ್ರಯಾಗಜಲ" ಎಂಬ ಮಾತು ಕಿವಿಗೆ ಬಿದ್ದ ಕೂಡಲೇ ಮಹದಾನಂದವಾಯಿತು. ಅವಳು ಮನಸ್ಸಿನಲ್ಲಿಯೇ "ನಾನು ಮುಂದಿನ ಜನ್ಮದಲ್ಲಿ ಪಟ್ಟದರಸಿಯಾಗಬೇಕು" ಎಂದು ಬಯಸಿ ನೀರಿಗಾಗಿ ಬಾಯ್ತೆರೆದಳು. ಕರುಣಾಶಾಲಿಗಳಾದ ವೈಖಾನಸರು ಅವಳ ಮುಖದಲ್ಲಿ ಪ್ರಯಾಗತೀರ್ಥದ ನೀರನ್ನು ಹಾಕಿದರು. ಬಾಯಲ್ಲಿ ಬಿದ್ದ ನೀರು ಒಳಸೇರುವದಕ್ಕೂ ಅವಳ ಪ್ರಾಣಪಕ್ಷಿ ಹಾರುವುದಕ್ಕೂ ಸರಿಹೋಯಿತು.

ಮರಣಕಾಲದಲ್ಲಿ ತೀರ್ಥಜನಪ್ರಾಶನದ ಪ್ರಭಾವದಿಂದ ಮರುಜನ್ಮದಲ್ಲಿ ಅವಳು ದ್ರವಿಡದೇಶದ ರಾಜನಾದ ವೀರವರ್ಮನ ಮಗಳಾಗಿ ಜನಿಸಿದಳು. ನಂತರ ಕೇರಳದ ಮಹಾರಾಜನ ಕೈಹಿಡಿದು ಅವನಿಗೆ ಅತ್ಯಂತ ಪ್ರೀತ್ಯಾಸ್ಪದಳಾಗಿ, ಪಟ್ಟದರಸಿಯಾದಳು. ಅವಳಿಗೆ ಬಂಗಾರದಂಥ ಬಣ್ಣವಿದ್ದುದರಿಂದ ಅವಳ ತಂದೆ ಹೇಮಾಂಗಿ ಎಂದೇ ಹೆಸರಿಟ್ಟಿದ್ದ.

ಒಂದು ದಿನ ಹೇಮಾಂಗಿಯು ಸುಂದರವಾದ ಬಂಗಾರದ ಆಭರಣಗಳನ್ನು ತೊಟ್ಟು ಮಂತ್ರಿಯ ಮಗಳಾದ ಕಲೆಯ ಮನೆಗೆ ಹೋದಳು. ಅಲ್ಲಿ ತನ್ನ ಪ್ರಾಣ ಪ್ರಿಯ ಗೆಳತಿಯ ಒತ್ತಾಯದ ಮೇರೆಗೆ ಸ್ನಾನಮಾಡಿ ಶುಚಿರ್ಭೂತಳಾಗಿ ಬಗೆಬಗೆಯ ಭಕ್ಷ್ಯಗಳನ್ನು ಭಕ್ಷಿಸಿ, ಬಳಿಕ ತಾಂಬೂಲ ಚರ್ವಣ ಮಾಡುತ್ತ ಗೆಳತಿಯು ಸಿದ್ಧಪಡಿಸಿದ ಉತ್ತಮಾಸನದಲ್ಲಿ ಕುಳಿತು ಅವಳನ್ನು ಕುರಿತು ಮಾತನಾಡಿದಳು.

**ಹೇಮಾಂಗಿ:-** ಸಖಿ, ನಿನ್ನ ಮನೆಯಲ್ಲಿ ಅದ್ಭುತವಾದ ವಸ್ತುವೇನಾದರೂ ಇದ್ದರೆ ತೋರಿಸು ನೋಡುವಾ !

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಇಂದ್ರಪ್ರಸ್ಥದಲ್ಲಿರು ಪ್ರಯಾಗತೀರ್ಥದ ಮಾಹಾತ್ಮ್ಯ; ವಿಶ್ವಾವಸು ಎಂಬ ಗಂಧರ್ವನ ಕಥಾನಕ ವರ್ಣನೆ; ಮಾಹಿಷ್ಮತೀ ನಗರದಲ್ಲಿರುವ ಮೋಹಿನಿಯ ವೃತ್ತಾಂತ. ಎಂಬ ಎರಡು ನೂರ ಎರಡನೇಯ ಅಧ್ಯಾಯ ಮುಗಿದುದು*



## ಹೇಮಾಂಗಿಯು ಪತಿಯೊಡನೆ ಇಂದ್ರಪ್ರಸ್ಥ ತೀರ್ಥಕ್ಕೆ ಪ್ರಯಾಣ ಮಾಡಿದುದು

ಅಧ್ಯಾಯ - ೨೦೩

**ನಾರದ:-** ಹೇಮಾಂಗಿಯು ತನ್ನ ಗೆಳತಿಯಾದ ಮಂತ್ರಿಯ ಪುತ್ರಿ ಕಲೆಗೆ 'ಸಖೀ ನಿನ್ನ ಮನೆಯಲ್ಲಿ ಏನಾದರೂ ಅದ್ಭುತವಾದ ವಸ್ತು ಇದ್ದರೆ ಅದನ್ನು ನನಗೆ ತೋರಿಸು' ಎಂದು ಹೇಳಿದುದನ್ನು ಕೇಳಿ ಆ ಸಚಿವ ಕುಮಾರಿಯಾದ ಕಲೆಯು ತಮ್ಮ ಅರಮನೆಯ ಭಾಂಡಾರದಲ್ಲಿ ಇದ್ದ ಒಂದು ಬಂಗಾರದ ಸಂದೂಕವನ್ನು ತಂದು ಮಹಾರಾಣಿಯ ಎದುರು ಇಟ್ಟಳು ಮತ್ತು ಪಟ್ಟ ಮಹಿಷಿಯಾದ ಆ ಹೇಮಾಂಗಿಯನ್ನು ಕುರಿತು ಮಾತನಾಡಿದಳು.

**ಕಲಾ:-** ಮಹಾರಾಣೀ, ನಾನು ನಿನ್ನ ಮುಂದೆ ತಂದು ಇರಿಸಿದ ಈ ಬಂಗಾರದ ಪೆಟ್ಟಿಗೆಯಲ್ಲಿ ಒಂದು ವಿಚಿತ್ರವಾದ ಪುಸ್ತಕವು ಇರುತ್ತದೆ. ಆ ಪುಸ್ತಕದ ತುಂಬ ಚಿತ್ರ ವಿಚಿತ್ರವಾದ ಚಿತ್ರಗಳು ಇರುತ್ತವೆ. ಅದನ್ನು ನೀನು ತುಸು ತೆರೆದು ನೋಡು. ಅದರಲ್ಲಿ ಏನು ಏನು ಇದೆ? ಎನ್ನುವುದನ್ನು ಪರಿಕಿಸು. ಆ ಪುಸ್ತಕದಲ್ಲಿರುವ ಬಗೆಬಗೆಯ ದರ್ಶನೀಯವಾದ ಚಿತ್ರಾವಳಿಗಳನ್ನು ನೋಡಿದರೆ ನಿಜವಾಗಿಯೂ ನಿನ್ನ ಮನಸ್ಸಿಗೆ ರಂಜನೆ, ಸಂತಸ, ಕೌತುಕ ಆಶ್ಚರ್ಯಗಳು ಉಂಟಾಗುವುದರಲ್ಲಿ ಸಂದೇಹವಿಲ್ಲ.

ಹೀಗೆ ಕಲೆಯು ನುಡಿದಕೂಡಲೇ ಮಹಾರಾಣಿಯಾದ ಹೇಮಾಂಗಿಯು ತನ್ನ ದಾಸಿಯನ್ನು ಕರೆದು ಆ ಸುವರ್ಣ ಮಂಜೂಷಿಕೆಯ ಮುಚ್ಚಳವನ್ನು ತೆರೆಯಲು ಹೇಳಿದಳು. ಅದರಂತೆ ದಾಸಿಯು ಆ ಬಂಗಾರ ಸಂದೂಕದ ಬಾಯಿ ತೆರೆದು ಅದರಲ್ಲಿ ಇದ್ದ ಒಂದು ಪುಸ್ತಕವನ್ನು ಮಹಾರಾಣಿಯು ಕೈಯಲ್ಲಿ ಕೊಟ್ಟಳು. ಅದರಲ್ಲಿ ಬಗೆಬಗೆಯ ಅನೇಕ ಚಿತ್ರಗಳು. ಶ್ರೀಹರಿಯ ಹತ್ತೂ ಅವತಾರಗಳನ್ನು ಸಂಕ್ಷೇಪವಾಗಿ ಅವುಗಳಲ್ಲಿ ಚಿತ್ರಿಸಲಾಗಿತ್ತು. ಅವುಗಳು ಹಿನ್ನೆಲೆಯಲ್ಲಿ ಭೂಗೋಲ, ಖಗೋಲ, ಸಪ್ತದ್ವೀಪ, ಸಪ್ತಸಮುದ್ರ ಲೋಕಾಲೋಕ ಪರ್ವತ, ನದೀ, ಬೆಟ್ಟ, ಬಯಲು, ಬಾನು, ಕಾನು, ಸಾನುಗಳನ್ನೂ ಸುಂದರವಾಗಿ ರೇಖಿಸಲಾಗಿತ್ತು. ಅದರ ಮಧ್ಯದಲ್ಲಿ ಭರತಖಂಡ. ಅದರಲ್ಲಿ ಗಂಗಾ, ಯಮುನಾ ಮುಂತಾದ ನದಿಗಳು ಹರಿದದ್ದನ್ನು ತೋರಿಸಲಾಗಿತ್ತು. ಯಮುನಾ ನದಿಯ ತೀರದಲ್ಲಿ ಇಂದ್ರಪ್ರಸ್ಥ ಕ್ಷೇತ್ರವನ್ನು ಅಲ್ಲಿಯ ಒಂದು ಚಿತ್ರದಲ್ಲಿ ಬಿಡಿಸಲಾಗಿತ್ತು. ಅದನ್ನು ನೋಡಿದ ಕೂಡಲೇ ಹೇಮಾಂಗಿಗೆ ತನ್ನ ಪೂರ್ವಜನ್ಮದ ನೆನಹು ಒಮ್ಮೆಲೇ ಎದ್ದು ಬಂದಿತು. ಕೂಡಲೇ ಅವಳು ಅಲ್ಲಿಂದ ಎದ್ದು ತನ್ನ ಮನೆಗೆ ಹೋದಳು. ಅರಮನೆಗೆ ಹೋಗಿ ತನ್ನ ಪ್ರಿಯ ಪತಿಯಾದ ವೀರವರ್ಮನಿಗೆ ನಮಸ್ಕರಿಸಿ ನುಡಿದಳು.

**ಹೇಮಾಂಗಿ:-** ಪ್ರಾಣಪತಿಯೇ, ತಾವು ನನ್ನ ಒಂದು ಪುಣ್ಯದ ಬಯಕೆಯನ್ನು ಈಗ ಈಡೇರಿಸಬೇಕು. ಇದಕ್ಕೂ ಮೊದಲು ನಾನು ತಮಗೆ ನನ್ನ ಜನಾಂತ್ಮರದ ಕತೆಯನ್ನು ಹೇಳುತ್ತಾನೆ. ದಯವಿಟ್ಟು ಆಲಿಸಿರಿ.

ಕಳೆದ ಜನ್ಮದಲ್ಲಿ ನಾನೊಬ್ಬ ವೇಶ್ಯೆ. ಮೋಹಿನಿ ಎಂದು ನನ್ನ ಆಗಿನ ಹೆಸರು. ವೇಶ್ಯೆಯ ಲಾವಣ್ಯ, ತಾರುಣ್ಯ ಎಲ್ಲವೂ ಧನಾರ್ಜನಕ್ಕೆ ಸಾಧನವಾದಂತೆ ಪಾಪಾರ್ಜನಕ್ಕೂ ಸಾಧನವಷ್ಟೆ? ನನ್ನ ಮೈ ಮಾರಿದೆ. ಚೆಲುವ ಚಾಟೋಕ್ತಿಗಳನ್ನು ತೋರಿದೆ. ಹಣವನ್ನು ಗಳಿಸಿದೆ. ಪಾಪವನ್ನು ಬೆಳೆಸಿದೆ. ಮುಂದೆ ಕಾಲಾಂತರದಲ್ಲಿ ಯೌವನ ಇಳಿಯಿತು.

ಸೌಂದರ್ಯ ಅಳಿಯಿತು. ಆಗ ನನಗೆ ಧರ್ಮದಲ್ಲಿ ಮನಸ್ಸು ಬಲಿಯಿತು. ಹರೆಯದ ಭರದಲ್ಲಿ ಸೌದಂರ್ಯವನ್ನು ಮಾರಾಟ ಮಾಡಿ ಗಳಿಸಿದ ಹಣವನ್ನೆಲ್ಲ ಧರ್ಮಕಾರ್ಯಕ್ಕಾಗಿ ವಿನಿಯೋಗಿಸಿದೆ. ಪುಣ್ಯಕಾರ್ಯಕ್ಕಾಗಿ ನನ್ನ ಬೊಕ್ಕಸವೆಲ್ಲವೂ ಬರಿದಾಯಿತು. ಬಡತನ ಭೂತವಾಗಿ ನನ್ನನ್ನು ಬೆನ್ನಟ್ಟಿತು. ಮನೆ ತೊರೆದೆ. ಕಾಡಿನ ಹಾದಿ ಹಿಡಿದೆ. ಕಳ್ಳರಿಗೆ ಇನ್ನೂ ಭ್ರಾಂತಿ. ನನ್ನಲ್ಲಿ ಹೇರಳವಾದ ಹಣ ಇದೆ ಎಂದು. ಆ ಬೆಂಗಾಡಿನಲ್ಲಿ ನನ್ನನ್ನು ಬೆನ್ನಟ್ಟಿ ಬಂದರು. ಬೆನ್ನಿನಲ್ಲಿ ಇರಿದರು. ಆದರೆ ಅವರ ಶ್ರಮ ವ್ಯರ್ಥ. ನನ್ನಲ್ಲಿ ಒಂದು ಒಡಕು ಕಾಸೂ ಇರಲಿಲ್ಲ. ಹೊಡೆದು ನನ್ನನು ಗಾಸಿಗೊಳಿಸಿ ಬೀದಿಯಲ್ಲಿ ಎಸೆದು ಹೋದರು. ನನಗೆ ಮೈತುಂಬ ಗಾಯ ನೆತ್ತರು ಬಸಿದು ಜೀವ ಬದುಕು ಸಾವುಗಳ ಉಯ್ಯಾಲೆಯಲ್ಲಿ ತೂಗುತ್ತಲಿತ್ತು. ಆಗ ಅಲ್ಲಿಗೆ ಒಬ್ಬ ಯಾತ್ರಿಕನ ಆಗಮನ. ಅವನ ಹೆಗಲ ಮೇಲೆ ಇಂದ್ರಪ್ರಸ್ಥದಲ್ಲಿರುವ ಪ್ರಯಾಗತೀರ್ಥದ ನೀರು ತುಂಬಿದ ಕಲಶ. ನಾನು ಅವನಿಗೆ ಬಾಯಿ ತೆರೆದ. ಆ ತೀರ್ಥೋಕವನ್ನು ನನ್ನ ಬಾಯಲ್ಲಿ ಹನಿಸಲು ಬೇಡಿಕೊಂಡೆ. ಸಾವಿನ ಅಂಚಿನಲ್ಲಿ ಇದ್ದ ನನ್ನ ವಾಂಛಿತವನ್ನು ಪೂರ್ಣ ಮಾಡಿದ ಪುಣ್ಯಾತ್ಮ ತನ್ನ ಹೆಗಲಮೇಲಿದ್ದ ಕಲಶದಿಂದ ಆ ತೀರ್ಥೋದಕವನ್ನು ತೆಗೆದು ನನ್ನ ಬಾಯಿಯಲ್ಲಿ ಹಾಕಿದ. ತಕ್ಷಣದಲ್ಲಿ ಮೃತ್ಯು ನನ್ನನ್ನು ಸೆಳೆಯಿತು. ನನ್ನ ದೇಹ ಬಿದ್ದು ಹೋಯಿತು. ಸಾಯುವ ಮುನ್ನ ನಾನು ಆ ಪ್ರಯಾಗದ ತೀರ್ಥೋದಕ, ಕಾಮಿತಪ್ರದ ಎಂದು ಕೇಳಿದ್ದರಿಂದ ಮುಂದಿನ ಜನ್ಮದಲ್ಲಿ ನಾನು ಪಟ್ಟದರಸಿ ಆಗಬೇಕು, ಎಂದು ಮನಸಾ ಸಂಕಲ್ಪಿಸಿ ಆ ತೀರ್ಥೋದಕದ ಜಲವನ್ನು ಗುಟುಕರಿಸಿದೆ. ಆ ತೀರ್ಥ ಜಲವನ್ನು ಪ್ರಾಶನ ಮಾಡಿದ್ದರ ಪುಣ್ಯದಿಂದ ಈ ಜನ್ಮದಲ್ಲಿ ನಾನು ತಮ್ಮ ನೆಚ್ಚಿನ ಮಡದಿಯೂ ಆದೆ. ಪಟ್ಟದರಸಿಯೂ ಆದೆ. ಆದ್ದರಿಂದ ಈಗ ಆ ಇಂದ್ರಪ್ರಸ್ಥ ತೀರ್ಥಕ್ಕೆ ಹೋಗಬೇಕು ಎಂದು ನನ್ನ ಹೆಬ್ಬಯಕೆ. ಅದೂ ಕೂಡ ನನ್ನ ಪ್ರಾಣಪ್ರಿಯ ಮನೋವಲ್ಲಭರಾದ ತಮ್ಮೊಂದಿಗೆ. ಇಂದ್ರಪ್ರಸ್ಥಗತವಾದ ಆ ಪ್ರಯಾಗ ಕ್ಷೇತ್ರಕ್ಕೆ ಹೋಗುವವರೆಗೆ ನಾನು ಊಟ ಮಾಡುವದಿಲ್ಲ ಎಂದು ಪ್ರತಿಜ್ಞೆ ಮಾಡಿದ್ದೇನೆ.

**ವೀರವರ್ಮ:-** ಪ್ರಿಯೇ, ನೀನು ಹೇಳಿದ ಈ ಜನ್ಮಾಂತರದ ಕತೆ ಸತ್ಯ ಎಂದು ನಾನು ಹೇಗೆ ನಂಬಲಿ? ಇದನ್ನು ನೀನು ಪ್ರಮಾಣಿಸಿಕೊಡು. ಎಂದರೆ ಮಾತ್ರ ನಾನೂ ನಿನ್ನೊಡನೆ ಅಲ್ಲಿಗೆ ಬರುತ್ತೇನೆ.

ಮಹಾರಾಜರು ಹೀಗೆ ನುಡಿದ ಮರುಚಣದಲ್ಲಿಯೇ ಆಕಾಶವಾಣಿ ಆಯಿತು. ''ಮಹಾರಾಜ, ನಿನ್ನ ಪಟ್ಟದರಸಿಯು ನುಡಿದ ಮಾತು ನಿಜ. ಇಂದ್ರಪ್ರಸ್ಥದಲ್ಲಿರುವ ಪ್ರಯಾಗತೀರ್ಥ ಸರ್ವಶ್ರೇಷ್ಠ. ನೀನು ಬೇಗ ಹೋಗು ಆ ಪುಣ್ಯಕ್ಷೇತ್ರಕ್ಕೆ. ಅಲ್ಲಿ ಸ್ನಾನಮಾಡು. ಅದರಿಂದ ನಿನ್ನ ಇಷ್ಟಾರ್ಥ ಪೂರ್ಣ ಆಗುವದು.''

ಈ ಆದೇಶವನ್ನು ಆಲಿಸಿ ತತ್‌ಕ್ಷಣವೇ ಹೊರಟ ಅಲ್ಲಿಂದ ಆ ಅರಸ ಹೇಮಾಂಗಿಯೊಡನೆ. ಅದಕ್ಕೂ ಮೊದಲು ಮಂತ್ರಿಯನ್ನು ಕರೆದ. ಅವನ ಮೇಲೆ ರಾಜ್ಯರಕ್ಷಣೆಯ ಭಾರವನ್ನು ಹೊರಿಸಿದ. ತಾನು ರಥವನ್ನು ಏರಿದ. ಕೆಲವೇ ದಿನಗಳಲ್ಲಿ ದಂಪತಿಗಳು ಆಗಮಿಸಿದರು ಆ ಇಂದ್ರಪ್ರಸ್ಥ ಕ್ಷೇತ್ರಕ್ಕೆ. ಅಲ್ಲಿಯ ಪ್ರಯಾಗದ ಪುಣ್ಯಜಲದಲ್ಲಿ ಸ್ನಾನ ಮಾಡಿದರು. ಸ್ನಾನ ಮಾಡುವಾಗ ಆ ಅರಸ ಅರಸಿಯರು ತಮ್ಮ ಮನಸ್ಸಿನಲ್ಲಿ ತಮಗೆ ವೈಕುಂಠ ಲೋಕ ಪ್ರಾಪ್ತಿ ಆಗಲಿ ಎಂದು ಅಪೇಕ್ಷೆಯನ್ನು ಮಾಡಿ ಮುಳುಗು ಹಾಕಿದರು. ಅವರು ಸ್ನಾನ ಮಾಡಿ ಮೇಲೆ ಎದ್ದಾಗ ತೀರ್ಥದ ದಂಡೆಯ ಮೇಲೆ

ಅವರಿಗಾಗಿ ಒಂದು ಆಶ್ಚರ್ಯಕಾದಿತ್ತು. ಆ ತೀರ್ಥದ ತೀರದಲ್ಲಿ ಒಂದು ಹದ್ದು ಇನ್ನೊಂದು ಹಂಸ ಎರಡು ಪಕ್ಷಿಗಳು ನಿಂತಿದ್ದವು. ಅವುಗಳ ಮೇಲೆ ಪೀತಾಂಬರವನ್ನು ಧರಿಸಿದ ಶ್ರೀಹರಿ ಹಾಗೂ ಚತುರ್ಮುಖ ಬ್ರಹ್ಮದೇವ ಇಬ್ಬರೂ ಪ್ರಸನ್ನ ಮುಖದಿಂದ ಮಂದಹಾಸ ಮಾಡುತ್ತ ಮಂಡಿಸಿದ್ದರು. ಅವರನ್ನು ಕಂಡ ಕೂಡಲೇ ವೀರವರ್ಮ ಮಹಾರಾಜನು ಸಾಷ್ಟಾಂಗ ನಮಸ್ಕಾರ ಮಾಡಿ ಕೈ ಜೋಡಿಸಿ ಸ್ತೋತ್ರ ಮಾಡಿದ.

**''ವಂದೇ ಯುವಾಂ ಸತ್ವರಜಃಪ್ರಧಾನೌ ಚರಾಚರಸ್ಯ ಸ್ಥಿತಿಸರ್ಗ ಹೇತು ।**
**ವೈಕುಂಠ ಸತ್ಯಾದ್ಭುತ ಲೋಕನಾಥೌ ಚತುರ್ದ್ವಿಬಾಹೂ ಖಗರಾಜ ವಾಹೌ॥**

ಹಂಸ ಹಾಗೂ ಗರುಡನನ್ನು ಏರಿಕೊಂಡು ಇಲ್ಲಿಗೆ ಬಂದ ರಜೋಗುಣ ಹಾಗೂ ಸತ್ವ ಗುಣ ಪ್ರಧಾನರಾದ ಮತ್ತು ಚರಾಚರಾತ್ಮಕವಾದ ಪ್ರಪಂಚದ ಸೃಷ್ಟಿ ಸ್ಥಿತಿಗಳಿಗೆ ಕಾರಣರಾದ ಸತ್ಯಲೋಕ ಹಾಗೂ ವೈಕುಂಠ ಲೋಕಗಳಿಗೆ ಒಡೆಯರಾದ ಎರಡು ಹಾಗೂ ನಾಕು ತೋಳು ಗಳನ್ನು ಚತುರ್ಮುಖ ಬ್ರಹ್ಮನೇ, ಹಾಗೂ ಪರಬ್ರಹ್ಮನಾದ ನಾರಾಯಣನೇ, ನನ್ನ ವಂದನೆ.

**ಹೇಮಾಂಗಿ:-**

**ಪದ್ಮಾವತೇ, ಪದ್ಮಪಲಾಶಲೋಚನ ಬ್ರಹ್ಮನ್ ಮರಾಲಾಸನ ಭಾರತಿಗುರೋ।**
**ಮೋಯ ವಾಭ್ಯಾಂ ಯದಿದೀನಚೇತಸೇ ಪ್ರಸೀದತಂ ತಾರಯತಂ ಭವಾಬ್ಧೇಃ॥**

ಕಮಲಾಪತಿಯೂ ಕಮಲನೇತ್ರನೂ ಆದ ನಾರಾಯಣನಿಗೆ ನಮಸ್ಕಾರ. ಭಾರತೀಪತಿಯಾದ ಹಂಸವಾಹನ ಬ್ರಹ್ಮದೇವನಿಗೆ ನಮಸ್ಕಾರ. ದೀನಳಾದ ನನ್ನ ಮೇಲೆ ತಾವಿಬ್ಬರೂ ಪ್ರಸನ್ನರಾಗಿದ್ದರೆ ನನ್ನನ್ನು ಈ ಸಂಸಾರಸಾಗರದಿಂದ ಪಾರು ಮಾಡಿರಿ. ನಾನು ಈ ತೀರ್ಥದ ಪ್ರಸಾದದಿಂದ ಮಹಾರಾಣಿಯಾದೆ. ದೇವತೆಗಳಿಗೂ ಕೂಡ ದುರ್ಲಭವಾದ ತಮ್ಮಿಬ್ಬರ ದರ್ಶನವನ್ನು ಪಡೆದುಕೊಂಡೆ. ನೀವಿಬ್ಬರೂ ಸರ್ವಜ್ಞರು. ನಾವಿಬ್ಬರೂ ಸ್ನಾನ ಕಾಲದಲ್ಲಿ ಮನಸ್ಸಿನಲ್ಲಿ ಅಪೇಕ್ಷಿಸಿದ ಫಲವು ತಮಗೆ ವಿದಿತವೇ ಇದೆ. ವೈಕುಂಠಲೋಕ ಪ್ರಾಪ್ತಿ ಆಗಬೇಕು. ಎಂಬ ಹೆಬ್ಬಯಕೆಯಿಂದ ನಾವು ಆ ಪುಣ್ಯತೀರ್ಥದಲ್ಲಿ ಸ್ನಾನ ಮಾಡಿದ್ದೇವೆ. ನಮ್ಮ ಮನೋರಥವನ್ನು ತಾವು ಪೂರ್ತಿ ಮಾಡಬೇಕು.

**ಹರಿಬ್ರಹ್ಮ:-** ಹೇಮಾಂಗೀ, ನೀನು ಧನ್ಯಳು. ರಾಜ್ಯಸುಖೋಪಭೋಗ ಆಸಕ್ತನಾದ ನಿನ್ನ ಪತಿಯನ್ನು ಕೂಡ ನೀನು ಉದ್ಧರಿಸಿದೆ. ವಿಷಯಸುಖದಲ್ಲಿ ಲೋಲುಪರಾಗಿ ಸಂಸಾರ ಲಂಪಟರಾದ ಜನರಿಗೆ ನಿನ್ನ ಗಂಡನಂತೆ ಮುಕ್ತಿಯು ಎಂದಿಗೂ ದೊರೆಯಲಾರದು.. ಯಾರಿಗೂ ದೊರೆಯಲಾರದ, ಆದರೆ ಈ ತೀರ್ಥದ ಪ್ರಭಾವ ಹಾಗೂ ನಿನ್ನ ಹರಿಭಕ್ತಿ. ಪತಿಭಕ್ತಿಯ ಪುಣ್ಯದಿಂದ ಅವನಿಗೂ ಮೋಕ್ಷವು ದೊರೆಯುವಂತಾಗಿದೆ. ನೀವಿಬ್ಬರೂ ಮುಕ್ತಿಮಂದಿರಕ್ಕೆ ಬನ್ನಿ.

**ನಾರದ:-** ಹೀಗೆ ಹೇಳಿ ಅವರಿಬ್ಬರೂ ದೇವತೆಗಳೂ ಹಂಸ ಹಾಗೂ ಗರುಡರನ್ನು ಏರಿಕೊಂಡು ಅಲ್ಲಿಂದ ಹೊರಟರು. ತಮ್ಮೊಡನೆ ಈ ವೀರವರ್ಮ ಹಾಗೂ ಹೇಮಾಂಗಿ ದಂಪತಿಗಳನ್ನು ಕರೆದುಕೊಂಡೇ ನಡೆದರು. ಎಲ್ಲರೂ ಕೂಡಿ ಮೊದಲು ಸತ್ಯಲೋಕಕ್ಕೆ ಬಂದು ಅಲ್ಲಿ ಒಂದು ಗಳಿಗೆ ಇದ್ದು ಶ್ರೀಹರಿಯು ತನ್ನ ಭಕ್ತರಾದ ಆ ಅರಸ ಅರಸಿಯರನ್ನು ಕರೆದುಕೊಂಡು ವೈಕುಂಠ ಲೋಕಕ್ಕೆ ಪ್ರಯಾಣ ಬೆಳೆಸಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಹೇಮಾಂಗಿಯು ಪತಿಯೊಡನೆ ಇಂದ್ರಪ್ರಸ್ಥ ತೀರ್ಥಕ್ಕೆ ಪ್ರಯಾಣ ಮಾಡಿದುದು ಎಂಬ ಎರಡು ನೂರ ಮೂರನೇಯ ಅಧ್ಯಾಯ ಮುಗಿದುದು*

## ಇಂದ್ರಪ್ರಸ್ಥದಲ್ಲಿದ್ದ ಕಾಶೀ ಕಾಂಚೀ ಸಪ್ತತೀರ್ಥ ಭೀಮಕುಂಡಗಳ ಮಹಿಮೆ

ಅಧ್ಯಾಯ - ೨೦೪

**ನಾರದ :-** ಶಿಬಿರಾಜ, ಇಂದ್ರಪ್ರಸ್ಥದಲ್ಲಿರುವ ಕಾಶಿಯ ಮಹಿಮೆಯನ್ನು ಹೇಳುತ್ತೇನೆ ಕೇಳು. ಇಂದ್ರಪ್ರಸ್ಥದಲ್ಲಿ ಕಾಶಿ ಎಂಬ ಒಂದು ದಿವ್ಯಕ್ಷೇತ್ರವು ಇರುತ್ತದೆ. ಆ ಕಾಶಿಯಲ್ಲಿ ಹಿಂದೆ ಕೃತಯುಗದಲ್ಲಿ ಶಿಂಶುಪಾ ಎಂಬ ಒಂದು ಹೆಮ್ಮರವು ಇದ್ದಿತು. ಅದರಲ್ಲಿ ಗೂಡುಕಟ್ಟಿಕೊಂಡು ಒಂದು ಕಾಗೆಯು ಬಹುಕಾಲದಿಂದ ವಾಸವಾಗಿತ್ತು. ಆ ಅಶೋಕವೃಕ್ಷದ ಬಡ್ಡೆಯ ಬದಿಯಲ್ಲಿಯ ಹೊದರಿನಲ್ಲಿ ಒಂದು ಘಟಸರ್ಪವು ವಾಸವಾಗಿದ್ದಿತು. ಒಂದು ದಿನ ಅಲ್ಲಿರುವ ಗಂಡುಕಾಗೆಯ ಹೆಂಡತಿಯಾದ ಹೆಣ್ಣು ಕಾಗೆಯು ತನ್ನ ಗೂಡಿನಲ್ಲಿ ಎರಡು ಮೊಟ್ಟೆಗಳನ್ನು ಇಟ್ಟು ಹೊರಗೆ ಹಾರಿ ಹೋಯಿತು. ಮುಂದೆ ಅಂದು ಮರಳಿ ಅಲ್ಲಿಗೆ ಬರಲೇ ಇಲ್ಲ. ಆ ಗಂಡುಕಾಗೆಯೇ ತನ್ನ ಆ ಎರಡೂ ಮೊಟ್ಟೆಗಳನ್ನು ರಕ್ಷಣೆ ಮಾಡುತ್ತ ಆ ಅಶೋಕಗಿಡದ ಎತ್ತರದ ಟೊಂಗೆಯಲ್ಲಿದ್ದ ಗೂಡಿನಲ್ಲಿ ನೆಲೆಸಿತ್ತು.

ಒಂದು ದಿನ ಸರಿರಾತ್ರಿಯಲ್ಲಿ ಭಯಂಕರ ಬಿರುಗಾಳಿಯು ಬೀಸಿತು. ಆ ಚಂಡಮಾರುತದ ರಭಸಕ್ಕೆ ಪುರಾತನವಾದ ಆ ಶಿಂಶುಪಾ ಹೆಮ್ಮರವು ಬೇರುಸಹಿತವಾಗಿ ಉರುಳಿ ಬಿದ್ದಿತು. ಆಗ ಆ ಮರದ ಮೇಲೆ ಗೂಡಿನಲ್ಲಿದ್ದ ಕಾಗೆ, ಕೆಳಗೆ ಹೊದರಿನಲ್ಲಿದ್ದ ಹಾವು ಎರಡೂ ಜಜ್ಜಿ ಚೂತಾಗಿ ಸತ್ತು ಹೋದವು. ಕೂಡಲೇ ಆ ಕಾಗೆ, ಹಾವು ಮತ್ತು ಆ ಶಿಂಶುಪಾ ಎಂಬ ಮರ ಮೂರೂ ಆ ಪುಣ್ಯತೀರ್ಥದಲ್ಲಿ ಮರಣ ಹೊಂದಿದ್ದರ ಪ್ರಭಾವದಿಂದ ದಿವ್ಯಪುರುಷರ ದೇಹವನ್ನು ಪಡೆದವು. ಅವುಗಳನ್ನು ಕರೆಯಲು ವೈಕುಂಠ ಲೋಕದಿಂದ ಮೂರು ವಿಮಾನಗಳೇ ಬಂದವು.

**ಶಿಬಿಚಕ್ರವರ್ತಿ :-** ದೇವರ್ಷಿಯೇ, ಈ ಹಾವು, ಕಾಗೆ ಮತ್ತು ಮರಗಳು ಪೂರ್ವಜನ್ಮದಲ್ಲಿ ಯಾರು? ಅವುಗಳಿಗೆ ಯಾವ ಪೂರ್ವಪುಣ್ಯದ ಫಲದಿಂದ ಮೋಕ್ಷದಾಯಕವಾದ ಇಂದ್ರಪ್ರಸ್ಥ ಕ್ಷೇತ್ರದ ಕಾಶೀಕ್ಷೇತ್ರದಲ್ಲಿ ವಾಸಮಾಡುವ ಭಾಗ್ಯವು ದೊರಕಿತು? ಇದೆಲ್ಲ ಹಿನ್ನೆಲೆಯ ಇತಿಹಾಸವನ್ನು ತಾವು ನಿರೂಪಿಸಿರಿ.

**ನಾರದ:-** ಪೂರ್ವಕಾಲದಲ್ಲಿ ಕರುಜಾಂಗಲ ದೇಶದಲ್ಲಿ ಶ್ರವಣ ಎಂಬ ಒಬ್ಬ ಬ್ರಾಹ್ಮಣ ಇದ್ದ. ಅವನ ತಮ್ಮ ಕುರಂಟಕ ಮಹಾದುರಾಚಾರಿ. ಆಶ್ರವಣ. ಅವನು ಊಟಮಾಡುವ ಮುನ್ನ ಎಂದೂ ಸ್ನಾನ ಮಾಡುತ್ತಿರಲಿಲ್ಲ. ಮೈ ತೊಳೆಯದೇ ಎದ್ದಕೂಡಲೇ ತಿನ್ನಲಿಕ್ಕೆ ಪ್ರಾರಂಭ. ನಿಷಿದ್ಧಾನ್ನ ಅವನಿಗೆ ಬಹಳ ಇಷ್ಟ. ಇದರಂತೆ ಆ ಶ್ರವಣ ಬ್ರಾಹ್ಮಣನಿಗೆ ಕುಂಡಾ ಎಂಬ ಪತ್ನಿ ಇದ್ದಳು. ಅವಳಲ್ಲಿ ಆಚಾರ ವಿಚಾರ ದೇವಭಕ್ತಿ ಗುರುಹಿರಿಯರಲ್ಲಿ ಶ್ರದ್ಧೆ ಒಂದೂ ಇರಲಿಲ್ಲ. ಆ ಕುಟುಂಬದ ಮೂವರೂ ಸ್ವಚ್ಛಂದ ಆಚಾರ, ವಿಹಾರ, ಅನ್ನಪಾನಾದಿಗಳನ್ನು ಮಾಡುತ್ತ ಪಶುಪಕ್ಷಿಗಳಂತೆಯೇ ಜೀವಿಸುತ್ತಿದ್ದರು. ರುಚಿಕರವಾದ ಆಹಾರ ಪದಾರ್ಥಗಳನ್ನು ಯಾರಿಗೂ ಕೊಡದೆ ಏಕಾಂತದಲ್ಲಿ ತಾವು

ಒಬ್ಬೊಬ್ಬರೇ ಭಕ್ಷಿಸುತ್ತಿದ್ದರು. ಈ ಎಲ್ಲ ದೋಷ ಹಾಗೂ ಪಾಪಗಳಿಂದ ಅವರು ಮೂವರೂ ಮರಣಾನಂತರ ನೀಚ ಜನ್ಮವನ್ನು ಹೊಂದಿದರು. ಶ್ರವಣ ಬ್ರಾಹ್ಮಣನು ಕಾಗೆಯಾಗಿ ಹುಟ್ಟಿದ. ಅವನ ತಮ್ಮನಾದ ಕುರಂಟಕನು ಮನುಷ್ಯ ಜನ್ಮದಲ್ಲಿ ಮಹಾ ನಾಸ್ತಿಕನೂ, ಧಾರ್ಮಿಕ ಸಂಪ್ರದಾಯ, ಆಚಾರ ವಿಚಾರ ಪದ್ಧತಿ, ನೀತಿನಿಯಮಗಳ ಮರ್ಯಾದೆಯನ್ನು ಮುರಿಯುವವನೂ, ದೇವತಾ ನಿಂದಕನೂ, ಧರ್ಮದ್ರೋಹಿಯು ಆಗಿ ಇದ್ದರಿಂದ ಮರಣಾನಂತರ ಅವನು ಘಟಸರ್ಪವಾಗಿ ಜನಿಸಿದ. ಈ ಎಲ್ಲ ದೋಷಗಳಿಂದ ಆಶ್ರಯದಂತಿರುವ ಆ ಕುಂದಾ ಎಂಬ ಶ್ರವಣನ ಪತ್ನಿಯು ಮರವಾಗಿ ಹುಟ್ಟಿದಳು. ಹೀಗೆ ಜನ್ಮಾಂತರದಲ್ಲಿ ಶ್ರವಣ ಎಂಬ ಬ್ರಾಹ್ಮಣ ಕುಂದಾ ಎಂಬ ಬ್ರಾಹ್ಮಣಿ, ಕುರಂಟಕ ಎಂಬ ಅವನ ತಮ್ಮ ಮೂವರೂ ನಿಷಿದ್ಧ ಭಕ್ಷಣ, ಸ್ವಚ್ಛಂದ ಆಚರಣ, ಬೇರೆಯವರಿಗೆ ಕೊಡದೆ, ರಹಸ್ಯದಲ್ಲಿ ತಾವು ಒಬ್ಬರೇ ಸ್ವಾರ್ಥಿಯಾಗಿ ರುಚಿಕರವಾದ ಪದಾರ್ಥವನ್ನು ತಿನ್ನುವುದು, ಧರ್ಮ ದೇವರು ಸಂಪ್ರದಾಯಗಳನ್ನೆಲ್ಲ ಮೀರಿ ವೇದ ಶಾಸ್ತ್ರಗಳ ಸನ್ಮಾರ್ಗಗಳನ್ನು ದೂಷಿಸುವದೇ ಮೊದಲಾದ ಮಹಾಪಾಪ ಕೃತ್ಯಗಳನ್ನು ಮಾಡಿದ್ದರಿಂದ ಈ ಜನ್ಮದಲ್ಲಿ ಇಂದ್ರಪ್ರಸ್ಥ ಕ್ಷೇತ್ರದಲ್ಲಿರುವ ಪ್ರಯಾಗ ತೀರ್ಥದ ದಂಡೆಯ ಮೇಲೆ ಅಶೋಕ ವೃಕ್ಷ, ಕಾಗೆ, ಹಾವು ಆಗಿ ಜನಿಸಿದರು. ಮತ್ತು ಬಿರುಗಾಳಿಯಿಂದ ಮೂವರೂ ಹತರಾಗಿ ತೀರ್ಥದ ಪ್ರಭಾವದಿಂದ ವೈಕುಂಠ ಲೋಕಕ್ಕೆ ತೆರಳಿದರು.

ಆ ಮೂವರೂ ಇಂಥ ಪುಣ್ಯ ಕ್ಷೇತ್ರದಲ್ಲಿ ಮರ, ಕಾಗೆ ಮತ್ತು ಹಾವು ಆಗಿ ಹುಟ್ಟಲು ಕಾರಣ ಹೇಳುತ್ತೇನೆ ಕೇಳಿರಿ. ಅವರು ಮಾನವರಾಗಿ ಹುಟ್ಟಿದಾಗ ಒಂದು ದಿನ ದಾರಿಯಲ್ಲಿ ಒಂದು ಹಸುವು ಬಾವಿಯಲ್ಲಿ ಬಿದ್ದು ಒದ್ದಾಡುತ್ತಿತ್ತು. ಅದನ್ನು ನೋಡಿ ಆ ಶ್ರವಣ ಮತ್ತು ಕುರಂಟಕ ಎಂಬ ಅಣ್ಣ ತಮ್ಮಂದಿರು ಕರುಣೆದುಂಬಿ ಬಹಳ ಕಷ್ಟಪಟ್ಟು ಆ ಹಾಳು ಬಾವಿಯಿಂದ ಹಸುವನ್ನು ಮೇಲಕ್ಕೆ ಎತ್ತಿ ಅದರ ಜೀವ ಉಳಿಸಿದರು. ಅದನ್ನು ಆ ಕುಂದಾ ಎಂಬ ಶ್ರವಣನ ಗೃಹಿಣಿಯು ಬಹಳ ಒಳ್ಳೆಯ ಕೆಲಸ ಮಾಡಿದಿರಿ ಎಂದು ಅಭಿನಂದಿಸಿದಳು. ಆ ಪುಣ್ಯದಿಂದ ಅವರು ಮೂವರೂ ಪುಣ್ಯಕ್ಷೇತ್ರದಲ್ಲಿ ಮರ ಹಾವು ಕಾಗೆಯಾಗಿ ಜನಿಸಿದರು. ಇಲ್ಲಿ ಬಿರುಗಾಳಿಯಿಂದ ಮರಣಹೊಂದಿ ಮೋಕ್ಷಕ್ಕೆ ನಡೆದರು. ಇದು ಕಾಶೀ ಪಟ್ಟಣವಾದುದರಿಂದ ಮಹೇಶ್ವರ ಕ್ಷೇತ್ರವಾದರೂ ಇಲ್ಲಿ ಮರಣ ಹೊಂದಿದವರಿಗೆ ವೈಕುಂಠ ಪ್ರಾಪ್ತಿ ಆಗುವದೆಂದು ಈ ದೃಷ್ಟಾಂತದಿಂದ ನಿಶ್ಚಿತವಾಗುವುದು.

**ಶಿಬಿಚಕ್ರವರ್ತಿ :-** ಮುನೀಶ್ವರರೇ, ಈ ಇಂದ್ರಪ್ರಸ್ಥದಲ್ಲಿ ಕಾಶಿ, ಶಿವಕಾಂಚಿ ಗೋಕರ್ಣ ಇವು ಹೊಸಕ್ಷೇತ್ರಗಳು ರೂಪಗೊಂಡಿವೆ. ಎಂದು ತಾವು ತಿಳಿಸಿದಿರಿ. ಅವುಗಳಲ್ಲಿ ಈಗ ಇಲ್ಲಿಯ ಕಾಶೀ ಕ್ಷೇತ್ರದ ಮಹಿಮೆಯನ್ನು ತಾವು ಹೇಳಿದಿರಿ. ಇನ್ನು ಶಿವಕಾಂಚಿ ಹಾಗೂ ಗೋಕರ್ಣಗಳ ಮಹಿಮೆಯನ್ನು ತಾವು ನಿರೂಪಿಸಿರಿ.

**ನಾರದ :-** ಈಗ ಗೋಕರ್ಣದ ಮಹಿಮೆಯನ್ನು ಹೇಳುತ್ತೇನೆ ಕೇಳಿರಿ. ಶಿವಕ್ಷೇತ್ರವಾದ ಈ ಗೋಕರ್ಣದಲ್ಲಿ ನೆಲ ಜಲ ಮುಗಿಲು ಈ ಮೂರೂ ಕಡೆ ಯಾವ ಪ್ರಾಣಿಯು ಮರಣ ಹೊಂದಿದರೂ ಅದು ಕೈಲಾಸ ಪರ್ವತವನ್ನು ಹೊಂದಿ ಶಿವಗಣದಲ್ಲಿ ಸೇರ್ಪಡೆಯಾಗುವುದು. ಹಿಂದೆ ಇಂದ್ರಪ್ರಸ್ಥದಲ್ಲಿರುವ ಪ್ರಯಾಗ ಕ್ಷೇತ್ರದಿಂದ ಎರಡು ಮೈಲಿ ಅಂತರದಿಂದ 'ಮರ್ಯಾದಾ' ಪರ್ವತವು ಇರುತ್ತದೆ. ಅಲ್ಲಿ ಹಿಂದೆ ಕರ್ಕವ ಎಂಬ

ಒಬ್ಬ ಕ್ರೂರ ಬೇಡನು ಇದ್ದ. ಅವನ ಹೆಂಡತಿಯಾದ 'ಜರಾ' ಎಂಬ ಮಹಿಳೆಯು ಅವನಿಗಿಂತ ಕ್ರೂರ. ಐದು ಮಂದಿ ಗಂಡಂದಿರನ್ನು ಕೊಂದು ಈಗ ಆರನೇಯ ಪತಿಯನ್ನಾಗಿ ಕರ್ಕಟ ಭಿಲ್ಲನ ಕೈ ಹಿಡಿದಿದ್ದಳು. ಈಗ ಅವನನ್ನು ವಿಷ ಹಾಕಿ ಕೊಲ್ಲಬೇಕೆಂದು ಮನೆಯಲ್ಲಿ ನಂಜುತಂದು ಅದನ್ನು ತುಂಬಿ ಕಡಬನ್ನು ಕರಿದು ಇಟ್ಟಿದ್ದಳು. ಇದನ್ನು ಗುರುತಿಸಿದ ಆ ಕರ್ಕಟನ ತಂಗಿಯು ಆ ಮೋದಕವನ್ನು ತಿನ್ನಬೇಡ ಎಂದು ಅಣ್ಣನಿಗೆ ಬಂದು ಹೇಳಿದಳು. ಮಡದಿಯ ಈ ದಾರುಣ ಕೃತ್ಯವನ್ನು ಕೇಳಿ ಕೋಪಾಂಧನಾದ ಆ ಕರ್ಕಟನು ಆ ಜರಾಜಾರಿಣಿಯನ್ನು ಕೊಲ್ಲಬೇಕೆಂದು ಖಡ್ಗವನ್ನು ಹಿರಿದ. ಅದನ್ನು ಕಂಡಕೂಡಲೇ ಹೆದರಿ ಹೋದ ಆ ಜಾರೆಯು ಅಲ್ಲಿಂದ ಕಾಲು ಕಿತ್ತಿ ಓಡತೊಡಗಿದಳು. ಖಡ್ಗವನ್ನು ಹಿರಿದುಕೊಂಡೇ ಬೆನ್ನತ್ತಿದ ಕ್ರೂರ ಕರ್ಕಟ. ಮುಂದೆ ಮುಂದೆ ಜರಾ ಎಂಬ ಅವನ ಪತ್ನಿ ಹಿಂದೆ ಹಿಂದೆ ಕರ್ಕಟ. ಹೀಗೆ ಅವರಿಬ್ಬರೂ ಓಡುತ್ತ ಈ ಗೋಕರ್ಣ ಕ್ಷೇತ್ರಕ್ಕೆ ಬಂದಾಗ ಆ ಜರೆಯು ಕರ್ಕಟನ ಕೈಗೆ ಸಿಕ್ಕಳು. ಕೂಡಲೇ ಕರ್ಕಟನು ತನ್ನ ಕೈಯಲ್ಲಿಯ ಖಡ್ಗದಿಂದ ಅವಳ ತಲೆಯನ್ನು ಕತ್ತರಿಸಿ ಇಲ್ಲಿಯ ಗೋಕರ್ಣ ತೀರ್ಥದಲ್ಲಿ ಅವಳ ದೇಹವನ್ನು ಒಗೆದು ತನ್ನ ಸ್ಥಾನಕ್ಕೆ ಹೋದ. ಈ ಗೋಕರ್ಣ ಕ್ಷೇತ್ರದಲ್ಲಿ ಮರಣ ಮತ್ತು ತೀರ್ಥದಲ್ಲಿ ದೇಹಪಾತ ಆದ ಪುಣ್ಯಪ್ರಭಾವದಿಂದ ಹಿಂದೆ ಸ್ವೈರಿಣಿಯೂ ಜಾರಿಣಿಯೂ ಆದ ಆ ಜರಾ ಕಾಮಿನಿಯು ಕೈಲಾಸ ಶಿಖರದಲ್ಲಿ ಪಾರ್ವತಿಯ ಪ್ರೀತಿಯ ಗೆಳತಿಯಾಗಿ ಹುಟ್ಟಿದಳು.

ಇನ್ನು ಈ ಇಂದ್ರಪ್ರಸ್ಥದಲ್ಲಿರುವ ಶಿವಕಾಂಚಿಯ ಮಹಾತ್ಮ್ಯವನ್ನು ಹೇಳುತ್ತೇನೆ ಕೇಳು.

**'ಅತ್ರಶ್ರೀಮಾನ್ ಮಹಾದೇವೋ, ವಿಷ್ಣುಂ ಸರ್ವಸುರೇಶ್ವರಂ ।**
**ಆರಾಧ್ಯ ಭಕ್ತರಾಜತ್ವಂ ಲೇಭೇ ಜ್ಞಾನಂಚ ತಾತ್ವಿಕಂ ॥**

ಈ ಶಿವಕಾಂಚಿಯಲ್ಲಿ ಮಹಾದೇವರು ಎಲ್ಲ ದೇವತೆಗಳಿಗೂ ಒಡೆಯನಾದ ಮಹಾವಿಷ್ಣುವನ್ನು ಭಕ್ತಿಯಿಂದ ಆರಾಧಿಸಿ ಭಕ್ತರಾಜರು ಆದರು. ಮತ್ತು ದಿವ್ಯವಾದ ತತ್ವಜ್ಞಾನವನ್ನು ಪಡೆದರು.

**'ಅತಸ್ಸರ್ವೇದಯಂ ಪುತ್ರಾಃ ಬ್ರಹ್ಮಣಸ್ತಂ ಮಹೇಶ್ವರಂ ॥**
**ಆರಾಧಯಾಮಃ ಸತತಂ ಸದ್ಭಕ್ತಿ ಜ್ಞಾನಂಚ ತಾತ್ವಿಕಂ ॥**

ಆದುದರಿಂದ ಬ್ರಹ್ಮದೇವರೆ ಮಕ್ಕಳಾದ ನಾನು, ಸನಕ, ಸನಾತನ, ಸನಂದನ, ಸನತ್‌ಕುಮಾರ ಮತ್ತು ಸಪ್ತರ್ಷಿಗಳು ಪ್ರಜಾಪತಿಗಳು ಎಲ್ಲರೂ ವಿಷ್ಣುವಿನಲ್ಲಿ ನಿಶ್ಚಲವಾದ ಭಕ್ತಿ ಹಾಗೂ ತತ್ವಜ್ಞಾನಗಳು ಲಭಿಸಬೇಕೆಂದು ಯಾವಾಗಲೂ ಆ ಮಹಾದೇವರನ್ನು ಆರಾಧಿಸುತ್ತೇವೆ.

ಈ ಶಿವಕಾಂಚಿಯಲ್ಲಿಯೇ ಹಿಂದೆ ಬಾಣಾಸುರನು ಒಂದು ನೂರು ವರ್ಷ ನಿರಾಹಾರನಾಗಿ ನಿಂತು ಶಿವಾರಾಧನೆಗೈದು ಶಿವಗಣದಲ್ಲಿಯೇ ಸೇರ್ಪಡೆಯಾದ. ಈ ಶಿವಕಾಂಚಿಯೂ ಮೊದಲು ವಿಷ್ಣುವಿನದೇ ಪಟ್ಟಣ. ಶಿವನು ಮಾಡಿದ ತಪಸ್ಸಿನಿಂದಾಗಿ ಶ್ರೀಹರಿಯು ಬಂದು ಅದನ್ನು ಮಹಾದೇವನಿಗೆ ಕೊಟ್ಟ. ಆದ್ದರಿಂದ ಇದು ಶಿವಕಾಂಚಿ ಎಂದು ಪ್ರಸಿದ್ಧವಾಯಿತು. ಇಲ್ಲಿ ಮರಣ ಹೊಂದಿದ ಶಿವಭಕ್ತನಿಗೂ ವೈಕುಂಠಲೋಕ ಪ್ರಾಪ್ತಿ ನಿಶ್ಚಿತ. ಈ ವಿಷಯದಲ್ಲಿ ಒಂದು ಹಿಂದಿನ ವೃತ್ತಾಂತವನ್ನು ಹೇಳುತ್ತೇನೆ ಕೇಳಿರಿ.

ಪೂರ್ವಕಾಲದಲ್ಲಿ ಹೇರಂಬ ಎಂಬ ಪರಮ ಶಿವಭಕ್ತನಾದ ಬ್ರಾಹ್ಮಣನು ಇದ್ದ. ಅವನು ಎಲ್ಲ ಶೈವ ತೀರ್ಥ ಕ್ಷೇತ್ರಗಳ ಯಾತ್ರೆ ಮಾಡಿಕೊಂಡು ಈ ಶಿವಕಾಂಚಿಗೆ ಆಗಮಿಸಿದ. ಇಲ್ಲಿಯ ತೀರ್ಥದಲ್ಲಿ ಸ್ನಾನಮಾಡಿ, ಶಿವನ ನಿಂರತರ ಸೇವಾ ಸಮಾರಾಧನೆಗಳನ್ನು ಭಕ್ತಿಯಿಂದ ಮಾಡಿದ. ಕೊನೆಗೆ ಒಂದು ದಿನ ಈ ತೀರ್ಥದಲ್ಲಿ ಸ್ನಾನಮಾಡುವಾಗಲೇ ಅವನ ಪ್ರಾಣಪಕ್ಷಿ ಹಾರಿತು. ಆಗ ಮಹಾದೇವರ ಗಣಾಧೀಶರು ಬಂದು ಕೈಲಾಸಕ್ಕೂ ಹಾಗೂ ವಿಷ್ಣುದೂತರು ಬಂದು ತೀರ್ಥೋದಕದಲ್ಲಿ ಮರಣಹೊಂದಿದ ಆ ಹೇರಂಬನನ್ನು ವೈಕುಂಠ ಲೋಕಕ್ಕೂ ಕರೆದೊಯ್ಯಬೇಕೆಂದು ಪ್ರಯತ್ನಿಸಿದರು. ಇದರಿಂದಾಗಿ ಶಿವದೂತ ಹಾಗೂ ವಿಷ್ಣುದೂತರ ನಡುವೆ ಒಂದು ಘೋರ ಯುದ್ಧವೇ ನಡೆಯಿತು. ಇದನ್ನು ತಿಳಿದು ಕೈಲಾಸದಿಂದ ತನ್ನ ಎತ್ತನ್ನು ಹತ್ತಿಕೊಂಡು ಶಂಕರನು ಇಲ್ಲಿಗೆ ಧಾವಿಸಿ ಬಂದ. ಅತ್ತ ವೈಕುಂಠದಿಂದ ಹರಿಯು ಹದ್ದಿನ ಮೇಲೆ ಕುಳಿತು ಹಾರಿ ಇಲ್ಲಿಗೆ ಬಂದ. ಇಬ್ಬರೂ ಹೋರಾಡುತ್ತಲಿರುವ ತಮ್ಮ ತಮ್ಮ ದೂತರನ್ನು ತಡೆದು ನಿಲ್ಲಿಸಿದರು. ಆಗ ಶ್ರೀಹರಿಯು ಆ ಹೇರಂಬ ಬ್ರಾಹ್ಮಣನನ್ನು ತನ್ನ ಗರುಡನ ಮೇಲೆ ಕೂಡಿಸಿಕೊಂಡು ಕೈಲಾಸಕ್ಕೆ ತೆರಳಿದ. ಮಹಾದೇವರೂ ಮತ್ತು ಅವನ ಗಣಗಳು ವಿಷ್ಣುವಿನೊಡನೆ ಕೈಲಾಸಕ್ಕೆ ತೆರಳಿದ. ಮಹಾದೇವರೂ ಮತ್ತು ಅವನ ಗಣಗಳು ವಿಷ್ಣುವಿನೊಡನೆ ಕೈಲಾಸಕ್ಕೆ ಬಂದರು. ಆ ಹೇರಂಬ ಬ್ರಾಹ್ಮಣನಿಗೆ ಕೈಲಾಸದ ರಮಣೀಯ ಸ್ಥಾನಗಳನ್ನು ಹೇರಂಬನಿಗೆ ತೋರಿಸಿದರು.

**ಅಥ ತಸ್ಮಾತ್ತು ಕೈಲಾಸಾತ್ ಮಹಾದೇವೇನ ವಂದಿತಃ ।**
**ಮಾಧವಃ ಪರಯಾ ಭಕ್ತ್ಯಾ ವೈಕುಂಠಮಗಮತ್ತದಾ ॥**

ಅನಂತರ ಮಹಾದೇವರಿಂದ ಅತ್ಯಂತ ಭಕ್ತಿಯಿಂದ ವಂದಿತನಾಗಿ ಶ್ರೀಹರಿಯು ವೈಕುಂಠಲೋಕಕ್ಕೆ ತೆರಳಿದ. ಆ ಹೇರಂಬ ಬ್ರಾಹ್ಮಣನು ಕೂಡ ಈ ಶಿವಕಾಂಚಿ ತೀರ್ಥದ ಪ್ರಭಾವ ಹಾಗೂ ಪ್ರಸಾದದಿಂದ ಮಹಾದೇವರ ಸಮಕ್ಷಮದಲ್ಲಿಯೇ ಗೋವಿಂದನ ದರ್ಶನ ಹೊಂದಿ ಮೋಕ್ಷಾನಂದವನ್ನು ಪಡೆದ.

ಈ ಇಂದ್ರಕ್ಷೇತ್ರದ ಪರಿಸರದಲ್ಲಿ ತೀರ್ಥ ಸಪ್ತಕ ಎಂಬ ಒಂದು ಶ್ರೇಷ್ಠ ತೀರ್ಥವು ಇರುತ್ತದೆ. ಇದರ ದರ್ಶನ ಸ್ಪರ್ಶನಧ್ಯಾನ ಹಾಗೂ ಸ್ಮರಣದಿಂದಲೂ ಕೂಡ ಧರ್ಮ ಅರ್ಥ ಕಾಮ ಮೋಕ್ಷ ಎಂಬ ನಾಲ್ಕು ವಿಧ ಪುರುಷಾರ್ಥಗಳು ದೊರಕುತ್ತವೆ.

ಇಲ್ಲಿ ವಶಿಷ್ಠರೇ ಮೊದಲಾದ ಮಹರ್ಷಿಗಳು ಒಳ್ಳೇ ಸಂತಾನಕ್ಕಾಗಿ ತಪಿಸಿತ್ತುತ್ರರನ್ನು ಪಡೆದರು. ಮರೀಚಿ ಮುನಿಗಳು ಇಲ್ಲಿ ಸ್ನಾನಮಾಡಿ ಕಶ್ಯಪ ಎಂಬ ಸತ್ಪುತ್ರರನ್ನು ಪಡೆದರು. ಅತ್ರಿ ಋಷಿಗಳು ಇಲ್ಲಿ ಹರಿ ಹರ ಬ್ರಹ್ಮ ಎಂಬ ದೇವತಾ ತ್ರಿಮೂರ್ತಿಗಳನ್ನು ಆರಾಧಿಸಿ, ಚಂದ್ರ, ದೂರ್ವಾಸ, ದತ್ತಾತ್ರೇಯ ಎಂಬ ಮೂರು ಮಕ್ಕಳನ್ನು ಪಡೆದರು. ಅಂಗಿರಸ ಎಂಬ ಮುನಿಯು ಈ ತೀರ್ಥದಲ್ಲಿ ತಪಿಸಿ ಬೃಹಸ್ಪತಿ ಎಂಬ ಪುತ್ರನನ್ನು ಹಾಗೂ ಅಂಗಿರನು ಅಂಗಿರಸ ಎಂಬ ಒಳ್ಳೆಯ ಸಂತತಿಯನ್ನೂ ಪಡೆದರು. ಇದರಂತೆ ಪುಲಿಹರು ಧಂಬೋಲಿಯನ್ನು ಮೈತ್ರಾವರುಣರು ಅಗಸ್ತ್ಯರನ್ನು, ಪುಲಸ್ತ್ಯರು ಕುಬೇರರನ್ನು, ಕೃತು ಮುನಿಯು ವಾಲಖಿಲ್ಯ ಎಂಬ ಸಾವಿರಾರು ಮಕ್ಕಳನ್ನು ಈ ತೀರ್ಥದ ಪ್ರಸಾದ ಪ್ರಭಾವದಿಂದ ಪಡೆದರು.

ಶಿಬಿರಾಜ, ಇದಲ್ಲದೇ, ಈ ಇಂದ್ರಪ್ರಸ್ಥ ಕ್ಷೇತ್ರದ ಪರಿಸರ ಪ್ರಾಂತದಲ್ಲಿ ಕಪಿಲಾಶ್ರಮ, ಕೇದಾರ, ಪ್ರಭಾಸ ಮುಂತಾದ ಸಾವಿರಾರು ತೀರ್ಥಗಳು ಇರುತ್ತವೆ. ಅವೆಲ್ಲದರ ಮಹಿಮೆಯನ್ನು ಆದಿಶೇಷನು ಕೂಡ ಬಣ್ಣಿಸಲಾರ ನಮ್ಮಂಥವರ ಪಾಡೇನು?

**ಸೌಭರಿ :-** ಮುನಿಶ್ರೇಷ್ಠರಾದ ನಾರದರು ಶಿಬಿಚಕ್ರವರ್ತಿಗೆ ಈ ಎಲ್ಲ ತೀರ್ಥಕ್ಷೇತ್ರಗಳ ಮಹಿಮೆಯನ್ನು ಬಣ್ಣಿಸಿ ಹೇಳಿ ನಾರಾಯಣನ ಗುಣಗಳನ್ನು ಹಾಡುತ್ತ ಪಾಡುತ್ತ ನಭೋಮಾರ್ಗದಿಂದ ತಮ್ಮ ಪ್ರಯಾಣ ಬೆಳೆಸಿದರು. ಅನಂತರ ಉಶೀನರನ ಮಗನಾದ ಆ ಶಿಬಿಚಕ್ರವರ್ತಿಯು ನಾರದನ ಮುಖದಿಂದ ಇಂದ್ರಪ್ರಸ್ಥದ ಮಹಾಮಹಿಮೆಯನ್ನು ಕೇಳಿ ಧನ್ಯನಾದ. ತಾನು ಅದರಲ್ಲಿ ಸ್ನಾನಮಾಡಿ ದಾನ ಧರ್ಮ ದೇವರಪೂಜೆ ಮುಂತಾದವುಗಳನ್ನು ಮಾಡಿ ತನ್ನ ರಾಜಧಾನಿಗೆ ತೆರಳಿದ. ಹದಿನೆಂಟು ಪುರಾಣ ಹಾಗೂ ಭಾರತ ಶ್ರವಣದಿಂದ ಬರುವ ಪುಣ್ಯವು ಈ ಇಂದ್ರಪ್ರಸ್ಥ ತೀರ್ಥದ ಮಹಿಮಾ ಶ್ರವಣದಿಂದ ಲಭಿಸುವದು.

**ಸೂತ :-** ಶೌನಕರೆ, ಧರ್ಮರಾಜನು ಸೌಭರಿಋಷಿಯಿಂದ ಇಂದ್ರಪ್ರಸ್ಥದ ಮಹಾಮಹಿಮೆಯನ್ನು ಕೇಳಿ ಅಲ್ಲಿಯೇ ಶ್ರೀಕೃಷ್ಣನ ನೇತೃತ್ವದಲ್ಲಿ ಅವನನ್ನೇ ಉದ್ದೇಶಿಸಿ ರಾಜಸೂಯ ಯಾಗವನ್ನು ಮಾಡಿದ. ಆ ರಾಜಸೂಯ ಯಾಗದಲ್ಲಿ ಶ್ರೀಕೃಷ್ಣನು ತನ್ನನ್ನು ತೆಗಳಿದ ಶಿಶುಪಾಲನನ್ನು ಸುದರ್ಶನ ಚಕ್ರದಿಂದ ಸಂಹರಿಸಿದ. ಈ ತೀರ್ಥದಲ್ಲಿ ಮರಣ ಹೊಂದಿದ ಪುಣ್ಯ ಪ್ರಭಾವದಿಂದಾಗಿ ಆ ಶಿಶುಪಾಲನು ಶ್ರೀಹರಿಯ ಸಾಯುಜ್ಯ ಮೋಕ್ಷವನ್ನು ಹೊಂದಿದ.

ಈ ಕೃಷ್ಣನು ಶಿಶುಪಾಲನನ್ನು ಸಂಹರಿಸಿದ ಸ್ಥಳದಲ್ಲಿಯೇ, ಭೀಮನು ತನ್ನ ಗದೆಯಿಂದ ತಗ್ಗು ತೋಡಿ ಭೀಮಕುಂಡವನ್ನು ನಿರ್ಮಿಸಿದ. ಅಲ್ಲಿ ಸ್ನಾನ ಮಾಡುವದರಿಂದ ಯಮುನಾ ನದಿಯಲ್ಲಿ ಸ್ನಾನ ಮಾಡಿದ ಪುಣ್ಯವು ಬರುವದು. ಈ ದಿವ್ಯವಾದ ಇಂದ್ರಪ್ರಸ್ಥ ಕ್ಷೇತ್ರವನ್ನು ಶ್ರೀಹರಿಯ ನಾಮವನ್ನು ಉಚರಿಸುತ್ತ ಪ್ರದಕ್ಷಿಣೆ ಹಾಕಿದವರು, ನಮಸ್ಕಾರ ಮಾಡಿದವರು ಕಪಿಲಾ ಧೇನುವನ್ನು ಧ್ಯಾನ ಮಾಡಿದ ಫಲವನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡ, ಕಾಲಂದೀ ಮಹಾತ್ಮ ಇಂದ್ರಪ್ರಸ್ಥಗತ ಕಾಶೀ, ಗೋಕರ್ಣ, ಶಿವಕಾಂಚೀ, ಸಪ್ತತೀರ್ಥ, ಭೀಮಕುಂಡ ತೀರ್ಥಗಳ ಮಹಿಮಾವರ್ಣನ*

ಎಂಬ ಎರಡುನೂರಾ ನಾಲ್ಕನೇಯ ಅಧ್ಯಾಯ ಮುಗಿದುದು

—o—

## ಲಕ್ಷ್ಮೀ ನಾರಾಯಣ ಮಂತ್ರಗ ದೀಕ್ಷಾ ಹಾಗೂ ಉಪದೇಶ

**ಶೌನಕ:-** ಸೂತರೇ, ಸಂಸಾರ ಸಮುದ್ರದಲ್ಲಿ ಮುಳುಗಿದ ಜನರನ್ನು ಪಾರುಮಾಡುವ ಶ್ರೇಷ್ಠಮಂತ್ರವು ಯಾವುದಾದರೂ ಇದ್ದರೆ ಅದನ್ನು ನನಗೆ ನಿರೂಪಿಸಿರಿ.

**ಸೂತ:-** ಹಿಂದೆ ದಿಲೀಪ ರಾಜನು ಕೇಳಿದಾಗ ವಶಿಷ್ಠರು ಅದಕ್ಕಿಂತ ಪೂರ್ವಕಾಲದಲ್ಲಿ ಭಗವಂತನು ಬ್ರಹ್ಮದೇವರಿಗೂ, ಬ್ರಹ್ಮದೇವನು ನಾರದರಿಗೂ, ನಾರದರು ಯಜ್ಞದೀಕ್ಷಿತರಾದ ಮಹರ್ಷಿಗಳಿಗೂ ಉಪದೇಶಿಸಿದ ಆ ಲಕ್ಷ್ಮೀನಾರಾಯಣ ಮಂತ್ರದ ಮಹಿಮೆಯನ್ನು ಶ್ರದ್ಧೆಯಿಂದ ತಿಳಿಸಿ ಹೇಳಿದರು. ಸಾಕ್ಷಾತ್ ಶ್ರೀಹರಿಯೇ ಸ್ವಯಂ ಉಪದೇಶಿಸಿದ ಆ ಮಂತ್ರ ದೀಕ್ಷಾಪ್ರಸಂಗವನ್ನು ವಿವರಿಸುತ್ತೇನೆ ಕೇಳಿರಿ.

**ಶ್ರೀ ನಾರಾಯಣ:-** ಎಲ್ಲ ಮಂತ್ರಗಳಲ್ಲಿಯೂ ಈ ಲಕ್ಷ್ಮೀನಾರಾಯಣ ಮಂತ್ರವು ಪರಮ ಮಂಗಳಕರ. ಇದನ್ನು ಒಮ್ಮೆ ನೆನೆದರೂ ಸಾಕು, ಮುಕ್ತಿ ನಿಶ್ಚಿತ.

**"ಓಂ ಶ್ರೀ ಲಕ್ಷ್ಮೀ ನಾರಾಯಣಾಭ್ಯಾಂ ನಮಃ"** ಎಂಬ ಈ ಮಂತ್ರಕ್ಕೆ ಮೊದಲು ನಾರಾಯಣ ಅಷ್ಟಾಕ್ಷರ ಮಂತ್ರದಲ್ಲಿ ಹೇಳಿದಂತೆಯೇ ಅಂಗನ್ಯಾಸ, ಕರನ್ಯಾಸ, ಹೃದಯನ್ಯಾಸ ಮುಂತಾದವುಗಳನ್ನು ಮಾಡಿಕೊಳ್ಳಬೇಕು. ಈ ಮಂತ್ರ ಜಪಕ್ಕೆ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಹಾಗೂ ಅದಕ್ಕಿಂತ ಕೀಳು ಜಾತಿಯ ಜನರು ಕೂಡ ಅಧಿಕಾರಿಗಳು. ಆದರೆ ಈ ಮಂತ್ರಜಪಕ್ಕೆ ಮುಖ್ಯ ಅಧಿಕಾರವೆಂದರೆ ಹರಿಭಕ್ತಿ. ಶ್ರೀಹರಿಯಲ್ಲಿ ಭಕ್ತಿಯಿಲ್ಲದ ಮನುಷ್ಯನು ಎಂಥ ದೊಡ್ಡ ಕುಲದಲ್ಲಿ ಹುಟ್ಟಿದ್ದರೂ, ವೇದಗಳನ್ನು ಓದಿದ್ದರೂ, ವೇದಾಂಗಗಳನ್ನು ತಿಳಿದಿದ್ದರೂ, ಎಷ್ಟು ಯಜ್ಞಗಳನ್ನು ಮಾಡಿದ್ದರೂ ಎಷ್ಟು ದಾನ ನೀಡಿದ್ದರೂ ಎಲ್ಲ ತೀರ್ಥಯಾತ್ರೆ ಗೈದಿದ್ದರೂ, ಸಂನ್ಯಾಸಾಶ್ರಮ ಸ್ವೀಕರಿಸಿದ್ದರೂ ಭಕ್ತಿ ಒಂದು ಇಲ್ಲದಿದ್ದರೆ ಸರ್ವಥಾ ಅಧಿಕಾರಿ ಆಗಲಾರ ಈ ಮಂತ್ರ ಪಠಣಕ್ಕೆ. ಭಕ್ತಿ ಇಲ್ಲದವರಿಗೆ ಈ ಮಂತ್ರವನ್ನು ಎಂದೂ ಉಪದೇಶಿಸ ಕೂಡದು.

ನನ್ನಲ್ಲಿ ಅವ್ಯಭಿಚರಿತವಾದ ಭಕ್ತಿಯನ್ನು ಮಾಡುವ, ಕಾಮಕ್ರೋಧಗಳನ್ನು ತೊರೆದ, ಡಂಭವಿಲ್ಲದ, ಲೋಭರಹಿತನಾದ ಮನುಷ್ಯನಿಗೆ ಮಾತ್ರ ಈ ಮಂತ್ರವನ್ನು ಉಪದೇಶಿಸಬೇಕು. ಈ ಲಕ್ಷ್ಮೀನಾರಾಯಣ ಮಂತ್ರವನ್ನು ಉಪದೇಶಿಸುವ ಮೊದಲು ಉಪದೇಶಕರಾದ ಆಚಾರ್ಯರರು ಚೆನ್ನಾಗಿ ಶಿಷ್ಯ ಪರೀಕ್ಷೆಯನ್ನು ಮಾಡಬೇಕು. ಇಲ್ಲಿ ಕೆಳಗೆ ಹೇಳಿದ ಹಲವಾರು ಲಕ್ಷಣಗಳು ಇದ್ದರೆ ಮಾತ್ರ ಅವನು ನನ್ನ ಭಕ್ತ.

**ಮಚ್ಚಕ್ರಾಂಕಿತ ದೇಹತ್ವಂ ಮದೀಯಾರಾಧನಂ ತಥಾ**
**ಮಯಿ ಸನ್ನ್ಯಸ್ತಕರ್ಮತ್ವಂ ಮದನನ್ಯಶರಣ್ಯತಾ ॥**

ನನ್ನ ಶಂಖ ಚಕ್ರಾದಿ ಲಾಂಛನಗಳಿಂದ ದೇಹಕ್ಕೆ ನಾಮಮುದ್ರಾದಿ ಧಾರಣ, ಹಾಗೂ ತಪ್ತಮುದ್ರಾಧಾರಣ, ನನ್ನಲ್ಲಿ ಸರ್ವಕರ್ಮಗಳನ್ನು ಸಮರ್ಪಣ ಮಾಡಿ ನನಗೇ ಶರಣುಬರಬೇಕು.

**ಮಯಿ ಸರ್ವಫಲನ್ಯಾಸೋ ಮಹಾವಿಶ್ವಾಸ ಪೂರ್ವಕಂ**
**ಅನನ್ಯಸಾಧನತ್ವಂ ಚಾಪ್ಯಾಕಿಂಚನ್ಯಂ ತಥಾತ್ಮನಃ ॥**

ಅತ್ಯಂತ ವಿಶ್ವಾಸದಿಂದ ನನ್ನಲ್ಲಿಯೇ ಸರ್ವಕರ್ಮ ಫಲನ್ಯಾಸವನ್ನು ಮಾಡಿ ಸರ್ವಕರ್ಮ ಪ್ರಾರಂಭಕ್ಕೂ ''ಶ್ರೀ ವಿಷ್ಣುಪ್ರೇರಣಯಾ ಶ್ರೀ ವಿಷ್ಣುಪ್ರೀತ್ಯರ್ಥಂ'' ಎಂದು ಸಂಕಲ್ಪ ಮಾಡಿ ಅವೆಲ್ಲವನ್ನು ನನಗೆ ಅರ್ಪಿಸಬೇಕು.

**ಅವೈಷ್ಣವಾನಾಂ ಸಂಭಾಷಾವಂದನಾದಿವಿವರ್ಜನಂ**
**ಅನನ್ಯದೇವತಾನಾಂ ಚ ವಂದನಂ ಪೂಜನಂ ತಥಾ**
**ಏವಮಾದ್ಯಾಶ್ಚ ನಿಯಮಾಃ ಪ್ರಪನ್ನಸ್ಯ ಪ್ರಕೀರ್ತಿತಾಃ ॥**

ವಿಷ್ಣು ಭಕ್ತರಾಗದ ಜನರೊಡನೆ ಸಂಭಾಷಣೆ, ಸಹವಾಸ, ನಮಸ್ಕಾರ ಮೊದಲಾದವುಗಳನ್ನು ಮಾಡಬಾರದು. ಇಷ್ಟೇ ಅಲ್ಲ ಹರಿಯನ್ನು ಬಿಟ್ಟು ಇನ್ನೊಬ್ಬ ದೇವತೆಯನ್ನು ಪೂಜಿಸಕೂಡದು. ಬೇರೆ ದೇವತೆಗೆ ನಮಸ್ಕಾರ ಮಾಡಬಾರದು. ಇಂಥ ಎಲ್ಲ ಗುಣಗಳಿಂದ ಉಪೇತನಾದ ಶಿಷ್ಯನಿಗೆ ಮಾತ್ರ ಈ ಲಕ್ಷ್ಮೀ ನಾರಾಯಣ ಮಂತ್ರವನ್ನು ಉಪದೇಶಿಸಬೇಕು. ಈ ಲಕ್ಷ್ಮೀನಾರಾಯಣ ಮಂತ್ರಕ್ಕೆ ನಾರಾಯಣನೇ (ನಾನೇ) ಋಷಿ. ಲಕ್ಷ್ಮೀಸಹಿತನಾದ ವಿಷ್ಣುವೇ ದೇವತೆ. ಗಾಯತ್ರಿ ಛಂದಸ್ಸು. ಅದರಲ್ಲಿ ಇಪ್ಪತ್ತೈದು ಅಕ್ಷರಗಳು. ಅದರ ಮೇಲೆ ಎಡತೊಡೆಯ ಮೇಲೆ ಲಕ್ಷ್ಮಿಯಿಂದ ಮಂಡಿತನಾದ, ಶಂಖಚಕ್ರಗದಾ ಪದ್ಮಗಳನ್ನು ನಾಲ್ಕು ಕೈಗಳಲ್ಲಿ ಧರಿಸಿದ, ವಿಶ್ವರೂಪಿಯಾದ ನಾರಾಯಣನನ್ನು ಧ್ಯಾನ ಮಾಡಬೇಕು.

**ಸರ್ವಲೋಕೇಶ್ವರಃ ಶ್ರೀಮಾನ್ ಸುಶೀಲಃ ಸುಲಭಸ್ತಥಾ**
**ಸರ್ವಜ್ಞಃ ಸರ್ವ ಶಕ್ತಿಶ್ಚ ಸದಾಪೂರ್ಣ ಮನೋರಥಃ ॥**
**ಸರ್ವದಃ ಸರ್ವ ಬಂಧುಶ್ಚ ಕೃಪಾಪೀಯೂಷಸಾಗರಃ**
**ಶ್ರೀಮಾನ್ ನಾರಾಯಣೋ ದೇವಃ ದೇವತಾನಾಂ ಚ ದೈವತಂ ॥**

ಎಂದು ನನ್ನನ್ನು ಧ್ಯಾನ ಮಾಡಬೇಕು.

**ಬ್ರಹ್ಮ:-** ಜಗನ್ನಾಥ, ಈ ಲಕ್ಷ್ಮೀನಾರಾಯಣ ಮಂತ್ರದ ದೀಕ್ಷಾವಿಧಾನವನ್ನು ಈಗ ಲೋಕಹಿತಕ್ಕಾಗಿ ನಿರೂಪಿಸು.

**ನಾರಾಯಣ:-** ಈ ಮಂತ್ರದ ಉಪದೇಶವನ್ನು ಪಡೆಯಲು ಬಯಸುವವನು ಮೊದಲು ಆಚಾರ್ಯರನ್ನು ಹುಡುಕಿಕೊಂಡು ಹೋಗಬೇಕು.

**ಆಚಾರ್ಯೋ ವೇದ ಸಂಪನ್ನೋ ವಿಷ್ಣುಭಕ್ತೋ ವಿಮತ್ಸರಃ**
**ಮಂತ್ರಜ್ಞೋ ಮಂತ್ರಭಕ್ತಶ್ಚ ಸದಾ ಮಂತ್ರಾಶಯಃ ಶುಚಿಃ ॥**
**ಬ್ರಾಹ್ಮಣೋ ವೀತರಾಗಶ್ಚ ಕ್ರೋಧ ಲೋಭ ವಿವರ್ಜಿತಃ**
**ಸದ್‌ವೃತ್ತೌ ಶಾಸಿತಾ ಚೈವ ಮುಮುಕ್ಷುಃ ಪರಮಾರ್ಥವಿತ್ ॥**
**ಏವಮಾದಿಗುಣೋಪೇತಃ ಆಚಾರ್ಯಃ ಸರ್ವದಃ ಸುಹೃತ್**
**ಆಚಾರಾನ್ ಶಾಸಯೇದ್ಯಸ್ತು ಸ ಆಚಾರ್ಯ ಇತೀರಿತಃ ॥**

ಆಚಾರ್ಯ ಆದವನು ಮೊದಲು ವೇದಶಾಸ್ತ್ರ ಸಂಪನ್ನನು ಆಗಿರಬೇಕು. ವಿಷ್ಣುವಿನಲ್ಲಿ ನಿರತಿಶಯವಾದ ಭಕ್ತಿಯನ್ನು ಇರಿಸಿರಬೇಕು. ಮಾತ್ಸರ್ಯ ದೋಷವು ಇರಕೂಡದು. ತಾನು ಉಪದೇಶಿಸುವ ಮಂತ್ರದ ಅರ್ಥವನ್ನು ಚೆನ್ನಾಗಿ ತಿಳಿದಿರಬೇಕು. ಹಾಗೂ ಆ ಮಂತ್ರದಲ್ಲಿ ಪೂರ್ಣ ವಿಶ್ವಾಸ ಇರಬೇಕು. ಮಂತ್ರ ಪರಿಶುದ್ಧನಾಗಿ ಸದಾಚಾರಗಳನ್ನೆಲ್ಲ ಪಾಲಿಸುತ್ತ ಇರಬೇಕು. ರಾಗ ದ್ವೇಷ, ಕೋಪ ಲೋಭ ಮುಂತಾದ ದುರ್ಗುಣಗಳಿಂದ ದೂರ ಇರಬೇಕು. ಬ್ರಹ್ಮಜ್ಞಾನಿಯಾಗಿರಬೇಕು. ವೇದಶಾಸ್ತ್ರೋಕ್ತವಾದ ಅನುಶಾಸನಗಳನ್ನು ನಿಷ್ಠುರವಾಗಿ ಪಾಲನಗೈಯಬೇಕು. ಅಂಥವನಿಗೆ ಮಾತ್ರ ಆಚಾರ್ಯ ಎನ್ನಬೇಕು.

ಇದರಂತೆ ಶಿಷ್ಯನು ಗುರುಭಕ್ತನಾಗಿ ಇರಬೇಕು.

**ಯಸ್ತ್ವಾಚಾರ್ಯ ಪರಾಧೀನಃ ಸದ್ವೃತ್ತಃ ಶಾಸ್ಯತೆ ಯದಿ**
**ಶಾಸನೇ ಸ್ಥಿರವೃತ್ತಿಶ್ಚ ಶಿಷ್ಯಃ ಸದ್ಭಿರುದಾಹೃತಃ ॥**

ಶಿಷ್ಯನಾದವನು ಗುರುಗಳಿಗೆ ಅಧೀನನಾಗಿರಬೇಕು. ಅವರು ಸದಾಚಾರ, ನೀತಿ ನಡತೆಗಳಲ್ಲಿ ಆಜ್ಞೆಯನ್ನು ಮಾಡಿದರೆ ತಪ್ಪದೇ ಪರಿಪಾಲಿಸಬೇಕು. ಗುರುಗಳ ಶಾಸನವನ್ನು ಗಟ್ಟಿ ಮನಸ್ಸಿನಿಂದ ಪಾಲನ ಮಾಡುವವನು ಶಿಷ್ಯ ಎಂದು ಸಜ್ಜನರಿಂದ ಕರೆಯಲ್ಪಡುತ್ತಾನೆ. ಇಂಥ ಲಕ್ಷಣದಿಂದ ಯುಕ್ತನಾದ, ಶಿಷ್ಯನಿಗೆ ವಿಧಿ ಪೂರ್ವಕವಾಗಿ ಈ ಮಂತ್ರರತ್ನವನ್ನು ವೈಷ್ಣವ ದೀಕ್ಷೆಯನ್ನು ಕೊಟ್ಟು ಉಪದೇಶಿಸಬೇಕು. ಈ ವೈಷ್ಣವ ದೀಕ್ಷೆಯನ್ನು ದ್ವಾದಶೀ ಅಥವಾ ಶ್ರವಣಾ ನಕ್ಷತ್ರ ಅಥವಾ ಮತ್ತೆ ಬೇರೆ ಯಾವುದಾದರೂ ಹಬ್ಬ ಹರಿದಿನಗಳಲ್ಲಿ ಕೊಡಬೇಕು. ವಿಷ್ಣುವಿನ ಲಾಂಛನವಾದ ಶಂಖ ಚಕ್ರಗಳನ್ನು ಬಂಗಾರ ಬೆಳ್ಳಿ ತಾಮ್ರ ಅಥವಾ ಕಂಚಿನಿಂದ ಮಾಡಿಸಿ ದೇವರ ಎದುರು ಇಟ್ಟು ಪಂಚಾಮೃತದಿಂದ ಅಭಿಷೇಕ ಮಾಡಿ ನಾರಾಯಣನ ಮುಂದೆ ಇಟ್ಟು ತುಳಿಸಿ ಗಂಧ ಮುಂತಾದವುಗಳೊಂದಿಗೆ ಏರಿಸಿ ಪೂಜೆ ಮಾಡಬೇಕು. ಅನಂತರದಲ್ಲಿ ಶಾಸ್ತ್ರೋಕ್ತವಾದ ವಿಧಾನದಿಂದ ಅಗ್ನಿಸ್ಥಾಪನೆಯನ್ನು ಮಾಡಿ ಆಚಾರ್ಯನು ತುಪ್ಪದಿಂದ ಸಾವಿರದಾ ಎಂಟು ಅಥವಾ ಒಂದನೂರಾ ಎಂಟು ಬಾರಿ ಈ ಲಕ್ಷ್ಮೀನಾರಾಯಣ ಮಂತ್ರವನ್ನು ಹೇಳಿ ಅಗ್ನಿಯಲ್ಲಿ ಹೋಮ ಮಾಡಬೇಕು. ಅದರಂತೆ ಪುರುಷಸೂಕ್ತ, ಪವಮಾನ, ವಿಷ್ಣುಸೂಕ್ತ ಮೊದಲಾದ ವೇದೋಕ್ತ ಮಂತ್ರದಿಂದ ತುಪ್ಪ ಹಾಗೂ ಪಾಯಸಗಳನ್ನು ಆಹುತಿ ನೀಡುತ್ತ ಹೋಮ ಮಾಡಬೇಕು. ಅನಂತರ ಈ ಹೋಮಾಗ್ನಿಯಲ್ಲಿ ಆ ಶಂಖ ಚಕ್ರಗಳನ್ನು ಇಟ್ಟು ಕಾಯಿಸಬೇಕು. ಅನಂತರ 'ಓಂ ಕ್ಲೀಂ ಕೃಷ್ಣಾಯ ನಮಃ' ಎಂಬ ಕೃಷ್ಣಷಡಕ್ಷರ ಮಂತ್ರದಿಂದ ಇಪ್ಪತ್ತು ತುಪ್ಪದ ಆಹುತಿಗಳನ್ನು ನೀಡಬೇಕು. ಅನಂತರ ಕಾಯಿಸಿದ ಆ ಶಂಖ ಚಕ್ರಗಳನ್ನು ಕೈಯಲ್ಲಿ ತೆಗೆದುಕೊಂಡು ಗುರುವು ಅದೇ ಲಕ್ಷ್ಮೀನಾರಾಯಣ ಮಂತ್ರದಿಂದ ತನ್ನ ಶಿಷ್ಯರಿಗೆ ಎಡಬಲ ತೋಳುಗಳ ಮೇಲೆ ಮುದ್ರಾಧಾರಣವನ್ನು ಮಾಡಿಸಬೇಕು. ಅನಂತರ ಉಳಿದ ಹೋಮ ವಿಧಿಯನ್ನೆಲ್ಲ ಮುಗಿಸಿ ದೇವರಿಗೆ ಪ್ರತಿದಿನದಂತೆ ಅಭಿಷೇಕ, ವಸ್ತ್ರ, ಧೂಪ, ದೀಪ, ನೈವೇದ್ಯ ಮುಂತಾದ ವಿಧಿಪೂರ್ವಕವಾಗಿ ಪೂಜೆಯನ್ನು ಮಾಡಬೇಕು. ಶುಭ್ರವಸ್ತ್ರವನ್ನು ಉಟ್ಟುಕೊಂಡು ಆಚಮನ ಮಾಡಿ ಊರ್ಧ್ವ ಪುಂಡ್ರಗಳನ್ನು ಧರಿಸಿಕೊಂಡ ಶಿಷ್ಯನಿಗೆ ಈ ಮಂತ್ರವನ್ನು ಉಪದೇಶಿಸಬೇಕು. ಹಾಗೂ ಆ ಮಂತ್ರದ ಅರ್ಥವನ್ನು ಚೆನ್ನಾಗಿ ತಿಳಿಸಿ ಹೇಳಬೇಕು. ಹೀಗೆ ಶಿಷ್ಯನು ಗುರುಗಳಿಂದ ಮಂತ್ರ ಹಾಗೂ ಮಂತ್ರಾರ್ಥ ಎರಡನ್ನು ತಿಳಿದು ಪಡೆದು ತನಗೆ

ಉಪದೇಶ ಮಾಡಿದ ಆಚಾರ್ಯರನ್ನು ವಸ್ತ್ರ ಅಲಂಕಾರ, ಆಭರಣ ಮುಂತಾದವುಗಳನ್ನು ಕೊಟ್ಟು ಪೂಜೆ ಮಾಡಬೇಕು.

ಈ ವಿಧಿಯಿಂದ ಯೋಗ್ಯನಾದ ಹರಿಭಕ್ತಿಯುಳ್ಳ ಗುರುವಿನಿಂದ ಈ ಲಕ್ಷ್ಮೀನಾರಾಯಣ ಮಂತ್ರವನ್ನು ಉಪದೇಶ ಪಡೆದು ಯಾವಜನ್ಮ ಪ್ರತಿನಿತ್ಯವೂ ಆ ಮಂತ್ರವನ್ನು ಜಪಿಸಿದವನು ವಿಷ್ಣುಲೋಕವನ್ನು ಹೊಂದುತ್ತಾನೆ. ಹೀಗೆ ಹೇಳಿ ಶ್ರೀಮಾನ್ ನಾರಾಯಣನು ವಿಧಿ ಪೂರ್ವಕವಾಗಿ ಶಂಖ ಚಕ್ರಾದಿ ಲಾಂಛನಗಳಿಂದ ತಪ್ತಮುದ್ರಾಧಾರಣವನ್ನು ಮಾಡಿಸಿ ದೀಕ್ಷಾದಾನ ಪೂರ್ವಕವಾಗಿ ಈ ಲಕ್ಷ್ಮೀನಾರಾಯಣ ಮಂತ್ರವನ್ನು ಉಪದೇಶ ಮಾಡಿದನು. ಅನಂತರ ಬ್ರಹ್ಮದೇವರು ನಾರದರಿಗೆ ತಪ್ತಮುದ್ರಾಧಾರಣವನ್ನು ಮಾಡಿಸಿ ಬಾಷ್ಮನಿಗೆ ವೈಷ್ಣವ ದೀಕ್ಷೆಯನ್ನು ಕೊಟ್ಟು ಲಕ್ಷ್ಮೀನಾರಾಯಣ ಮಂತ್ರವನ್ನು ಉಪದೇಶಿಸಿದರು. ಅದರಂತೆ ವಶಿಷ್ಠರಿಗೂ ವಿಧಿ ಪೂರ್ವಕವಾಗಿ ಆ ಮಂತ್ರೋಪದೇಶವನ್ನು ಮಾಡದರು. ವಶಿಷ್ಠರು ದಿಲೀಪರಾಜನಿಗೆ ಈ ಮಂತ್ರವನ್ನು ದೀಕ್ಷಾವಿಧಾನದಿಂದ ಸುದರ್ಶನಾದಿ ಮುದ್ರಾಧಾರಣದೊಂದಿಗೆ ಮಾಡಿಸಿದರು. ಮುಂದೆ ನಾರದರು ನೈಮಿಷಾರಣ್ಯದಲ್ಲಿರುವ ಶೌನಕಾದಿ ಮಹರ್ಷಿಗಳಿಗೆ ದೀಕ್ಷಾದಾನ ಪೂರ್ವಕವಾಗಿ ಈ ಮಂತ್ರೋಪದೇಶವನ್ನು ಮಾಡಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ವಶಿಷ್ಠ ದಿಲೀಪ ಸಂವಾದ ಎಂಬ ಎರಡುನೂರ ಐದನೇಯ ಅಧ್ಯಾಯ ಮುಗಿದುದು*



## ಪಾರ್ವತಿಗೆ ಮಹಾದೇವರಿಂದ ವಿಷ್ಣುಭಕ್ತಿಯ ನಿರೂಪಣೆ

ಅಧ್ಯಾಯ - ೨೦೬

**ದಿಲೀಪ:-** ಪೂಜ್ಯ ಗುರುಗಳೇ, ವಿಷ್ಣುಭಕ್ತಿಯ ಪ್ರಕಾರಗಳನ್ನು ನಿರೂಪಿಸಿರಿ.

**ವಶಿಷ್ಠ:-** ಪೂರ್ವಕಾಲದಲ್ಲಿ ಪಾರ್ವತಿಯು ಪರಮೇಶ್ವರನಿಗೆ ಇದೇ ಪ್ರಶ್ನೆಯನ್ನು ಮಾಡಿದ್ದಳು. ಅದಕ್ಕೆ ರುದ್ರದೇವರು ಹೇಳಿದ ಉತ್ತರವನ್ನು ಹೇಳುವೆ. ಕೇಳು.

**ಮಹಾದೇವ:-** ಪರ್ವತ ನಂದಿನಿ,

**"ಧನ್ಯಾಸಿ ಕೃತ ಪುಣ್ಯಾಸಿ ವಿಷ್ಣುಭಕ್ತಾಸಿ ಪಾರ್ವತಿ ।**
**ಸಾಧು ಪೃಚ್ಛಸಿ ಮಾಂದೇವಿ ಶ್ರೀಶಮಾಹಾತ್ಮ್ಯ ಮುತ್ತಮಮ್" ॥**

ನೀನು ಶ್ರೀಹರಿಯ ಮಹಿಮೆಯನ್ನು, ಅವನ ಭಕ್ತಿಯ ವಿಧಿಯನ್ನು ಪ್ರಶ್ನಿಸಿರುವೆ. ನೀನು ನಿಜವಾಗಿ ವಿಷ್ಣುಭಕ್ತಳು. ನೀನೇ ಧನ್ಯಳು. ಜನ್ಮಾಂತರದಲ್ಲಿ ಮಾಡಿದ ಪುಣ್ಯದಿಂದ ನಿನ್ನಲ್ಲಿ ಇಂಥ ವಿಷ್ಣುಭಕ್ತಿಯು ಉದಿಸಿದೆ. ಈಗ ನಿನಗೆ ಉತ್ತಮವಾದ ಭಗವದ್ಭಕ್ತಿಯ ಲಕ್ಷಣಗಳನ್ನು ಆ ಮಂತ್ರ ಹಾಗೂ ಸ್ವರೂಪವನ್ನು ಹೇಳುತ್ತೇನೆ ಕೇಳು. ಆಕಾರವಾಚ್ಯನಾದ ಶ್ರೀಹರಿಯು ಶ್ರೀ, ಭೂ, ನೀಲಾ ಎಂಬ ಮಹಾಲಕ್ಷ್ಮಿಯ ರೂಪಗಳಿಗೆಲ್ಲ ಪತಿಯಾಗಿದ್ದು ಮುಕ್ತಾಮುಕ್ತರಿಗೆ ನಿಯಾಮಕನಾಗಿದ್ದಾನೆ. ಅವನ ಉಪಾಸನಾ ಪ್ರಭೇದಗಳನ್ನು ಹೇಳುತ್ತೇನೆ.

''ತಸ್ಯೋಪಾದನ ಭೇದಾಂಶ್ಚ ಶೃಣು ವಚ್ಮಿ ಪುನಃ ಪೃಥಕ್ ।
ಆದ್ಯಂ ತು ವೈಷ್ಣವಂ ಪ್ರೋಕ್ತಂ ಶಂಖಚಕ್ರಾಂಕನಂ ಹರೇಃ ॥

ಶ್ರೀಹರಿಯ ಉಪಾಸನೆಯ ಬಗೆಗಳನ್ನು ಈಗ ಮತ್ತೆ ಹೇಳುತ್ತೇನೆ ಕೇಳು. ಮೊಟ್ಟಮೊದಲನೇಯ ವೈಷ್ಣವ ಚಿಹ್ನವೆಂದರೆ ಶಂಖಚಕ್ರಗಳ ಚಿಹ್ನ ಧಾರಣೆ ಮಾಡುವದು.

ಧಾರಣಂ ಚೋರ್ಧ್ವಪುಂಡ್ರಾಣಂ ತನ್ಮಂತ್ರಾಣಾಂ ಪರಿಗ್ರಹಃ
ಕೀರ್ತನಂ ಶ್ರವಣಂ ಚೈವ ವಂದನಂ ಪಾದಸೇವನಂ ॥
ತತ್ಪಾದೋದಕ ಸೇವಾ ಚ ತನ್ನಿವೇದಿತ ಭೋಜನಂ ॥
ಆರ್ಚನಂ ಚ ಜಪೋಧ್ಯಾನಂ ತನ್ನಾಮಸ್ಮರಣಂ ತಥಾ ॥

ಗೋಪೀಚಂದನಾದಿಗಳಿಂದ ಊರ್ಧ್ವಪುಂಡ್ರ ಅಥವಾ ನಾಮಧಾರಣೆ ಮಾಡುವದು, ವಿಷ್ಣುಮಂತ್ರಗಳ ನಿತ್ಯಜಪ. ಶ್ರೀಹರಿಯ ನಾಮಕೀರ್ತನ, ಶ್ರೀಹರಿಯ ಚರಿತ್ರೆ ಹಾಗೂ ಮಹಿಮಾಶ್ರವಣ, ಅವನ ನಮಸ್ಕಾರ, ಪಾದಪೂಜೆ, ಪಾದೋದಕ ನೈವೇದ್ಯ ಗ್ರಹಣ, ಮತ್ತು ಅವನ ಭಕ್ತರಾದ ವೈಷ್ಣವರ ಸೇವೆ, ಏಕಾದಶೀ ವ್ರತಾನುಷ್ಠಾನ, ದೇವರಿಗೆ ತುಳಸಿಯಿಂದ ಪೂಜೆ, ಮನೆಯ ಮುಂದೆ ತುಳಸೀ ವೃಕ್ಷವನ್ನು ಬೆಳೆಯುವುದು, ಜಪ, ಧ್ಯಾನ, ನಾಮಸ್ಮರಣೆ, ಶಾಸ್ತ್ರೋಕ್ತ ಪದ್ಧತಿಯಿಂದ ತ್ರಿಕಾಲ ಮಹಾಪೂಜೆ-ಇವು ಹದಿನಾರು ಭಗವಂತನ ಪೂಜೆಗಳು. ಸಂಸಾರ ಬಂಧನದಿಂದ ಮಾನವನನ್ನು ಮುಕ್ತನನ್ನಾಗಿ ಮಾಡಬಲ್ಲ ಭಕ್ತಿಯ ಪ್ರಕಾರಗಳು. ಎಲ್ಲ ದೇವತೆಗಳಿಗೂ ನನಗೂ, ಬ್ರಾಹ್ಮಣರಿಗೂ, ಆ ಶ್ರೀಹರಿಯು ಪೂಜನೀಯನು ಆಗಿದ್ದಾನೆ.

ಶಂಖ ಚಕ್ರಾದಿಚಿಹ್ನಗಳಿಂದ ಎರಡೂ ಬಾಹುಗಳ ಕೆಳಗೆ ಗುರುಗಳಿಂದ ಮುದ್ರಾಧಾರಣ ಮಾಡಿಸಿಕೊಳ್ಳಬೇಕು. ಇದರಿಂದ ಅವನಿಗೆ ಶ್ರೀಶ ಪದವು ಅನಾಯಾಸವಾಗಿ ದೊರೆಯುವದು. ಬ್ರಾಹ್ಮಣನು ಎರಡೂ ಬಾಹುಗಳ ಕೆಳಗೆ ಶಂಖ ಚಕ್ರ ಚಿಹ್ನವನ್ನು ಧರಿಸಬೇಕು. ಮೊದಲು ಹೋಮಮಾಡಿ ಶಂಖವನ್ನಾಗಲೀ ಚಕ್ರವನ್ನಾಗಲೀ ಎರಡೂ ಭುಜಗಳ ಕೆಳಗೆ ಧರಿಸಬೇಕು, ಯಾವುದೇ ವೇದೋಕ್ತ ಕರ್ಮವಿಧಾನವನ್ನು ಪ್ರಾರಂಭಿಸಬೇಕಾದರೆ ಶಂಖ, ಚಕ್ರ, ಅಥವಾ ಶಂಖಚಕ್ರ ಗದಾಪದ್ಮ ಹಾಗೂ ನಾರಾಯಣಮುದ್ರೆ ಇವುಗಳನ್ನೆಲ್ಲ ಧಾರಣಮಾಡಿಯೇ ಬ್ರಹ್ಮಕರ್ಮವನ್ನು ಪ್ರಾರಂಭಿಸಬೇಕು. ಈ ತರಹದ ಲಾಂಛನಗಳನ್ನು ಧರಿಸುವ ಮೊದಲು ಆ ಎಲ್ಲ ಆಯುಧಗಳನ್ನೂ ಬೆಂಕಿಯಲ್ಲಿ ಕಾಯಿಸಿ ಪವಿತ್ರವನ್ನಾಗಿ ಮಾಡಿ ಅನಂತರವೇ ಭುಜಮೂಲಗಳಲ್ಲಿ ಧರಿಸಬೇಕು. ಬ್ರಾಹ್ಮಣನಾದವನು ಎರಡೂ ಬಾಹುಮೂಲಗಳಲ್ಲಿ ಬೆಂಕಿಯಲ್ಲಿ ಕಾಯಿಸಿದ ಶಂಖಚಕ್ರಲಾಂಛನಗಳನ್ನು ಮಂತ್ರ ಜಪಿಸುತ್ತ ಧಾರಣಮಾಡಿಯೇ ಸರ್ವವಿಧವಾದ ದೇವತಾ ಹಾಗೂ ಪಿತೃಕಾರ್ಯವನ್ನು ಪ್ರಾರಂಭಿಸಬೇಕು.

ವಿಷ್ಣುಚಕ್ರಶಂಖಾದಿಗಳನ್ನು ಧರಿಸದ ಬ್ರಾಹ್ಮಣನನ್ನು ಶ್ರಾದ್ಧಕ್ಕೆ ಆಮಂತ್ರಿಸಿ ಭೋಜನ ಮಾಡಿಸಿದರೆ ಅದು ಪಿತೃಗಳಿಗೆ ಮುಟ್ಟದೇ ಅಸುರರಿಗೆ ಹೋಗಿ ಪಿತೃಗಳು ನಿರಾಶರಾಗಿ ಅವನ ಮನೆಯಿಂದ ಹಿಂತಿರುಗುವ ಪ್ರಸಂಗ ಬರುವದು. ತಪ್ತಚಕ್ರಾಂಕನ ಮಾಡಿಸಿಕೊಳ್ಳದ ಬ್ರಾಹ್ಮಣ ಶ್ರಾದ್ಧಕ್ಕೇ ತ್ಯಾಜ್ಯ. ಅಂಥವನಿಗೆ ಕೊಟ್ಟ ಗೋದಾನ ಭೂದಾನ, ಸುವರ್ಣ

ದಾನಗಳು ವ್ಯರ್ಥ, ವಿಷ್ಣು ಚಿಹ್ನದಿಂದ ಅಂಕಿತನಾಗದ ಮನುಷ್ಯನು ಸಾವಿರ ಯಜ್ಞಗಳನ್ನು ಮಾಡಿದ್ದರೂ ಅವನ ಕಡೆಯಿಂದ ದ್ರವ್ಯ ಸ್ವೀಕರಿಸಬಾರದು. ಅವನ ಅನ್ನ ಉಣ್ಣಬಾರದು.

**''ಗರ್ಹಿತಃ ಸರ್ವಲೋಕೇಷು ಬ್ರಾಹ್ಮಣ್ಯಾತ್ ಪ್ರಚ್ಯುತೋ ಭವೇತ್।**
**ಅಧೃತ್ವಾ ವಿಧಿನಾ ಚಕ್ರಂ ಬ್ರಾಹ್ಮಣೋ ಜ್ಞಾನದುರ್ಲಭಃ ॥''**

ವಿಧಿ ಪೂರ್ವಕವಾಗಿ ಚಕ್ರಾಂಕನ ಮಾಡಿಸಿಕೊಳ್ಳದ ಬ್ರಾಹ್ಮಣನು ಜ್ಞಾನಿಯೇ ಆಗಲೀ, ಅಜ್ಞಾನಿಯೇ ಆಗಲೀ ಸರ್ವಲೋಕಗಳಲ್ಲೂ ನಿಂದ್ಯನೂ ಬ್ರಾಹ್ಮಣತ್ವದಿಂದ ಚ್ಯುತನೂ ಆಗುತ್ತಾನೆ.

**''ಊರ್ಧ್ವ ಪುಂಡ್ರವಿಹೀನಸ್ತು ಶಂಖಚಕ್ರವಿವರ್ಜಿತಃ ।**
**ತಂ ಗರ್ದಭೇ ಸಮಾರೋಪ್ಯ ಬಹಿ: ಕುರ್ಯಾತ್ ಸ್ವಪತ್ತನಾತ್ ॥''**

ಊರ್ಧ್ವಪುಂಡ್ರ ಮತ್ತು ಶಂಖಚಕ್ರಲಾಂಛನ ಇಲ್ಲದಿರುವ ಬ್ರಾಹ್ಮಣನನ್ನು ಕತ್ತೆಯ ಮೇಲೆ ಕೂಡಿಸಿ ಊರು ಬಿಟ್ಟು ಹೊರಗೆ ಹಾಕಬೇಕು.

**''ಸ್ತ್ರೀ ಶೂದ್ರಾಣಾಂ ಸದಾಧಾರ್ಯಂ ಚಂದನೇನ ಸುಗಂಧಿನಾ ।**
**ಬಾಹುಮೂಲೇ ಲಿಖೇತ್ ಚಕ್ರಂ ತಪ್ತಂ ತು ಬ್ರಾಹ್ಮಣಸ್ಯ ವೈ ॥''**

ಸ್ತ್ರೀ ಹಾಗೂ ಶೂದ್ರರು ಸುಗಂಧಿ ಚಂದನದಿಂದ ಬಾಹುವಿನ ಕೆಳಗೆ ಚಕ್ರವನ್ನು ಬರೆದು ಧರಿಸಬೇಕು. ಬ್ರಾಹ್ಮಣರು ಮಾತ್ರ ತಪ್ತಮುದ್ರಾಧಾರಣೆಯನ್ನು ಮಾಡಬೇಕು.

**ತಪ್ತೇನೈವಾಂಕನಂ ಕುರ್ಯಾತ್ ಬ್ರಾಹ್ಮಣಸ್ಯ ವಿಧಾನತಃ ।**
**ಶ್ರೌತಸ್ಮಾರ್ತಾದಿಸಿದ್ಧ್ಯರ್ಥಂ ಮಂತ್ರಸಿದ್ಧ್ಯೈಃ ತಥೈವ ಚ ॥**
**ಹರೇಃ ಪೂಜಾಧಿಕಾರಾರ್ಥಂ ಚಕ್ರಂಧಾರ್ಯಂ ವಿಧಾನತಃ ॥**

ಬ್ರಾಹ್ಮಣರು ವಿಧಿಪೂರ್ವಕವಾಗಿ ವೇದೋಕ್ತ ಹಾಗೂ ಸ್ಮೃತಿಪ್ರೋಕ್ತ ಕರ್ಮಗಳ ಫಲಸಿದ್ಧಿಗಾಗಿ, ತಾವು ಪಠಿಸುವ ಮಂತ್ರಗಳ ಸಿದ್ಧಿಗಾಗಿಯೂ ತಪ್ತಮುದ್ರಾ ಧಾರಣೆ ಮಾಡಲೇಬೇಕು. ತಪ್ತ ಮುದ್ರೆಧರಿಸಿದವರಿಗೆ ಮಾತ್ರ ಶ್ರೀಹರಿಯ ಪೂಜಾಧಿಕಾರ ಬರುವದು.

**ವೈಷ್ಣವತ್ವಸ್ಯ ಸಿದ್ಧ್ಯರ್ಥಂ ಜ್ಞಾನಸಿದ್ಧ್ಯರ್ಥಂ ಏವ ಚ ।**
**ಪ್ರತಪೇತ್ ಚಕ್ರಶಂಖಾಭ್ಯಾಂ ಹುತ್ವಾ ಹೋಮಮಂ ವಿಧಾನತಃ ॥**

ವೈಷ್ಣವತ್ವವು ಸಿದ್ಧಿಸಬೇಕಾದರೆ ಹಾಗೂ ಜ್ಞಾನಸಿದ್ಧಿಯಾಗಬೇಕಾದರೆ ವಿಧಿಪೂರ್ವಕವಾಗಿ ಹೋಮ ಮಾಡಿಯೇ ಶಂಖಚಕ್ರಕಾಯಿಸಿ ಗುರುಗಳಿಂದ ದೇಹದಲ್ಲಿ ಮುದ್ರೆಯನ್ನು ಧರಿಸಬೇಕು.

**ಅನ್ಯೈರ್ನ ದಾಹಯೇದ್ಗಾತ್ರಂ ಬ್ರಾಹ್ಮಣೋ ಹರಿಲಾಂಛನಾತ್ ।**
**ಶಂಖಚಕ್ರಗದಾಖಡ್ಗ ಶಾರ್ಙ್ಗದನ್ಯೈರ್ಹರೇರಪಿ ॥**

ಹರಿಯ ಲಾಂಛನವಾದ ಶಂಖಚಕ್ರಗಳನ್ನು ಸ್ವಯಂ ಧರಿಸಿದ ವೈಷ್ಣವರಿಂದಲೇ ಮುದ್ರೆಗಳನ್ನು ಸ್ವೀಕರಿಸಬೇಕು. ಹರಿಯ ಚಿಹ್ನೆಗಳಿಲ್ಲದ ಬೇರೆ ಮುದ್ರೆಗಳನ್ನು ಸರ್ವಥಾ ಧರಿಸಕೂಡದು. ಶ್ರೀಹರಿಯ ಶಂಖಚಕ್ರಗದಾಖಡ್ಗಶಾಂರ್ಙ್ಗ ಧನುಸ್ಸು ಈ ಲಾಂಛನಗಳ

ಹೊರತು ಬೇರೆ ಯಾವ ಯಾವ ಲಾಂಛನಗಳಿಂದಲೂ ದೇಹವನ್ನು ಸುಡಿಸಿಕೊಳ್ಳಬಾರದು. ಬೇರೆ ಲಾಂಛನಗಳನ್ನು ಧರಿಸಿದ ಮನುಷ್ಯನು ಶ್ರಾದ್ಧಾದಿ ಕ್ರಿಯೆಗಳಿಗೆ ಅರ್ಹನಾಗುವದಿಲ್ಲ. ಶಂಖಚಕ್ರಾದಿ ವೈಷ್ಣವ ಲಾಂಛನ ಧರಿಸದ ಮನುಷ್ಯನು ಅವೈಷ್ಣವ. ಈ ಲಾಂಛನಗಳನ್ನು ಧರಿಸಿದ ಚಂಡಾಲನೂ ಸಹ ಮೂರು ಲೋಕಗಳನ್ನು ಪಾವನಗೊಳಿಸುತ್ತಾನೆ.

**''ವೈಷ್ಣವೋ ವರ್ಣಬಾಹ್ಯೋऽಪಿ ಪುನಾತಿ ಭುವನತ್ರಯಮ್ ।''**
**ದಕ್ಷಿಣೇ ತು ಭುಜೇ ಬಿಭೃಯಾದ್ ವೈ ಸುದರ್ಶನಮ್ ।**
**ಸವ್ಯೇ ತು ಶಂಖಂ ಬಿಭೃಯಾತ್ ಇತಿ ಬ್ರಹ್ಮವಿದೋ ವಿದುಃ ।**
**ಏವಂ ಮಹೋಪನಿಷದಿ ಪ್ರೋಕ್ತಂ ಚಕ್ರಾದಿಧಾರಣಮ್ ।**
**ತಥೈವ ಸಾಮ್ನಿ ಯಜುಷಿ ಋಷಿಪ್ರೋಕ್ತಂ ಶುಭಾನನೇ ॥**

ಬ್ರಾಹ್ಮಣರು ಬಲತೋಳಿನಲ್ಲಿ ಸುದರ್ಶನವನ್ನೂ ಎಡತೋಳಿನಲ್ಲಿ ಶಂಖವನ್ನೂ ಧರಿಸಬೇಕು ಎಂದು ಬ್ರಹ್ಮಜ್ಞಾನಿಗಳ ಅಭಿಪ್ರಾಯ.

ಈ ಶಂಖಚಕ್ರಾದಿ ಮುದ್ರಾಧಾರಣೆಯು ಮಹೋಪನಿಷತ್ತಿನಲ್ಲಿ ಮತ್ತು ಸಾಮವೇದ, ಋಗ್ವೇದ, ಯಜುರ್ವೇದಗಳಲ್ಲೂ ವಿಹಿತವಾಗಿದೆ.

**''ಅತಪ್ತತನೂರ್ನತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ಸಮಾಸತ**
**ಇತ್ಯಾಪತಂಬಶಾಖಾಯಾಂ ಪ್ರೋಕ್ತಂ ಚಕ್ರಸ್ಯಧಾರಣಮ್ ॥''**

ಹರಿಯ ಚಿಹ್ನೆಗಳಾದ ಶಂಖಚಕ್ರಾದಿಗಳಿಂದ ದೇಹವು ತಪ್ತವಾಗದಿದ್ದರೆ ಮನುಷ್ಯರಿಗೆ ಶ್ರೇಯಸ್ಸಾಗಲೀ ಅಭ್ಯುದಯವಾಗಲೀ ಆಗುವದಿಲ್ಲ. ತಪ್ತಮುದ್ರೆಯನ್ನು ಧರಿಸಿದವರು ಎಲ್ಲ ವಿಧ ಕಲ್ಯಾಣವನ್ನು ಹೊಂದುತ್ತಾರೆ.

**''ಪ್ರತೇ ವಿಷ್ಣೋ ಅಬ್ಜಚಕ್ರೇ ಪವಿತ್ರೇ ಚರ್ಷಣೇಂದ್ರಾಃ ॥**
**ಮೂಲೇ ಬಾಹ್ವೋಃ ದಧತೇऽನ್ಯೇ ಪುರಾಣಾ ಲಿಂಗಾನ್ಯಂಗ ತಾವಕಾನ್ಯರ್ಪಯಂತಿ.''**

ವಿಷ್ಣುವೇ ಈ ಸಂಸಾರಸಮುದ್ರವನ್ನು ದಾಟಲಿಕ್ಕಾಗಿ ಜ್ಞಾನಿಗಳಾದವರು ನಿನ್ನ ಪವಿತ್ರವಾದ ಶಂಖಚಕ್ರ ಚಿಹ್ನಗಳನ್ನು ಎರಡೂ ಬಾಹುಗಳ ಬುಡದಲ್ಲಿ ಧರಿಸುತ್ತಾರೆ. ಇಂಥ ಪವಿತ್ರವಾದ ಶಂಖಚಕ್ರಾದಿಲಾಂಛನಗಳನ್ನು ಜ್ಞಾನವೃದ್ಧರೂ, ತಪೋವೃದ್ಧರೂ ತಮ್ಮ ಭಕ್ತರಿಗೂ ಶಿಷ್ಯರಿಗೂ ವಿಷ್ಣುಲಿಂಗವಾದ ಲಾಂಛನಗಳೆಂದು ವಿಧಿಪೂರ್ವಕವಾಗಿ ಧಾರಣ ಮಾಡಿಸುತ್ತಾರೆ.

**ಚರಣಂ ಪವಿತ್ರಂ ವಿತತಂ ಪುರಾಣಂ ವಾಙ್ಮಯಂ ಶುಭಂ ।**
**ತೇನ ಚಕ್ರೇಣ ಸಂತಪ್ತಾಃ ತರೇಯುಃ ಪಾತಕಾಂಬುಧಿಮ್ ॥**

ಪವಿತ್ರವಾದ ಸುದರ್ಶನ ಚಕ್ರಕ್ಕೆ ಚರಣ, ಪವಿತ್ರ, ನೇಮಿ, ಪವಿ, ಚಕ್ರ, ಸುದರ್ಶನ, ಸಹಸ್ರಾರ, ಪ್ರಾಕೃತಘ್ನ, ಲೋಕದ್ವಾರ, ಮಹೌಜಸ ಎಂದು ಬಗೆಬಗೆಯ ಹೆಸರುಗಳಿರುತ್ತವೆ. ಇಂಥ ಸುದರ್ಶನ ಚಕ್ರದಿಂದ ಚಿಹ್ನಿತರಾದವರು ಪಾಪ ಸಾಗರವನ್ನು ದಾಟುತ್ತಾರೆ.

**''ಯೇ ಕಂಠಲಗ್ನತುಲಸೀನಲಿನಾಕ್ಷಮಾಲಾಃ ।**
**ಯೇ ಬಾಹು ಮೂಲಪರಿಚಿಹ್ನಿತಶಂಖಚಕ್ರಾಃ ॥**

**ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಃ ।**
**ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ ॥''**

ಕೊರಳಲ್ಲಿ ತುಳಸೀ ಮಾಲೆ, ಹಾಗೂ ಕಮಲಾಕ್ಷಿ ಮಾಲೆಗಳನ್ನು ಹಾಕಿಕೊಂಡ ಕೈ, ಮೇಲೆ ಶಂಖಚಕ್ರಗಳನ್ನು ಧರಿಸಿದ, ಹಣೆಯ ಮೇಲೆ ಊರ್ಧ್ವಪುಂಡ್ರಗಳು ಹೊಳೆಯುವ ವೈಷ್ಣವರು ಈ ಭೂಲೋಕಗಳನ್ನು ಪವಿತ್ರಗೊಳಿಸುತ್ತಾರೆ.

**ಅಂಕಯೇತ್ತಪ್ತಚಕ್ರಾದ್ಯೈರಾತ್ಮನೋ ಬಾಹುಮೂಲಯೋಃ ।**
**ಕಲತ್ರಾಪತ್ಯಭೃಲತೇಷು ಪಶ್ವಾದಿಷು ಸಮಂಕಯೇತ್ ॥**

ತನ್ನ ಬಾಹುಗಳ ಕೆಳಗೆ ಅಗ್ನಿಯಲ್ಲಿ ಕಾಯಿಸಿದ ಶಂಖಚಕ್ರಾದಿಗಳನ್ನು ಧಾರಣಮಾಡಬೇಕು. ಮನೆಯಲ್ಲಿ ಹೆಂಡತಿ, ಮಕ್ಕಳು, ಸೇವಕರಿಗೂ ಶಂಖಚಕ್ರಾದಿಗಳನ್ನು ಧಾರಣ ಮಾಡಿಸಬೇಕು. ದನಕರುಗಳ ಮೈಮೇಲೆ ಕೂಡ ಶಂಖಚಕ್ರಾದಿಗಳು ಎದ್ದು ಕಾಣುವಂತೆ ಮಾಡಬೇಕು.

**''ಇತ್ಯೇವಂ ಶ್ರುತಯಃ ಸರ್ವಾ ಃ ಕಥಯಂತಿ ವರಾನನೇ''**

ಹೀಗೆ ಎಲ್ಲ ಶ್ರುತಿಗಳೂ ಸಾರುತ್ತವೆ.

**''ದ್ವಿವಿಧಂ ವೈಷ್ಣವಂ ಪ್ರೋಕ್ತಂ ಬಾಹ್ಯ ಮಾಭ್ಯಂತರಂ ತಥಾ ।**
**ಶಂಖಚಕ್ರಾದಿಭಿರ್ಬಾಹ್ಯ ಮಾಂತರಂ ವೀತರಾಗತಾ ॥**

ವೈಷ್ಣವತ್ವ ಎರಡು ವಿಧ. ಒಂದು ಬಾಹ್ಯ ಇನ್ನೊಂದು ಆಂತರ. ಶಂಖ ಚಕ್ರಾದಿಗಳನ್ನು ಧರಿಸುವದು ಬಾಹ್ಯವೈಷ್ಣವತ್ವ. ಕಾಮಕ್ರೋಧಾದಿಗಳನ್ನು ಬಿಟ್ಟು ವೇದಶಾಸ್ತ್ರಗಳನ್ನು ಅಧ್ಯಯನ, ಭೂತದಯೆ ಶಾಂತಿ, ವೈರಾಗ್ಯ, ಯೋಗಾಭ್ಯಾಸ, ಭಗವದ್ಭಕ್ತಿ, ವಿಷ್ಣುಪೂಜೆ ಮುಂತಾದವುಗಳು ಆಂತರ ವೈಷ್ಣವತ್ವ ಎನಿಸುವವು. ಆದುದರಿಂದ ಶಂಖ ಚಕ್ರಾದಿ ವಿಷ್ಣುವಿನ ಆಯುಧಗಳನ್ನು ಧರಿಸುವದು ಮುಖ್ಯವಾದ ವೈಷ್ಣವತ್ವದ ಲಕ್ಷಣವೆನಿಸಿದೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಪಾರ್ವತಿಗೆ ಮಹಾದೇವರಿಂದ ವಿಷ್ಣುಭಕ್ತಿಯ ನಿರೂಪಣೆ ಎಂಬ*
*ಎರಡುನೂರ ಆರನೇಯ ಅಧ್ಯಾಯ ಮುಗಿದುದು*

—o—

**ಶಂಕರ:-** ಶುಭಾಂಗಿ, ಊರ್ಧ್ವಪುಂಡ್ರದ ಮಹಿಮೆಯನ್ನು ಹೇಳುತ್ತೇನೆ ಕೇಳು. ಊರ್ಧ್ವಪುಂಡ್ರ ಎಂಬ ಹೆಸರಿನ ಗೋಪೀಚಂದನದಿಂದ ಬಳಿದುಕೊಂಡ ಉದ್ದ ನಾಮದ ಮಧ್ಯದಲ್ಲಿ ಲಕ್ಷ್ಮಿಯಿಂದ ಕೂಡಿಕೊಂಡು ಸಾಕ್ಷಾತ್ ಶ್ರೀಹರಿಯೇ ಕುಳಿತಿರುತ್ತಾನೆ. ಆದುದರಿಂದ ಊರ್ಧ್ವಪುಂಡ್ರವನ್ನು ಧರಿಸಿದವನ ಶರೀರವು ಲಕ್ಷ್ಮೀ-ನಾರಾಯಣರ ಮಂಗಳಮಂದಿರ ಎನಿಸುತ್ತದೆ. ಸ್ನಾನ ಮಾಡಿ ಊರ್ಧ್ವಪುಂಡ್ರವನ್ನು ಅರ್ಥಾತ್ ವೈಷ್ಣವ ಚಿಹ್ನ ಎನಿಸಿದ ದ್ವಾದಶ ನಾಮಗಳನ್ನು ಧರಿಸಿದವ ಸರ್ವತೀರ್ಥಗಳಲ್ಲಿ ಸ್ನಾನಮಾಡಿದಂತೆ. ಸರ್ವ ಯಜ್ಞಗಳಲ್ಲಿಯೂ ದೀಕ್ಷೆ ಪಡೆದಂತೆ. ಅದನ್ನು ಧರಿಸಿದ ವಿಷ್ಣು ಭಕ್ತನನ್ನು ನೋಡಿದರೂ ನಮಿಸಿದರೂ ಮಹಾಪುಣ್ಯ. ಅದನ್ನು ಧರಿಸಿ ಮಾಡಿದ ಯಜ್ಞ, ದಾನ, ತಪಸ್ಸು ಹೋಮ, ಎಲ್ಲದಕ್ಕೂ ಅನಂತ ಪುಣ್ಯ ಫಲ. ಊರ್ಧ್ವಪುಂಡ್ರ ಧರಿಸದೇ ಮಾಡುವ ಎಲ್ಲ ಕರ್ಮಗಳೂ ವ್ಯರ್ಥ. ಅದಿಲ್ಲದೆ ಮಾಡಿದ ಸಂಧ್ಯಾದಿ ಕರ್ಮಗಳ ಫಲವನ್ನು ರಾಕ್ಷಸರು ಒಯ್ಯುತ್ತಾರೆ.

**''ನ ತಿರ್ಯಗ್ ಧಾರಯೇದ್ ವಿದ್ವಾನಾಪದ್ಯಪಿ ಕದಾಚನ''**

ಎಂಥ ಆಪತ್ಕಾಲದಲ್ಲೂ ಅಡ್ಡ ನಾಮವನ್ನು ಹಚ್ಚಬಾರದು.

**''ವಿಪ್ರಾಣಾ ಮೂರ್ಧ್ವ ಪುಂಡ್ರಂ ಸ್ಯಾತ್ತಿಲಕಂ ತು ಮಹೀಭೃತಃ ।**
**ಪಟ್ಟಾಕಾರಂ ತು ವೈಶ್ಯಾನಾಂ ಶೂದ್ರಾಣಾಂ ವೈ ತ್ರಿಪುಂಡ್ರಕಮ್ ॥**

ಬ್ರಾಹ್ಮಣರು ಉದ್ದನಾಮವನ್ನು ಹಚ್ಚಬೇಕು. ರಾಜರು ತಿಲಕವನ್ನು ಧರಿಸಬೇಕು. ವೈಶ್ಯರು ಪಟ್ಟಿಯ ಆಕಾರದ ನಾಮವನ್ನು ಧರಿಸಬೇಕು. ಶೂದ್ರರು ಮೂರು ನಾಮಗಳನ್ನು ಹಚ್ಚಬೇಕು.

**''ಊರ್ಧ್ವಪುಂಡ್ರಂ ಮೃದಾ ಕಾರ್ಯಂ ಕಸ್ತೂರ್ಯಾ ತಿಲಕಂ ತಥಾ**
**ಪಟ್ಟಾಕಾರಂ ತು ಗಂಧೇನ ಭಸ್ಮನೈವ ತ್ರಿಪುಂಡ್ರಕಮ್ ॥**

ಉದ್ದನಾಮವನ್ನು ಗೋಪೀ ಚಂದನ ಮೃತ್ತಿಕೆಯಿಂದ ಧರಿಸಬೇಕು. ತಿಲಕವನ್ನು ಕಸ್ತೂರಿಯಿಂದ ಧರಿಸಬೇಕು. ಪಟ್ಟಿಯ ಆಕಾರದ ನಾಮವನ್ನು ಗಂಧದಿಂದ ಧರಿಸಬೇಕು. ಭಸ್ಮದಿಂದ ಮೂರು ನಾಮವನ್ನು ಧರಿಸಬೇಕು.

**''ಊರ್ಧ್ವಪುಂಡ್ರಂ ತು ಸರ್ವೇಷಾಂ ನ ನಿಷಿದ್ಧಂ ಕದಾಚನ ।**
**ಧಾರಯೇತ್ ಕ್ಷತ್ರಿಯಾದ್ಯೋಽಪಿ ವಿಷ್ಣುಭಕ್ತೋ ಭವೇದ್ಯದಿ ॥''**

ಊರ್ಧ್ವಪುಂಡ್ರ ಧಾರಣೆಯು ಯಾರಿಗೂ ನಿಷಿದ್ಧವಲ್ಲ. ವಿಷ್ಣು ಭಕ್ತರಾಗಿದ್ದರೆ ಕ್ಷತ್ರಿಯ, ವೈಶ್ಯ, ಶೂದ್ರರೂ ಸಹ ಗೋಪೀಚಂದನದಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು.

**''ವಿಪ್ರಾಣಾಂ ನೈವ ಕಾರ್ಯಂ ಸ್ಯಾತ್ ತಿರ್ಯಕ್ ಪಟ್ಟಾಧಿಧಾರಣಮ್।**
**ನಾರಾಯಣಾತ್ ಪರೇಶಾನಾದನ್ಯೇಷಾಮರ್ಚನಂ ನ ತು ॥''**

ಬ್ರಾಹ್ಮಣರಾದವರು ತಿರ್ಯಕ್ ಪಟ್ಟಧಾರಣಾದಿಗಳನ್ನು ಮಾಡಬಾರದು. ನಾರಾಯಣನ ಹೊರತು ಬೇರೆ ದೇವರನ್ನು ಪೂಜಿಸಬಾರದು.

**''ಬ್ರಾಹ್ಮಣಃ ಕುಲಜೋ ವಿದ್ವಾನ್ ಭಸ್ಮಧಾರೀ ಭವೇದ್ಯದಿ ।**
**ವರ್ಜಯೇತ್ ತಾದೃಶಂ ದೇವಿ ಮದ್ಯೋಚ್ಛಿಷ್ಟಂ ಘಟಂ ಯಥಾಂ ॥**

ಕುಲೀನನಾದ ಬ್ರಾಹ್ಮಣನು ಭಸ್ಮವನ್ನು ಧರಿಸಿದರೆ ಮದ್ಯ ತುಂಬಿದ ಕೊಡದಂತೆ ಅವನನ್ನು ಬಿಟ್ಟುಬಿಡಬೇಕು.

**'ತ್ರಿಪುಂಡ್ರಂ ಶೂದ್ರಕಲ್ಪಾನಾಂ ಶೂದ್ರಣಾಂ ಚ ವಿಧೀಯತೇ ॥**
**ತ್ರಿಪುಂಡ್ರಧಾರಣಾದ್ ವಿಪ್ರಃ ಪತಿತಃ ಸ್ಯಾನ್ನಸಂಶಯಃ''**

ಮೂರು ಪುಂಡ್ರಗಳನ್ನು ಹಚ್ಚುವದು ಶೂದ್ರರಿಗೂ ಶೂದ್ರಸಮರಿಗೂ ಹೇಳಲ್ಪಟ್ಟ ವಿಧಿ. ಮೂರು ಪುಂಡ್ರಧಾರಣದಿಂದ ಬ್ರಾಹ್ಮಣನು ಪತಿತನಾಗುತ್ತಾನೆ.

ಹರಿಯ ಪಾದದ ಆಕಾರದಲ್ಲಿ ಊರ್ಧ್ವಪುಂಡ್ರವನ್ನು ಧರಿಸಿ ಮಧ್ಯದಲ್ಲಿ ಛಿದ್ರವನ್ನು ಮಾಡಬೇಕು. ಸ್ತ್ರೀಯರೂ ಸಹ ಊರ್ಧ್ವಪುಂಡ್ರವನ್ನು ದಂಡಾಕಾರದಲ್ಲಿ ಧರಿಸಬೇಕು. ಊಧ್ವಪುಂಡ್ರದ ನಡುವೆ ಛಿದ್ರ ಮಾಡದಿದ್ದರೆ ಅದು ನಾಯಿಯ ಪಾದ ಎನಿಸುತ್ತದೆ. ಆದುದರಿಂದ ಹಣೆಯ ಮೇಲೆ ಮೊದಲು ಗೋಪೀಚಂದನದ ಜಲಮಿಶ್ರಿತ ಲೇಪದಿಂದ ಉದ್ದ ನಾಮವನ್ನು ಧರಿಸಿ ಮಧ್ಯದಲ್ಲಿ ನೀರು ಅಥವಾ ಬಟ್ಟೆಯಿಂದ ಛಿದ್ರವನ್ನು ಮಾಡಬೇಕು. ವೆಂಕಟಗಿರಿ, ದ್ವಾರಕಾ, ವಾಸುದೇವ ಸರೋವರ ಅಥವಾ ಗಂಗಾ ತೀರ, ಸಮುದ್ರತೀರ ಶ್ರೀರಂಗ, ಶ್ರೀಕೂರ್ಮ, ನರಸಿಂಹಾಚಲ ಮುಂತಾದ ಪುಣ್ಯ ಕ್ಷೇತ್ರ ಗಳಲ್ಲಿಯ ಮಣ್ಣಿನಿಂದಾಗಲೀ ಅಥವಾ ತುಲಸೀಗಿಡದ ಬುಡದಲ್ಲಿನ ಮಣ್ಣಿನಿಂದಾಗಲೀ ಮೃತ್ತಿಕೆಯನ್ನು ತೆಗೆದುಕೊಂಡು ಬಂದು ಅದರಲ್ಲಿ ವಿಷ್ಣುಪಾದೋದಕವನ್ನು ಬೆರೆಸಿ ಹಣೆ ಹಾಗೂ ಇತರ ಅಂಗಗಳಲ್ಲಿ ದ್ವಾದಶ ನಾಮಗಳನ್ನು ಧರಿಸಬೇಕು. ಊರ್ಧ್ವಪುಂಡ್ರಧಾರಣಕ್ಕಾಗಿ ತೆಗೆದುಕೊಂಡ ಕಪ್ಪು ಮಣ್ಣು ಶಾಂತಿಕರ. ಕೆಂಪು ಶ್ರೀಹರಿಗೆ ಪ್ರೀತಿಕರ. ಹಳದಿ ಇದ್ದರೆ ಐಶ್ವರ್ಯಪ್ರದ. ಬೆಳ್ಳಗಿದ್ದರೆ ಮೋಕ್ಷಪ್ರದ. ಮೂಗಿನ ಮೂಲದಿಂದ ಅಂದರೆ ಎರಡೂ ಹುಬ್ಬುಗಳ ಮಧ್ಯಭಾಗದಿಂದಾರಂಭಿಸಿ ತಲೆಯ ಕೂದಲಿನವರೆಗೆ ಹಣೆಯ ಮೇಲೆ ಶುಭ್ರವಾದ ಗೋಪೀಚಂದನಾದಿ ಮೃತ್ತಿಕೆಯಿಂದ ಹಣೆಯ ನಾಮವನ್ನು ಹಚ್ಚಬೇಕು. ಹಣೆಯಲ್ಲಿ ''ಕೇಶವಾಯ ನಮಃ'' ಎಂದು ನಾಮವನ್ನು ಹಚ್ಚಬೇಕು. ''ನಾರಾಯಣಾಯ ನಮಃ'' ಎಂದು ಹೊಟ್ಟೆಯ ಮಧ್ಯಭಾಗದಲ್ಲಿ, ಮಾಧವಾಯನಮಃ ಎಂದು ಎದೆಯ ಮೇಲೆ, ಗೋವಿಂದಾಯನಮಃ ಎಂದು ಕೊರಳಿಗೆ, ವಿಷ್ಣವೇ ನಮಃ ಎಂದು ಹೊಟ್ಟೆಯ ಬಲಬದಿಯಲ್ಲಿ, ಮಧುಸೂದನಾಯ ನಮಃ ಎಂದು ಬಲತೋಳಿನ ಮೇಲೆ, ತ್ರಿವಿಕ್ರಮಾಯ ನಮಃ ಎಂದು ಬಲಕೊರಳಿನಲ್ಲಿ, ವಾಮನಾಯ ನಮಃ ಎಂದು ಹೊಟ್ಟೆಯ ಮೇಲೆ ಎಡಭಾಗದಲ್ಲಿ, ಶ್ರೀಧರಾಯ ನಮಃ ಎಂದು ಬಲತೋಳಿನ ಮೇಲೆ, ಹೃಷೀಕೇಶಾಯ ನಮಃ ಎಂದು ಬಲಕೊರಳಿನಲ್ಲಿ, ಪದ್ಮನಾಭಾಯನಮಃ ಎಂದು ಬೆನ್ನಿನಲ್ಲಿ, ದಾಮೋದರಾಯ ನಮಃ ಎಂದು ಹಿಂಬದಿಯಲ್ಲಿ ಕೊರಳಿನ ಮೇಲೆ ನಾಮವನ್ನು ಧರಿಸಬೇಕು. ವಾಸುದೇವಾಯ ನಮಃ ಎಂದು ಕೈ ತೊಳೆದ ನೀರಿನಿಂದ ತಲೆಯ ಮೇಲೆ ಪ್ರೋಕ್ಷಣ ಮಾಡಿಕೊಳ್ಳಬೇಕು. ಹಣೆ, ತೋಳು, ಬೆನ್ನು, ಕೊರಳುಗಳಲ್ಲಿ ನಾಲ್ಕು ನಾಲ್ಕು ಬೊಟ್ಟು ಉದ್ದ ಊರ್ಧ್ವಪುಂಡ್ರಗಳನ್ನೂ ಹೊಟ್ಟೆಯ ಮೇಲಿನವುಗಳನ್ನು ಮೂರು ನಾಮ ಹತ್ತು ಅಂಗುಲ ಉದ್ದವಾಗಿಯೂ ಧರಿಸಬೇಕು. ಎರಡೂ ತೋಳು ಹಾಗೂ ಎದೆಯ

ಮೇಲಿನ ನಾಮಗಳನ್ನು ಎಂಟು ಬೆರಳಿನ ಪ್ರಮಾಣದಲ್ಲಿ ಧರಿಸಬೇಕು. ಹೀಗೆ ಹನ್ನೆರಡು ನಾಮಗಳನ್ನು ಮೇಲೆ ಹೇಳಿದ ಭಗವನ್ಮೂರ್ತಿಗಳನ್ನು ಧ್ಯಾನ ಮಾಡುತ್ತ ಮಂತ್ರೋಚ್ಚಾರಣ ಪೂರ್ವಕವಾಗಿ ಧರಿಸಬೇಕು. ಎಲ್ಲ ನಾಮಗಳ ನಡುವೆ ಅರಿಷಣ, ಕುಂಕುಮವನ್ನು ಧರಿಸಬೇಕು. ಬ್ರಾಹ್ಮಣರು ಹನ್ನೆರಡು ನಾಮಗಳನ್ನು, ಕ್ಷತ್ರಿಯರು ನಾಲ್ಕು, ವೈಶ್ಯರು ಎರಡು, ಸ್ತ್ರೀ ಶೂದ್ರರು ಒಂದು ಅಂದರೆ ಹಣೆಯ ಮೇಲೆ ಮಾತ್ರ ನಾಮವನ್ನು ಧರಿಸಬೇಕು. ಕ್ಷತ್ರಿಯರಾದ ರಾಜರು ಹಣೆ, ಎದೆ ಎರಡೂ ತೋಳುಗಳ ಮೇಲೆ ನಾಲ್ಕು ನಾಮಗಳನ್ನು ಧರಿಸಬೇಕು. ವೈಶ್ಯರು ಹಣೆ ಮತ್ತು ಎದೆಗಳ ಮೇಲೆ ಎರಡು ನಾಮಗಳನ್ನು ಧರಿಸಬೇಕು. ಸ್ತ್ರೀ ಶೂದ್ರರು ಹಣೆಯಲ್ಲಿ ಒಂದು ನಾಮವನ್ನು ಧರಿಸಬೇಕು.

ದ್ವಾದಶ ನಾಮಗಳನ್ನು ಹಚ್ಚುವವರು ಹಣೆಯಿಂದ ಆರಂಭಿಸಿ ಕೇಶವಾದಿ ನಾಮಗಳನ್ನು ಉಚ್ಚರಿಸುತ್ತ ಹಚ್ಚಬೇಕು. ಕ್ಷತ್ರಿಯರು ವಾಸುದೇವ ನಾರಾಯಣ ಪ್ರದ್ಯುಮ್ನ ಅನಿರುದ್ಧ ಈ ನಾಲ್ಕು ದೇವತೆಗಳ ಹೆಸರಿನಿಂದ ನಾಲ್ಕು ನಾಮಗಳನ್ನು ಹಚ್ಚಬೇಕು. ವೈಶ್ಯರು ಗೋವಿಂದ ಕೃಷ್ಣರ ಸ್ಮರಣ ಮಾಡುತ್ತ ಎರಡು ನಾಮಗಳನ್ನು ಧರಿಸಬೇಕು. ಸ್ತ್ರೀ ಶೂದ್ರರು ನಾರಾಯಣನನ್ನು ನೆನೆಯುತ್ತ ಒಂದೇ ನಾಮವನ್ನು ಹಣೆಯ ಮೇಲೆ ಧರಿಸಬೇಕು. ಹಣೆಯ ಮೇಲಿನ ನಾಮವನ್ನು ಹರಿಯಪಾದದ ಆಕಾರವುಳ್ಳದ್ದಾಗಿ ಅಥವಾ ದುಂಡಾಕಾರದ್ದಾಗಿ ಧರಿಸಬೇಕು. ಸುದರ್ಶನ ಮೊದಲಾದ ವಿಷ್ಣು ಲಾಂಛನವಾದ ಮುದ್ರೆಗಳನ್ನು ಆ ಊರ್ಧ್ವಪುಂಡ್ರಗಳ ಒಳಗೆ ಹೊರಗೆ ಮೇಲೆ ಕೆಳಗೆ ಧರಿಸಬೇಕು. ಹಾಗೂ ತುಳಸೀ ಮಾಲೆ ಕಮಲಾಕ್ಷಮಾಲೆಗಳನ್ನು ಧರಿಸಿದ ವಿಷ್ಣುಭಕ್ತರು ದರ್ಶನ ಮಾತ್ರದಿಂದಲೇ ಜನರ ಪಾಪಗಳನ್ನೆಲ್ಲ ಪರಿಹರಿಸುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಊರ್ಧ್ವಪುಂಡ್ರಧಾರಣವಿಧಿ ಎಂಬ ಎರಡುನೂರ ಏಳನೇಯ ಅಧ್ಯಾಯ ಮುಗಿದುದು*



## ಅಷ್ಟಾಕ್ಷರ ಮಂತ್ರದ ವಿವರಣೆ — ಅಧ್ಯಾಯ - ೨೦೮

**ಶಂಕರ:-** ವಿಷ್ಣುಭಕ್ತರಲ್ಲದವರು ಉಪದೇಶಿಸಿದ ಮಂತ್ರದಿಂದ ಎಂದೂ ಮನುಷ್ಯರಿಗೆ ಸದ್ಗತಿ ಆಗುವದಿಲ್ಲ. ಅವೈಷ್ಣವರಿಂದ ಉಪದೇಶ ತೆಗೆದುಕೊಂಡರೆ, ಮತ್ತೆ ವಿಧಿಪೂರ್ವಕವಾಗಿ ವಿಷ್ಣುಭಕ್ತರಾದ ಗುರುಗಳಿಂದಲೇ ಈ ಮೂಲ ಮಂತ್ರದ ಉಪದೇಶ ಪಡೆಯಬೇಕು. ಈ ಮಂತ್ರದ ಉಪದೇಶವನ್ನು ಪಡೆಯುವದಕ್ಕಿಂತ ಮೊದಲು ಶಿಷ್ಯನು ಯೋಗ್ಯ ಗುರುಗಳನ್ನು ಆಶ್ರಯಿಸಿ ಒಂದು ವರ್ಷ ಸೇವೆ ಮಾಡಬೇಕು. ಅವನ ಚರ್ಯೆಯನ್ನು ಪರೀಕ್ಷಿಸಿ ಯೋಗ್ಯ ಎನಿಸಿದರೆ ಒಂದು ವರ್ಷದ ಬಳಿಕ ಗುರುಗಳು ತಪ್ತ ಮುದ್ರಾಧಾರಣವನ್ನು ಮಾಡಿಸಿ ಈ ನಾರಾಯಣಾಷ್ಟಾಕ್ಷರ ಮಂತ್ರವನ್ನು ಉಪದೇಶ ಮಾಡಬೇಕು. ಬೆಂಕಿಯಲ್ಲಿ ಕಾಯಿಸಿದ ಸುದರ್ಶನ ಚಕ್ರದಿಂದ ಮುದ್ರಾಧಾರಣ ಮಾಡಿಸುವ ವಿಧಿಗೆ 'ತಾಪ' ಎಂದು ಹೆಸರು.

ಅಷ್ಟಾಕ್ಷರ ಅಥವಾ ಬೇರೆ ಯಾವುದಾದರೂ ಮಂತ್ರವನ್ನು ಅಂಗನ್ಯಾಸ ಹೃದಯನ್ಯಾಸ, ಅಂಗುಲಿನ್ಯಾಸ, ಧ್ಯಾನ, ಆಸನಶುದ್ಧಿ, ಪಾಪಪುರುಷ ವಿಸರ್ಜನ ಜಪ,

ತರ್ಪಣ, ಮುಂತಾದ ಪೂರ್ವೋತ್ತರ ವಿಧಿ ವಿಧಾನ ಪೂರ್ವಕವಾಗಿಯೇ ಉಪದೇಶಿಸಬೇಕು. ಪ್ರಣವಮಂತ್ರದ ಸಂಗ್ರಹೀತ ಸ್ವರೂಪವೇ ಅಷ್ಟಾಕ್ಷರ ಮಂತ್ರ. ಎಲ್ಲ ಮಂತ್ರಗಳ ಮೊದಲು ಪ್ರಣವ ಅರ್ಥಾತ್ ಓಂಕಾರವನ್ನು ಯೋಜಿಸಬೇಕು. ಉಳಿದ ಮಂತ್ರಗಳೆಲ್ಲ ಓಂಕಾರವು ಮಂತ್ರ ಘಟಕವಲ್ಲ. ನಾರಾಯಣಾಷ್ಟಾಕ್ಷರ ಮಂತ್ರಗಳಲ್ಲಿ ಮಾತ್ರ ಪರಬ್ರಹ್ಮಾರ್ಥಕವಾದ ಓಂಕಾರವು ಮಂತ್ರಘಟಕವೇ ಆಗಿದೆ. ಎಲ್ಲ ಮಂತ್ರಗಳ ಮೊದಲು ಓಂ ಎಂಬ ಅಕ್ಷರವನ್ನು ಕೊನೆಗೆ ನಮಃ ಎಂಬ ಅಕ್ಷರವನ್ನು ಜೋಡಿಸಬೇಕು.ನಾರಾಯಣಾಷ್ಟಾಕ್ಷರ ಮಂತ್ರಕ್ಕೆ ಮೊದಲು ಓಂ ನಮಃ ಎಂಬ ಮೂರು ಅಕ್ಷರಗಳನ್ನೂ ಅನಂತರ 'ನಾರಾಯಣಾಯ' ಎಂಬ ಐದು ಅಕ್ಷರಗಳನ್ನು ಸೇರಿಸಿ 'ಓಂ ನಮೋ ನಾರಾಯಣಾಯ' ಎಂದು ಅಷ್ಟಾಕ್ಷರ ಮಂತ್ರವನ್ನು ಉಚ್ಚರಿಸಬೇಕು. ಈ ಮಂತ್ರಕ್ಕೆ ಸಾಕ್ಷಾತ್ ನಾರಾಯಣನೇ ಋಷಿ, ಲಕ್ಷ್ಮೀಪತಿಯೇ ದೇವತಾ ಗಾಯಿತ್ರಿಯೇ ಛಂದಸ್ಸು. ಪ್ರಾಣವೇ ಬೀಜ. ಈ ಮಂತ್ರಕ್ಕೆ ನಿತ್ಯ ಅನಪಾಯಿನಿಯಾದ ಶ್ರೀದೇವಿಯೇ ಶಕ್ತಿ. ಈ ಅಷ್ಟಾಕ್ಷರ ಮಂತ್ರದಲ್ಲಿ ಮೊದಲನೇ ಪದ 'ಓಂಕಾರ ನಮಃ' ಎನ್ನುವದು ಎರಡನೇ ಪದ. ನಾರಾಯಣಾಯ ಎನ್ನುವದು ಮೂರನೇ ಪದ. ಈ ಪದತ್ರಯಾತ್ಮಕವಾದ ನಾರಾಯಣಾಷ್ಟಾಕ್ಷರ ಮಂತ್ರವು ಅಕಾರ ಉಕಾರ ಮಕಾರ ಎಂಬ ತ್ರ್ಯಕ್ಷರಾತ್ಮಕವಾದ ವೇದದ ಅರ್ಥರೂಪವಾಗಿದೆ. ಋಗ್ವೇದ, ಯಜುರ್ವೇದ, ಸಾಮವೇದ ಎಂಬ ಮೂರು ವೇದಾತ್ಮಕವಾದ 'ತ್ರಯೀ'ಯ ಸಾರಭೂತವಾಗಿದೆ ಪದತ್ರಯಾತ್ಮಕವಾದ ನಾರಾಯಣ ಅಷ್ಟಾಕ್ಷರ ಮಂತ್ರ. ಆ ಪದತ್ರಯಾತ್ಮಕ ಅಷ್ಟಾಕ್ಷರ ಮಂತ್ರದ ಸಾರಭೂತವಾಗಿದೆ ಅಕ್ಷರತ್ರಯಾತ್ಮಕವಾದ ಓಂಕಾರ. ಆದುದರಿಂದ ಈ ಪ್ರಣವವು ವೇದತ್ರಯಾತ್ಮಕ ಎಂದು ಹೇಳಲ್ಪಡುತ್ತದೆ. ಅಕಾರದಿಂದ ವಿಷ್ಣುವು ವಾಚ್ಯಗಿದ್ದಾನೆ. ಉಕಾರದಿಂದ ಶ್ರೀಹರಿಯ ಶಕ್ತಿ ಸ್ವರೂಪಿಣಿಯಾದ ಶ್ರೀದೇವಿಯು ಹೇಳಲ್ಪಡುತ್ತಾಳೆ. ಮಕಾರದಿಂದ ಲಕ್ಷ್ಮೀನಾರಾಯಣರ ದಾಸನಾದ ಇಪ್ಪತ್ತೈದನೇ ತತ್ವವಾದ ಜೀವನು ಹೇಳಲ್ಪಡುತ್ತಾನೆ. ಕ ಖ ಗ ಘ ಙ ಎಂಬ ಕ ವರ್ಗದ ಐದು ಅಕ್ಷರಗಳಿಂದ ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ ಎಂಬ ಪಂಚ ಮಹಾಭೂತಗಳು ಚ, ಛ ಜ, ಝ, ಞ ಎಂಬ ಚ ವರ್ಗದ ಐದು ಅಕ್ಷರಗಳು ಪಂಚ ಇಂದ್ರಿಯಗಳನ್ನೂ, ಟ, ಠ, ಡ, ಢ, ಣ ಎಂಬ ಟ ವರ್ಗವು ಜ್ಞಾನವನ್ನೂ, ತ, ಥ, ದ, ಧ, ನ ಎಂಬ ತ ವರ್ಗವು ಗಂಧವನ್ನೂ, ಪ ವರ್ಗದ ಮೊದಲನೇಯ ಅಕ್ಷರವಾದ ಸ ಕಾರದಿಂದಮನಸ್ಸನ್ನೂ, ಫ ಕಾರದಿಂದ ಅಹಂಕಾರವನ್ನೂ, ಬ ಕಾರದಿಂದ ಜಡ ಪ್ರಕೃತಿಯನ್ನೂ, ಭ ಕಾರದಿಂದ ಚಿತ್ ಪ್ರಕೃತಿಯನ್ನೂ, ಮ ಕಾರದಿಂದ ಜೀವವನ್ನೂ ಹೇಳುತ್ತದೆ. ಹೀಗೆ ಇಪ್ಪತ್ತೈದನೇ ತತ್ವವೇ ಜೀವವೆನಿಸುತ್ತದೆ. ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿ, ಇವುಗಳಿಂದಲೂ ಪರಮಾತ್ಮನಿಂದಲೂ ಭಿನ್ನನಾದ ಈ ಜೀವನಿಗೆ ಆ ಪರಮಾತ್ಮನನ್ನು ಹೊಂದಲು ಪರಮಾತ್ಮನ ಅನುಗ್ರಹದ ಹೊರತು ಬೇರೆ ಯಾವ ಸಾಧನವೂ ಇರುವದಿಲ್ಲ. ಭಗವಂತನ ಭಿನ್ನಾಂಶನಾದ ಈ ಚೇತನನು ಪ್ರಣವ ಮಂತ್ರದ ಮ ಕಾರದಿಂದ ವಾಚ್ಯನಾಗಿದ್ದಾನೆ. ಭಗವಂತನು ಶೇಷಭೂತನಾಗಿದ್ದಾನೆ.

ಅ, ಉ, ಮ ಎಂಬ ಮೂರು ಅಕ್ಷರಗಳಿಂದ ರೂಪಗೊಂಡ ಓಂಕಾರಾತ್ಮಕ ಪ್ರಣವದ ಮೊದಲನೇಯ ಅಕ್ಷರವಾದ ಅಕಾರದಿಂದ ಜಗತ್ತಿನ ಬೀಜ ರೂಪನಾದ ಕಲ್ಯಾಣ ಗುಣಪೂರ್ಣನಾದ ವಿಷ್ಣುವು ಹೇಳಲ್ಪಡುತ್ತಾನೆ. ಉಕಾರದಿಂದ ವಿಷ್ಣುಪತ್ನಿಯೂ

ಜಗದಾಧಾರಭೂತಳೂ ಸರ್ವರ ತಾಯಿಯೂ ಆದ ಶ್ರೀದೇವಿಯು ಹೇಳಲ್ಪಡುತ್ತಾಳೆ. ಮಕಾರದಿಂದ ಲಕ್ಷ್ಮೀನಾರಾಯಣರ ದಾಸನಾದ ಜೀವಚೇತನನು ಹೇಳಲ್ಪಡುತ್ತಾನೆ. ದಾಸಭೂತನಾದುದರಿಂದಲೇ ಈ ಚೇತನನಿಗೆ ಸ್ವಾತಂತ್ರ್ಯವು ಇರುವದಿಲ್ಲ. ಜೀವನ ಮಮಕಾರ ಅಹಂಕಾರಗಳನ್ನು ನಿಷೇಧಿಸುತ್ತದೆ. ಓಂಕಾರದ ಅನಂತರದಲ್ಲಿ ಬರುವ ನಮಃ ಎನ್ನುವ ಎರಡು ಅಕ್ಷರಗಳು.

**''ಅಹಂಕೃತಿರ್ಮಕಾರಃ ಸ್ಯಾತ್ ನ ಕಾರಸ್ತನ್ನಿಷೇಧಕಃ ।**
**ತಸ್ಮಾತ್ತು ನಮಸ್ಯೈವಾಸ್ಯ ಅಹಂಕಾರ ವಿಮೋಚನಂ ॥''**

**ಅಹಂಕಾರೇಣ ಯುಕ್ತಸ್ಯ ಸುಖಂ ಕಿಂಚಿನ್ನ ವಿದ್ಯತೇ ।**
**ಅಹಂಕಾರ ವಿಮೂಢಾತ್ಮಾ ಅಂಧೇ ತಮಸಿ ಮಜ್ಜತಿ ॥**

**ತಸ್ಮಾತ್ತು ನಮಸಾ ಚಾತ್ರ ಸ್ವಾತಂತ್ರ್ಯಂ ಪ್ರತಿಷಿದ್ಧ್ಯತೇ ।**
**ಭಗವತ್ಪರ ತಂತ್ರೋಽಸೌ ತದಾಯತ್ತಶ್ಚಜೀವತಿ ॥''**

ಮ ಕಾರವು ಮಮಕಾರವನ್ನು ಸೂಚಿಸುತ್ತದೆ. ನ ಕಾರವು ಅದರ ನಿಷೇಧಕ. ಅಹಂಕಾರ ಮಮಕಾರಗಳ ವಿಮೋಚನೆಯು, ''ನನ್ನದು ಯಾವದೂ ಇಲ್ಲ, ನಾನು ಸ್ವತಂತ್ರನಲ್ಲ'' ಎಂಬ ಭಾವನೆಯಿಂದ ಪರಮಾತ್ಮನಿಗೆ ನಮಸ್ಕಾರ ಮಾಡಿದರೆ ಆಗುವದು. ಅಹಂಕಾರದಿಂದ ಯುಕ್ತನಾದರೆ ಕಿಂಚಿದಪಿ ಸುಖವಿಲ್ಲ. ಅಹಂಕಾರದಿಂದ ಮೂಢನಾದವನು ಅಂಧಸ್ತಿತಮನಸ್ಸಿನಲ್ಲಿಯೇ ಬೀಳುತ್ತಾನೆ. ಆದುದರಿಂದ ಈ ಅಷ್ಟಾಕ್ಷರ ಮಂತ್ರ ಘಟಕವಾದ ನ ಮ ಶಬ್ದದಿಂದ ಜೀವನ ಸ್ವಾತಂತ್ರ್ಯವನ್ನು ನಿರಾಕರಿಸಲಾಗಿದೆ. ಭಗವಂತನಿಗೆ ಅಧೀನನಾದ ಜೀವನು ಅವನನ್ನು ಉಪಜೀವಿಸಿಕೊಂಡು ಬದುಕುತ್ತಾನೆ ಎನ್ನುವ ಅರ್ಥ ''ಓಂ ನಮಃ'' ಎಂಬ ಅಕ್ಷರ ಪಂಕ್ತಿಗಳಿಂದ ಸೂಚಿತವಾಗಿದೆ. ಅಷ್ಟಾಕ್ಷರದಲ್ಲಿ ಓಂ ನಮ ಎಂಬ ಈ ಮೂಲ ಅಕ್ಷರಗಳ ಅನಂತರ ನಾರಾಯಣ ಎಂಬ ಪದವು ಬರುತ್ತದೆ.

**''ನಾರಾ ಇತ್ಯಾತ್ಮನಾಂ ಸಂಘಾ ಸ್ತೇಷಾಂ ಗತಿರಸೌ ಪುಮಾನ್ ।**
**ತ ಏವ ಚಾಯನಂ ತಸ್ಯ ತಸ್ಮಾನ್ನಾರಾಯಣಃ ಸ್ಮೃತಃ ॥''**

ನರಾಣಾಂ ಸಮೂಹಾಃ ನಾರಾಃ ಎಂಬ ಉತ್ಪತ್ತಿಯಿಂದ ನಾರಾ ಎಂದರೆ ಚೇತನಗಳ ರಾಶಿ. ಅವರಿಗೆ ಅಯನ ಎಂದರೆ ಗತಿಯಾದ ಪರಮ ಪುರುಷನು ನಾರಾಯಣ ಎಂದು ಕರೆಯಲ್ಪಡುತ್ತಾನೆ. ಈ ನರರ ಸಮೂಹವೇ ಆ ನಾರಾಯಣನಿಗೂ ಅಧಿಷ್ಠಾನವಾಗಿದೆ. ಆದುದರಿಂದ ಅವನು ನಾರಾಯಣ ಎಂದು ಹೇಳಲಾಗಿದೆ.

**ಚರಾಚರಂ ಜಗತ್ ಕೃತ್ಸ್ನಂ ನಾರ ಇತ್ಯಭಿದೀಯತೆ**
**ತಸ್ಯವಾ ಸದ್ಗತಿರ್ಯೇನ ತೇನ ನಾರಾಯಣಃ ಸ್ಮೃತಃ ॥**

ಈ ಚರಾ ಚರಾತ್ಮಕವಾದ ಸರ್ವ ಜಗತ್ತು ನಾರ ಎಂದು ಕರೆಯಲ್ಪಡುತ್ತದೆ. ಅದಕ್ಕೆಲ್ಲ ಸದ್ಗತಿಯನ್ನು ಕರುಣಿಸುವದರಿಂದ ಅವನು ನಾರಾಯಣ ಎಂದೆನಿಸುತ್ತಾನೆ. ಈ ಜಗತ್ತಿನಲ್ಲಿ ಕಣ್ಣಿಗೆ ಕಾಣುವ ಕಿವಿಗೆ ಕೇಳುವ ಇಂದ್ರಿಯಗಳಿಗೆ ಗೋಚರವಾಗುವ ಜಗತ್ತಿನ ತುಂಬ ಒಳಗೂ ಹೊರಗೂ ವ್ಯಾಪಿಸಿಕೊಂಡು ನಾರಾಯಣನು ನಿಂತುಕೊಂಡಿರುತ್ತಾನೆ. ಅವನಿಗೆ ಸಾವಿರ ತಲೆ, ಸಾವಿರ ಕಣ್ಣು, ಕಾಲುಗಳು ಸಾವಿರ. ಆ ನಾರಾಯಣನು ಮುಕ್ತರಿಗೂ ನಿಯಾಮಕ.

ಅಮುಕ್ತರಿಗೂ ನಿಯಾಮಕ. ಜಗತ್ತಿಗೆಲ್ಲ ಪತಿ. ಪ್ರಪಂಚಕ್ಕೆಲ್ಲ ಸೃಷ್ಟಾರ. ಹಿರಣ್ಯಗರ್ಭ, ಸೂರ್ಯ, ಅನಂತ ಮಹೇಶ್ವರ ಎಂಬ ಎಲ್ಲ ಹೆಸರುಗಳಿಂದ ಕರೆಯಲ್ಪಡುವ ವ್ಯಕ್ತಿ. ಸರ್ವ ಲೋಕಾಧೀಶ್ವರನಾದ ಆ ನಾರಾಯಣನಲ್ಲಿಯೇ ಭಗವಾನ್ ಮತ್ತು ಪುರುಷ ಎಂಬ ಎರಡು ಶಬ್ದಗಳು ಆ ಮಹಾವಿಷ್ಣುನಲ್ಲಿಯೇ ಪರ್ಯಾಪ್ತವಾಗಿ ಮುಖ್ಯ ವೃತ್ತಿಯಿಂದ ಇರುತ್ತವೆ.

ಈ ನಾರಾಯಣನ ಸರ್ವಯಜ್ಞಮಯವಾದ ಪುರುಷದೇಹದಿಂದಲೇ ಸ್ಥಾವರ ಜಂಗಮಾತ್ಮಕವಾದ ಪ್ರಂಪಚವೆಲ್ಲವೂ ಜನಿಸಿರುತ್ತದೆ. ಅವನ ಎರಡು ಕಾಲುಗಳಿಂದ ಪೃಥ್ವಿಯು, ತಲೆಯಿಂದ ಆಕಾಶವು, ಮನಸ್ಸಿನಿಂದ ಚಂದ್ರನು, ಕಣ್ಣಿನಿಂದ ಸೂರ್ಯನು, ಮುಖದಿಂದ ಅಗ್ನಿಯು, ಪ್ರಾಣದಿಂದ ವಾಯುವು, ಹೊಕ್ಕಳದಿಂದ ಬ್ರಹ್ಮನು ಹುಟ್ಟಿರುತ್ತಾರೆ. ಆದುದರಿಂದಲೇ ಆ ನಾರಾಯಣನು ಸರ್ವಮಯ, ಸರ್ವ ಎಂದು ಮುಂತಾಗಿ ಕರೆಯಲ್ಪಡುತ್ತಾನೆ.

ಹೀಗೆಲ್ಲಾ ಪ್ರಪಂಚವನ್ನು ಸೃಷ್ಟಿ ಮಾಡಿ ಅನಂತರ ಕೊನೆಗೆ ತನ್ನ ಲೀಲೆಯಿಂದ ತಾನೇ ಎಲ್ಲವನ್ನು ಸಂಹಾರ ಮಾಡುತ್ತಾನೆ. ಬ್ರಹ್ಮ, ಇಂದ್ರ, ರುದ್ರ, ಯಮ, ವರುಣ ಮುಂತಾದ ದೇವಾಧಿದೇವತೆಗಳನ್ನು ಪ್ರಳಯಕಾಲದಲ್ಲಿ ಸಂಹರಿಸುವದರಿಂದ ಅವನಿಗೆ 'ಹರಿ' ಎಂದು ಕರೆಯುತ್ತಾರೆ. ಪ್ರಳಯ ಕಾಲದಲ್ಲಿ ಏಕಾರ್ಣವ ಸಾಗರದಲ್ಲಿ ವಟ ಪತ್ರದ ಮೇಲೆ ಮಲಗಿ ಹದಿನಾಲ್ಕು ಲೋಕಗಳನ್ನೆಲ್ಲ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡು ಶಯನ ಮಾಡುತ್ತಾನೆ, ಆ ಕಾಲದಲ್ಲಿ.

**ನ ಬ್ರಹ್ಮಾ ನ ಚ ರುದ್ರಶ್ಚ ನ ದೇವಾಃ ನ ಮಹರ್ಷಯಃ**
**ಅಸೀದೇಕೋಽಪಿ ವೈ ಚಾತ್ರ ವಿಷ್ಣುರ್ನಾರಾಯಣೋಽಚ್ಯುತಃ ॥**

ಆ ಪ್ರಳಯ ಕಾಲದಲ್ಲಿ ಬ್ರಹ್ಮ, ರುದ್ರ, ಇತರ ದೇವತೆಗಳಾಗಲೀ ಋಷಿಗಳಾಗಲೀ ಇರಲಿಲ್ಲ. ನಾಶರಹಿತನೂ ಗುಣಪರಿಪೂರ್ಣನೂ ಆದ ನಾರಾಯಣನು ಒಬ್ಬನೇ ಆಗ ಇದ್ದನು. ಅದೇ ನಾರಾಯಣನು ಮುಂದೆ ಮತ್ತೆ ಹೊಸ ಸೃಷ್ಟಿಯ ಪ್ರಾರಂಭದಲ್ಲಿ ಈ ಪ್ರಪಂಚವನ್ನು ಪುನಃ ಸೃಷ್ಟಿ ಮಾಡುತ್ತಾನೆ. ಹೀಗೆಯೇ ತನ್ನಿಂದ ಸೃಷ್ಟವಾದ ಈ ಜಗತ್ತಿನ ಪಾಲನ, ಸಂಹಾರ ಮುಂತಾದ ಎಲ್ಲ ಕಾರ್ಯವನ್ನು ಆ ನಾರಾಯಣನೇ ಸ್ವಯಂ ನಿಂತು ಮಾಡಿಸುತ್ತಾನೆ.

ಇಂಥ ಪರಾತ್ಪರನಾದ ಪರಮಾತ್ಮನ ದಾಸ್ಯವು ಈ ಮಂತ್ರದ 'ನಾರಾಯಣಾಯ' ಎನ್ನುವ ಚತುರ್ಥಿ ವಿಭಕ್ತಿಯಿಂದ ಪ್ರತಿಪಾದಿತವಾಗಿದೆ. ಆದುದರಿಂದ ವಿವೇಕಿಯಾದ ಮನುಷ್ಯನು ಈ ಲಕ್ಷ್ಮೀನಾರಾಯಣ ಮಂತ್ರದ ಅಭಿಪ್ರಾಯವನ್ನು ತಿಳಿದುಕೊಂಡು ಅನಂತರ ಈ ಮಂತ್ರವನ್ನು ಪ್ರಯೋಗಿಸಬೇಕು. ಮಂತ್ರಾರ್ಥವನ್ನು ತಿಳಿಯದೇ ಜಪ ಮಾಡುವ ಮನುಷ್ಯನು ಇಹಲೋಕದಲ್ಲಿ ಮಂತ್ರಾರ್ಥಸಿದ್ಧಿಯನ್ನಾಗಲೀ ಭಕ್ತಿಯನ್ನಾಗಲಿ ಹೊಂದಲಾರ. ನಾರಾಯಣನಲ್ಲಿ ಭಕ್ತಿಯನ್ನೂ ಹೊಂದಲಾರ. ಕೊನೆಗೆ ಮುಕ್ತಿಯನ್ನೂ ಪಡೆಯಲಾರ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಅಷ್ಟಾಕ್ಷರ ಮಂತ್ರದ ವಿವರಣೆ ಎಂಬ ಎರಡುನೂರ ಎಂಟನೇಯ ಅಧ್ಯಾಯ ಮುಗಿದುದು*

—o—

**ಪಾರ್ವತಿ:-** ಈಶ್ವರನ ಅರ್ಥಾತ್ ಶ್ರೀಹರಿಯ ಸ್ವರೂಪ ಹಾಗೂ ವಿಭೂತಿ ಗುಣಗಳನ್ನು ಹೇಳಿರಿ.

**ಈಶ್ವರ:-**

**ಯಃಪರ ಪುರುಷೋ ವಿಷ್ಣುಃ ನಾರಾಯಣ ಉದಾಹೃತೇಃ**
**ಸ ಈಶ್ವರಶ್ಚ ಜಗತಾಂ ಪರಮಾತ್ಮಾ ಸನಾತನಃ ॥**

ಕ್ಷರ ಪುರುಷ ಅಕ್ಷರ ಪುರುಷರಿಂದ ಉತ್ತಮವಾದ ಪುರುಷೋತ್ತಮ ಎಂಬ ಹೆಸರಿನ ಶ್ರೀವಿಷ್ಣುವೇ ನಾರಾಯಣ ಎಂದು ಕರೆಯಲ್ಪಡುತ್ತಾನೆ. ಈ ಚರಾಚರಾತ್ಮಕವಾದ ಪ್ರಪಂಚವನ್ನೆಲ್ಲ ನಿಯಮನ ಮಾಡುವದರಿಂದ ಅವನೇ ಈಶ್ವರ ಎಂದೂ ಪರಮಾತ್ಮ ಎಂದೂ ಸನಾತನನೆಂದೂ ವೇದ ಶಾಸ್ತ್ರಗಳಲ್ಲಿ ವರ್ಣಿತನಾಗಿದ್ದಾನೆ. ಕೋಟಿಕಂದರ್ಪರಿಗಿಂತ ಸುಂದರವಾದ ರೂಪ ಇರುವ ಆ ಶ್ರೀಹರಿಯು ನಿತ್ಯವೂ ನವಯೌವ್ವನೋಪೇತ. ಚಿರಕುಮಾರ. ಸನತ್ಕುಮಾರ ಎಂದು ಕರೆಯುವದು ಅವನನ್ನೇ. ಆ ಶ್ರೀಹರಿಯು ತನ್ನ ಮೆಚ್ಚಿನ ಮಡದಿಯಾದ ಲಕ್ಷ್ಮೀದೇವಿಯೊಂದಿಗೆ ಭೋಗಾನಂದರಹಿತನಾಗಿ ತನ್ನ ಪರಮ ಪದದಲ್ಲಿ ವಾಸಿಸುತ್ತಾನೆ. ವೈಕುಂಠ, ಶ್ವೇತ ದ್ವೀಪ, ಅನಂತಾಸನ ಈ ಮೂರು ಶ್ರೀಹರಿಯ ವಾಸಸ್ಥಳಗಳು ಆಗಿರುತ್ತವೆ. ಲಕ್ಷ್ಮೀದೇವಿಯು ಶ್ರೀದೇವಿ ಹಾಗೂ ಭೂದೇವಿ ಎಂಬ ತನ್ನ ಎರಡು ರೂಪಗಳಿಂದ ಅವನ ಸೇವೆ, ಸಂಭೋಗ ಸಹವಾಸಗಳಿಂದ ಸದಾ ಸುಖಿಸುತ್ತ ಇರುತ್ತಾಳೆ. ಆ ಮೂರು ಮುಕ್ತ ಸ್ಥಾನಗಳಲ್ಲಿ ಮಹಾವಿಷ್ಣುವು ತನ್ನ ಅರಸಿಯಾದ ರಮೆಯೊಡನೆ ರಮರಮಣನಾಗಿ ನಲಿಯುತ್ತಾನೆ. ಅವನ ಇನ್ನೊಂದು ಪಾದವೇ ಜಗದಾಧಾರವಾಗಿದ್ದು ಇಲ್ಲಿ ಭಗವಂತನ ಲೀಲಾರೂಪವು ಸೃಷ್ಟಿಸ್ಥಿತಿ ಸಂಹಾರಾದಿಗಳನ್ನು ನಿರ್ವಹಿಸುತ್ತದೆ. ಶ್ರೀಹರಿಯು ಸರ್ವಗತನಾಗಿ ಸರ್ವಾಂತರ್ಯಾಮಿಯಾಗಿ ಇರುವಂತೆ ಲೋಕಮಾತೆಯಾದ ಶ್ರೀದೇವಿಯು ಕೂಡ ತನ್ನ ಪತಿಯಾದ ವಿಷ್ಣುವಿನಂತೆಯೇ ಸರ್ವತ್ರವ್ಯಾಪ್ತಳು. ಅವಳೂ ಕೂಡ ಅವನಂತೆ ಸಹಸ್ರಶೀರ್ಷಾ, ಸಹಸ್ರಾಕ್ಷಾ, ಸಹಸ್ರಪಾತ್. ಆ ಶ್ರೀದೇವಿಗೆ ಲಕ್ಷ್ಮೀ, ಧರಣೀ, ನೀಲಾದೇವಿ ಎಂದು ಹೆಸರು. ಆ ಜಗನ್ಮಾತೆಯೇ ಪೃಥಿವೀ ರೂಪವನ್ನು ಆಶ್ರಯಿಸಿ ಜಗತ್ತಿಗೆ ಆಧಾರಳಾಗಿದ್ದಾಳೆ.

ನೀಲಾರೂಪಿಣಿಯಾದ ಅದೇ ಶ್ರೀದೇವಿಯು ಜಲರಸರೂಪದಿಂದ ಶ್ರೀಹರಿಗೆ ಆಶ್ರಯಭೂತಳಾಗಿ ಜಗತ್ತಿಗೆ ಜೀವನ ಪ್ರದಳಾಗಿದ್ದಾಳೆ. ಅದೇ ಶ್ರೀದೇವಿಯು ಲಕ್ಷ್ಮೀರೂಪದಿಂದ ಧನಾಧಿದೇವತೆಯೂ ವಾಗ್ದೇವತೆಯು ಆಗಿರುತ್ತಾಳೆ. ಜಗತ್ತಿನಲ್ಲಿ ಇರುವ ಎಲ್ಲ ವಿದ್ಯೆಗಳು ಕಲೆಗಳು ಲಕ್ಷ್ಮಿಯ ಒಂದೊಂದು ರೂಪಗಳೇ ಆಗಿರುತ್ತವೆ. ಸ್ತ್ರೀಯರಲ್ಲಿ ಇರುವ ಸೌಂದರ್ಯ, ಶೀಲ, ಒಳ್ಳೆ ನಡತೆ, ಕಾಂತಿ ಮುಂತಾದವುಗಳಲ್ಲಿ ಸೌಭಾಗ್ಯರೂಪದಿಂದ ಆ ಶ್ರೀದೇವಿಯೇ ಸಂಸ್ಥಿತಳಾಗಿದ್ದಾಳೆ. ಅವಳ ಕಟಾಕ್ಷದ ಒಂದು ಕಿರು ನೋಟದಿಂದಲೇ ಬ್ರಹ್ಮ, ಶಿವ, ಇಂದ್ರ ಚಂದ್ರ, ಸೂರ್ಯ, ಕುಬೇರ, ಯಮ, ಅಗ್ನಿ ಮುಂತಾದ ದೇವತೆಗಳು ವಿಪುಲವಾದ ಐಶ್ವರ್ಯವನ್ನು ಪಡೆಯುತ್ತಾರೆ.

**ಲಕ್ಷ್ಮೀಃ ಶ್ರೀಃ ಕಮಲಾ ವಿದ್ಯಾ, ಮಾತಾ ವಿಷ್ಣು ಪ್ರಿಯಾ ಸಖೀ, ।**
**ಪದ್ಮಾಲಯಾ ಪದ್ಮ ಹಸ್ತಾ ಪದ್ಮಾಕ್ಷೀ ಲೋಕ ಸುಂದರೀ ॥**

**ಭೂತಾನಾಂ ಈಶ್ವರೀ ನಿತ್ಯ ಸತ್ಯಾ ಸರ್ವಗತಾ ಶುಭಾ ।**
**ವಿಷ್ಣುಪತ್ನೀ ಮಹಾದೇವೀ ಕ್ಷೀರೋದ ತನಯಾ ರಮಾ ॥**

**ಅನಂತಾ ಲೋಕಮಾತಾ ಭೂ-ರ್ನೀಲಾ ಸರ್ವಸುಖಪ್ರದಾ ।**
**ರುಕ್ಮಿಣೀಚ ತಥಾ ಸೀತಾ ಸರ್ವಾ ವೇದಮತೀ ಶುಭಾ ॥**

**ಸತೀ ಸರಸ್ವತೀ ಗೌರೀ ಶಾಂತಿ ಸ್ವಾಹಾಃ ಸ್ವಧಾ ರತಿಃ ।**
**ನಾರಾಯಣೀರ್ವರಾರೋ-ಹಾ ವಿಷ್ಣೋರ್ನಿತ್ಯಾನಪಾಯಿನೀ ॥**

**ಏತಾನಿ ಪುಣ್ಯನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ।**
**ಸ ಮಹಾಶ್ರಿಯಪ್ನೋತಿ ಧನ ಧಾನ್ಯಮ-ಕಲ್ಮಷಮ್ ॥**

ಲಕ್ಷ್ಮೀದೇವಿಯ ಈ ಪುಣ್ಯನಾಮಗಳನ್ನು ಬೆಳಿಗ್ಗೆ ಎದ್ದು ಪಠಿಸುವವರು ಧನ ಧಾನ್ಯ ಮುಂತಾದ ಎಲ್ಲ ವಿಧವಾದ ಐಶ್ವರ್ಯವನ್ನು ಹೊಂದುತ್ತಾರೆ. **''ಹಿರಣ್ಯ ವರ್ಣಾಂ ಹರಿಣೀಂ''** ಎಂದು ಮುಂತಾಗಿ ವೇದ ಸಂಹಿತೆಯಲ್ಲಿ ಸ್ತುತಿಸಲ್ಪಟ್ಟ ಆ ಲಕ್ಷ್ಮೀದೇವಿಯು ಮಹಾದೇವನೇ ಮೊದಲಾದ ದೇವತೆಗಳಿಗೆಲ್ಲ ಐಶ್ವರ್ಯವನ್ನು ಅಧಿಕಾರ ಸ್ಥಾನಗಳನ್ನು ನೀಡಿರುತ್ತಾಳೆ. ಇಂಥ ಮಹಾಲಕ್ಷ್ಮೀದೇವಿಯು ಯಾವನ ವಕ್ಷಸ್ಥಲವನ್ನು ಆಶ್ರಯಿಸಿಕೊಂಡಿರುವಳೋ ಅಂಥ ಮಹಾ ವಿಷ್ಣುವೇ ಪುರುಷೋತ್ತಮ. ಇಂಥ ''ಶ್ರೀಮತೇ ವಿಷ್ಣವೇ ದಾಸ್ಯ'' ಸರ್ವದಾಪಿ ಕರೋಮ್ಯಹಂ ಎಂಬುದೇ ಅಕಾರ, ಉಕಾರ, ಮಕಾರಾತ್ಮಕವಾದ ಓಂ ಎಂಬ ಪ್ರಣವಮಂತ್ರದ ಅರ್ಥವಾಗಿರುತ್ತದೆ. ಈ ಪ್ರಣವ ಮಂತ್ರಾರ್ಥವನ್ನು ಚೆನ್ನಾಗಿ ತಿಳಿದುಕೊಂಡು ಅವನಲ್ಲಿ ಸಂತತವಾದ ಭಕ್ತಿಯನ್ನು ಮಾನವ ಮಾಡಬೇಕು. ವೇದ ಶಾಸ್ತ್ರಗಳಲ್ಲಿ ಅಲ್ಲಲ್ಲಿ ನಿರ್ಗುಣ ಬ್ರಹ್ಮದ ಉಪಾಸನೆಯನ್ನು ಹೇಳಲಾಗಿದೆ. ಅದರ ಪಾರಮಾರ್ಥಿಕವಾದ ವಿಶಿಷ್ಟ ಭಾವದ ರಹಸ್ಯವನ್ನು ಎಲ್ಲರೂ ತಿಳಿದುಕೊಳ್ಳಬೇಕು.

**ಯೋಽಸೌ ನಿರ್ಗುಣ ಇತ್ಯುಕ್ತಃ ಶಾಸ್ತ್ರೇಷು ಜಗದೀಶ್ವರಃ**
**ಪ್ರಾಕೃತೈರ್ಹೇಯ ಸಂಯುಕ್ತೈಃ ಗುಣೈ ರ್ಹೀನತ್ವಮುಚ್ಯತೇ ॥**

ವೇದ ಉಪನಿಷತ್ತು ಮೊದಲಾದ ಶಾಸ್ತ್ರಗಳಲ್ಲಿ ಜಗದೀಶ್ವರನು ನಿರ್ಗುಣನಾಗಿದ್ದಾನೆ. ಎಂದು ಹೇಳಲ್ಪಡುತ್ತದೆ. ಅದರ ಅರ್ಥ ಹೇಯವಾದ ಪ್ರಕೃತಿ ಜನ್ಯವಾದ ಸತ್ವಾದಿ ಪ್ರಾಕೃತಗುಣದಿಂದ ವರ್ಜಿತ ಎಂದು ಇಷ್ಟೇ ತಾತ್ಪರ್ಯ. ನಿರ್ಗುಣ ಎಂದರೆ ಯಾವ ಗುಣವೂ ಇಲ್ಲದವ ಎಂದು ಮಾತ್ರ ಅರ್ಥ ಮಾಡಬಾರದು. ಚಿತ್ಪ್ರಕೃತಿಯ ಅನುಗ್ರಹದಿಂದ ಜಡಪ್ರಕೃತಿಯ ದೆಸೆಯಿಂದ ಉದ್ಭೂತವಾದ ಈ ಬ್ರಹ್ಮಾಂಡವೆಲ್ಲವೂ ಲೀಲಾರೂಪಿಯಾದ ವಿಷ್ಣುವಿನ ಆಡೊಂಬಲ. ಹದಿನಾಲ್ಕು ಲೋಕಗಳು, ಸಪ್ತಸಾಗರ, ಸಪ್ತದ್ವೀಪ, ಸಪ್ತಕುಲಪರ್ವತ ಪಂಚಮಹಾಭೂತ, ಮುಂತಾದವುಗಳಿಂದ ಪರಿಪೂರ್ಣವಾದ ರಮ್ಯವಾದ ಈ ಬ್ರಹ್ಮಾಂಡವು ಕಾಲ ನಾಮಕನಾದ ಶ್ರೀಹರಿಯಿಂದ ನಿಯಮಿಸಲ್ಪಡುತ್ತದೆ. ಕೃತ, ತ್ರೇತ ದ್ವಾಪರ, ಕಲಿ ಎಂಬ ನಾಲ್ಕು ಯುಗಗಳು ಕೂಡಿದರೆ ಒಂದು ಮಹಾಯುಗ ಎನಿಸುತ್ತದೆ. ಇಂಥ ಮಹಾಯುಗಳು ಒಂದು ಸಾವಿರ ತಿರುಗಿದರೆ ಬ್ರಹ್ಮದೇವರ ಒಂದು

ಹಗಲು. ಇದರಷ್ಟೇ ರಾತ್ರಿ. ಹೀಗೆ ಒಂದು ಸಾವಿರ ದಿನಗಳು ಉರುಳಿದ ಬಳಿಕ ಬ್ರಹ್ಮಕಲ್ಪ ಆಗುತ್ತದೆ. ಆಗ ಕಾಲಾಗ್ನಿಯಿಂದ ಬ್ರಹ್ಮಾಂಡ ಹಾಗೂ ಅದರೊಳಗಿರುವ ಎಲ್ಲ ಪ್ರಾಣಿಗಳು ಸುಟ್ಟು ದಗ್ಧವಾಗಿ ಹೋಗುತ್ತವೆ. ಬ್ರಹ್ಮಾಂಡದ ಆವರಣವೆಲ್ಲವೂ ಪ್ರಕೃತಿಯಲ್ಲಿ ಲೀನವಾಗುತ್ತದೆ. ಸರ್ವಜಗದಾಧಾರಳಾದ ಪ್ರಕೃತ್ಯಭಿಮಾನಿಯೂ ಆದ ಲಕ್ಷ್ಮೀದೇವಿಯು ಪ್ರಪಂಚದ ಸೃಷ್ಟಿ, ಸ್ಥಿತಿ ಸಂಹಾರಾದಿಗಳನ್ನು ಶ್ರೀಹರಿಯ ಆದೇಶದಂತೆ ಅವನ ಕ್ರೀಡಾ ಕೌತುಕವನ್ನು ತಣಿಸಲಿಕ್ಕಾಗಿ ಮಾಡುತ್ತಾಳೆ. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುವ ಗುಣತ್ರಯಾತ್ಮಕಳಾದ ಆ ಜಗದೀಶ್ವರಿಯು

**ಯೋಗನಿದ್ರಾ ಮಹಾಮಾಯಾ ಪ್ರಕೃತಿಃ ತ್ರಿಗುಣಾನ್ವಿತಾ ।**
**ಅವ್ಯಕ್ತಂಚ ಪ್ರಧಾನಂ ಚ ವಿಷ್ಣೋರ್ಲೀಲಾऽ ವಿಕಾರಿಣಃ ॥**

ಯೋಗ ನಿದ್ರಾ, ಮಹಾಮಾಯಾ ತ್ರಿಗುಣಾನ್ವಿತಾ ಪ್ರಕೃತಿ, ಅವ್ಯಕ್ತ, ಪ್ರಧಾನ ಎಂದು ಮುಂತಾಗಿ ಕರೆಯಲ್ಪಡುತ್ತಾಳೆ. ಇವೆಲ್ಲವೂ ಪ್ರಕೃತಿ ರೂಪಿಣಿಯಾದ ಶ್ರೀದೇವಿಯ ವಿಭೂತಿ ರೂಪದ ವರ್ಣನೆ ಆಯಿತು. ಇನ್ನು ಶ್ರೀಹರಿಯ ತ್ರಿಪಾದ್ ವಿಭೂತಿಯ ವರ್ಣನೆಯನ್ನು ಹೇಳುತ್ತೇನೆ ಕೇಳು.

ಶ್ರೀಹರಿಯು ನಿರಂತರವೂ ತನ್ನ ನೆಚ್ಚಿನ ನಲ್ಲೆಯಾದ ಶ್ರೀದೇವಿಯೊಡನೆ ನಕ್ಕು ನಲಿದು ಒಲಿದು ರಮರಮಾಣನಾಗಿ ಇರುವ ಆ ವಿಷ್ಣುವಿನ ಸ್ಥಾನಕ್ಕೆ ಪರಮವ್ಯೋಮ ಎನ್ನುವರು. ಆ ಪರಮವ್ಯೋಮ ಮತ್ತು ಈ ಪ್ರಕೃತಿ ತತ್ವ ಎನಿಸುವ ಪ್ರಧಾನ ಅಥವಾ ಅವ್ಯಕ್ತ ತತ್ವಗಳಿಂದ ರೂಪಗೊಂಡ ಈ ಜಗದಂಡ ಮಂಡಲದ ಮಧ್ಯದಲ್ಲಿ ವಿರಜಾ ಎಂಬ ನದಿಯು ಹರಿಯುತ್ತದೆ. ಆನಂದರೂಪಿಯಾದ ಶ್ರೀಹರಿಯ ಆನಂದಮಯವಾದ ಅವಯವಗಳ ಆನಂದ ರೂಪವಾದ ಬೆವರಿನ ಹನಿಗಳು ಹಳ್ಳವಾಗಿ ಹೊಳೆಯಾಗಿ ಹರಿದ ತೊರೆಯೇ ಈ ವಿರಜಾನದಿ. ಅದರ ಆಚೆ ಇರುವದೇ ಹರಿಪದ. ಅದೇ ಪರಮ ಪದ. ಅಮೃತ ಎಂದೂ ಅದನ್ನು ಕರೆಯುವರು. ಅದಕ್ಕೆ ಮೋಕ್ಷಪದ ಎಂತಲೂ ಕರೆಯುವರು. ಬ್ರಹ್ಮಾನಂದ ಕೇಂದ್ರಸ್ಥಳ ಇದೇ. ಅಲ್ಲಿ ಹೋದವರು ಮರಳಿ ಎಂದೂ ಬರುವದಿಲ್ಲ. ಬ್ರಹ್ಮ ಶಿವ ಇಂದ್ರ ಮೊದಲಾದ ದೇವತೆಗಳು ಯಾರಿಗೂ ಅಲ್ಲಿ ಹರಿಯ ಅಪ್ಪಣೆಯಿಲ್ಲದೇ ಪ್ರವೇಶಿಸಲು ಶಕ್ಯವಿಲ್ಲ. ಎಲ್ಲ ವೇದೋಪನಿಷತ್ತುಗಳ ಅರ್ಥವೇ ಅದು.

**ವಿಷ್ಣೋಃ ಪದೇ ಹಿ ಪರಮೇ ಮಧ್ವಉತ್ಸಃ ಶುಭಾಶ್ರಯಃ**

ಇಂಥ ಶ್ರೀಹರಿಯ ಪರಮಪದವನ್ನು ಶ್ರೀವಿಷ್ಣುವಿನ ಅತ್ಯಂತಿಕ ಭಕ್ತರಿಗೂ ಜ್ಞಾನಿಗಳಿಗೂ ದೊರಕಿಸಿ ಕೊಡಲು ಶ್ರೀಮಧ್ವರು ಯಾವಾಗಲೂ ಉತ್ಸುಕಿತರೂ ಸಮರ್ಥರೂ ಪ್ರಯತ್ನಶೀಲರೂ ಆಗಿರುತ್ತಾರೆ. ಶ್ರವಣ ಮನನಾದಿರೂಪ ಬ್ರಹ್ಮ ಜಿಜ್ಞಾಸೆಯಿಂದ ಉಂಟಾದ ಬ್ರಹ್ಮಜ್ಞಾನದಿಂದ ಲಭಿಸಿದ ಅತ್ಯರ್ಥ ಭಕ್ತಿಯಿಂದ ಮಾತ್ರ ಆ ಭಗವಂತನ ಪರಮ ಪ್ರಸಾದವನ್ನು ಹೊಂದಿದ ಬಳಿಕ ಇಂಥ ಮೋಕ್ಷವು ಸಚ್ಚೇತನರಿಗೆ ಲಭ್ಯವಾಗುತ್ತದೆ. ಈ ವಿಷ್ಣುವಿನ ಪರಮ ಪದವನ್ನೇ.

**ಮೋಕ್ಷಂ ಪರಮಪದಂ ದಿವ್ಯಂ ಅಮೃತಂ ವಿಷ್ಣು ಮಂದಿರಂ**
**ಅಕ್ಷರಂ ಪರಮಂ ಧಾಮ ವೈಕುಂಠಂ ಶಾಶ್ವತಂ ಪದಂ**

**ನಿತ್ಯಂಚ ಪರಮಂ ವ್ಯೋಮ ಸರ್ವೋತ್ಕೃಷ್ಟಂ ಸನಾತನಂ**
**ಪರ್ಯಾಯ ವಾಚಕಾನ್ಯಸ್ಯ ಪರಧಾಮ್ನೋಽಚ್ಯುತಸ್ಯಚ**

ಇದಕ್ಕೆ ಮೋಕ್ಷ ಎಂದೂ ಪರಂಪದಂ, ಅಮೃತ ವಿಷ್ಣುಮಂದಿರ, ಪರಂಧಾಮ, ವೈಕುಂಠ, ಪರಮವ್ಯೋಮ, ಶಾಶ್ವತ ಸ್ಥಾನ ಎಂದು ಮುಂತಾಗಿ ಕರೆಯುತ್ತಾರೆ. ಇವೆಲ್ಲವೂ ಪರ್ಯಾಯ ವಾಚಕ ಶಬ್ದಗಳು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಉಮಾಮಹೇಶ್ವರ ಸಂವಾದ ಎಂಬ ಎರಡು ನೂರ ಒಂಬತ್ತನೇಯ ಅಧ್ಯಾಯ ಮುಗಿದುದು*



## ತ್ರಿಪಾದ್ವಿಭೂತಿಯ ಲೋಕಗಳ ಮಹಿಮೆ | ಅಧ್ಯಾಯ - ೨೧೦

**ಮಹಾದೇವ:-** ತ್ರಿಪ್ರಾದ್ವಿಭೂತಿಯ ಲೋಕಗಳ ಮಹಿಮೆಯನ್ನು ಹೇಳುತ್ತೇನೆ ಕೇಳು. ವಿರಜಾ ನದಿಯ ಆಚೆಗಿರುವ ಪರಮವ್ಯೋಮ ಎಂದು ಕರೆಯಲ್ಪಡುವ ಆ ವೈಕುಂಠ ಲೋಕವು ಶ್ರೀಹರಿಯ ಮುಖ್ಯ ಸ್ಥಾನ ಆಗಿರುತ್ತದೆ. ವಿರಜಾನದಿ ಹಾಗೂ ಆ ಪರಮವ್ಯೋಮಗಳ ನಡುವಿನ ಸ್ಥಾನಗಳು ನಿಶ್ರೇಯಸ, ನಿರ್ವಾಣ, ಕೈವಲ್ಯ ಎಂದು ಕರೆಯಲ್ಪಡುತ್ತವೆ. ಇಲ್ಲಿ ಇರುವ ಜನರಿಗೂ ಸ್ವರೂಪಿಭೂತನಾದ ಆನಂದದ ಅನುಭವವು ಉಂಟಾಗುವದು. ಅವ್ಯಕ್ತಬ್ರಹ್ಮ ಎಂದು ಪ್ರಸಿದ್ಧಳಾದ ಮಹಾಲಕ್ಷ್ಮಿಯ ಉಪಾಸನೆ ಯಿಂದಲೂ ಈ ಕೈವಲ್ಯವು ಲಭ್ಯವಾಗಿದೆ. ಶ್ರೀಹರಿಯ ಅಚ್ಛಿನ್ನ ಭಕ್ತರು ಈ ತರಹದ ಕೈವಲ್ಯವನ್ನು ಅಪೇಕ್ಷಿಸುವದಿಲ್ಲ. ಸ್ವಾನಂದಾನುಭವಕ್ಕಿಂತ ಮಿಗಿಲಾದ ವಿಷ್ಣುಪಾದ ಸೇವಾರಸವನ್ನೇ ಅನುಭವಿಸಬೇಕು ಎಂದು ಬಯಸುವವರು ಈ ಮಧ್ಯಂತರವಾದ ನಿರ್ವಾಣ, ಕೈವಲ್ಯ ನಿಶ್ರೇಯಸ ಎಂದು ಹೆಸರುಳ್ಳ ಅವರ ಮೋಕ್ಷವನ್ನು ಬಿಟ್ಟು ನೇರವಾಗಿ ವಿಷ್ಣುವಿನ ಪರಮಂಧಾಮ ಎನಿಸಿದ ವೈಕುಂಠ ಲೋಕಕ್ಕೆ ಸಾಗುತ್ತಾರೆ. ಆ ವೈಕುಂಠ ಲೋಕದ ನಟ್ಟ ನಡುವೆ ಭಗವಂತನ ವಾಸಗೃಹ, ಅದಕ್ಕೆ ಅಯೋಧ್ಯಾ ಎಂದು ಹೆಸರು. ಅದರ ಸುತ್ತಲೂ ಮುತ್ತು ರತ್ನಗಳನ್ನು ಕೆತ್ತಿದ ಬಂಗಾರದ ಕೋಟೆ. ನಾಲ್ಕು ಕಡೆ ಅಗಸೆಯ ಬಾಗಿಲುಗಳು. ಒಂದೊಂದು ಅಗಸೆಯ ಮೇಲೆಯೂ ರತ್ನದ ಗೋಪುರಗಳು. ಪೂರ್ವದಿಕ್ಕಿನಲ್ಲಿ ಚಂಡ ಪ್ರಚಂಡ ಎಂಬ ದ್ವಾರಪಾಲಕರು. ದಕ್ಷಿಣ ದಿಕ್ಕಿನಲ್ಲಿ ಭದ್ರ ಸುಭದ್ರಕ ಎಂಬ ದ್ವಾರಪಾಲಕರು. ಪಶ್ಚಿಮ ದಿಕ್ಕಿನ ಬಾಗಿಲನ್ನು ಕಾಯುವವರು ಜಯ ವಿಜಯರು. ಉತ್ತರ ದಿಕ್ಕಿನ ಬಾಗಿಲನ್ನು ಕಾಯುವವರು ಧಾತಾ ವಿಧಾತಾ. ಇವರಲ್ಲದೆ ಕುಮುದ, ಕುಮುದಾಕ್ಷ, ಪುಂಡರೀಕ, ವಾನರ, ಶಂಕುಕರ್ಣ, ಸರ್ವನೇತ್ರ, ಸುಮುಖ, ಸಶಪ್ರತಿಷ್ಠಿತ ಎಂಬ ಎಂಟು ದಿಕ್ಪಾಲಕರು ಎಂಟು ದಿಕ್ಕಿನಲ್ಲಿ ನಿಂತು ಕಾಯುತ್ತಿರುತ್ತಾರೆ. ಆ ಅಯೋಧ್ಯಾ ಪುರಿಯ ಮಧ್ಯದಲ್ಲಿ ಒಂದು ದಿವ್ಯವಾದ ಮಂಟಪ. ಅದರ ಸುತ್ತಲೂ ರತ್ನದ ಪ್ರಾಕಾರ. ಮುತ್ತುರತ್ನಗಳ ತೋರಣ. ದಿವ್ಯವಾದ ಅಪ್ಸರಾ ಸ್ತ್ರೀಯರಿಂದ ಅಲಂಕೃತವಾದ ಅನೇಕ ದಿವ್ಯ ಭವ್ಯ ಭವನಗಳು ಅವುಗಳಲ್ಲಿಯ ಮಧ್ಯಮಂದಿರದಲ್ಲಿ ಒಂದು ಮಾಣಿಕ್ಯ ಮಂಟಪ, ಧರ್ಮ, ಜ್ಞಾನ. ಐಶ್ವರ್ಯ. ವೈರಾಗ್ಯಗಳು ತಮ್ಮ ತಮ್ಮ ಅಭಿಮಾನಿ ದೇವತೆಗಳಾದ ಯಮ, ವಾಯು, ರುದ್ರ, ಇಂದ್ರ ಮೊದಲಾದ ದೇವತೆಗಳೊಂದಿಗೆ ಪೀಠ ಪಾದದ ಊರ್ಧ್ವಭಾಗದಲ್ಲಿ ಸೇವೆಗೈಯುತ್ತ ನಿಂತಿರುತ್ತಾರೆ.

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದವೆಂಬ ನಾಲ್ಕೂ ವೇದಗಳೂ ಭಗವಂತನ ಈ ಮಣಿಮಂಟಪ ಪೀಠ ಪಾದದ ಊರ್ಧ್ವಭಾಗದಲ್ಲಿ ಸೇವೆಗೈಯುತ್ತ ನಿಂತಿರುತ್ತಾರೆ. ಮಧ್ಯದಲ್ಲಿ ಅಗ್ನಿ, ಸೂರ್ಯ, ಚಂದ್ರರು, ಪೀಠದ ಕೆಳಭಾಗದಲ್ಲಿ ಶಕ್ತಿ ಆಧಾರಶಕ್ತಿ, ಚಿಚ್ಛಕ್ತಿಗಳೂ ಕೂರ್ಮ, ಆದಿಶೇಷ, ಗರುಡ, ಎಲ್ಲ ಮಂತ್ರಗಳೂ ಎಲ್ಲ ವೇದಗಳೂ ಭಗವತ್ಸೇವೆಗೆ ಪೀಠರೂಪವನ್ನು ಪಡೆದು ಕೈಂಕರ್ಯಕ್ಕೆ ಸಿದ್ಧವಾಗಿರುತ್ತವೆ. ಇದಕ್ಕೆ ಯೋಗಪೀಠ ಎಂದು ಕರೆಯುವರು. ಈ ಪೀಠದ ನಟ್ಟ ನಡುವೆ ಉದಯೋನ್ಮುಖನಾದ ಸೂರ್ಯನಂತೆ ಹೊಳೆಯುವ ಒಂದು ಸುಂದರವಾದ ಕಾಂತಿಯುಳ್ಳ ಕನ್ನೈದಿಲೆಯಂತೆ ಕಪ್ಪು ಬಣ್ಣದಿಂದ ಒಪ್ಪುವ ಶ್ರೀಹರಿಯು ಲಕ್ಷ್ಮೀದೇವಿಯ ಜೊತೆ ಕುಳಿತುಕೊಂಡಿದ್ದಾನೆ. ಅರಳಿದ ತಾವರೆಯಂಥ ಕಣ್ಣು, ಅರ್ಧಚಂದ್ರಾಕೃತಿಯಾಗಿ ಹಬ್ಬಿದ ಹುಬ್ಬು, ತಿದ್ದಿ ಮಾಡಿದಂಥ ಮುದ್ದಾದ ಮುಖ, ಎಸಳು ಮೂಗು, ಹೊಳವೆ ಗಲ್ಲ, ಮುತ್ತಿನಂಥ ಹಲ್ಲುಗಳು, ಹವಳದಂಥ ತುಟಿ, ಹುಣ್ಣಿಮೆಯ ಚಂದ್ರನಂತೆ ಮಂದಹಾಸ ಸುಂದರವಾದ ಮುಖ, ಕೋಟಿ ಕಾವರ ಚೆಲುವಿನ ನಿಧಿ. ಮೇಲಿನ ಎರಡು ಕೈಗಳಲ್ಲಿ ಶಂಖಚಕ್ರ. ಕೆಳಗಿನ ಎರಡು ಕೈಗಳಲ್ಲಿ ಅಭಯ ಮುದ್ರೆ. ವರದ ಮುದ್ರೆ.

ಇಂಥ ಶ್ರೀಹರಿಯ ಎಡತೊಡೆಯ ಮೇಲೆ ಬಂಗಾರ ಬಣ್ಣದ ಸರ್ವಲಕ್ಷಣ ಸಂಪನ್ನಳಾದ ಮಹಾಲಕ್ಷ್ಮೀ ದೇವಿಯು ಬಂಗಾರದ ಹಾರಗಳಿಂದ ಅಲಂಕೃತಳಾಗಿ ಕುಳಿತುಕೊಂಡಿದ್ದಾಳೆ. ಆ ದೇವದೇವೋತ್ತಮನ ಅಕ್ಕಪಕ್ಕಗಳಲ್ಲಿ ಧರಿಣೀದೇವಿಯೂ, ನೀಲಾದೇವಿಯೂ ಮಂಡಿಸಿದ್ದಾರೆ. ಅಷ್ಟದಳ ಪದ್ಮದ ಎಲ್ಲ ಎಂಟೂ ದಳಗಳ ಮೇಲೆ ವಿಮಲಾ, ಉತ್ತರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವಾ, ಸತ್ಯಾ, ಈಶಾನಾ ಅನುಗ್ರಹಾ ಎಂಬ ಶಕ್ತಿ ಸ್ವರೂಪಿಯರಾದ ದೇವತೆಗಳು ಬಂಗಾರದ ಹಿಡಿಕೆಯ ಚಾಮರಗಳನ್ನು ಹಿಡಿದು ಶ್ರೀಹರಿಯನ್ನು ಸೇವಿಸುತ್ತಿದ್ದಾರೆ. ಐದು ನೂರು ಜನ ಮುತ್ತೈದೆಯರು, ಅಪ್ಸರೆಯರು ಸರ್ವಾಭರಣ ಭೂಷಿತರಾಗಿ ತೇಜಸ್ವಿಯರಾದ ತಾರಿಕೆಯರಂತೆ ಹರಿಯ ಸೇವೆಯನ್ನು ಅನನ್ಯ ಭಕ್ತಿಯಿಂದ ಮಾಡುತ್ತಾರೆ. ಶೇಷ, ಗರುಡ, ಸ್ಕಂದ, ರುದ್ರ ಮುಂತಾದ ಮುಕ್ತರಾದ ದೇವತೆಗಳು ಅನನ್ಯ ಭಕ್ತಿಯಿಂದ ಆ ಭಗವಂತನನ್ನೇ ಆರಾಧಿಸುತ್ತಾರೆ.

ಈ ವೈಕುಂಠ ಲೋಕದ ಪೂರ್ವದಿಕ್ಕಿನಲ್ಲಿ ವಾಸುದೇವನ ದಿವ್ಯಭವ್ಯವಾದ ಮಂದಿರ. ಆಗ್ನೇಯ ದಿಕ್ಕಿನಲ್ಲಿ ಲಕ್ಷ್ಮಿಯ ಪ್ರಾಸಾದ, ದಕ್ಷಿಣ ದಿಕ್ಕಿನಲ್ಲಿ ಸಂಕರ್ಷಣನ ಮನೆ. ನೈಋತ್ಯ ದಿಕ್ಕಿನಲ್ಲಿ ಸರಸ್ವತಿಯ ಗೃಹ. ಪಶ್ಚಿಮದಿಕ್ಕಿನಲ್ಲಿ ಪ್ರದ್ಯುಮ್ನನ ಅರಮನೆ. ವಾಯುವ್ಯದಿಕ್ಕಿನಲ್ಲಿ ರತಿಯ ನಿವಾಸ. ಉತ್ತರ ದಿಕ್ಕಿನಲ್ಲಿ ಅನಿರುದ್ಧನ ನೆಲೆ. ಈಶಾನ್ಯ ದಿಕ್ಕಿನಲ್ಲಿ ಶಾಂತಿ ಎಂಬ ಹೆಸರಿನ ಲಕ್ಷ್ಮಿಯ ಅರಮನೆ. ಇದೆಲ್ಲವೂ ಒಂದನೇ ಆವರಣ. ಎರಡನೇ ಆವರಣದಲ್ಲಿ ಕೇಶವ ನಾರಾಯಣ ಮೊದಲಾದ ಇಪ್ಪತ್ನಾಲ್ಕು ಭಗವನ್ಮೂರ್ತಿಗಳ ದಿವ್ಯ ಮಂದಿರಗಳು ಮೂರನೇಯ ಆವರಣದಲ್ಲಿ ಮಚ್ಛ ಕೂರ್ಮಾದಿ ಭಗವದ್ರೂಪಗಳ ಭವ್ಯ ಪ್ರಾಸಾದಗಳು. ಸತ್ಯಾ, ಅಚ್ಯುತಾ, ಆದಿಶೇಷ, ದುರ್ಗಾ, ಗಣಪತಿ ಮತ್ತು ಶಂಖ ಪದ್ಮಗಳ ನಿಧಿಗಳು ನಾಲ್ಕನೇ ಆವರಣದಲ್ಲಿ ಸೇವಾವ್ರತ ದೀಕ್ಷಿತರಾಗಿ ನಿಂತುಕೊಂಡಿರುತ್ತಾರೆ. ಐದನೇ ಆವರಣದಲ್ಲಿ ನಾಲ್ಕು ವೇದಗಳು ಸಾವಿತ್ರಿ, ಗರುಡ, ಧರ್ಮ ಮತ್ತು ಯಜ್ಞ ಶಂಖ ಚಕ್ರ, ಗದಾ, ಪದ್ಮ,

ಖಡ್ಗ, ಬಿಲ್ಲು, ನೇಗಿಲು ಮತ್ತು ಒನಿಕೆ ಹಾಗೂ ಉಳಿದೆಲ್ಲ ಶಸ್ತ್ರಾಸ್ತ್ರಗಳು. ಆರನೆಯ ಆವರಣವು ಮಂತ್ರಾಸ್ತ್ರಮಯವಾಗಿದೆ. ಕೊನೆಯ ಆವರಣದಲ್ಲಿ ಇಂದ್ರ, ಅಗ್ನಿ, ಯಮ, ವರುಣ ವಾಯು, ಮುಂತಾದವರ ನಿವಾಸಗಳು ಹಾಗೂ ಪರಮೇಶ್ವರನ ಒಂದು ನಿವಾಸ ಸ್ಥಾನವು ಅಲ್ಲಿ ಇರುತ್ತದೆ. ಸಾಧ್ಯರು, ಮರುದ್ಗಣಗಳು ವಿಶ್ವೇಮ ದೇವತೆಗಳು, ಇವರೆಲ್ಲರೂ ಮುಕ್ತರಾಗಿ ಭಗವಂತನ ಪರಂಧಾಮದಲ್ಲಿ ಶ್ರೀಹರಿಯ ಸಾಕ್ಷಾತ್ ಸೇವೆಯ ಸುವರ್ಣ ಸಂಧಿಯನ್ನು ಪಡೆದು ಧನ್ಯರಾಗಿದ್ದಾರೆ.

ಇಂಥ ಸರ್ವಜ್ಞನ ಶ್ಲಾಘನೀಯವಾದ ದಿವ್ಯ ಮಂಟಪದಲ್ಲಿ ತನ್ನ ಪಟ್ಟದರಸಿಯರಾದ ಶ್ರೀ, ಭೂ, ನೀಲಾ ಇವರೊಂದಿಗೆ ಕೂಡಿಕೊಂಡು ಭಗವಂತನು ಶೋಭಿಸುತ್ತಿದ್ದಾನೆ. ನಿತ್ಯ ಮುಕ್ತರಾದ ಭೋಗಪರಾಯಣರಾದ ದಿವ್ಯ ಈ ಮಹಿಷಿಯರಿಂದ ರಾರಾಜಿಸುತ್ತಿದ್ದಾನೆ. ಆ ಪ್ರಭು ಪರಮೇಶ್ವರ. ಅಲ್ಲಿ ಸೂರ್ಯಕಿರಣಗಳಿಂದ ಬೆಳಕು ಇಲ್ಲ. ಸ್ವಯಂ ಪ್ರಕಾಶಪುಂಜ ಆ ಲೋಕ. ಈ ಚಂದ್ರ ಅಲ್ಲಿ ತನ್ನ ಚಂದ್ರಿಕೆಯನ್ನು ಚಾಚಲಾರ. ಅಲ್ಲಿಗೆ ಹೋದವರು ಎಂದೂ ಮರಳಿ ಬರುವದಿಲ್ಲ. ಅಲ್ಲಿ ಮಧ್ಯದಲ್ಲಿ ಮಹಾದೇವಿಯು ಆ ಶ್ರೀಹರಿಯನ್ನು

**ನಮಸ್ತೇ ತ್ರಿಜಗದ್ಧಾಮ್ನೇ ನಮಸ್ತೇ ವಿಶ್ವರೂಪಿಣೇ ।**
**ಪುರಾಣಾಯ ನಮಸ್ತುಭ್ಯಂ ಜಗದುತ್ಪತ್ತಿ ಹೇತವೇ ॥**

ಎಂದು ಬಗೆಬಗೆಯ ಸ್ತೋತ್ರಗಳಿಂದ ಅವನನ್ನು ಹೊಗಳಿ ಹಾಡುತ್ತಾಳೆ. ಮತ್ತು ಭಗವಂತನನ್ನು ವಿನಯದಿಂದ ಹೀಗೆ ಪ್ರಾರ್ಥಿಸುತ್ತಾಳೆ.

**ಮಹಾಲಕ್ಷ್ಮಿ:-**

**ನಮೋ ರಾಮಾಯ, ಕೃಷ್ಣಾಯ ನರಸಿಂಹಾಯ ತೇ ನಮಃ**
**ಕೇಶವಾಯ ನಮಸ್ತುಭ್ಯಂ ಜನತಾಯಕ್ಲೇಶಹಾರಿಣೇ**

ರಾಮ, ಕೃಷ್ಣ, ನರಸಿಂಹ, ಕೇಶವ, ಜನರ ಕ್ಲೇಶಗಳನ್ನೆಲ್ಲ ಅಪಹರಿಸುವ ನಿನಗೆ ನನ್ನ ನಮಸ್ಕಾರ ಇರಲಿ. ಈಗ ನನ್ನಲ್ಲಿದ್ದ ಎಲ್ಲ ಚೇತನಗಳೂ ನಿರಾಧಾರರೂ, ನಿರಾಶ್ರಯರೂ ನಿಶ್ಚೇಷ್ಟರೂ ಆಗಿರುತ್ತಾರೆ. ಅವರಿಗೆ ಯಾವ ಆಕಾರವೂ ಇಲ್ಲ. ದೇಹ ಇಲ್ಲ. ಇಂದ್ರಿಯಗಳೂ ಇಲ್ಲ. ಅವರೆಲ್ಲರೂ ಈಗ ಸಂಪೂರ್ಣ ನಿಷ್ಕ್ರಿಯರು. ಈಗ ನೀನು ಅವರೆಲ್ಲರಿಗೂ ದೇಹಗಳನ್ನು ಕೊಡು. ಇರಲು ಲೋಕಗಳನ್ನು ನೀಡು. ಮೊದಲು ಇದ್ದಂತೆ ಎಲ್ಲವೂ ನಿರ್ಮಿತವಾಗಲಿ. ನೀನು ನನ್ನ ಅಧಿಷ್ಠಾನದಲ್ಲಿ ನಿನ್ನ ಶಕ್ತಿಯನ್ನು ಆಧಾರ ಮಾಡಿ ಬ್ರಹ್ಮಾಂಡವನ್ನು ನಿರ್ಮಿಸು. ಅದರಲ್ಲಿ ಧರ್ಮ, ಅಧರ್ಮ, ಸುಖ ದುಃಖಗಳನ್ನು ಬೆರೆಸಿ ಜಗಜ್ಜನ್ಮಾದಿ ರೂಪ ಲೀಲೆಯನ್ನು ಮಾಡು.

ಮಹಾಲಕ್ಷ್ಮೀದೇವಿಯು ಹೀಗೆ ಪ್ರಾರ್ಥನೆಯನ್ನು ಮಾಡಿಕೊಂಡ ಬಳಿಕ ಅವಳ ಬಿನ್ನಹವನ್ನು ಮನ್ನಿಸಿ ಪ್ರಕೃತಿ ಪುರುಷನಾದ ಅಚ್ಯುತನು ಆ ಪ್ರಕೃತಿಯಲ್ಲಿ ತಾನೇ ಪ್ರವೇಶಿಸಿ ಬ್ರಹ್ಮದೇವರ ಶರೀರಭೂತವಾದ ಮಹತ್ತತ್ವವನ್ನು ನಿರ್ಮಿಸಿದನು. ಆ ಮಹತ್ ತತ್ವದಿಂದ ಅಹಂಕಾರ ತತ್ವವು ಹುಟ್ಟಿತು. ವೈಕಾರಿಕ, ತೈಜಸ, ತಾಮಸ ಎಂಬ ಮೂರು ಬಗೆಯಾದ ಆ ಅಹಂಕಾರ ತತ್ವದಿಂದ ಮೂರು ಗುಣಗಳು ಹುಟ್ಟಿದವು. ಆ ಮೂರು ಗುಣಗಳಿಂದ ಶಬ್ದ, ರೂಪ, ರಸ, ಗಂಧ, ಸ್ಪರ್ಶ ಎಂಬ ಐದು ತನ್ಮಾತ್ರಗಳು ಹುಟ್ಟಿದವು. ಆ ಪಂಚ ತನ್ಮಾತ್ರಗಳಿಂದ ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಎಂಬ ಪಂಚ ಮಹಾ ಭೂತಗಳು

ಉತ್ಪನ್ನವಾದವು. ಅವುಗಳಲ್ಲಿ ಮೊದಲು ಆಕಾಶ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಪೃಥ್ವಿ ಜನಿಸಿದವು. ಈ ಪಂಚಮಹಾಭೂತ ಹಾಗೂ ತನ್ಮಾತ್ರಗಳನ್ನು ತೆಗೆದುಕೊಂಡು ಇವೆಲ್ಲವನ್ನೂ ಮಿಶ್ರಣಮಾಡಿ ಮಹತ್ತರವಾದ ಬ್ರಹ್ಮಾಂಡವನ್ನು ಆ ಭಗವಂತನು ನಿರ್ಮಿಸಿದ. ಆ ಬ್ರಹ್ಮಾಂಡದಲ್ಲಿ ಹದಿನಾಲ್ಕು ಲೋಕಗಳನ್ನು ಬ್ರಹ್ಮಾದಿ ದೇವತೆಗಳನ್ನೂ ಭಗವಂತನೇ ಸೃಷ್ಟಿಸಿದ. ದೈವ, ಮಾನುಷ, ತಿರ್ಯಂಚ (ಪಶುಪಕ್ಷಿಗಳು) ಮತ್ತು ಸ್ಥಾವರ ಎಂದರೆ ಮರಬಳ್ಳಿಗಳು ಹೀಗೆ ಚತುರ್ವಿಧವಾದ ಸೃಷ್ಟಿಯನ್ನು ಬ್ರಹ್ಮದೇವರು ಮಾಡಿದರು. ಹೀಗೆ ಮುಂದೆ ಸ್ಥಾವರ ಜಂಗಮಾತ್ಮಕವಾದ ಇಡೀ ಪ್ರಪಂಚವೇ ಸೃಷ್ಟಿಸಲ್ಪಟ್ಟಿತು. ಈ ಪ್ರಪಂಚದಲ್ಲಿ ಸುಜೀವಿಗಳು ತಮ್ಮ ತಮ್ಮ ಕರ್ಮಾನುಸಾರವಾಗಿ ದೇವಯೋನಿಯಲ್ಲಿಯೂ ಮನುಷ್ಯ ಯೋನಿಯಲ್ಲಿಯೂ ಪಶುಪಕ್ಷಿಗಳಾಗಿಯೂ ಅಥವಾ ಮರಬಳ್ಳಿಗಳಾಗಿಯೂ ಜನಿಸುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ*
*ಉತ್ತರಖಂಡದಲ್ಲಿನ ಎರಡು ನೂರ ಹತ್ತನೇಯ ಅಧ್ಯಾಯ ಮುಗಿದುದು*



## ದೇವಸೃಷ್ಟಿ ಹಾಗೂ ಶ್ರೀಹರಿಯ ಅವತಾರಗಳು | ಅಧ್ಯಾಯ - ೨೧೧

**ಪಾರ್ವತಿ:-** ಪ್ರಭು, ಬ್ರಹ್ಮಾದಿ ದೇವತೆಗಳು ಹೇಗೆ ಜನಿಸಿದರು? ಮತ್ತು ಶ್ರೀಹರಿಯು ಯಾವ ಅವತಾರಗಳನ್ನು ಮಾಡಿದ? ಎನ್ನುವದನ್ನು ನನಗೆ ವಿಸ್ತಾರ ಪೂರ್ವಕವಾಗಿ ಹೇಳಿರಿ.

**ಮಹಾದೇವ:-** ಪಂಚ ಮಹಾಭೂತಗಳ ಸೃಷ್ಟಿಯ ಅನಂತರ ಬ್ರಹ್ಮದೇವನು ಅವುಗಳ ಮಧ್ಯದಲ್ಲಿ ಅಗಾಧ ಜಲರಾಶಿಯಿಂದ ದೊರೆಯುವ ಮಹಾಸಮುದ್ರವನ್ನು ನಿರ್ಮಿಸಿದ. ಆ ನೀರಿನಲ್ಲಿ ತೇಲುವ ಒಂದು ಆಲದ ಎಲೆಯ ಮೇಲೆ ಶ್ರೀಹರಿಯು ಯೋಗನಿದ್ರೆಯನ್ನು ಹೊಂದಿದ. ತನ್ನ ಮಡದಿಯಾದ ಮಾಯಾ ಎಂಬ ಹೆಸರಿನ ಲಕ್ಷ್ಮೀದೇವಿಯೊಂದಿಗೆ ಚಿರಕಾಲ ವಿಹರಿಸಿದ. ಅನಂತರ ಆ ಮಾಯಾದೇವಿಯಲ್ಲಿ ಕಾಲವನ್ನು ಸೃಷ್ಟಿಸಿದ. ಆ ಕಾಲದಲ್ಲಿ ಶ್ರೀಹರಿಯ ಹೊಕ್ಕಳದಲ್ಲಿ ಒಂದು ಸುಂದರವಾದ ಹೊಂದಾವರೆಯು ಎಲ್ಲ ಜಗತ್ತಿಗೂ ಬೀಜಭೂತವಾಗಿ ಅರಳಿತು, ಆ ಭಗವಂತನ ನಾಭೀ ಪದ್ಮದಲ್ಲಿ ಸರ್ವಜ್ಞ ಮೂರ್ತಿಗಳಾದ ಬ್ರಹ್ಮದೇವರು ಹುಟ್ಟಿದರು. ಅನಂತರ ಜಗತ್ತನ್ನು ಸೃಷ್ಟಿಮಾಡಬೇಕೆಂದು ಬಯಸುವ ಬ್ರಹ್ಮನು ಯೋಗನಿದ್ರೆಯಲ್ಲಿ ಪವಡಿಸಿದ ಪರಮೇಶ್ವರರನ್ನು ಭಕ್ತಿಯಿಂದ ಸ್ತೋತ್ರ ಮಾಡಿದರು.

**ನಾರಾಯಣಾಯ ವಿಶ್ವಾಯ ವಿಶ್ವೇಶಾಯ ನಮೋ ನಮಃ ।**
**ಶ್ರೀ ಭೂ ನೀಲಾದಿ ಪತಯೇ ಬ್ರಹ್ಮಣೇ ಪರಮಾತ್ಮನೇ ॥**

ಬ್ರಹ್ಮದೇವರ ಈ ಪ್ರಾರ್ಥನೆಯ್ನು ಕೇಳಿ ಪರಮಾತ್ಮನು ತನ್ನ ಹಾಸಿಗೆಯಿಂದ ಎದ್ದ. ಯೋಗನಿದ್ದೆಯಿಂದ ಎದ್ದವನೆ ಜಗಸೃಷ್ಟಿಯನ್ನು ಮಾಡಲು ಉಪಕ್ರಮಿಸಿದ. ಮುಂದೆ

ಶ್ರೀಹರಿಯು ಅಂತರ್ಧಾನವನ್ನು ಹೊಂದಿದ. ಅನಂತರ ಬ್ರಹ್ಮದೇವನು ಆ ಭಗವಂತನ ಆದೇಶದಂತೆ ಜಗತ್ತಿನ ಸೃಷ್ಟಿ ಕಾರ್ಯವನ್ನು ಮುಂದುವರೆಸಿದ. ಮುಂದೆ ಬ್ರಹ್ಮದೇವನು ನಾರಾಯಣನನ್ನು ಅತ್ಯಂತ ಭಕ್ತಿಯಿಂದ ಧ್ಯಾನ ಮಾಡಿದ. ಧ್ಯಾನದ ಕೊನೆಯಲ್ಲಿ ಆ ಬ್ರಹ್ಮದೇವನ ಹಣೆಯಿಂದ ಒಂದು ಬೆವರಿನ ಹನಿಯು ಕೆಳಗೆ ಬಿದ್ದಿತು. ನೆಲದ ಮೇಲೆ ಬಿದ್ದ ಆ ಶ್ವೇತ ಬಿಂದುವಿನಿಂದಲೇ ಪಾರ್ವತಿ, ಸ್ವಯಂ ನಾನೇ ಹುಟ್ಟಿದೆ. ಹಣೆಯ ಮೇಲೆ ಮೂರು ಕಣ್ಣು, ಕೈಯಲ್ಲಿ ತ್ರಿಶೂಲ, ತಲೆಯ ಮೇಲೆ ಜಡೆ, ಜಡೆಯ ಮೇಲೆ ಗಂಗೆ, ಗಂಗೆಯ ಮೇಲೆ ಮತ್ತೆ ಜಟಾ ಜೂಟ, ಅದರ ಮೇಲೆ ಮುಕುಟ, ಆ ಮುಕುಟದ ಮೇಲೆ ಚಂದ್ರ. ಇಂಥ ನಾನು ಕೈ ಮುಗಿದು ಆ ಪರಮಾತ್ಮನನ್ನು ಏನು ಅಪ್ಪಣೆ ಎಂದು ಕೇಳಿದೆ. ಅದಕ್ಕೆ ನಾರಾಯಣನು ಸಂತೋಷದಿಂದ - ''ರುದ್ರ, ನೀನು ನನ್ನ ಸಂಕರ್ಷಣ ರೂಪದಿಂದ ಅಧಿಷ್ಠಿತನಾಗಿ ಈ ಜಗತ್ತಿನ ಸಂಹಾರ ಕಾರ್ಯವನ್ನು ಮಾಡು'' ಎಂದು ಹೇಳಿದ ಆದುದರಿಂದ ನಾನು ಆ ಶ್ರೀಹರಿಯ ಸಂಕರ್ಷಣ ಎಂಬ ರೂಪದಿಂದ ಅಧಿಷ್ಠಿತನಾಗಿ ನನಗೆ ಅವನು ಒಪ್ಪಿಸಿದ ಸಂಹಾರ ಕಾರ್ಯವನ್ನು ಮಾಡುತ್ತ ಇರುತ್ತೇನೆ. ಅನಂತರ ಆ ಭಗವಂತನು ತನ್ನ ಎರಡು ಕಣ್ಣುಗಳಿಂದ ಸೂರ್ಯ ಚಂದ್ರರನ್ನೂ ಎರಡು ಕಿವಿಗಳಿಂದ ವಾಯು ಹಾಗೂ ದಿಕ್ಕುಗಳನ್ನು, ಮುಖದಿಂದ ಇಂದ್ರ ಹಾಗೂ ಅಗ್ನಿಯರನ್ನೂ ಸೃಷ್ಟಿ ಮಾಡಿದ. ಮೂಗಿನಿಂದ ವರುಣನನ್ನು, ಮಿತ್ರನನ್ನು ಬಾಹುಗಳಿಂದ, ಎಲ್ಲ ದೇವತೆಗಳನ್ನು ತನ್ನ ಕೋಮಲ ರೂಪಗಳಿಂದ, ರನ್ನ ಹಾಗೂ ಔಷಧಿಗಳನ್ನು ತೊಗಲಿನಿಂದ ಬೆಟ್ಟ, ಸಮುದ್ರ, ಹಸು, ಸಕಲ ಮುಂತಾದವುಗಳನ್ನು ನಿರ್ಮಿಸಿದ. ಅವನ ಮುಖದಿಂದ ಬ್ರಾಹ್ಮಣ, ತೋಳುಗಳಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ, ಪಾದಗಳಿಂದ ಶೂದ್ರ ಹುಟ್ಟಿದರು.

ಷಡ್ಗುಣೈಶ್ವರ್ಯ ಸಂಪನ್ನನಾದ ಈ ವಾಸುದೇವನು ತ್ರಿಗುಣಾತ್ಮಕವಾದ ತನ್ನ ರೂಪವನ್ನು ಅನಿರುದ್ಧ, ಸಂಕರ್ಷಣ ವಾಸುದೇವ ಪ್ರದ್ಯುಮ್ನ ಎಂದು ನಾಲ್ಕು ವಿಧವಾಗಿ ವ್ಯಕ್ತಗೊಳಿಸುತ್ತಾನೆ. ಇದರಲ್ಲಿ ಪ್ರದ್ಯುಮ್ನನು ಬ್ರಹ್ಮಾದಿದೇವತೆಗಳು ಹಾಗೂ ಪ್ರಜಾಪತಿ ಕುಲ, ಪ್ರಪಂಚದ ಜನರು ಇವರೆಲ್ಲರ ಅಂತರ್ಯಾಮಿಯಾಗಿದ್ದು ಬ್ರಹ್ಮನಲ್ಲಿದ್ದು ಸೃಷ್ಟಿ ವ್ಯಾಪಾರವನ್ನು ಮಾಡುತ್ತಾನೆ. ಅನಂತರ ಶಕ್ತಿ ಹಾಗೂ ತೇಜಸ್ಸುಗಳಿಂದ ಒಡಗೂಡಿದ ಅನಿರುದ್ಧನು ಹದಿನಾಲ್ಕು ಮನುಗಳು, ರಾಜರು ಹಾಗೂ ಜನರ ಅಂತರ್ಯಾಮಿಯಾಗಿದ್ದು ಕಾಲನಿಯಾಮಕನಾಗಿದ್ದು ಜಗತ್ತಿನ ರಕ್ಷಣೆಯನ್ನು ಮಾಡುತ್ತಾನೆ. ಸಂಕರ್ಷಣ ರೂಪಿಯಾಗಿ ಎಲ್ಲರ ಅಂತರ್ಯಾಮಿಯಾಗಿ ಜಗತ್ಸಂಹಾರ ಕಾರ್ಯವನ್ನು ಮಾಡುತ್ತಾನೆ.

ಮತ್ಸ್ಯ ಕೂರ್ಮ, ವರಾಹ, ನರಸಿಂಹ, ವಾಮನ ಹಾಗೂ ರಾಮಕೃಷ್ಣ, ಕಲ್ಕಿ ಎಂಬ ಹತ್ತು ಅವತಾರಗಳನ್ನು ಎತ್ತಿ ಆ ಶ್ರೀಹರಿಯು ದುಷ್ಟಶಿಕ್ಷಣ, ಸಾಧು ರಕ್ಷಣ ಕಾರ್ಯವನ್ನು ಮಾಡುತ್ತಾನೆ. ನರಸಿಂಹ, ಪರಶುರಾಮ, ಸೀತಾರಾಮ, ಬಲರಾಮ ಕೃಷ್ಣ ಮುಂತಾದ ರೂಪಗಳಲ್ಲಿ ಮಾತ್ರ ಪೂರ್ಣತೆಯಿದೆ ಎಂದು ಕಂಡು ಬರುವದು. ಆದರೆ ದೀಪದಿಂದ ಉತ್ಪನ್ನವಾದ ದೀಪದಂತೆ ಪರಮಾತ್ಮನ ಎಲ್ಲ ಅವತಾರಗಳು ಪೂರ್ಣಾವತಾರವೇ ಎಂದು ತಿಳಿಯಬೇಕು.

ವೈಕುಂಠ, ಪರಮವ್ಯೋಮ, ಶ್ವೇತದ್ವೀಪ, ಅನಂತಾಸನ ಇವು ನಾಲ್ಕೂ ಲೋಕಗಳು ಭಗವತ್ಸ್ವರೂಪ. ಶ್ವೇತದ್ವೀಪವು ಕ್ಷೀರಸಾಗರದ ಮಧ್ಯದಲ್ಲಿರುತ್ತದೆ. ವೈಕುಂಠವು

ಜಲಾವರಣದ ಮಧ್ಯದಲ್ಲಲಿದೆ. ಅದರಲ್ಲಿ ಆಮೋದ ಸಾಂತಾನಿಕ ಮೊದಲಾದ ಅನೇಕ ರೂಪಗಳುಳ್ಳ ಆ ವೈಕುಂಠ ನಗರ ಮಧ್ಯದಲ್ಲಿ ವೇದವತೀ ಎಂಬ ರಮ್ಯವಾದ ಪಟ್ಟಣ. ಐವತ್ತೈದು ಯೋಜನ ವಿಸ್ತಾರ. ಅದರಲ್ಲಿ ನಿತ್ಯ ಯೌವನರಾದ ಸ್ತ್ರೀ ಪುರುಷರು ಶ್ರೀಹರಿಯ ಸಮಾನವಾದ ರೂಪವನ್ನು ಹೊಂದಿ ಭಗವಂತನ ನಾಮಸ್ಮರಣೆಯನ್ನು ಸರ್ವದಾ ಮಾಡುತ್ತ ತಮ್ಮ ಮನಸ್ಸಿನಲ್ಲಿ ಬಂದ ಸಕಲ ವಿಧವಾದ ಸುಖೋಪಭೋಗಗಳನ್ನು ಅನುಭವಿಸುತ್ತಾರೆ. ಶ್ರೀಹರಿಯೊಂದಿಗೆ ತಮ್ಮ ಯೋಗ್ಯತೆಗೆ ಅನುಗುಣವಾದ ಪೂರ್ಣಸುಖವನ್ನು ಪಡೆಯುತ್ತಾರೆ. ಆ ಲೋಕಕ್ಕೆ ಹೋದವರು ಎಂದೂ ಪುನಃ ಈ ಭೂಲೋಕಕ್ಕೆ ಮರಳಿ ಬರುವದಿಲ್ಲ.

ಮೋಕ್ಷ ಎಂದರೆ ವಿಷ್ಣುವಿನ ಅನುಚರತ್ವವೇ

**ವಿಷ್ಣೋರನುಚರತ್ವಂಚ ಮೋಕ್ಷಮಾಹುರ್ಮನೀಷಿಣಃ ।**
**ಸದಾಸ್ಯ ನಪರೇಶಸ್ಯ ಬಂಧನಂ ಕೀರ್ತಿತಂ ॥**

ವಿಷ್ಣುವಿನ ದಾಸ್ಯವು ಬಂಧನ ಎನಿಸುವದಿಲ್ಲ. ಯಾವಾಗಲೂ ಸರ್ವ ದುಃಖಗಳನ್ನು ನಾಶಮಾಡುವ ಶ್ರೀಹರಿಯ ನಾಮಸ್ಮರಣಗಳನ್ನು ಮಾಡಬೇಕು. ಶ್ರೀಹರಿಯ ನಾಮೋಚ್ಚರಣ ಮಾತ್ರದಿಂದಲೇ ಮಾನವನು ಪರಮಪದವನ್ನು ಹೊಂದುತ್ತಾನೆ. ಈ ಪರಮ ಪದವಿಯನ್ನು ಹೊಂದಲು ಸುಲಭದ ದಾರಿಯೆಂದರೆ **'ಓಂ ನಮೋ ನಾರಾಯಣಾಯ'** ಎಂಬ ಅಷ್ಟಾಕ್ಷರ ಮಂತ್ರದ ವಿಧಿಪೂರ್ವಕ ಜಪಾನುಷ್ಠಾನ. ಇದರಿಂದ ಸರ್ವ ಇಷ್ಟಾರ್ಥಗಳನ್ನು ಒದಗಿಸುವ ವಿಷ್ಣುಲೋಕ ಪ್ರಾಪ್ತಿ ನಿಶ್ಚಿತ. ಆಧಾರ ಶಕ್ತ್ಯಾದಿಗಳಿಂದ ಧರಿಸಲ್ಪಟ್ಟ ಬಂಗಾರದ ಪೀಠದಲ್ಲಿ ಅಷ್ಟದಳ ಪದ್ಮದ ಕರಣಿಕಾಗ್ರದಲ್ಲಿ ರಮ್ಯವಾದ ಶ್ರೀ ಎಂಬ ಲಕ್ಷ್ಮೀ ಬೀಜದ ಶುಭಾಕ್ಷರದ ಮೇಲೆ ಪದ್ಮಾಸನದ ಮೇಲೆ ಶ್ರೀಮನ್ನಾರಾಯಣನು ಮಂಡಿಸಿದ್ದಾನೆ. ಅವನ ದಕ್ಷಿಣಪಕ್ಕದಲ್ಲಿ ಜಗನ್ಮಾತೆಯಾದ ಲಕ್ಷ್ಮೀದೇವಿಯು ಸರ್ವ ಲಕ್ಷಣ ಸಂಪನ್ನಳಾಗಿ ಚಾಮರ ಬೀಸುತ್ತ ನಿಂತಿರುತ್ತಾಳೆ. ಎಡಬದಿಯಲ್ಲಿ ಬಗೆಬಗೆಯ ಆಭರಣ ಧರಿಸಿದ ಭೂದೇವಿಯು ಚಾಮರ ಸೇವೆಯನ್ನು ಸಲ್ಲಿಸುತ್ತಾಳೆ.

ವಿಮಲಾ, ಉತ್ಕರ್ಷಿಣಿ ಜ್ಞಾನಾ ಕ್ರಿಯಾ ಯೋಗಾ ಪ್ರಹ್ವಾ ಸತ್ಯಾ ಈಶಾನಾ, ಅನುಗ್ರಹಾ ಎಂಬ ಶಕ್ತಿರೂಪಗಳು ಪದ್ಮದ ಎಂಟು ದಳಗಳಲ್ಲಿ ಸೇವೆಗೆ ಕಟ್ಟಬದ್ಧರಾಗಿ ನಿಂತಿರುತ್ತಾರೆ. ಅದರ ಮಧ್ಯದಲ್ಲಿ ಶಂಖ, ಚಕ್ರ, ಗದಾ, ಪದ್ಮಧಾರಿಯಾದ ಶ್ರೀಹರಿಯು ಎಲ್ಲ ದೇವತೆಗಳಿಂದ ಪ್ರತಿನಿತ್ಯ ಪೂಜಿತನಾಗಿ ವಾಸ ಮಾಡಿದ್ದೇನೆ. ಇದು ವಿಷ್ಣುವಿನ ಮೊದಲನೇಯ ಲೋಕ.

ಸತ್ಯ ಎಂಬುದು ವಿಷ್ಣುವಿನ ಎರಡನೆಯ ಲೋಕ. ಅದು ಶುದ್ಧ ಸತ್ವಮಯ. ಪ್ರಳಯ ಕಾಲದಲ್ಲಿಯೂ ಅದಕ್ಕೆ ನಾಶವಿಲ್ಲ. ಮನಸ್ಸಿಗೆ ಬಂದಾಗ ನಾನು ಬ್ರಹ್ಮದೇವರು ಕೂಡ ಅಲ್ಲಿಗೆ ಹೋಗಲಾರೆವು. ಮತ್ತು ನೋಡಲಾರೆವು. ಆ ಸತ್ಯಲೋಕದ ಮಧ್ಯದಲ್ಲಿ ವಾಸುದೇವನ ಅಂತಃಪುರ. ಆ ಅಂತಃಪುರದ ಮಧ್ಯದಲ್ಲಿ ಒಂದು ಕಲ್ಪವೃಕ್ಷ. ಅದರ ನೆರಳಿನಲ್ಲಿ ಒಂದು ತಾವರೆಯ ಆಸನ. ಅದರ ಮೇಲೆ ಲಕ್ಷ್ಮೀದೇವಿಯ ಜೊತೆಗೆ ವಾಸುದೇವನು ಮಂಡಿಸಿದ್ದಾನೆ. ಥಳ ಥಳ ಹೊಳೆಯುತ್ತಲಿವೆ ಅವನ ಮೈ ಮೇಲಿನ ಆಭರಣಗಳು. ಕೋಟಿ ಚಂದ್ರರಿಗೂ ಮಿಗಿಲಾಗಿ ಇದ್ದೀತು ಅವನ ಆ ಕಾಂತಿ,

ಶ್ರೀವತ್ಸಕೌಸ್ತುಭಗಳಿಂದ ಶೋಭಾಯಮಾನ ಅವನ ವೃಕ್ಷಸ್ಥಳ. ಭೂದೇವಿ ಹಾಗೂ ನೀಲಾದೇವಿ ಇಬ್ಬರೂ ಆ ಭಗವಂತನನ್ನು ಆಶ್ರಯಿಸಿದ್ದಾರೆ. ಲಕ್ಷ್ಮೀದೇವಿಯ ಎಂಟು ರೂಪಗಳಾದ ರಮಾ, ರುಕ್ಮಿಣಿ, ಸೀತಾ, ಪದ್ಮ, ಪದ್ಮಾಲಯಾ, ಶಿವಾ, ಸುಲಕ್ಷಣಾ, ಸುಶೀಲಾ ಎಂಬ ತನ್ನದೇ ಆದ ಅಷ್ಟಮೂರ್ತಿಗಳಿಂದ ಆ ದೇವಿಯು ಭಗವಂತನೊಂದಿಗೆ ಸ್ವಚ್ಛಂದಾನಂದದಿಂದ ವಿಹರಿಸುತ್ತಾಳೆ. ಈ ಸ್ಥಾನವನ್ನು **ಓಂ ನಮೋ ಭಗವತೇ ವಾಸುದೇವಾಯ** ಎಂಬ ದ್ವಾದಶಾಕ್ಷರ ಮಂತ್ರದಿಂದ ಜಪಿಸುವವರು ಹೊಂದುತ್ತಾರೆ.

ಮೂರನೆಯ ಶ್ರೀಹರಿಯ ಪರಮ ಪದವು ಶ್ವೇತದ್ವೀಪ. ಕ್ಷೀರಸಮುದ್ರದ ಉತ್ತರ ದಂಡೆಯಲ್ಲಿ ಇರುತ್ತದೆ. ಸನಕ, ಸನಂದನ, ಸನಾತನ, ಸನತ್ಕುಮಾರರು ಜಾತ, ಓಢು, ಪಂಚಶಿಖ ಎಂಬ ಏಳು ಜನ ಬ್ರಹ್ಮದೇವರ ಮಾನಸ ಪುತ್ರರು ಪರಮವಿರಕ್ತರಾಗಿ ಭಗವಂತನ ದರ್ಶನದಿಂದ ಉಂಟಾದ ಪರಮಾನಂದ ರಸವನ್ನು ಸವಿಯುತ್ತ ಆ ಶ್ವೇತದ್ವೀಪದಲ್ಲಿ ವಾಸಮಾಡುತ್ತಾರೆ. ಅಂಥ ಮಹಾತ್ಮರಿಗೆ ದರ್ಶನ ಕೊಡಲಿಕ್ಕಾಗಿಯೇ ಶ್ರೀಹರಿಯು ಆ ಶ್ವೇತದ್ವೀಪದಲ್ಲಿ ವಾಸ ಮಾಡುತ್ತಾನೆ. ಆ ಶ್ವೇತದ್ವೀಪದ ಮಧ್ಯದಲ್ಲಿರುವ ಶ್ವೇತವತೀ ಎಂಬ ನಗರ ಮಧ್ಯದಲ್ಲಿ ಪದ್ಮಾಸನದಲ್ಲಿ ಮಂಡಿಸಿದ್ದಾನೆ, ಪರಮೇಶ್ವರ. ಅವನ ಎಡತೊಡೆಯ ಮೇಲೆ ಮಹಾಲಕ್ಷ್ಮೀ ದೇವಿಯು ಸರ್ವಾಲಂಕಾರ ಭೂಷಿತಳಾಗಿ ಆಸೀನಳಾಗಿರುತ್ತಾಳೆ. ಈಶಾವಾಸ್ಯಾ, ಮಹಾದೇವಿ, ಸಾವಿತ್ರಿ, ಜಾಹ್ನವಿ, ಕಮಲಾಲಯಾ, ಸರ್ವದಾ, ಪದ್ಮಾ, ಮುಂತಾದವರು ಅವಳಿಗೆ ಸಮಾನವಾದ ಶಕ್ತಿದೇವಿಯರು ಅವಳ ಸೇವೆಗಾಗಿ ಕೈಕಟ್ಟಿಕೊಂಡು ನಿಂತಿರುತ್ತಾರೆ. ಶ್ರದ್ಧಾ, ಮೇಧಾ, ಧೃತಿ, ಪ್ರಜ್ಞಾ, ಧಾರಣಾ, ಶಾಂತಿ, ಸ್ಮೃತಿ, ಶ್ರುತಿ, ಮತಿ, ವೃದ್ಧಿ, ಬುದ್ಧಿ, ಮನೀಷಿಣಿ ಮೊದಲಾದ ಎಲ್ಲ ಆ ಲಕ್ಷ್ಮಿಯ ದಾಸಿಯರು ಅವಳನ್ನು ಸೇವಿಸುತ್ತ ಇರುತ್ತಾರೆ. ವಿಷ್ಣುಮಂತ್ರವನ್ನು ಭಕ್ತಿಯಿಂದ ಜಪಮಾಡುವವರು ಏಕಾದಶಿ ಉಪವಾಸ ಜಾಗರ, ಹರಿಪೂಜೆ, ದ್ವಾದಶಿ ಪಾರಣೆ, ಮುಂತಾದ ಹರಿ ಪ್ರಿಯಕರವಾದ ತಿಥಿತ್ರಯವನ್ನು ಸರಿಯಾಗಿ ಪಾಲನ ಮಾಡುವವರು ಈ ಲೋಕವನ್ನು ಹೊಂದುತ್ತಾರೆ. ವಿಷ್ಣು ಸಹಸ್ರನಾಮವನ್ನು ಪಾರಾಯಣ ಮಾಡಿ ತರ್ಪಣ ನೀಡಿ, ಆ ಸಹಸ್ರನಾಮಗಳಿಂದ ಹೋಮ ಮಾಡುವವರು ಈ ಮೂರನೇ ವಿಷ್ಣುಲೋಕವನ್ನು ಪಡೆಯುತ್ತಾರೆ.

ನಾಲ್ಕನೆಯ ಹರಿಯ ಸ್ಥಾನವನ್ನು ಹೇಳುತ್ತೇನೆ ಕೇಳು. ಕ್ಷೀರ ಸಮುದ್ರದಲ್ಲಿ ಆದಿಶೇಷನ ಅರಳಿದ ಸಾವಿರ ಹೆಡೆಗಳ ಅಡಿಯಲ್ಲಿ ಹಾವಿನ ಹಾಸಿಗೆಯ ಮೇಲೆ ಶ್ರೀದೇವಿಯೊಂದಿಗೆ ಶ್ರೀಹರಿಯು ಆಸೀನನು ಆಗಿರುತ್ತಾನೆ. ಅವನ ತಲೆಯ ಮೇಲಿನ ಕಿರೀಟ ಕೋಟಿ ಸೂರ್ಯರಂತೆ ಥಳ ಥಳಿಸುತ್ತದೆ. ಕಿವಿಯೊಳಗಿನ ಕುಂಡಲಗಳು ರತ್ನೋಜ್ವಲ ಬೆಳದಿಂಗಳಿನಲ್ಲಿ ನೇಯ್ದಂತಿರುವ ಪೀತಾಂಬರ ಶಂಖ, ಚಕ್ರ, ಗದಾ, ಬಿಲ್ಲುಗಳಿಂದ ಶೋಭಿಸುವ ನಾಲ್ಕು ಭುಜಗಳ ನಾಲ್ಕು ಕೈಗಳು, ಮಾಲೆ ಕೊರಳಲ್ಲಿ, ಕೌಸ್ತುಭ ವಕ್ಷಸ್ಥಳದಲ್ಲಿ ಶ್ರೀವತ್ಸ, ಎದೆಯ ಮೇಲೆ ವನಮಾಲೆ, ಅವನಿಗೆ ಯೋಗ್ಯಳಾದ ರೂಪ ಶೀಲ ಗುಣಾನ್ವಿತಳಾದ ತರುಣಿ ರಮಣೀಮಣಿ ಲಕ್ಷ್ಮೀದೇವಿಯು ಭಗವಂತನನ್ನು ಆಲಿಂಗಿಸಿಕೊಂಡು ಕುಳಿತಿದ್ದಾಳೆ. ತನ್ನ ದರ್ಶನಕಾಂಕ್ಷಿಗಳಾದ ದೇವತೆಗಳನ್ನು ಕರುಣಾ ಕಟಾಕ್ಷದಿಂದ ನೋಡಿ ಹರಿಸುತ್ತಾಳೆ. ದೈತ್ಯರ ಉಪದ್ರವವು ಉಲ್ಬಣವಾದಾಗ ದೇವತೆಗಳು

ಈ ಕ್ಷೀರ ಸಮುದ್ರಕ್ಕೆ ಬಂದು ಅದರ ಮಧ್ಯದಲ್ಲಿ ಶೇಷಪರ್ಯಂಕದಲ್ಲಿ ಶ್ರೀದೇವಿಯೊಂದಿಗೆ ಪವಡಿಸಿದ ಪರಮಾತ್ಮನನ್ನು ಕೊಂಡಾಡಿ ಪ್ರಸನ್ನಿಕರಿಸಿಕೊಂಡು ಅವನಿಗೆ ಶರಣು ಹೋಗಿ ಅಭಯ ವರವನ್ನು ಪಡೆಯುತ್ತಾರೆ. ಅನಂತರ ಭಗವಂತನು ಆ ದೇವತಾ ಪುರುಷರ ಪ್ರಾರ್ಥನೆಯಂತೆ ದುಷ್ಟದಾನವರನ್ನು ವಧಿಸಿ ಲೋಕ ರಕ್ಷಣೆಯನ್ನು ಮಾಡುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ದೇವಸೃಷ್ಟಿ ಹಾಗೂ ಶ್ರೀಹರಿಯ ಅವತಾರಗಳು ಎಂಬ ಎರಡು ನೂರ ಹನ್ನೊಂದನೇಯ ಅಧ್ಯಾಯ ಮುಗಿದುದು*

—o—

## ಮತ್ಸ್ಯಾವತಾರ

**ಅಧ್ಯಾಯ - ೨೧೨**

**ಪಾರ್ವತಿ:-** ಮಹೇಶ್ವರ, ದೇವೋತ್ತಮನಾದ ಶ್ರೀಹರಿಯು ಯಾವ ರೂಪದಿಂದ ಯಾವ ದುಷ್ಟನನ್ನು ವಧಿಸಿದ? ಇದನ್ನೆಲ್ಲ ಹೇಳು. ಆ ಮಧುಸೂದನನ ಮತ್ಸ್ಯ ಕೂರ್ಮಾದಿ ರೂಪಗಳ ಲೀಲಾವತಾರಗಳ ಚರಿತ್ರವನ್ನು ನನ್ನ ಮೇಲಿನ ಪ್ರೀತಿಯಿಂದ ತಿಳಿಸು.

**ಮಹಾದೇವ:-** ದೇವಿ, ದೀಪದಿಂದ ಹಚ್ಚಿದ ಇನ್ನೊಂದು ದೀಪವು ಮೊದಲಿನ ದೀಪದಷ್ಟೇ ಪ್ರಕಾಶಮಾನವಾಗಿ ಇರುವುದಷ್ಟೆ? ಅದರಂತೆ ಪರಮಾತ್ಮನ ಪೂರ್ಣಾವತಾರಗಳೆಲ್ಲವೂ ಮೂಲರೂಪದಂತೆ ಮಹೋಜ್ವಲ, ಸರ್ವಗುಣ ಪರಿಪೂರ್ಣ. ಅವನ ಆವೇಶಾವತಾರಗಳು ಮಾತ್ರ ತಾತ್ಕಾಲಿಕ, ಪರಿಮಿತ. ಭಗವಂತನ ಈ ಸಾಕ್ಷಾತ್ ಅವತಾರಗಳಲ್ಲಿ ಮತ್ಸ್ಯಾವತಾರವೇ ಮೊದಲನೇಯದು.

ಬ್ರಹ್ಮದೇವರು ಮೊದಲು ಭೃಗು, ಮರೀಚಿ, ಅತ್ರಿ, ದಕ್ಷ, ಕರ್ದಮ, ಪುಲಸ್ತ್ಯ, ಪುಲಹ, ಅಂಗಿರಸ್, ಮತ್ತು ಕೃತ ಎಂಬ ಒಂಭತ್ತು ಪ್ರಜಾಪತಿಗಳನ್ನು ತನ್ನ ಮನಸ್ಸಿನಿಂದ ನಿರ್ಮಿಸಿದರು. ಮರೀಚಿಗೆ ಕಶ್ಯಪ, ಎಂಬ ಮಗನು ಹುಟ್ಟಿದ. ಆ ಕಶ್ಯಪನಿಗೆ ಆದಿತಿ, ದಿತಿ, ಕದ್ರು, ವಿನುತಾ ಎಂಬ ನಾಲ್ಕು ಜನ ಭಾರ್ಯೆಯರು. ಅವರಲ್ಲಿ ಅದಿತಿ ಹೆತ್ತದ್ದು ದೇವತೆಗಳನ್ನು, ಅದಿತಿಯ ಮಕ್ಕಳನ್ನು ನೋಡಿದರೇ ಸಾಕು, ಸಂಪತ್ತು, ಸೌಭಾಗ್ಯ, ಶುಭ, ಸರ್ವವೂ ಅವರ ದರ್ಶನದಿಂದಲೇ ಲಭ್ಯ.

ಕಶ್ಯಪರ ಎರಡನೆಯ ಹೆಂಡತಿ ದಿತಿ. ಅವಳು ಹೆತ್ತ ಪುತ್ರರೆಲ್ಲರೂ ಮದೋನ್ಮತ್ತರು. ಮಹಾಬಲಿಷ್ಠರು. ಶಂಭಕ, ಹಯಗ್ರೀವ, ಹಿರಣ್ಯಾಕ್ಷ, ಹಿರಣಕಶ್ಯಪು ಜಂಬ, ಮಯ, ಮಕರ, ಮೊದಲಾದವರು. ಮಹಾಬಲಿಷ್ಠರು, ಅಷ್ಟೇ ಗರ್ವಿಷ್ಠರು. ಅವರಲ್ಲಿ ಕೊನೆಯವರಾದ ಮಕರ ಮಹಾ ಭೀಕರ. ಬ್ರಹ್ಮದೇವರನ್ನು ಕೂಡ ಮೋಹಗೊಳಿಸಿ ಮೋಹಮಾಡಿ ನಾಲ್ಕೂ ವೇದಗಳನ್ನು ಕದ್ದು ಓಡಿದ. ಅರ್ಥಾತ ಸಾಗರದ ಆಳದಲ್ಲಿ ಇಳಿದ. ಅದರಿಂದ ಜಗತ್ತೆಲ್ಲವೂ ಶೂನ್ಯವಾಯಿತು. ಎಲ್ಲ ಕಡೆಗೂ ಧರ್ಮಸಂಕರ, ಧರ್ಮ ಸಂಕಟ. ಯಜ್ಞ ನಿಷಿದ್ಧ. ತಪಸ್ಸು ನಿರುದ್ಧ, ದೇವ ಪೂಜೆ ಪ್ರತಿಬದ್ಧ. ಅದರಿಂದ ದೇವತಾಗಣವೇ ಪ್ರಕ್ಷುಬ್ಧ. ಅದರಿಂದ ದುಃಖಿದಗ್ಧರಾಗಿ ಆ ಸುರಸುತ್ತಮರೆಲ್ಲರೂ ಕ್ಷೀರಸಾಗರಕ್ಕೆ ತೆರಳಿದರು. ಹಾಲಗಡಲಿನ ಮಧ್ಯದಲ್ಲಿ ಹಾವಿನ ಹಾಸಿಗೆಯ ಮೇಲೆ ಹಾಯಾಗಿ ಮಲಗಿದ ಹರಿಯನ್ನೇ ಮೊರೆ ಹೋದರು.

"ವೇದಾಧರಂ ಇದಂ ಸರ್ವಂ ಜಗತ್ ಸ್ಥಾವರ ಜಂಗಮಮ್ - ದೈತೇಯೇ ನಾಹೃತಾ: ವೇದಾ: ಪ್ರವಿಷ್ಟಾಶ್ಚ ಮಹಾರ್ಣವಮ್."

ಈ ಚರಾಚರ ಪ್ರಪಂಚವೆಲ್ಲವೂ ನಿಂತದ್ದು ವೇದಗಳನ್ನು ಆಧರಿಸಿ, ಅಂಥ ನಾಲ್ಕು ವೇದಗಳನ್ನು ಮಕರರಾಕ್ಷಸನು ನುಂಗಿ ಸಮುದ್ರದ ಒಳಗೆ ಹೊಕ್ಕು ಅಡಗಿಕೊಂಡಿದ್ದಾನೆ. ವೇದಗಳಿಂದಲೇ ಎಲ್ಲ ದೇವತೆಗಳಿಗೂ ನಿತ್ಯ ತೃಪ್ತಿ.ಈ ಪ್ರಪಂಚದ ಎಲ್ಲ ಧರ್ಮಗಳು ಉಳಿದದ್ದು ವೇದಗಳಿಂದ. ಬೆಳೆದದ್ದು ವೇದಗಳಿಂದ, ಬೆಳಗಿದ್ದು ವೇದಗಳಿಂದ ಆದುದರಿಂದ ಆ ದುಷ್ಟದೈತ್ಯನು ಅಪಹರಿಸಿಕೊಂಡು ಒಯ್ದ ವೇದಗಳನ್ನೆಲ್ಲ ನಮಗೆ ಮರಳಿ ತಂದು ಕೊಡು.

**ಮಹಾದೇವ:-** ಹೀಗೆ ಬ್ರಹ್ಮಾದಿ ದೇವತೆಗಳಿಂದ ಸಂಸ್ತುತನೂ ಪ್ರಾರ್ಥಿತನೂ ಆದ ಪರಮಾತ್ಮನು ಮೀನದ ರೂಪವನ್ನು ಧರಿಸಿ ಸಮುದ್ರ ಮಧ್ಯದಲ್ಲಿ ಪ್ರವೇಶಿಸಿದ. ಅದರ ಆಳಕ್ಕೂ ಇಳಿದ. ಮೊಸಳೆಯ ರೂಪದಿಂದ ಆ ಮಹೋದಧಿಯ ಮಧ್ಯದಲ್ಲಿ ಇರುವ ದೈತ್ಯನನ್ನು ತನ್ನ ಬಾಯಿಂದ ಹಿಡಿದು ಹೊಡೆದು ಸೀಳಿ ಕೊಂದು ದೇವತೆಗಳಿಂದ ಪೂಜಿಸಲ್ಪಟ್ಟ ಆ ನಾಲ್ಕು ವೇದಗಳನ್ನು ಅಂಗೋಪಾಂಗ ಸಹಿತವಾಗಿ ಎತ್ತಿ ತಂದು ಬ್ರಹ್ಮದೇವರಿಗೆ ಕೊಟ್ಟ. ಆ ದುಷ್ಟರಕ್ಕಸನು ವೇದ ರಾಶಿಯನ್ನೆಲ್ಲ ನುಂಗಿದಾಗ ಒಂದರೊಳಗೆ ಮತ್ತೊಂದು ಸೇರಿ ಕಲಸು ಮೇಲೋಗರವಾದಂತೆ ಅಧ್ವಾನ ಆಗಿದ್ದಿತು. ಅದನ್ನು ಕಂಡು ಮರುಕಗೊಂಡು ಆ ಭಗವಂತನೇ ಭಗವಾನ್ ಬಾದರಾಯಣ ರೂಪದಿಂದ ಅವರಿಗೆ ಅವುಗಳನ್ನೆಲ್ಲ ಶಾಖಾಭೇದದಿಂದ ವಿಂಗಡಿಸಿ ಇಟ್ಟ.

ಹೀಗೆ ಶ್ರೀಹರಿಯು ಮತ್ಸ್ಯಾವತಾರವನ್ನು ಮಾಡಿ ವೇದಗಳನ್ನು ರಕ್ಷಿಸಿದ, ದೇವತೆಗಳನ್ನು ಕಾಪಾಡಿದ. ಜಗತ್ತಿಗೆಲ್ಲ ಪರಮೋಪಕಾರ ಗೈದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಮತ್ಸ್ಯಾವತಾರ ವರ್ಣನೆ ಎಂಬ ಎರಡುನೂರ ಹನ್ನೆರಡನೇಯ ಅಧ್ಯಾಯ ಮುಗಿದುದು*

—o—

**ಮಹಾದೇವ:-** ಅತ್ರಿ ಮುನಿಯ ಪುತ್ರ ದೂರ್ವಾಸ ನಿನಗೆ ಗೊತ್ತಷ್ಟೆ. ಅವನು ಮಹಾ ತಪಸ್ವಿ, ತೀವ್ರ ತೇಜಸ್ವಿ. ಆದರೆ ಅಷ್ಟೇ ಶೀಘ್ರ ಕೋಪಿ. ಅವನ ಕಮಂಡಲದಲ್ಲಿ ಶಾಪಜಲ ಯಾವಾಗಲೂ ತುಂಬಿಯೇ ಇರುತ್ತಿತ್ತು.

ಒಂದು ದಿನ ತಪೋನಿಧಿಯಾದ ಆ ಬ್ರಹ್ಮರ್ಷಿಯು ಮೇರು ಪರ್ವತಕ್ಕೆ ಬಂದು ದೇವತಾರಾಧನೆ ಗೈದ. ಒಂದು ವರ್ಷ ತಪಸ್ಸು ಮಾಡುತ್ತಾ ಅಲ್ಲಿಯೇ ನೆಲೆಸಿದ. ಒಂದು ದಿನ ಆ ವಿಕ್ಷಿಪ್ತ ಮುನಿಗೆ ದೇವೇಂದ್ರನನ್ನು ಕಾಣಬೇಕೆಂದು ಅಪೇಕ್ಷೆಯಾಯಿತು. ಕೂಡಲೇ ಅವನು ತನ್ನ ಇಚ್ಛಾಗಮನ ಶಕ್ತಿಯಿಂದ ಸ್ವರ್ಗಲೋಕಕ್ಕೆ ತೆರಳಿದ. ಅಲ್ಲಿ ಅಂದು ಅಮರಾವತಿಯಲ್ಲಿ ಐರಾವತ ಆನೆಯ ಮೇಲೆ ದೇವೇಂದ್ರನ ಮೆರವಣಿಗೆ ನಡೆದಿತ್ತು. ಎಲ್ಲ ದೇವತೆಗಳು ಗಜಾರೂಢನಾದ ಆ ಪುರಂದರನನ್ನು ಪೂಜಿಸುತ್ತಿದ್ದರು. ಅವನನ್ನು ಕಂಡ ಕೂಡಲೇ ದುರ್ವಾಸರಿಗೆ ಪರಮ ಸಂತೋಷವಾಯಿತು. ಅವರು ಕೈಲಾಸಲೋಕದಿಂದ ತೆಗೆದುಕೊಂಡಬಂದ ಪಾರಿಜಾತ ಹೂವಿನ ಮಾಲೆಯನ್ನು ನೀಡಿದರು. ಆದರೆ ಅಧಿಕಾರ ಐಶ್ವರ್ಯ ಸೌಭಾಗ್ಯ ಸಂಪತ್ತುಗಳಿಂದ ಗರ್ವಾಂಧನಾದ ಆ ದೇವರಾಜ ಆ ಮುನಿಕೊಟ್ಟ ಮಾಲೆಯನ್ನು ಆನೆಯ ಗಂಡಸ್ಥಲದ ಮೇಲೆ ಇಟ್ಟ. ಅನಂತರ ನಂದನವನದ ಕಡೆಗೆ ನಡೆದ. ನಾಕು ಹೆಜ್ಜೆ ಹೋಗುವಷ್ಟರಲ್ಲಿ ಆನೆಗೆ ಮತ್ತಿಷ್ಟು ಮತ್ತು ಏರಿತು. ತನ್ನ ಮಸ್ತಕದ ಮೇಲೆ ಮುಡಿದಿದ್ದ ಆ ಮಂದಾರ ಮಾಲೆಯನ್ನು ಸೊಂಡೆಯಿಂದ ಸೆಳೆದುಕೊಂಡು ಅತ್ತಿತ್ತ ತೂರಾಡಿ ಕೊನೆಗೆ ನೆಲದ ಮೇಲೆ ಬಿಸಾಡಿತು. ಆದರಿಂದ ಕೋಪತಪ್ತರಾದರು ದೂರ್ವಾಸರು.

**ದೂರ್ವಾಸ:-** ಮೂರು ಲೋಕದ ವೈಭವ ನಿನ್ನ ಕೈಯಲ್ಲಿ. ಮುವತ್ತೂರು ಕೋಟಿ ದೇವತೆಗಳ ಮೌಲಿಗಳ ಮುಕುಟಗಳು ನಿನ್ನ ಪಾದದಡಿಯಲ್ಲಿ. ಮೂರು ಲೋಕಗಳ ಆಡಳಿತ ಸೂತ್ರವೆಲ್ಲವೂ ನಿನ್ನ ಮುಷ್ಟಿಯಲ್ಲಿ, ಆ ಗರ್ವದಿಂದ ಉದ್ಧತನಾದ ನೀನು ನನ್ನನ್ನು ಅವಮಾನಿಸಿದೆ. ನಾನು ಕೊಟ್ಟ ಮಾಲೆಯನ್ನು ಆನೆಯ ತಲೆಯ ಮೇಲೆ ಇಟ್ಟು ನೆಲದ ಮೇಲೆ ಬೀಳಿಸಿದೆ. ಆದುದರಿಂದ ನಿನ್ನ ಐಶ್ವರ್ಯವೆಲ್ಲವೂ ನಷ್ಟವಾಗಲಿ.

**ಮಹಾದೇವ:-** ಹೀಗೆ ದೇವೇಂದ್ರನನ್ನು ಶಪಿಸಿ ತನ್ನ ಮನೆಗೆ ತೆರಳಿದರು. ಕೋಪಿಷ್ಠರಾದ ಆ ದೂರ್ವಾಸರು. ದೂರ್ವಾಸರ ಮುಖದಿಂದ ಶಾಪಾಕ್ಷರವು ಹೊರಬಿದ್ದ ಮರುಕ್ಷಣದಲ್ಲಿಯೇ ದೇವೇಂದ್ರನ ಐಶ್ವರ್ಯವೆಲ್ಲವೂ ನಷ್ಟವಾಯಿತು. ಭೀಕರ ಬರಗಾಲವು ತಲೆದೋರಿತು. ಮೋಡ ತುಂಬಿ ಬಂದರೂ ಮಳೆ ಒಡೆಯಲಿಲ್ಲ. ಮರಬಳ್ಳಿಗಳೆಲ್ಲವೂ ಒಣಗಿ, ಹಣ್ಣು, ಹೂವು, ಕಾಯಿ, ಕುಡಿ, ಮಿಡಿ, ಮುಗುಳು ಚಿಗುರು ಒಂದೂ ಇಲ್ಲದೇ, ಬೋಳು ಮರಗಳಾಗಿ ನಿಂತುಕೊಂಡವು. ಲಕ್ಷ್ಮಿಯ ಕೃಪಾಕಟಾಕ್ಷದಿಂದ ವಂಚಿತನಾದ ಇಂದ್ರನಿಗೆ ಈ ಜಗತ್ತು ಎಲ್ಲವೂ ಶೂನ್ಯವಾದಂತೆ ತೋರತೊಡಗಿತು. ಆದರಿಂದ ಯಜ್ಞ. ಯಾಗಗಳೆಲ್ಲವೂ ಲೋಪವಾದವು. ಯಜ್ಞಾನ್ನವು. ಇಲ್ಲದೆ ದೇವತೆಗಳು ಉಪವಾಸ ಬೀಳುವ ಪ್ರಸಂಗ ಒದಗಿ ಬಂದಿತು. ಆಗ ಅವರೆಲ್ಲರೂ ಹಸಿವು ಬಾಯಾರಿಕೆ ಗಳಿಂದ ಬಳಲಿ, ತೊಳಲಿ, ಬ್ರಹ್ಮದೇವರಿಗೆ ಶರಣು ಹೋದರು. ಆಗ ಬ್ರಹ್ಮದೇವರು ಅವರ ಸುಖ ದುಃಖಗಳನ್ನೆಲ್ಲ ಕೇಳಿಕೊಂಡು ಅವರನ್ನು ಸಂತೈಸುತ್ತ ನುಡಿದರು.

**ಬ್ರಹ್ಮ:-** "ದೇವತೆಗಳೇ, ಮಹೇಂದ್ರನು ದೂರ್ವಾಸ ಋಷಿಗಳಿಗೆ ಗೈದ ಅಪಚಾರದಿಂದ ಈ ಎಲ್ಲ ಅನರ್ಥ ಪರಂಪರೆ ನಡೆದಿದೆ. ಅವರ ಶಾಪದಿಂದ ಲೋಕಮಾತೆಯೂ ನಾರಾಯಣನ ಮನದನ್ನೆಯೂ ಆದ ಆ ಮಹಾದೇವಿಯು ಈ ಜಗತ್ತಿನಿಂದ ಒಮ್ಮೆಲೇ ಅದೃಶ್ಯಳಾಗಿ ಅಂತರ್ಧಾನ ಹೊಂದಿದ್ದಾಳೆ. ಆ ತಾಯಿಯು ಕರುಣಾ ಕಟಾಕ್ಷದಿಂದ ನೋಡದಿದ್ದರೆ, ಜನರಿಗೆ ಬದುಕಿ ಇರುವವರೆಗೆ ದುಃಖ ಬವಣೆ ತಪ್ಪಿದ್ದಲ್ಲ. ಆದುದರಿಂದ ನಾವೆಲ್ಲ ಈಗ ಕ್ಷೀರಸಮುದ್ರಕ್ಕೆ ಹೋಗೋಣ. ಅಲ್ಲಿ ಇರುವ ನಾರಾಯಣನನ್ನು ಅರ್ಚಿಸೋಣ. ಅವನು ಪ್ರಸನ್ನನಾದರೆ ಜಗತ್ತಿಗೆಲ್ಲ ಕ್ಷೇಮ ಉಂಟಾಗುವುದು" ಹೀಗೆ ಹೇಳಿ. ಬ್ರಹ್ಮಾದಿ ಎಲ್ಲ ದೇವತೆಗಳೂ ಭೃಗು ಮೊದಲಾದ ಋಷಿಗಳನ್ನು ಮುಂದೆ ಮಾಡಿಕೊಂಡು ಕ್ಷೀರಸಾಗರವನ್ನು ಕುರಿತು ಪ್ರಯಾಣವನ್ನು ಬೆಳೆಸಿದರು. ಹಾಲ್ಗಲಿನ ಉತ್ತರ ತೀರದಲ್ಲಿ ಬ್ರಹ್ಮ, ರುದ್ರಾದಿ ದೇವತೆಗಳು ವಿಧಿಪೂರ್ವಕವಾಗಿ ಅಷ್ಟಾಕ್ಷರ ಮಂತ್ರಗಳನ್ನೂ, ಪುರುಷ ಸೂಕ್ತವನ್ನು ಜಪಿಸುತ್ತ ಉಚ್ಚರಿಸುತ್ತ ಅನನ್ಯ ಭಕ್ತಿಯಿಂದ ಶ್ರೀಕೃಷ್ಣನನ್ನು ಉದ್ದೇಶಿಸಿ ಹೋಮಮಾಡಿದರು. ಮತ್ತು ಬಗೆಬಗೆಯ ದಿವ್ಯ ಸ್ತುತಿ ಸ್ತೋತ್ರಗಳಿಂದ ಅವನನ್ನು ಪ್ರಶಂಸಿಸಿದರು ಹಾಗೂ ನಮಸ್ಕರಿಸಿದರು.

ದೇವತೆಗಳ ದುಃಖವನ್ನೆಲ್ಲ ಕೇಳಿಕೊಂಡು ಅವರ ಮೇಲಿನ ಕರುಣೆಯಿಂದ "ಬೇಕಾದ ವರವನ್ನು ಕೇಳಿರಿ." ಎಂದು ಹೇಳಿದ ಆ ಶ್ರೀಹರಿ.

ಆಗ ಬ್ರಹ್ಮಾದಿ ದೇವತೆಗಳು ಕೈ ಮುಗಿದು ಹೀಗೆ ಮಾತನಾಡಿದರು.

**ದೇವತೆಗಳು:-** ಮುನಿ ಶಾಪದಿಂದ ಈ ಮೂರು ಲೋಕಗಳೇ ಹಸಿವು ನೀರಡಿಕೆಗಳಿಂದ ಬಳಲಿ ಬೆಂಡಾಗಿವೆ. ಅದಕ್ಕಾಗಿ ಈಗ ನಿನಗೆ ಶರಣು ಬಂದಿದ್ದೇವೆ. ಅವರೆಲ್ಲರನ್ನೂ ನೀನೇ ರಕ್ಷಿಸಬೇಕು."

ಇದನ್ನು ಕೇಳಿ ಭಗವಂತನು ಪ್ರಸನ್ನನಾಗಿ ಸುರರಿಗೆ ಹೇಳಿದ.

**ಭಗವಂತ:-** ಅತ್ರಿಯ ಮಗನಾದ ದೂರ್ವಾಸರ ಶಾಪದಿಂದ ಲಕ್ಷ್ಮಿಯು ಅಂತರ್ಧಾನ ಹೊಂದಿದ್ದಾಳೆ. ಅವಳು ಕೃಪೆದೋರಿ ಒಮ್ಮೆ ತನ್ನ ದೃಷ್ಟಿ ಹರಿಸಿ ನೋಡಿದರೂ ಜಗತ್ತೆಲ್ಲವೂ ಐಶ್ವರ್ಯದಿಂದ ತುಂಬಿ ತುಳುಕುತ್ತದೆ. ಆದುದರಿಂದ ನೀವೆಲ್ಲರೂ ಮಂದರ ಬೆಟ್ಟವನ್ನು ಎತ್ತಿ ಹಾಲಿನ ಕಡಲಿನಲ್ಲಿ ಇಟ್ಟು ಆದಿಶೇಷನ ದೇಹವನ್ನು ಹಗ್ಗವನ್ನಾಗಿಸಿ ಸಮುದ್ರಮಂಥನವನ್ನು ಮಾಡಿರಿ. ಆದ್ದರಿಂದ ಜಗತ್ ರಕ್ಷಣಕ್ಕಾಗಿ ಆ ಮಹಾದೇವಿಯು ಲಕ್ಷ್ಮಿಯಾಗಿ ಹುಟ್ಟಿ ಬರುತ್ತಾಳೆ. ಅವಳು ಒಮ್ಮೆ ಕಣ್ಣೆತ್ತಿ ನಿಮ್ಮ ಕಡೆಗೆ ನೋಡಿದರೆ ಸಾಕು. ನಿಮ್ಮ ಅಧಿಕಾರ ಐಶ್ವರ್ಯ ಎಲ್ಲವೂ ಮತ್ತೆ ಮೊದಲಿನಂತೆ ಪೂರ್ಣವಾಗಿ ದೊರಕುವದು. ಮತ್ತು ಎಲ್ಲ ದೇವಾಸುರರೂ ನನ್ನ ಶಕ್ತಿಯಿಂದಲೇ ಮತ್ತೆ ಬಲಿಷ್ಠರಾಗುವರು.

**ರುದ್ರ:-** ಹೀಗೆ ಹರಿಯಿಂದ ಆಜ್ಞಪ್ತರಾದ ಎಲ್ಲ ದೇವತೆಗಳು ಆ ಭಗವಂತನನ್ನು ಬಾಯ್ತುಂಬ ಹೊಗಳಿದರು. ಹೀಗೆ ಎಲ್ಲ ದೇವೋತ್ತಮರಿಂದಲೂ ಸ್ತುತಿಸಲ್ಪಟ್ಟು ಶ್ರೀಹರಿಯು ಅಲ್ಲಿಯೇ ಅಂತರ್ಧಾನ ಹೊಂದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ದೂರ್ವಾಸ ಶಾಪ ಎಂಬ ಎರಡು ನೂರ ಹದಿಮೂರನೇಯ ಅಧ್ಯಾಯ ಮುಗಿದುದು*

**ಮಹಾದೇವ:-** ಅನಂತರ ಬಹಾಬಲಿಷ್ಠರಾದ ದೈತ್ಯರೂ ದೇವತೆಗಳೂ ಕೂಡಿ ಮಂದರ ಪರ್ವತಕ್ಕೆ ಹೋದರು. ಅದನ್ನು ಎಲ್ಲರೂ ಕೂಡಿ ಕಿತ್ತಿದರು. ಕೈಗಳಿಂದ ಮೇಲಕ್ಕೆ ಎತ್ತಿದರು. ಹೊತ್ತುಕೊಂಡು ಹಾಗೆಯೇ ಸಮುದ್ರದವರೆಗೆ ಬಂದರು. ಆ ನೀರಿನ ನಿಧಿಯಲ್ಲಿ ಬೃಹದಾಕಾರದ ಆ ಬೆಟ್ಟವನ್ನು ಇಟ್ಟರು. ಅದು ನೀರಲ್ಲಿ ಮುಳುಗಿದಾಗ ನಾರಾಯಣನು ಒಂದು ಆಮೆಯ ರೂಪವನ್ನು ತೆಗೆದುಕೊಂಡು. ಅದನ್ನು ತನ್ನ ಬೆನ್ನಮೇಲೆ ಎತ್ತಿ ಹಿಡಿದನು. ಅನಂತರ ರಭಸದಿಂದ ಕಡೆಯುವಾಗ ಅದು ಆಚೀಚೆ ವಾಲುತ್ತಿರುವುದನ್ನು ನೋಡಿ ತನ್ನ ಒಂದೇ ಬಾಹುವಿನಿಂದ ಅದನ್ನು ಗಟ್ಟಿಯಾಗಿ ಹಿಡಿದನು. ಅನಂತರ ದೇವಾಸುರರು ಆ ಕ್ಷೀರ ಸಾಗರವನ್ನು ಕಡೆದರು. ವಾಸುಕಿಯನ್ನು ಹಾವು ಮಾಡಿ ದೇವದಾನವರು ಕೂಡಿ ಕ್ಷೀರ ಸಾಗರವನ್ನು ಎಷ್ಟು ವೇಗದಿಂದ ಕಡೆದರೂ ಲಕ್ಷ್ಮಿಯ ಉತ್ಪತ್ತಿ ಆಗಲಿಲ್ಲ. ಆಗ ಎಲ್ಲ ಮಹರ್ಷಿಗಳು ಉಪವಾಸ ಇದ್ದು ಶ್ರೀಸೂಕ್ತ ಜಪವನ್ನೂ ಸಹಸ್ರನಾಮ ಸ್ಮರಣೆಯನ್ನೂ ಆಚರಿಸಿದರು.

ಹೀಗೆ ಅವರು ಮಂದರದಿಂದ ಮಹೋದಧಿಯ ಮಂಥನವನ್ನು ಮಾಡತೊಡಗಿದ ಬಳಿಕ ಋಷಿಗಳು ಉಪವಾಸವಿದ್ದು ಮತ್ತೆ ಮತ್ತೆ ಶ್ರೀಸೂಕ್ತವನ್ನು ಜಪಿಸಿದರು. ಹೀಗೆ ಎಲ್ಲ ಋಷಿಗಳೂ, ಮುನಿಗಳೂ, ಲಕ್ಷ್ಮಿಯ ಜನ್ಮಕ್ಕಾಗಿ ಕ್ಷೀರಸಾಗರದ ತೀರದಲ್ಲಿಯೇ ನಿಂತು ಜಪ-ಧ್ಯಾನಗಳನ್ನು ಮಾಡುತ್ತಿರುವಾಗ ಮೊಟ್ಟ ಮೊದಲು ಘೋರವಾದ ಕಾಲಕೂಟ ವಿಷವು ಹುಟ್ಟಿ ಮೇಲೆ ಬಂದಿತು. ಅದೊಂದು ಪ್ರಳಯಕಾಲದ ಬೆಂಕಿಯ ಮೊಟ್ಟೆ. ಅದನ್ನು ನೋಡಿಯೇ ಓಡಿದರು ರಾಕ್ಷಸರು. ಪಲಾಯನಗೈದರು ದೇವತೆಗಳು. ಆಗ ಅವರೆಲ್ಲರನ್ನೂ ನಾನೇ ತಡೆದು ಹೇಳಿದೆ:- ''ದೇವತೆಗಳೇ, ನೀವು ಹೆದರಬೇಡಿರಿ. ನಾನು ಆ ಕಾಲಕೂಟ ವಿಷವನ್ನೆಲ್ಲ ಕುಡಿದು ಬಿಡುತ್ತೇನೆ.''

ಈ ಮಾತನ್ನು ಹೇಳಿದ ಕೂಡಲೇ ಎಲ್ಲ ದೇವತೆಗಳೂ 'ಭಲಾ ಭಾಪು' ಎಂದ ನನ್ನನ್ನು ಪ್ರಶಂಸಿಸಿ ನಮಸ್ಕಾರ ಮಾಡಿ ಹೊಗಳಿದರು. ಅನಂತರ ನಾನು

**ತದ್ದೃಷ್ಟ್ವಾ ಮೇಘ ಸಂಕಾಶಂ ಪ್ರಾದುರ್ಭೂತಂ ಮಹಾವಿಷಂ ।**
**ಧ್ಯಾತ್ವಾ ನಾರಾಯಣಂ ದೇವಂ ಹೃದಯೇ ಗರುಡಧ್ವಜಂ ।**

**ನಾಮತ್ರಯಂ ಮಹಾಮಂತ್ರಂ ಜಪ್ತ್ವಾ ಭಕ್ತ್ಯಾ ಸಮನ್ವಿತಃ ।**
**ತದ್ವಿಷಂ ಪೀತನಾನ್ ಘೋರಮಾದ್ಯಂ ಸರ್ವ ಭಯಕರಂ ॥**

ನನ್ನ ಹೃದಯದಲ್ಲಿ ಗರುಡಧ್ವಜನಾದ ನಾರಾಯಣನನ್ನು ಧ್ಯಾನ ಮಾಡಿ ಅಚ್ಯುತ ಅನಂತ ಗೋವಿಂದ ಎಂಬ ಅವನ ಮೂರು ನಾಮಗಳನ್ನು ಸ್ಮರಿಸಿ ನಾರಾಯಣ ಅಷ್ಟಾಕ್ಷರ ಮಂತ್ರವನ್ನು ಜಪಿಸಿ ಘೋರವಾದ ಆ ಕಾಲಕೂಟ ವಿಷವನ್ನೆಲ್ಲ ಕುಡಿದು ಬಿಟ್ಟೆ. ಶ್ರೀ ಹರಿಯ ಆ ನಾಮತ್ರಯದ ಪ್ರಭಾವದಿಂದ ಜಗತ್ತನ್ನೇ ಸುಟ್ಟು ಹಾಕುವ ಆ ಘೋರವಾದ ವಿಷವು ಕೂಡ ನನಗೆ ಪಚನವಾಗಿ ಹೋಯಿತು.

**ಅಚ್ಯುತಾನಂದ ಗೋವಿಂದ ಇತಿ ನಾಮತ್ರಯಂ ಹರೇಃ ।**
**ಯೋಜಪೇತ್ ಪ್ರಯತೋ ಭಕ್ತ್ಯಾ ಪ್ರಣವಾದ್ಯಂ ನಮೋಂತಕಂ ॥**
**ತಸ್ಯ ಮೃತ್ಯುಭಯಂ ನಾಸ್ತಿ ವಿಷರೋಗಾಗ್ನಿಜಂ ಮಹತ್ ॥**

ಅಚ್ಯುತ, ಅನಂತ, ಗೋವಿಂದ ಎಂಬ ಮೂರು ನಾಮಗಳಿಗೆ ಮೊದಲು **ಓಂಕಾರ**, ಕೊನೆಗೆ **ನಮಃ** ಎಂಬ ಅಕ್ಷರಗಳನ್ನು ಜೋಡಿಸಿ ಓಂ ಅಚ್ಯುತಾಯ ನಮಃ ಓಂ ಅನಂತಾಯನಮಃ ಓಂ ಗೋವಿಂದಾಯ ನಮಃ ಎಂದು ಜಪ ಮಾಡಿದರೆ ಆ ಮನುಷ್ಯನಿಗೆ ವಿಷದಿಂದ ಮರಣ, ರೋಗದಿಂದ ಮರಣ, ಅಗ್ನಿಯಿಂದ ಮರಣಗಳು ಎಂದೂ ಒದಗುವದಿಲ್ಲ. ಹೀಗೆ ನಾನು ವಿಷವನ್ನು ಕುಡಿದ ಬಳಿಕ ಸಮುದ್ರ ಮಂಥನದ ಕಾರ್ಯವು ಮುಂದುವರೆಯಿತು. ಮುಂದೆ ಆ ಕ್ಷೀರ ಸಮುದ್ರದಿಂದ ಜ್ಯೇಷ್ಠಾ ದೇವಿಯು ಹುಟ್ಟಿದಳು. ಅವಳು ಎಲ್ಲ ದೇವತೆಗಳನ್ನು 'ನಾನು ಏನು ಮಾಡಬೇಕು. ಎಲ್ಲಿ ಇರಬೇಕು.' ಎಂದು ಕೇಳಿದಳು.

**ದೇವತೆಗಳು:-** ಯಾರ ಮನೆಯಲ್ಲಿ ಪ್ರತಿದಿನವೂ ಕಲಹ ಮತ್ತು ನಿಷ್ಠುರ ಮಾತು ಆಡಲ್ಪಡುವುದೋ ನೀನು ಅವರ ಮನೆಯಲ್ಲಿ ವಾಸಮಾಡು. ಅಂಥವರಿಗೆ ನಿನ್ನಂದ ಅನಿಷ್ಟವಾಗಲಿ. ಅದರಂತೆ ಸಾಯಂಕಾಲದಲ್ಲಿ ಮಲಗುವವರ ಮನೆಯಲ್ಲಿ ನೀನು ನೆಲಸು. ತಲೆಬುರುಡೆ, ಕೂದಲು, ಬೂದಿ, ಮೂಳೆ, ಅಂಗಾರ, ಸುಟ್ಟಹೊಟ್ಟು ಎಲ್ಲಿ ಇರುವುದೋ ಅದು ನಿನ್ನ ಸ್ಥಾನವಾಗಲಿ. ಕಾಲುಗಳನ್ನು ತೊಳೆದುಕೊಳ್ಳದೇ ಆಚಮನ ಮಾಡಿದವನನ್ನು ನೀನು ಹೊಂದು. ಹೊಟ್ಟಿನ ಅಂಗಾರ, ತಲೆಬುರುಡೆ, ಕಲ್ಲು, ಉಸುಕು, ವಸ್ತ್ರ, ತೊಗಲುಗಳಿಂದ ಹಲ್ಲನ್ನು ಉಜ್ಜುವವರು ಪರಮ ನೀಚರು. ಅವರ ಮನೆಯಲ್ಲಿ ನೀನು ನಿತ್ಯವು ವಾಸಮಾಡು.

ಹೀಗೆ ಹೇಳಿ ಎಲ್ಲ ದೇವತೆಗಳು ಮತ್ತೆ ಸಮುದ್ರಮಂಥನವನ್ನು ಮಾಡಿದರು. ಅನಂತರ ವಾರುಣೀದೇವತೆಯು ಅಲ್ಲಿ ಹುಟ್ಟಿದಳು. ಅವಳನ್ನು ನಾಗರಾಜನಾದ ಅನಂತನು ಸ್ವೀಕಾರ ಮಾಡಿದ. ಬಳಿಕ ಆ ಕ್ಷೀರಸಮುದ್ರದಲ್ಲಿ ಹುಟ್ಟಿದ ಸೌರ್ಪಣಿಯು ಗರುಡನನ್ನು ವರಿಸಿ ಮದುವೆಯಾದಳು. ಬಳಿಕ ಹಾಲಿನ ಸಮುದ್ರವನ್ನು ಕಡೆ ಕಡೆದಂತೆ ಅಪ್ಸರೆಯರೂ ಗಂಧರ್ವರೂ ಜನಿಸಿದರು. ಅವರೆಲ್ಲರೂ ರೂಪ ಸಂಪನ್ನರು ಮಧುರ ಗಾಯನದಿಂದ ಎಲ್ಲರನ್ನೂ ಸಂತೋಷಪಡಿಸುವವರೂ ಆಗಿದ್ದರು.

ಆ ಕ್ಷೀರ ಸಮುದ್ರದಿಂದ ಐರಾವತ, ಧನ್ವಂತರಿ, ಪಾರಿಜಾತ, ಕಾಮಧೇನುಗಳು ಹುಟ್ಟಿದವು. ಇವುಗಳನ್ನೆಲ್ಲ ಪರಮ ಸಂತೋಷದಿಂದ ಸ್ವೀಕಾರ ಮಾಡಿದ ದೇವೇಂದ್ರ. ಮತ್ತೆ ಆ ಕಡಲನ್ನು ಕಡೆಯುವ ಕಾರ್ಯ ಮುಂದುವರಿದಾಗ ದ್ವಾದಶೀ ತಿಥಿಯಂದು ಪ್ರಾತಃಕಾಲದಲ್ಲಿ ಸೂರ್ಯೋದಯಕ್ಕೆ ಸರಿಯಾಗಿ ಮಹಾಲಕ್ಷ್ಮೀ ದೇವಿಯು ಆ ಕ್ಷೀರಸಾಗರದಿಂದ ಹೊಮ್ಮಿ ಬಂದಳು.

ಉದಯ ಸೂರ್ಯನಂಥ ಕೆಂಪುಬಣ್ಣ, ಬಾಹುಗಳಲ್ಲಿ ಬಂಗಾರದ ಕಡಗ, ಕೈಯಲ್ಲಿ ಕಮಲ, ವಕ್ಷಸ್ಥಳದಲ್ಲಿ ಕಮಲಪುಷ್ಪದ ಮಾಲೆಯನ್ನು ಧರಿಸಿದ ಆ ಮಹಾಲಕ್ಷ್ಮೀ ದೇವಿಯನ್ನು ನೋಡಿ ದೇವತೆಗಳಿಗೆ ಪರಮ ಸಂತೋಷವಾಯಿತು. ಆಗ ಅವರೆಲ್ಲರೂ ದೇವತೆಗಳು ದೇವ ದುಂಧುಭಿಗಳನ್ನು ಮೊಳಗಿಸಿದರು. ಪುಷ್ಪವೃಷ್ಟಿಯನ್ನು ಸುರಿಸಿದರು, ಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು. ಸೂರ್ಯನು ಮತ್ತಿಷ್ಟು ತೇಜಸ್ವಿ

ಆದನು. ಅವಳನ್ನು ನೋಡಿ ಎಲ್ಲ ಮುನಿಗಳು ಜಯ ಜಯ ಶಬ್ದವನ್ನು ಉಚ್ಚರಿಸಿ ನಮಸ್ಕಾರ ಮಾಡಿದರು.

ಬಳಿಕ ಕ್ಷೀರಸಾಗರದಲ್ಲಿ ಅಮೃತ ಕಿರಣಗಳನ್ನು ತೂರುತ್ತ ಚಂದ್ರನು ಉದಯಿಸಿದನು. ಹುಟ್ಟಿದ ಕೂಡಲೇ ಅವನು ನಕ್ಷತ್ರಗಳಿಗೆಲ್ಲ ಅಧಿಪತಿಯಾದ. ಅನಂತರ ಆ ಕ್ಷೀರಸಮುದ್ರದಿಂದ ಲೋಕಪಾವನೆಯಾದ ತುಳಸಿಯು ಹುಟ್ಟಿದಳು. ಬಳಿಕ ದೇವತೆಗಳು ಆ ಮಂದರ ಬೆಟ್ಟವನ್ನು ಮೊದಲಿದ್ದ ಸ್ಥಳದಲ್ಲಿಯೇ ಇರಿಸಿ ಸಹಸ್ರನಾಮ ಜಪ ಹಾಗೂ ಶ್ರೀಸೂಕ್ತವನ್ನು ಪಾರಾಯಣ ಮಾಡಿ ಆ ಶ್ರೀದೇವಿಯನ್ನು ಪ್ರಸನ್ನಗೊಳಿಸಿದರು. ಆಗ ಸಂತುಷ್ಟಳಾದ ಶ್ರೀದೇವಿಯು ಅವರಿಗೆ ಮನೋಭೀಷ್ಟವಾದ ವರವನ್ನು ಕೇಳಲು ತಿಳಿಸಿದಳು.

**ದೇವತೆಗಳು:-** ದೇವಿ, ನೀನು ಈ ಲೋಕವನ್ನು ಬಿಟ್ಟು ಎಲ್ಲಿಯೂ ಹೋಗಬೇಡ. ನೀನು ವಿಷ್ಣುವಿನ ವೃಕ್ಷಸ್ಥಳದಲ್ಲಿ ಇದ್ದರೂ ನಮ್ಮನ್ನು ಮಾತ್ರ ಕೈ ಬಿಡಬೇಡ. ನಿನಗೆ ನಮ್ಮ ನಮಸ್ಕಾರವಿರಲಿ.

**ಮಹಾದೇವ:-** ಈ ದೇವತೆಗಳ ಬೇಡಿಕೆಗಳಿಗೆ ತಥಾಸ್ತು ಎಂದು ಹೇಳಿ ದೇವತೆಗಳಿಗೆ ಆಶೀರ್ವದಿಸಿದಳು ಆ ಮಹಾಲಕ್ಷ್ಮೀದೇವಿ.

ಅನಂತರ ಎಲ್ಲ ದೇವತೆಗಳು ತಾವಾಗಿಯೇ ಶ್ರೀಹರಿಯ ಬಳಿಗೆ ಬಂದು ಪ್ರಾರ್ಥಿಸಿದರು.

**ದೇವತೆಗಳು:-** ಸ್ವಾಮಿ ಈ ಲಕ್ಷ್ಮೀದೇವಿಯನ್ನು ನೀನು ಜಗತ್ತಿನ ರಕ್ಷಣೆಗೋಸ್ಕರ ನಿನ್ನ ಪಟ್ಟದರಸಿಯನ್ನಾಗಿ ಮಾಡಿಕೊ.

ಅನಂತರ ಬ್ರಹ್ಮಾದಿ ಎಲ್ಲ ದೇವತೆಗಳೂ, ಋಷಿಗಳೂ, ಮುನಿಗಳೂ ಕೂಡಿ, ದಿವ್ಯವಾದ ರತ್ನಮಯ ಪೀಠದಲ್ಲಿ ಕೂಡಿಸಿ ನಾರಾಯಣನನ್ನೂ ಲಕ್ಷ್ಮೀದೇವಿಯನ್ನೂ ಅಲಂಕರಿಸಿ ಅಮೃತ ತುಂಬಿದ ಪೂರ್ಣ ಕಲಶಗಳಿಂದ ವೇದೋಕ್ತ ಮಂತ್ರಗಳನ್ನು ಹೇಳುತ್ತ ಅವರಿಬ್ಬರ ತಲೆಯ ಮೇಲೆ ಅಭಿಷೇಕ ಮಾಡಿದರು. ವಿಷ್ಣುಸೂಕ್ತ, ಶ್ರೀಸೂಕ್ತಗಳಿಂದ ಸ್ತೋತ್ರ ಮಾಡಿದರು. ದಿವ್ಯವಸ್ತ್ರ, ದಿವ್ಯಮಾಲೆ, ನಾನಾ ರತ್ನ ಅಲಂಕಾರಗಳಿಂದ ಅಲಂಕೃತಳಾದ ಲಕ್ಷ್ಮೀದೇವಿಯ ಜೊತೆಗೆ ಅಚ್ಯುತನನ್ನು ಗಂಧ, ದೀಪ, ಧೂಪ, ನೈವೇದ್ಯ ನೀರಾಜನಾದಿಗಳಿಂದ ಪೂಜೆ ಮಾಡಿದರು. ಅಲ್ಲಿಯ ಅಮೃತದಿಂದಲೇ ತುಳಸಿಯು ಹುಟ್ಟಿತು. ಆ ತುಳಸಿಯಿಂದ ಪರಮಾತ್ಮನ ಪಾದ ಕಮಲಗಳನ್ನು ದೇವತೆಗಳು ಪೂಜಿಸಿ ಪ್ರದಕ್ಷಣೆ ನಮಸ್ಕಾರಗಳನ್ನು ಮತ್ತೆ ಮತ್ತೆ ಹಾಕಿದರು. ಸ್ತೋತ್ರಗಳಿಂದ ಆನಂದ ಪರವಶರಾಗಿ ಆ ಭಗವಂತನನ್ನು ಹಾಡಿ, ಕೊಂಡಾಡಿ ಕುಣಿದು ಕುಪ್ಪಳಿಸಿದರು. ಅನಂತರ ಸರ್ವದೇವೇಶ್ವರನಾದ ಶ್ರೀಹರಿಯು ಲಕ್ಷ್ಮೀದೇವಿಯಿಂದ ಒಡಗೂಡಿ ಅಭೀಷ್ಟವಾದ ವರಗಳನ್ನು ಅನುಗ್ರಹಿಸಿ ದೇವತೆಗಳನ್ನು ಹರಿಸಿದ. ಅನಂತರ ಲಕ್ಷ್ಮೀಯ ಕೃಪಕಟಾಕ್ಷದಿಂದ ನೋಡಿದ ಮಾತ್ರಕ್ಕೆ ಎಲ್ಲ ದೇವತೆಗಳೂ ಮನುಷ್ಯರೂ, ಪರಮ ಸಂತುಷ್ಟರಾಗಿ ಧನ, ಧಾನ್ಯ, ಸಮೃದ್ಧಿಯನ್ನು ಪಡೆದು ಎಲ್ಲ ವಿಧವಾದ ರೋಗ ಚಿಂತೆಗಳಿಂದ ಮುಕ್ತರಾಗಿ ನಿರಂತರವೂ ಪರಮ ಸುಖವನ್ನು ಪಡೆದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಕೂರ್ಮಾವತಾರ-ಲಕ್ಷ್ಮೀದೇವಿಯ ಉತ್ಪತ್ತಿ ಎಂಬ ಎರಡು ನೂರ ಹದಿನಾಲ್ಕನೇಯ ಅಧ್ಯಾಯ ಮುಗಿದುದು*

**ಮಹಾವಿಷ್ಣು:-** ಮುನಿಗಳೇ, ಮತ್ತು ದೇವತೆಗಳೇ. ನಾನು ಸರ್ವಲೋಕ ಹಿತಕ್ಕಾಗಿ ನಿಮಗೆ ಕೆಲವು ಮಾತುಗಳನ್ನು ಹೇಳುತ್ತೇನೆ ಕೇಳಿರಿ. ಲಕ್ಷ್ಮಿಯ ಸಂದರ್ಶನಕ್ಕಾಗಿ ನೀವೆಲ್ಲರೂ ಇಂದು ಉಪವಾಸ ಮಾಡಿರುತ್ತೀರಿ. ಇಂದು ಏಕಾದಶಿ ತಿಥಿ. ಈ ದಿನವು ಪರಮ ಪವಿತ್ರ. ಸರ್ವ ಉಪದ್ರವವನ್ನು ನಾಶಮಾಡುವುದು ಈ ಪುಣ್ಯ ತಿಥಿ. ಇಂದಿನಿಂದ ಈ ಹನ್ನೊಂದನೆಯ ದಿನವು ಶುಕ್ಲಪಕ್ಷ ಕೃಷ್ಣಪಕ್ಷಗಳಲ್ಲಿ ಏಕಾದಶೀಯೆಂದು ಪ್ರಸಿದ್ಧವಾಗಲಿ. ಈ ದಿನ ಎಲ್ಲರೂ ಉಪವಾಸ ಮಾಡಬೇಕು. ನೀವೆಲ್ಲರೂ ಇಂದು ಏಕಾದಶಿ ದಿನ ಸಂಪೂರ್ಣ ಉಪವಾಸ ಮಾಡಿ, ಲಕ್ಷ್ಮಿಯೊಂದಿಗೆ ಕೂಡಿ ಇದ್ದ ನನ್ನನ್ನು ಪೂಜೆಮಾಡಿದ್ದೀರಿ. ಮತ್ತು ದ್ವಾದಶಿ ದಿನವೂ ಕೂಡ ತುಳಸಿ ಹಾಗೂ ಲಕ್ಷ್ಮಿದೇವಿಯ ಜೊತೆಗೆ ನನ್ನ ಪೂಜೆಯನ್ನು ವಿಶೇಷ ರೀತಿಯಿಂದ ಮಾಡುವುದಾಗಿ ಸಂಕಲ್ಪಿಸಿದ್ದೀರಿ. ಆದುದರಿಂದ ನನಗೆ ಏಕಾದಶೀ ಹಾಗೂ ದ್ವಾದಶೀ ಎರಡೂ ದಿನಗಳು ಪರಮ ಪ್ರೀತ್ಯಾಸ್ಪದವಾಗಿರುತ್ತವೆ. ಇಂದಿನಿಂದ ಆರಂಭ ಮಾಡಿಕೊಂಡು ಏಕಾದಶೀ ದಿನ ಪೂರ್ಣ ಉಪವಾಸ ಮಾಡಿ ದ್ವಾದಶಿ ದಿನ ಪ್ರಾತಃಕಾಲ ಸೂರ್ಯೋದಯ ಸಮಯದಲ್ಲಿ ಯಾರು ತುಳಸಿ ಹಾಗೂ ಶ್ರೀದೇವಿಯೊಂದಿಗೆ ನನ್ನ ಪೂಜೆ ಮಾಡುವರೋ ಅವರು ಸಂಸಾರ ಬಂಧನದಿಂದ ಮುಕ್ತರಾಗಿ ಪರಮ ಪದವಿಯನ್ನು ಹೊಂದುತ್ತಾರೆ. ಮಾಯೆಯಿಂದ ಮೋಹಿತರಾಗಿ ದ್ವಾದಶಿಯ ದಿನ ಪುರುಷೋತ್ತಮನಾದ ನನ್ನನ್ನು ಯಾವ ಪಾಪಿಗಳು ಪೂಜಿಸುವುದಿಲ್ಲವೋ ಅವರು ನಿತ್ಯ ನರಕದಲ್ಲಿ ಬಿದ್ದು ಬಹುಕಾಲ ಒದ್ದಾಡುತ್ತಾರೆ.

**ಮಹಾದೇವ:-** ಇಂದಿನಿಂದ ಏಕಾದಶಿಯ ದಿನ ಯಾವ ಮನುಷ್ಯರು ಆಹಾರ ಪದಾರ್ಥವನ್ನು ತಿನ್ನುತ್ತಾರೊ ಅವರೆಲ್ಲರೂ ನರಕಕ್ಕೆ ಹೋಗುತ್ತಾರೆ.

ಹೀಗೆ ಮಹಾವಿಷ್ಣುವು ಎಲ್ಲ ಮುನಿಗಳಿಂದ ಪೂಜಿತನಾಗಿ ತನ್ನ ಸ್ಥಾನವನ್ನು ಕುರಿತು ತೆರಳಿದ. ಕ್ಷೀರ ಸಮುದ್ರದಲ್ಲಿ ಆದಿಶೇಷನ ಮಿದುವಾದ ಮೈ ಮಂಚದ ಮೇಲೆ ತಾವರೆಗಣ್ಣಿನ ರಮಾದೇವಿಯೊಂದಿಗೆ ಪವಡಿಸಿದ. ದೇವತೆಗಳಿಗೆ ದರ್ಶನ ಕೊಡಲಿಕ್ಕಾಗಿ ಆ ಹಾಲ್ಗಡಲಿನಲ್ಲಿ ಹೆಬ್ಬಾವಿನ ಹಾಸಿಗೆಯ ಮೇಲೆ ಆ ಹರಿ ತನ್ನ ಅರಸಿಯಾದ ಕಮಲೆಯೊಂದಿಗೆ ಸನ್ನಿಹಿತನಾಗಿರುತ್ತಾನೆ.

ಅನಂತರ ಎಲ್ಲ ದೇವತೆಗಳು ಆಮೆಯ ರೂಪದಿಂದ ಬೃಹತ್ತರವಾದ ಆ ಮಂದರ ಬೆಟ್ಟವನ್ನು ಬೆನ್ನ ಮೇಲೆ ಹೊತ್ತು, ರಸಾತಲದಿಂದ ಮೇಲಕ್ಕೆ ಎತ್ತಿ ತಂದು ದೇವತೆಗಳಿಗೆ ಮಂಥಾನ ರೂಪವಾಗಿ ಇತ್ತ ಆ ಕೂರ್ಮರೂಪಿಯಾದ ಪರಮಾತ್ಮನನ್ನು ಭಕ್ತಿಯಿಂದ ಪೂಜಿಸಿದರು. ಈ ತೆರನಾದ ಹರಿಯ ಆರಾಧನೆಯಲ್ಲಿಯೇ ಅಮಿತ ಆನಂದ ಆ ಅಮರಾವತಿಯ ನಾಗರಿಕರಿಗೆ. ಆ ಸುರಾಧೀಶ್ವರರ ಸೇವಾ ಕೈಂಕರ್ಯದಿಂದ ಸುಪ್ರೀತನಾದ ಕೂರ್ಮರೂಪಿ ಭಗವಂತನು ಅವರಿಗೆ ಹೇಳಿದ.

**ಕೂರ್ಮ:-** ದೇವೋತ್ತಮರೇ, ನಿಮ್ಮ ಮನಸ್ಸಿನಲ್ಲಿದ್ದ ವರವನ್ನು ಕೇಳಿರಿ.

**ದೇವತೆಗಳು:-** ಭಗವನ್, ಭೂಭಾರವನ್ನು ಹೊರಲಾರದೆ ಆದಿಶೇಷನೂ ದಿಗ್ಭಾರವನ್ನು ಹೊರಲು ಶಕ್ತಿ ಸಾಲದೇ ಅಷ್ಟದಿಗ್ಗಜಗಳೂ, ಕಸುವು ಗೆಟ್ಟು ಕುಸಿಯುತ್ತಲಿವೆ. ಆದುದರಿಂದ ಅವುಗಳ ಹೆಡೆ ಹಾಗೂ ಹೆಗಲಗಳ ಮೇಲಿನ ಹೊರೆಯನ್ನು ಹಗುರ ಮಾಡಲು ನೀನೇ ಧರಿಸು ಈ ಸಪ್ತದ್ವೀಪವತಿಯಾದ ಧರಣೀ ಮಂಡಲವನ್ನು.

ದೇವತೆಗಳ ಈ ಬಿನ್ನಹವನ್ನು ಮನ್ನಿಸಿದ ಮಧುಸೂದನ. ಏಳು ದ್ವೀಪಗಳುಳ್ಳ ಸಮಸ್ತ ಪೃಥ್ವೀಮಂಡಲವನ್ನೇ ಸಾಸಿವೆ ಕಾಳನಂತೆ ಹೊತ್ತು ನಿಂತ ತನ್ನ ತಲೆಯ ಮೇಲೆ. ಅದರಿಂದ ದಿಗ್ಗಜಗಳಿಗೂ ಹಾಗೂ ಆದಿಶೇಷನಿಗೂ ಉಸಿರಾಡಿಸಲು ಅವಕಾಶವಾಯಿತು. ಅಂದಿನಿಂದ ಎಲ್ಲ ಋಷಿಗಳೂ ಬ್ರಹ್ಮಾದಿ ದೇವತೆಗಳೂ ಸಿದ್ಧರೂ ಮುನಿ ಮನೀಷಿಗಳೂ ಮನುಕುಲದ ಮಹಾನುಭಾವರೂ ಎಲ್ಲರೂ ಏಕಾದಶಿಯ ದಿನ ಪೂರ್ಣ ಉಪವಾಸ ಮಾಡಿ ಭಗವಂತನನ್ನು ಪೂಜಿಸಿ ರಾತ್ರಿ ಜಾಗರ ಮಾಡಿ ದ್ವಾದಶಿಯ ದಿನ ವಿಶೇಷ ಪೂಜೆಗೈದು ಪಾರಣೆಯನ್ನು ಮಾಡತೊಡಗಿದರು. ಹೀಗೆ ಈ ಏಕಾದಶಿ ದ್ವಾದಶಿ ದಿನಗಳಂದು ಭಗವಂತನ ವಿಶೇಷ ಪೂಜೆ ಪ್ರಾರಂಭವಾಯಿತು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಏಕಾದಶಿ ಉಪವಾಸ ಮಾಹಾತ್ಮ್ಯ ಎಂಬ ಎರಡು ನೂರ ಹದಿನೈದನೇಯ ಅಧ್ಯಾಯ ಮುಗಿದುದು*



## ಏಕಾದಶಿಯ ಪ್ರಭಾವ, ದ್ವಾದಶಿ ವ್ರತ ವಿಧಾನ | ಅಧ್ಯಾಯ - ೨೧೬

**ಪಾರ್ವತಿ:-** ಪ್ರಿಯನಾಥ, ದ್ವಾದಶಿಯ ವಿಧಾನವನ್ನೂ, ಏಕಾದಶಿಯ ಪ್ರಭಾವವನ್ನೂ ಈ ಎರಡು ದಿನಗಳಲ್ಲಿ ಮಹಾವಿಷ್ಣುವಿನ ಪೂಜೆಯ ಬಗೆಯನ್ನೂ ನಿನ್ನ ಮುಖದಿಂದ ಕೇಳುವ ಬಯಕೆ ನನಗೆ. ವಿಸ್ತರಿಸಿ ಹೇಳು.

**ಮಹಾದೇವ:-** ಏಕಾದಶಿಯ ತಿಥಿ ಬಂದಾಗ ಮುಖ್ಯವಾಗಿ ಉಪವಾಸ ಮಾಡಬೇಕು. ಏನನ್ನೂ ತಿನ್ನಕೂಡದು. ಏಕಾದಶಿ ಉಪವಾಸದಿಂದ ಎಲ್ಲ ಪಾಪಗಳಿಂದ ಬಿಡುಗಡೆ ಆಗುವದು. ವೈಕುಂಠ ಲೋಕವನ್ನು ಹೊಂದಲು ಅರ್ಹತೆ ಉಂಟಾಗುವದು. ದ್ವಾದಶಿಯ ದಿನ ಶ್ರೀಹರಿಯ ಪೂಜೆ ಮಾಡುವದರಿಂದ ಏಳು ಜನ್ಮದ ಪಾಪಗಳೆಲ್ಲವೂ ತೊಳೆದು ಹೋಗುವವು. ನೂರು ವಾಜಪೇಯ ಯಜ್ಞ, ಒಂದು ಸಾವಿರ ಅಶ್ವಮೇಧ ಯಜ್ಞಗಳಿಂದ ಬರುವ ಪುಣ್ಯ ಏಕಾದಶಿ ಉಪವಾಸ ಮಾಡಿದ ಪುಣ್ಯಕ್ಕೆ ಸರಿದೂಗಲಾರದು. ದ್ವಾದಶಿಯ ದಿನ ಏಕಾದಶಿ ಉಪವಾಸದ ಪಾರಣೆ, ಪ್ರಾತಃಕಾಲದಲ್ಲಿ ಶ್ರೀಹರಿಯ ಪೂಜೆ, ಏಕಾದಶಿ ರಾತ್ರಿ ಜಾಗರ, ದಶಮಿ ಹಾಗೂ ದ್ವಾದಶಿ ದಿನಗಳಂದು ಏಕಭುಕ್ತಿ ಹೀಗೆ ಮೂರು ದಿನಗಳ ಈ ವಿಶಿಷ್ಟ ಕಾರ್ಯಕಲಾಪಗಳಿಗೆ ಏಕಾದಶಿ ವ್ರತ ಎನ್ನುವರು. ಈ ಏಕಾದಶಿ ವ್ರತವನ್ನು ಭಕ್ತಿಯಿಂದ ಮಾಡಿದರೆ ಮಾನವರಲ್ಲಿ ಒಂದು ಪಾಪವೂ ಉಳಿಯಲಾರದು. ಏಕಾದಶಿ ಉಪವಾಸ ಮಾಡಿ ದ್ವಾದಶಿ ಪ್ರಾತಃಕಾಲದವರೆಗೆ ಜಾಗರ, ಅರುಣೋದಯಕ್ಕೆ ಸ್ನಾನ ಹಾಗೂ ಶ್ರೀಹರಿಯ ಪೂಜೆ, ಸೂರ್ಯೋದಯ ಸಮಯಕ್ಕೆ ಸರಿಯಾಗಿ ಪಾರಣೆ ಮಾಡಿದವರಿಗೆ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕೂ ಬಗೆಯ ಪುರುಷಾರ್ಥಗಳು

ಕರಗತವಾಗುವವು. ಮನುಷ್ಯನಿಗೆ ಐದು ಕರ್ಮೇಂದ್ರಿಯ ಐದು ಜ್ಞಾನೇಂದ್ರಿಯ, ಒಂದು ಮನಸ್ಸು. ಹೀಗೆ ಹನ್ನೊಂದು ಇಂದ್ರಿಯಗಳಿಂದ ಮಾಡಿದ ಏಕಾದಶ ಪಾಪರಾಶಿಗಳೆಲ್ಲವೂ ಏಕಾದಶಿಯ ಉಪವಾಸದಿಂದ ಹೇಳ ಹೆಸರಿಲ್ಲದಂತೆ ನಶಿಸಿಹೋಗುವವು.

**ರಟಂತೀಹ ಪುರಾಣಾನಿ ಭೂಯೋ ಭೂಯೋ ವರಾನನೇ ।**
**ನ ಭೋಕ್ತವ್ಯಂ ನ ಭೋಕ್ತವ್ಯಂ ಸಂಪ್ರಾಪ್ತೇ ಹರಿವಾಸರೇ ॥**

ಪಾರ್ವತಿ, ಏಕಾದಶಿಯು ಬಂದಾಗ ಏನನ್ನೂ ಉಣ್ಣಬೇಡಿರಿ. ಏನನ್ನೂ ತಿನ್ನಬೇಡಿರಿ ಎಂದು ಪುರಾಣಗಳು ಮತ್ತೆ ಮತ್ತೆ ಕೂಗುತ್ತಲೇ ಇರುತ್ತವೆ. ಏಕಾದಶಿಯ ದಿನ ಇನ್ನೊಬ್ಬರಿಗೆ ತಿನ್ನು, ಉಣ್ಣು ಎಂದು ಹೇಳಿದವನಿಗೆ ಶೆರೆಯನ್ನು ಕುಡಿ ಮಾಂಸ ತಿನ್ನು, ಬ್ರಾಹ್ಮಣನನ್ನು ಕೊಲ್ಲು, ಅಬಲೆಯನ್ನು ಸಂಹರಿಸು, ಹಸುವನ್ನು ಕಡಿದು ಹಾಕು ಎಂದು ಹೇಳಿದವನಿಗೆ ಆಗುವ ದುರ್ಗತಿಯೇ ಒದಗುವದು. ತಾಯಿ ತಂದೆಗಳ ಮರಣವು ಏಕಾದಶಿಯ ದಿನ ಆಗಿದ್ದರೆ ಅಂದು ಅವರ ವಾರ್ಷಿಕ ಶ್ರಾದ್ಧವನ್ನು ಮಾಡಕೂಡದು. ದ್ವಾದಶಿ ದಿನವೇ ಶ್ರಾದ್ಧವನ್ನು ಮಾಡಬೇಕು. ಪಿತೃಗಳು ಏಕಾದಶಿಯ ದಿನ ನೀಡಿದ ತಿಲ, ಜಲ, ತರ್ಪಣ, ಪಿಂಡ ಯಾವದನ್ನೂ ಮುಟ್ಟುವದಿಲ್ಲ. ವೇದವು ಮೂರು ಮಾತನ್ನು ಉಪದೇಶಿಸುತ್ತದೆ. ಬ್ರಾಹ್ಮಣನನ್ನು ಕೊಲ್ಲಬೇಡ, ಮದ್ಯವನ್ನು ಕುಡಿಯಬೇಡ, ಏಕಾದಶಿಯ ದಿನ ತಿನ್ನಬೇಡ'' ಆದುದರಿಂದ ಏಕಾದಶಿಯ ದಿನ ಶುದ್ಧ ಉಪವಾಸವನ್ನು ಮಾಡಬೇಕು. ಆ ಏಕಾದಶಿ ದಶಮಿ ವಿದ್ಧವಾಗಿದ್ದರೆ ಅದನ್ನು ಬಿಟ್ಟು ದ್ವಾದಶೀ ದಿನವೇ ಉಪವಾಸ ಮಾಡಬೇಕು. ದಶಮಿಯ ದಿನ ಒಪ್ಪತ್ತು ಊಟ, ನೆಲದ ಮೇಲೆ ಶಯನ, ಸ್ತ್ರೀ-ಸಂಗ ತ್ಯಾಗ, ಏಕಾದಶಿ ದಿನ ಪೂರ್ಣ ಉಪವಾಸ, ನೆಲ್ಲಿಕಾಯಿಯನ್ನು ಮೈಗೆ ಬಳಿದುಕೊಂಡು ಸ್ನಾನ, ಭಕ್ತಿಯಿಂದ ಹರಿ ಪೂಜೆ, ರಾತ್ರಿ ಜಾಗರ, ನಾಸ್ತಿಕ ಪಾಖಂಡಿ, ಧರ್ಮದ್ವೇಷಿಗಳ ಜೊತೆಗೆ ಸಂಪರ್ಕ ವರ್ಜ್ಯ. ದ್ವಾದಶಿ ಪ್ರಾತಃಕಾಲ ಸ್ನಾನ, ಹಾಗೂ ಹರಿಪೂಜೆ ಅನಂತರ ಪಾರಣೆ. ದ್ವಾದಶಿ ಸಾಯಂಕಾಲ ಭೋಜನ ಸ್ತ್ರೀ ಸಂಗಾದಿ ವರ್ಜನ. ಹೀಗೆ ಮೂರು ದಿನ ಪಾಲಿಸುವ ಕ್ರಿಯಾಕಲಾಪಗಳಿಗೆಲ್ಲ ಕೂಡಿ ತಿಥಿತ್ರಯ ಪಾಲನ ಎಂದು ಹೆಸರು.

ಏಕಾದಶಿಯ ದಿನ ರಾತ್ರಿ ಜಾಗರೋತ್ಸವವನ್ನು ಪುರಾಣ. ಪುಣ್ಯಕಥಾಶ್ರವಣ ಕೀರ್ತನೆ, ಪಾರಾಯಣ, ಸ್ತೋತ್ರ, ಪಾಠ, ಜಪ, ಪ್ರದಕ್ಷಿಣ, ನಮಸ್ಕಾರ, ಭಜನೆ, ಗಾಯನ, ಗಂಧ ಪುಷ್ಪಗಳಿಂದ ದೇವರ ಅರ್ಚನೆ ದೀಪಾರಾಧನೆ ಮುಂತಾದವುಗಳಿಂದ ಮನೆ ಅಥವಾ ದೇವಾಲಯಗಳಲ್ಲಿ ಭಕ್ತಿಯಿಂದ ನೆರವೇರಿಸಬೇಕು. ಮರುದಿನ ಪ್ರಾತಃಕಾಲದಲ್ಲಿ ತುಳಸಿಬೆರಿಸಿದ ನೀರಿನಿಂದ ಸ್ನಾನಮಾಡಿ ವಿಧಿ ಪೂರ್ವಕವಾಗಿ ಪಿತೃಗಳಿಗೂ ದೇವತೆಗಳಿಗೂ ತರ್ಪಣ ನೀಡಿ ಲಕ್ಷ್ಮೀಸಹಿತನಾದ ಜನಾರ್ದನನನ್ನು ಎಳೆ ತುಳಸಿಯದಳ ಹಾಗೂ ಸುಗಂಧಿ ಹೂಗಳಿಂದ ಪೂಜೆ ಮಾಡಬೇಕು. ಒಂದನೂರಾ ಎಂಟುಸಲ ದೇವರಿಗೆ ಮಂಗಳಾರತಿಯನ್ನು ಬೆಳಗಬೇಕು.

ಕಮಲಪುಷ್ಪದ ಮಾಲೆಯನ್ನು ಲಕ್ಷ್ಮೀನಾರಾಯಣರ ಕೊರಳಿನಲ್ಲಿ ಹಾಕಬೇಕು. ಮೊದಲು ಧೂಪಾರತಿಯನ್ನು ಬೆಳಗಿ ಅನ್ನ, ಪಾಯಸ ಹಾಗೂ ಇತರ ವ್ಯಂಜನ ಪಕ್ವಾನ್ನಗಳ ನೈವೇದ್ಯವನ್ನು ಸಮರ್ಪಿಸಬೇಕು. ಅನಂತರ ಪಚ್ಚಕರ್ಪುರ ಮಿಶ್ರಿತವಾದ ತಾಂಬೂಲವನ್ನು ಭಗವಂತನಿಗೆ ನಿವೇದಿಸಿ ಮತ್ತೊಮ್ಮೆ ದೀಪಾರಾಧನೆಯನ್ನು ಬೆಳಗಬೇಕು. ಮತ್ತು

ಭಕ್ತಿಯಿಂದ ಪ್ರದಕ್ಷಿಣ ನಮಸ್ಕಾರಗಳನ್ನು ಹಾಕಬೇಕು. ಪುರುಷಸೂಕ್ತದಿಂದ ಒಂದನೂರ ಎಂಟು ಸಲ ಅಗ್ನಿಯಲ್ಲಿ ತುಪ್ಪದಿಂದ ಆಹುತಿಯನ್ನು ಹಾಕಬೇಕು. ಲಕ್ಷ್ಮೀಸೂಕ್ತದಿಂದ ಪಾಯಸ ಹಾಕಿ ಹೋಮವನ್ನು ಮಾಡಬೇಕು. ಅನಂತರ ಬ್ರಾಹ್ಮಣರ ಭೋಜನವನ್ನು ಅತ್ಯಂತ ಭಕ್ತಿಯಿಂದ ಮಾಡಿಸಿ ಬಳಿಕ ತಾನು ಭೋಜನಕ್ಕೆ ಕುಳಿತುಕೊಳ್ಳಬೇಕು. ಊಟ ಮಾಡುವಾಗ ಗೋವಿಂದ ನಾಮಸ್ಮರಣದ ಹೊರತು ಬೇರೆ ಮಾತುಗಳನ್ನು ಆಡಬಾರದು. ದ್ವಾದಶಿ ದಿನ ಹಗಲು ಪುರಾಣಾದಿ ವಾಚನದಿಂದಲೇ ಸಮಯವನ್ನು ಕಳೆಯಬೇಕು. ನೆಲದ ಮೇಲೆ ಮಲಗಬೇಕು. ಬ್ರಹ್ಮಚರ್ಯೆಯಿಂದಲೇ ಇರಬೇಕು. ಹೀಗೆ ದ್ವಾದಶಿ ವ್ರತವನ್ನು ಅನೂಚಾನವಾಗಿ ಪಾಲಿಸಿದರೆ ಪರಮಾತ್ಮನು ಪ್ರಸನ್ನನಾಗಿ ಮಾನವರ ಸರ್ವ ಅಭೀಷ್ಟಗಳನ್ನು ಪ್ರದಾನ ಮಾಡುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಏಕಾದಶಿಯ ಪ್ರಭಾವ, ದ್ವಾದಶಿ ವ್ರತ ವಿಧಾನ ಎಂಬ ಎರಡು ನೂರ ಹದಿನಾರನೇಯ ಆಧ್ಯಾಯ ಮುಗಿದುದು*



## ನಮುಚಿ ಮುಂತಾದ ರಾಕ್ಷಸರ ಸಂಹಾರ ಪಾಷಂಡರ ಉತ್ಪತ್ತಿ

**ಅಧ್ಯಾಯ - ೨೧೭**

**ಪಾರ್ವತಿ:-** ಈ ತಿಥಿತ್ರಯದಲ್ಲಿ ನೀವು ಪಾಷಂಡರೊಡನೆ ಸಹವಾಸ ಸಂಭಾಷಣ ಮಾಡಬಾರದು ಎಂದು ಹೇಳಿದಿರಿ. ಈ ಪಾಷಂಡರು ಚಂಡಾಲರಿಗಿಂತ ಕನಿಷ್ಠರು ತ್ಯಾಜ್ಯರು ಎಂದು ಹೇಳಲಾಗಿದೆ. ಇಂಥ ಪಾಷಂಡರು ಎಂದರೆ ಯಾರು? ಅವರ ಲಕ್ಷಣಗಳು ಏನು? ಹೇಳಿರಿ.

**ಮಹಾದೇವ:-**

**ಪಾಷಂಡಿನಂ ವಿಕರ್ಮಸ್ಥಂ ಪತಿತಂ ಶ್ವಪಚಂ ತಥಾ ।**
**ನಾವಲೋಕೇನ್ನ ಸಂಭಾಷೇನ್ನ ಸ್ಪೃಶೇತ್ತತ್ರ ವೈಷ್ಣವಃ ॥**

ವಿಷ್ಣುಭಕ್ತನಾದವ ಪಾಷಂಡಿಯನ್ನು ವಿಕರ್ಮಸ್ಥನನ್ನು ಪತಿತನನ್ನು ಸ್ವಪಚನನ್ನು ಮುಟ್ಟಬಾರದು ನೋಡಬಾರದು. ಅವರೊಡನೆ ಮಾತಾಡಬಾರದು.

**ಅವೈಷ್ಣವಸ್ತು ಯೋ ವಿಪ್ರಃ ಸ ಪಾಷಂಡಃ ಪ್ರಕೀರ್ತಿತಃ**
**ಶಿಖೋಪವೀತತ್ಯಾಗೀಚ ವಿಕರ್ಮಸ್ಥ ಇತೀರಿತಃ ॥**

ವಿಷ್ಣುವಿನಲ್ಲಿ ಭಕ್ತಿಯಿಲ್ಲದ ಬ್ರಾಹ್ಮಣನು ಪಾಷಂಡ ಎಂದು ಕರೆಯಲ್ಪಡುತ್ತಾನೆ.

ಜನಿವಾರ, ಮತ್ತು ಚಂಡಿಕೆ ಇಲ್ಲದವನು ವಿಕರ್ಮಸ್ಥ ಎಂದು ಕರೆಯಲ್ಪಡುತ್ತಾನೆ. ಮಹಾಪಾಪ, ಉಪಪಾಪಗಳನ್ನು ಮಾಡಿದವನು ಪತಿತ ಎಂದೆನಿಸಿಕೊಳ್ಳುತ್ತಾನೆ. ಮದ್ಯ ಮಾಂಸ ಸೇವಿಸುವವನು ಶ್ವಪಚ. ಎಂದು ಕರೆಯಲ್ಪಡುತ್ತಾನೆ. ಇವರಲ್ಲಿ ಪಾಷಂಡಿಗಳ ವಿಶೇಷ ಲಕ್ಷಣಗಳನ್ನು ಹೇಳುತ್ತೇನೆ ಕೇಳು.

**ಯೇಽನ್ಯದೇವಂ ಪರತ್ವೇನ ವದಂತ್ಯಜ್ಞಾನ ಮೋಹಿತಾಃ ।**
**ನಾರಾಯಣಾತ್ ಜಗನ್ನಾಥಾತ್ ತೇ ವೈ ಪಾಷಂಡಿನಃ ಸ್ಮೃತಾಃ ॥**

ಯಾರು ಜಗತ್ತಿಗೆ ಒಡೆಯನಾದ ನಾರಾಯಣನ ಹೊರತು ಬೇರೆ ಯಾವನೋ ಒಬ್ಬ ದೇವನು ಪರಮಶ್ರೇಷ್ಠ ಎಂದು ಅಜ್ಞಾನದಿಂದ ಮೋಹಿತರಾಗಿ ನುಡಿಯುವರೋ ಅವರೇ ಪಾಷಂಡಿಗಳು.

**ದ್ವೇಷ್ಟಾರೋ ವಿಷ್ಣುಭಕ್ತಾನಾಂ ಯೋಽಚಾಽ ವೈಷ್ಣವ ಸಂಶ್ರಯಾಃ**
**ಪಾಷಂಡಿಭಿಶ್ಚ ಸಂಯುಕ್ತಾಃ ವೈಸ್ತೇ ಪಾಷಂಡಿನಃ ಸ್ಮೃತಾಃ ॥**

ವಿಷ್ಣುಭಕ್ತರನ್ನು ದ್ವೇಷ ಮಾಡುವವರೂ, ವಿಷ್ಣುದ್ವೇಷಿಗಳನ್ನು ಆಶ್ರಯಿಸುವವರೂ, ಪಾಷಂಡಿಗಳ ಜೊತೆಗೆ ಕೂಡಿಕೊಂಡು ಇರುವವರೂ ಪಾಷಂಡಿಗಳು ಎಂದು ಕರೆಯಲ್ಪಡುತ್ತಾರೆ. ಅವೈದಿಕ ಲಿಂಗಗಳಾದ ತಲೆಬುರುಡೆ, ಬೂದಿ, ಮೂಳೆಗಳನ್ನು ಧರಿಸಿ ವೇದಶಾಸ್ತ್ರಗಳಲ್ಲಿ ಹೇಳದ ಕಾರ್ಯಕಲಾಪಗಳನ್ನು ಮಾಡುವವರೂ, ಶಂಖಚಕ್ರ ಊರ್ಧ್ವಪುಂಡ್ರಾದಿ ವೈಷ್ಣವ ಚಿನ್ಹಗಳನ್ನು ಧರಿಸದೇ ಇರುವವರೂ, ವೇದೋಕ್ತವಾದ ಆಚಾರ ವಿಚಾರವನ್ನು ಬಿಟ್ಟವರೂ, ಬ್ರಹ್ಮರುದ್ರಾದಿ ದೇವತೆಗಳು ನಾರಾಯಣನಿಗೆ ಸಮಾನ ಎಂದು ತಿಳಿದವರೂ, ಎಲ್ಲ ಯಜ್ಞಗಳ ಭೋಕ್ತಾರ ಮತ್ತು ಫಲ ಪ್ರದಾತ ಶ್ರೀಹರಿಯೇ ಎಂದು ತಿಳಿಯದೇ ದೇವತೆಗಳ ಉದ್ದೇಶದಿಂದ ಯಜ್ಞ ಮಾಡುವವರೂ ಪಾಷಂಡಿ ಎಂದು ಕರೆಯಲ್ಪಡುತ್ತಾರೆ. ಇಂಥ ವಿಷ್ಣು ದ್ರೋಹಿಗಳಾದ ಅವೈಷ್ಣವರು ಬ್ರಾಹ್ಮಣರೇ ಆಗಿದ್ದರೂ ಅವರನ್ನು ನೋಡಬಾರದು. ಅವರೊಡನೆ ಮಾತನ್ನು ಆಡಬಾರದು ಅವರ ಮೈಯನ್ನು ಕೂಡ ಮುಟ್ಟಬಾರದು.

**ಪಾರ್ವತಿ:-** ಪ್ರಿಯಕರನಾದ ಪರಮೇಶ್ವರ, ನಿನ್ನ ಮಾತನ್ನು ಕೇಳಿ ನನಗೆ ಒಂದು ಸಂದೇಹ ತಲೆದೋರಿದೆ. ನಿನ್ನ ಮೇಲಿನ ಸ್ನೇಹ ಸಲಿಗೆಯಿಂದ ನಾನು ಕೇಳುತ್ತೇನೆ. ನನ್ನ ಮೇಲಿನ ಪ್ರೀತಿಯಿಂದ ನೀನು ಅದಕ್ಕೆ ಉತ್ತರಿಸು. ತಲೆ ಬುರುಡೆ, ಬೂದಿ, ತೊಗಲು, ಮೂಳೆಗಳ ಧಾರಣವು ಶಾಸ್ತ್ರ ನಿಷಿದ್ಧ, ಅವುಗಳನ್ನು ಧರಿಸಿದವರು ಪಾಷಂಡಿಗಳು ಎಂದು ತಾವು ಹೇಳುವಿರಷ್ಟೇ ! ಆದರೆ ನೀವೇ ಕೈಯಲ್ಲಿ ಕಪಾಲವನ್ನು ಹಿಡಿದಿರುವಿರಿ. ಮೈಗೆಲ್ಲ ಬೂದಿ ಬಳಿದುಕೊಂಡಿರುವಿರಿ. ಆನೆಯ ತೊಗಲನ್ನು ಹೊದ್ದಿರುವಿರಿ. ಅವೆಲ್ಲವೂ ಪಾಷಂಡಿಗಳ ಕೃತ್ಯ ಎಂದು ಹೇಳಿ ನೀವೇಕೆ ಕಪಾಲ ಚರ್ಮ ಭಸ್ಮ ಧಾರಣವನ್ನು ಮಾಡುತ್ತಿರುವಿರಿ? ಹೆಣ್ಣಿಗೆ ಸಹಜವಾದ ಚಾಪಲ್ಯದಿಂದ ನಾನು ಈ ಪ್ರಶ್ನೆಯನ್ನು ಕೇಳಿದ್ದೇನೆ. ಮಾಡಬಾರದ ಇಂಥ ಪ್ರಶ್ನೆಯನ್ನು ಮಾಡಿದ್ದಕ್ಕಾಗಿ ತಾವು ನನ್ನನ್ನು ಕ್ಷಮಿಸಿರಿ.

**ಮಹಾದೇವ:-** ದೇವೀ, ನೀನು ಬಹು ರಹಸ್ಯವಾದ ಪ್ರಶ್ನೆಯನ್ನೇ ಮಾಡಿದೆ. ಅದಕ್ಕೆ ನಾನು ಉತ್ತರವನ್ನೂ ಹೇಳುತ್ತೇನೆ. ಆದರೆ ಅದನ್ನು ಮಾತ್ರ ನೀನು ಯಾರ ಮುಂದೆಯೂ ತಿಳಿಸಬಾರದು. ನನ್ನ ನಿನ್ನ ಶರೀರ ಒಂದೇ ಆದುದರಿಂದ ನಿನ್ನಿಂದ ಯಾವುದನ್ನೂ ಬಚ್ಚಿಡಲಾರದೇ ನಿನ್ನ ಮುಂದೆ ನನ್ನನ್ನು ತೆರೆದು ಕೊಳ್ಳುತ್ತೇನೆ.

ಪೂರ್ವಕಾಲದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ನಮುಚಿ ಮೊದಲಾದ ಮಹಾದೈತ್ಯರು ವಿಷ್ಣುಭಕ್ತರಾಗಿ ಇದ್ದರು. ಅತ್ಯಂತ ದುಷ್ಟಭ್ರಷ್ಟರಾದ ಆ ದೈತ್ಯವೀರರು ಮೇಲೆ ವಿಷ್ಣುಪಾದನಿರತರು. ಸ್ವಾರ್ಥಭರಿತರು. ಆದರೆ ಪಾಪ ವರ್ಜಿತರು ವೇದೋಕ್ತ ಧರ್ಮಾನುಷ್ಠಾನಗಳನ್ನು ಮಾತ್ರ ಅವರು ಆಚರಿಸುತ್ತಿದ್ದರು. ಅವರೆಲ್ಲರಿಗೂ ಭಗವಂತನಲ್ಲಿಯೇ ಸಾಪೇಕ್ಷ ಭಕ್ತಿ. ವೇದ ಶಾಸ್ತ್ರೋಕ್ತ ಧರ್ಮ ಕರ್ಮಾನುಷ್ಠಾನದಲ್ಲಿಯೂ ಅತ್ಯಂತ ಆಸಕ್ತಿ. ಈ ನಮುಚಿ ಮೊದಲಾದ ದಾನವ

ಧುರೀಣರು ಅಸಾಧಾರಣ ವೀರರು. ಶೌರ್ಯ, ಧೈರ್ಯ, ವೀರ್ಯ ಪರಾಕ್ರಮಗಳಲ್ಲಿ ಅವರನ್ನು ಎದುರಿಸಿ ಬದುಕಬಲ್ಲ, ಎಂಟೆದೆಯ ಬಂಟ ಆ ಸ್ವಾಯಂಭುವ ಮನ್ವಂತರದಲ್ಲಿ ಒಬ್ಬನೂ ಇರಲಿಲ್ಲ. ಎದುರಿಲ್ಲದ ತಮ್ಮ ಬಾಹು ಪರಾಕ್ರಮದಿಂದ ಶೂರ ಶಿಖಾಮಣಿಗಳಾದ ಆ ರಾಕ್ಷಸರಾಜರು ದೇವತೆಗಳೊಡನೆ ಕಾದಿದರು. ರಣರಂಗದಲ್ಲಿ ಸುರಪುಂಗವರ ಮುಖ ಭಂಗವನ್ನು ಮಾಡಿದರು. ದೇವತಾ ಧುರೀಣರನ್ನೆಲ್ಲ ಗೆದ್ದು ಅವರ ಸ್ಥಾನವನ್ನು ಆಕ್ರಮಿಸಿದರು. ಸಂಗ್ರಾಮದಲ್ಲಿ ಸಾಲು ಸಾಲಾಗಿ ಸೋಲಿನ ಮೇಲೆ ಸೋಲನ್ನು ಅನುಭವಿಸಿ ಕ್ಷಾಮಕ್ಷೀಣರಾದ ದೇವತೆಗಳು ಇಂದ್ರನನ್ನು ಮುಂದೆ ಮಾಡಿಕೊಂಡು ವಿಷ್ಣುವಿಗೆ ಮೊರೆ ಹೊಕ್ಕರು.

**ದೇವತೆಗಳು:-** ದೇವ ದೇವ, ನಮುಚಿ ಜಂಭಾಸುರ ಮೊದಲಾದ ದೈತ್ಯ ವೀರರಿಂದ ನಾವು ಸೋಲಿಸಲ್ಪಟ್ಟಿದ್ದೇವೆ. ನಮ್ಮ ಸ್ಥಾನಮಾನಗಳನ್ನೆಲ್ಲ ಆ ದೈತ್ಯರೇ ಆಕ್ರಮಿಸಿದ್ದಾರೆ. ಈಗ ನಮ್ಮ ಮಾನ ನಷ್ಟ. ಸ್ಥಾನ ಭ್ರಷ್ಟ. ನಮ್ಮ ಜೀವನವೇ ಬಹಳ ಕಷ್ಟಾತಿಕಷ್ಟ. ಅದಕ್ಕಾಗಿ ನಿನ್ನಲ್ಲಿ ಮೊರೆಯಿಟ್ಟಿದ್ದೇವೆ. ನಾವು ನಿನ್ನ ಸಾರ್ವಕಾಲಿಕ ಭಕ್ತರು. ನಿನ್ನನ್ನೇ ನಂಬಿದವರು. ನೀನೇ ಆ ದೈತ್ಯರನ್ನು ಗೆದ್ದು ನಮ್ಮನ್ನು ಸಂರಕ್ಷಿಸು. ಅನ್ಯಾಯದಿಂದ ಅವರು ನಮ್ಮ ಸ್ಥಾನಗಳನ್ನು ಆಕ್ರಮಿಸಿದ್ದಾರೆ. ನಮ್ಮ ಐಶ್ವರ್ಯವನ್ನೆಲ್ಲ ದೋಚಿದ್ದಾರೆ. ಅವರನ್ನು ನಾವು ಗೆಲ್ಲಲಾರೆವು. ನಿನ್ನ ಹೊರತು ನಮಗೆ ಬೇರೆ ಗತಿಯಿಲ್ಲ. ನಾವು ಅವರ ಸ್ಥಾನ ಅಧಿಕಾರ ಐಶ್ವರ್ಯವನ್ನು ಎಂದಿಗೂ ಬಯಸುವುದಿಲ್ಲ. ನಮ್ಮದನ್ನು ನಮಗೆ ನೀನು ದೊರಕಿಸಿಕೊಡು.

ದೇವತೆಗಳ ಈ ಕರುಣೆಯ ಕೂಗನ್ನು ಕೇಳಿ ಕರುಳು ಕರಗಿತು ಆ ಶ್ರೀ ಹರಿಗೆ. ತಮ್ಮ ಸ್ಥಾನದಲ್ಲಿ ಇದ್ದು ಯಾರನ್ನೂ ಹಿಂಸಿಸದೇ ಯಾರಿಗೂ ದ್ರೋಹ ಬಗೆಯದೇ ಸ್ವಧರ್ಮಾನುಷ್ಠಾನ ತತ್ಪರರಾದ ದೇವತೆಗಳ ಮೇಲೆ ಏರಿ ಬಿದ್ದು, ಮುಂಗೈಜೋರಿನ ಮೇಲೆ ಅವರನ್ನು ಗೆದ್ದು ಅವರ ಲೋಕದಿಂದ ಅವರನ್ನು ಹೊರಗೆ ಓಡಿಸಿ ಅವರ ಸ್ಥಾನವನ್ನು ಆಕ್ರಮಿಸಿ ಕುಳಿತ ಆ ದೈತ್ಯರನ್ನು ಹೇಗಾದರೂ ಮಾಡಿ ಅಲ್ಲಿಂದ ಹೊರಡಿಸಿ ಸ್ಥಾನ ಭ್ರಷ್ಟರಾದ ದೇವತೆಗಳನ್ನು ಸ್ವಸ್ಥಾನದಲ್ಲಿ ಪುನಃ ಪ್ರತಿಷ್ಠೆ ಮಾಡಬೇಕು ಎಂದು ಶ್ರೀಹರಿ ಸಂಕಲ್ಪಿಸಿದ. ಆದರೆ ಈಗ ಆ ದೈತ್ಯರೂ ಕೂಡ ಹರಿಯ ಭಕ್ತರೇ ಆಗಿದ್ದರು. ವೇದೋಕ್ತ ಕರ್ಮಾನುಷ್ಠಾನವನ್ನೇ ಮಾಡುತ್ತಿದ್ದರು. ಈಗ ಅವರನ್ನು ತಾನು ಕೊಲ್ಲುವದು ಹೇಗೆ ಎಂಬ ಸಮಸ್ಯೆ ವಿಷ್ಣುವಿನ ತಲೆ ತಿನ್ನ ತೊಡಗಿತು. ಅದಕ್ಕಾಗಿ ಅವನು ಒಂದು ಯುಕ್ತಿ ಮಾಡಿದ. ದೇವತೆಗಳಿಗೆಲ್ಲ ಅಭಯದಾನವನ್ನು ನೀಡಿ ನಾನು ಎಲ್ಲವನ್ನೂ ಸರಿಪಡಿಸುತ್ತೇನೆ. ಎಂದು ಅಶ್ವಾಸನೆ ನೀಡಿ ಸಂತೈಸಿ ಕಳಿಸಿಕೊಟ್ಟ. ಅನಂತರ ನನ್ನನ್ನು ಕರೆದ ಆ ಕಮಲಾಪತಿ. ನನ್ನನ್ನು ಕುರಿತು ಹೇಳಿದ.

**ಮಹಾವಿಷ್ಣು:-**

**ತ್ವಂ ಹಿ ರುದ್ರ ಮಹಾಬಾಹೋ ಮೋಹನಾರ್ಥಂಸುರದ್ವಿಷಾಂ**
**ಪಾಷಂಡಾಚರಣಂ ಧರ್ಮಂ ಕುರುಷ್ವ ಸುರಸತ್ತಮ ॥**
**ತಾಮಸಾನಿ ಪುರಾಣಾನಿ ಕಥಯಸ್ವ ಚ ತಾನ್ ಪ್ರತಿ.**
**ಮೋಹನಾನಿ ಚ ಶಾಸ್ತ್ರಾಣಿ ಕುರುಷ್ವ ಚ ಮಹಾಮತೇ ॥**

ರುದ್ರ, ನೀನು ಮಹಾ ಬಲಿಷ್ಠ. ದೇವತೆಗಳನ್ನು ದ್ವೇಷಿಸುವ ದೈತ್ಯರನ್ನು ಮೋಹಗೊಳಿಸಲಿಕ್ಕಾಗಿ ಪಾಷಂಡ ಧರ್ಮವನ್ನು ನಿರ್ಮಿಸು. ತಾಮಸ ಪುರಾಣಗಳನ್ನು ಹೇಳು. ಮೋಹಕ ಶಾಸ್ತ್ರಗಳನ್ನು ರಚಿಸು.

**ಮಯ್ಯಭಕ್ತಾಶ್ಚ ವಿಪ್ರಾಶ್ಚ ಭವಿಷ್ಯಂತಿ ಮಹರ್ಷಯಃ**
**ತ್ವಚ್ಛಕ್ತ್ಯಾ ತಾನ್ ಸಮಾ ವಿಶ್ಯಕಥಯಸ್ವ ಚ ತಾಮಸಾನ್ ॥**

ನನ್ನಲ್ಲಿ ಭಕ್ತಿಯಿಲ್ಲದ ಎಷ್ಟೋ ಋಷಿಗಳು ಬ್ರಾಹ್ಮಣರು ಮುಂದೆ ಜನಿಸಲಿದ್ದಾರೆ. ನೀನು ನಿನ್ನ ಶಕ್ತಿಯಿಂದ ಅವರಲ್ಲಿ ಪ್ರವೇಶ ಮಾಡಿ ಅವರಿಗೆ ಉಪದೇಶಗೈದು ಈ ತಾಮಸ ಶಾಸ್ತ್ರ ಪುರಾಣಗಳನ್ನು ಪ್ರಚುರಗೊಳಿಸು.

**ಕಣಾದಂ ಗೌತಮಂ ಶಕ್ತಿ ಮುಪಮನ್ಯುಂ ಚ ಜೈಮಿನಿಂ**
**ಕಪಿಲಂ ಚೈವ ದುರ್ವಾಸೋ ಮೃಕಂಡೂ ಚ ಬೃಹಸ್ಪತಿಮ್ ॥**

**ಭಾರ್ಗವಂ ಜಾಮದಗ್ನ್ಯಂ ಚ ದಶೈತಾನ್ ತಾಮಸಾನ್ ಋಷೀನ್**
**ತವ ಶಕ್ತ್ಯಾ ಸಮಾವಿಶ್ಯ ಕುರುಷ್ವ ಜಗತೋऽಹಿತಮ್**

ಕಣಾದ, ಗೌತಮ, ಶಕ್ತಿ, ಉಪಮನ್ಯು, ಜೈಮಿನಿ, ಕಪಿಲ, ದುರ್ವಾಸ, ಮೃಕಂಡು ಬೃಹಸ್ಪತಿ, ಜಮದಗ್ನಿಯ ಮಗನಾದ ಭಾರ್ಗವ ಈ ಹತ್ತು ತಾಮಸ ಋಷಿಗಳನ್ನುನೀನು ಪ್ರವೇಶ ಮಾಡಿ ಜಗತ್ತಿಗೆ ಅಹಿತಕಾರಕವಾದ ಶಾಸ್ತ್ರಪುರಾಣಗಳನ್ನು ಅವರ ಕಡೆಯಿಂದ ಮಾಡಿಸು.

**ಕಥಯಂತಿ ಹಿ ತೇ ವಿಪ್ರಾಃ ತಾಮಸಾನಿ ಜಗತ್ರಯೇ ।**
**ಪುರಾಣಾನಿ ಚ ಶಾಸ್ತ್ರಾಣಿ ತ್ವತ್ಪರತ್ವಪರಾಣಿ ವೈ ॥**

ಆ ಋಷಿಗಳು ನೀನೇ ಸರ್ವೋತ್ತಮ ಎಂದು ಸಾಧಿಸುವ ತಾಮಸ ಪುರಾಣಗಳನ್ನು ಹೇಳುತ್ತಾರೆ. ಮೂರು ಲೋಕಗಳಲ್ಲಿ ಪ್ರಚಾರ ಪಡಿಸುತ್ತಾರೆ.

**ಕಪಾಲಚರ್ಮ ಭಸ್ಮಾಸ್ಥಿ ಚಿನ್ಹಾನ್ಯಮರ ಸರ್ವಶಃ**
**ತ್ವಮೇವ ಧೃತ್ವಾತಾನ್ ಲೋಕಾನ್ ಮೋಹಯಸ್ವ ಜಗತ್ರಯೇ.**

ತಲೆಬುರುಡೆ, ತೊಗಲು, ಬೂದಿ, ಮೂಳೆ ಮುಂತಾದ ಚಿನ್ಹಗಳನ್ನು ನೀನೇ ಧಾರಣಮಾಡಿ ಮೂರು ಲೋಕಗಳಲ್ಲಿರುವ ಆ ಎಲ್ಲ ಜನರನ್ನು ನೀನೇ ಮೋಹಗೊಳಿಸು.

**ತಥಾ ಪಾಶುಪತಂ ಶಾಸ್ತ್ರಂ ತ್ವಮೇವ ಕುರು ಸತ್ಕಥಃ**
**ಕಂಕಾಲಶೈವ ಪಾಂಷಡ ಮಹಾಶೈವಾದಿ ಭೇದತಃ ॥**

ಅದರಂತೆ ಮೂರು ಲೋಕಗಳಲ್ಲಿಯೂ ಪೂಜಿತನಾದ ನೀನೇ ಕಂಕಾಲ, ಶೈವ. ಪಾಷಂಡ ಮಹಾಶೈವ ಮಂತಾಗಿ ಬೇರೆ ಬೇರೆ ಬಗೆಯಾದ ಪಾಶುಪತ ಶಾಸ್ತ್ರಗಳನ್ನು ರಚಿಸು.

**ತ್ವಾಂ ಪರತ್ವೇನ್ ವಕ್ಷ್ಯಂತಿ ಸರ್ವಶಾಸ್ತ್ರೇಷು ತಾಮಸಾಃ**
**ತೇಷಾಂ ಮತಮಧಿಷ್ಠಾಯ ಸರ್ವೇ ದೈತ್ಯಾ ಸದಾನವಾಃ ॥**

**ಭವೇಯುಸ್ತೇ ಮದ್ವಿಮುಖಾಃ ಕ್ಷಣಾದೇವ ನ ಸಂಶಯಃ**

ತಾಮಸ ಭಾವವು ಉದ್ರೇಕಗೊಂಡ ಆ ಮುನಿಗಳು ತಾವು ರಚಿಸಿದ ಎಲ್ಲ ಶಾಸ್ತ್ರ

ಪುರಾಣಗಳಲ್ಲಿಯೂ ರುದ್ರನೇ ಸರ್ವೋತ್ತಮ ಹಾಗೂ ಪರಾತ್ಪರ ಎಂದು ಪ್ರತಿಪಾದಿಸುವರು. ಆ ಮತವು ಎಲ್ಲ ದೈತ್ಯರಿಗೂ ಸಮ್ಮತವಾಗುವದು. ಆನಂದದಿಂದ ಅವರೆಲ್ಲರೂ ಆ ಶೈವ, ಕಂಕಾಲ, ಪಾಷಂಡಶೈವ, ಮಹಾ ಶೈವಾದಿ ಮತಗಳನ್ನು ಅವಲಂಬಿಸಿ ಒಂದು ಕ್ಷಣದಲ್ಲಿ ನನ್ನಿಂದ ವಿಮುಖರಾಗುವರು.

**ಅಹಮಪ್ಯವತಾರೇಷು ತ್ವಾಂ ಚ ರುದ್ರ ಮಹಾಬಲ**
**ತಾಮಸಾನಾಂ ಮೋಹನಾರ್ಥಂ ಪೂಜಯಾಮಿ ಯುಗೇ ಯುಗೇ ॥**
**ಮತಮೇತದವಷ್ಟಭ್ಯ ಪತಂತ್ಯೇವ ನ ಸಂಶಯಃ**

ಬಲಶಾಲಿಯಾದ ರುದ್ರ, ನಾನು ಕೂಡ ನನ್ನ ಅವತಾರ ರೂಪಗಳಲ್ಲಿ ತಾಮಸ ಜನರ ಮೋಹನಾರ್ಥವಾಗಿ ಪ್ರತಿಯೊಂದು ಯುಗದಲ್ಲಿಯೂ ನಿನ್ನನ್ನೇ ಪೂಜೆ ಮಾಡುತ್ತೇನೆ. ಆ ಎಲ್ಲ ತಾಮಸ ಶಾಸ್ತ್ರ ಪುರಾಣಗಳನ್ನು ನಂಬಿ ನೆಚ್ಚಿ ಆಶ್ರಯಿಸಿ ಆ ಎಲ್ಲ ದೈತ್ಯರು ಪತಿತರಾಗುತ್ತಾರೆ. ಇದರಲ್ಲಿ ಸಂದೇಹವಿಲ್ಲ.

**ಮಹಾದೇವ:-** ಸ್ವಾಮಿ, ನಿನ್ನ ಬದಲು ನಾನೇ ಸರ್ವೋತ್ತಮ. ಶಿವನೇ ಪರಾತ್ಪರ ವಸ್ತು ಎಂದು ಹೇಳಿ ತಾಮಸ ಶಾಸ್ತ್ರ ಪುರಾಣಗಳನ್ನು ನಾನು ರಚಿಸಿ ಪ್ರಚುರ ಪಡಿಸಿದರೆ ನನ್ನ ಸರ್ವನಾಶ ಖಂಡಿತ. ನಿನ್ನ ಆಜ್ಞೆಯನ್ನು ಕೂಡ ನಾನು ಉಲ್ಲಂಘಿಸಲಾರೆ. ಆದುದರಿಂದ ಈಗ ನಾನು ಏನು ಮಾಡಬೇಕು ನೀನೇ ತಿಳಿಸು.

**ಶ್ರೀಹರಿ:-** ನಿನಗೆ ಇದರಿಂದ ಯಾವ ಅಪಾಯವೂ ಇಲ್ಲ. ಯಾವ ಪಾಪವೂ ಬರುವದಿಲ್ಲ. ದೇವತೆಗಳ ಹಿತಕ್ಕಾಗಿ ಈ ನನ್ನ ಮಾತನ್ನು ನೀನು ಪಾಲಿಸು. ನಿನಗೆ ಇಂಥ ದುಃಶಾಸ್ತ್ರ ರಚನೆಯಿಂದ ಬರುವ ದೋಷವನ್ನು ತಪ್ಪಿಸಲಿಕ್ಕಾಗಿ ನಿನಗೆ ಶ್ರೀರಾಮಾಯ ನಮಃ ಎಂಬ ಮಂತ್ರವನ್ನು ಉಪದೇಶಿಸುತ್ತೇನೆ.

**ಹೃದಯೇ ಮಾಂ ಸಮಾಧಾಯ ಜಪ ಮಂತ್ರಂ ಮಮಾವ್ಯಯಂ ।**
**ಷಡಕ್ಷರಂ ಮಹಾಮಂತ್ರಂ ತಾರಕ ಬ್ರಹ್ಮ ಸಂಜ್ಞಿತಂ**

ಈ ರಾಮ ಷಡಕ್ಷರ ಮಂತ್ರವು ತಾರಕ ಬ್ರಹ್ಮಮಂತ್ರ. ಇದನ್ನು ನೀನು ಹೃದಯದಲ್ಲಿ ಇಟ್ಟು ಜಪವನ್ನು ಮಾಡು.

**ರಾಮಾಯ ನಮಃ ಇತ್ಯೇವಮುಚ್ಚಾರ್ಯ ಮಂತ್ರಮುತ್ತಮಂ ॥**
**ಮನಸೈವಾರ್ಚಯ ಹೃದಿ ಮಾಂ ನಾಥಂ ಪುರುಷೋತ್ತಮಂ ॥**

ಶ್ರೀರಾಮಾಯ ನಮಃ ಎಂದು ಆರು ಅಕ್ಷರಗಳ ಮಂತ್ರವನ್ನು ಜಪಿಸುತ್ತ ಮನಸ್ಸಿನಿಂದಲೇ ಪುರುಷೋತ್ತಮನೂ ಜಗದೊಡೆಯನೂ ಆದ ನನ್ನನ್ನು ನೀನು ಪೂಜಿಸು.

ವಿಷ್ಣುವಿನ ಈ ನಿರ್ದೇಶವನ್ನು ಕೂಡಲೇ ಪರಿಪಾಲಿಸಲು ಎಲ್ಲ ಇಂದ್ರಾದಿ ದೇವತೆಗಳು ನನ್ನನ್ನು ಪ್ರಾರ್ಥಿಸಿದರು. ಅದರಂತೆ ನಾನು ದೇವತೆಗಳ ಕಲ್ಯಾಣಕ್ಕಾಗಿ ತಾಮಸ ಪುರಾಣಗಳನ್ನೂ ಪಾಷಂಡ ಶಾಸ್ತ್ರಗಳನ್ನೂ ಶೈವ ಶಾಸ್ತ್ರಗಳನ್ನು ರಚಿಸಿದ್ದೇನೆ. ಗೌತಮ, ಕಾಣಾದ, ಕಪಿಲ, ಮೊದಲಾದ ವೇದಬಾಹ್ಯವಾದ ಶಾಸ್ತ್ರಗಳನ್ನು ನಾನೇ ಆ ಮುನಿಗಳಲ್ಲಿ ಪ್ರವೇಶ ಮಾಡಿ ಉಪದೇಶ ಮಾಡಿ ರಚಿಸಿ ಜಗತ್ತಿನ ತುಂಬ ಪ್ರಚಾರಪಡಿಸಿದೆ. ನಾನು ರಚಿಸಿದ ತಾಮಸ ಶಾಸ್ತ್ರಪುರಾಣಗಳು ಕೂಡಲೇ ದೈತ್ಯ ದಾನವರಿಗೆಲ್ಲ ಹಿಡಿಸಿದವು. ಅವರು

ಆ ಶಾಸ್ತ್ರಗಳನ್ನೇ ಮೆಚ್ಚಿಕೊಂಡು ಆ ಮತವನ್ನೇ ಅವಲಂಬಿಸಿ ವಿಷ್ಣುವಿನಿಂದ ವಿಮುಖರಾದರು. ಭಸ್ಮಾದಿ ಧಾರಣವನ್ನು ಮಾಡಿಕೊಂಡು ಆ ನನ್ನ ಶಾಸ್ತ್ರದಲ್ಲಿ ಹೇಳಿದಂತೆ ಮಾಂಸ ರಕ್ತ ಚಂದನಾದಿಗಳಿಂದ ನನ್ನ ಪೂಜೆಯನ್ನು ಮಾಡಿದರು. ನನ್ನಿಂದ ವರಗಳನ್ನು ಪಡೆದು ಮದೋದ್ಧತರಾಗಿ ವಿಷಯಾಸಕ್ತರಾದರು. ಕಾಮಕ್ರೋಧ ಮದಮೋಹಗಳು ಅವರಲ್ಲಿ ತುಂಬಿ ಕೊಂಡವು. ವಿಷಯ ಲಂಪಟರಾಗಿ ಧರ್ಮ ಭ್ರಷ್ಟರಾಗಿ ತಮ್ಮ ಸತ್ವವನ್ನೆಲ್ಲ ಕಳೆದುಕೊಂಡು ನಿರ್ವೀಯರಾದರು. ಆಗ ದೇವತೆಗಳು ಸುಲಭವಾಗಿ ಆ ಎಲ್ಲ ದೈತ್ಯರನ್ನು ಗೆದ್ದು ತಮ್ಮ ಕಳೆದುಹೋದ ಸಿರಿ ಸಾಮ್ರಾಜ್ಯ, ಅಧಿಕಾರ, ಸ್ಥಾನ, ಮಾನ, ಗೌರವಗಳನ್ನು ಮೊದಲಿನಂತೆ ಮತ್ತೆ ಪಡೆದರು.

ದೇವಿ, ಹೀಗೆ ವಿಷ್ಣುವಿನ ಆಜ್ಞೆಯನ್ನು ಆದರಿಸಿ ನಾನು ಮೈತುಂಬ ಬೂದಿ ಬಳಿದುಕೊಂಡು ರುಂಡ ಮಾಲೆಯನ್ನು ಕೊರಳಲ್ಲಿ ಹಾಕಿಕೊಂಡು ಕೈಯಲ್ಲಿ ಕಪಾಲವನ್ನು ಹಿಡಿದು ದೈತ್ಯರನ್ನು ಮೋಹಗೊಳಿಸುತ್ತಿದ್ದೇನೆ. ಹೃದಯದಲ್ಲಿ ಮಾತ್ರ ವಿಷ್ಣುವಿನ ಸಹಸ್ರನಾಮಕ್ಕೆ ಸಮಾನವಾದ ಪರಬ್ರಹ್ಮವಾಚಕವೂ ಆದ ತಾರಕ ಮಂತ್ರ ಎನಿಸಿದ ಆ ರಾಮ ಷಡಕ್ಷರ ಮಹಾ ಮಂತ್ರವನ್ನು ಯಾವಾಗಲೂ ಜಪಿಸುತ್ತ ಇರುತ್ತೇನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ನಮುಚಿ ಮುಂತಾದ ರಾಕ್ಷಸರ ಸಂಹಾರ ಪಾಷಂಡರ ಉತ್ಪತ್ತಿ ಎಂಬ ಎರಡುನೂರ ಹದಿನೇಳನೇಯ ಅಧ್ಯಾಯ ಮುಗಿದುದು*



## ಅಷ್ಟಾದಶ ಪುರಾಣ ಹಾಗೂ ಸಾತ್ವಿಕ ಪುರಾಣಗಳ ವರ್ಣನೆ

ಅಧ್ಯಾಯ - ೨೧೮

**ಪಾರ್ವತಿ:-** ಪತಿ ಪರಮೇಶ್ವರ, ಭಗವದ್ಭಕ್ತಿ ರಹಿತರಾದ ಆ ಬ್ರಾಹ್ಮಣರು ಹೇಳಿದ ತಾಮಸ ಶಾಸ್ತ್ರಗಳು ಯಾವವು? ಅವುಗಳನ್ನು ನನಗೆ ಕ್ರಮವಾಗಿ ಹೇಳು.

**ರುದ್ರ:-** ದೇವಿ, ನಿನ್ನ ಅಪೇಕ್ಷೆಯಂತೆ ಆ ತಾಮಸ ಶಾಸ್ತ್ರಗಳನ್ನು ಹೇಳುತ್ತೇನೆ ಕೇಳು. ಮೊಟ್ಟ ಮೊದಲು ನಾನೇ ಪಶುಪತಿ ಎಂಬ ಶೈವ ಶಾಸ್ತ್ರವನ್ನು ರಚಿಸಿದೆನು. ಅನಂತರ ನನ್ನಿಂದ ಅವಿಷ್ಟರಾದ ಗೌತಮಾದಿ ಋಷಿಗಳು ಮಾಡಿದ ತಾಮಸ ಶಾಸ್ತ್ರಗಳನ್ನು ಹೇಳುತ್ತೇನೆ ಕೇಳು. ಗೌತಮನು ನ್ಯಾಯಶಾಸ್ತ್ರವನ್ನೂ ಕಣಾದನು ವೈಶೇಷಿಕ ಶಾಸ್ತ್ರವನ್ನೂ ಕಪಿಲನು ಸಾಂಖ್ಯಶಾಸ್ತ್ರವನ್ನೂ ಬೃಹಸ್ಪತಿಯು ಚಾರ್ವಾಕವನ್ನೂ ಬುದ್ಧರೂಪಿಯಾದ ವಿಷ್ಣುವು ಬೌದ್ಧ ಮತವನ್ನೂ ರಚಿಸಿ ಜಗತ್ತಿಗೆ ಬೋಧನೆ ಮಾಡಿದರು.

**ದೈತ್ಯಾನಾಂ ನಾಶನಾರ್ಥಾಯ ವಿಷ್ಣುನಾಂ ಬುದ್ಧರೂಪಿಣಾ ।**
**ಬೌದ್ಧ ಶಾಸ್ತ್ರಂ ಮಹತ್ಪ್ರೋಕ್ತಂ ನಗ್ನ ನೀಲ ಪಟಾಲಿಕಂ ॥**

ದೈತ್ಯರ ನಾಶಕ್ಕಾಗಿ ಸಾಕ್ಷಾತ್ ವಿಷ್ಣುವು ಬುದ್ಧರೂಪ ತೆಗೆದುಕೊಂಡು ದಿಗಂಬರ, ನೀಲಾಂಬರ, ಶ್ವೇತಾಂಬರಾದಿ ಪ್ರಭೇದಗಳನ್ನು ಪ್ರಚೋದಿಸುವ ಬೌದ್ಧಶಾಸ್ತ್ರಗಳನ್ನು ನಿರ್ಮಿಸಿದ.

**ಮಾಯಾವಾದಮ ಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮುಚ್ಯತೆ ।**
**ಮಯ್ಯೈವ ಕಥಿತಂ ದೇವಿ ಕಲೌ ಬ್ರಾಹ್ಮಣ ರೂಪಿಣಾ ॥**

ಪ್ರಚ್ಛನ್ನ ಬೌದ್ಧ ಎಂದು ಹೇಳಲ್ಪಟ್ಟ ಮಯಾವಾದ ಎಂಬ ಅಸಚ್ಛಾಸ್ತ್ರವು ಪ್ರಚ್ಛನ್ನವಾದ ಬೌದ್ಧಮತವೇ. ಅದು ಕಲಿಯುಗದಲ್ಲಿ ಬ್ರಾಹ್ಮಣನಾದ ನನ್ನಿಂದಲೇ ಹೇಳಲ್ಪಡುತ್ತೆ.

**ಪರೇಶ ಜೀವಯೋರೈಕ್ಯಂ ಮಯಾತ್ರ ಪ್ರತಿಪಾದ್ಯತೇ ।**
**ಬ್ರಹ್ಮಣೋತ್ರ ಚರಂ ರೂಪಂ ನಿರ್ಗುಣಂ ವಕ್ಷ್ಯತೇ ಮಯಾ ॥**

ಈ ಮಾಯಾವಾದ ಶಾಸ್ತ್ರದಲ್ಲಿ ಸರ್ವಶ್ರೇಷ್ಠನಾದ ಪರಮಾತ್ಮನಿಗೂ ಜೀವಾತ್ಮನಿಗೂ ಐಕ್ಯವು ನನ್ನಿಂದ ಪ್ರತಿಪಾದಿಸಲ್ಪಡುತ್ತದೆ. ಬ್ರಹ್ಮನು ನಿರ್ಗುಣ ಎಂದು ನನ್ನಿಂದ ಹೇಳಲ್ಪಡುತ್ತದೆ.

**ಸರ್ವಸ್ಯ ಜಗತೋಽಪ್ಯತ್ರ ಮೋಹನಾರ್ಥಂ ಕಲೌ ಯುಗೇ ।**
**ವೇದಾರ್ಥವನ್ ಮಹಾಶಾಸ್ತ್ರಂ ಮಾಯಾವಾದ ಮವೈದಿಕಂ ।**
**ಮಯ್ಯೈವ ವಕ್ಷ್ಯತೇ ದೇವಿ ಜಗತಾಂ ನಾಶಕಾರಣಾತ್ ॥**

ಈ ಎಲ್ಲ ಜಗತ್ತಿಗೆ ಮೋಹನಾರ್ಥವಾಗಿ ಕಲಿಯುಗದಲ್ಲಿ ಅವೈದಿಕವಾದ ಮಾಯಾವಾದ ಮತವು ವೇದಾರ್ಥವನ್ನು ಬೋಧಿಸುವ ಮಹಾಶಾಸ್ತ್ರ ಎಂದು ನನ್ನಿಂದಲೇ ಬೋಧಿಸಲ್ಪಡುತ್ತದೆ.

ಇದರಂತೆ ಜೈಮಿನಿ, ಬೃಹಸ್ಪತಿ, ಕಪಿಲ ಮುಂತಾದ ಮುನಿಗಳು ಮಾಡಿದ ಶಾಸ್ತ್ರಗಳೆಲ್ಲವೂ ತಾಮಸ ಶಾಸ್ತ್ರ ಎಂದು ತಿಳಿದುಕೊ.

ವ್ಯಾಸರು ರಚಿಸಿದ ಹದಿನೆಂಟು ಪುರಾಣಗಳಲ್ಲಿ ಸಾತ್ವಿಕ ರಾಜಸ, ತಾಮಸ, ಎಂದು ಮೂರು ಪ್ರಕಾರಗಳಿರುತ್ತವೆ. ಆ ಹದಿನೆಂಟು ಪುರಾಣಗಳ ಹೆಸರನ್ನು ಹೇಳುತ್ತೇನೆ ಕೇಳು.

**ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ।**
**ತಥೈವ ನಾರದೀಯಂ ತು ಮಾರ್ಕಂಡೇಯಂ ಚ ಸಪ್ತಮಂ ।**
**ಆಗ್ನೇಯಮಷ್ಟಮಂ ಪ್ರೋಕ್ತಂ ಭವಿಷ್ಯಂ ನವಮಂ ತಥಾ ।**
**ದಶಮಂ ಬ್ರಹ್ಮ ವೈವರ್ತಂ ಲೈಂಗಮೇಕಾದಶಂ ಸ್ಮೃತಂ ।**
**ದ್ವಾದಶಂ ಚ ವರಾಹಂ ಚ ವಾಮನಂ ಚ ತ್ರಯೋದಶಂ ।**
**ಕೌರ್ಮಂ ಚತುರ್ದಶಂ ಪ್ರೋಕ್ತಂ ಮಾತ್ಸ್ಯಂ ಪಂಚದಶಂ ಸ್ಮೃತಂ ।**
**ಷೋಡಶಂ ಗಾರುಡಂ ಪ್ರೋಕ್ತಂ ಸ್ಕಾಂದಂ ಸಪ್ತದಶಂ ಸ್ಮೃತಂ ।**
**ಅಷ್ಟಾದಶಂ ತು ಬ್ರಹ್ಮಾಂಡಂ ಪುರಾಣಾನಿ ಯಥಾಕ್ರಮಮ್ ॥**

೧) ಬ್ರಹ್ಮಪುರಾಣ ೨) ಪದ್ಮಪುರಾಣ ೩) ವಿಷ್ಣು ಪುರಾಣ ೪) ಶಿವ ಪುರಾಣ ೫) ಭಾಗವತ ಪುರಾಣ ೬) ನಾರದ ಪುರಾಣ ೭) ಮಾರ್ಕಂಡೇಯ ಪುರಾಣ ೮) ಅಗ್ನಿ ಪುರಾಣ ೯) ಭವಿಷ್ಯ ಪುರಾಣ ೧೦) ಬ್ರಹ್ಮ ವೈವರ್ತ ಪುರಾಣ ೧೧) ಲಿಂಗ ಪುರಾಣ ೧೨) ವರಾಹ ಪುರಾಣ ೧೩) ವಾಮನ ಪುರಾಣ ೧೪) ಕೂರ್ಮ ಪುರಾಣ ೧೫) ಮತ್ಸ್ಯ ಪುರಾಣ ೧೬) ಗರುಡ ಪುರಾಣ ೧೭) ಸ್ಕಂದ ಪುರಾಣ ೧೮) ಬ್ರಹ್ಮಾಂಡ ಪುರಾಣ.

ಹೀಗೆ ಒಟ್ಟು ಹದಿನೆಂಟು ಪುರಾಣಗಳು ಇರುತ್ತವೆ ಇವುಗಳಲ್ಲಿ

**ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ।**
**ಆಗ್ನೇಯಂ ಚ ಷಡೇತಾನಿ ತಾಮಸಾನಿ ನಿಬೋಧ ಮೇ ॥**

ಮತ್ಸ್ಯಪುರಾಣ, ಕೂರ್ಮಪುರಾಣ, ಶಿವಪುರಾಣ ಸ್ಕಂದಪುರಾಣ ಹಾಗೂ ಅಗ್ನಿಪುರಾಣ ಇವು ಆರು ತಾಮಸ ಪುರಾಣಗಳು.

**ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯ ತಥೈವ ಚ ।**
**ಭವಿಷ್ಯಂ ವಾಮಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ ॥**

ಬ್ರಹ್ಮಾಂಡ ಪುರಾಣ, ಬ್ರಹ್ಮ ವೈವರ್ತಪುರಾಣ ಮತ್ತು ಮಾರ್ಕಂಡೇಯ ಪುರಾಣ, ಭವಿಷ್ಯ ಪುರಾಣ, ವಾಮನ ಪುರಾಣ, ಬ್ರಹ್ಮಪುರಾಣ, ಇವು ಆರು ರಾಜಸ ಪುರಾಣಗಳು.

**ವೈಷ್ಣವಂ ನಾರದೀಯಂ ಚ ತಥಾ ಭಗವತಂ ಶುಭಂ ।**
**ಗಾರುಡಂ ಚ ತಥಾಂ ಪಾದ್ಮಂ ವಾರಾಹಂ ಶುಭದರ್ಶನೇ ॥**
**ಸಾತ್ವಿಕಾನಿ ಪುರಾಣಾನಿ ವಿಜ್ಞೇಯಾನಿ ಶುಭಾನಿ ವೈ**

ವಿಷ್ಣುಪುರಾಣ, ನಾರದ ಪುರಾಣ ಹಾಗೂ ಮಂಗಳ ಪ್ರದವಾದ ಭಾಗವತ ಪುರಾಣ, ಗರುಡ ಪುರಾಣ ಮತ್ತು ಪದ್ಮ ಪುರಾಣ, ವರಾಹ ಪುರಾಣ ಇವು ಆರು ಪುರಾಣಗಳು ಸಾತ್ವಿಕ ಪುರಾಣಗಳು ಎಂದು ತಿಳಿದುಕೊಳ್ಳಬೇಕು.

**"ಸಾತ್ವಿಕಾ ಮೋಕ್ಷದಾಃ ಪ್ರೋಕ್ತಾ, ರಾಜಸಾಃ ಸ್ವರ್ಗದಾಃ ಶುಭಾಃ ।**
**ತಥೈವ ತಾಮಸಾ ದೇವಿ ನಿರಯಪ್ರಾಪ್ತಿ ಹೇತವೇಃ ॥**

ಸಾತ್ವಿಕ ಪುರಾಣಗಳು ಮೋಕ್ಷದಾಯಕ. ರಾಜಸ ಪುರಾಣಗಳು ಸ್ವರ್ಗಪ್ರದ. ತಾಮಸ ಪುರಾಣಗಳು ನರಕಕ್ಕೆ ತಳ್ಳಲು ಕಾರಣವಾಗುತ್ತವೆ.

ಇದರಂತೆ ಸ್ಮೃತಿಗಳು ಸಾತ್ವಿಕ, ರಾಜಸ, ತಾಮಸ, ಎಂದು ಮೂರು ತೆರನಾಗಿವೆ. ವಶಿಷ್ಠ ಸ್ಮೃತಿ, ಹಾರೀತ ಸ್ಮೃತಿ, ವ್ಯಾಸ ಸ್ಮೃತಿ, ಪಾರಾಶರ ಸ್ಮೃತಿ, ಭಾರದ್ವಾಜಸ್ಮೃತಿ, ಕಾಶ್ಯಪ ಸ್ಮೃತಿ, ಈ ಆರು ಸ್ಮೃತಿಗಳು ಮುಕ್ತಿಯನ್ನು ಕೊಡುವ ಸಾತ್ವಿಕ ಸ್ಮೃತಿಗಳು, ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಅತ್ರಿಸ್ಮೃತಿ, ದಕ್ಷಸ್ಮೃತಿ, ಕಾತ್ಯಾಯನ ಸ್ಮೃತಿ, ವಿಷ್ಣು ಸ್ಮೃತಿ, ಈ ಆರು ಸ್ಮೃತಿಗಳು ರಾಜಸ ಸ್ಮೃತಿಗಳಾಗಿದ್ದು, ಇವುಗಳ ಅಧ್ಯಯನ ಮಾಡುವವರಿಗೆ ಸ್ವರ್ಗರೂಪ ಫಲವನ್ನು ನೀಡುತ್ತವೆ ಗೌತಮ ಸ್ಮೃತಿ, ಬೃಹಸ್ಪತಿ ಸ್ಮೃತಿ, ಯಮ ಸ್ಮೃತಿ, ಶಂಖ ಸ್ಮೃತಿ ಶುಕ್ರಾಚಾರ್ಯ ಸ್ಮೃತಿ, ಇವು ತಾಮಸ ಸ್ಮೃತಿಗಳು. ಇವುಗಳ ಅಧ್ಯಯನ ಹಾಗೂ ಅನುಕರಣಗಳಿಂದ ಆಗುವ ಫಲ ನರಕ. ಈ ಎಲ್ಲ ಶಾಸ್ತ್ರ ಪುರಾಣ ಸ್ಮೃತಿಗಳಲ್ಲಿ ತಾಮಸ ಶಾಸ್ತ್ರಗಳನ್ನು ವರ್ಜಿಸಬೇಕು. ತಾಮಸ ಪುರಾಣಗಳನ್ನು ತ್ಯಜಿಸಬೇಕು ತಾಮಸ ಸ್ಮೃತಿಗಳನ್ನು ಅಧ್ಯಯನ ಮಾಡದೇ ಪರಿತ್ಯಜಿಸಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಅಷ್ಟಾದಶ ಪುರಾಣ ಹಾಗೂ ಸಾತ್ವಿಕ ಪುರಾಣಗಳ ವರ್ಣನೆ ಎಂಬ ಎರಡು ನೂರ ಹದಿನೆಂಟನೇಯ ಅಧ್ಯಾಯ ಮುಗಿದುದು*

—o—

**ಮಹಾದೇವ:-** ಪೂರ್ವ ಕಾಲದಲ್ಲಿ ಶ್ರೀಹರಿಯ ವೈಕುಂಠ ನಗರದ ಪಶ್ಚಿಮದ ದ್ವಾರಪಾಲಕರಾಗಿ ಜಯ ವಿಜಯರು ನಿಯುಕ್ತರಾಗಿದ್ದರು. ಆಗ ಒಂದು ದಿನ ಸನಕ, ಸನಾತನ, ಸನಂದನ, ಸನತ್ಕುಮಾರ ಎಂಬ ನಾಲ್ಕು ಯೋಗೀಶ್ವರರು ಶ್ರೀಹರಿಯ ದರ್ಶನಕ್ಕಾಗಿ ಅಲ್ಲಿ ಬಂದರು. ಭಗವಂತನನ್ನು ಕಾಣುವ ಉತ್ಸುಕತೆಯಿಂದ ವೈಕುಂಠದವರೆಗೆ ಧಾವಿಸಿ ಬರುವ ಆ ಮುನೀಶ್ವರರನ್ನು ಜಯ ವಿಜಯರು ತಡೆದು ನಿಲ್ಲಿಸಿದರು. ಭಗವದ್ದರ್ಶನಕ್ಕೆ ಅಡ್ಡಿ ಒಡ್ಡಿದ ಅವರನ್ನು ಕಂಡು ಸನಕಾದಿಗಳು 'ನೀವು ಭೂಮಂಡಲದಲ್ಲಿ ಜನಿಸಿರಿ'' ಎಂದು ಶಾಪ ಹಾಕಿದರು. ಆಗ ಸ್ವಯಂ ಶ್ರೀಹರಿಯು ಅಲ್ಲಿಗೆ ಬಂದು ತನ್ನ ದ್ವಾರಪಾಲಕರಾದ ಜಯವಿಜಯರಿಬ್ಬರನ್ನೂ ಛೀಮಾರಿ ಹಾಕಿ ನುಡಿದ.

**ಶ್ರೀಹರಿ:-** ದ್ವಾರಪಾಲಕರೇ, ಮಹಾತ್ಮರಾದ ಈ ಯೋಗೀಶ್ವರರನ್ನು ತಡೆದು ನೀವು ದೊಡ್ಡ ಅಪರಾಧವನ್ನು ಮಾಡಿದ್ದೀರಿ. ಅವರ ಮಾತು ಎಂದೂ ಸುಳ್ಳಾಗಲಾರದು. ಈಗ ನೀವು ಭೂಲೋಕದಲ್ಲಿ ಹುಟ್ಟಬೇಕು. ಏಳು ಜನ್ಮದಲ್ಲಿ ನನ್ನ ಭಕ್ತರಾಗಿ ನನ್ನ ದಾಸರಾಗಿ ಇರಲು ಬಯಸುವಿರಾ? ಅಥವಾ ವೈರಿಗಳಾಗಿ ಮೂರು ಜನ್ಮಗಳನ್ನು ಅನುಭವಿಸುವಿರಾ?

**ಜಯವಿಜಯ:-** ಸ್ವಾಮಿ, ನಾವು ನಿನ್ನನ್ನು ಬಹುಕಾಲ ಬಿಟ್ಟು ಇರಲಾರೆವು. ಏಳು ಜನ್ಮಗಳ ಕಾಲ ನಿನ್ನನ್ನು ಅಗಲಿ ಇರುವುದು ಅಶಕ್ಯ. ಆದುದರಿಂದ ನಿನ್ನ ವೈರ ಕಟ್ಟಿಕೊಂಡಾದರೂ ಮೂರು ಜನ್ಮಗಳಲ್ಲಿಯೇ ಈ ಶಾಪವನ್ನು ಮುಗಿಸಿ ಬಂದು ಬಿಡುತ್ತೇವೆ. ಆಧರೆ ಭಗವಂತ, ನಿನ್ನಲ್ಲಿ ನಮ್ಮದು ಒಂದೇ ಪ್ರಾರ್ಥನೆ. ಆ ಮೂರೂ ಜನ್ಮಗಳಲ್ಲಿಯೂ ನೀನೇ ನಮ್ಮನ್ನು ಕೊಂದು ಬೇಗನೇ ನಿನ್ನ ಪಾದಮೂಲಕ್ಕೆ ನಮ್ಮನ್ನು ಸೆಳೆದುಕೊ.''

ಸನಕಾದಿಗಳ ಶಾಪದಂತೆ ಬಲಿಷ್ಠರಾದ ಆ ಜಯವಿಜಯರು ಕಶ್ಯಪ ಹಾಗೂ ದಿತಿ ದಂಪತಿಗಳಲ್ಲಿ ಜನ್ಮ ತಳೆದರು. ಹಿರಣ್ಯಕಶ್ಯಪು ಜ್ಯೇಷ್ಠ, ಹಿರಣ್ಯಾಕ್ಷ ಕನಿಷ್ಠ. ಇಬ್ಬರೂ ಮಹಾಪರಾಕ್ರಮಿಗಳು. ಎಲ್ಲದರಲ್ಲಿಯೂ ಪ್ರಪಂಚಡರು. ಅಪಾರ ಸಾಮರ್ಥ್ಯ ಅವರಲ್ಲಿ ಔದ್ದತ್ಯವನ್ನು ತುಂಬಿ ಅವರಿಬ್ಬರೂ ಗರ್ವದ ಪರ್ವತವಾಗುವಂತೆ ಮಾಡಿ ಬಿಟ್ಟವು. ಅದರಲ್ಲಿ ಹಿರಣ್ಯಾಕ್ಷ ಬಾನುದ್ದ ಬೆಳೆದು ನಿಂತ. ಭೂತಾಕಾರ. ಮದೋನ್ಮತ್ತ. ಸಾವಿರ ತೋಳುಗಳಿಂದ ಬಯಲು ಬೆಟ್ಟ, ತೊರೆ, ಕೆರೆ, ಸಮುದ್ರ, ದ್ವೀಪ, ಎಲ್ಲ ಜೀವರಾಶಿ ಸಹಿತವಾದ ಅಖಂಡ ಭೂಮಂಡಲವನ್ನೇ ಕಿತ್ತಿದ. ತನ್ನ ತಲೆ ಕೊಟ್ಟು ಮೇಲಕ್ಕೆ ಎತ್ತಿದ. ಅನಂತರ ಅಗಾಧ ಸಾಗರದಲ್ಲಿ ಜಗಿದ. ಅದರ ಆಳಕ್ಕೆ ಇಳಿದ. ರಸಾತಳವನ್ನೇ ಹೊಕ್ಕ. ದೇವತೆಗಳೆಲ್ಲರೂ ಹೆದರಿ ಚೀರಿಕೊಂಡರು. ಭಯಭ್ರಾಂತರಾಗಿ ನಾರಾಯಣನಲ್ಲಿ ಮೊರೆ ಇಟ್ಟರು.

ಆಗ ಶಂಖ ಚಕ್ರ ಗದಾಧರನಾದ ಜನಾರ್ಧನನು ಹಂದಿಯ ರೂಪವನ್ನು ಹೊಂದಿದ. ಆದರೆ ವಿಚಿತ್ರವಾದ ವರಾಹ ವಿಶ್ವರೂಪಿ ವರಾಹ. ಅದರ ಮೂಲ ಎಲ್ಲಿದೆ ಎಂಬುದೇ ಗೊತ್ತಾಗಲಿಲ್ಲ. ಮಧ್ಯವು ಗೋಚರಿಸಲಿಲ್ಲ. ತುದಿಯಂತೂ ತಿಳಿಯಲೇ ಇಲ್ಲ.

ಮೈ ತುಂಬ ಕಣ್ಣು ಆ ವರಾಹಕ್ಕೆ. ನೋಡಿದಲ್ಲೆಲ್ಲ ಕೈ ಎಲ್ಲ ಕಡೆಗೂ ಕಾಲು. ಅತೀ ಉದ್ದವಾದ ಕೋರೆದಾಡೆ.

ಈ ಅದ್ಭುತವಾದ ವಿಚಿತ್ರ ವರಾಹ ರೂಪದಿಂದ ಆ ಹರಿಯು ತಾನು ಕೂಡ ಸಮುದ್ರದ ಆಳಕ್ಕೆ ಇಳಿದ. ಭೂಮಿಯನ್ನು ಕದ್ದು ತಂದ ಆ ದುಷ್ಟ ದೈತ್ಯನನ್ನು ತನ್ನ ಒಂದು ಕೋರೆ ದಾಡೆಯಿಂದ ಹೊಡೆದು ಪುಡಿಗಟ್ಟಿದ. ಹಂದಿಯ ರೂಪದಿಂದ

ಆ ದೈತ್ಯಾಧಮನನ್ನು ಕೊಂದು ಆ ಧರಣಿ ಮಂಡಲವನ್ನೆಲ್ಲ ತನ್ನ ಕೋರೆ ದಾಡೆಯ ಮೇಲೆ ಹೊತ್ತು ತಂದು ಮೊದಲಿನಂತೆ ಆದಿಶೇಷನ ಹೆಡೆಯ ಮೇಲೆ ಇರಿಸಿದ. ಆ ಆದಿಶೇಷನಿಗೆ ಆಧಾರವಾಗಿ ತಾನೇ ಹದಿನಾಲ್ಕು ಲೋಕಗಳ ಕೆಳಗೆ ಕೂರ್ಮರೂಪದಿಂದ ನಿಂತು ತನ್ನ ಬೆನ್ನ ಮೇಲೆ ಆ ಆದಿಶೇಷನನ್ನು ಭೂಮಂಡಲವನ್ನೂ ಸ್ಥಿರವಾಗಿ ಹೊತ್ತು ನಿಂತ.

ಅದನ್ನು ನೋಡಿ ದೇವತೆಗಳಿಗೆಲ್ಲ ಹಿಗ್ಗು. ಋಷಿಮುನಿಗಳಿಗೆಲ್ಲ ಹರ್ಷ. ಭಕ್ತಿ ನಮ್ರರಾಗಿ ಅವರೆಲ್ಲರೂ ಆ ವರಾಹ ರೂಪಿಯಾದ ಆ ವಿಷ್ಣುವನ್ನು ಸ್ತೋತ್ರ ಮಾಡಿದರು.

ದೇವತೆಗಳು ಮಾಡಿದ ವರಾಹ ಸ್ತೋತ್ರ

**"ನಮೋ ಯಜ್ಞ ವರಾಹಾಯ ಕೃಷ್ಣಾಯ ಶತಬಾಹವೇ ।**
**ನಮಸ್ತೇ ವೇದವೇದಾಂಗ ತನವೇ ವಿಶ್ವರೂಪಿಣೇ ॥**

ನೂರಾರು ತೋಳುಗಳುಳ್ಳ, ಯಜ್ಞ ವರಾಹರೂಪಿಯಾದ ಶ್ರೀಕೃಷ್ಣನಿಗೆ ನಮ್ಮ ನಮಸ್ಕಾರ. ನಾಲ್ಕು ವೇದಗಳು, ಆರು ವೇದಾಂಗಗಳು ದೇಹವಾಗಿ ಉಳ್ಳ ವಿಶ್ವರೂಪಿಗೆ ವಂದನೆ.

**ಭೂತಾತ್ಮನೇ ನಮಸ್ತುಭ್ಯಮ್ ಋಗ್ವೇದ ವಪುಷೇ ತಥಾ ।**
**ಸುರಾತ್ಮನೇ ನಮಸ್ತುಭ್ಯಂ ಸಾಮವೇದಾಯ ತೇ ನಮಃ ॥**

ಎಲ್ಲ ಪ್ರಾಣಿಗಳಿಗೂ ಈ ಚರಾಚರ ಪ್ರಪಂಚಕ್ಕೂ ಸ್ವಾಮಿಯಾದ, ಋಗ್ವೇದವೇ ದೇಹವಾಗಿವುಳ್ಳ ನಿನಗೆ ನಮಸ್ಕಾರ. ಎಲ್ಲ ದೇವತೆಗಳಿಗೂ ಸ್ವಾಮಿಯಾದ, ಸಾಮವೇದ ಸ್ವರೂಪಿಯೇ ನಿನಗೆ ನಮೋ ನಮಃ.

**ಓಂಕಾರಾಯ ನಮಸ್ತುಭ್ಯಂ ಯಜುರ್ವೇದ ಸ್ವರೂಪಿಣೇ ।**
**ಅಥರ್ವಣ ಸ್ವರೂಪಾಯ ಚತುರ್ವೇದ ಮಯಾಯ ಚ ॥**

ಓಂಕಾರಾರ್ಥವಾದ ಸರ್ವಗುಣಪೂರ್ಣತೆಯಿಂದ ಒಡಗೂಡಿದ ಯಜುರ್ವೇದ ಸ್ವರೂಪಿಗೆ ನಮಸ್ಕಾರ. ಅಥರ್ವಣ ಸ್ವರೂಪಿಯೂ ಆದ ನೀನು ಚತುರ್ವೇದಮಯನೇ ಆಗಿರುವೆ.

**ನಮಸ್ತೇ ವೇದವೇದಾಂಗ ಸಾಂಗೋಪಾಂಗಾಯ ತೇ ನಮಃ ।**
**ನಮೋ ಭಗವತೇ ತುಭ್ಯಂ ವರಾಹವಪುಷೇ ಸದಾ ॥**

ನಾಕು ವೇದ ಆರು ಶಾಸ್ತ್ರ ವೇದಾಂತ ಎಲ್ಲವೂ ಮುಖ್ಯ ವೃತ್ತಿಯಿಂದ ನಿನ್ನನ್ನೇ ಪ್ರತಿಪಾದಿಸುವದರಿಂದ ನಿನ್ನಿಂದಲೇ ವ್ಯಕ್ತವಾದುದರಿಂದ, ನಿನ್ನಿಂದಲೇ ರಕ್ಷಿಸಲ್ಪಡುವದರಿಂದ ನೀನು ಚತುರ್ವೇದಮಯ ಎಂದು ಕರೆಯಲ್ಪಡುವೆ.

**ನಮೋ ಭೂರ್ಭುವಸ್ವಃಪತಯೇ ಮಹ ಈಶಾಯ ತೇ ನಮಃ ।**
**ಜನಸ್ತ ತಪಃ ಪತಯೇ ಸರ್ವ ಲೋಕೇಶ್ವರಾಯ ತೇ ॥**

ವರಾಹರೂಪಿಯಾದ ನೀನು ಭೂಲೋಕ, ಭುವರ್ಲೋಕ, ಸ್ವರ್‌ಲೋಕ ಮಹೋಲೋಕ, ಜನಲೋಕ, ತಪೋಲೋಕ, ಸತ್ಯಲೋಕ ಮುಂತಾದ ಎಲ್ಲ ಹದಿನಾಕು ಲೋಕಗಳಿಗೂ ಒಡೆಯನಾಗಿ ಇರುವೆ. ಇಂಥ ನಿನಗೆ ನಮ್ಮ ನಮಸ್ಕಾರ.

**ವಷಟ್ ಕಾರಾತ್ಮನೇ ತುಭ್ಯಂ ಯಜ್ಞರೂಪಾಯ ತೇ ನಮಃ ।**
**ಗೋವಿಂದಾಯ ನಮಸ್ತುಭ್ಯ-ಮನಾದಿನಿಧನಾಯ ಚ ॥**

ಯಜ್ಞದ ದ್ರವ್ಯವೆಲ್ಲವೂ ನಿನ್ನ ವರಾಹ ಶರೀರದಿಂದಲೇ ಉತ್ಪನ್ನವಾಗಿದ್ದು ಎಲ್ಲ ಯಜ್ಞಗಳೂ ನಿನ್ನನ್ನು ಉದ್ದೇಶಿಸಿ ಮಾಡಲ್ಪಡುತ್ತವೆ. ಯಜ್ಞ ರಕ್ಷಕನೂ ನೀನೇ ಆಗಿರುವೆ. ಯಜಮಾನ, ಋತ್ವಿಜ, ಪುರೋಹಿತ, ಯಜ್ಞಾಗ್ನಿ, ಯಜ್ಞಮಂತ್ರ, ಯಜ್ಞಸಾಮಗ್ರಿ ಎಲ್ಲದರಲ್ಲೂ ನೀನೇ ಇದ್ದು ಯಜ್ಞಕಾರ್ಯವನ್ನು ಮಾಡಿಸುವದರಿಂದ ನೀನು ಯಜ್ಞ ರೂಪವೇ ಆಗಿರುವೆ.

**ನಮಸ್ತೇ ಚಿದಚಿದ್ ವಸ್ತು ವಿಶಿಷ್ಟೈಕ ಸ್ವರೂಪಿಣೇ ।**
**ಶ್ರೀ ಭೂ ನೀಲಾದಿ ಪತಯೇ ಜಗತ್‌ಪಿತ್ರೇ ನಮೋ ನಮಃ ॥**

ಓಂಕಾರಾತ್ಮನೂ ವಷಟ್ಕಾರಾತ್ಮನೂ ಜನನಮರಣಾದಿ ರಹಿತನೂ ವೇದ ಪ್ರತಿಪಾದ್ಯನೂ ಆದ ನಿನಗೆ ಯಜ್ಞ ವರಾಹ ಎಂಬ ಹೆಸರು ಅನ್ವರ್ಥಕವಾಗಿ ಇರುತ್ತದೆ. ವೇದಗಳೆಂಬ ಗೋ ಗುಣಗಳನ್ನು ರಕ್ಷಿಸಿ ಅವುಗಳ ಪರಮಾರ್ಥವಾಗಿ ಕಂಗೊಳುಸುವ ಗೋವಿಂದ ಎಂಬ ಹೆಸರು ಸಾರ್ಥಕವಾಗಿದೆ. ಈ ಚಿದಚಿದಾತ್ಮಕವಾದ ಪ್ರಪಂಚದಲ್ಲಿ ಎಲ್ಲರಿಗಿಂತ ವಿಲಕ್ಷಣನಾಗಿ ವಿಶಿಷ್ಟನಾಗಿ ಸರ್ವಪ್ರೇರಕನಾಗಿ ಸರ್ವ ನಿಯಾಮಕನಾಗಿ ಸರ್ವಸ್ವರೂಪಿ ಎನಿಸುವ ಶ್ರೀ, ಭೂ, ನೀಲಾ, ರೂಪಿಣಿಯಾದ ಲಕ್ಷ್ಮಿದೇವಿಯ ಪತಿಯಾದ, ಜಗತ್ತಿಗೆಲ್ಲ ತಂದೆಯಾದ ವರಾಹ ಸ್ವಾಮಿಯೇ ನಿಮಗೆ ನಮ್ಮ ನಮೋ ನಮಃ

ಹೀಗೆ ಎಲ್ಲ ದೇವತೆಗಳೂ ಬಗೆಬಗೆಯ ಸ್ತೋತ್ರಗಳಿಂದ ಆ ಭಗವಂತನನ್ನು ಸ್ತುತಿಸಿ ಗಂಧಪುಷ್ಪಾದಿಗಳಿಂದ ಪೂಜೆ ಮಾಡಿದರು. ಗಂಧರ್ವರು ಹಾಡಿದರು. ಅಪ್ಸರೆಯರು ಲಾಸ್ಯ ಮಾಡಿದರು. ಮಹರ್ಷಿಗಳು ಪ್ರಶಂಸೆಗೈದರು. ಅನಂತರ ಅಲ್ಲಿಯೇ ಆ ಅನಂತನು ಅಂತರ್ಧಾನವನ್ನು ಹೊಂದಿದ. ದೇವತೆಗಳು ಮಾಡಿದ ಈ ವರಾಹ ಸ್ತೋತ್ರವನ್ನು ಪ್ರಾತಃ ಕಾಲದಲ್ಲಿ ಎದ್ದು ಪಠಿಸುವ ಮನುಷ್ಯನು ತನ್ನ ಮನೋಭೀಷ್ಟವಾದ ವಸ್ತುಗಳನ್ನೆಲ್ಲ ಪಡೆಯುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ವರಾಹ ಅವತಾರ ಎಂಬ ಎರಡುನೂರ ಹತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ನರಸಿಂಹ ಅವತಾರ — ಅಧ್ಯಾಯ - ೨೨೦

**ಮಹಾದೇವ:-** ತನ್ನ ತಮ್ಮನು ಹರಿಯಿಂದ ಹತನಾದದ್ದು ಕೇಳಿ ಸಿಟ್ಟಿನಿಂದ ಉರಿದೆದ್ದ ಅಣ್ಣ ಹಿರಣ್ಯಕಶ್ಯಪು ಮೇರು ಪರ್ವತಕ್ಕೆ ಸಾರಿದ. ಅಲ್ಲಿ ನಿಂತು ದಾರುಣವಾದ ತಪಸ್ಸನ್ನು ಆಚರಿಸಿದ. ಹಿರಣ್ಯಕಶ್ಯಪು ಅಸಾಧಾರಣ ವ್ಯಕ್ತಿ. ಅವನದು ಎಲ್ಲವೂ ಲೋಕವಿಲಕ್ಷಣ. ಅದರಂತೆ ಅವನ ತಪಸ್ಸು ಕೂಡ ಲೋಕೋತ್ತರ. ಸಾವಿರ ವರ್ಷ ತಪಸ್ಸು. ಅದೂ ದೇವಮಾನದಿಂದ. ತಪೋಯೋಗದಲ್ಲಿ ಇದ್ದಾಗ ಆ ದೈತ್ಯ ತಿನ್ನುತ್ತಿದ್ದುದು ಗಾಳಿ ಮಾತ್ರ. ಓಂ ನಮಃ ಶಿವಾಯ ಎಂಬ ಪಂಚಾಕ್ಷರಿ ಮಂತ್ರವನ್ನು ಉಚ್ಚರಿಸುತ್ತ ನನ್ನನ್ನು ಉದ್ದೇಶಿಸಿ ಸಾಗಿತು ಅವನ ಆಶ್ಚರ್ಯಕರವಾದ ತಪಶ್ಚರ್ಯೆ. ಅವನ ಈ ಉಗ್ರ ಹಾಗೂ ದೀರ್ಘವಾದ ದಾರುಣ ತಪಸ್ಸಿನಿಂದ ನಾನು ಹೃಷ್ಟಾಕೃಷ್ಟನಾಗಿ ಅಲ್ಲಿಗೆ ಧಾವಿಸಿದೆ. 'ಮನಬಂದ ವರ ಕೇಳು'

ಎಂದು ಅನುಗ್ರಹದ ಧಾರೆ ಎರೆಯುತ್ತಲೇ ಹೇಳಿದೆ. ಪರಮೇಶ್ವರ ಪ್ರಸನ್ನನಾದುದನ್ನು ಕಂಡು ತೃಪ್ತಿಯಿಂದ ಹಿಗ್ಗಿದ ಹಿರಣ್ಯಕಶ್ಯಿಪು ನುಡಿದ.

**ಹಿರಣ್ಯಕಶಿಪು:-** ಪ್ರಭು, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ, ನಾನು ದೇವತೆಗಳಿಂದ ಸಾಯಬಾರದು. ಮಾನವರಿಂದ ಸಾಯಬಾರದು, ಗಂಧರ್ವರಿಂದ ರಾಕ್ಷಸರಿಂದ, ಪಶು ಪಕ್ಷಿ ಮೃಗಗಳಿಂದ, ಯಕ್ಷ, ವಿದ್ಯಾಧರ, ಕಿನ್ನರ, ಪಶುಪಕ್ಷಿ, ಮೃಗ, ಸಿದ್ಧ, ಯಾರಿಂದಲೂ ಸಾಯಬಾರದು. ರೋಗಗಳಿಂದ ಸಾಯಬಾರದು. ಆಯುಧದಿಂದ ಸಾಯಬಾರದು. ಯಾವ ಋಷಿ ಮುಖ್ಯರಿಂದಲೂ ಸಾಯಬಾರದು. ಇಂಥ ಅವಧ್ಯತ್ವ ವರವನ್ನು ನನಗೆ ಕರುಣಿಸು.

**ಮಹಾದೇವ:-** ಹಿರಣ್ಯಕಶ್ಯಪು, ನಿನ್ನ ಅಪೇಕ್ಷೆಯಂತೆ ಆಗಲಿ ಎಂದು ನಾನು ವರವಿತ್ತು ಹರಸಿದೆ. ಮೊದಲೇ ಬಲಿಷ್ಠ. ಈಗಂತೂ ನನ್ನಿಂದ ಅವನಿಗೆ ಅವಧ್ಯತ್ವ ವರ. ಆದರಿಂದ ಮತ್ತಿಷ್ಟು ಗರ್ವಿಷ್ಠನಾದ, ಅಷ್ಟೇ ದೃಢಿಷ್ಠನೂ ಬಲಿಷ್ಠನೂ ಆದ. ಮೊಟ್ಟಮೊದಲು ಅವನು ಲಗ್ಗೆ ಇಟ್ಟದುದು ಸ್ವರ್ಗಕ್ಕೆ. ಮಹೇಂದ್ರನನ್ನೇ ಗೆದ್ದ. ಉಳಿದೆಲ್ಲ ದೇವತೆಗಳ ಕೊರಳಿಗೂ ಸೋಲಿನ ಸರಮಾಲೆ ತೊಡಿಸಿದ. ಯಜ್ಞ ಭಾಗಗಳನ್ನೆಲ್ಲ ತಾನೇ ಕಿತ್ತುಕೊಂಡ. ಸೋತು ಸುಣ್ಣಾಗಿ ಸತ್ತು ಸುಣ್ಣಾಗಿ ಕ್ಷುಣ್ಣ ವಿಷಣ್ಣರಾದ ದೇವತೆಗಳನ್ನು ಕೇಳುವವರೇ ಇರಲಿಲ್ಲ. ಸ್ವರ್ಗದ ಗಂಧರ್ವರೆಲ್ಲರೂ ಹಿರಣ್ಯಕಶ್ಯಪುವಿನ ಕಿಂಕರರೇ ಆದರು. ಯಕ್ಷ, ನಾಗ, ಸಿದ್ಧ, ಸಾಧ್ಯ, ಎಲ್ಲರೂ ಅವನ ದಾಸಾನುದಾಸರಾಗಿ ಆ ರಾಕ್ಷಸೇಶ್ವರನ ಕೈಂಕರ್ಯಕ್ಕಾಗಿ ಕೈ ಕಟ್ಟಿಕೊಂಡು ನಿಂತಾಗ, ಉಳಿದ ದೇವತೆಗಳ ಕಷ್ಟಕೋಟಲೆಗಳನ್ನು ಕೇಳುವವರೇ ಇರಲಿಲ್ಲ.

ಆ ದೈತ್ಯಸಾರ್ವಭೌಮ ಉತ್ತಾನಪಾದ ರಾಜನ ಮಗಳಾದ ಕಲ್ಯಾಣಿ ಎಂಬ ಕನ್ಯೆಯನ್ನು ವಿಧಿಪೂರ್ವಕವಾಗಿ ಮದುವೆಯಾದ. ಆ ದೈತ್ಯ ದಂಪತಿಗಳಿಂದ ಹುಟ್ಟಿದ ಮಹಾತೇಜವೇ ಪ್ರಲ್ಹಾದ. ಅವನು ತಾಯಿಯ ಗರ್ಭದಲ್ಲಿದ್ದಾಗಲೇ ಹರಿಯಲ್ಲಿ ಅನುರಕ್ತ. ಆಜನ್ಮ ಹರಿಭಕ್ತ. ಅವನಿಗೆ ಹಗಲಿರುಳೂ ಹರಿಯದೇ ಧ್ಯಾನ. ಹರಿಯ ಹೊರತು ಬೇರಾವ ದೇವರನ್ನೂ ಅವನು ಅರಿಯ. ಯಾರನ್ನೂ ತನ್ನ ದೇವರೆಂದು ಕರೆಯ. ಹಿರಣ್ಯಕಶ್ಯಪು ಸಕಾಲದಲ್ಲಿ ತನ್ನ ಮಗನಿಗೆ ಮುಂಜಿವೆ ಮಾಡಿದ. ಗುರುಗಳ ಮನೆಯಲ್ಲಿ ಇದ್ದು ಎಲ್ಲ ವೇದಗಳನ್ನು ಕಲಿತ. ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿದ ಚಿಕ್ಕಬಾಲಕ ಪ್ರಲ್ಹಾದ.

ಒಂದು ದಿನ ಪ್ರಲ್ಹಾದ ತನ್ನ ಗುರುಗಳ ಸಂಗಡ ತಂದೆಯ ಬಳಿ ಬಂದು ವಿನಯದಿಂದ ವಂದಿಸಿದ. ಅವನನ್ನು ಹಿರಣ್ಯಕಶ್ಯಪು ತನ್ನ ತೋಳೊಳಗೆ ತಬ್ಬಿಕೊಂಡು ತೊಡೆಯ ಮೇಲೆ ಕೂರಿಸಿಕೊಂಡು ಕೇಳಿದ.

**ಹಿರಣ್ಯಕಶ್ಯಿಪು:-** ಪ್ರಲ್ಹಾದ, ನೀನು ಗುರುಕುಲಕ್ಕೆ ಹೋಗಿ ಬಹಳ ದಿನಗಳಾದವು. ಇಷ್ಟು ದಿನ ಗುರುಕುಲ ವಾಸ ಮಾಡಿ ನೀನು ಕಲಿತದ್ದು ಏನು? ಅದನ್ನು ಹೇಳು.

**ಪ್ರಲ್ಹಾದ:-** ಅಪ್ಪಾ, ಎಲ್ಲ ಉಪನಿಷತ್ತುಗಳ ಮುಖ್ಯಾರ್ಥ ಎಂದರೆ ಸಾಕ್ಷಾತ್ ಜಗದೀಶ್ವರ. ಅಂಥ ಸರ್ವಾಂತರ್ಯಾಮಿಯಾದ ಮಹಾವಿಷ್ಣುವನ್ನು ನಮಸ್ಕರಿಸಿ ನಾನು ಕಲಿತದ್ದನ್ನು ನಿನಗೆ ಹೇಳುತ್ತೇನೆ.

ಪ್ರಾರಂಭದಲ್ಲಿಯೇ ಈ ವಿಷ್ಣುವಿನ ಹೊಗಳಿಕೆ ಕೇಳಿ ಹಿರಣ್ಯಕಶ್ಯಪುವಿಗೆ ತಡೆಯಲಾರದಷ್ಟು ಕೋಪ. ಅಲ್ಲಿಯೇ ಪಕ್ಕದಲ್ಲಿ ನಿಂತ ಪ್ರಲ್ಹಾದನಿಗೆ ಕಲಿಸಿದ ಗುರುವನ್ನು ಕುರಿತು ಮಾತನಾಡಿದ.

**ಹಿರಣ್ಯಕಶ್ಯಪು:-** ಎಲೋ ದುರ್ಬುದ್ಧಿಯೇ. ನನ್ನ ಮಗನಿಗೆ ಈ ಹರಿಯ ಸ್ತೋತ್ರವನ್ನು ಏಕೆ ಕಲಿಸಿದೆ? ಇದೆಲ್ಲವೂ ಬ್ರಾಹ್ಮಣರಿಗೆ ಉಚಿತವಾಗಬಹುದು. ನನ್ನಂಥ

ವೀರರಿಗೆ ಉಚಿತವಾಗುವುದಿಲ್ಲ. ಬ್ರಾಹ್ಮಣರಿಗೆ ಮಾತ್ರ ಇಂಥ ಮೂರ್ಖತನದ ಸ್ತುತಿ ಸ್ತೋತ್ರಗಳು ಒಗ್ಗಬಹುದು. ಈ ಹರಿಯ ಪ್ರಶಂಸೆಯನ್ನು ನನಗೆ ಕೇಳಲಿಕ್ಕೂ ಆಗುವುದಿಲ್ಲ. ಆ ಹರಿ ನನ್ನ ವೈರಿ. ನನ್ನ ಎದುರು ಆ ಹರಿಯ ಬಣ್ಣನೆಯನ್ನು ನನ್ನ ಕೂಸು ಮಾಡಿದ್ದು ನಿನ್ನದೇ ಕಾರಸ್ಥಾನ. ಇಲ್ಲದಿದ್ದರೆ ಆ ಎಳೆ ಮಗುವಿಗೆ ಏನು ಗೊತ್ತು ಹರಿಯನ್ನು ಹೊಗಳಬೇಕು ಎಂದು?

ಹೀಗೆ ಹೇಳಿ ಸಿಟ್ಟಿನಿಂದ ಬೆಂಕಿಯ ಬೆಟ್ಟದಂತೆ ಆದ ಆ ದೈತ್ಯ ಸಾಮ್ರಾಟನು ತನ್ನ ಪಕ್ಕದಲ್ಲಿಯೇ ಇದ್ದ ಓರ್ವ ರಾಕ್ಷಸನಿಗೆ ಗುರವಾದ ಶುಕ್ರಾಚಾರ್ಯರನ್ನು ಬಂಧಿಸಲು ಹೇಳಿದ. ಕೂಡಲೇ ಆ ರಾಕ್ಷಸ, ಶುಕ್ರರನ್ನು ಬಂಧಿಸಿ ಬೇಡಿಬಿಗಿದ. ಬ್ರಾಹ್ಮಣ ಪ್ರಿಯನಾದ ಪ್ರಲ್ಹಾದ ತನ್ನ ಸಲುವಾಗಿ ತನ್ನ ಗುರುವಿನ ಕೈಗೆ ಕೋಳಗಳನ್ನು ತೋಡಿಸುತ್ತಿರುವುದನ್ನು ನೋಡಿ ತಂದೆಯನ್ನು ಕುರಿತು ಮಾತನಾಡಿದ.

**ಪ್ರಲ್ಹಾದ:-** ತಾತ, ಇದೀಗ ನಾನು ನುಡಿದ ಮಾತನ್ನು ನನಗೆ ಗುರು ಕಲಿಸಿದ್ದಲ್ಲ. ಇದನ್ನೆಲ್ಲ ನನಗೆ ಕಲಿಸಿಕೊಟ್ಟವ ಸಾಕ್ಷಾತ್ ಶ್ರೀಹರಿಯೆ. ಹರಿಯ ಹೊರತು ನನಗೆ ಬೇರೆ ಗುರು ಇಲ್ಲ. ಮತ್ತೊಬ್ಬ ಹಿರಿಯನೂ ಇಲ್ಲ. ನನಗೆ ಕೇಳುವವ, ಎಲ್ಲವನ್ನೂ ನೋಡುವವ, ಮಾಡುವವ, ಸರ್ವಾಂತರ್ಯಾಮಿಯಾದ ಶ್ರೀಹರಿಯೇ. ನಿರಪರಾಧಿಯಾದ ಈ ಗುರುಬ್ರಾಹ್ಮಣನನ್ನು ಬಿಟ್ಟುಬಿಡು.

ಮಗನ ಮಾತನ್ನು ಕೇಳಿ ಹಿರಣ್ಯಕಶ್ಯಪು ಗುರುವಿನ ಕೈಗೆ ತೊಡಿಸಿದ ಕೋಳಗಳನ್ನು ಬಿಡಿಸಿದ ಮತ್ತು ತನ್ನ ಮೆಚ್ಚಿನ ಮಗ ಪ್ರಲ್ಹಾದನನ್ನು ಕುರಿತು ನುಡಿದ.

**ಹಿರಣ್ಯಕಶ್ಯಪು:-** ಮಗು ! ಆ ಶುಕ್ರ ಬ್ರಾಹ್ಮಣನ ಹುಸಿ ಮಾತುಗಳಿಂದ ನೀನೇಕೆ ಭ್ರಾಂತಿಷ್ಟನಂತೆ ವರ್ತಿಸುತ್ತಿರುವೆ? ಯಾರು ಆತ ವಿಷ್ಣು ಎಂದರೆ? ಅವನಿಗೇನಾದರೂ ಆಕಾರ ಉಂಟೇ? ಇದ್ದರಷ್ಟೇ ಆಕಾರ ! ಅವನು ಇರುವದಾದರೂ ಎಲ್ಲಿ? ಜಗತ್ತಿನಲ್ಲಿ ನಾನೇ ದೇವರು. ನಾನೇ ಈಶ್ವರ. ಮೂರು ಲೋಕಗಳಿಗೆ ಒಡೆಯನಾದ ನನ್ನ ಹೊರತು ಬೇರೆ ದೇವರೇ ಇಲ್ಲ. ಇದ್ದರೂ ನನ್ನ ಎದುರು ನಿಲ್ಲಲಾರ. ಆದುದರಿಂದ ನನ್ನನ್ನೇ ಪೂಜಿಸು. ಆ ಹರಿ ನಮ್ಮ ಕುಲ ವೈರಿ. ಅವನು ಇದ್ದರೂ ಯಾರ ಕೈಗೂ ಸಿಕ್ಕಲಾರ. ಯಾರನ್ನಾದರೂ ಆರಾಧಿಸಲೇ ಬೇಕೆಂದು ನಿನ್ನ ಹಟವೇ ! ಹಾಗಾದರೆ ಶಂಕರನನ್ನು ಆರಾಧಿಸು. ಆ ಶಂಕರ ಲೋಕಕ್ಕೆಲ್ಲ ಗುರು. ರಕ್ಕಸರಿಗೆ ಪ್ರಭು. ಅಮರಗಣಕ್ಕೂ ಅವನೇ ಅಧ್ಯಕ್ಷ. ಅವನನ್ನು ಪೂಜಿಸಿದರೆ ಬಯಸಿದ ಐಶ್ವರ್ಯ ದೊರಕಲಿಕ್ಕೆ ಉಂಟು. ಅಡ್ಡ ಭಸ್ಮ ಹಚ್ಚಿದ ದೈತ್ಯದಾನವರಿಂದ ಪೂಜಿತನಾದ ಆ ಮಹಾದೇವನನ್ನು ಪಾಶುಪತಶೈವಾಗಮಗಳಲ್ಲಿ ಹೇಳಿದ ಪದ್ಧತಿಯಿಂದ ಅರ್ಚಿಸು ಮೆಚ್ಚಿಸು.

**ಪುರೋಹಿತರು:-** ಪ್ರಲ್ಹಾದ, ನಿಮ್ಮ ತಂದೆ ಹೇಳಿದ್ದೇ ಸರಿ. ಅವರ ಮಾತನ್ನು ನೀನು ನಡೆಸು. ಹರಿಯನ್ನು ಬಿಡು. ಹರನನ್ನೇ ಪೂಜಿಸು. ಹರನಿಗಿಂತ ಹಿರಿಯ ದೈವವಿಲ್ಲ. ಶಿವ ಬೇಡಿದ್ದನ್ನೆಲ್ಲ ಕೊಡುವ ಕರುಣೆಯ ಕೈವಾರಿ. ನಿನ್ನ ತಂದೆ ಇಂಥ ಸ್ಥಾನ ಮಾನವನ್ನು ಹೊಂದಿ ಜಗತ್ತಿಗೆಲ್ಲ ಪ್ರಭು ಆದದ್ದು ಆ ಶಂಕರನ ದಯೆ.

**ಪ್ರಲ್ಹಾದ:-** ಆ ಭಗವಂತನ ಮಾಯೆ ಅಗಾಧ. ಅಷ್ಟೇ ಅದ್ಭುತ. ನಿಮ್ಮಂಥ ವೇದಾಂತ ವಿದ್ವಾಂಸರೂ ಕೂಡ ಆ ಭಗವನ್ಮಾಯೆಯಿಂದ ಮೋಹಿತರಾಗಿ ಬಿಟ್ಟಿದ್ದೀರಿ. ಲೋಕ

ಪೂಜ್ಯರಾದ ಬ್ರಾಹ್ಮಣರೂ ಕೂಡ ಮತಿಗೇಡಿಗಳಂತೆ ಮಾತನಾಡಬೇಕಾದರೆ ಆ ವಿಷ್ಣುಮಾಯೆ ಎಷ್ಟು ವಿಚಿತ್ರ ಇರಬೇಡ ! ವೇದಶಾಸ್ತ್ರ ಓದಿದ ನಿಮ್ಮೆಲ್ಲರಿಗೂ ನಿಶ್ಚಿತವಾಗಿಯೂ ಗೊತ್ತು ವಿಷ್ಣುವೇ ಸರ್ವೋತ್ತಮ ಎಂದು.

**ನಾರಾಯಣಃ ಪರಂ ಬ್ರಹ್ಮ ತತ್ವಂ ನಾರಾಯಣಃ ಪರಃ ।**
**ತೇನೈವ ಸೃಷ್ಟೌ ಬ್ರಹ್ಮೇಶೌ ಸರ್ಗಸಂಹಾರಕಾರಕೌ ।**
**ತಸ್ಯೈವಾಜ್ಞಾಂ ಪುರಸ್ಕೃತ್ಯ ವರ್ತೇತೇ ಬ್ರಹ್ಮ ಶಂಕರೌ ॥**

ಪರಬ್ರಹ್ಮ ಎಂದರೆ ನಾರಾಯಣನು ಒಬ್ಬನೇ. ಅವನೇ ಸರ್ವಗುಣಗಳಿಂದ ಪರಿಪೂರ್ಣ. ನಾರಾಯಣನೇ ಪರತತ್ವ. ಜಗತ್ತಿನ ಸೃಷ್ಟಿ ಮಾಡಿದ ಬ್ರಹ್ಮನನ್ನೂ ಸೃಷ್ಟಿ ಮಾಡಿದವ ವಿಷ್ಣು. ಪ್ರಪಂಚವನ್ನು ಸಂಹಾರ ಮಾಡುವ ರುದ್ರನನ್ನು ಹುಟ್ಟಿಸಿದವನೂ ಅವನೇ. ಬ್ರಹ್ಮ ಮತ್ತು ಶಂಕರ ಇಬ್ಬರೂ ಅವನ ನುಡಿಯನ್ನು ತಲೆ ಮೇಲೆ ಹೊತ್ತು ನಡೆಯುತ್ತಾರೆ.

**ಏವಂ ಸರ್ವೋಪನಿಷದಾಮರ್ಥಂ ಹಿತ್ವಾ ದ್ವಿಜೋತ್ತಮಾಃ ।**
**ರಾಗಾಲ್ಲೋಭಾದ್ಭಯಾದ್ವಾಪಿ ಕಿಂ ವಾ ಬ್ರೂಥ ಮಮಾಗ್ರತಃ ॥**

ಎಲ್ಲ ವೇದ ಉಪನಿಷತ್ತು ನಾರಾಯಣನೇ ಸರ್ವಶ್ರೇಷ್ಠ ಎಂದು ಸಾರುತ್ತಲಿವೆ. ಈ ಉಪನಿಷತ್ತುಗಳ ಮುಖ್ಯಾರ್ಥನಾದ ಆ ಶ್ರೀಹರಿಯನ್ನು ಕಡೆಗಣಿಸಿ ನೀವು ನಮ್ಮ ತಂದೆಯ ಭಯದಿಂದಾಗಲೀ ಅವನು ಕೊಡುವ ಹಣದ ಮೇಲಿನ ಲೋಭದಿಂದಾಗಲೀ ದೈತ್ಯರ ಮೇಲಿನ ಅನುರಾಗದಿಂದಾಗಲೀ ನನ್ನ ಮುಂದೆ ಹೀಗೇಕೆ ವ್ಯರ್ಥ ಭಾಷಣವನ್ನು ಮಾಡುತ್ತಲಿರುವಿರಿ?

**ತಂ ಸರ್ವರಕ್ಷಕಂ ದೇವಂ ತ್ಯಕ್ತ್ವಾ ಸರ್ವೇಶ್ವರಂ ಹರಿಂ ।**
**ಕಥಂ ಪಾಷಂಡಮಾಶ್ರಿತ್ಯ ಪೂಜಯಾಮಿ ಚ ಶಂಕರಂ ॥**

ಎಲ್ಲರನ್ನೂ ಕಾಪಾಡುವ ದಯಾನಿಧಿಯಾದ ದೇವೋತ್ತಮ ಎಂದರೆ ಹರಿ. ಎಲ್ಲರಿಗೂ ಅವನೇ ಒಡೆಯ. ಅವನನ್ನು ತೊರೆದು ಅವನನ್ನು ನಿಂದಿಸುವ ಪಾಷಂಡಿಗಳ ಮತವನ್ನು ಆಶ್ರಯಿಸಿ ನಾನು ಶಂಕರನನ್ನು ಹೇಗೆ ಪೂಜಿಸಲಿ.

**ಶ್ಲೋಕ:-**

**ಯಸ್ಯ ಪತ್ನ್ಯಾಃ ಕಟಾಕ್ಷಾರ್ಧ ದೃಷ್ಟಿ ದೃಷ್ಟ್ವಾ ದಿಪೌಕಸಃ ।**
**ಬ್ರಹ್ಮೇಂದ್ರ ರುದ್ರವರುಣ ಯಮಸೋಮ ಧನಾಧಿಪಾಃ ॥**

ಯಾವನ ಮಡದಿಯು ಅರ್ಧ ಕಟಾಕ್ಷದಿಂದ ನೋಡಿದ ಮಾತ್ರಕ್ಕೆ ದೇವತೆಗಳಲ್ಲಿ ಕೆಲವು ವಿಶಿಷ್ಟ ಭಕ್ತರು ಬ್ರಹ್ಮ, ಇಂದ್ರ, ರುದ್ರ, ವರುಣ, ಯಮ, ಚಂದ್ರ ಕುಬೇರ ಮುಂತಾದ ದೇವತಾಧುರೀಣರ ಪದವಿಗೆ ಏರಿ ಸ್ಥಾನಮಾನ ಐಶ್ವರ್ಯ ಅಧಿಕಾರಗಳನ್ನು ಹೊಂದಿ ಲೋಕ ವಂದಿತರು ಆಗುವರೋ ಅಂಥ ಹರಿಯನ್ನು ಬಿಟ್ಟು ಬೇರೆ ದೇವರನ್ನು ನಾನು ಹೇಗೆ ಅರ್ಚಿಸಲಿ.

**ಸ ಏವ ರಕ್ಷಕಃ ಶ್ರೀಶಃ ದೇವಾನಾಮಪಿ ಸರ್ವದಾ ।**
**ತಮೇವ ಪೂಜಯಿಷ್ಯಾಮಿ ಲಕ್ಷ್ಮ್ಯಾ ಸಂಯುತ ಮಚ್ಯುತಂ ॥**

ಎಲ್ಲ ದೇವತೆಗಳಿಗೂ ಅವನೇ ರಕ್ಷಕ. ಆದುದರಿಂದ ಲಕ್ಷ್ಮೀದೇವಿಯಿಂದ ಒಡಗೂಡಿದ ಅಚ್ಯುತನನ್ನು ನಾನು ಪೂಜಿಸುತ್ತೇನೆ.

**ಹಿರಣ್ಯಕಶಪು:-** ದೈತ್ಯರೇ, ನನ್ನ ವೈರಿಯನ್ನು ಪೂಜಿಸುವ ಈ ಪಾಪಿ ಪ್ರಲ್ಹಾದನನ್ನು ಭೀಕರವಾದ ಶಸ್ತ್ರಾಸ್ತ್ರಗಳಿಂದ ಕೂಡಲೇ ಕಡಿದು ಕೊಚ್ಚಿ, ಕೊಂದು ಹಾಕಿರಿ. ಹರಿಯೇ ಎಲ್ಲರನ್ನೂ ರಕ್ಷಿಸುವವ ಎಂದು ಈ ನನ್ನ ಹುಚ್ಚು ಮಗ ಹೇಳುತ್ತಿರುವನಷ್ಟೇ ! ಆ ಹರಿ ಪ್ರಲ್ಹಾದನನ್ನು ಹೇಗೆ ರಕ್ಷಿಸುತ್ತಾನೆಂಬುದನ್ನು ನೋಡಿ ಬಿಡುತ್ತೇನೆ.

ದೈತ್ಯ ಸಾಮ್ರಾಟನು ಹೀಗೆ ಅಬ್ಬರಿಸಿ ಆಜ್ಞೆ ಮಾಡುವುದೇತಡ ನುಗ್ಗಿ ಬಂದರು. ದುಷ್ಟ ದೈತ್ಯಾಧಮರು ಪ್ರಲ್ಹಾದನ ಬಳಿಗೆ. ಪ್ರಲ್ಹಾದನನ್ನು ಹೊಡೆಯಲು ತಮ್ಮ ಕೈಯಲ್ಲಿ ಇರುವ ಖಡ್ಗ, ತ್ರಿಶೂಲ, ಶಕ್ತಿ, ತೋಮರ ಮುಂತಾದ ಆಯುಧಗಳಿಂದ ಪ್ರಲ್ಹಾದನನ್ನು ಹಣಿಯಬೇಕೆಂದು ಹಂಬಲದಿಂದ ಬಂದು ನಿಶಿತವಾದ ತಮ್ಮ ಆಯುಧಗಳಿಂದ ಸುತ್ತಲೂ ನಿಂತು ಪ್ರಹರಿಸತೊಡಗಿದರು. ಆಗ ಪ್ರಲ್ಹಾದನು ತನ್ನ ಹೃದಯದಲ್ಲಿಯೇ ವಿಷ್ಣುವನ್ನು ಧ್ಯಾನ ಮಾಡತೊಡಗಿದ. ಆ ದೈತ್ಯದಾನವರ ಮಧ್ಯದಲ್ಲಿ ಅವರ ಭೀಕರ ಅಸ್ತ್ರಗಳಿಗೆ ಬೆದರದೇ ಬೆಟ್ಟದಂತೆ ಗಟ್ಟಿಯಾಗಿ ನಿಂತುಕೊಂಡು 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರ ಮಂತ್ರವನ್ನೂ ಜಪಿಸಿದ. ಅದರ ಪ್ರಭಾವದಿಂದ ದೈತ್ಯರು ಅವನ ಮೇಲೆ ಪ್ರಯೋಗಿಸಿದ ಅಸ್ತ್ರಗಳೆಲ್ಲವೂ ಪುಡಿಪುಡಿ, ಶಸ್ತ್ರಗಳೆಲ್ಲವೂ ಖಂಡ ತುಂಡ. ಯಾವ ಒಂದು ಆಯುಧವೂ ಅವನ ದೇಹವನ್ನು ಸೀಳಲು ಸಮರ್ಥವಾಗಲಿಲ್ಲ. ಅಸುರ ವೀರರು ಕೊಟ್ಟ ಎಲ್ಲ ಬಡೆತ ಹೊಡೆತಗಳು ಅವನ ಮೈ ಮುಟ್ಟಿದರೂ ಮೆಲ್ಲನೆ ಚಿಕ್ಕುತಟ್ಟಿದಂತೆ ಆಯಿತು. ಎಷ್ಟು ಆಯುಧಗಳಿಂದ ಕುಟ್ಟಿದರೂ ಅವನಿಗೆ ಪೆಟ್ಟು ಹತ್ತಲಿಲ್ಲ. ಅವನ ಮೈ ಮುಟ್ಟಿ ಆ ಘೋರ ಅಸ್ತ್ರಗಳೆಲ್ಲವೂ ಮುರಿದು ಕೆಳಗೆ ಬಿದ್ದವು. ಇದರಿಂದ ಅವನನ್ನು ಹಣಿಯ ಬಂದ ದಾನವ ವೀರರಿಗೆ ನಾಚಿಕೆ. ಹಿರಣ್ಯಕಶಿಪುವಿಗೆ ಆಶ್ಚರ್ಯ, ಶುಕ್ರಾಚಾರ್ಯರಿಗೆ ತಬ್ಬಿಬ್ಬು. ಇದರಿಂದ ದೈತ್ಯರಾಜನ ಸಿಟ್ಟು ಮಾತ್ರ ಇಮ್ಮಡಿಸಿತು. ಅವನೊಬ್ಬ ಸಿಟ್ಟಿನಿಂದ ಉರಿಯುವ ಬೆಂಕಿಯ ಬೆಟ್ಟವೇ ಆದ. ಕೋಪದಿಂದ ಅವನ ತಲೆ ಕೆಟ್ಟಂತೆ ಆಗಿ ಅವನು ವಾಸುಕಿ ಮೊದಲಾದ ಹಾವುಗಳ ಹೆಗ್ಗಡೆಗಳನ್ನು ಕರೆದು ಆ ಪ್ರಲ್ಹಾದನನ್ನು ಕಚ್ಚಿ ಕೊಲ್ಲಲು ಆದೇಶ ನೀಡಿದ. ರಾಕ್ಷಸೇಶ್ವರನ ಆದೇಶದಂತೆ ಭಯಂಕರ ಹಾವುಗಳೆಲ್ಲವೂ ತಮ್ಮ ಘೋರವಾದ ವಿಷವನ್ನು ಕಕ್ಕುತ್ತ ಪ್ರಲ್ಹಾದನನ್ನು ಕಚ್ಚಿದವು. ಆದರೆ ಗರುಡ ಧ್ವಜನಾದ ಹರಿಯ ಭಕ್ತನಾದ ಪ್ರಲ್ಹಾದನ ದೇಹಸ್ಪರ್ಶಮಾತ್ರದಿಂದಲೇ ಆ ಎಲ್ಲ ಹಾವುಗಳ ಹಲ್ಲು ಮುರಿದು, ವಿಷ ಇಳಿದು, ಹೆಡೆ ಮಡಚಿ, ನೆಲಕ್ಕೆ ಬಿದ್ದವು. ಅವುಗಳಿಗೆ ಅಲ್ಲಿಯ ಗರುಡರೇಖೆಯ ದರ್ಶನವಾಗಿ ಆ ಹಾವಿನ ಹಿಂಡೆಲ್ಲವೂ ನೆತ್ತರವನ್ನೂ ಕಾರುತ್ತ ಅಲ್ಲಿಂದ ದಿಕ್ಕಾಪಾಲಾಗಿ ಓಡಿಹೋದವು. ಇದನ್ನು ನೋಡಿ ಹಿರಣ್ಯಕಶಿಪು ತನ್ನ ಕೈಗಳನ್ನೂ ಹೊಸಕಿಕೊಂಡ. ಅವನ ಕೋಪಾಗ್ನಿ ಮತ್ತಿಷ್ಟು ಭಗ್ ಎಂದು ಉರಿಯತೊಡಗಿತು. ಅವನು ದಿಗ್ಗನೆ ಎದ್ದು ನಿಂತ. ದಿಗ್ಗಜಗಳನ್ನೇ ಕರೆದು "ಈ ಶಿಶುವನ್ನು ನಿಮ್ಮ ಕಾಲಿನಿಂದ ಒರೆಸಿ ಹಾಕಿರಿ" ಎಂದು ಆಜ್ಞೆ ನೀಡಿದ. ಮದ್ದಾನೆಗಳೆಲ್ಲವೂ ಆ ಮುದ್ದು ಮಗುವಿನ ಮೇಲೆ ಏರಿ ಬಂದವು. ಅವನನ್ನು ಸುತ್ತಗಟ್ಟಿ ವಜ್ರಕಠೋರವಾದ ತಮ್ಮ ಕೋರೆದಾಡೆಗಳಿಂದ ಚುಚ್ಚಿ, ಚಚ್ಚಿ, ಕೊಲ್ಲಬೇಕು ಎಂದು ರಭಸದಿಂದ ತಿವಿದವು. ಆದರೆ ಅದರಿಂದ ಆ ಎಲ್ಲ ದಿಗ್ಗಜಗಳ ಕೋರೆಗಳು ಚೂರು ಚೂರಾದವು. ದಿಗ್ಧಂತಿಗಳೆಲ್ಲವೂ ಪ್ರಲ್ಹಾದನನ್ನು ಹೊಡೆಯ ಹೋಗಿ ದಂತ ಭಗ್ನವಾಗಿ ಅಲ್ಲಿಂದ ಭಯಭ್ರಾಂತವಾಗಿ ಪಲಾಯನಗೈದವು.

ಇದರಿಂದ ಹಿರಣ್ಯಕಶಿಪುವಿನ ಕೋಪದ ಕಿಡಿಗೆ ತುಪ್ಪ ಹೊಯ್ದಂತೆ ಆಗಿ ಕಿಡಿ ಸಿಡಿಲಾಗಿ ಸಿಡಿಯ ತೊಡಗಿತು. ಕೂಡಲೇ ಅವನು ಒಂದು ದೊಡ್ಡ ಬೆಂಕಿಯ ಬಣವೆಯನ್ನೇ ಹೊತ್ತಿಸಿದ. ಆ ಉರಿಯುವ ಅಗ್ನಿಯಲ್ಲಿ ತನ್ನ ಮಗನನ್ನು ತಾನೇ ಎತ್ತಿ ಅಗ್ನಿಪ್ರವೇಶ ಮಾಡಿಸಿದ. ಆದರೆ ಇದೇನು ಆಶ್ಚರ್ಯ! ಆ ಉರಿಯುವ ಅಗ್ನಿ ಪ್ರಲ್ಹಾದನ ಸ್ಪರ್ಶವಾದ ಕೂಡಲೇ ತಣ್ಣಗಾಯಿತು. ಜಲಶಾಯಿಯಾದ ವಿಷ್ಣುವಿನ ಭಕ್ತನಲ್ಲವೇ ಆ ಪ್ರಲ್ಹಾದ! ಆಗ ರಕ್ಕಸ ರಾಜ ಮಗನನ್ನು ಕೊಲ್ಲಲು ಮತ್ತೊಂದು ಉಪಾಯ ಹೂಡಿದ. ಅತ್ಯಂತ ಘೋರವಾದ ಕಾಲಕೂಟ ವಿಷವನ್ನು ತಂದು ಆ ಪ್ರಲ್ಹಾದನಿಗೆ ಕುಡಿಸಿದ. ಅಪ್ಪನಿಗಿಂತ ಜಾಣ ಈ ಮಗ. ತನಗೆ ಕೊಟ್ಟ ಆ ನಂಜನ್ನು ನರಸಿಂಹ ದೇವರಿಗೆ ನೈವೇದ್ಯ ಮಾಡಿದ. ಕೃಷ್ಣನಿಗೆ ಅರ್ಪಿತವಾದ ಆ ಕಾಲಕೂಟ ವಿಷ ಅರೆಚಣದಲ್ಲಿ ಅಮೃತವಾಗಿ ಮಾರ್ಪಟ್ಟಿತು.

**ತಸ್ಯ ವಿಷ್ಣೋಃ ಪ್ರಭಾವಾಚ್ಚ ವಿಷಮಪ್ಯಮೃತಂ ಭವೇತ್ ।**
**ಅರ್ಪಣಾತ್ತಸ್ಯದೇವಸ್ಯ ವಿಷಂ ಚಾಮೃತ ಮಶ್ನುತೇ ॥**

ಆ ವಿಷ್ಣುವಿನ ಪ್ರಭಾವದಿಂದ ವಿಷವು ಕೂಡ ಅಮೃತವಾಗುವದು. ಆ ಹರಿಗೆ ನಿವೇದಿಸಿದ ನಂಜಿನ ನೈವೇದ್ಯ ಸುಧೆಯಂತೆ ಸ್ವಾದಿಷ್ಟವು ಪೌಷ್ಟಿಕವೂ ಆಗುವದು.

ಹೀಗೆ ಆ ದೈತ್ಯ ರಾಜನು ಹೆತ್ತ ಮಗನನ್ನು ಹೇಗಾದರೂ ಮಾಡಿ ಮೃತ್ಯುಕೂಪಕ್ಕೆ ತಳ್ಳಬೇಕೆಂದು ಹತ್ತಾರು ಉಪಾಯವನ್ನೂ ಮಾಡಿದ. ಒಂದೂ ಫಲಕಾರಿಯಾಗಲಿಲ್ಲ. ಹರಿ ಕೈ ಹಿಡಿದಾಗ ಯಾರು ಕೊಲ್ಲಬಲ್ಲರು! ಹೀಗೆ ಹಿರಣ್ಯಕಶಿಪುವಿನ ಇವೆಲ್ಲ ಉಪಾಯಗಳು ವಿಫಲಗೊಂಡಾಗ ಕೊನೆಗೆ ಅವನೇ ಹಣ್ಣಾಗಿ ಮಿದುವಾಗಿ ಸಂತೈಸುವ ಧಾಟಿಯಲ್ಲಿ ಮಗನನ್ನು ಕುರಿತು ಮಾತನಾಡಿದ.

**ಹಿರಣ್ಯಕಶಿಪು:-** ಪ್ರಲ್ಹಾದ, ನೀನು ನನ್ನ ಎದುರು ಆ ನಿನ್ನ ಹರಿಯ ಸರ್ವೋತ್ತಮತ್ವವನ್ನು ಚೆನ್ನಾಗಿ ಪ್ರತಿಪಾದಿಸಿದ್ದೀಯ.

**ವ್ಯಾಪಿತ್ವಾತ್ ಸರ್ವಭೂತಾನಾಂ ವಿಷ್ಣುರಿತ್ಯಭಿಧೀಯತೇ ।**

ಎಲ್ಲೆಡೆಗೂ ವ್ಯಾಪ್ತನಾದುದರಿಂದ ವಿಷ್ಣು ಎಂದು ಹೇಳಲ್ಪಡುತ್ತಾನೆ. ಎಂದು ನಿನ್ನ ಪ್ರತಿಪಾದನೆ ಇರುತ್ತದೆ. ಆ ವಿಷ್ಣುವು ಎಲ್ಲೆಡೆಗೂ ಇರುತ್ತಾನೆ ಎಂಬುದನ್ನು ನನಗೆ ಪ್ರತ್ಯಕ್ಷವಾಗಿ ತೋರಿಸಿ ಕೊಡು. ಅವನ ಶಕ್ತಿ, ಐಶ್ವರ್ಯ, ತೇಜಸ್ಸು, ಜ್ಞಾನ, ಪರಾಕ್ರಮ ಎಲ್ಲವನ್ನೂ ನಾನು ಕಣ್ಣಾರೆ ಕಾಣುತ್ತೇನೆ. ಸ್ವಯಂ ಪರೀಕ್ಷಿಸುತ್ತೇನೆ. ನನಗೆ ಖಾತ್ರಿಯಾದರೆ ಅವನು ಒಬ್ಬ ದೇವ ಎಂದು ಒಪ್ಪುತ್ತೇನೆ. ಮಹಾದೇವನ ಅನುಗ್ರಹದಿಂದ ನಾನು ಎಲ್ಲ ಪ್ರಾಣಿಗಳಿಂದ ಅವಧ್ಯನಾಗಿದ್ದೇನೆ. ಇಂಥ ನನ್ನನ್ನು ಆ ಹರಿಯು ಗೆದ್ದರೆ ಅವನು ಸರ್ವೇಶ್ವರ ಎಂದು ತಾನಾಗಿಯೇ ಸಿದ್ಧವಾಗುತ್ತದೆ.

**ಪ್ರಲ್ಹಾದ:-** ತಂದೆಯೇ, ಸರ್ವವ್ಯಾಪಿಯಾದ ಆ ವಿಷ್ಣುವು ಎಲ್ಲ ಪ್ರಾಣಿಗಳಲ್ಲಿಯೂ ಎಲ್ಲ ದೇಶಗಳಲ್ಲಿಯೂ, ಎಲ್ಲ ಕಾಲಗಳಲ್ಲಿಯೂ, ಎಲ್ಲದರಲ್ಲಿಯೂ ವಾಸ ಮಾಡುತ್ತಾನೆ. ಆದುದರಿಂದ ಎಲ್ಲರೂ ಅವನನ್ನು ವಾಸುದೇವ ಎಂದು ಕರೆಯುತ್ತಾರೆ. ಅವನನ್ನು ಭಕ್ತಿಯಿಂದ ಮಾತ್ರ ಕಾಣಬಹುದು. ಸಿಟ್ಟಿನಿಂದಾಗಲೀ, ಸ್ಪರ್ಧೆಯಿಂದಾಗಲೀ, ಮತ್ಸರದಿಂದಾಗಲೀ, ಜದ್ದಿನಿಂದಾಗಲೀ ಅವನನ್ನು ಕಾಣುವದು ಶಕ್ಯವಿಲ್ಲ. ಅವನ ದರ್ಶನಕ್ಕೆ

ಭಕ್ತಿಯೇ ಮುಖ್ಯ. ಆದರೆ ಅವನು ಮಾತ್ರ ದೇವ ದಾನವ, ಮಾನವ, ಪಶು, ಮರ, ಬಳ್ಳಿ, ಮೊದಲಾದ ಎಲ್ಲ ಕಡೆಗಳಲ್ಲಿಯೂ ಚಿಕ್ಕ ದೊಡ್ಡ ವಸ್ತುಗಳಲ್ಲಿಯೂ ವ್ಯಾಪಿಸಿ ಇರುತ್ತಾನೆ.

**ಹಿರಣ್ಯಕಶಿಪು:-** ಪ್ರಲ್ಹಾದ, ಹೀಗೇಕೆ ಹರಿ, ಹರಿ ಎಂದು ಬಡಬಡಿಸುತ್ತಲಿರುವೆ. ಆ ನಿನ್ನ ಹರಿ ಎಲ್ಲೆಡೆಗೂ ಇರುವದಾದರೆ ನನಗೆ ಇಲ್ಲಿಯೇ ಪ್ರತ್ಯಕ್ಷವಾಗಿ ತೋರಿಸು. ಈ ನಮ್ಮ ಅರಮನೆಯ ಕಂಬದಲ್ಲಿಯೇ ಆ ಹರಿಯ ಪರೀಕ್ಷೆಯನ್ನು ಮಾಡಿ ಬಿಡುತ್ತೇನೆ. ಈ ಕಂಬವನ್ನು ನಾನು ಈ ನನ್ನ ಕೈಯಿಂದ ಗುದ್ದಿ ಒಡೆದು ನೋಡುತ್ತೇನೆ. ಅದರ ಒಳಗೆ ನಿನ್ನ ಹರಿ ಇಲ್ಲದಿದ್ದರೆ ನಿನ್ನ ತಲೆ ಸೀಳುತ್ತೇನೆ.''

ಎಂದು ಹೇಳಿ ಆ ಹಿರಣ್ಯಕಶ್ಯಪು ಮುಷ್ಟಿ ಮಾಡಿ ತನ್ನ ಎದುರಿಗೆ ಇರುವ ಕಂಬವನ್ನು ಗುದ್ದಿ ಹೊಡೆದ. ಕೂಡಲೇ ಆ ಕಂಬದಿಂದ ವಜ್ರಪಾತವಾದಂತೆ ಭಯಂಕರ ಒಂದು ಧ್ವನಿ ಹೊರಟಿತು. ಅದರಿಂದಲೇ ಅನೇಕ ದೈತ್ಯರು ನೆಲದ ಮೇಲೆ ಮಡಿದು ಬಿದ್ದರು. ಆಗಲೇ ಆ ಕಂಬವನ್ನು ಸೀಳಿಕೊಂಡು ಒಂದು ನರಸಿಂಹವು ಸಿಂಹನಾದವನ್ನು ಮಾಡುತ್ತ ಹೊರಬಂದಿತು. ಅದರ ಮುಖ ಸಿಂಹದ್ದು. ಉಳಿದ ಆಕಾರ ಮಾನವರದು. ಆ ನರಸಿಂಹ ರೂಪಿಯಾದ ಶ್ರೀ ಹರಿಯ ಕಾಂತಿಯು ಕೋಟಿಸೂರ್ಯರಿಗಿಂತ ಮಿಗಿಲಾಗಿತ್ತು. ಭೀಕರವಾದ ಹಲ್ಲುಗಳು. ನಿಮಿರಿನಿಂತ ಆಯಾಲದ ಕೂದಲುಗಳು. ಮೂರು ಕಣ್ಣು. ಮೂರು ಕಣ್ಣುಗಳಲ್ಲಿಯೂ ಕೆಂಗಿಡಗಳು. ಸಾವಿರ ತೋಳು, ಕೊರಳಲ್ಲಿ ದಿವ್ಯ ಮಾಲೆ. ಮೈಗೆಲ್ಲ ದಿವ್ಯ ಗಂಧದ ಲೇಪ, ಉದರದಲ್ಲಿ ಕೌಸ್ತುಭ, ಎದೆಯಲ್ಲಿ ಶ್ರೀವತ್ಸ ಮೈತುಂಬ ದಿವ್ಯಾಭರಣಗಳು.

ಆ ನರಸಿಂಹನು ಎಲ್ಲ ದಾನವರನ್ನು ಕೊಂದು ಹಾಕಲಿಕ್ಕಾಗಿ ಸಿದ್ಧನಾಗಿ ನಿಂತುಕೊಂಡ. ಅವನನ್ನು ಕಂಡು ಪ್ರಲ್ಹಾದನು ಭಕ್ತಿಯಿಂದ ''ಜಯದೇವ ಜಗನ್ನಾಥ ನಮಸ್ತೇಽಸ್ತು ಜನಾರ್ದನ'' ಎಂದು ಜಯಶಬ್ದವನ್ನು ಹೇಳಿ ನಮಸ್ಕಾರ ಮಾಡಿದ. ಆ ನೃಸಿಂಹ ದೇವರ ದೇಹದಲ್ಲಿ ಪ್ರಲ್ಹಾದನಿಗೆ ಬ್ರಹ್ಮಾಂಡವೇ ಕಂಡು ಬಂದಿತು. ಆ ನರಹರಿಯ ಕೊರಳ ಮೇಲಿನ ಕೂದಲಿನ ತುದಿಯಲ್ಲಿ ಒಂದೊಂದು ಬ್ರಹ್ಮಾಂಡ. ಮೂರು ಕಣ್ಣುಗಳಲ್ಲಿಯೂ ಸೂರ್ಯಚಂದ್ರರು. ಕಿವಿಗಳಲ್ಲಿ ಅಶ್ವಿನೀ ದೇವತೆಗಳು. ಹಣೆಯಲ್ಲಿ ಬ್ರಹ್ಮ ರುದ್ರರು ಮೂಗಿನಲ್ಲಿ ಆಕಾಶ ಹಾಗು ವಾಯುಮುಖದಲ್ಲಿ ಇಂದ್ರ, ಅಗ್ನಿ, ನಾಲಿಗೆಯ ಮೇಲೆ ಸರಸ್ವತಿ, ಕೊರಳಲ್ಲಿ ಮೇರು ಪರ್ವತ, ಹೆಗಲ ಮೇಲೆ ದೊಡ್ಡ ದೊಡ್ಡ ಗುಡ್ಡಗಳು, ಅವನ ಹೊಕ್ಕಳಲ್ಲಿ ಅಂತರಿಕ್ಷ. ಪಾದಗಳಲ್ಲಿ ಪೃಥವೀ ಮೇರು ಮೊದಲಾದ ಪರ್ವತಗಳು. ಬೆರಳುಗಳಲ್ಲಿ ಕೂದಲುಗಳಲ್ಲಿ ಔಷಧಿಗಳು. ಕಾಲಿನ ಉಗುರುಗಳಲ್ಲಿ ಎಲ್ಲ ಗಿಡಗಳು, ಉಸಿರಿನಲ್ಲಿ ಸಾಂಗ ವೇದಗಳು. ಆದಿತ್ಯ ವಸು, ರುದ್ರ, ವಿಶ್ವೇದೇವತೆಗಳು, ಮರುದ್ಗಣಗಳು, ಗಂಧರ್ವರು, ಅಪ್ಸರೆಯರು ಆ ನರಸಿಂಹದೇವರ ಅಂಗಾಂಗಗಳಲ್ಲಿ ಕಂಡು ಬರುತ್ತಿದ್ದರು. ಕೊರಳಲ್ಲಿ ಶ್ರೀ ವತ್ಸ ಕೌಸ್ತುಭ, ವನಮಾಲಾ, ವೈಜಯಂತೀ ಈ ನಾಲ್ಕು ವಿರಾಜಿಸುತ್ತಿದ್ದವು. ಎಲ್ಲ ಕೈಗಳಲ್ಲಿ ಶಂಖ, ಚಕ್ರ, ಗದಾ, ಖಡ್ಗ, ಶಾರ್ಙ ಮೊದಲಾದ ಆಯುಧಗಳು ಶೋಭಿಸುತ್ತಿದ್ದವು. ಎಲ್ಲ ವೇದ ಉಪನಿಷತ್ತುಗಳ ಮುಖ್ಯಾರ್ಥವೇ ಮೈದಳೆದು ತನ್ನ ಮನೆಗೆ ನಡೆದು ಬಂದಿದೆ ಎನಿಸಿತು ಆ ಪ್ರಲ್ಹಾದನಿಗೆ. ಆದುದರಿಂದ ಅವನು ಆನಂದ ಬಾಷ್ಪಗಳನ್ನು ಉದುರಿಸುತ್ತಾ ಗದ್ಗದಿತ ಕಂಠನಾಗಿ ಮತ್ತೆ ಮತ್ತೆ ಅವನಿಗೆ ನಮಸ್ಕರಿಸಿದ.

ಇತ್ತ ದೈತ್ಯೇಂದ್ರನಾದ ಹಿರಣ್ಯಕಶಿಪು ಖಡ್ಗವನ್ನು ಹಿಡಿದು ಆ ನರಸಿಂಹನನ್ನು

ಹೊಡೆಯಬೇಕೆಂದು ಅವನ ಮೇಲೆ ಏರಿ ಹೋದ. ಉಳಿದ ಎಲ್ಲ ದೈತ್ಯವೀರರು ತಮ್ಮ ತಮ್ಮ ಆಯುಧಗಳನ್ನು ಎತ್ತಿ ಹರಿಯನ್ನು ಹೊಡೆಯತೊಡಗಿದರು. ಆದರೆ ಆ ನೃಸಿಂಹನ ಮೇಲೆ ಪ್ರಯೋಗಿಸಿದ ಎಲ್ಲ ಭೀಕರವಾದ ದೈತ್ಯರ ಅಸ್ತ್ರಗಳು ಆ ನರಹರಿಯ ಕೊರಳ ಮೇಲಿನ ಕೂದಲುಗಳ ಘರ್ಷಣೆಯಿಂದ ಉಂಟಾದ ಬೆಂಕಿಯಿಂದ ಸುಟ್ಟು ಬೂದಿಯಾಗಿ ಬಿದ್ದವು. ಆದರಿಂದ ಪ್ರಲ್ಹಾದನನ್ನು ಬಿಟ್ಟು ಎಲ್ಲ ದೈತ್ಯರು ಸುಟ್ಟು ಬೂದಿ ಆದರು.

ಇದನ್ನು ನೋಡಿ ಚಂಡಕೋಪನಾದ ಆ ದಾನವದೊರೆ ಮತ್ತಿಷ್ಟು ಕೋಪದಿಂದ ಕೆರಳಿ ಕೆಂಡದಂತೆ ಆದನು. ಕೈಯಲ್ಲಿ ಕಾಳ ಸರ್ಪದಂತೆ ಇರುವ ತನ್ನ ಖಡ್ಗವನ್ನು ಹಿಡಿದು ನರಸಿಂಹ ದೇವರ ಮೇಲೆ ಏರಿ ಹೋದನು. ಹೀಗೆ ತನ್ನನ್ನು ಹೊಡೆಯಲು ಬಂದ ಆ ದೈತ್ಯರಾಜನನ್ನು ನೃಸಿಂಹ ಸ್ವಾಮಿಯು ಒಂದು ಕೈಯಿಂದ ಹಿಡಿದು ಎತ್ತಿ ಅಂತರಿಕ್ಷದಲ್ಲಿ ತೂರಾಡಿಸಿ ಧರೆಯ ಮೇಲೆ ಕುಕ್ಕಿದ. ಆದರಿಂದ ನೆಲದ ಮೇಲೆ ನಿಶ್ಪ್ರಾಣನಾಗಿ ಬಿದ್ದ ಆ ದೈತ್ಯನನ್ನು ನರಸಿಂಹದೇವರು ಮತ್ತೆ ಎತ್ತಿ ತನ್ನ ತೊಡೆಯ ಮೇಲೆ ಹಾಕಿಕೊಂಡರು.

ನರಸಿಂಹದೇವರ ತೊಡೆಯ ಮೇಲೆ ಅವಶನಾಗಿ ಮೇಲ್ಮುಖ ಮಾಡಿಕೊಂಡು ಬಿದ್ದುಕೊಂಡಾಗ ಹಿರಣ್ಯಕಶಿಪು ದೇವರ ಮುಖವನ್ನು ಕಣ್ತುಂಬ ನೋಡಿದ. ಆದರಿಂದ ತಕ್ಷಣದಲ್ಲಿಯೇ ಈವರೆಗೆ ಬಂದ ವಿಷ್ಣುವಿನ ನಿಂದೆ ಹಾಗು ವಿಷ್ಣುಭಕ್ತರ ದ್ರೋಹ ಮುಂತಾದವುಗಳಿಂದ ಅವನು ಮಾಡಿದ ಪಾಪರಾಶಿಗಳೆಲ್ಲವೂ ತಕ್ಷಣದಲ್ಲಿ ಸುಟ್ಟು ಬೂದಿಯಾದವು.

ಬಳಿಕ ಆ ನೃಸಿಂಹನು ದೈತ್ಯರಾಜನಾದ ಹಿರಣ್ಯಕಶಿಪುವಿನ ವಿರಾಟ್‌ಶರೀರವನ್ನು ತನ್ನ ವಜ್ರದಂತೆ ಕಠೋರವಾದ ಉಗುರುಗಳಿಂದ ನೂರಾರು ಹೋಳಾಗಿ ಸೀಳಿದನು. ಶ್ರೀಹರಿಯ ದೇಹ ಸ್ಪರ್ಶಮಾತ್ರದಿಂದಲೇ ಪಾಪಗಳೆಲ್ಲವೂ ತೊಳೆದು ಹೋದವು. ಆದರಿಂದ ನಿರ್ಮಲಾತ್ಮನಾದ ಆ ದೈತ್ಯರ ದೊರೆ ಶ್ರೀಹರಿಯ ಮುಖವನ್ನು ನೋಡುತ್ತಲೇ ಅವನಿಂದಲೇ ಎದೆ ಸೀಳಿ ಕೃತಾರ್ಥನಾಗಿ ಪ್ರಾಣ ಬಿಟ್ಟ. ನಂತರ ಆ ನೃಸಿಂಹನು ತನ್ನ ಚೂಪಾದ ಉಗುರುಗಳಿಂದ ಆ ದೈತ್ಯನ ಹೊಟ್ಟೆಯನ್ನು ಹರಿದು ತನ್ನ ಕೊರಳಿನಲ್ಲಿ ಹಾಕಿಕೊಂಡ. ಆಗ ಎಲ್ಲ ದೇವತೆಗಳೂ, ಋಷಿಗಳೂ, ತಪಸ್ವಿಗಳೂ, ಬ್ರಹ್ಮ ಹಾಗೂ ರುದ್ರರನ್ನು ಮುಂದೆ ಮಾಡಿಕೊಂಡು ಆ ನೃಸಿಂಹನನ್ನು ಸ್ತೋತ್ರ ಮಾಡುತ್ತ ಮುಂದೆ ಬಂದರು. ಆದರೆ ಆ ನರಸಿಂಹನ ಉಗ್ರತರವಾದ ಆ ರೂಪವನ್ನು ನೋಡಿ ಅವರಾರಿಗೂ ಭಗವಂತನ ಸಮೀಪಕ್ಕೆ ಬರಲು ಧೈರ್ಯ ಆಗಲೇ ಇಲ್ಲ. ಆಗ ಅವರೆಲ್ಲರೂ ಜಗನ್ಮಾತೆಯಾದ ಆ ನರಸಿಂಹದೇವರ ಪತ್ನಿ ಲಕ್ಷ್ಮೀದೇವಿಯನ್ನು ಶ್ರೀಸೂಕ್ತಜಪದಿಂದ ಧ್ಯಾನ ಮಾಡಿದರು. ಆಗ ಆ ಮಹಾಲಕ್ಷ್ಮೀದೇವಿಯು ದೇವತೆಗಳ ಅಭಿಪ್ರಾಯ ತಿಳಿದು ಆ ಭಗವಂತನ ಮುಂದೆ ಹೋಗಿ ಅವನಿಗೆ ಸಾಷ್ಟಾಂಗ ವಂದನೆ ಮಾಡಿ ''ಶಾಂತರಾಗಿರಿ, ಪ್ರಸನ್ನರಾಗಿರಿ. ಈ ಮಗುವಿನ ಮೇಲೆ ಅನುಗ್ರಹ ಮಾಡಿರಿ. ಕೈ ಮುಗಿದು ನಿಂತ ಈ ಬ್ರಹ್ಮಾದಿ ದೇವತೆಗಳನ್ನು ಪರಿಕಿಸಿರಿ.''

ಹೀಗೆ ತನ್ನನ್ನು ಸ್ತೋತ್ರ ಮಾಡುತ್ತಿದ್ದ ಲಕ್ಷ್ಮೀದೇವಿಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ದಯಾರಸದಿಂದ ತೊಯ್ದ ಕಣ್ಣಿನಿಂದ ದೇವತೆಗಳ ಕಡೆಗೆ ನೋಡಿದ. ಭಗವಂತನ ಪ್ರಸನ್ನ ಮುದ್ರೆಯ ಆ ದಯಾಪೂರ್ಣವಾದ ಮುಖವನ್ನು ನೋಡಿದ

ಕೂಡಲೇ ಎಲ್ಲ ದೇವತೆಗಳೂ ತಪಸ್ವಿಗಳೂ ಎಲ್ಲರೂ ಕೂಡಿ ಒಕ್ಕೊರಲಿನಿಂದ ''ಜಯ ಜಯ ನೃಸಿಂಹ, ಜಯ ಜಯ ನರಹರ'' ಎಂದು ಎಲ್ಲರೂ ಸಾಷ್ಟಾಂಗ ನಮಸ್ಕಾರ ಮಾಡಿದರು. ಮತ್ತು ಎಲ್ಲರೂ ಕೈ ಮುಗಿದು ಪ್ರಾರ್ಥಿಸಿಕೊಂಡರು.

**ದೇವತೆಗಳು:-** ಭಗವನ್, ಜಗತ್ಪತಿಯಾದ ನಿನ್ನ ಈ ಅತ್ಯದ್ಭುತವಾದ ರೂಪವನ್ನು ನಾವು ನೋಡಲು ಶಕ್ತರಲ್ಲ. ಮೂರು ಲೋಕಗಳನ್ನೇ ಆಕ್ರಮಿಸಿದ ನಿನ್ನ ತೇಜಸ್ಸು ಅತ್ಯಂತ ತೀಕ್ಷ್ಣತರವಾಗಿದೆ. ಇದನ್ನು ನೋಡಲು ಹಾಗು ಇದರ ಮುಂದೆ ನಿಲ್ಲಲು ನಾವು ಸಮರ್ಥರಲ್ಲ.

ಹೀಗೆ ಎಲ್ಲ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ನರಸಿಂಹದೇವರು ತನ್ನ ಉಗ್ರರೂಪವನ್ನು ಉಪಸಂಹಾರ ಮಾಡಿ ಸೌಮ್ಯನಾಗಿ, ಶಾಂತನಾಗಿ ದರ್ಶನೀಯನು ಆದ. ಆ ಸೌಮ್ಯ, ಶಾಂತಿ, ಕಾಂತ ಕಮನೀಯವಾದ ಸುಂದರ; ಸುಪ್ರಸನ್ನ ರೂಪುವುಳ್ಳ ನರಸಿಂಹ ದೇವರ ಸ್ವರೂಪವನ್ನು ನೋಡಿ ಎಲ್ಲ ದೇವತೆಗಳು ಆನಂದಬಾಷ್ಪಗಳನ್ನು ಉದುರಿಸಿ ಹರ್ಷದ ಹೊಳೆಯಲ್ಲಿಯೇ ಈಜಾಡಿದರು. ಮತ್ತು ಆ ನೃಸಿಂಹದೇವರ ಮೇಲೆ ಹೂವಿನ ಮಳೆಗರೆದರು. ಅಮೃತ ತುಂಬಿದ ರತ್ನಕುಂಭಗಳಿಂದ ಆ ಲಕ್ಷ್ಮೀನೃಸಿಂಹ ದೇವರಿಗೆ ಅಭಿಷೇಕ ಗೈದು ವಸ್ತ್ರ ಆಭರಣ ಗಂಧ, ಹೂ, ಧೂಪ, ನೈವೇದ್ಯ, ದೀಪಗಳಿಂದ ಪೂಜೆ ಮಾಡಿದರು. ಹಿಗ್ಗಿ, ಹಾಡಿ, ಪಾಡಿ ಕೊಂಡಾಡಿ ಮತ್ತೆ ಮತ್ತೆ ನಮಸ್ಕಾರಗಳನ್ನು ಮಾಡಿದರು. ಅದರಿಂದ ಪರಿತುಷ್ಟನಾದ ಭಗವಂತ ಪ್ರಲ್ಹಾದನನ್ನು ಎಲ್ಲ ದೈತ್ಯರಿಗೂ ಅಧಿರಾಜನನ್ನಾಗಿ ನೇಮಿಸಿದ. ದೇವತೆಗಳಿಗೆ ಆಜ್ಞೆ ನೀಡಿ ದೈತ್ಯ ಸಾರ್ವಭೌಮ ಸಿಂಹಾಸನದಲ್ಲಿ ತನ್ನ ಭಕ್ತನಾದ ಪ್ರಲ್ಹಾದನನ್ನು ಕೂಡಿಸಿ ಅವನಿಗೆ ಪಟ್ಟಾಭಿಷೇಕ ಮಾಡಿದ. ಅವನಿಗೆ ಅಪೇಕ್ಷಿತವಾದ ವರಗಳನ್ನು ಕೊಟ್ಟು ತನ್ನಲ್ಲಿ ಅವಿಚ್ಚಿನ್ನವಾದ ಭಕ್ತಿಯನ್ನು ನೀಡಿ ಅನುಗ್ರಹಿಸಿದ. ಅನಂತರ ಎಲ್ಲ ದೇವಾಧಿದೇವತೆಗಳು ಸ್ತೋತ್ರ ಮಾಡುತ್ತ ಇರುವಾಗಲೇ ಅಲ್ಲಿಯೇ ಅಂತರ್ಧಾನವನ್ನು ಹೊಂದಿದ.

ಬಳಿಕ ಎಲ್ಲ ದೇವತೆಗಳು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಇಷ್ಟುದಿನ ಹಿರಣ್ಯಕಶಿಪುವಿನ ಶಾಸನಕಾಲದಲ್ಲಿ ತಪ್ಪಿಹೋದ ಯಜ್ಞಾಹುತಿಗಳನ್ನು ಆನಂದದಿಂದ ಸ್ವೀಕರಿಸಿ ನರಸಿಂಹದೇವರ ಮಹೋಪಕಾರವನ್ನು ಸ್ಮರಿಸುತ್ತಾ ಆ ಭಗವನ್ಮಹಿಮೆಗೆ ತಮ್ಮ ಕೃತಜ್ಞತಾಭಾವವನ್ನು ಸಲ್ಲಿಸುತ್ತಿದ್ದರು ಎಲ್ಲ ಸುರಸತ್ತಮರು.

ಹಿರಣ್ಯಕಶಿಪುವಿನ ಅನಂತರ ಪರಮ ವಿಷ್ಣುಭಕ್ತನಾದ ಪ್ರಲ್ಹಾದನು ತನ್ನ ದೈತ್ಯ ಸಾಮ್ರಾಜ್ಯವನ್ನು ನ್ಯಾಯದಿಂದಲೂ ನೀತಿಯಿಂದಲೂ ಆಳಿದ. ಬಗೆ ಬಗೆಯ ಯಜ್ಞ, ಯಾಗ, ದಾನ, ಧರ್ಮ, ದಕ್ಷಿಣೆ ಮುಂತಾದವುಗಳಿಂದ ನರಸಿಂಹದೇವರನ್ನು ಭಕ್ತಿಯಿಂದ ಆರಾಧಿಸಿದ. ಕೊನೆಗೆ ದಿವ್ಯವಾದ ಹರಿಪದವನ್ನು ಹೊಂದಿದ. ಭಕ್ತಾಗ್ರೇಸರನಾದ ಈ ಪ್ರಲ್ಹಾದನ ಚರಿತ್ರವನ್ನು ಶ್ರವಣಮಾಡಿದವರು ಸರ್ವಪಾಪಗಳಿಂದ ಮುಕ್ತರಾಗಿ ಪರಮಗತಿಯನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ನರಸಿಂಹ ಅವತಾರ ಎಂಬ ಎರಡುನೂರ ಇಪ್ಪತ್ತನೇಯ ಅಧ್ಯಾಯ ಮುಗಿದುದು*

—o—

ವಾಮನದೇವರ ಪ್ರಾದುರ್ಭಾವ.

| ಅಧ್ಯಾಯ - ೨೨೧ |
|---|

ಬಲಿಚಕ್ರವರ್ತಿಯ ಉಪಾಖ್ಯಾನ

**ಮಹಾದೇವ:-** ಅಸುರರಿಗೆಲ್ಲ ಅರಸನಾದ ಪ್ರಲ್ಹಾದನಿಗೆ ವಿರೋಚನ ಎಂಬ ಗಂಡು ಮಗ ಹುಟ್ಟಿದ. ಮಹಾಬಲಿಷ್ಠ ಹಾಗೂ ಧಾರ್ಮಿಕಶ್ರೇಷ್ಠನಾಗಿದ್ದ ಆ ವಿರೋಚನ. ನುಡಿಯಲ್ಲಿ ಸತ್ಯ, ನಡೆಯಲ್ಲಿ ಆಚಾರ ಶುದ್ಧಿ, ಹೃದಯದಲ್ಲಿ ಭಕ್ತಿ, ಧರ್ಮದಲ್ಲಿ ಆಸಕ್ತಿ. ಇಂದ್ರಿಯಗಳ ಮೇಲೆ ನಿಯಂತ್ರಣ ಇದ್ದುದರಿಂದ ಆ ವಿರೋಚನನು ತಂದೆ ಪ್ರಲ್ಹಾದನಂತೆ ಶ್ರೀಹರಿಗೆ ಮೆಚ್ಚಿನ ಭಕ್ತ. ಮೂರು ಲೋಕಗಳನ್ನು ತನ್ನ ಅಂಕಿತದಲ್ಲಿ ಇಟ್ಟುಕೊಂಡು ಶಾಸನ ಸೂತ್ರಗಳನ್ನು ಎಲ್ಲೆಡೆಗೂ ಧರ್ಮಶಾಸ್ತ್ರಗಳಿಗನುಗುಣವಾಗಿ ನಡೆಸುತ್ತಿದ್ದ. ಅವನ ರಾಜ್ಯದಲ್ಲಿ ಬಿತ್ತದೆ ಬೆಳೆಯುತ್ತಿತ್ತು ಭೂಮಿ. ಹಸುಗಳು ಮರಬಳ್ಳಿಗಳು ಹನ್ನೆರಡು ತಿಂಗಳು ಎಂದೂ ಬರಡಾಗದೆ ಹಾಲು, ಹಣ್ಣು, ಹೂವು ಕಾಯಿಗಳನ್ನು ಸಮೃದ್ಧವಾಗಿ ಒದಗಿಸುತ್ತಿದ್ದವು. ಇಂದ್ರಾದಿದೇವತೆಗಳು ವಿಷ್ಣುಭಕ್ತನಾದ ಆ ವಿರೋಚನನಿಂದ ಪರಾಜಿತರಾಗಿ ಅವನ ಕೈಂಕರ್ಯವನ್ನು ಮಾಡುವ ಪ್ರಸಂಗ ಒದಗಿತು. ಇದರಿಂದ ನಾಕಲೋಕದ ನಿರ್ಜರರ ಹಡೆದಾಯಿಯಾದ ಆದಿತಿಗೆ ಅಸಹನೀಯ ದುಃಖ. ತಾಳಲಾರದ ಸಂಕಟ. ಇಂದ್ರನೇ ಮೊದಲಾದ ತನ್ನ ಮೆಚ್ಚಿನ ಮಕ್ಕಳೆಲ್ಲ ತನ್ನ ಸವತಿಯ ಸಂತಾನದಲ್ಲಿ ಬೆಳೆದು ಬಂದ ವಿರೋಚನನಿಂದ ಸೋತು ರಾಜ್ಯಭ್ರಷ್ಟರಾಗಿ ಅವನ ಸೇವೆಗೆ ಕೈಕಟ್ಟಿ ನಿಂತದ್ದನ್ನು ಕಂಡು ಅವಳ ತಾಯ್‌ಕರುಳು ಕುದಿದು ಹೋಯಿತು. ಆದುದರಿಂದ ಅವಳು ತನ್ನ ಪತಿಯಾದ ಕಶ್ಯಪರೊಂದಿಗೆ ತಪೋನುಷ್ಠಾನಗೈದಳು. ಪಯೋವ್ರತದಿಂದ ಶ್ರೀಹರಿಯನ್ನು ಆರಾಧಿಸಿದಳು. ಹೀಗೆ ಒಂದು ವರ್ಷದ ಕಾಲದವರೆಗೆ ಆ ಕಶ್ಯಪ ದಂಪತಿಗಳಿಂದ ಪೂಜಿತನಾಗಿ ಮಹಾವಿಷ್ಣುವು ಅಲ್ಲಿಯೇ ಪ್ರಾದುರ್ಭೂತನಾದ ಶ್ರೀದೇವಿಯೊಂದಿಗೆ. ಇಂದ್ರನೀಲಮಣಿಯಂತೆ ಕಪ್ಪು ಬಣ್ಣದಿಂದ ಒಪ್ಪುವ ಶಂಖ ಚಕ್ರಗದಾಧಾರಿಯಾದ ಆ ಪುಂಡರೀಕಾಕ್ಷನು ಪೀತಾಂಬರಧಾರಿಯಾಗಿ, ಕೌಸ್ತುಭರತ್ನವನ್ನು ಹಾಕಿಕೊಂಡು ಲಕ್ಷ್ಮೀದೇವಿಯೊಂದಿಗೆ ತನ್ನ ಮನೆಯ ಮಂಟಪದಲ್ಲಿ ಬಂದು ಕೂತದ್ದನ್ನು ನೋಡಿ ಹರ್ಷನಿರ್ಭರರಾಗಿ ಕಶ್ಯಪರು ಸ್ತೋತ್ರ ಮಾಡಿದರು.

**ಕಶ್ಯಪ:-**

**ನಮೋ ನಮಸ್ತೇ ಲಕ್ಷ್ಮೀಶ ಸರ್ವಜ್ಞ ಜಗದೀಶ್ವರ ।**
**ಸರ್ವಾತ್ಮನ್ ಸರ್ವದೇವೇಶ ಸೃಷ್ಟಿಸಂಹಾರ ಕಾರಕ ॥**
**ಧಾತ್ರೇ ವಿಧಾತ್ರೇ ವಿಶ್ವಾಯ ವಿಶ್ವರೂಪಾಯ ತೇ ನಮಃ ।**
**ನಾರಾಯಣಾಯ ಕೃಷ್ಣಾಯ ವಾಸುದೇವಾಯ ಶಾರ್ಙ್ಗಿಣೇ ॥**

ಕಶ್ಯಪರು ಮಾಡಿದ ಭಕ್ತಿಯುತವಾದ ಈ ಸ್ತೋತ್ರದಿಂದ ಪರಮಾತ್ಮನು ಪ್ರೀತ ಪ್ರಸನ್ನನಾಗಿ ನಿಮ್ಮ ಅಪೇಕ್ಷಿತವಾದ ವರವನ್ನು ಕೇಳಿರಿ. ನಿಮಗೆ ಕಲ್ಯಾಣವನ್ನು, ಸೌಭಾಗ್ಯವನ್ನು ಕರುಣಿಸಲಿಕ್ಕಾಗಿ ಬಂದಿದ್ದೇನೆ. ನಿಮ್ಮ ಮನೋರಥವನ್ನು ಪೂರ್ಣ ಮಾಡುತ್ತೇನೆ'' ಎಂದು ಹೇಳಿದ.

**ಕಶ್ಯಪ:-** ದೇವತೆಗಳ ಒಡೆಯ, ನೀನು ನನಗೆ ಮಗನಾಗಿ ಹುಟ್ಟು. ಬಲಿಯು ತನ್ನ ಮುಂಗೈ ಬಲದಿಂದ ಮೂರು ಲೋಕಗಳನ್ನೇ ಗೆದ್ದಿದ್ದಾನೆ. ಸ್ವರ್ಗದ ಅಧಿಪತಿಗಳಾಗಿದ್ದ ಇಂದ್ರನೇ ಮೊದಲಾದ ಸುರರು ತಮ್ಮ ಅಧಿಕಾರವನ್ನೂ ಕಳಕೊಂಡು ದುಃಖಕ್ಕೆ ಈಡಾಗಿದ್ದಾರೆ. ನೀನು ಇಂದ್ರನ ತಮ್ಮನಾಗಿ ಹುಟ್ಟಿ ಉಪೇಂದ್ರ ಎಂದು ಪ್ರಖ್ಯಾತನಾಗು. ಬಲಿಯನ್ನು ಗೆದ್ದು ನಾಕಿಗಳ ಶೋಕಕ್ಕೆ ಕೊನೆಯನ್ನುಂಟು ಮಾಡು.

ಆ ಕಶ್ಯಪರ ಬೇಡಿಕೆಗೆ ಅಸ್ತು ಎಂದು ಹೇಳಿದ ಈ ಜನಾರ್ದನನು ದೇವತೆಗಳು ಹೊಗಳುತ್ತಿರುವಾಗಲೇ ಅಂತರ್ಧಾನ ಹೊಂದಿದನು. ಅದೇ ವೇಳೆಯಲ್ಲಿ ಅದಿತಿ ದೇವಿ ಕಶ್ಯಪರಿಂದ ಗರ್ಭಧಾರಣೆ ಮಾಡಿದಳು. ಜಗದೀಶ್ವರನಾದ ಶ್ರೀಹರಿಯು ಅದಿತಿಯ ಗರ್ಭದಲ್ಲಿ ಪ್ರವೇಶಿಸಿದ. ಇದೇ ಕಾಲದಲ್ಲಿ ಬಲಿಚಕ್ರವರ್ತಿಯು ಎಲ್ಲ ಮಹರ್ಷಿಗಳಿಂದ ಒಡಗೂಡಿ ವಿಧಿಪೂರ್ವಕವಾಗಿ ಬಹುಕಾಲ ನಡೆಯುವ ಒಂದು ಯಜ್ಞವನ್ನು ನಡೆಸಲು ಪ್ರಾರಂಭಿಸಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ವಾಮನದೇವರ ಪ್ರಾದುರ್ಭಾವ. ಬಲಿಚಕ್ರವರ್ತಿಯ ಉಪಾಖ್ಯಾನ ಎಂಬ*
*ಎರಡುನೂರ ಇಪ್ಪತ್ತೊಂದನೇಯ ಅಧ್ಯಾಯ ಮುಗಿದುದು*



## ಬಲಿಚಕ್ರವರ್ತಿಯ ಯಜ್ಞದಲ್ಲಿ ವಾಮನನಿಂದ ಭೂಮಿಯ ಯಾಚನೆ ಎರಡು ಪಾದದಿಂದ ಮೂರು ಲೋಕಗಳ ಆಕ್ರಮಣ. ಗಂಗೆಯ ಉತ್ಪತ್ತಿ

ಅಧ್ಯಾಯ - ೨೨೨

**ಮಹಾದೇವ:-** ಒಂದು ಸಾವಿರ ವರುಷದ ಬಳಿಕ ಅದಿತಿಯು ಪೂರ್ಣ ಚಂದ್ರನಂತೆ ಕಾಂತಿಸಂಪನ್ನನೂ, ಕೋಟಿ ಮನ್ಮಥನಂತೆ ಸುಂದರನೂ ಆದ ಕುಳ್ಳ ದೇಹದ ವಾಮನ ರೂಪಿಯಾದ ಶ್ರೀಹರಿಗೆ ಜನ್ಮವಿತ್ತಳು. ವಟುವೇಷಧರನಾದ ಆ ವಾಮನನಿಗೆ ಎಲ್ಲ ಬ್ರಹ್ಮರ್ಷಿಗಳೂ, ಮಹರ್ಷಿಗಳೂ ಇಂದ್ರಾದಿ ದೇವತೆಗಳನ್ನು ಮುಂದು ಮಾಡಿಕೊಂಡು ನಮಸ್ಕಾರ ಮಾಡಿ ಸ್ತೋತ್ರ ಮಾಡಿದರು. ಅದರಿಂದ ಸಂತುಷ್ಟನಾದ ವಾಮನ ನಿಮಗಾಗಿ ನಾನು ಏನು ಮಾಡಬೇಕು? ಎಂದು ಕೇಳಿದ. ಆಗ ದೇವತೆಗಳು ಕರ ಜೋಡಿಸಿ ಬಿನ್ನವಿಸಿದರು.

**ದೇವತೆಗಳು:-** ಮಧುಸೂಧನ, ಈಗ ಬಲಿರಾಜನು ಯಜ್ಞ ಮಾಡುತ್ತಿದ್ದಾನೆ. ಯಜ್ಞ ದೀಕ್ಷಿತನಾಗಿ ಕುಳಿತುಕೊಂಡಾಗ ಯಾವುದಕ್ಕೂ ಅವನು ''ಇಲ್ಲ. ಕೊಡುವದಿಲ್ಲ. ಆಗುವದಿಲ್ಲ. ಕೂಡದು, ನೀಡಲಾರೆ.'' ಎಂದು ಎನ್ನಲಾರ. ಆದ್ದರಿಂದ ಈಗಲೇ ನೀನು ಅವನ ಬಳಿಗೆ ಹೋಗು. ''ಮೂರು ಲೋಕಗಳನ್ನು ಕೊಡು'' ಎಂದು ಯಾಚಿಸು. ಅವನಿಂದ ದಾನ ತೆಗೆದುಕೊಂಡು ನಮಗೆ ನೀನು ಅದನ್ನು ಕೊಡು.

ದೇವತೆಗಳ ಸಲಹೆಯಂತೆ ವಾಮನ ಅಲ್ಲಿಂದ ಹೊರಟ. ಬಲಿಚಕ್ರವರ್ತಿಯ ಯಜ್ಞ ಮಂಟಪಕ್ಕೆ ಆಗಮಿಸಿದ ಆ ಎಲ್ಲ ಸುರೇಶ್ವರರೊಂದಿಗೆ ಯಜ್ಞವಾಟದಲ್ಲಿ ಎಂಟು ಜನ ಋಷಿ

ಪುಂಗವರೊಡನೆ ಆಸೀನನಾಗಿದ್ದ ಬಲಿರಾಜ. ವಾಮನನು ತನ್ನಲ್ಲಿಗೆ ನಡೆದು ಬಂದುದನ್ನು ನೋಡಿದ. ಸ್ವಾಗತಕ್ಕಾಗಿ ಎದ್ದು ನಿಂತ ದೈತ್ಯರಾಜ. ತನ್ನಲ್ಲಿಗೆ ಐತಂದ ಅತಿಥಿ ಬೇರೆ ಯಾರೂ ಆಗಿರದೆ ಸಾಕ್ಷಾತ್ ವಿಷ್ಣುವೇ ಎಂಬುದು ವೇದ ಪುರಾಣ ಇತಿಹಾಸಗಳನ್ನು ಓದಿ ತಿಳಿದು ಬಲ್ಲ ಬಲಿರಾಜನಿಗೆ ವಿದಿತವಾಯಿತು. ಆದುದರಿಂದಲೇ ಅವನು ವಿಧಿಪೂರ್ವಕವಾಗಿ ವಾಮನನನ್ನು ಪೂಜಿಸಿದ. ಹೂವಿನ ಹಾಸಿನ ಮೇಲೆ ಕುಳ್ಳಿರಿಸಿದ. ಅಡಿದಾವರೆಗಳ ಮುಂದೆ ಅಡ್ಡ ಬಿದ್ದು ನಮಸ್ಕರಿಸಿದ. ಕೊರಳು ತುಂಬಿ ಗದ್ಗದ ಕಂಠದಿಂದ ನುಡಿದ.

**ಬಲಿರಾಜ:-** ವಿಪ್ರೇಂದ್ರ, ನಿನ್ನನ್ನು ಪೂಜೆ ಮಾಡಿ ನಾನು ಧನ್ಯನಾದೆ. ನನ್ನ ಬಾಳು ಸಾರ್ಥಕವಾಯಿತು. ನಾನು ಇಂದು ಕೃತಕೃತ್ಯ. ನೀನು ಇಲ್ಲಿ ಬಂದ ಉದ್ದೇಶ ಏನು ತಿಳಿಸು. ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ವೇದಶಾಸ್ತ್ರವನ್ನು ಚೆನ್ನಾಗಿ ಬಲ್ಲೆ. ನಿನಗೆ ಪ್ರಿಯವಾದುದನ್ನು ನಾನು ಏನು ಮಾಡಲಿ ಹೇಳು? ನಿನಗೆ ನಾನು ಏನು ನೀಡಲಿ? ಯಾವ ಸೇವೆ ಮಾಡಲಿ? ಯಾವ ವಸ್ತುವನ್ನು ಕೊಡಲಿ? ಹೇಳು? ಬೇಗ ಆಜ್ಞೆ ಮಾಡು.

**ವಾಮನ:-** ರಾಜೇಂದ್ರ, ನಾನು ಬಂದ ಕಾರಣ ಹೇಳುತ್ತೇನೆ ಕೇಳು. ನನಗೆ ಯಜ್ಞ ಮಾಡಲಿಕ್ಕಾಗಿ ಭೂಮಿ ಬೇಕಾಗಿದೆ. ಭೂದಾನವನ್ನು ಮಾಡು. ನನಗೆ ಭೂದಾನವನ್ನು ನೀಡು. ನನ್ನ ಕಾಲಿನಿಂದ ಅಳೆದು ಮೂರು ಅಡಿಗಳನ್ನು ಇಡುವಷ್ಟು ಪೊಡವಿಯನ್ನು ದಾನ ನೀಡು. ನನಗೆ ಹೆಚ್ಚಿಗೆ ಏನೂ ಬೇಕಾಗಿಲ್ಲ. ಎಲ್ಲ ದಾನಗಳಲ್ಲಿಯೂ ಭೂದಾನವು ಸರ್ವ ಶ್ರೇಷ್ಠ. ಕಡು ಬಡವನಾದ ಭೂಸುರನಿಗೆ ಬೆರಳಿನಷ್ಟಾದರೂ ಭೂಮಿಯನ್ನು ದಾನ ಕೊಟ್ಟರೂ ದಾನಿ ಮನುಷ್ಯನು ದೊರೆಯಾಗಿ ಜನಿಸುತ್ತಾನೆ. ಮಾನವ ಜನ್ಮದಲ್ಲಿ ಭೂಮಿದಾನಕ್ಕೆ ಸಮಾನವಾದ ಪವಿತ್ರದಾನವಿಲ್ಲ. ಧರಿಣಿಯ ದಾನವನ್ನು ನೀಡಿದವನೂ ಸ್ವೀಕರಿಸುವವನೂ ಇಬ್ಬರೂ ಪುಣ್ಯಭಾಗಿಗಳು. ಮರಣಾನಂತರ ಸ್ವರ್ಗಗಾಮಿಗಳು. ಆದುದರಿಂದ ಮಹಾರಾಜ, ನನ್ನ ಅಡಿಗಳಿಂದ ಅಳೆದ ಮೂರು ಪಾದ ಪರಿಮಿತವಾದ ಪೃಥ್ವಿಯನ್ನು ದಾನಮಾಡು. ಈ ಮೂರು ಪಾದ ಭೂಮಿಯ ದಾನವೇ ಮುಂದೆ ನಿನಗೆ ಮೂರು ಲೋಕ ಪ್ರದಾನರೂಪವಾಗಿ ಫಲಿಸುವದು.''

ಇದನ್ನು ಕೇಳಿ ಬಲಿರಾಜನ ಹೃದಯದಲ್ಲಿ ಹಿಗ್ಗು. ಕಣ್ಣಿನಲ್ಲಿ ತೃಪ್ತಿ. ಮುಖದಲ್ಲಿ ಪ್ರಸನ್ನತೆ. ಆ ವಟು ವಾಮನನಿಗೆ ಭೂಮಿಯ ದಾನವನ್ನು ಮಾಡುವ ಸಂಕಲ್ಪವನ್ನು ಮನದಲ್ಲಿಯೇ ಮಾಡಿದ.

ಅದನ್ನು ಕಂಡು ಪುರೋಹಿತರಾದ ಶುಕ್ರಾಚಾರ್ಯರು ಅವಸರದಿಂದ ಮುಂದೆ ಬಂದು ರಾಜನನ್ನು ತಡೆದು ನಿಲ್ಲಿಸಿ ನುಡಿದರು. ''ಬಲಿರಾಜ, ಇಲ್ಲಿ ನಿನ್ನ ಬಳಿಗೆ ಮೂರು ಅಡಿ ಭೂಮಿ ಬೇಡ ಬಂದ ವಾಮನ ಸಾಮಾನ್ಯವಿಪ್ರನಲ್ಲ. ಸಾಕ್ಷಾತ್ ವಿಷ್ಣು. ದೇವತೆಗಳು ಅವನನ್ನು ಬಿನ್ನವಿಸಿದ್ದಾರೆ. ಅವರ ಅಪೇಕ್ಷೆಯನ್ನು ಪೂರೈಸಲಿಕ್ಕಾಗಿ ಈ ವಿಷ್ಣು ವಟುವೇಷದಿಂದ ನಿನ್ನ ಬಳಿ ಬಂದಿದ್ದಾನೆ. ನಿನ್ನನ್ನು ವಂಚಿಸಿ ಈ ಭೂಮಿಯನ್ನೆಲ್ಲ ಸೆಳೆದುಕೊಂಡು ಹೋಗಲಿಕ್ಕಾಗಿ ಈ ತನ್ನ ಬೇಡಿಕೆಯನ್ನು ನಿನ್ನ ಮುಂದೆ ಇಟ್ಟಿದ್ದಾನೆ. ಆದ್ದರಿಂದ ಅವನಿಗೆ ಭೂಮಿಯನ್ನು ದಾನ ನೀಡಬೇಡ. ನನ್ನ ಮಾತನ್ನು ಕೇಳು.''

ಇದನ್ನು ಕೇಳಿ ಬಲಿಚಕ್ರವರ್ತಿಯು ನಕ್ಕು ದಿಟ್ಟತನದಿಂದ ತನ್ನ ಕುಲಗುರು ಶುಕ್ರಾಚಾರ್ಯರನ್ನು ಕುರಿತು ನುಡಿದ.

**ಬಲಿಚಕ್ರವರ್ತಿ:-** ಗುರುಗಳೇ, ಇವನು ಸಾಕ್ಷಾತ್ ವಿಷ್ಣುವೇ ಆಗಿದ್ದರೆ ನಾನು ಧನ್ಯ. ಕೃತಾರ್ಥ. ನಾನು ಇಷ್ಟು ದಿನ ಯಾವ ಕೆಲಸ ಮಾಡಿದರೂ, ''ವಿಷ್ಣು ಪ್ರೇರಣಯಾ, ವಿಷ್ಣು ಪ್ರೀತ್ಯರ್ಥಂ'' ಎಂಬ ಸಂಕಲ್ಪ ಪೂರ್ವಕವಾಗಿಯೇ ಮಾಡುತ್ತಿದ್ದೆ. ಅಂಥ ಸರ್ವ ಜಗತ್ತಿನ ಒಡೆಯನಾದ ವಿಷ್ಣುವು ನನ್ನ ಮನೆಯವರೆಗೆ ಬರಬೇಕಾದರೆ ನಾನು ಎಷ್ಟು ಪುಣ್ಯ ಮಾಡಿರಬಹುದು? ಆದುರಿಂದ ಆ ಮಹಾವಿಷ್ಣುವು ಕೇಳಿದರೆ, ನನ್ನ ಜೀವವನ್ನೇ ನಾನು ಕೊಡಬಲ್ಲೆ. ವಿಷ್ಣು ಬೇಡಿದ್ದನ್ನು ಕೊಡುವುದರಲ್ಲಿಯೇ ನನಗೆ ಮಹದಾನಂದ. ಆದುದರಿಂದ ನಾನು ಇವನಿಗೆ ಮೂರು ಪಾದ ಪರಿಮಿತ ಭೂಮಿಯನ್ನು ಮಾತ್ರ ಏಕೆ? ನನ್ನ ವಶದಲ್ಲಿ ಇರುವ ಮೂರು ಲೋಕಗಳನ್ನೇ ಆನಂದದಿಂದ ನೀಡುತ್ತೇನೆ.

ಹೀಗೆ ನುಡಿದು ಆ ದೈತ್ಯಸಾರ್ವಭೌಮನು ಭಕ್ತಿಯಿಂದ ಭಗವಂತನ ಅಡಿದಾವರೆಗಳನ್ನು ತೊಳೆದ. ಅವನು ಬೇಡಿದಷ್ಟು ಭೂಮಿಯನ್ನು ಸಂಕಲ್ಪ ಪೂರ್ವಕವಾಗಿ ದಾನ ಕೊಟ್ಟು ನೀರು ಬಿಟ್ಟ. ವಟು ವಾಮನನಿಗೆ ಪ್ರದಕ್ಷಿಣೆ ಹಾಕಿದ. ಕೈಯಲ್ಲಿ ದಕ್ಷಿಣೆ ಇಟ್ಟ. ಸಾಷ್ಟಾಂಗ ನಮಸ್ಕಾರ ಮಾಡಿದ. ಭಗವಾನ್ ಮಹಾವಿಷ್ಣುವೇ ಸ್ವಯಂ ಬಂದು ತನ್ನಿಂದದಾನ ಸ್ವೀಕರಿಸಿದಾಗ ಅವನಿಗೆ ಪರಮಾನಂದವಾಗಿದ್ದಿತು. ಅವನ ಅಂತರಂಗದ ತುಂಬ ಸಂತಸ ತುಂಬಿತ್ತು. ಆನಂದದಿಂದ ಕೈ ಜೋಡಿಸಿ, ಕೊರಳು ಬಿಗಿದು ಕೃತಜ್ಞತೆಯಿಂದ ನುಡಿದ ಆ ಬಲಿರಾಜ.

**ಬಲಿ:-** ಬ್ರಾಹ್ಮಣೋತ್ತಮ, ನಿನಗೆ ಈ ಭೂಮಿಯನ್ನು ನೀಡಿ ನಾನು ಧನ್ಯನಾದೆ. ಇಂದು ನಾನು ಕೃತಕೃತ್ಯ. ನಿನಗೆ ಇಷ್ಟವಾದ ಈ ಭೂಮಿಯನ್ನು ಸ್ವೀಕರಿಸು.

**ವಾಮನ:-** ಮಹಾರಾಜ, ತುಸು ನಿಲ್ಲು. ನಿನ್ನ ಕಣ್ಣನೆದುರೇ ನೀನು ಕೊಟ್ಟ ಭೂಮಿಯನ್ನು ಮೂರು ಹೆಜ್ಜೆ ಅಳೆದುಕೊಳ್ಳುತ್ತೇನೆ.

ಹೀಗೆ ಹೇಳಿ ಕುಳ್ಳಗೆ ಹಾಗೂ ತಳ್ಳಗೆ ಇದ್ದ ಆ ವಾಮನಮೂರ್ತಿಯು ಒಮ್ಮೆಲೆ ಬೆಳೆಯತೊಡಗಿತು. ತ್ರಿವಿಕ್ರಮ ರೂಪವನ್ನು ಧರಿಸಿ ತನ್ನ ವಿರಾಟ್ ಪಾದದಿಂದ ಸಮಗ್ರ ಭೂಮಂಡಲವನ್ನೆಲ್ಲ ಅಳೆದ. ಐವತ್ತು ಕೋಟಿ ಯೋಜನೆ ವಿಸ್ತಾರವಾದ ಎಲ್ಲ ಕಾಡು ನಾಡು ಸಮುದ್ರ ದ್ವೀಪ ದೇವ ಮಾನವ ದಾನವ ಬೆಟ್ಟ ಬಯಲು ನಗರ ಗ್ರಾಮ ಸಹಿತವಾದ ಸಮಗ್ರ ಪೃಥ್ವೀ ಮಂಡಲವನ್ನೆಲ್ಲವನ್ನೂ ಆ ತ್ರಿವಿಕ್ರಮನು, ತನ್ನ ಒಂದೇ ಪಾದದಿಂದ ಅಳೆದು ಆಕ್ರಮಿಸಿದ. ಮತ್ತು ಆ ಬಲಿ ಚಕ್ರವರ್ತಿಯನ್ನು ಕುರಿತು ''ಈ ಒಂದು ಪಾದದಷ್ಟು ಭೂಮಿಯನ್ನು ನಾನು ಅಳೆದು ಕೊಂಡದ್ದು ಸರಿಯಷ್ಟೆ?'' ಎಂದು ಕೇಳಿದ.

ದೇವತೆಗಳ ಹಾಗೂ ಋಷಿಗಳ ಹಿತಕ್ಕಾಗಿ ಶ್ರೀಹರಿಯು ಅಂಗೀಕರಿಸಿದ ಆ ತ್ರಿವಿಕ್ರಮ ರೂಪವನ್ನು ನೋಡಲು ಬ್ರಹ್ಮರುದ್ರಾದಿ ದೇವತೆಗಳಿಗೂ ಕೂಡ ಸಾಧ್ಯವಾಗಲಿಲ್ಲ. ತ್ರಿವಿಕ್ರಮ ದೇವರ ಆ ಒಂದು ಪಾದವು ಸಮಗ್ರ ಭೂಮಂಡಲವನ್ನೆಲ್ಲ ಅಳೆದು ಆಕ್ರಮಿಸಿ ಇನ್ನೂ ನೂರು ಯೋಜನ ಉಳಿಯಿತು. ಬಲಿರಾಜನಿಗೆ ಇದನ್ನೆಲ್ಲ ನೋಡಲು ವಾಮನ ದಿವ್ಯ ಚಕ್ಷುಸ್ಸನ್ನು ನೀಡಿದ. ಬ್ರಹ್ಮಾಂಡ ವ್ಯಾಪಿಯಾದ ತನ್ನ ತ್ರಿವಿಕ್ರಮ ರೂಪವನ್ನು ತೋರಿಸಿದ. ಪರಮಾತ್ಮನು ಕೊಟ್ಟ ಆ ದಿವ್ಯ ದೃಷ್ಟಿಯಿಂದ ವಾಮನರೂಪಿಯಾದ ವಿಷ್ಣುವಿನ ವಿಶ್ವರೂಪವನ್ನು ಕಂಡು ಆನಂದ ತುಂದಿಲನಾದ ಆ ದೈತ್ಯೇಂದ್ರ. ಆನಂದ ಭಾಷ್ಪಗಳು ಅವನು ಕಂಗಳಿಂದ ಧಾರಾಕಾರವಾಗಿ ಹರಿಯ ತೊಡಗಿದವು. ಆ ತ್ರಿವಿಕ್ರಮದೇವರನ್ನು ಕಣ್ತುಂಬ ನೋಡಿ ಆನಂದದಿಂದ ಸ್ತೋತ್ರ ಮಾಡಿ ಗದ್ಗದ ಕಂಠದಿಂದ ನುಡಿದ.

**ಬಲಿರಾಜ:-** ಸ್ವಾಮಿ, ನಿನ್ನ ಈ ವಿರಾಟ್ ರೂಪವನ್ನು ನೋಡಿ ನಾನು ಇಂದು ಧನ್ಯನಾದೆ. ನನ್ನ ಹುಟ್ಟು ಸಾರ್ಥಕವಾಯಿತು. ನನ್ನ ಜೀವನ ಸಫಲವಾಯಿತು. ನನ್ನ ಅಧೀನದಲ್ಲಿರುವ ಮೂರು ಲೋಕಗಳನ್ನೆಲ್ಲ ನೀನು ಸ್ವೀಕರಿಸು.

ಅನಂತರ ಸರ್ವೇಶ್ವರನಾದ ವಾಮನನು ತನ್ನ ಒಂದು ಪಾದದಿಂದಲೇ ಬ್ರಹ್ಮಾಂಡದ ಅಗಲವನ್ನು ಅಳೆದು ಆಕ್ರಮಿಸಿ ತನ್ನ ಎರಡನೇಯ ಪಾದವನ್ನು ಆ ಬ್ರಹ್ಮಾಂಡದ ಎತ್ತರವನ್ನು ಅಳೆದುಕೊಳ್ಳಲಿಕ್ಕಾಗಿ ಮೇಲೆ ಮುಖ ಮಾಡಿ ಇರಿಸಿದ. ಆಗ ಆ ವಾಮನ ದೇವರ ಎಡಗಾಲು ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹೋಲೋಕ. ಜನೋಲೋಕ, ತಪೋಲೋಕ, ಸತ್ಯಲೋಕವೆಂದು ಹೆಸರಾದ ಬ್ರಹ್ಮಲೋಕವನ್ನು ದಾಟಿ ಹೋಯಿತು. ನಕ್ಷತ್ರ, ಗ್ರಹ ಹಾಗೂ ಎಲ್ಲ ಊರ್ಧ್ವಲೋಕ, ದೇವತೆಗಳು ಸಹಿತವಾಗಿ ಸಕಲಬ್ರಹ್ಮಾಂಡವೇ ಆ ವಾಮದೇವರ ಎಡಗಾಲಿನ ಅಳತೆಯಲ್ಲಿ ಅಡಗಿ ಸತ್ಯಲೋಕದ ಮೇಲೆ ಆ ಪಾದವು ಚಾಚಿತು. ಆಗ ಅದನ್ನು ಕಂಡು ಸತ್ಯ ಲೋಕದ ಒಡೆಯನಾದ ಬ್ರಹ್ಮದೇವನು ಶಂಖ, ಚಕ್ರ, ಪದ್ಮಾದಿಗಳಿಂದ ಚಿನ್ಹಿತವಾದ ಆ ದೇವದೇವೋತ್ತಮನ ಅಡಿದಾವರೆಯನ್ನು ಹರ್ಷನಿರ್ಭರನಾಗಿ ತನ್ನ ಕಮಂಡಲದೊಳಗಿನ ನೀರಿನಿಂದ ಅತ್ಯಂತ ಭಕ್ತಿಯಿಂದ ತೊಳೆದು ಪಾದಪೂಜೆ ಮಾಡಿದ. ವಿಷ್ಣುವಿನ ಪ್ರಭಾವದಿಂದ ಆ ನೀರು ಅಕ್ಷಯವಾಯಿತು. ಮತ್ತು ಪರಮ ಪವಿತ್ರವಾಯಿತು. ಬಳಿಕ ವಿಷ್ಣುವಿನ ಪಾದೋದಕವಾದ ಆ ತೀರ್ಥಜಲವು ಬ್ರಹ್ಮಲೋಕದಿಂದ ಕೆಳಗೆ ಬಿದ್ದು ಜಗತ್ತನ್ನು ಪವಿತ್ರ ಮಾಡಲಿಕ್ಕಾಗಿ ಮೇರುಪರ್ವತದ ಮಹೋಚ್ಚ ಶಿಖರದ ಮೇಲೆ ಅಪತಿತವಾಯಿತು. ಅಲ್ಲಿಂದ ನಾಕೂ ಕಡೆ ಕವೊಲೊಡೆದು ನಾಕು ನದಿಯಾಗಿ ಹರಿಯಿತು. ಆ ನಾಕೂ ನದಿಗಳು ಜಗತ್ತಿನಲ್ಲಿ ಸೀತಾ, ಅಲಕನಂದಾ, ಚಕ್ಷು, ಭದ್ರಾ ಎಂಬ ಹೆಸರಿನಿಂದ ಲೋಕದಲ್ಲಿ ಪ್ರಖ್ಯಾತವಾದವು. ಅವುಗಳಲ್ಲಿ ಅಲಕನಂದಾ ಎಂಬ ನದಿಯು ಮೇರುವಿನ ದಕ್ಷಿಣ ದಿಶೆಯಲ್ಲಿ ಹೊಮ್ಮಿ ಹರಿದು ತ್ರಿಧಾರಾ ತ್ರಿಪಥಗಾ ತ್ರಿಸ್ರೋತ್ರಾ ಎಂದು ಪ್ರಸಿದ್ಧವಾಯಿತು. ಆ ಮೇರು ಪರ್ವತದಿಂದ ಕೆಳಗೆ ಹರಿದು ಬಂದ ಅದೇ ನದಿಯು ಮಂದಾಕಿನೀ ಭೋಗವತೀ ಎಂದೂ ಬೇರೆ ಬೇರೆ ಹೆಸರುಗಳನ್ನು ಪಡೆಯಿತು. ಮಧ್ಯದಲ್ಲಿಯ ಲೋಕಗಳನ್ನೆಲ್ಲ ಪಾವನ ಮಾಡಲು ಹರಿದ ಆ ನದಿಯು ಅತಿ ವೇಗದಿಂದ ಪ್ರವಹಿಸಿ ಗಂಗಾ ಎಂದು ಹೆಸರಾಯಿತು.

ಹೀಗೆ ಮೇರು ಗಿರಿಯ ತುದಿ ಮೊದಲ ಮಧ್ಯಭಾಗಗಳಲ್ಲಿ ಹೊಮ್ಮಿ ಚಿಮ್ಮಿ ಹರಿಯುತ್ತಿರುವ ಆ ಪವನ ಪಯಸ್ವಿನಿಯನ್ನು ನಾನು ನನ್ನ ಆತ್ಮ ಪಾವಿತ್ರ್ಯದ ಸಲುವಾಗಿ ಶಿರಸ್ಸಿನಲ್ಲಿ ಧಾರಣ ಮಾಡಿದೆನು. ಶಿವ ಎಂದರೆ ಕಲ್ಯಾಣವನ್ನು ಉಂಟು ಮಾಡುವ ಆ ಪುಣ್ಯ ತೀರ್ಥವನ್ನು ಒಂದು ಸಾವಿರ ವರ್ಷ ನಾನು ನನ್ನ ತಲೆಯಲ್ಲಿ ಹೊತ್ತು ನಿಂತದ್ದರಿಂದ ಶಿವತ್ವವನ್ನು ಹೊಂದಿದೆ.

**"ದಿವ್ಯ ವರ್ಷ ಸಹಸ್ರಂತು ಧೃತ್ವಾ ಗಂಗಾಜಲಂ ಶುಭಂ ।**
**ಶಿವತ್ವಮಾಗಮಂ ದೇವಿ ಸರ್ವಲೋಕೇಷು ಪೂಜಿತಃ ॥**

ಆ ಗಂಗಾಜಲವನ್ನು ಒಂದು ಸಾವಿರ ವರ್ಷ ಶಿರಸಾ ಧಾರಣ ಮಾಡಿದ್ದರಿಂದ ನಾನು ಶಿವತ್ವವನ್ನು ಹೊಂದಿ ಲೋಕ ಪೂಜಿತನಾದೆ. ವಿಷ್ಣು ಪಾದದಿಂದ ಹುಟ್ಟಿದ ಈ ಗಂಗೆಯ ನೀರನ್ನು ತಲೆಯ ಮೇಲೆ ಪ್ರೋಕ್ಷಣ ಮಾಡಿಕೊಂಡವನು ಜಗತ್‌ಪೂಜ್ಯನಾಗುವನು.

ಸಾವಿರಾರು ಯೋಜನೆಗಳ ದೂರ ಇದ್ದವನು ಕೂಡ 'ಗಂಗಾ, ಗಂಗಾ' ಎಂದು ನುಡಿದರೆ ಎಲ್ಲ ಪಾಪಗಳಿಂದ ಮುಕ್ತನಾಗುವನು ಮತ್ತು ವಿಷ್ಣುಪದವನ್ನು ಹೊಂದುವನು.

ಅನಂತರ ಭಗೀರಥ ಮಹಾರಾಜನು ಮತ್ತು ಗೌತಮ ಋಷಿಯು ನನ್ನನ್ನು ಕುರಿತು ಗಂಗೆಯ ಸಲುವಾಗಿ ತಪಸ್ಸನ್ನು ಮಾಡಿದರು. ನನ್ನ ಜಟಾಜೂಟದಲ್ಲಿರುವ ಗಂಗೆಯನ್ನು ತಮಗಾಗಿ ಹೊರಗೆ ಬಿಡಬೇಕೆಂದು ಪ್ರಾರ್ಥನೆ ಮಾಡಿದರು. ಎಲ್ಲ ಜನರ ಹಿತಕ್ಕಾಗಿ ನಾನು ಸಾವಿರ ವರ್ಷಗಳಿಂಂದ ನನ್ನ ತಲೆಯಲ್ಲಿ ತುಂಬಿಕ್ಕೊಂಡ ಆ ತೀರ್ಥದ ತೋಯವನ್ನು ಹೊರಗೆ ಬಿಟ್ಟೆ. ಭಗೀರಥ ಮತ್ತು ಗೌತಮರಿಗೆ ಕೊಟ್ಟೆ. ಭಗೀರಥನ ಬೆನ್ನು ಹತ್ತಿ ಹೋದ ನದಿಯು ಭಾಗೀರಥಿ ಎಂದು ಹೆಸರಾಯಿತು. ಗೌತಮ ಮುನಿಯನ್ನು ಹಿಂಬಾಲಿಸಿ ಹೋದ ಹೊಳೆಯು ಗೌತಮೀ ಗೋದಾವರೀ ಎಂದೂ ಹೆಸರಾಯಿತು. ಸಂದರ್ಭವಶಾತ್ ಈಗ ನಾನು ನಿನಗೆ ಪಾವನ ನದಿಯಾದ ಗಂಗೆಯ ಉಗಮಾಗಮಗಳ ಕಥೆಯನ್ನು ತಿಳಿಸಿದ್ದೇನೆ.

ಅನಂತರ ವಾಮನ ರೂಪಿಯಾದ ನಾರಾಯಣನು ಬಲಿಚಕ್ರವರ್ತಿಯ ಈ ಉದಾರವಾದ ದಾನ ಧರ್ಮದಿಂದ ಸಂತೃಪ್ತನೂ ಸಂಪ್ರೀತನೂ ಆಗಿ ಅವನಿಗೆ ರಸಾತಳದ ಅಧಿಪತ್ಯವನ್ನು ದಯಪಾಲಿಸಿದ. ಮತ್ತು ಭಕ್ತವತ್ಸಲನಾದ ಆ ಭಗವಂತ ಆ ಬಲಿಚಕ್ರವರ್ತಿಯನ್ನು ಎಲ್ಲ ದಾನವರಿಗೂ ಹಾಗೂ ಸರ್ಪಗಳಿಗೂ ಜಲಚರ ಪ್ರಾಣಿಗಳಿಗೂ ಅಧೀಶ್ವರನನ್ನಾಗಿ ನಿಯೋಜಿಸಿದ. ಇತ್ತ ವಟುವೇಷದಿಂದ ಬಲಿಚಕ್ರವರ್ತಿಯ ವಶದಲ್ಲಿರುವ ಭೂಮಿಯನ್ನೆಲ್ಲ ವಶಪಡಿಸಿ ದೇವೇಂದ್ರನಿಗೆ ದಯಪಾಲಿಸಿದ. ಎಲ್ಲ ದೇವತೆಗಳೂ ಗಂಧರ್ವರೂ ಋಷಿಗಳೂ ದಿವ್ಯವಾದ ತಮ್ಮ ಸ್ತವನಗಳಿಂದಲೂ, ಕವನಗಳಿಂದಲೂ ಆ ಭಗವಂತನನ್ನು ಹೊಗಳಿ ಹಾಡಿದರು. ಅನಂತರ ಆ ತ್ರಿವಿಕ್ರಮನು ತನ್ನ ವಿರಾಟ್ ರೂಪವನ್ನು ಉಪಸಂಹರಿಸಿದ ದೇವತೆಗಳ ದೃಷ್ಟಿಗೆ ಗೋಚರನಾಗುವಂತೆ. ಹೀಗೆ ಎಲ್ಲ ಸುರಸಮೂಹದಿಂದ ಸಮಭ್ಯರ್ಚಿತನಾಗಿ ಆ ಹರಿಯ ಅಂತರ್ಧಾನ ಹೊಂದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಬಲಿಚಕ್ರವರ್ತಿಯ ಯಜ್ಞದಲ್ಲಿ ವಾಮನನಿಂದ ಭೂಮಿಯ ಯಾಚನೆ*
*ಎರಡು ಪಾದದಿಂದ ಮೂರು ಲೋಕಗಳ ಆಕ್ರಮಣ. ಗಂಗೆಯ ಉತ್ಪತ್ತಿ ಎಂಬ*
*ಎರಡುನೂರ ಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*

—o—

**ಮಹಾದೇವ:-** ಪೂರ್ವಕಾಲದಲ್ಲಿ ಭೃಗು ಋಷಿಯ ಮಗನಾದ ಜಮದಗ್ನಿ ಋಷಿಯು ದೇವ ಗಂಗೆಯ ತಡಿಯಲ್ಲಿ ನಿಂತು ಒಂದು ಸಾವಿರ ವರ್ಷ ತಪಸ್ಸು ಮಾಡಿದ ಇಂದ್ರನನ್ನು ಕುರಿತು. ವೇದವೇದಾಂತ ಹಾಗೂ ವೇದಾಂಗಗಳ ತಲಸ್ಪರ್ಶಿ ಜ್ಞಾನ, ಭಗವಂತನಲ್ಲಿಯೇ ಅವ್ಯಭಿಚರಿತವಾದ ಅನಂತ ಭಕ್ತಿ, ಅಮಪಮ ವೈರಾಗ್ಯ, ಮುಂತಾದ ಗುಣಗಳಿಂದ ಮಹಾಜ್ಞಾನಿ ಎನಿಸಿದ ಆ ಮುನೀಶ್ವರನು ಮಾಡಿದ ಉಗ್ರ ತಪೋನುಷ್ಠಾನದಿಂದ ಸುಪ್ರಸನ್ನನಾದ ದೇವೇಂದ್ರನು ಅವನಿಗೆ ಬಯಸಿದ ವರವನ್ನು ಕೇಳು ಎಂದು ಹೇಳಿದ.

ಆಗ ಜಮದಗ್ನಿಯು ಉತ್ಸಾಹಿತನಾಗಿ ವರವನ್ನು ಕೇಳಿಕೊಂಡ.

**ಜಮದಗ್ನಿ:-** ಮಹೇಂದ್ರ, ನೀನು ಪರಿತುಷ್ಟನಾಗಿದ್ದರೆ ನಿನ್ನ ಬಳಿಯಲ್ಲಿ ಇರುವ ಸುರಭಿ ಎಂಬ ಹಸುವನ್ನು ನನಗೆ ಕೊಡು. ಕಾಮಧೇನು ಎಂದು ಹೆಸರುಳ್ಳ ಆ ಸುರಭಿ, ಜನರು ಬಯಸಿದ್ದನ್ನು ನೀಡುವ ಸಾಮರ್ಥ್ಯ ಉಳ್ಳದ್ದು.

ದೇವೇಂದ್ರನು ಜಮದಗ್ನಿಯ ಅಪೇಕ್ಷೆಯಂತೆ ಕಾಮಧೇನುವನ್ನು ಅವನಿಗೆ ಕೊಟ್ಟು ಕರುಣಿಸಿದ. ಆದರಿಂದ ಪರಮ ಸಂತುಷ್ಟನಾದ ಜಮದಗ್ನಿ ಮಹರ್ಷಿಯು ಆ ಕಾಮಧೇನುವಿನ ಪ್ರಭಾವದಿಂದ ಕುಬೇರನಂತೆ ಐಶ್ವರ್ಯವನ್ನು ಹೊಂದಿ ಭೂಲೋಕದ ದೇವೇಂದ್ರನಂತೆ ವೈಭವ ಜೀವನವನ್ನು ನಡೆಸಿದ.

ರೇಣುಕನ ಮಗಳಾದ ರೇಣುಕಾ ರೂಪದಿಂದ ರತಿ. ಕಾಂತಿಯಿಂದ ಕಮಲಾದೇವಿ. ಪ್ರಭೆಯಿಂದ ನೆಲದಲ್ಲಿ ನಡೆದಾಡುವ ಮಿಂಚಿನ ಮೂರುತಿ. ಕಾಮಧೇನುವಿನ ಪುಣ್ಯದಿಂದ ಅಪಾರ ಐಶ್ವರ್ಯವನ್ನು ಹೊಂದಿದ ಆ ಜಮದಗ್ನಿ ಮುನಿಯನ್ನು ನೋಡಿ ರೇಣುಕ ತನ್ನ ರಮಣೀಯ ರೂಪವುಳ್ಳ ರೇಣುಕೆಯನ್ನು ಧಾರೆಯೆರೆದು ಕೊಟ್ಟ. ಧರ್ಮಾತ್ಮನಾದ ಜಮದಗ್ನಿ ಮಹಾಮುನಿ ಪೌಲೋಮಿಯೊಡನೆ ಪುರಂದರನಂತೆ ಕೆಲವು ವರ್ಷಸಂತಸದಿಂದ ಸಂಪನ್ನ ಜೀವನವನ್ನು ಬಾಳಿದ. ಧರ್ಮಿಷ್ಠನಾದ ಆ ಮಹಾಮುನಿ ಪುತ್ರಕಾಮೇಷ್ಟಿ ಎಂಬ ಯಜ್ಞವನ್ನು ಮಾಡಿದ. ಅದರಿಂದ ಸುಪ್ರೀತನಾದ ಸುರೇಶ್ವರ, ಮಹಾ ಪ್ರತಾಪ ಶಾಲಿಯಾದ ಪುತ್ರರತ್ನವನ್ನು ಕರುಣಿಸಿದ. ವಿಷ್ಣುವಿನ ಅಭಿನ್ನವಾದ ಅಂಶದಿಂದ ಒಡಗೂಡಿದ ಆ ಕುಮಾರ ಸರ್ವ ಲಕ್ಷಣಗಳಿಂದಲೂ ಸಂಪನ್ನ. ಅಜ್ಞನಾದ ಭೃಗುಮುನಿಗೆ ಸಾಕ್ಷಾತ್ ಮಹಾವಿಷ್ಣುವೇ ತನ್ನ ಮಗನ ಹೊಟ್ಟೆಯಿಂದ ತನಗೆ ಮೊಮ್ಮಗನಾಗಿ ಹುಟ್ಟಿ ಬಂದದ್ದು ಹೆಮ್ಮೆಗೆ ಕಾರಣವಾಗಿತ್ತು. ಹರ್ಷದ ಹೊನಲನ್ನೇ ಹೃದಯದಿಂದ ಹೊಮ್ಮಿಸಿತ್ತು. ಭೃಗುಮುನಿ ಆ ಜಮದಗ್ನಿ ಕುಮಾರನಿಗೆ ರಾಮ ಎಂದು ಸುಂದರವಾದ ಹೆಸರನ್ನು ಇಟ್ಟ. ಜಮದಗ್ನಿಯ ಮಗನಾದುದರಿಂದ ಜಾಮದಗ್ನ್ಯ ಎಂತಲೂ, ಭೃಗುಮುನಿಯ ಮೊಮ್ಮಗನಾದುದರಿಂದ ಭಾರ್ಗವ ಎಂತಲೂ ಅವನನ್ನು ಕರೆದರು. ಆ ಭಾರ್ಗವನಿಗೆ ಸಕಾಲದಲ್ಲಿ ಉಪನಯನವನ್ನು ಮಾಡಲಾಯಿತು. ಅವನಿಗೆ ಬಾರದ ವಿದ್ಯೆಯೇ ಇರಲಿಲ್ಲ. ತಿಳಿಯದ ಶಾಸ್ತ್ರಾರ್ಥ ಮತ್ತು ಶಸ್ತ್ರಾಸ್ತ್ರ ಇರಲಿಲ್ಲ. ಅವನೊಬ್ಬ ಸರ್ವಜ್ಞ.

ಕೆಲವು ದಿನಗಳ ಬಳಿಕ ಆ ಭಾರ್ಗವನು ತಪಸ್ಸನ್ನು ಆಚರಿಸಬೇಕು ಎಂದು ಶಾಲಿಗ್ರಾಮ ನಗರಕ್ಕೆ ತೆರಳಿದ. ಅಲ್ಲಿ ಬ್ರಹ್ಮರ್ಷಿಗಳಾದ ಕಶ್ಯಪರನ್ನು ಕಂಡು ಅವರಿಗೆ ನಮಸ್ಕರಿಸಿ ಪೂಜಿಸಿದ. (ಲೋಕವಿಡಂಬನಾರ್ಥವಾಗಿ) ಆ ರಾಮನು ಕಶ್ಯಪನಿಂದ ವೈಷ್ಣವ ಮಂತ್ರದ ಉಪದೇಶವನ್ನು ಪಡೆದು ಅನೇಕ ವರ್ಷಗಳ ವರೆಗೆ ಉಗ್ರವಾದ ತಪಸ್ಸನ್ನು ಮಾಡಿದ.

ಇತ್ತ ಜಮದಗ್ನಿ ಮಹರ್ಷಿಯು ತನ್ನ ಆಶ್ರಮದಲ್ಲಿ ನೆಲಸಿ ಅನೇಕ ಪುಣ್ಯಕರ್ಮಗಳನ್ನು ಆಚರಿಸಿದ. ಗಂಗಾತೀರದಲ್ಲಿದ್ದ ತನ್ನ ಪರ್ಣಕುಟೀರದ ಮುಂದೆ ದೊಡ್ಡ ಯಜ್ಞಮಂಟಪವನ್ನು ಹಾಕಿ ಅದರಲ್ಲಿ ಬಹುದ್ರವ್ಯ ಸಾಧ್ಯವಾದ ದೊಡ್ಡ ದೊಡ್ಡ ಯಜ್ಞಗಳನ್ನು ಸಾಧಿಸಿದ. ಕಾಮಧೇನುವಿನ ಪ್ರಸಾದದಿಂದ ಅವನಿಗೆ ಇಚ್ಛಾಮಾತ್ರದಿಂದಲೇ ಎಲ್ಲ ಸೀದಾ, ಸಾಮಗ್ರಿ, ಸಲಕರಣೆಗಳು ಸರಿಯಾಗಿ ತಾವಾಗಿ ದೊರಕುತ್ತಿದ್ದವು. ಇದರಿಂದ ವಿಪುಲ ದಾನ, ದಕ್ಷಿಣಾ ಪೂರ್ಣವಾದ ಮಹತ್ತರವಾದ ಯಜ್ಞಯಾಗಗಳೆಲ್ಲವೂ ಸಾಂಗವಾಗಿ ನೆರವೇರಿದವು.

ಒಂದು ದಿನ ಹೈಹಯ ರಾಜನಾದ ಕಾರ್ತವೀರ್ಯಾರ್ಜುನನು ಆ ಜಮದಗ್ನಿಯ ಆಶ್ರಮಕ್ಕೆ ಬಂದ. ಅವರಿಗೆ ನಮಸ್ಕಾರ ಮಾಡಿದ. ಕುಶಲ ಪ್ರಶ್ನೆಯನ್ನು ಕೇಳಿದ ಮತ್ತು ಆ ಮಹರ್ಷಿಗೆ ವಸ್ತ್ರ ಆಭರಣಗಳನ್ನು ನೀಡಿದ. ಜಮದಗ್ನಿ ಮಹರ್ಷಿಗಳು ತನ್ನ ಮನೆಗೆ ಬಂದ ಆ ರಾಜನನ್ನು ರಾಜೋಚಿತ ರೀತಿಯಲ್ಲಿಯೇ ಉಪಚರಿಸಿದರು. ಸೇನಾಸಹಿತನಾದ ಆ ಮಹಾರಾಜನಿಗೆ ಮೃಷ್ಟಾನ್ನ ಭೋಜನವನ್ನು ಮಾಡಿಸಿದರು. ಬಗೆಬಗೆಯ ಪಕ್ವಾನ್ನ, ಪಾನೀಯ, ಭಕ್ಷ್ಯ ಭೋಜ್ಯ ಎಲ್ಲವನ್ನೂ ಕಾಮಧೇನು ಮುನಿಯು ಕೇಳಿದ ಕೂಡಲೇ ಒದಗಿಸಿತು. ಅದೆಲ್ಲ ರಾಜಭೋಗವನ್ನು ಕಾರ್ತವೀರ್ಯಾಜುನನ ಪರಿವಾರಕ್ಕೂ ಅವನಿಗೂ ನೀಡಿ ಜಮದಗ್ನಿ ಮಹರ್ಷಿಗಳು ಎಲ್ಲರಿಗೂ ಯಥೇಚ್ಛವಾಗಿ ಉಣಿಸಿ ಬಡಿಸಿ ಕಳಿಸಿದರು. ಮಹರ್ಷಿಯು ತನಗೆ ನೀಡಿದ ರಾಜಭೋಗದ ವೈಭವದ ಸಾಮಗ್ರಿ ಎಲ್ಲವನ್ನು ಒದಗಿಸಿದ್ದು ಅವರ ಆಶ್ರಮದ ಅಂಗಳದಲ್ಲಿ ಇರುವ ಅಮರ ಲೋಕದ ಹಸು ಎಂದು ಮಹಾರಾಜನಿಗೆ ತಿಳಿದು ಬಂದಿತು. ಕಾಮಿತಾರ್ಥಗಳನ್ನೆಲ್ಲ ಕರೆಯುವ ಆ ಕಾಮಧೇನುವಿನ ಬಗೆಗೆ ಕೊನೆಯಿಲ್ಲದ ಕೌತುಕ ಕಾರ್ತವೀರ್ಯಾರ್ಜುನನಲ್ಲಿ ಉಂಟಾಯಿತು. ಕೊನೆಗೆ ತನಗೆ ಅದನ್ನು ಕೊಡಬೇಕು ಎಂದು ಜಮದಗ್ನಿ ಮುನಿಯನ್ನು ಬಂದು ಕೇಳಿದ.

**ಕಾರ್ತಿಯಾರ್ಜುನ:-** ಬ್ರಾಹ್ಮಣ, ನಿನ್ನ ಮನೆಯಲ್ಲಿ ಆಕಳು ಇದೆ. ಅದು ಬೇಡಿದ್ದನ್ನೆಲ್ಲ ನೀಡುವ ವಿಚಿತ್ರವಾದ ಹಸು. ನಿನಗೆ ನಾನು ಒಳ್ಳೆ ಹಾಲು ಹಿಂಡುವ ಸಾವಿರ ಹಸುಗಳನ್ನು ಕೊಡುತ್ತೇನೆ. ಇದನ್ನು ನನಗೆ ಕೊಟ್ಟು ಬಿಡು.

**ಜಮದಗ್ನಿ:-** ಮಹಾರಾಜ, ಇದು ಕೊಡುವ ಆಕಳವಲ್ಲ. ಇದು ಸ್ವರ್ಗದ ಹಸು. ಇದನ್ನು ಕೊಟ್ಟು ಬಿಟ್ಟರೆ ನಾಳೆ ಇಂದ್ರ ಬಂದು ಕೇಳಿದರೆ ನಾನು ಏನು ಹೇಳಲಿ? ಇದನ್ನು ನಾನು ಎಂದಿಗೂ ಕೊಡಲಾರೆ.

ಜಮದಗ್ನಿಯ ಈ ನಿಷೇಧವನ್ನು ಕೇಳಿ ಕಾರ್ತವೀಯಾರ್ಜುನನಿಗೆ ಬ್ರಹ್ಮಾಂಡ ಕೋಪ ಬಂದಿತು. ಅವನು ತನ್ನ ಸೇನೆಯನ್ನು ಕಳಿಸಿ ಆ ಕಪಿಲೆಯನ್ನು ಎಳೆದ. ಅದರಿಂದ ಆ ಕಾಮಧೇನು ತನ್ನ ಕೋಡಿನಿಂದ ತಿವಿದು ಕಾಲಿನಿಂದ ಹೊಡೆದು, ಕಾರ್ತವೀರ್ಯಾರ್ಜುನನ ಸೈನ್ಯವನ್ನೆಲ್ಲ ಕ್ಷಣದಲ್ಲಿ ಕೊಂದಿತು. ಮತ್ತು ಮರುಕ್ಷಣದಲ್ಲಿ ಅದೃಶ್ಯವಾಗಿ ದೇವೇಂದ್ರನ ಬಳಿಗೆ ನಡೆಯಿತು. ಕಾಮಧೇನುವಿನ ಕೋಪಕ್ಕೆ ತನ್ನ

ಸೈನ್ಯವೆಲ್ಲವೂ ಈಡಾಗಿ ಅದೇ ಕ್ಷಣದಲ್ಲಿ ಸತ್ತು ಬಿದ್ದುದನ್ನು ನೋಡಿ ಕಾರ್ತವೀರ್ಯಾರ್ಜುನನಿಗೆ ಕೋಪ ಕೆರಳಿತು. ಕ್ರೋಧಾಂಧನಾಗಿ ಅವನು ಮುಷ್ಟಿ ಬಿಗಿದು ಜಮದಗ್ನಿ ಋಷಿಯನ್ನು ಮನಬಂದಂತೆ ಹೊಡೆದ. ಆ ಕ್ರೂರ ರಾಜನ ಕಠೋರ ಮುಷ್ಟಿ ಪ್ರಹಾರಗಳನ್ನು ತಾಳಲಾರದೆ ಆ ಮಹರ್ಷಿಯು ನೆಲದ ಮೇಲೆ ಬಿದ್ದು ಮರಣ ಹೊಂದಿದ.

ನಿರಪರಾಧಿಯಾದ ಮುನಿಯನ್ನು ಹೊಡೆದು ಕೊಂದು ಆ ಕಾರ್ತವೀರ್ಯಾರ್ಜುನನು ತನ್ನ ಅಳಿದುಳಿದ ಸೈನ್ಯದೊಂದಿಗೆ ತನ್ನ ರಾಜಧಾನಿ ಸೇರಿದ.

ಇತ್ತ ಶಾಲಿಗ್ರಾಮ ಶೈಲದಲ್ಲಿ ಪರಶುರಾಮನು ಮಾಡಿದ ಉಗ್ರ ತಪಸ್ಸಿನಿಂದ ದೇವೋತ್ತಮನಾದ ಕೇಶವ ಪ್ರಸನ್ನನಾದ ಮತ್ತು ಹೇಳಿದ.

**ಕೇಶವ:-** ರಾಮ, ನಾನು ನಿನ್ನ ತಪಸ್ಸಿನಿಂದ ಪ್ರಸನ್ನನಾಗಿದ್ದೇನೆ. ನೀನು ನನ್ನ ಅಭಿನ್ನರೂಪವೇ ಆದುದರಿಂದ ನನ್ನ ಶಕ್ತಿಯೆಲ್ಲವನ್ನೂ ನಿನಗೆ ಕೊಟ್ಟಿದ್ದೇನೆ. ಭೂಮಿಯ ಭಾರವನ್ನು ಹಗುರಗೊಳಿಸಲಿಕ್ಕಾಗಿ ಹಾಗೂ ದೇಶಕಲ್ಯಾಣಕ್ಕಾಗಿ ದುಷ್ಟರಾದ ದೈತ್ಯರನ್ನು ನೀನು ಸಂಹರಿಸು.

ಹೀಗೆ ಹೇಳಿ ಶ್ರೀಮನ್ನಾರಾಯಣನು ಆ ರಾಮನಿಗೆ ಒಂದು ಘೋರವಾದ ಕೊಡಲಿಯನ್ನೂ, ವೈಷ್ಣವ ಧನುಸ್ಸನ್ನೂ, ಅನೇಕ ದಿವ್ಯಾಸ್ತ್ರಗಳನ್ನೂ ನೀಡಿದ. ಮತ್ತು ನುಡಿದ.

**ಶ್ರೀಹರಿ:-** ರಾಮ, ಮದೋನ್ಮತ್ತರಾದ ರಾಜರನ್ನೆಲ್ಲ ಕೊಂದು ಸಮುದ್ರದವರೆಗೆ ಚಾಚಿದ ಸಮಗ್ರ ಭೂಮಂಡಲವನ್ನೆಲ್ಲ ನಿನ್ನ ಸ್ವಾಧೀನ ಪಡಿಸಿಕೊ. ಧರ್ಮದಿಂದ ಪೃಥ್ವೀಪರಿಪಾಲನ ಮಾಡು.

ಹೀಗೆ ಶ್ರೀಹರಿಯಿಂದ ವರವನ್ನು ಪಡೆದು ರಾಮನು ಗಂಗಾ ತೀರದಲ್ಲಿರುವ ತಂದೆಯ ಆಶ್ರಮಕ್ಕೆ ಐತಂದ. ದುಷ್ಟನಾದ ಹೈಹಯರಾಜ ಅವನ ತಂದೆಯನ್ನು ಕೊಂದು ಹಾಕಿದ್ದ. ಆ ಕಾಮಧೇನುವಾದ ಕಪಿಲೆಯನ್ನು ಹೊಡೆದು ಸ್ವರ್ಗಕ್ಕೆ ಓಡಿಸಿದ್ದ. ಅದನ್ನು ನೋಡಿದ ರಾಮನ ಕೋಪ ಸಿಡಿಲಾಗಿ ಸಿಡಿಯಿತು. ಕ್ಷತ್ರಿಯ ಕುಲವನ್ನೇ ಕೊಚ್ಚಿ ಹಾಕಬೇಕೆಂದು ಅವನು ಇಚ್ಛಿಸಿದ. ಕೋಪದಿಂದ ನಖಶಿಖಾಂತವಾಗಿ ಅವನ ಮೈ ಎಲ್ಲ ಉರಿಯುತ್ತಲಿತ್ತು. ಅವನು ಹೆಗಲ ಮೇಲೆ ಕೊಡಲಿ ಹಾಕಿಕೊಂಡು ನೇರವಾಗಿ ನಡೆದ ಕಾರ್ತವೀರ್ಯಾರ್ಜುನನ ರಾಜಧಾನಿಗೆ. ನಗರದ ಅಗಸಿಯ ಬಾಗಿಲಲ್ಲಿ ಅಸ್ತ್ರ ಹಿಡಿದು ನಿಂತುಕೊಂಡ. ಜನರೆಲ್ಲ ಭಯಭ್ರಾಂತರಾಗಿ ಕಾರ್ತವೀರ್ಯಾರ್ಜುನನಿಗೆ ಈ ಸುದ್ದಿ ತಿಳಿಸಿದರು. ಅದನ್ನು ಕೇಳಿ ದರ್ಪೋದ್ಧತನಾದ ಆ ಹೈಹಯ ರಾಜ ನುಡಿದ.

**ಕಾರ್ತವೀರ್ಯ:-** ನನ್ನ ರಾಜಧಾನಿಯ ಅಗಸೆಯ ಬಾಗಿಲ ಬಳಿಯಲ್ಲಿ ಆಯುಧ ಹಿಡಿದು ನಿಲ್ಲುವ ಧೈರ್ಯ ಯಾರಿಗುಂಟು? ಅವನು ಸಾಕ್ಷಾತ್ ಯಮಧರ್ಮನೇ ಆಗಿದ್ದರೂ ಅಥವಾ ರುದ್ರನೇ ಆಗಿದ್ದರೂ ಬದುಕಿ ಉಳಿಯಲಾರ.

ಹೀಗೆ ನುಡಿದು ಅವನನ್ನು ಹಿಡಿದು ತನ್ನಿರಿ ಎಂದು ತನ್ನ ಸೈನಿಕರಿಗೆ ನುಡಿದ. ಅವನ ವೀರ ಸೈನಿಕರು ಆ ನಗರದ ಹೆಬ್ಬಾಗಿಲ ಬಳಿಯಲ್ಲಿ ಕೊಡಲಿ ಹಿಡಿದು ನಿಂತು ಕೊಂಡ ರಾಮನನ್ನು ಹಿಡಿಯಬೇಕೆಂದು ಹೊಡೆಯಬೇಕೆಂದು ಬಂದರು. ಆಗ ಅವರನ್ನು ನೋಡಿ ಆ ಕೊಡಲಿಯ ರಾಮ ಸಂತಪ್ತನಾಗಿ ಗುಡುಗು ಹಾಕಿದ.

**ಪರಶುರಾಮ:-** ಕ್ಷತ್ರಿಯಾಧಮರೇ, ನನ್ನ ತಂದೆಯನ್ನು ಕೊಂದಿದ್ದೀರಿ. ನಾನು ಅದಕ್ಕೆ ಪ್ರತೀಕಾರವಾಗಿ ಕ್ಷಿತಿತಲದಲ್ಲಿರುವ ಎಲ್ಲ ಕ್ಷತ್ರಿಯರನ್ನೂ ಸಂಹರಿಸುತ್ತೇನೆ. ನಿಮ್ಮ ರಾಜನಾದ ಕಾರ್ತಿವೀರ್ಯಾರ್ಜುನನ ರಕ್ತದಲ್ಲಿ ಎಳ್ಳನ್ನು ಬೆರೆಸಿ ನಮ್ಮ ತಂದೆಗೆ ತರ್ಪಣ ನೀಡುತ್ತೇನೆ ಮತ್ತು ಆ ಹೈಹಯ ರಾಜನ ರುಂಡವನ್ನೇ ಕಡಿದು ಪಿಂಡವನ್ನಾಗಿ ಮಾಡಿ ತಂದೆಯ ಶ್ರಾದ್ಧವನ್ನು ಪೂರೈಸುತ್ತೇನೆ.

ಹೀಗೆ ಹೇಳಿ ತನ್ನ ವೈಷ್ಣವ ಧನುಸ್ಸಿನಲ್ಲಿ ಬಾಣ ಹೂಡಿ ಕ್ಷಣಾರ್ಧದಲ್ಲಿ ಎಲ್ಲ ಸೈನಿಕರ ಪ್ರಾಣ ತೆಗೆದುಕೊಂಡ. ಇದನ್ನು ನೋಡಿ ಕೋಪದಿಂದ ಕೆರಳಿ ಕಾರ್ತಿವೀರ್ಯಾರ್ಜುನನು ಸ್ವಯಂ ತಾನೇ ಅಪಾರವಾದ ಸೈನ್ಯವನ್ನು ತೆಗೆದುಕೊಂಡು ಆ ಪರಶುರಾಮನನ್ನು ಎದುರಿಸಿದ. ಕಾರ್ತಿವೀರ್ಯಾರ್ಜುನನಿಗೂ ಆ ಕೊಡಲಿಯ ರಾಮನಿಗೂ ನಿಕರದ ಸಮರವು ಮಸಗಿತು. ಪ್ರಾಣಾಂತಿಕವಾದ ಘೋರ ಶಸ್ತ್ರಾಸ್ತ್ರಗಳ ಎಸೆದಾಟ ಮಸೆದಾಟಗಳು ಒಳ್ಳೆ ತುರುಸಿನಿಂದ ನಡೆದವು. ರಾಮನ ಕೈಯಲ್ಲಿ ಇರುವ ವೈಷ್ಣವ ಧನುಸ್ಸಿನಿಂದ ಬೆಂಕಿಯನ್ನು ಉಗುಳುತ್ತಲೇ ಬಂದ ಬಾಣರಾಶಿಗಳು ಹೈಹಯನ ಧೀರ ಸೈನಿಕರನ್ನೆಲ್ಲ ತಿಕ್ಕಿ ಮುಕ್ಕಿ ಕ್ಷಣಾರ್ಧದಲ್ಲಿ ಮಣ್ಣು ಮುಕ್ಕಿಸಿತು.

ಅನಂತರ ಪರಶುರಾಮನು ತನ್ನ ಕೈಯಲ್ಲಿಯ ಕಾಲಾಂತಕವಾದ ಕೊಡಲಿಯಿಂದ ಕಾರ್ತಿವೀರ್ಯಾಜುನನ ಸಾವಿರ ತೋಳುಗಳನ್ನು ಕೊಚ್ಚಿ ಕಡಿದು ಹಾಕಿದ. ನಂತರ ಆ ರೇಣುಕೆಯ ಕುಮಾರ ಆ ಕಾರ್ತಿವೀರ್ಯಾರ್ಜುನನ ತಲೆಯನ್ನೇ ತರಿದು ಲೀಲೆಯಿಂದ ಅವನನ್ನು ಸಂಹರಿಸಿದ.

ದೇವೇಂದ್ರನು ಪರ್ವತದ ಶಿಖರಗಳನ್ನು ತನ್ನ ವಜ್ರಾಯುಧದಿಂದ ಪುಡಿಗಟ್ಟಿದಂತೆ ತಂದೆಯ ವಧದಿಂದ ತಪ್ತನಾಗಿ ಹೋದ ರಾಮ ಭೂಲೋಕದ ರಾಜರೆಲ್ಲರನ್ನೂ ಹೊಡೆದು ಕಡಿದು ಕೊಂದು ಹಾಕಿದ. ಪರಶುರಾಮನ ಈ ರೌದ್ರರೂಪವನ್ನು ಕಂಡು ಎಲ್ಲ ರಾಜರೂ ಕಂಗೆಟ್ಟು ದಿಕ್ಕೆಟ್ಟು ಓಡಿದರು. ಅವರನ್ನೆಲ್ಲ ಬೆನ್ನಟ್ಟಿ ಇದ್ದಲ್ಲಿ ಹೋಗಿ ಎಲ್ಲ ಕ್ಷತ್ರಿಯರನ್ನೂ ವಧಿಸಿದ. ಪೃಥ್ವಿಯಲ್ಲಿ ಕ್ಷತ್ರಿಯರೇ ಇಲ್ಲದಂತೆ ಮಾಡಿದ.

ರೇಣುಕೆಯ ಬಿನ್ನಹವನ್ನು ಮನ್ನಿಸಿ ತನ್ನ ಮಾತಾಮಹನ ವಂಶವಾದ ಈಕ್ಷ್ವಾಕು ಕುಲವನ್ನು ಮಾತ್ರ ಕೊಲ್ಲದೇ ಬಿಟ್ಟ. ಆ ಇಕ್ಷ್ವಾಕು ವಂಶದ ರಾಜರನ್ನು ಮಾತ್ರ ರಾಜ್ಯಭ್ರಷ್ಟರನ್ನಾಗಿ ಮಾಡಿ ಜೀವದಿಂದ ಉಳಿಸಿದ. ಅನಂತರ ಅಶ್ವಮೇಧಯಜ್ಞವನ್ನು ಮಾಡಿ ಬ್ರಾಹ್ಮಣರಿಗೆ ಸಪ್ತದೀಪವತಿಯಾದ ಮೇದಿನೀ ಮಂಡಲವನ್ನೆಲ್ಲ ದಾನ ರೂಪವಾಗಿ ನೀಡಿದ ಅನಂತರ ತಾನು ತಪಸ್ಸನು ಮಾಡಲಿಕ್ಕಾಗಿ ನರನಾರಾಯಣರ ಆಶ್ರಮಕ್ಕೆ ಹಿಮಾಲಯಕ್ಕೆ ತೆರಳಿದ.

**ರಾಮಕೃಷ್ಣಾವತಾರೌತು ಪರಿಪೂರ್ಣೌ ಹಿ ಸದ್ಗುಣೈಃ ।**
**ಉಪಾಸ್ಯಮಾನೌ ಋಷಿಭಿಃ ಅಪವರ್ಗಪ್ರದೌ ನೃಣಾಂ ॥**

ಭಗವಂತನ ಪರಶುರಾಮ, ರಾಮ, ಕೃಷ್ಣ ಎಂಬ ಅವತಾರ ರೂಪಗಳು ಸರ್ವ ಸದ್ಗುಣಗಳಿಂದ ಪರಿಪೂರ್ಣವಾಗಿರುತ್ತವೆ. ಭಕ್ತ ಜನರಿಗೆ ಮೋಕ್ಷವನ್ನು ನೀಡುತ್ತವೆ. ಆದ್ದರಿಂದ ಋಷಿಗಳು ಈ ಭಗವತ್ ರೂಪವನ್ನು ಉಪಾಸನೆ ಮಾಡುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಪರಶುರಾಮ ಚರಿತ್ರೆ ಎಂಬ ಎರಡುನೂರ ಇಪ್ಪತ್ತಮೂರನೇಯ ಅಧ್ಯಾಯ ಮುಗಿದುದು*

**ಮಹಾದೇವ:-** ಪೂರ್ವಕಾಲದಲ್ಲಿ ಸ್ವಾಯಂಭುವ ಎಂಬುವವನು ಗೋಮತಿ ತೀರದಲ್ಲಿರುವ ನೈಮಿಷಾರಣ್ಯದಲ್ಲಿ ನಿಂತು ದ್ವಾದಶಾಕ್ಷರ ಮಂತ್ರವನ್ನು ಜಪಿಸಿದ. ಒಂದು ಸಾವಿರ ವರ್ಷ ಕಮಲಾಪತಿಯನ್ನು ಕುರಿತು ಕಠೋರ ತಪಸ್ಸನ್ನು ಆಚರಿಸಿದ. ಪ್ರೀತನಾದ ಹರಿ, ಪ್ರಸನ್ನನಾದ. ಮನಸ್ಸಿಗೆ ಬಂದ ವರವನ್ನು ಕೇಳು ಎಂದ.

**ಸ್ವಾಯಂಭುವಮನು:-** ದೇವೇಶ, ನಿನ್ನನ್ನು ಮಗನನ್ನಾಗಿ ಪಡೆಯಬೇಕೆಂಬ ಹಿರಿಯ ಆಸೆಯನ್ನು ಹೊತ್ತು ತಪಸ್ಸಿಗೆ ನಿಂತಿದ್ದೇನೆ. ನೀನು ನನಗೆ ಮೂರು ಜನ್ಮಗಳಲ್ಲಿ ಮಗನಾಗಬೇಕು.

**ವಿಷ್ಣು:-** ರಾಜಶ್ರೇಷ್ಠ ನಿನ್ನ ಆಪೇಕ್ಷೆಯಂತೆ ಆಗಲಿ. ನನಗೂ ಕೂಡ ನಿನ್ನ ಮಗನಾಗಿ ಜನಿಸಬೇಕೆಂದು ಅಪೇಕ್ಷೆ ಉಂಟಾಗಿದೆ.

ಹೀಗೆ ವರವನ್ನು ನೀಡಿ ಅಲ್ಲಿಯೇ ಅಂತರ್ಹಿತನಾದ ಆ ನಾರಾಯಣ. ಮುಂದೆ ಆ ಸ್ವಾಯಂಭುವ ಮನು ದಶರಥ ಮಹಾರಾಜನಾಗಿ ಜನಿಸಿದ. ಎರಡನೆಯ ಜನ್ಮದಲ್ಲಿ ಯಾದವರ ವಂಶದಲ್ಲಿ ವಸುದೇವನಾಗಿ ಹುಟ್ಟಿದ. ಮುಂದೆ ಕಲಿಯುಗದ ಕೊನೆಯಲ್ಲಿ ಶಂಭಲಗ್ರಾಮದಲ್ಲಿ ಅದೇ ಸ್ವಾಯಂಭುವ ಮನು ಹರಿವ್ರತ ಎಂಬ ಬ್ರಾಹ್ಮಣನಾಗಿ ಜನಿಸುವನು. ಸುಶೀಲಾ ಎಂಬ ಆ ಮನು ಮಹಾರಾಜನ ಮಡದಿಯು ಕೌಸಲ್ಯಾ ಎಂಬ ದಶರಥನ ಹೆಂಡತಿಯಾಗಿ ಅನಂತರ ಎರಡನೇಯ ಜನ್ಮದಲ್ಲಿ ದೇವಕಿಯಾಗಿ ಮೂರನೆಯ ಜನ್ಮದಲ್ಲಿ ದೇವಪ್ರಭಾ ಎಂಬ ಬ್ರಾಹ್ಮಣಿ ಆಗಿ ಶ್ರೀಹರಿಗೆ ಜನ್ಮವಿತ್ತು ಭಗವನ್ ಮಾತೆ ಎನಿಸುವಳು. ಈ ಸ್ವಾಯಂಭುವ ಮನು ಹಾಗೂ ಸುಶೀಲಾ ದಂಪತಿಗಳಿಂದ ಶ್ರೀಹರಿಯು ಮೊದಲು ರಾಮನಾಗಿ ನಂತರ ಕೃಷ್ಣನಾಗಿ ಕೊನೆಗೆ ಕಲ್ಕಿಯಾಗಿ ಜನಿಸುವನು. ಈ ಭಗವಂತನ ಮೂರು ಅವತಾರಗಳು ಮೊಟ್ಟಮೊದಲನೆಯದಾದ ರಾಮಾಯಣದ ಕತೆಯನ್ನು ನಿಮಗೆ ಹೇಳುತ್ತೇನೆ ಕೇಳಿ. ಘೋರ ಪಾಪಿಗಳೂ ಕೂಡ ಈ ಶ್ರೀರಾಮಚರಿತ್ರೆಯನ್ನು ಕೇಳಿದ ಮಾತ್ರಕ್ಕೆ ಪಾಪದಿಂದ ಮುಕ್ತರಾಗುವರು.

ವೈಕುಂಠಲೋಕದ ದ್ವಾರಪಾಲಕರಾದ ಜಯವಿಜಯರು ಸನಕಾದಿಗಳ ಶಾಪದಿಂದ ಮೊದಲು ಹಿರಣ್ಯಾಕ್ಷ ಹಿರಣ್ಯಕಶಿಪು ಆಗಿ ಹುಟ್ಟಿ ಶ್ರೀಹರಿಯಿಂದ ಹತರಾದರು. ಮುಂದೆ ಅವರೇ ರಾವಣ ಕುಂಭಕರ್ಣರಾಗಿ ಎರಡನೆಯ ಜನ್ಮವನ್ನು ಪಡೆದರು. ಪುಲಸ್ತ್ಯ ಮಹರ್ಷಿಗಳ ಮಗನಾದ ವಿಶ್ರವಸ್ ಎಂಬ ಧರ್ಮಾತ್ಮನಿಗೆ ಸುಕೇಶಿ ಎಂಬ ರಾಕ್ಷಸನ ಮಗಳಾದ ವಿಶಾಲಕ್ಷಿಯನ್ನು ಮದುವೆ ಮಾಡಿ ಕೊಟ್ಟಿತ್ತು. ಸುಮಾಲಿ ಎಂಬ ದಾನವೇಂದ್ರನ ಮಗಳಾದ ಕೇಕಸೀ ಎಂಬ ಕನ್ಯೆಯನ್ನು ಅದೇ ಪುಲಸ್ತ್ಯ ಪುತ್ರನಾದ ವಿಶ್ರವಸನಿಗೆ ಧಾರೆಯೆರೆದು ಕೊಡಲಾಗಿತ್ತು. ಧರ್ಮಾತ್ಮನಾದ ವಿಶ್ರವಸ್ ಮುನಿಗೆ ತನ್ನ ಮಡದಿಯರಾದ ವಿಶಾಲಾಕ್ಷಿ ಹಾಗೂ ಕೇಕಸೀ ಇಬ್ಬರಿಂದಲೂ ಮಕ್ಕಳು ಹುಟ್ಟಿದರು. ವಿಶಾಲಾಕ್ಷಿಯಿಂದ ವಿಶ್ರವಸ ಮುನಿಗೆ ಹುಟ್ಟಿದ ಮಗನೇ ಕುಬೇರ ಎಂದು ಲೋಕ ಪ್ರಸಿದ್ಧನಾದ. ಮುಂದೆ ಸುಮಾಲಿ ದಾನವನ ಮಗಳಾದ ಕೇಕಸಿಯು ಒಂದು ದಿನ ಕಾಮೋದ್ರೇಕದಿಂದ

ಸಂಧ್ಯಾಕಾಲದಲ್ಲಿಯೇ ಆ ಪುಣ್ಯಾತ್ಮನಾದ ಮಹರ್ಷಿಯನ್ನು ಜುಲುಮೆಯಿಂದ ಕಾಮ ಕೇಳಿಗೆ ಎಳೆದಳು. ಆದರಿಂದ ಆ ಕೇಕಸಿಗೆ ರಾವಣ ಕುಂಭಕರ್ಣ ಎಂಬ ಬಲಿಷ್ಠರಾದ ಇಬ್ಬರು ಮಕ್ಕಳು ಹುಟ್ಟಿದರು. ಮುಂದೆ ಶೂರ್ಪನಖಿ ಎಂಬ ವಿಕಾರ ಮುಖದ ಒಂದು ಕನ್ಯೆಯೂ ಜನಿಸಿದಳು. ಮುಂದೆ ಕೆಲವು ವರ್ಷಗಳ ಬಳಿಕ ವಿಭೀಷಣ ಎಂಬ ಮತ್ತೊಬ್ಬ ಮಗನು ಕೇಕಸಿಯ ಹೊಟ್ಟೆಯಿಂದ ಹುಟ್ಟಿ ಬಂದ. ವಿಭೀಷಣ ಮಾತ್ರ ಪರಮ ಭಗವದ್ಭಕ್ತ. ಸತ್ಯನಿಷ್ಠ. ಧರ್ಮಪರಾಯಣ. ನುಡಿಯಲ್ಲಿ ಶುದ್ಧ ನಡೆಯಲ್ಲಿ ಸಿದ್ಧ. ಪರಮಸಾತ್ವಿಕ.

ವಿಶ್ರವಸನ ಹಿರಿಯ ಮಕ್ಕಳಾದ ರಾವಣ ಕುಂಭಕರ್ಣರು ದೊಡ್ಡವರಾದ ಬಳಿಕ ಹಿಮಗಿರಿಗೆ ನಡೆದರು. ಉಗ್ರ ತಪೋನುಷ್ಠಾನವನ್ನು ನಡೆಸಿದರು. ದೇವರನ್ನು ಕುರಿತೇ ಅವರ ತಪಸ್ಸು. ಅದರಲ್ಲಿಯೂ ರಾವಣನ ತಪಸ್ಸಂತೂ ಅತೀ ಉಗ್ರ. ಕ್ರೂರನಾದ ಆ ಕೇಕಸೀ ಕುಮಾರ ತನ್ನ ತಲೆಯನ್ನು ಕಡಿದು ಪುಷ್ಪ ರೂಪದಿಂದ ನನಗೆ ಪುಷ್ಪಾರ್ಚನೆಯನ್ನು ಮಾಡುತ್ತಲಿದ್ದ. ಅದರಿಂದ ಸುಪ್ರೀತನಾದ ನಾನು ಅವನಿಗೆ ಬೇಕಾದ ವರವನ್ನು ಬೇಡು ಎಂದು ಹೇಳಿದೆ. ಆಗ ಎಲ್ಲ ಲೋಕಗಳನ್ನು ಗೆಲ್ಲುವ ಹೆಬ್ಬಯಕೆಯನ್ನು ಹೊತ್ತ ಆ ದೈತ್ಯರಾಜ ಅವಧ್ಯತ್ವ ವರವನ್ನು ಕೊಡು ಎಂದು ಕೇಳಿದ. ಅವನ ತೀವ್ರತರವಾದ ತಪೋನುಷ್ಠಾನದಿಂದ ತುಷ್ಟನಾದ ನಾನು (ಪರಮೇಶ್ವರನು) ಆ ದುರಾತ್ಮನಾದ ರಾವಣನಿಗೆ, ಯಾರಿಂದಲೂ ಸಾಯಬಾರದು ಎಂಬ ಅವಧ್ಯತ್ವ ವರವನ್ನು ಕರುಣಿಸಿದೆ. ದೇವತೆಗಳಿಂದಲೂ, ದಾನವರಿಂದಲೂ ಯಕ್ಷರಿಂದಲೂ ತಾನು ಸಾಯಬಾರದು ಎಂದು ಬೇಡಿಕೊಂಡ ರಾವಣ ಮದೋನ್ಮತ್ತನಾಗಿ ಮಾನವರಿಂದ ಸಾಯಬಾರದು ಎಂದು ಮಾತ್ರ ಬೇಡಿಕೊಳ್ಳಲಿಲ್ಲ. ಕ್ಷುಲ್ಲಕರಾದ ಹುಲ್ಲು ಮಾನವರು ತನ್ನನ್ನು ಎಂದಿಗೂ ಗೆಲ್ಲಲಾರರು ಮತ್ತು ಕೊಲ್ಲಲಾರರು ಎಂದು ಮದದಿಂದ ಬೀಗಿದ ರಾವಣ ಮಾನವರನ್ನು ಬಿಟ್ಟು ದೇವದಾನವರಿಂದ ಸಾಯಬಾರದು ಎಂದು ಬೇಡಿಕೊಂಡದ್ದಕ್ಕೆ ನಾನು ಅಸ್ತು ಎಂದು ಹೇಳಿದೆ. ಹರನಿಂದ ಪಡೆದ ವರದಿಂದ ಅವಧ್ಯನೂ ಅಬಾಧ್ಯನೂ ಆದ ಆ ದುರುಳ ದೈತ್ಯ ಮದೋನ್ಮತ್ತನಾಗಿ ದೇವ ದಾನವ ಮಾನವರೆಲ್ಲರನ್ನೂ ಹಿಂಸಿಸ ತೊಡಗಿದ. ಮೂರು ಲೋಕಕ್ಕೆಲ್ಲ ಸಹನಾತೀತವಾಗಿತ್ತು ಆ ದುಷ್ಟದೈತ್ಯನ ಉಪದ್ರವ. ಆ ದೈತ್ಯಾಧಮನಿಂದ ತಾಡಿತ ಪೀಡಿತರಾದ ಸುರಸಮಾಜದ ಮುಂದಾಳುಗಳು ಭ್ರಯ ಭ್ರಾಂತರಾಗಿ ಮಧುಸೂದನನಿಗೆ ಮೊರೆಯಿಟ್ಟರು. ಬ್ರಹ್ಮ, ಇಂದ್ರ, ರುದ್ರ ವಾಯು ಮೊದಲಾದ ತನಗೆ ಶರಣು ಬಂದ ಸುರೋತ್ತಮರನ್ನು ಕುರಿತು ಕರುಣೆಯಿಂದ ಕೈಟಭಾರಿ ನುಡಿದ.

**ಮಹಾವಿಷ್ಣು:-** ನಿಮ್ಮ ಸಂಕಟವನ್ನು ಬಲ್ಲೆ. ನಾನು ಬೇಗ ರಘುವಂಶದಲ್ಲಿ ದಶರಥರಾಜನ ಮಗನಾಗಿ ಹುಟ್ಟುತ್ತೇನೆ. ರಾವಣನ ಹುಟ್ಟನ್ನು ಅಡಗಿಸುತ್ತೇನೆ ಶಿವನ ವರ ಸುಳ್ಳಾಗಬಾರದು ಎಂದು ಮಾನವನಾಗಿ ಅವತರಿಸಿ ಬರುತ್ತೇನೆ. ನಂದೀಶ್ವರನ ಶಾಪವಿದ್ದುದರಿಂದ ನೀವೆಲ್ಲ ದೇವತೆಗಳು ಕಪಿಗಳಾಗಿ ಹುಟ್ಟಿ ಬನ್ನಿರಿ, ನನ್ನ ದೇವಕಾರ್ಯಲ್ಲಿ ಸಹಕರಿಸಿರಿ.

**ಮಹಾದೇವ:-** ದೇವ ದೇವೋತ್ತಮನಾದ ವಿಷ್ಣುವಿನ ಅಣತಿಯನ್ನು ತಲೆಯ ಮೇಲೆ ಹೊತ್ತು ಎಲ್ಲ ದೇವತೆಗಳು ಭೂಲೋಕದಲ್ಲಿ ಕೋತಿಗಳಾಗಿ ಜನಿಸಿದರು.

ಪೂರ್ವಕಾಲದಲ್ಲಿ ಪರಶುರಾಮನು ಸಮುದ್ರವೇ ನಡುಪಟ್ಟಿಯಾಗಿ ಉಳ್ಳ ಅಖಂಡ ಭೂಮಂಡಲವನ್ನೆಲ್ಲ ಬ್ರಾಹ್ಮಣರಿಗೆ ದಾನ ನೀಡಿದ್ದ. ಅಂದಿನ ಬ್ರಾಹ್ಮಣರು ನಿಸ್ಪೃಹ ಶಿಖಾಮಣಿಗಳು. ವೀತರಾದ ಪೂತಾತ್ಮರು, ಆಶೆ ಅಧಿಕಾರ ಲಾಲಸೆ, ಭೋಗದ ಅಪೇಕ್ಷೆ

**ಮಹಾದೇವ:-** ಪೂರ್ವಕಾಲದಲ್ಲಿ ಸ್ವಾಯಂಭುವ ಎಂಬುವವನು ಗೋಮತಿ ತೀರದಲ್ಲಿರುವ ನೈಮಿಷಾರಣ್ಯದಲ್ಲಿ ನಿಂತು ದ್ವಾದಶಾಕ್ಷರ ಮಂತ್ರವನ್ನು ಜಪಿಸಿದ. ಒಂದು ಸಾವಿರ ವರ್ಷ ಕಮಲಾಪತಿಯನ್ನು ಕುರಿತು ಕಠೋರ ತಪಸ್ಸನ್ನು ಆಚರಿಸಿದ. ಪ್ರೀತನಾದ ಹರಿ, ಪ್ರಸನ್ನನಾದ. ಮನಸ್ಸಿಗೆ ಬಂದ ವರವನ್ನು ಕೇಳು ಎಂದ.

**ಸ್ವಾಯಂಭುವಮನು:-** ದೇವೇಶ, ನಿನ್ನನ್ನು ಮಗನನ್ನಾಗಿ ಪಡೆಯಬೇಕೆಂಬ ಹಿರಿಯ ಆಸೆಯನ್ನು ಹೊತ್ತು ತಪಸ್ಸಿಗೆ ನಿಂತಿದ್ದೇನೆ. ನೀನು ನನಗೆ ಮೂರು ಜನ್ಮಗಳಲ್ಲಿ ಮಗನಾಗಬೇಕು.

**ವಿಷ್ಣು:-** ರಾಜಶ್ರೇಷ್ಠ ನಿನ್ನ ಆಪೇಕ್ಷೆಯಂತೆ ಆಗಲಿ. ನನಗೂ ಕೂಡ ನಿನ್ನ ಮಗನಾಗಿ ಜನಿಸಬೇಕೆಂದು ಅಪೇಕ್ಷೆ ಉಂಟಾಗಿದೆ.

ಹೀಗೆ ವರವನ್ನು ನೀಡಿ ಅಲ್ಲಿಯೇ ಅಂತರ್ಹಿತನಾದ ಆ ನಾರಾಯಣ. ಮುಂದೆ ಆ ಸ್ವಾಯಂಭುವ ಮನು ದಶರಥ ಮಹಾರಾಜನಾಗಿ ಜನಿಸಿದ. ಎರಡನೆಯ ಜನ್ಮದಲ್ಲಿ ಯಾದವರ ವಂಶದಲ್ಲಿ ವಸುದೇವನಾಗಿ ಹುಟ್ಟಿದ. ಮುಂದೆ ಕಲಿಯುಗದ ಕೊನೆಯಲ್ಲಿ ಶಂಭಲಗ್ರಾಮದಲ್ಲಿ ಅದೇ ಸ್ವಾಯಂಭುವ ಮನು ಹರಿವ್ರತ ಎಂಬ ಬ್ರಾಹ್ಮಣನಾಗಿ ಜನಿಸುವನು. ಸುಶೀಲಾ ಎಂಬ ಆ ಮನು ಮಹಾರಾಜನ ಮಡದಿಯು ಕೌಸಲ್ಯಾ ಎಂಬ ದಶರಥನ ಹೆಂಡತಿಯಾಗಿ ಅನಂತರ ಎರಡನೇಯ ಜನ್ಮದಲ್ಲಿ ದೇವಕಿಯಾಗಿ ಮೂರನೆಯ ಜನ್ಮದಲ್ಲಿ ದೇವಪ್ರಭಾ ಎಂಬ ಬ್ರಾಹ್ಮಣಿ ಆಗಿ ಶ್ರೀಹರಿಗೆ ಜನ್ಮವಿತ್ತು ಭಗವನ್ ಮಾತೆ ಎನಿಸುವಳು. ಈ ಸ್ವಾಯಂಭುವ ಮನು ಹಾಗೂ ಸುಶೀಲಾ ದಂಪತಿಗಳಿಂದ ಶ್ರೀಹರಿಯು ಮೊದಲು ರಾಮನಾಗಿ ನಂತರ ಕೃಷ್ಣನಾಗಿ ಕೊನೆಗೆ ಕಲ್ಕಿಯಾಗಿ ಜನಿಸುವನು. ಈ ಭಗವಂತನ ಮೂರು ಅವತಾರಗಳು ಮೊಟ್ಟಮೊದಲನೆಯದಾದ ರಾಮಾಯಣದ ಕತೆಯನ್ನು ನಿಮಗೆ ಹೇಳುತ್ತೇನೆ ಕೇಳಿ. ಘೋರ ಪಾಪಿಗಳೂ ಕೂಡ ಈ ಶ್ರೀರಾಮಚರಿತ್ರೆಯನ್ನು ಕೇಳಿದ ಮಾತ್ರಕ್ಕೆ ಪಾಪದಿಂದ ಮುಕ್ತರಾಗುವರು.

ವೈಕುಂಠಲೋಕದ ದ್ವಾರಪಾಲಕರಾದ ಜಯವಿಜಯರು ಸನಕಾದಿಗಳ ಶಾಪದಿಂದ ಮೊದಲು ಹಿರಣ್ಯಾಕ್ಷ ಹಿರಣ್ಯಕಶಿಪು ಆಗಿ ಹುಟ್ಟಿ ಶ್ರೀಹರಿಯಿಂದ ಹತರಾದರು. ಮುಂದೆ ಅವರೇ ರಾವಣ ಕುಂಭಕರ್ಣರಾಗಿ ಎರಡನೆಯ ಜನ್ಮವನ್ನು ಪಡೆದರು. ಪುಲಸ್ತ್ಯ ಮಹರ್ಷಿಗಳ ಮಗನಾದ ವಿಶ್ರವಸ್ ಎಂಬ ಧರ್ಮಾತ್ಮನಿಗೆ ಸುಕೇಶಿ ಎಂಬ ರಾಕ್ಷಸನ ಮಗಳಾದ ವಿಶಾಲಕ್ಷಿಯನ್ನು ಮದುವೆ ಮಾಡಿ ಕೊಟ್ಟಿತ್ತು. ಸುಮಾಲಿ ಎಂಬ ದಾನವೇಂದ್ರನ ಮಗಳಾದ ಕೇಕಸೀ ಎಂಬ ಕನ್ಯೆಯನ್ನು ಅದೇ ಪುಲಸ್ತ್ಯ ಪುತ್ರನಾದ ವಿಶ್ರವಸನಿಗೆ ಧಾರೆಯೆರೆದು ಕೊಡಲಾಗಿತ್ತು. ಧರ್ಮಾತ್ಮನಾದ ವಿಶ್ರವಸ್ ಮುನಿಗೆ ತನ್ನ ಮಡದಿಯರಾದ ವಿಶಾಲಾಕ್ಷಿ ಹಾಗೂ ಕೇಕಸೀ ಇಬ್ಬರಿಂದಲೂ ಮಕ್ಕಳು ಹುಟ್ಟಿದರು. ವಿಶಾಲಾಕ್ಷಿಯಿಂದ ವಿಶ್ರವಸ ಮುನಿಗೆ ಹುಟ್ಟಿದ ಮಗನೇ ಕುಬೇರ ಎಂದು ಲೋಕ ಪ್ರಸಿದ್ಧನಾದ. ಮುಂದೆ ಸುಮಾಲಿ ದಾನವನ ಮಗಳಾದ ಕೇಕಸಿಯು ಒಂದು ದಿನ ಕಾಮೋದ್ರೇಕದಿಂದ

ಸಂಧ್ಯಾಕಾಲದಲ್ಲಿಯೇ ಆ ಪುಣ್ಯಾತ್ಮನಾದ ಮಹರ್ಷಿಯನ್ನು ಜುಲುಮೆಯಿಂದ ಕಾಮ ಕೇಳಿಗೆ ಎಳೆದಳು. ಅದರಿಂದ ಆ ಕೇಕಸಿಗೆ ರಾವಣ ಕುಂಭಕರ್ಣ ಎಂಬ ಬಲಿಷ್ಠರಾದ ಇಬ್ಬರು ಮಕ್ಕಳು ಹುಟ್ಟಿದರು. ಮುಂದೆ ಶೂರ್ಪನಖಿ ಎಂಬ ವಿಕಾರ ಮುಖದ ಒಂದು ಕನ್ಯೆಯೂ ಜನಿಸಿದಳು. ಮುಂದೆ ಕೆಲವು ವರ್ಷಗಳ ಬಳಿಕ ವಿಭೀಷಣ ಎಂಬ ಮತ್ತೊಬ್ಬ ಮಗನು ಕೇಕಸಿಯ ಹೊಟ್ಟೆಯಿಂದ ಹುಟ್ಟಿ ಬಂದ. ವಿಭೀಷಣ ಮಾತ್ರ ಪರಮ ಭಗವದ್ಭಕ್ತ. ಸತ್ಯನಿಷ್ಠ. ಧರ್ಮಪರಾಯಣ. ನುಡಿಯಲ್ಲಿ ಶುದ್ಧ ನಡೆಯಲ್ಲಿ ಸಿದ್ಧ. ಪರಮಸಾತ್ವಿಕ.

ವಿಶ್ರವಸನ ಹಿರಿಯ ಮಕ್ಕಳಾದ ರಾವಣ ಕುಂಭಕರ್ಣರು ದೊಡ್ಡವರಾದ ಬಳಿಕ ಹಿಮಗಿರಿಗೆ ನಡೆದರು. ಉಗ್ರ ತಪೋನುಷ್ಠಾನವನ್ನು ನಡೆಸಿದರು. ದೇವರನ್ನು ಕುರಿತೇ ಅವರ ತಪಸ್ಸು. ಅದರಲ್ಲಿಯೂ ರಾವಣನ ತಪಸ್ಸಂತೂ ಅತೀ ಉಗ್ರ. ಕ್ರೂರನಾದ ಆ ಕೇಕಸೀ ಕುಮಾರ ತನ್ನ ತಲೆಯನ್ನು ಕಡಿದು ಪುಷ್ಪ ರೂಪದಿಂದ ನನಗೆ ಪುಷ್ಪಾರ್ಚನೆಯನ್ನು ಮಾಡುತ್ತಲಿದ್ದ. ಅದರಿಂದ ಸುಪ್ರೀತನಾದ ನಾನು ಅವನಿಗೆ ಬೇಕಾದ ವರವನ್ನು ಬೇಡು ಎಂದು ಹೇಳಿದೆ. ಆಗ ಎಲ್ಲ ಲೋಕಗಳನ್ನು ಗೆಲ್ಲುವ ಹೆಬ್ಬಯಕೆಯನ್ನು ಹೊತ್ತ ಆ ದೈತ್ಯರಾಜ ಅವಧ್ಯತ್ವ ವರವನ್ನು ಕೊಡು ಎಂದು ಕೇಳಿದ. ಅವನ ತೀವ್ರತರವಾದ ತಪೋನುಷ್ಠಾನದಿಂದ ತುಷ್ಟನಾದ ನಾನು (ಪರಮೇಶ್ವರನು) ಆ ದುರಾತ್ಮನಾದ ರಾವಣನಿಗೆ, ಯಾರಿಂದಲೂ ಸಾಯಬಾರದು ಎಂಬ ಅವಧ್ಯತ್ವ ವರವನ್ನು ಕರುಣಿಸಿದೆ. ದೇವತೆಗಳಿಂದಲೂ, ದಾನವರಿಂದಲೂ ಯಕ್ಷರಿಂದಲೂ ತಾನು ಸಾಯಬಾರದು ಎಂದು ಬೇಡಿಕೊಂಡ ರಾವಣ ಮದೋನ್ಮತ್ತನಾಗಿ ಮಾನವರಿಂದ ಸಾಯಬಾರದು ಎಂದು ಮಾತ್ರ ಬೇಡಿಕೊಳ್ಳಲಿಲ್ಲ. ಕ್ಷುಲ್ಲಕರಾದ ಹುಲ್ಲು ಮಾನವರು ತನ್ನನ್ನು ಎಂದಿಗೂ ಗೆಲ್ಲಲಾರರು ಮತ್ತು ಕೊಲ್ಲಲಾರರು ಎಂದು ಮದದಿಂದ ಬೀಗಿದ ರಾವಣ ಮಾನವರನ್ನು ಬಿಟ್ಟು ದೇವದಾನವರಿಂದ ಸಾಯಬಾರದು ಎಂದು ಬೇಡಿಕೊಂಡದ್ದಕ್ಕೆ ನಾನು ಅಸ್ತು ಎಂದು ಹೇಳಿದೆ. ಹರನಿಂದ ಪಡೆದ ವರದಿಂದ ಅವಧ್ಯನೂ ಅಬಾಧ್ಯನೂ ಆದ ಆ ದುರುಳ ದೈತ್ಯ ಮದೋನ್ಮತ್ತನಾಗಿ ದೇವ ದಾನವ ಮಾನವರೆಲ್ಲರನ್ನೂ ಹಿಂಸಿಸ ತೊಡಗಿದ. ಮೂರು ಲೋಕಕ್ಕೆಲ್ಲ ಸಹನಾತೀತವಾಗಿತ್ತು ಆ ದುಷ್ಟದೈತ್ಯನ ಉಪದ್ರವ. ಆ ದೈತ್ಯಾಧಮನಿಂದ ತಾಡಿತ ಪೀಡಿತರಾದ ಸುರಸಮಾಜದ ಮುಂದಾಳುಗಳು ಭ್ರಯ ಭ್ರಾಂತರಾಗಿ ಮಧುಸೂದನನಿಗೆ ಮೊರೆಯಿಟ್ಟರು. ಬ್ರಹ್ಮ, ಇಂದ್ರ, ರುದ್ರ ವಾಯು ಮೊದಲಾದ ತನಗೆ ಶರಣು ಬಂದ ಸುರೋತ್ತಮರನ್ನು ಕುರಿತು ಕರುಣೆಯಿಂದ ಕೈಟಭಾರಿ ನುಡಿದ.

**ಮಹಾವಿಷ್ಣು:-** ನಿಮ್ಮ ಸಂಕಟವನ್ನು ಬಲ್ಲೆ. ನಾನು ಬೇಗ ರಘುವಂಶದಲ್ಲಿ ದಶರಥರಾಜನ ಮಗನಾಗಿ ಹುಟ್ಟುತ್ತೇನೆ. ರಾವಣನ ಹುಟ್ಟನ್ನು ಅಡಗಿಸುತ್ತೇನೆ ಶಿವನ ವರ ಸುಳ್ಳಾಗಬಾರದು ಎಂದು ಮಾನವನಾಗಿ ಅವತರಿಸಿ ಬರುತ್ತೇನೆ. ನಂದೀಶ್ವರನ ಶಾಪವಿದ್ದುದರಿಂದ ನೀವೆಲ್ಲ ದೇವತೆಗಳು ಕಪಿಗಳಾಗಿ ಹುಟ್ಟಿ ಬನ್ನಿರಿ, ನನ್ನ ದೇವಕಾರ್ಯಲ್ಲಿ ಸಹಕರಿಸಿರಿ.

**ಮಹಾದೇವ:-** ದೇವ ದೇವೋತ್ತಮನಾದ ವಿಷ್ಣುವಿನ ಅಣತಿಯನ್ನು ತಲೆಯ ಮೇಲೆ ಹೊತ್ತು ಎಲ್ಲ ದೇವತೆಗಳು ಭೂಲೋಕದಲ್ಲಿ ಕೋತಿಗಳಾಗಿ ಜನಿಸಿದರು.

ಪೂರ್ವಕಾಲದಲ್ಲಿ ಪರಶುರಾಮನು ಸಮುದ್ರವೇ ನಡುಪಟ್ಟಿಯಾಗಿ ಉಳ್ಳ ಅಖಂಡ ಭೂಮಂಡಲವನ್ನೆಲ್ಲ ಬ್ರಾಹ್ಮಣರಿಗೆ ದಾನ ನೀಡಿದ್ದ. ಅಂದಿನ ಬ್ರಾಹ್ಮಣರು ನಿಸ್ಪೃಹ ಶಿಖಾಮಣಿಗಳು. ವೀತರಾದ ಪೂತಾತ್ಮರು, ಆಶೆ ಅಧಿಕಾರ ಲಾಲಸೆ, ಭೋಗದ ಅಪೇಕ್ಷೆ

ಐಶ್ವರ್ಯದ ಆಕಾಂಕ್ಷೆ, ಅವರ ಸನಿಹದಲ್ಲಿಯೂ ಸುಳಿಯುತ್ತಿರಲಿಲ್ಲ. ಪರಶುರಾಮನಿಂದ ಪೃಥ್ವೀಮಂಡಲವನ್ನು ದಾನರೂಪದಿಂದ ತೆಗೆದುಕೊಂಡ ಬ್ರಾಹ್ಮಣರು, ನಿಜವಾದ ಅರ್ಥದಲ್ಲಿ ಬ್ರಾಹ್ಮಣರು. ಆಶಾಪಾಶಗಳಿಂದ ವಿಮುಕ್ತರು ಪರಮ ವಿರಕ್ತರು. ಅಧ್ಯಾತ್ಮ ಚಿಂತನದಲ್ಲಿಯೇ ಸರ್ವದಾ ಆಸಕ್ತರು. ಈ ರಾಜ್ಯ ಅಧಿಕಾರ ಐಶ್ವರ್ಯ ಎಲ್ಲವೂ ತಮ್ಮ ತಪೋನುಷ್ಠಾನಕ್ಕೆ ತೊಂದರೆ ಎನಿಸಿತು, ಯಾಗಯೋಗಿಗಳಾದ ಆ ವಿರಾಗೀ ವಿಪ್ರರಿಗೆ. ಆಗ ಅವರು ತಮ್ಮ ಕೈಯಲ್ಲಿರುವ ಸರ್ವಉರ್ವೀತಲದ ಸಾರ್ವಭೌಮ ಸಿಂಹಾಸನದ ಅಧೀಶ್ವರತ್ವವನ್ನು ಅಧಿಕಾರತ್ವವನ್ನು ಇಕ್ಷ್ವಾಕು ವಂಶದ ರಾಜರಿಗೆ ತಂದು ಒಪ್ಪಿಸಿದರು. ವೈವಸ್ವತ ಮನುವಿನಿಂದ ಮುಂದುವರಿದು ಬಂದ ಆ ಇಕ್ಷ್ವಾಕು ವಂಶದಲ್ಲಿ ಅಜರಾಜ ಸತ್ಯಪಂಥ ಶೀಲಸಂಪನ್ನ. ನಡೆಯಲ್ಲಿಯೂ ನುಡಿಯಲ್ಲಿಯೂ ಶುಚಿ, ಶುದ್ಧ. ಆ ಅಜರಾಜನ ಮಗನಾದ ದಶರಥರಾಜನು ತಂದೆಯಂತೆಯೇ ನ್ಯಾಯ ನಿಷ್ಠ, ಮಹಾಬಲಿಷ್ಠ. ಪ್ರಜೆಗಳನ್ನು ತಂದೆಗಳಂತೆ ರಕ್ಷಿಸಿ ದುಷ್ಟರನ್ನು ಶಿಕ್ಷಿಸುವಲ್ಲಿ ದತ್ತ ದೀಕ್ಷ ಮೇಲೆ ಧರ್ಮದಕ್ಷ.

ಆ ದಶರಥರಾಜನು ಎಲ್ಲ ರಾಜರನ್ನು ನಿಯಂತ್ರಿಸಿ ಭೂಮಂಡಲದ ತುಂಬ ನ್ಯಾಯ ಬುದ್ಧಿವಾದ, ನೀತಿ ಶುದ್ಧವಾದ ಧರ್ಮಚಕ್ರವು ಪ್ರವರ್ತಿಸುವಂತೆ ಮಾಡಿದ. ಕೋಸಲ ರಾಜನ ಮಗಳಾದ ಕೌಸಲ್ಯಾ ಎಂಬ ಕನ್ಯೆಯನ್ನು ಅವನು ಮದುವೆಯಾಗಿ ತನ್ನ ಪಟ್ಟ ಮಹಿಷಿಯನ್ನಾಗಿ ಮಾಡಿಕೊಂಡ. ಮಗಧರಾಜನ ಮಗಳಾದ ಸುಮಿತ್ರೆಯು ಅವನ ಎರಡನೆಯ ಹೆಂಡತಿ. ಕೈಕೇಯ ರಾಜನ ಮಗಳಾದ ಕೈಕೇಯಿ ಎಂಬ ಕನ್ಯೆಯು ಆ ದಶರಥ ರಾಜನ ಮೆಚ್ಚಿನ ಮೂರನೇ ಮಡದಿ. ಹೀಗೆ ಮಹಿಳಾಮಣಿಗಳಾದ ಮೂರು ಮಡದಿಯರಿಂದ ಒಡಗೂಡಿ ಆ ರಘುಕುಲದ ರಾಜನು ಪೃಥವಿಯನ್ನು ಧರ್ಮಶಾಸ್ತ್ರಕ್ಕೆ ಅನುಗಣವಾಗಿ ಆಳುತ್ತಲಿದ್ದ. ಸರಯೂ ನದಿಯ ದಂಡೆಯಲ್ಲಿ ಇದ್ದ ಅಯೋಧ್ಯೆ ಎಂಬ ನಗರವು ಅವನ ರಾಜಧಾನಿ. ಧನಧಾನ್ಯದಿಂದ ತುಂಬಿ ತುಳುಕುವ ಅಯೋಧ್ಯಾ ಪಟ್ಟಣವು ಬಂಗಾರದ ಕೋಟೆ ಕೊತ್ತಳ, ರತ್ನದ ಗೋಪುರ, ಮುತ್ತಿನ ಮಂಟಪಗಳಿಂದಲೂ ದಿವ್ಯಸ್ತ್ರೀ ಪುರುಷರಿಂದ ಒಪ್ಪುವ ನರ ನಾರಿಯರಿಂದಲೂ ಇಂದ್ರನ ಅಮರಾವತಿಯಂತೆ ಒಪ್ಪುತ್ತಿತ್ತು.

ದಶರಥರಾಜನು ತನ್ನ ಕುಲಗುರುಗಳಾದ ವಶಿಷ್ಠರ ಆದೇಶದಂತೆ ಪುತ್ರ ಸಂತಾನಕ್ಕಾಗಿ ಪುತ್ರಕಾಮೇಷ್ಠಿ ಯಜ್ಞವನ್ನು ಮಾಡಿದ. ವಿಷ್ಣು ದೇವತಾಪದವಾದ ಆ ಯಜ್ಞದಿಂದ ಪರಮ ಪ್ರೀತನಾದ ಶ್ರೀಹರಿಯ ಯಜ್ಞ ಪುರುಷರೂಪದಿಂದ ಹೋಮ ಕುಂಡದಲ್ಲಿಯೇ ಎದ್ದು ನಿಂತು ಪ್ರತ್ಯಕ್ಷಗೋಚರನಾಗಿ ದಶರಥರಾಜನಿಗೆ ಬೇಕಾದ ವರವನ್ನು ಬೇಡು ಎಂದು ಹೇಳಿದ. ಆಗ ದಶರಥರಾಜನು ತನ್ನ ಮಡದಿಯಾದ ಕೌಸಲ್ಯೆಯೊಂದಿಗೆ ಲಕ್ಷ್ಮಿಯಿಂದ ಸಹಿತನಾದ ಆ ಯಜ್ಞಪುರುಷನನ್ನು ನಮಸ್ಕರಿಸಿ ಹರ್ಷಗದ್ಗದ ಕಂಠದಿಂದ ''ಜನಾರ್ದನ, ನೀನು ನನಗೆ ಮಗನಾಗಿ ಜನಿಸಿ ಬಾ'' ಎಂದು ಕೇಳಿಕೊಂಡ.

**ವಿಷ್ಣು:-** ದುಷ್ಟರನ್ನು ನಿಗ್ರಹಿಸಿ ಸಾಧುಗಳನ್ನು ಕಾಪಾಡಲಿಕ್ಕಾಗಿ ಹಾಗೂ ಧರ್ಮ ಸಂಸ್ಥಾಪನೆಗಾಗಿ ನಾನು ನಿಮ್ಮಿಬ್ಬರ ಹೊಟ್ಟೆಯಿಂದ ಹುಟ್ಟಿ ಬರುತ್ತೇನೆ.

**ಮಹಾದೇವ:-** ಹೀಗೆ ಹೇಳಿ ಮಹಾವಿಷ್ಣುವು ತನ್ನ ಎಡತೊಡೆಯ ಮೇಲೆ ಕುಳಿತ ಲಕ್ಷ್ಮೀದೇವಿಯ ಕೈಯಲ್ಲಿ ಇರುವ ಬಂಗಾರದ ಪಾಯಸ ಗಿಂಡಿಯನ್ನು ಎತ್ತಿ ದಶರಥ ರಾಜನ ಕೈಗೆ ಕೊಟ್ಟು:- ''ಈ ಪಾಯಸವನ್ನು ನಿನ್ನ ಪತ್ನಿಯರಿಗೆ ಹಂಚಿಕೊಡು. ಆ ನಿನ್ನ ರಾಣಿಯರಿಗೆ ನನ್ನ ಅಂಶದಿಂದ ಒಡಗೂಡಿದ ಶ್ರೇಷ್ಠ ಪುತ್ರರು ಹುಟ್ಟುತ್ತಾರೆ.''

**ಮಹಾದೇವ:-** ಹೀಗೆ ಹೇಳಿ ಹೋಮ ಕುಂಡದಲ್ಲಿ ಯಜ್ಞ ಪುರುಷನ ರೂಪದಿಂದ ಲಕ್ಷ್ಮೀಸಹಿತನಾಗಿ ಪ್ರಾದುರ್ಭೂತನಾದ ಮಹಾವಿಷ್ಣುವು ಅಲ್ಲಿಯೇ ಅಂತರ್ಧಾನ ಹೊಂದಿದ. ಅನಂತರ ದಶರಥ ರಾಜನು ಆ ಪಾಯಸವನ್ನು ಅಲ್ಲಿಯೇ ಇದ್ದ ತನ್ನ ಜೇಷ್ಠ ಪತ್ನಿಯಾದ ಕೌಸಲ್ಯೆಗೂ, ಕಿರಿಯ ಪತ್ನಿ ಕೈಕೇಯಿಗೂ ಹಂಚಿ ಕೊಟ್ಟ. ಆಗಲೇ ಅಲ್ಲಿಗೆ ಅವನ ನಡುವಿನ ಮಡದಿಯಾದ ಸುಮಿತ್ರೆಯೂ ಆಗಮಿಸಿದಳು. ಅವಳಿಗೂ ಸತ್ ಸಂತಾನದ ಅಪೇಕ್ಷೆ. ಅದಕ್ಕಾಗಿಯೇ ಅಲ್ಲಿಗೆ ಧಾವಿಸಿ ಬಂದಿದ್ದಳು. ಆಗ ಕೌಸಲ್ಯೆಯು ತನ್ನ ಪಾಯಸದಲ್ಲಿ ಅರ್ಧ ಭಾಗವನ್ನು ಅವಳಿಗೆ ಕೊಟ್ಟಳು. ಕೈಕೇಯಿಯೂ ತನ್ನ ಪಾಲಿನ ಪಾಯಸದಲ್ಲಿ ಅರ್ಧಭಾಗವನ್ನು ಸುಮಿತ್ರೆಗೆ ನೀಡಿದಳು.

ಯಜ್ಞಪುರುಷನು ಕರುಣಿಸಿ ಕೊಟ್ಟ ಆ ಪಾಯಸದ ಪುಣ್ಯ ಪ್ರಭಾವದಿಂದ ಮೂವರೂ ಗರ್ಭವನ್ನು ಧರಿಸಿದರು. ನವಮಾಸ ತುಂಬಿದ ಬಳಿಕ ಚೈತ್ರಶುಕ್ಲ ನವಮಿಯ ದಿನ ಅದಿತಿ ದೇವತಾವಾದ ನಕ್ಷತ್ರದಲ್ಲಿ ಮಧ್ಯಾಹ್ನದಲ್ಲಿ ಕೌಸಲ್ಯೆಯು ಸರ್ವದೇವೋತ್ತಮನಾದ ಶ್ರೀಹರಿಯನ್ನು ಮಗನನ್ನಾಗಿ ಹೆತ್ತಳು. ಕೋಟಿಕಂದರ್ಪರ ಕಾಂತಿ. ಕನ್ನೈದಿಲೆಯಂತೆ ಕಪ್ಪು ಬಣ್ಣ, ತಾವರೆದಳದಂತೆ ಅಗಲವಾದ ಕಣ್ಣು, ಶ್ರೀವತ್ಸ ಕೌಸ್ತುಭಗಳಿಂದ ಕಂಗೊಳಿಸುವ ಹರವಾದ ಎದೆ, ಉದಿಸುವ ಸೂರ್ಯನಂತಿರುವ ಕರ್ಣಕುಂಡಲ, ಅನೇಕ ಸೂರ್ಯರಿಗೆ ಸರಿಸಾಟಿಯಾಗಿ ಬೆಳಗುವ ತೇಜೋರಾಶಿಯಿಂದ ಒಡಗೂಡಿದ ಮುದ್ದಿನ ಮಗನಾಗಿ ಎಲ್ಲ ವೇದೋಪನಿಷತ್ತುಗಳ ಅರ್ಥವೇ ದಶರಥ ಮನೆಯಲ್ಲಿ ಇಳಿದು ಬಂದಿತ್ತು. ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣವಾದ ಪಕ್ಕದಲ್ಲಿ ಮಲಗಿ ಕೊಂಡಿತ್ತು. ಜಗತ್ತಿನ ನಾಥ ಜನ್ಮ ತಾಳಿದಾಗ ದೇವ ದುಂಧುಬಿಗಳು ಮೊಳಗಿದವು. ಪುಷ್ಪವೃಷ್ಟಿ ಆಯಿತು. ಬ್ರಹ್ಮಾದಿ ದೇವತೆಗಳು ವಿಮಾನರೂಢರಾಗಿ ಬಂದು ನಭಂಗಣದಲ್ಲಿ ನಿಂತು ಋಷಿಮುನಿಗಳೊಡನೆ ಆ ಜಗದೀಶ್ವರನನ್ನು ಸ್ತುತಿಸಿದರು. ಗಂಧರ್ವರು ಹಾಡಿದರು. ಅಪ್ಸರೆಯರು ನರ್ತಿಸಿದರು. ಹೋಮಕುಂಡದಲ್ಲಿ ಶಾಂತವಾದ ಆರಿದ ಅಗ್ನಿಯು ತಾನಾಗಿ ಹೊತ್ತಿ ಉರಿಯಿತು.

ಆಗ ಪುರೋಹಿತರಾದ ವಶಿಷ್ಠರಿಂದ ಜಾತಕರ್ಮ ಸಂಸ್ಕಾರವನ್ನು ಮಾಡಿಸಿ ಮಗುವಿಗೆ ಹೆಸರನ್ನು ಏನೆಂದು ಇಡಬೇಕೆಂದು ಕೇಳಿದ. ಆಗ ವಶಿಷ್ಠರು.

**ಶ್ರೀಯಃ ಕಮಲವಾಸಿನ್ಯಾ ರಮಣೋಃ ಮಹಾನ್ ಪ್ರಭುಃ ।**
**ತಸ್ಮಾತ್ ಶ್ರೀರಾಮ ಇತಿಸ್ಯ ನಾಮ ಸಿದ್ಧಂ ಪುರಾತನಂ ॥**

ಕಮಲದಲ್ಲಿ ವಾಸಿಸುವ ಶ್ರೀದೇವಿಯನ್ನು ರಮಿಸುವ ರಮಣನಾದುದರಿಂದ ಇವನಿಗೆ ಶ್ರೀರಾಮ ಎಂದು ಹೆಸರು ಪುರಾತನ ಕಾಲದಿಂದಲೂ ಸಿದ್ಧವೇ ಇದೆ.

ಸಹಸ್ರನಾಮ್ನಂ ಶ್ರೀಶಸ್ಯ ತುಲ್ಯ ಮುಕ್ತಿಪ್ರದಾಂಋಣಾಂ ಲಕ್ಷ್ಮೀಪತಿಯಾದ ಆ ನಾರಾಯಣನ ಸಾವಿರ ನಾಮಗಳನ್ನು ಬಣ್ಣಿಸುವ ವಿಷ್ಣು ಸಹಸ್ರನಾಮಕ್ಕೆ ಸಮಾನವಾಗಿದೆ ಈ ಶ್ರೀರಾಮ ಎಂಬ ಒಂದೇ ಹೆಸರು. ಈ ರಾಮ ಹೆಸರು ಭಕ್ತಿಯಿಂದ ಭಜಿಸಿದವರಿಗೆ ಮೋಕ್ಷವನ್ನೇ ಕೊಡುವದು. ಹೀಗೆ ಹೇಳಿ ವಶಿಷ್ಠರು ಶ್ರೀರಾಮ ಎಂದು ಆ ಮಗುವಿಗೆ ಹೆಸರು ಕೊಟ್ಟರು. ದಶರಥನ ಅಂತಃಪುರದ ಪರಿವಾರದವರು ಅವನಿಗೆ ಅದೇ ಹೆಸರನ್ನು ಇಟ್ಟರು.

ಹೀಗೆ ವಶಿಷ್ಠರು ಅದೇ ಹುಟ್ಟಿದ ಆ ಕೌಸಲ್ಯಾ ನಂದನನಿಗೆ ಸುಂದರವಾದ ಶ್ರೀರಾಮ ಎಂದು ಹೆಸರನ್ನು ಇಟ್ಟು ಆ ಎಳೆ ಕಂದನಿಗೆ ತಾವೇ ಮೊದಲು ಪ್ರದಕ್ಷಿಣೆ ಹಾಕಿದರು. ಅನಂತರ ಸಾಷ್ಟಾಂಗ ನಮಸ್ಕಾರ ಮಾಡಿದರು. ವಿಷ್ಣು ಸಹಸ್ರನಾಮದಿಂದ ಅವನನ್ನು ಸ್ತೋತ್ರ ಮಾಡಿದರು. ಹೀಗೆ ದಶರಥನ ಆ ಗಂಡು ಮಗುವಿಗೆ ಶ್ರೀರಾಮ ಎಂದು ನಾಮಕರಣ ಮಾಡಿ ವಶಿಷ್ಠರು ಅರಮನೆಯಿಂದ ಹೊರಬಿದ್ದರು.

ಮಹದಾನಂದ ತುಂದಿಲನಾದ ಆ ದಶರಥರಾಜನು ಶ್ರೇಷ್ಠ ಬ್ರಾಹ್ಮಣರನ್ನು ಕರೆದು ದಾನ ದಕ್ಷಿಣೆಗಳನ್ನು ನೀಡಿದ. ಹತ್ತು ಸಾವಿರ ಗೋದಾನಗಳನ್ನು ಮಾಡಿದ. ಸಹಸ್ರ ಬ್ರಾಹ್ಮಣನಿಗೆ ಸಹಸ್ರ ಬಂಗಾರದ ನಾಣ್ಯಗಳನ್ನು ಕೊಟ್ಟ. ಮೂರು ಗ್ರಾಮಗಳನ್ನು ದತ್ತು ನೀಡಿದ. ವಸ್ತ್ರ, ಆಭರಣ, ಅಗಣ್ಯ ನಗನಾಣ್ಯ, ಬಂಗಾರ ಮುತ್ತು ರತ್ನಗಳನ್ನು ರಾಶಿರಾಶಿಯಾಗಿ ದಾನ ಕೊಟ್ಟ.

ಕೌಸಲ್ಯೆಯು ತನ್ನ ಮಗನ ಕೈಯಲ್ಲಿ ಪದ್ಮ, ಕಾಲಲ್ಲಿ ಕಮಲ, ಶಂಖ, ಚಕ್ರ ಗದಾಪದ್ಮಾದಿ ಲಾಂಛನಗಳು, ವಕ್ಷಸ್ಥಳದಲ್ಲಿ ಶ್ರೀವತ್ಸ ಕೌಸ್ತುಭ ವನಮಾಲೆಗಳು, ಅಂಗಾಗಗಳಲ್ಲಿ ಎಲ್ಲ ಜಗತ್ತು, ಮುಖದಲ್ಲಿ ಹದಿನಾಲ್ಕು ಲೋಕಗಳು, ಉಸಿರಿನಲ್ಲಿ ನಾಲ್ಕು ವೇದಗಳು, ಹೊಕ್ಕಳದಲ್ಲಿ ಬ್ರಹ್ಮ, ಕಣ್ಣುಗಳಲ್ಲಿ ಚಂದ್ರ, ಸೂರ್ಯ, ಮೂಗಿನಲ್ಲಿ ವಾಯು, ಕಿವಿಗಳಲ್ಲಿ ಅಷ್ಟ ದಿಕ್ಕುಗಳು, ಇದನ್ನೆಲ್ಲ ನೋಡಿ ತುಸು ಗಾಬರಿಯಾದಂತಾಗಿ ಕೈ ಮುಗಿದು ಬೇಡಿಕೊಂಡಳು.

**ಕೌಸಲ್ಯಾ:-** ಸ್ವಾಮಿ ನಿನ್ನನ್ನು ಮಗನನ್ನಾಗಿ ಪಡೆದು ನಾನು ಧನ್ಯನಾದೆ. ಆದರೆ ಜಗನ್ನಾಥ ನೀನು ಪುಟ್ಟ ಕೂಸು ಆಗಿ ನನ್ನ ಪರ್ಯಂಕದಲ್ಲಿ ಪವಡಿಸು. ನನಗೆ ಲಾಲನೆ ಪಾಲನೆ ಮಾಡಲು ಬರುವಂತೆ ಮನುಷ್ಯರ ಮಕ್ಕಳಂತೆ ಶಿಶುರೂಪವನ್ನು ಧಾರಣ ಮಾಡು.

**ಮಹಾದೇವ:-** ತಾಯಿಯ ಈ ಮಾತನ್ನು ಕೇಳಿದ ಕೂಡಲೇ ಶ್ರೀಹರಿಯು ಮಾನವ ಮಗುವಾಗಿ ಕೂಸಿನ ರೂಪದಿಂದ ರೋಧಿಸಿದ. ಆಗ ಕೌಸಲ್ಯೆಗೆ ಹಿಗ್ಗಾಗಿ ಅವಳು ಆ ಮುದ್ದು ಕೂಸನ್ನು ಆಲಂಗಿಸಿ ಆನಂದದಿಂದ ಎದೆ ಊಡಿಸಿದಳು. ಬಾಲರೂಪಿಯಾದ ಶ್ರೀರಾಮನು ತಾಯಿ ಸ್ತನಪಾನವನ್ನು ಮಾಡಿ ಅವಳ ತೊಡೆಯ ಮೇಲೆ ಆಡುತ್ತ ಮಲಗಿದ. ಚೈತ್ರ ಶುಕ್ಲ ನವಮಿಯ ದಿನ ಭೂಲೋಕದ ಎಲ್ಲ ನಗರವಾಸಿಗಳೂ, ಗ್ರಾಮವಾಸಿಗಳೂ, ಜಾನಪದಗಳ ಜನರೂ ರಾಮಜನ್ಮದ ಉತ್ಸವವನ್ನು ಆಚರಿಸಿದರು. ಕೈಕೇಯಿಯಲ್ಲಿ ವಿಷ್ಣುವಿನ ಪಾಂಚಜನ್ಯ ಶಂಖದ ಅಂಶದಿಂದ ಜನಿಸಿದ ಭರತನು ಹುಟ್ಟಿದ. ಸುಮಿತ್ರೆಯು ಲಕ್ಷ್ಮಣ ಶತ್ರುಘ್ನ ಎಂಬ ಇಬ್ಬರು ಮಕ್ಕಳನ್ನು ಹೆತ್ತಳು. ಲಕ್ಷ್ಮಣನಲ್ಲಿ ಆದಿಶೇಷನ ಅಂಶವು ಇದ್ದಿತು. ಶ್ರೀಹರಿಯ ಕೈಯಲ್ಲಿರುವ ಸುದರ್ಶ ಚಕ್ರದ ಅಂಶದಿಂದ ಶತ್ರುಘ್ನನು ಜನಿಸಿದ.

ವೈವಸ್ವತ ಮನುವಿನ ವಂಶದಲ್ಲಿ ಹುಟ್ಟಿದ ಈ ಎಲ್ಲ ರಾಜ ಕುಮಾರರಿಗೆ ವಶಿಷ್ಠರು ಶಸ್ತ್ರವಿದ್ಯೆಯನ್ನೂ ಶಾಸ್ತ್ರವಿದ್ಯೆಯನ್ನೂ ಕಲಿಸಿಕೊಟ್ಟರು. ಪಾಯಸದ ಹಂಚಿಕೆಗೆ ಅನುಗುಣವಾಗಿ ರಾಮ ಲಕ್ಷ್ಮಣರು ಜೋಡಾದರು. ಭರತ ಶತ್ರುಘ್ನರು ಒಡನಾಡಿಗಳಾದರು.

ಅನಂತರ ಲೋಕಮಾತೆಯಾದ ಲಕ್ಷ್ಮೀದೇವಿಯು, ಜನಕರಾಜನು ಯಜ್ಞಕ್ಕಾಗಿ ತನ್ನ ಹೊಲದಲ್ಲಿ ನೇಗಿಲ ಹೊಡೆಯುತ್ತಿರುವಾಗ ಹರಗಿ ಇಟ್ಟ ನೆಲದಿಂದ ಹುಟ್ಟಿ ಬಂದಳು. ವೇದಮಯಿಯಾದ ಆ ಕನ್ಯಾಮಣಿಯನ್ನು ಎತ್ತಿಕೊಂಡ ಆ ಜನಕರಾಜನು ತನ್ನ ಮಗಳು

ಎಂದು ಪ್ರೀತಿಯಿಂದ ಬೆಳೆಸಿದ. ಉದಯ ಕಾಲದ ಸೂರ್ಯನಂತೆ ತೇಜಸ್ವಿನಿಯಾದ ಸರ್ವಲಕ್ಷಣದಿಂದ ಒಡಗೂಡಿದ ಆ ಜನಕರಾಜಕುಮಾರಿಯು ಸರ್ವಲೋಕ ರಕ್ಷಣೆಗಾಗಿ ಅವತರಿಸಿದ ಸಾಕ್ಷಾತ್ ಲಕ್ಷ್ಮೀದೇವಿಯೇ ಆಗಿದ್ದಳು.

ಇದೇ ಕಾಲದಲ್ಲಿ ವಿಶ್ವಾಮಿತ್ರ ಮುನಿಯ ಗಂಗೆಯ ತಟದಲ್ಲಿ ಇರುವ ತನ್ನ ಸಿದ್ಧಾಶ್ರಮದಲ್ಲಿ ಒಂದು ದೊಡ್ಡ ಯಜ್ಞವನ್ನು ಮಾಡಬೇಕು ಎಂದು ಸಿದ್ಧತೆ ನಡೆಸಿದ. ಆ ಯಜ್ಞಕ್ಕೆ ರಾವಣನ ಅನುಚರರಾದ ಅನೇಕ ನಿಶಾಚರರು ಬಗೆ ಬಗೆಯಿಂದ ವಿಘ್ನ ವಿಡ್ದೂರಗಳನ್ನು ಅಡ್ಡ ಒಡ್ಡಿ ಆತಂಕಗಳನ್ನು ಉಂಟು ಮಾಡತೊಡಗಿದರು. ವಿಶ್ವಾಮಿತ್ರ ಮಹಾಮುನಿ ಮನಸ್ಸಿನಲ್ಲಿಯೇ ವಿಚಾರ ಮಾಡಿ ರಘುವಂಶದಲ್ಲಿ ಹುಟ್ಟಿದ ಶ್ರೀರಾಮನನ್ನೇ ತನ್ನ ಯಜ್ಞ ರಕ್ಷಣೆಗಾಗಿ ಕರೆದುಕೊಂಡು ಬರಬೇಕು ಎಂದು ನಿರ್ಧರಿಸಿದ.

ಆ ಚಂಡ ಕೋಪನಾದ ಮಹಾಮಹರ್ಷಿ ನೇರವಾಗಿ ಅಯೋಧ್ಯೆಗೆ ಆಗಮಿಸಿದ, ದಶರಥನು ವಿಶ್ವಾಮಿತ್ರರನ್ನು ಕಂಡು ಸ್ವಾಗತ ಸತ್ಕಾರ ಮಾಡಿ ಪೂಜೆಗೈದು ಆಸನದ ಮೇಲೆ ಕೂಡಿಸಿದ. ವಿಧಿಪೂರ್ವಕವಾಗಿ ಅವರನ್ನು ಸ್ವಾಗತಿಸಿ, ಸತ್ಕರಿಸಿ, ಅರ್ಘ್ಯ ಪಾದ್ಯಾದಿಗಳಿಂದ ಅರ್ಚಿಸಿ ಪೂಜಿಸಿದ. ಬಳಿಕ ಕೈ ಮುಗಿದು ಅಪ್ಪಣೆ ಏನು ಎಂದು ಕೇಳಿದ.

**ವಿಶ್ವಾಮಿತ್ರ:-** ಮಹಾರಾಜ, ನನ್ನ ಯಜ್ಞ ರಕ್ಷಣೆಗಾಗಿ ರಾಮನನ್ನು ಕಳಿಸಿಕೊಡು. ನನ್ನ ಯಜ್ಞವು ಸಫಲವಾಗಬೇಕಾದರೆ ರಾಮನ ಸಹಾಯ ಅತ್ಯಗತ್ಯ.

**ಮಹಾದೇವ:-** ವಿಶ್ವಾಮಿತ್ರರ ವಚನವನ್ನು ಕೇಳಿ ದಶರಥ ಮಹಾರಾಜನು ರಾಮಲಕ್ಷ್ಮಣರನ್ನು ಅವರೊಡನೆ ಕಳಿಸಿಕೊಟ್ಟ. ಆ ರಾಮ ಲಕ್ಷ್ಮಣರು ವಿಶ್ವಾಮಿತ್ರರೊಡನೆ ಕಾಡಿನಲ್ಲಿ ನಡೆದು ಹೋಗುವಾಗಲೇ ತಾಟಕಾ ಎಂಬ ಘೋರ ರಾಕ್ಷಸಿಯು ಅವರ ಕಣ್ಣಿಗೆ ಬಿದ್ದಳು. ಸುಂದರಾಕ್ಷಸನ ಮಡದಿಯಾದ ಆ ತಾಟಕ, ಮುನಿಗಳ ಯಜ್ಞಗಳನ್ನು ವಿಧ್ವಂಸನ ಗೈಯುವಲ್ಲಿ ದತ್ತದೀಕ್ಷೆ. ವಿಶ್ವಾಮಿತ್ರನ ಆದೇಶದಂತೆ ರಾಮನು ಆ ರಾಕ್ಷಸಿಯನ್ನು ತನ್ನ ಬಾಣದಿಂದ ಹೊಡೆದು ವಧಿಸಿದ. ರಾಮನಿಂದ ಹತಪತಿತಳಾದ ಆ ರಾಕ್ಷಸಿ ಕೂಡಲೇ ದಿವ್ಯರೂಪವನ್ನು ಧರಿಸಿದಳು. ರಾಮನ ಬಾಣ ಮೈ ಮುಟ್ಟಿದ ತಕ್ಷಣದಲ್ಲಿ ಅವಳ ಪಾಪಗಳೆಲ್ಲ ಸುಟ್ಟುಹೋದವು. ಅವಳಿಗೆ ದಿವ್ಯಗತಿ ಪ್ರಾಪ್ತವಾಯಿತು. ಶ್ರೀರಾಮನು ಅವಳನ್ನು ಕೊಂದು ವಿಶ್ವಾಮಿತ್ರರ ಆಶ್ರಮದಲ್ಲಿ ಪ್ರವೇಶಿಸಿದ ಲಕ್ಷ್ಮಣನೊಂದಿಗೆ. ಆಶ್ರಮದಲ್ಲಿಯಿರುವ ಋಷಿ ಮುನಿಗಳು ರಾಮನಿಗೆ ಸ್ವಾಗತ ನೀಡಿದರು. ಆ ಸೋದರರಿಬ್ಬರನ್ನೂ ಅರ್ಘ್ಯಪ್ಯಾದಾದಿಗಳಿಂದ ಪೂಜಿಸಿದರು. ವಿಶ್ವಾಮಿತ್ರ ಮುನಿ ಯಜ್ಞದೀಕ್ಷೆಯನ್ನುವಹಿಸಿದ. ಯಜ್ಞ ಪ್ರಾರಂಭವಾಯಿತು. ಅನೇಕ ಮುನಿಗಳು ಯಜ್ಞವನ್ನು ಸಾಂಗ ಮಾಡಲು ವಿಶ್ವಾಮಿತ್ರರಿಗೆ ಸಹಾಯ ಮಾಡಲು ಸಿದ್ಧರಾಗಿ ಕುಳಿತರು.

ಯಜ್ಞವು ಪ್ರಾರಂಭವಾದಾಗ ಒಂದು ಕ್ಷಣದಲ್ಲಿಯೇ ಮಾರೀಚ ಎಂಬ ಮಹಾ ನೀಚನಾದ ರಾಕ್ಷಸ ತಮ್ಮ ಸುಬಾಹುವಿನೊಂದಿಗೆ ಯಜ್ಞಕ್ಕೆ ವಿಘ್ನವನ್ನು ಒಡ್ಡಲು ಅಲ್ಲಿಗೆ ಬಂದ. ರಾಮ ನೋಡಿದ. ಒಬ್ಬರಿಗಿಂತ ಒಬ್ಬರು ಘೋರಾಕಾರರು. ಮಹಾಬಲಿಷ್ಠರು. ಅದಕ್ಕಿಂತ ದುಷ್ಟರು. ರಾಮ ಕೂಡಲೇ ಒಂದು ಬಾಣ ಬಿಟ್ಟ. ಅದರಿಂದ ಸುಬಾಹು ಪ್ರಾಣ ಬಿಟ್ಟ. ರಾಮ ಮತ್ತೊಂದು ಅಸ್ತ್ರ ತೊಟ್ಟ. ಅದು ಪವನಾಸ್ತ್ರ, ಬಾಣ ಬಿರುಗಾಳಿಯಾಗಿ ಬೀಸಿತು. ಮಾರೀಚನನ್ನು ತರಗೆಲೆಯಂತೆ ಎತ್ತಿ ಮುಗಿಲಿನಲ್ಲಿ ಸುತ್ತಿಸಿ ಸಮುದ್ರದ ನಟ್ಟ

ನಡುವೆ ಎಸೆಯಿತು. ಆಗಲೇ ಅರಿವು ಮೂಡಿತು ಮಾರೀಚನಿಗೆ. ರಾಮನ ಶಕ್ತಿ ಎಂಥದು ಎಂಬುದರ ಪರಿಚಯವೂ ಆಯಿತು. ಅಂದಿನಿಂದ ಅವನು ಕೈಯಲ್ಲಿ ಅಸ್ತ್ರ ಹಿಡಿಯುವುದನ್ನೇ ಬಿಟ್ಟ. ಜಪಮಾಲೆ ಹಿಡಿದ. ತಪಸ್ಸನ್ನು ಆಚರಿಸಲು ದೊಡ್ಡ ಆಶ್ರಮದಲ್ಲಿ ಸೇರಿಕೊಂಡ.

ಇತ್ತ ವಿಶ್ವಾಮಿತ್ರರ ಯಜ್ಞದ ಕುತ್ತು ಆಪತ್ತುಗಳೆಲ್ಲವೂ ರಾಮನಿಂದ ಎತ್ತಲೋ ಹಾರಿಹೋದವು. ಯಾವ ವಿಘ್ನವು ಇಲ್ಲದೇ ಯಜ್ಞ ಸಾಂಗವಾಗಿ ನೆರವೇರಿತು. ಇದರಿಂದ ವಿಶ್ವಾಮಿತ್ರರಿಗೆ ಹಿಗ್ಗು ಮುನಿಗಳಿಗೆಲ್ಲ ಸಂತಸ, ಪುರೋಹಿತರಿಗೆಲ್ಲ ಸಮಾಧಾನ. ಎಲ್ಲರೂ ರಾಮನನ್ನು ಪೂಜಿಸುವವರೇ. ವಿಶ್ವಾಮಿತ್ರರಂತೂ ಆನಂದದಿಂದ ರಾಮನನ್ನು ಅಪ್ಪಿಕೊಂಡೇ ಬಿಟ್ಟರು. ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಘೋರ ರಕ್ಕಸರನ್ನು ಮಣ್ಣು ಮುಕ್ಕಿಸಿದ ರಾಮ ಇನ್ನೂ ಹಾಲ್ಗಲ್ಲದ ಹಸುಳೆ. ಅವನ ಜುಟ್ಟಿನಲ್ಲಿ ಚಿಕ್ಕ ಮಕ್ಕಳ ತಲೆಯಲ್ಲಿರಿಸುವ ಜಲುಪಿ ಹೂ. ಕನ್ನೈದಿಲೆಯಂತಹ ಕಪ್ಪು ಬಣ್ಣ ಕಾಡಿಗೆಗಣ್ಣು. ಆದರೂ ಅವನ ಎರಡೂ ಕಣ್ಣುಗಳು ಹೊಂದಾವರೆಗಿಂತ ಸುಂದರ. ಈ ಬಾಲವೀರನನ್ನು ಕಂಡು ವಿಶ್ವಾಮಿತ್ರರ ಮನಸ್ಸಿನಲ್ಲಿ ಅಕ್ಕರತೆ ಉಕ್ಕಿ ಬಂತು. ಅವರು ಪ್ರೀತಿಯಿಂದ ಅವನ ನೆತ್ತಿ ಮೂಸಿದರು. ಬಾಯ್ತುಂಬ ಬಣ್ಣಿಸಿದರು.

ಇದೇ ಕಾಲದಲ್ಲಿ ಮಿಥಿಲೆಯ ದೊರೆ ವಾಜಪೇಯ ಯಜ್ಞವನ್ನು ಪ್ರಾರಂಭ ಮಾಡಿದ್ದ. ಅನೇಕ ಮುನಿಗಳು ಅವನ ಬೆಂಬಲಕ್ಕೆ. ಈ ಸಮಾಚಾರ ಎಲ್ಲ ಋಷ್ಯಾಶ್ರಮಗಳಿಗೂ ತಲುಪಿತು. ವಿಶ್ವಾಮಿತ್ರರೇ ಮೊದಲಾದ ಋಷಿಮುನಿಗಳೆಲ್ಲ ಆ ಯಜ್ಞಕ್ಕಾಗಿ ಹೊರಟರು. ಆ ಋಷಿಗಳ ಬಳಗದೊಡನೆ ರಾಮ ಲಕ್ಷಣರು ಯಜ್ಞ ದೀಕ್ಷೆಯಿಂದ ನಡೆದರು. ದಾರಿಯಲ್ಲಿ ಒಂದು ದೊಡ್ಡ ಕಲ್ಲು. ನಡೆದು ಹೋಗುವಾಗ ಬೀದಿಯಲ್ಲಿ ಬಿದ್ದ ಆ ಬಂಡೆಗಲ್ಲಿಗೆ ರಾಮನ ಕಾಲುತಾಕಿತು. ಕೂಡಲೇ ಆ ಕಲ್ಲು ಕನ್ಯೆಯಾಗಿ ಎದ್ದು ನಿಂತಿತು. ಪೂರ್ವಕಾಲದಲ್ಲಿ ಗೌತಮ ಎಂಬ ಮುನಿಯು ತನ್ನ ಹೆಂಡತಿಯಾದ ಅಹಲ್ಯೆಯನ್ನು ಕಲ್ಲಾಗಿ ಬೀಳು ಎಂದು ಶಪಿಸಿದ್ದ. ರಾಮನ ಪಾದದ ಧೂಳಿನ ಕಣದ ಪ್ರಭಾವದಿಂದ ಶಿಲೆ ಸುಂದರಿಯಾಯಿತು, ಕಲ್ಲು ಕಾಮಿನಿಯಾಯಿತು.

ಅನಂತರ ಎಲ್ಲ ಮುನಿ ಮಾನ್ಯರೊಡನೆ ರಾಮಲಕ್ಷ್ಮಣರು ಜನಕರಾಜನ ಮಿಥಿಲಾ ಪಟ್ಟಣಕ್ಕೆ ಬಂದರು. ಅವರ ಅರಸ ಜನಕ. ವಿಶ್ವಾಮಿತ್ರರು ಅನೇಕ ಮಹಾಮುನಿಗಳು ಹಾಗೂ ರಾಮ ಲಕ್ಷ್ಮಣರೊಡನೆ ತನ್ನ ರಾಜಧಾನಿಗೆ ದಯಮಾಡಿಸಿದ್ದನ್ನು ನೋಡಿ ಅತ್ಯಾನಂದವಾಯಿತು ಆ ಮಿಥಿಲಾ ಪತಿಗೆ. ಜನಕರಾಜ ಮುನಿಯೊಡನೆ ಬಂದ ಈ ಮೋಹನಾಂಗನನ್ನು ನೋಡಿದ. ಬಣ್ಣ ಬಿಳಿ ಕಮಲದಂಥ ಕಣ್ಣು, ಕಮಲದಂತೆ ಕೋಮಲವಾದ ಕೈ ಕಾಲು, ಕೋಟಿ ಕಾಮಣ್ಣರನ್ನು ನಿವಾಳಿಸಿ ಒಗೆಯುವಂಥ ಚೆಲುವು. ಸರ್ವ ಲಕ್ಷಣ ಸಂಪತ್ತಿ, ಎಲ್ಲವನ್ನೂ ಕಣ್ಣಿನಿಂದೇ ಅಳೆದ. ಬಣ್ಣನೆ ಮಾಡಲು ಬಾರದೇ ಮೂಕ ವಿಸ್ಮಿತನಾಗಿ ನಿಂತ. ಈ ದಶರಥ ಕುಮಾರನ ದರ್ಶನವಾದದ್ದು ತನ್ನ ಮೇಲೆ ವಿಷ್ಣುವಿನ ಅನುಗ್ರಹವೇ ಎಂದು ತನ್ನ ಮನಸ್ಸಿನಲ್ಲಿಯೇ ನಿರ್ಧಾರ ಕೈಕೊಂಡ. ಅವರಿಬ್ಬರೂ ರಘುಕುಲದ ರಾಜಕುಮಾರರು ಎಂದು ತಿಳಿದ ಬಳಿಕಂತೂ ಅವನ ಸಂತಸಕ್ಕೆ ನಿಲುವೇ ಉಳಿಯಲಿಲ್ಲ. ವಸ್ತ್ರ ಆಭರಣಗಳನ್ನು ಇಟ್ಟು ಅರಸುಕುವರರನ್ನು ಪ್ರೀತಿಯಿಂದ ಪೂಜಿಸಿದ. ಮಧುಪರ್ಕ ಆಸನಾದಿಗಳನ್ನು ಕೊಟ್ಟು ಋಷಿಗಳನ್ನು ಅರ್ಚಿಸಿದ. ಯಜ್ಞದ

ಕೊನೆಗೆ ರಾಜೀವಗಣ್ಣಿನ ಆ ರಾಮ ಭಯಂಕರವಾದ ಶಿವನಧನುಸ್ಸನ್ನು ಲೀಲೆಯಿಂದಲೇ ಮುರಿದ. ಜನಕರಾಜ ಕುಮಾರಿಯನ್ನು ಗೆದ್ದ. ಸೀತೆಗೂ ಬಹಳ ಹಿಗ್ಗು. ತನ್ನ ಪತಿ ಎಂಥ ಶೂರ ಎಂಬ ಹೆಮ್ಮೆ ಕೂಡ ಹೃದಯದಿಂದ ಹೊಮ್ಮಿತು. ಜನಕರಾಜ ಹಿಂದೆ ಸಮುದ್ರನು ತನ್ನ ಮಗಳಾದ ಶ್ರೀದೇವಿಯನ್ನು ಶ್ರೀಹರಿಗೆ ಕೊಟ್ಟಂತೆ ಜನಕರಾಜ ಸೀತೆಯನ್ನು ರಾಮನಿಗೆ ಕೊಡುವ ಸಂಕಲ್ಪ ಮಾಡಿದ. ಅಯೋಧ್ಯೆಗೆ ಒಬ್ಬ ದೂತನನ್ನು ಅಟ್ಟಿದ. ದಶರಥ ರಾಜನಿಗೆ ಹೇಳಿ ಕಳಿಸಿದ. ಆಗ ದಶರಥನು ಭರತ ಶತ್ರುಘ್ನ ಹಾಗೂ ವಶಿಷ್ಠ ವಾಮದೇವಾದಿ ಮುನಿ ಮಹಾನುಭಾವರನ್ನು ಕರೆದುಕೊಂಡು ಮಿಥಿಲಾಪಟ್ಟಣಕ್ಕೆ ಆಗಮಿಸಿದ.

ಆ ಶುಭ ಕಾಲದಲ್ಲಿ ದಶರಥರಾಜನು ಜನಕರಾಜನ ಮಗಳಾದ ಸೀತಾದೇವಿಯೊಂದಿಗೆ ಶ್ರೀರಾಮನ ಮದುವೆಯನ್ನು ವೈಭವದಿಂದ ನೆರವೇರಿಸಿದ.

ಅನಂತರ ಲಕ್ಷ್ಮಣನಿಗೆ ಊರ್ಮಿಳೆ ಎಂಬ ಕನ್ಯೆಯನ್ನು ಮಾಂಡವಿ ಶ್ರುತಿಕೀರ್ತಿಯೆಂಬ ಜನಕರಾಜನ ತಮ್ಮನ ಹೆಣ್ಣು ಮಕ್ಕಳನ್ನು ಭರತ ಶತ್ರುಘ್ನರಿಗೆ ವಿವಾಹ ಮಾಡಿಕೊಟ್ಟ.

ಹೀಗೆ ಒಳ್ಳೆ ಸಂಭ್ರಮದಿಂದ ವಿಜೃಂಭಣ ಪೂರ್ವಕವಾಗಿ ದಶರಥರಾಜನು ಮಗನ ಮದುವೆಯನ್ನು ಮುಗಿಸಿಕೊಂಡು ಅಯೋಧ್ಯೆಗೆ ಹೊರಟ. ಜನಕರಾಜನು ಮಗಳಿಗಾಗಿ ಬಗೆಬಗೆಯ ಕಾಣಿಕೆಗಳನ್ನು ಕೊಟ್ಟ. ಮಕ್ಕಳು ಸೊಸೆಯಂದಿರು ಪರಿವಾರ ಸಹಿತವಾಗಿ ದಶರಥರಾಜನು ದಿಬ್ಬಣ ಎಬ್ಬಿಸಿಕೊಂಡು ಮರಳಿ ಅಯೋಧ್ಯೆಗೆ ಹೊರಟ ಮದುಮಗಳನ್ನು ಕರೆದುಕೊಂಡು. ಆದರೆ ದಾರಿಯಲ್ಲಿ ಕೈಯಲ್ಲಿ ಕೊಡಲಿ ಹಾಗೂ ಬಿಲ್ಲುಗಳನ್ನು ಹಿಡಿದು ಕೋಪದಿಂದ ಕೆರಳಿದ ಕೇಸರಿಯಂತೆ ರಾಮನ ಮೇಲೆ ಯುದ್ಧ ಮಾಡುವ ಲವಲವಿಕೆಯಿಂದ ಏರಿ ಬಂದ ಪರಶುರಾಮ. ಅಲ್ಲಿ ದಶರಥನ ಪಕ್ಕದಲ್ಲಿ ಇರುವ ಶ್ರೀರಾಮನನ್ನು ನೋಡಿ ಹೇಳಿದ, ಮಹಾ ಬಲಿಷ್ಠನಾದ ರಾಮಚಂದ್ರ, ನಾನು ಹಿಂದೆ ವೀರರಾದ ಅನೇಕ ರಾಜರನ್ನು ಕೊಂದು ಬ್ರಾಹ್ಮಣರಿಗೆ ಭೂಮಿಯನ್ನು ಕೊಟ್ಟು ತಪಸ್ಸಿಗಾಗಿ ಅರಣ್ಯಕ್ಕೆ ಹೋಗಿದ್ದೆ. ಅಲ್ಲಿ ನನಗೆ ನಿನ್ನ ಶಕ್ತಿ ಪರಾಕ್ರಮಗಳ ಸಮಾಚಾರ ತಿಳಿದು ಬಂತು. ನಿನ್ನ ಆ ವೀರ್ಯ ಪರಾಕ್ರಮವನ್ನು ತಿಳಿದ ಬಳಿಕ ನಿನ್ನೊಡನೆ ಯುದ್ಧ ಮಾಡಬೇಕೆಂಬ ಅದಮ್ಯ ಆಕಾಂಕ್ಷೆ ನನ್ನಲ್ಲಿ ಉದಿಸಿತು. ನಿಮ್ಮ ಇಕ್ಷ್ವಾಕು ವಂಶ ನನ್ನ ತಾಯಿಯ ತಂದೆಯ ಕುಲ. ಆದುದರಿಂದ ಆ ವಂಶದಲ್ಲಿ ಹುಟ್ಟಿದ ಯಾರನ್ನೂ ನಾನು ಕೊಲ್ಲುವುದಿಲ್ಲ. ಆದರೂ ನಿನ್ನ ಕ್ಷಾತ್ರ ತೇಜಸ್ಸನ್ನು ಕೇಳಿದ ಬಳಿಕ ನನಗಂತೂ ಸಹನ ಮಾಡುವದಕ್ಕಾಗುವುದಿಲ್ಲ. ಅದರ ಮೇಲೆ ನೀನು ಆ ರುದ್ರ ಧನಸ್ಸನ್ನು ಮುರಿದದ್ದನ್ನು ಕೇಳಿ ನನ್ನ ಸಹನ ಶಕ್ತಿಯ ಸೀಮೆಗಳೆಲ್ಲವೂ ಅಳಿಸಿಹೋಗಿವೆ. ನಿನ್ನೊಡನೆ ಯುದ್ಧ ನನಗೆ ಅನಿವಾರ್ಯವಾಗಿದೆ. ನನ್ನ ಬಳಿಯಲ್ಲಿರುವ ಈ ವಿಷ್ಣು ಧನುಸ್ಸನ್ನು ಇನ್ನು ನೀನು ಹೆದೆಯೇರಿಸಿ ಬಾಣ ಹೂಡು ನೋಡೋಣ. ಅಂದರೆ ನಾನು ನಿನ್ನಿಂದ ಗೆಲ್ಲಲ್ಪಟ್ಟಂತೆ. ಇಲ್ಲದಿದ್ದರೆ ಕೈಗಳೊಳಗಿನ ಶಸ್ತ್ರಾಸ್ತ್ರಗಳನ್ನು ಚೆಲ್ಲಿ ನನಗೆ ಶರಣು ಬಾ.

**ಮಹಾದೇವ:-** ಪರುಶುರಾಮನ ಈ ಮಾತುಗಳನ್ನು ಕೇಳಿ ರಾಮ ಅವನ ಕಡೆಯಿಂದ ಆ ವಿಷ್ಣು ಧನುಸ್ಸನ್ನು ತೆಗೆದುಕೊಂಡ. ಅದರಿಂದ ಪರಶುರಾಮನ ತೇಜಸ್ಸೇ ಹೋದಂತೆ ಆಯಿತು. ತೇಜೋಹೀನನಾದ ಆ ಪರಶುರಾಮನನ್ನು ಕಂಡು ಎಲ್ಲ ರಾಜರೂ ರಾಮನನ್ನು ಸಾಧು ಸಾಧು ಎಂದು ಪ್ರಶಂಸಿದರು. ಆಗ ಆ ಶ್ರೀರಾಮನು ಆ ಬಿಲ್ಲನ್ನು ಹೆದೆಯೇರಿಸಿ

ಬಾಣಹೂಡಿ ಕಿವಿಯವರೆಗೆ ಜಗ್ಗಿ ಚೆಕ್ಕಸ ಬೆರಗಾಗಿ ತನ್ನನ್ನೇ ನೋಡುತ್ತ ನಿಂತ ಆ ಪರಶುರಾಮನನ್ನು ಕುರಿತು ನುಡಿದ:- ಬ್ರಾಹ್ಮಣ, ಈ ಮುಖ್ಯ ಬಾಣದಿಂದ ನಾನು ಏನು ಮಾಡಲಿ ಹೇಳು. ನಿನ್ನ ಲೋಕದ್ವಯವನ್ನು ಭೇದಿಸಲೋ ಅಥವಾ ಸ್ವರ್ಗವನ್ನೇ ಭೇದಿಸಲೋ? ಆ ಘೋರವಾದ ಬಾಣವನ್ನು ನೋಡಿ ಪರಶುರಾಮನು ಇವನೇ ಪರಮಾತ್ಮ ಎಂದು ತಿಳಿದುಕೊಂಡು ನಿಶ್ಚಲವಾಗಿ ರಾಮನನ್ನು ಕುರಿತು ಮಾತನಾಡಿದ.

**ಪರಶುರಾಮ:-** ರಾಮ, ನೀನು ಪರಾತ್ಪರಾ ಪರಬ್ರಹ್ಮ ಸ್ವರೂಪ, ವೇದಗಳಿಗೂ ಅಗೋಚರನಾದ ನಿನ್ನನ್ನು ಸ್ತುತಿಸಲು ನೀನು ಸರ್ವದಾ ಅಕ್ಷಯ. ಈ ನನ್ನ ವಿಷ್ಣು ಧನಸ್ಸನ್ನು ನಿನಗೆ ಒಪ್ಪಿಸಿದ್ದರಿಂದ ನನ್ನ ಅವತಾರದ ಮುಂದಿನ ಕಾರ್ಯವನ್ನೆಲ್ಲ ನನ್ನ ಅವತಾರಭೂತನಾದ ನೀನೇ ಮಾಡು. ನನಗೆ ವಿಶ್ರಾಂತಿಯನ್ನು ನೀಡು.

**ಮಹಾದೇವ:-** ಹೀಗೆ ಹೇಳಿ ಪರಶುರಾಮನು ರಾಮಲಕ್ಷ್ಮಣರಿಂದ ಪೂಜಿತನಾಗಿ ತಪಸ್ಸನ್ನು ಆಚರಿಸಲಿಕ್ಕೆ ನರನಾರಾಯಣರ ಆಶ್ರಮಕ್ಕೆ ತೆರಳಿದ.

ಇತ್ತ ದಶರಥನು ಮಡದಿ ಮಕ್ಕಳೊಂದಿಗೆ ಕೂಡಿಕೊಂಡು ಒಳ್ಳೆ ಮುಹೂರ್ತದಲ್ಲಿ ಆಯೋಧ್ಯೆಯನ್ನು ಪ್ರವೇಶಿಸಿದ. ರಾಮ, ಲಕ್ಷ್ಮಣ, ಭರತ, ಶತ್ರುಘ್ನ ಸೀತಾ, ಊರ್ಮಿಳಾ ಮಾಂಡವಿ ಶ್ರುತಿಕೀರ್ತಿ ಎಂಬ ತಮ್ಮ ಮೆಚ್ಚಿನ ಮನದನ್ನೆಯರೊಂದಿಗೆ ಅಯೋಧ್ಯೆಯ ಅರಮನೆಯಲ್ಲಿ ಆನಂದದಿಂದ ವಾಸಮಾಡಿದರು.

ಹೀಗೆ ಆ ಎಲ್ಲ ದಶರಥನಂದನರು ಹನ್ನೆರಡು ವರ್ಷಗಳಕಾಲ ಮದುವೆಯ ನಂತರ ರಸಾರಾಗರಂಜಿತವಾದ ಮಧುರಸಮಯವನ್ನು ತಮ್ಮ ನೆಚ್ಚಿನ ನಲ್ಲೆಯರೊಂದಿಗೆ ಸರಸಸಲ್ಲಾಪ ಸುಖ ಸಂಕಥಾ ವಿನೋದ ವಿಹಾರಗಳಿಂದ ಆನಂದಮಯವಾಗಿ ಕಳೆದರು.

ಮುಂದೆ ಕೆಲವು ದಿನಗಳ ಬಳಿಕ ದಶರಥನು ತನ್ನ ಹಿರಿಯ ಮಗನಾದ ರಾಮನಿಗೆ ರಾಜ್ಯಾಧಿಕಾರವನ್ನು ಒಪ್ಪಿಸಿ ಯುವರಾಜ್ಯ ಪಟ್ಟಾಭಿಷೇಕ ಮಾಡಿ ತಾನು ರಾಜಕಾರಣದಿಂದ ನಿವೃತ್ತನಾಗಬೇಕೆಂದು ಬಯಸಿದ. ಆದರೆ ಕಿರಿಯ ಹೆಂಡತಿಯಾದ ಕೈಕೇಯಿಯು ಈ ರಾಮರಾಜ್ಯಾಭಿಷೇಕದ ಸಮಾಚಾರವನ್ನು ಕೇಳಿ ಅಸೂಯೆಯಿಂದ ಉರಿದೆದ್ದಳು. ಹಿಂದೆ ಒಂದು ದಿನ ದಶರಥ ಮಹಾರಾಜನು ಅವಳಿಂದ ಒಂದು ಸಂದರ್ಭದಲ್ಲಿ ಉಪಕೃತನಾಗಿದ್ದ. ಎರಡು ವರಗಳನ್ನು ಕೊಟ್ಟು ಬೇಕಾದಾಗ ಪಡೆಯಬೇಕೆಂದು ಹೇಳಿದ. ಕೈಕೇಯಿಯು ಈಗ ಎರಡು ವರಗಳ ಉಪಯೋಗ ಮಾಡಿಕೊಂಡು ಒಂದು ವರದಿಂದ ಭರತನಿಗೆ ಪಟ್ಟಾಭಿಷೇಕ ಮಾಡಬೇಕು ಇನ್ನೊಂದಕ್ಕೆ ರಾಮನು ಹದಿನಾಲ್ಕು ವರ್ಷ ಕಾಡಿಗೆ ಹೋಗಬೇಕೆಂದು ಕೇಳಿಕೊಂಡಳು. ರಾಜನು ತಾನುಕೊಟ್ಟ ವರಗಳನ್ನು ಸತ್ಯಮಾಡಲಿಕ್ಕಾಗಿ ರಾಮನನ್ನು ವನವಾಸಕ್ಕೆ ಕಳಿಸಿದ. ರಾಮನನ್ನು ಕಳಿಸುವಾಗ ದಶರಥನಿಗೆ ಆದ ದುಃಖ ಅಷ್ಟಿಷ್ಟಲ್ಲ. ರಾಮನು ತಂದೆ ಬೇಡವೆಂದರೂ ತಾನೇ ಸಿಂಹಾಸನವನ್ನು ಏರಿ ರಾಜ್ಯವನ್ನು ಆಳಲು ಸಮರ್ಥನಾಗಿದ್ದ. ಆದರೆ ತಂದೆಯ ಮಾತಿಗೆ ಬೆಲೆ ಕೊಟ್ಟು ಹಾಗೂ ರಾವಣನ ವಧೆಯ ಉದ್ದೇಶವನ್ನೂ ಮನಸ್ಸಿನಲ್ಲಿ ಇಟ್ಟುಕೊಂಡು ಅರಣ್ಯಕ್ಕೆ ತೆರಳಿದ. ಸೀತೆ ಪತಿಯ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಟ್ಟು ವನಕ್ಕೆ ನಡೆದಳು. ಅವರಿಬ್ಬರನ್ನೂ ಹಿಂಬಾಲಿಸಿದ ಲಕ್ಷ್ಮಣ. ಈ ಮೂವರು ದಂಡಕಾರಣ್ಯಕ್ಕೆ ಮನೆ ಬಿಟ್ಟು ಹೋದುದನ್ನು ನೋಡಿ ದಶರಥರಾಜನ ಪ್ರಾಣಗಳು ಅವನ ದೇಹ ಬಿಟ್ಟು ಹೊರಟು ಹೋದವು. ದಶರಥನ ಮರಣಾನಂತರ

ಮಂತ್ರಿಗಳು ಭರತನನ್ನು ಪಟ್ಟದ ಮೇಲೆ ಕೂಡಿಸಿ ಅಭಿಷೇಕ ಮಾಡಲು ಬಯಸಿದರು. ಆದರೆ ಭರತನು ಇದಕ್ಕೆ ಒಪ್ಪಲಿಲ್ಲ. ಹಿರಿಯ ಅಣ್ಣನಾದ ರಾಮನನ್ನು ಕಾಡಿಗೆ ಅಟ್ಟಿ ಸ್ವಾರ್ಥಾಂಧನಾಗಿ ನಾನು ಸಾಮ್ರಾಜ್ಯಸಿಂಹಾಸನದ ಮೇಲೆ ಕುಳಿತುಕೊಳ್ಳಲಾರೆ, ರಾಮನನ್ನು ಅರಣ್ಯಕ್ಕೆ ಹೋಗಿ ಕರೆದುಕೊಂಡು ಬರುತ್ತೇನೆ ಎಂದು ಎಲ್ಲ ಮಂತ್ರಿ ಹಾಗೂ ನಾಗರಿಕರಿಂದ ಒಡಗೂಡಿ ರಾಮನು ತಂಗಿದ ಚಿತ್ರಕೂಟಕ್ಕೆ ಹೋದ. ಆಯೋಧ್ಯೆಗೆ ಬಂದು ರಾಜ್ಯವನ್ನು ಆಳು ಎಂದು ಬೇಡಿಕೊಂಡ. ಆದರೆ ರಾಮನು ಮರಳಿ ಬರಲು ಒಪ್ಪಲಿಲ್ಲ. ತಂದೆಯ ಆಜ್ಞೆಯನ್ನು ಪಾಲನೆ ಮಾಡುವುದು ನನ್ನ ಮೊದಲ ಕರ್ತವ್ಯ ಎಂದು ಹೇಳಿದ. ತಾಯಿ ಕೈಕೇಯಿಯ ಆದೇಶವನ್ನು, ತಂದೆಯ ವಚನವನ್ನು ನಾನು ಪಾಲಿಸುತ್ತೇನೆ. ಹದಿನಾಲ್ಕು ವರ್ಷ ವನವಾಸಕ್ಕೆ ಹೋಗುತ್ತೇನೆ. ಅಲ್ಲಿಯವರೆಗೆ ನೀನೇ ರಾಜ್ಯವನ್ನಾಳು ಎಂದು ಸ್ಪಷ್ಟವಾಗಿ ಹೇಳಿದ. ಮತ್ತು ಭರತನಿಗೆ ತನ್ನ ಎರಡೂ ಪಾದುಕೆಗಳನ್ನು ನೀಡಿದ. ಭರತನು ಕೂಡ ಅಣ್ಣನ ಮೇಲಿನ ಭಕ್ತಿಯಿಂದ ಆ ಎರಡೂ ಪಾದುಕೆಗಳನ್ನು ತಲೆಯ ಮೇಲೆ ಇಟ್ಟುಕೊಂಡು ಅಯೋಧ್ಯೆಗೆ ಮರಳಿದ. ಸಿಂಹಾಸನದ ಮೇಲೆ ರಾಮನ ಪಾದುಕೆಗಳನ್ನು ಇಟ್ಟು ಆ ಪಾದುಕೆಗಳ ಹೆಸರಿನಿಂದಲೇ ರಾಜ್ಯಶಾಸನವನ್ನು ರಾಮನ ಪರವಾಗಿ ಮಾಡಿದ. ಪ್ರತಿದಿನವೂ ಜೇಷ್ಠ ಸೋದರನ ಆ ಎರಡೂ ಪಾದುಕೆಗಳಿಗೆ ಗಂಧಲೇಪಿಸಿ ಹೂ ಏರಿಸಿ ತಪ್ಪದೇ ಪೂಜೆ ಮಾಡುತ್ತಿದ್ದ. ರಾಮ ಬರುವವರೆಗೂ ಅವನ ಧ್ಯಾನ ಗೈಯುತ್ತ ತಪೋನುಷ್ಠಾನವನ್ನು ಕೈಕೊಂಡ. ಅದರಂತೆಯೇ ಅಯೋಧ್ಯೆಯ ನಗರವಾಸಿಗಳಾದ ಎಲ್ಲ ಜನರು ಹದಿನಾಲ್ಕು ವರ್ಷಗಳ ಕಾಲ ರಾಮ ತಿರುಗಿ ಬರುವವರೆಗೆ ರಾಮನ ಧ್ಯಾನ ರಾಮನ ಪೂಜೆ ರಾಮೋಪಾಸನೆಗಳನ್ನು ಮಾಡುತ್ತ ಮುನಿಗಳಂತೆ ವ್ರತನಿಷ್ಠರಾಗಿಯೇ ಇರುತ್ತಿದ್ದರು.

ಅತ್ತ ರಾಮಚಂದ್ರನು ಮಂದಾಕಿನಿ ನದಿಯ ತೀರದಲ್ಲಿರುವ ರಮಣೀಯವಾದ ಭರದ್ವಾಜ ಮುನಿಗಳ ಆಶ್ರಮದಲ್ಲಿ ಆನಂದದಿಂದ ವಾಸಮಾಡಿದ.

ಒಂದು ದಿನ ರಾಮನು ಸೀತಾದೇವಿಯ ತೊಡೆಯ ಮೇಲೆ ತಲೆಯಿಟ್ಟು ವಿಶ್ರಮಿಸಿದ್ದ. ಆಗ ಇಂದ್ರನ ಮಗನಾದ ಜಯಂತ ಕಾಗೆಯ ರೂಪ ತೆಗೆದುಕೊಂಡು ಸನಿಹದಲ್ಲಿ ಸುಳಿದಾಡಿದ. ಸೀತೆಯ ಚೆಲುವು ಆ ಮೂರ್ಖನ ಮನ ಮರಳು ಮಾಡಿತು. ಕೂಡಲೇ ಕಾಗೆಯ ರೂಪ ತೆಗೆದುಕೊಂಡ ಆ ಜಯಂತ ಕಾಮಬಾಣದಿಂದ ಬುದ್ಧಿ ಕಳೆದುಕೊಂಡವ ಏನು ಮಾಡಲಿಕ್ಕಿಲ್ಲ? ಚೂಪಾದ ತನ್ನ ಉಗುರುಗಳಿಂದ ಸೀತೆಯ ಎದೆಗೆ ಗಾಯ ಮಾಡಿದ. ರಾಮ ಅದನ್ನು ನೋಡಿದ. ಪಕ್ಕದಲ್ಲಿಯೇ ಬಿದ್ದ ಒಂದು ಚಿಕ್ಕ ಹುಲ್ಲುಕಡ್ಡಿ ತೆಗೆದುಕೊಂಡು. ಅದಕ್ಕೆ ಕೊಂಚ ಬ್ರಹ್ಮಾಸ್ತ್ರ ತಗುಲಿಸಿ, ಆ ಕಾಕಾಸುರನ ಮೇಲೆ ಎಸೆದ. ಕೂಡಲೇ ಆ ಹುಲ್ಲುಕಡ್ಡಿ ಬೆಂಕಿಯ ರಾಶಿಯನ್ನೇ ಹೊತ್ತಿಸಿತು. ಆ ಕಾಗೆಯನ್ನು ಸುಡಲು ಓಡಿ ಬಂದಿತು. ಅದನ್ನು ಕಂಡ ಕೂಡಲೇ ಆ ಕೆಟ್ಟ ಕಾಗೆ ಕೂಗುತ್ತ ಅಪಸ್ವರದಿಂದ ಚೀರುತ್ತ ಅಲ್ಲಿಂದ ಓಡಿತು. ರಾಮನು ಅಭಿಮಂತ್ರಿಸಿದ ಆ ಹುಲ್ಲುಕಡ್ಡಿ ಬ್ರಹ್ಮಾಸ್ತ್ರವಾಗಿ ಬೆಂಕಿಯ ಜ್ವಾಲೆಗಳನ್ನೇ ಉಗುಳುತ್ತ ಹೋದಲ್ಲೆಲ್ಲ ಆ ಕಾಕಾಸುರನನ್ನು ಅಟ್ಟಿಸಿಕೊಂಡು ಹೋಯಿತು. ಅವನು ಹೋದಲ್ಲೆಲ್ಲ ಅವನನ್ನು ಬಿಡದೇ ಬ್ರಹ್ಮಾಸ್ತ್ರ ಬೆಂಕಿಯಾಗಿ ಬೆನ್ನಟ್ಟಿತು. ಬ್ರಹ್ಮಲೋಕ, ಇಂದ್ರಲೋಕ, ರುದ್ರಲೋಕ, ಯಮಲೋಕದ ಅಧೀಶ್ವರಾದ ಬ್ರಹ್ಮ, ಇಂದ್ರ, ರುದ್ರ, ಯಮ, ವರುಣ ಮುಂತಾದ ದೇವತೆಗಳಿಗೆ ಶರಣು ಹೋದ

ಆ ಜಯಂತ. ರಾಮಾಸ್ತ್ರವನ್ನು ಬೆನ್ನ ಹಿಂದೆ ಹಾಕಿಕೊಂಡು ಬಂದ ಆ ಕಾಕಾಸುರನಿಗೆ ಯಾರೂ ಆಶ್ರಯಕೊಡಲು ಒಪ್ಪಲಿಲ್ಲ. ಮೂರು ಲೋಕಗಳನ್ನೆಲ್ಲ ಸುತ್ತಿ ಬಂದರೂ ಆ ಕಾಗೆಗೆ ರಕ್ಷಣೆ ದೊರೆಯಲಿಲ್ಲ. ಕೊನೆಗೆ ಬ್ರಹ್ಮದೇವರು ಧೈರ್ಯ ಮಾಡಿ ನುಡಿದರು.

ಬ್ರಹ್ಮ:-

**ರಕ್ಷತ್ಯೇವ ಕ್ಷಮಾಸಾರೋ ವತ್ಸಲಶರಣಾಗತಾನ್ ।**
**ಈಶ್ವರಃ ಸರ್ವಭೂತಾನಾಮ್ ಸೌಶೀಲ್ಯಾದಿ ಗುಣಾನ್ವಿತಃ ॥**

**ರಕ್ಷಿತಾ ಜೀವ ಲೋಕಸ್ಯ ಪಿತಾ ಮಾತಾ ಸಖಾ ಸುಹೃತ್ ।**
**ಶರಣಂ ವ್ರಜ ದೇವೇಶಂ ನಾನ್ಯತ್ರ ಶರಣಂ ದ್ವಿಜ ॥**

ಸರ್ವ ಪ್ರಾಣಿಗಳಿಗೂ ಸ್ವಾಮಿಯೂ ಸೌಶೀಲ್ಯವೇ ಮೊದಲಾದ ಗುಣಗಳಿಂದ ಕೂಡಿದವನೂ ಆದ ಆ ಶ್ರೀರಾಮಚಂದ್ರ ಭಕ್ತವತ್ಸಲ ಕ್ಷಮೆಯೇ ಅವನಲ್ಲಿರುವ ಮುಖ್ಯ ಗುಣ. ಆದುದರಿಂದ ಅವನು ನಿನ್ನನ್ನು ನಿಶ್ಚಿತವಾಗಿ ರಕ್ಷಿಸುತ್ತಾನೆ. ಜೀವ ಪ್ರಪಂಚವನ್ನೇ ರಕ್ಷಿಸುವ ಆ ರಾಮನೇ ತಂದೆ. ಅವನೇ ತಾಯಿ. ಅವನೇ ಗೆಳೆಯ, ಆಪ್ತ, ಇಷ್ಟ. ಆದುದರಿಂದ ನೀನು ದೇವದೇವೋತ್ತಮನಾದ ಅವನನ್ನೇ ಶರಣು ಹೊಂದು. ಅವನೇ ನಿನಗೆ ರಕ್ಷಕ. ಅವನನ್ನು ಬಿಟ್ಟು ಬೇರೆ ಯಾರೂ ನಿನ್ನನ್ನು ರಕ್ಷಿಸಲಾರರು.

**ಮಹಾದೇವ:-** ಬ್ರಹ್ಮದೇವರು ಹೀಗೆ ಹೇಳಿದ ಕೂಡಲೇ ಆ ಕಾಗೆಯು ಹೆದರಿ ಹೌಹಾರಿ ನೆಲಕ್ಕೆ ಬಿದ್ದಿತು. ಅದರ ಬೆನ್ನ ಹಿಂದಿನಿಂದ ಭೂತಾಕಾರವಾಗಿ ಬೆಂಕಿಯ ಜ್ವಾಲೆಗಳನ್ನು ಚಾಚುತ್ತ ಬ್ರಹ್ಮಾಸ್ತ್ರವು ಬೆನ್ನಟ್ಟಿ ಬರುತ್ತಲೇ ಇತ್ತು. ಬ್ರಹ್ಮದೇವರು ಮಾತು ಕೇಳಿ ಸತ್ಯಲೋಕದ ಎತ್ತರದಿಂದ ಒಮ್ಮೆಲೆ ಉರುಳಿ ಹೊರಳಿ ಮಣ್ಣಿಗೆ ಬಂದು ಬಿದ್ದ ಆ ಕಾಗೆರೂಪಿಯಾದ ಜಯಂತ ಸಾಯ ತೊಡಗಿದ. ಅದನ್ನು ನೋಡಿ ಸೀತೆಯ ಕರುಳು ಕರಗಿತು. ಆಗ ಅವಳೇ ವಿನಯದಿಂದ ಪತಿ ಶ್ರೀರಾಮನಿಗೆ ಅವನನ್ನು ರಕ್ಷಿಸಿರಿ ರಕ್ಷಿಸಿರಿ ಎಂದು ಕೂಗಿಕೊಂಡಳು. ತನ್ನ ಎದುರು ನೆಲದ ಮೇಲೆ ಬಂದು ಬಿದ್ದು ತಲೆ, ಕಾಲು ಎಲ್ಲವೂ ಛಿನ್ನ ಭಿನ್ನವಾದ ಆ ಕಾಗೆಯ ಅವಯವಗಳನ್ನು ಸೀತೆಯೇ ಜೋಡಿಸಿ, ಕೂರಿಸಿ ಅದನ್ನು ಬದುಕಿಸು ಎಂದು ರಾಮನ ಕೈಯಲ್ಲಿ ಕೊಟ್ಟಳು. ಕರುಣಾ ಸಮುದ್ರನಾದ ಆ ರಾಮನು ಆ ಪಕ್ಷಿಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ದಯಾಪೂರ್ಣನಾಗಿ ಆ ಕಾಗೆಗೆ ಹೇಳಿದ.

**ರಾಮ:-** ಹೆದರಬೇಡ ನಾನು ನಿನಗೆ ಅಭಯವನ್ನು ನೀಡಿದ್ದೇನೆ. ಸುಖವಾಗಿ ಹೋಗು ಮನಬಂದ ಕಡೆಗೆ.

ಆಗ ಆ ಕಾಗೆಯ ರೂಪ ಧರಿಸಿದ ಆ ಜಯಂತನು ರಾಮನಿಗೆ ನಮಸ್ಕರಿಸಿದ. ಸೀತೆಗೆ ಮತ್ತೆ ಮತ್ತೆ ನಮಿಸಿದ. ರಾಘವನಿಂದ ರಕ್ಷಿತನಾಗಿ ದೇಹದಿಂದ ಅಕ್ಷತನಾಗಿ ದೇವಲೋಕಕ್ಕೆ ಪ್ರಯಾಣ ಬೆಳೆಸಿದ.

ಅನಂತರ ಚಿತ್ರಕೂಟ ಪರ್ವತದಲ್ಲಿ ಭರದ್ವಾಜನಿಂದ ಪೂಜಿತನಾಗಿ ಕೆಲವು ದಿನ ಅವರ ಆಶ್ರಮದಲ್ಲಿದ್ದು ಬಳಿಕ ಶ್ರೀರಾಮನು ಸೀತಾಲಕ್ಷ್ಮಣರೊಂದಿಗೆ ಅತ್ರಿ ಋಷಿಗಳ ಆಶ್ರಮಕ್ಕೆ ತೆರಳಿದ. ಅತ್ರಿ ಹಾಗೂ ಅನಸೂಯಾ ದಂಪತಿಗಳು ರಾಮ ಸೀತಾ ಲಕ್ಷ್ಮಣರಿಗೆ ಸ್ವಾಗತ ಮಾಡಿದರು. ಅರ್ಘ್ಯ ಪಾದ್ಯಾದಿಗಳನ್ನು ನೀಡಿದರು. ಅನಂತರ ಅತ್ರಿ ಮುನಿಗಳ

ಮಡದಿಯಾದ ಮುಪ್ಪಿನ ಮುತ್ತೈದೆಯು ಸೀತೆಗೆ ದಿವ್ಯ ವಸ್ತ್ರವನ್ನು ಹೊಳೆಯುವ ಆಭರಣಗಳನ್ನು ಪ್ರೀತಿಯಿಂದ ಕೊಟ್ಟಳು. ಬಗೆ ಬಗೆಯ ಭಕ್ಷ್ಯ ಭೋಜ್ಯ ಭೋಜನ ಮಾಡಿಸಿ ಒಳ್ಳೆ ಸವಿಯಿಂದ ಒಡಗೂಡಿದ ಪಾನೀಯಗಳನ್ನು ಕುಡಿಯಲಿಕ್ಕೆ ಕೊಟ್ಟಳು. ಪ್ರೀತಿಯಿಂದ ಪಕ್ಕದಲ್ಲಿ ಕುಳಿತು ರಾಮನಿಗೆ ಪಕ್ವಾನ್ನದ ಭೋಜನ ಮಾಡಿಸಿದಳು. ಅನಸೂಯೆಯ ಭಕ್ತಿ ಭಾವ ಭರಿತವಾದ ಆದರದ ಪೂಜೆಯಿಂದ ಸಂತಸಗೊಂಡು ಒಂದು ದಿವಸ ಅಲ್ಲಿಯೇ ತಂಗಿದ. ಮರುದಿನ ಪ್ರಾತಃಕಾಲದಲ್ಲಿ ಅತ್ರಿ ಮಹರ್ಷಿಗೆ ವಂದಿಸಿ ಪ್ರದಕ್ಷಿಣೆ ಹಾಕಿ ಅವರ ಅಪ್ಪಣೆ ಪಡೆದು ಅನೇಕ ಮಹಾ ಮಹಾ ಮುನಿ ಮಹರ್ಷಿ ಸಿದ್ಧ ಪುರುಷರಿಂದ ತುಂಬಿದ ದಂಡಕಾರಣ್ಯದಲ್ಲಿ ಪ್ರವೇಶ ಮಾಡಿದ.

ಆ ದಂಡಕಾರಣ್ಯವನ್ನು ಪ್ರವೇಶ ಮಾಡುವ ಪ್ರದೇಶದಲ್ಲಿಯ ವಿರಾಧ ಎಂಬ ದೊಡ್ಡ ರಾಕ್ಷಸ ಅವನಿಗೆ ಅಡ್ಡ ನಿಂತು ಅವರ ಮುಂದಿನ ಗಮ್ಯಕ್ಕೆ ವಿಘ್ನ ಒಡ್ಡಿದ. ಅವನನ್ನು ವಧಿಸಿ ಶ್ರೀರಾಮ ಶರಭಂಗ ಮಹರ್ಷಿಯ ಆಶ್ರಮದಲ್ಲಿ ಪ್ರವೇಶಿಸಿದ. ಆ ಶರಭಂಗ ಮುನಿಯು ಶ್ರೀರಾಮನನ್ನು ಕಂಡಕೂಡಲೇ ಅವನ ಜನ್ಮ ಜನ್ಮಾಂತರದ ಪಾಪವೆಲ್ಲವೂ ಸುಟ್ಟು ನಾಶವಾದವು. ರಾಮದರ್ಶನದ ಪ್ರಭಾವದಿಂದ ಆ ಮುನಿ ಗಂಧರ್ವರಿಂದಲೂ ಅಪ್ಸರೆಯರಿಂದಲೂ ಸೇವಿತವಾದ ಬ್ರಹ್ಮಲೋಕವನ್ನು ಕುರಿತು ಪ್ರಯಾಣ ಮಾಡಿದ. ಅನಂತರ ಶ್ರೀರಾಮನು ಸುತೀಕ್ಷ್ಣ, ಅಗಸ್ತ್ಯ, ಅಗಸ್ತ್ಯ ಸೋದರ ಮುಂತಾದ ಮುನಿಗಳ ಆಶ್ರಮಗಳಿಗೆ ಹೋಗಿ ಅವರಿಂದ ಆದರಿಸಿ ಉಪಚರಿಸಲ್ಪಟ್ಟ ಬಳಿಕ ರಾಮನು ತನ್ನ ಸೋದರ ಸುದತಿಯರೊಂದಿಗೆ ಪಂಚವಟಿಗೆ ಬಂದ. ಗೋದಾವರಿ ನದಿಯ ತೀರದಲ್ಲಿ ಇರುವ ಆ ಪಂಚವಟಿ ಅತ್ಯಂತ ಮನೋಹರ. ರಾಮ ತನ್ನ ವನವಾಸದ ಬಹುಭಾಗವನ್ನು ಕಳೆದಿದ್ದು ಇಲ್ಲಿಯೇ.

ರಾಮನು ಈ ಪಂಚವಟಿಯಲ್ಲಿ ಇದ್ದಾಗಲೇ ಅನೇಕ ತಪಸ್ವಿಗಳು ಮುನಿ ಮಾನಿನಿಯರು ಅವನ ಬಳಿಗೆ ಬಂದರು. ಭಕ್ತಿಯಿಂದ ಅವನನ್ನು ಪೂಜಿಸಿದರು. ನೀಚರಾದ ರಾಕ್ಷಸರಿಂದ ತಮಗೆ ಒದಗಿದ ಭಯಾಪಾಯಗಳನ್ನು ರಾಮನಿಗೆ ಅರುಹಿದರು. ಆಗ ಶ್ರೀರಾಮನು ಆ ಎಲ್ಲ ಮುನಿ ಮಂಡಲದ ಮುಖಂಡರಿಗೆ ಅಭಯದ ಆಶ್ವಾಸನೆ ನೀಡಿದ. ಹೆದರಬೇಡಿರಿ. ನಾನು ನಿಮ್ಮನ್ನು ರಕ್ಷಿಸುತ್ತೇನೆ ಎಂದು ಹೇಳಿದ.

ಹೀಗೆ ರಾಮ ಲಕ್ಷ್ಮಣ ಸೀತೆಯರು ನಿಸರ್ಗದ ಸೌಂದರ್ಯದ ನೆಲೆವೀಡಾದ ಆ ವನಮಾಲಿಯ ಮಧ್ಯದಲ್ಲಿ ಪರಮ ರಮಣೀಯ ತಾಣ ಎನಿಸಿದ ಪಂಚವಟಿಯಲ್ಲಿ ಸಂತಸ ತುಂಬಿ ಒಲವಿನಿಂದ ವಾಸಮಾಡುತ್ತಿದ್ದಾಗ, ರಾವಣನ ತಂಗಿಯಾದ ಶೂರ್ಪನಖಿಯು ಅಲ್ಲಿಗೆ ಬಂದಳು. ಕೋಟಿ ಕಾಮರನ್ನು ಕುರೂಪರನ್ನಾಗಿ ಕಾಣಿಸುವ ರಾಮನ ಕಮನೀಯವಾದ ಕಾಯಕಾಂತಿಯನ್ನು ಕಂಡು ಆ ರಕ್ಕಸಿಯು ಮುಗ್ಧಳಾದಳು. ತಾವರೆ ದಳದಂಥ ಕಣ್ಣು, ಕರಿ ಕಮಲದಂತಿರುವ ಬಣ್ಣ, ಎತ್ತರವಾದ ಹೆಗಲು, ನಿಡಿದೋಳು, ಶಂಖದಂತಿರುವ ಕೊರಳು, ಹುಣ್ಣಿಮೆಯ ಚಂದ್ರನಂಥ ಸುಂದರವಾದ ಮುಖ, ಭೃಂಗಗಳಂತಿರುವ ಮುಂಗುರುಳು, ಕೆಂಪು ಕಮಲದಂತಿರುವ ಕೈಗಳು, ನಿಷ್ಕಳಂಕ ಚಂದ್ರನಂತಿರುವ ಉಗುರಿನ ಸಾಲು, ಮೂರು ಲೋಕಗಳನ್ನೇ ಮೋಹಗೊಳಿಸುವ ಚೆಲುವು, ಎತ್ತರವಾದ ನಿಲುವು ಹರೆಯದ ವಯಸ್ಸು ತುಳುಕುವ ಕಾಂತಿ, ಕಂಗಳಲ್ಲಿ

ತುಂಬಿದ ಶಾಂತಿ, ಮೇಲೆ ಜಟಾಮಂಡಲ, ನಾರು ಬಟ್ಟೆ, ಮುನಿ ವೇಷ ಮುಂತಾದ ಶ್ರೀರಾಮನ ಆಕಾರ ಪ್ರಕಾರಗಳನ್ನು ಕಂಡು ಕಾಮ ಕೆರಳಿತು ಆ ದುರುಳ ತರಳೆಗೆ. ಕಾಮನ ಬಾಣದಿಂದ ಜರ್ಜರಿತವಾದ ಆ ರಾಕ್ಷಸಿಯು ರಾಮನ ಬಳಿಗೆ ಬಂದು ಕೇಳಿದಳು.

**ಶೂರ್ಪನಖಿ:-** ತಪಸ್ವಿ ವೇಷದಿಂದ ಇರುವ ನೀನು ಯಾರು? ರಾಕ್ಷಸರಿಗೂ ಕೂಡ ಪ್ರವೇಶಿಸಲು ಅಶಕ್ಯವಾದ ಈ ದಂಡಕಾರಣ್ಯಕ್ಕೆ ಏಕೆ ಬಂದೆ. ನಿಜ ಹೇಳು.

**ರಾಮ:-** ನಾನು ದಶರಥರಾಜನ ಮಗ, ರಾಮ ಎಂದು ನನ್ನ ಹೆಸರು. ಇವನು ನನ್ನ ತಮ್ಮ ಲಕ್ಷ್ಮಣ. ಇವಳು ನನ್ನ ಮಡದಿಯಾದ ಸೀತೆ. ಜನಕರಾಜನ ಕುಮಾರಿ. ತಂದೆಯ ಅಪ್ಪಣೆಯಂತೆ ಈಗ ನಾನು ಈ ಅರಣ್ಯಕ್ಕೆ ಬಂದಿದ್ದೇನೆ. ಈ ದಂಡಕಾರಣ್ಯದ ಭೂಭಾಗದಲ್ಲಿ ಇರುವ ತಪಸ್ವಿಗಳು ಋಷಿಗಳು, ಹಾಗೂ ಮುನಿಗಳಿಗೆ ಹಿತವನ್ನುಂಟುಮಾಡಲಿಕ್ಕಾಗಿ ನಾವು ಇಲ್ಲಿ ಸಂಚರಿಸುತ್ತೇವೆ. ನೀನು ಯಾರು? ಇಲ್ಲಿ ಬಂದದ್ದು ಏಕೆ? ಎಲ್ಲವನ್ನೂ ಹೇಳು. ಸತ್ಯವನ್ನು ಮಾತ್ರ ಹೇಳು.

**ಶೂರ್ಪನಖಿ:-** ನಾನು ವಿಶ್ರವಸನನ ಮಗಳು. ರಾವಣನ ತಂಗಿ. ನನ್ನ ಹೆಸರು ಶೂರ್ಪನಖಿ. ನನ್ನ ಅಣ್ಣನಾದ ರಾವಣ ಈ ದಂಡಕಾರಣ್ಯವನ್ನೇ ನನಗೆ ಕೊಟ್ಟಿದ್ದಾನೆ. ನಾನು ಇಲ್ಲಿ ಕಣ್ಣಿಗೆ ಬಿದ್ದ ಋಷಿಗಳನ್ನೂ ಕೈಗೆ ಸಿಕ್ಕ ಮುನಿಗಳನ್ನು ಕೊಂದು ತಿಂದು ಈ ಕಾಡಿನಲ್ಲಿ ತಿರುಗಾಡುತ್ತ ಇದ್ದೇನೆ. ಈಗ ಮುನಿವೇಷಧಾರಿಯಾದ ನಿನ್ನನ್ನು ನೋಡಿದ ಬಳಿಕ ಕಾಮಬಾಣದಿಂದ. ಪೀಡಿತಳಾಗಿದ್ದೇನೆ. ನಿನ್ನೊಡನೆ ವಿಹರಿಸಬೇಕು ಎಂದು ನನ್ನ ಉತ್ಕಟ ಇಚ್ಛೆ. ಆದುದರಿಂದ ಈಗ ನೀನು ನನಗೆ ಪತಿಯಾಗು. ಇಲ್ಲದಿದ್ದರೆ ಈ ನಿನ್ನ ಹೆಂಡತಿಯಾದ ಸೀತೆಯನ್ನು ಕೊಂದು ತಿನ್ನುತ್ತೇನೆ. ಅನಂತರ ನಿನ್ನೊಡನೆ ರಮ್ಯವಾದ ಗಿರಿಕಂದರಗಳಲ್ಲಿ ಸ್ವಚ್ಛಂದವಾಗಿ ಕೇಳಿ ವಿಲಾಸಗಳನ್ನು ಮಾಡುತ್ತೇನೆ.

ಹೀಗೆ ಹೇಳಿ ಆ ರಾಕ್ಷಸಿಯು ಸೀತೆಯನ್ನು ನುಂಗಲು ಬಾಯ್ತೆರೆದು ಬಂದಳು. ಅದರಿಂದ ಹೆದರಿ ಹೌಹಾರಿದ ಸೀತೆ ರಾಮನ ಕಡೆಗೆ ಕರುಣಾದೃಷ್ಟಿಯಿಂದ ನೋಡಿ ಚೀರಿ ರಕ್ಷಿಸು ಎಂದಳು. ಆಗ ರಾಮನು ತನ್ನ ಖಡ್ಗದಿಂದ ಆ ದುಷ್ಟ ರಾಕ್ಷಸಿಯ ಕಿವಿ ಮೂಗುಗಳನ್ನು ಕತ್ತರಿಸಿದ. ಇದರಿಂದ ಖಂಡಿತಳೂ, ಅವಮಾನಿತಳೂ, ಆದ ಆ ಶೂರ್ಪನಖಿಯು ಅಳುತ್ತ ಚೀರುತ್ತ ಖರ ರಾಕ್ಷಸನ ಮನೆಗೆ ಹೋಗಿ ವಿಕಾರಗೊಂಡ ತನ್ನ ಮುಖವನ್ನು ತೋರಿಸಿ ''ಮನುಷ್ಯ ಮಾತ್ರವಾದ ರಾಮನಿಂದ ರಾಕ್ಷಸ ಕುಲಕ್ಕೇ ಇಂಥ ಅವಮಾನವಾಗಿದೆ'' ಎಂದು ಹೇಳಿ ಅವನನ್ನು ರಾಮನ ಮೇಲೆ ಯುದ್ಧಕ್ಕೆ ಹೊರಡಲು ಪ್ರೇರೇಪಿಸಿದಳು. ಆಗ ಖರ ದೈತ್ಯನು ಅನೇಕ ಸಹಸ್ರ ದೈತ್ಯ ಸೇನೆಯೊಂದಿಗೆ ದೂಷಣ, ತ್ರಿಶಿರ ಮೊದಲಾದ ದೈತ್ಯ ಸೇನಾಪತಿಗಳೊಂದಿಗೆ ಕೂಡಿ ರಾಮನೊಡನೆ ಯುದ್ಧಕ್ಕೆ ಬಂದ.

ಆಗ ರಾಮನು ಕಾಲಾಂತಕವಾದ ತನ್ನ ಘೋರ ಬಾಣಗಳಿಂದ ಆ ದೈತ್ಯ ದಾನವರನ್ನು ಲೀಲೆಯಿಂದಲೇ ಕೊಚ್ಚಿ ಹಾಕಿದ. ಖರ, ತ್ರಿಶಿರ, ದೂಷಣ ಮುಂತಾದ ಎಲ್ಲ ರಾಕ್ಷಸ ವೀರರು ರಾಮನ ಬಾಣಗಳಿಂದ ಹತಪತಿತರಾಗಿ ಮರಣವನ್ನು ಅಪ್ಪಿದರು.

ಅದರಿಂದ ದಂಡಕಾರಣ್ಯ ವಾಸಿಗಳಾದ ಎಲ್ಲ ಋಷಿಗಳೂ, ಮುನಿ ಮಹರ್ಷಿಗಳೂ ಸಂತಸದ ನಿಟ್ಟುಸಿರಿಟ್ಟರು.

ಆದರೆ ಜನಸ್ಥಾನದಲ್ಲಿ ಇದ್ದ ತನ್ನ ರಾಕ್ಷಸ ಬಳಗ ಎಲ್ಲವೂ ರಾಮನಿಂದ ನಿರ್ನಾಮವಾಗುವಂತೆ ನಾಶ ಮಾಡಲ್ಪಟ್ಟದ್ದನ್ನು ನೋಡಿ ರಾವಣನಿಗೆ ಮಾತ್ರ ತಾಳಲಾರದಷ್ಟು ಕೋಪ ಬಂದಿತು. ಆಗ ಅವನು ಲಂಕೆಯಿಂದ ಜನಸ್ಥಾನಕ್ಕೆ ಬಂದ. ಮಾರೀಚನೊಡನೆ ಸಂಚು ಮಾಡಿದ. ಮಾಯಾವಿಯಾದ ಮಾರೀಚ ಚಿಗರೆಯ ರೂಪವನ್ನು ಧರಿಸಿದ. ಸೀತೆಯ ಬಯಕೆಯಂತೆ ರಾಮಲಕ್ಷ್ಮಣರು ಆ ಚಿಗರೆಯನ್ನು ಹಿಡಿಯಲು ಆಶ್ರಮ ಬಿಟ್ಟು ದೂರ ಬಂದರು. ರಾಮಲಕ್ಷ್ಮಣರು ಆಶ್ರಮದಲ್ಲಿ ಇಲ್ಲದ ಆ ಸಮಯವನ್ನೇ ಜಪ್ಪಿಸಿ ಕುಳಿತಿದ್ದ ಆ ರಾವಣ ಅವರಿಬ್ಬರು ಅತ್ತ ಹೋಗುತ್ತಲೇ ಸೀತೆಯನ್ನು ಅಪಹರಿಸಿದ, ಅವಳನ್ನು ಕದ್ದುಕೊಂಡ ಲಂಕೆಗೆ ಹೊರಟ. ದಾರಿಯಲ್ಲಿ ಜಟಾಯು ಎಂಬ ಹದ್ದಿನ ಕಣ್ಣಿಗೆ ರಾವಣ ಗೋಚರನಾದ. ಜಟಾಯುವೂ ಬಲಿಷ್ಠ. ಧೈರ್ಯದಿಂದಲೇ ಈ ದುಷ್ಟನನ್ನು ಎದುರಿಸಿದ. ಸೀತೆಯನ್ನು ಈ ರಕ್ಕಸನ ಕಪಿಮುಷ್ಠಿಯಿಂದ ಬಿಡಿಸಬೇಕೆಂದು ಹಣಾಹಣಿ ಹೋರಾಡಿದ. ಆದರೆ ಪ್ರಚಂಡ ಪರಾಕ್ರಮಿ, ಆ ರಾವಣನ ಮುಂದೆ ಆ ಹಕ್ಕಿಯ ಆಟ ಬಹಳ ಹೊತ್ತು ಸಾಗಲಿಲ್ಲ. ಅವನನ್ನು ಕೊಂದು ರಾವಣ ಜಾನಕಿಯನ್ನು ತೆಗೆದುಕೊಂಡು ಹೊರಟು ಮುಗಿಲ ಮಾರ್ಗದಿಂದ ತನ್ನ ರಾಜಧಾನಿಯಾದ ಲಂಕಾ ಪಟ್ಟಣಕ್ಕೆ ಬಂದು ಅಶೋಕವನದಲ್ಲಿ ಇರಿಸಿದ ಆ ಜನಕರಾಜಕುಮಾರಿಯನ್ನು. ಇತ್ತ ಶ್ರೀರಾಮನು ಚಿಗರೆಯ ರೂಪವನ್ನು ಧರಿಸಿದ ಮಾರೀಚನನ್ನು ಕೊಂದು ಲಕ್ಷ್ಮಣನೊಂದಿಗೆ ತನ್ನ ಪರ್ಣಕುಟೀರಕ್ಕೆ ಮರಳಿ ಬಂದ. ಆದರೆ ಅಲ್ಲಿ ಸೀತೆಯಿರಲಿಲ್ಲ. ಇದು ರಾಕ್ಷಸರದೇ ಕುಕೃತ್ಯ ಎಂದು ತಿಳಿಯಿತು ಆ ಸೋದರರಿಗೆ. ತನ್ನ ಪ್ರಾಣಪ್ರಿಯೆ ಪತ್ನಿಯಾದ ಸೀತೆಯನ್ನು ಕಳೆದುಕೊಂಡು ರಾಮ ದುಃಖ ತೃಪ್ತನಾದ. ದುಃಖೊದ್ರೇಕದಿಂದ ಸೀತೆಗಾಗಿ ಕಾಡು ಮೇಡುಗಳನ್ನೆಲ್ಲ ಹುಡುಕಿದರು. ಎಲ್ಲಿಯೂ ಜಾನಕಿಯನ್ನು ಕಾಣದೇ ಮನದಲ್ಲಿಯೇ ಮಿಡುಕಿದರು. ಹಾಗೆಯೇ ಹುಡುಕುತ್ತ ವನಾಂತರಾಳದಲ್ಲಿ ಮುಂದವರೆದಾಗ ಒಂದು ಮಹಾ ಬಲಿಷ್ಠವಾದ ಹದ್ದು ನೆತ್ತರಿನ ಮಡುವಿನಲ್ಲಿ ಬಿದ್ದು ಸಾಯುವ ಕ್ಷಣಗಳನ್ನು ಎಣಿಸುತ್ತಿತ್ತು. ಅದರ ಎರಡೂ ರೆಕ್ಕೆ, ಹಾಗೂ ಕಾಲು ಕತ್ತರಿಸಿ ಅತ್ತಿತ್ತ ಬಿದ್ದಿದ್ದವು. ರಕ್ತದ ಮಡುವಿನಲ್ಲಿ ರೆಕ್ಕೆ ಕತ್ತರಿಸಿ ಬಿದ್ದ ಆ ಹಕ್ಕಿಯನ್ನು ನೋಡಿ ರಾಮನಿಗೆ ಕೌತುಕ. ಲಕ್ಷ್ಮಣನಿಗೆ ಅನುಕಂಪ. ಇಬ್ಬರೂ ಅದರ ಬಳಿಗೆ ಹೋದರು. ಮೆಲ್ಲನೆ ಕೇಳಿದರು. 'ನಿನ್ನನ್ನು ಹೀಗೆ ಹಿಂಸಿಸಿದವರು ಯಾರು?'

**ಜಟಾಯು:-** ರಾಮ! ನಿನ್ನ ಹೆಂಡತಿಯಾದ ಸೀತೆಯನ್ನು ರಾವಣ ಕದ್ದು ಒಯ್ದಿದ್ದಾನೆ. ನಾನು ಅವನನ್ನು ತಡೆದೆ. ಅವನ ನಡುನೆತ್ತಿಗೆ ಹೊಡೆದೆ ನನ್ನ ಕೊಕ್ಕಿನಿಂದ, ಆ ದುರಾತ್ಮನ ಹತ್ತೂ ನೆತ್ತಿಗಳಿಂದ ನೆತ್ತರು ಚಿಮ್ಮುವಂತೆ ನನ್ನಕೊಕ್ಕಿನಿಂದ ಚುಚ್ಚಿದೆ. ಚಚ್ಚಿದೆ. ಆದರೂ ಪರಾಕ್ರಮಿಯಾದ ಆ ದುಷ್ಟ ರಾಕ್ಷಸ ನನ್ನನ್ನು ಹೊಡೆದು ರೆಕ್ಕೆ ಕಡಿದು ಇಲ್ಲಿ ಬೀಳಿಸಿ ಹೋಗಿದ್ದಾನೆ. ನಿನಗಾಗಿ ಕಾಯುತ್ತಿದ್ದೇನೆ. ನಿನಗೆ ಸೀತೆಯ ಸಮಾಚಾರ ತಿಳಿಸಿದ್ದೇನೆ. ಇದೋ ನಿನಗೆ ನನ್ನ ನಮನ.

ಹೀಗೆ ಹೇಳಿ ಆ ಹದ್ದು ಪ್ರಾಣ ಹೋಗಿ ರಾಮನ ಮುಂದೆ ಬಿದ್ದಿತು. ಆಗ ರಾಮನು ಆ ಜಟಾಯುವಿಗೆ ವೇದೋಕ್ತ ವಿಧಾನದಿಂದ ಅಗ್ನಿ ಸಂಸ್ಕಾರ ಮಾಡಿ ಔರ್ಧ್ವ ದೇಹಿಕ ಕಾರ್ಯಗಳನ್ನೆಲ್ಲ ತಾನಾಗಿ ಮಾಡಿದ ಮತ್ತು ಅದಕ್ಕೆ ತನ್ನ ದಿವ್ಯವಾದ ಹರಿಪದವನ್ನು ನೀಡಿದ. ಅನಂತರ ರಾಮಲಕ್ಷ್ಮಣರು ರಾಮನ ಅರಸಿಯನ್ನು ಅರಸುತ್ತ ಮೌಲ್ಯವಂತ ಪರ್ವತಕ್ಕೆ ಬಂದರು. ಅಲ್ಲಿ ಮಾತಂಗ ಋಷಿಗಳ ಆಶ್ರಮದಲ್ಲಿ ಶಬರೀ ಎಂಬ ಮಹಾ

ಭಗವದ್ಭಕ್ತಳನ್ನು ಅವರು ಕಂಡರು. ಆ ಶಬರಿಗೆ ರಾಮ ಲಕ್ಷ್ಮಣರನ್ನು ಕಂಡು ಇನ್ನಿಲ್ಲದ ಹಿಗ್ಗು. ಉತ್ಸಾಹದಿಂದ ಅವಳು ಆ ರಾಮಲಕ್ಷ್ಮಣ ಇಬ್ಬರನ್ನೂ ದರ್ಭಾಸನದ ಮೇಲೆ ಕೂರಿಸಿದಳು. ತಾನೇ ತನ್ನ ಕೈಗಳಿಂದಲೇ ಅವರಿಬ್ಬರ ಪಾದಗಳನ್ನು ತೊಳೆದು ಪಾದಪೂಜೆ ಮಾಡಿದಳು. ಅತ್ಯಂತ ಭಕ್ತಿಯಿಂದ ಅವಳ ಹೃದಯ ತುಂಬಿ ಬಂದಿತು. ಮಾತು ಬಾರದಂತಾಯಿತು. ಆನಂದದಿಂದ ಗದ್ಗದ ಕಂಠಿತಳಾಗಿ ರಾಮನಿಗೆ ರಸಭರಿತವಾದ ಹಣ್ಣುಗಳನ್ನು ಸುಗಂಧಿಯಾದ ಕಂದ ಮೂಲ ಫಲಗಳನ್ನು ಭಕ್ತಿಯಿಂದ ನಿವೇದಿಸಿದಳು. ಆ ಬೇಡತಿಯು ಕೊಟ್ಟ ಸವಿಯಾದ ಹಣ್ಣುಗಳನ್ನು ರುಚಿನೋಡಿ ತಿಂದು ರಾಮನು ಅವಳಿಗೆ ಮುಕ್ತಿಯನ್ನು ಕರುಣಿಸಿದ.

ಅನಂತರ ಅವರಿಬ್ಬರು ಸೋದರರೂ ಕ್ರೌಂಚವಟಿಗೆ ಆಗಮಿಸಿದರು. ಅಲ್ಲಿ ಶ್ರೀರಾಮ ಕಬಂಧ ಎಂಬ ದಾರುಣ ದೈತ್ಯನನ್ನು ಸಂಹರಿಸಿದ. ತೆಗ್ಗು ತೋಡಿ ಅವನ ದೈತ್ಯ ದೇಹಕ್ಕೆ ಬೆಂಕಿ ಕೊಟ್ಟ. ರಾಮನಿಂದ ಹತನಾದ ಆ ಕಬಂಧ ಸ್ವರ್ಗಕ್ಕೆ ನಡೆದ.

ಅನಂತರ ರಾಮನು ಗೋದಾವರಿ ನದಿಗೆ ಹೋಗಿ ಆ ನದಿಯನ್ನೇ ಕೇಳಿದ. "ಗೋದಾವರೀ, ನೀನು ನನ್ನ ಸೀತೆ ಎಲ್ಲಿ ಇರುವಳು ಎಂದು ತಿಳಿದಿರುವೆಯಾ?" ಎಂದು ಮತ್ತೆ ಮತ್ತೆ ಆತುರತೆಯಿಂದ ಪ್ರಶ್ನೆ ಕೇಳಿದ. "ಸೀತೆ ಈಗ ಎಲ್ಲಿ ಇರುವಳು" ಹೇಳು ಎಂದು ಒತ್ತಾಯ ಪಡಿಸಿದ. ಆ ಗಂಗೆ ಏನೂ ಹೇಳಲಿಲ್ಲ. ನದಿಯ ಸೆಳುವು ಭೀಷ್ಮ ಪ್ರವಾಹವಾಗಿ ಹರಿಯ ತೊಡಗಿತು. ಆಗ ರಾಮನಿಗೆ ಭಯಂಕರ ಕ್ರೋಧ ಬಂದಿತು. ನೀನು ನೆತ್ತರಿನ ನದಿಯಾಗು ಎಂದು ಶಾಪ ಕೊಟ್ಟ. ಆಗ ಭಯಭ್ರಾಂತಳಾದ ಗಂಗೆಯು ಎಲ್ಲ ಮಹಾ ಮುನಿಗಳನ್ನು ಮುಂದೆ ಮಾಡಿಕೊಂಡು ರಾಮನ ಚರಣಗಳಿಗೆ ಶರಣು ಬಂದಳು.

**ಋಷಿಗಳು:-** ಜಗನ್ನಾಥ, ಈ ಗಂಗೆ ಬೇರೆ ಯಾರೂ ಅಲ್ಲ. ನಿನ್ನ ಮಗಳೇ. ಆದುದರಿಂದಲೇ ಇವಳು ಮೂರು ಲೋಕಗಳನ್ನೇ ಪವಿತ್ರಗೊಳಿಸುವ ಪುಣ್ಯ ನದಿ. ಅವಳನ್ನು ನೀನೇ ನಿನ್ನ ಶಾಪದಿಂದ ಮುಕ್ತಳನ್ನಾಗಿ ಮಾಡು.

**ರಾಮ:-** ನನ್ನ ಭಕ್ತಳಾದ ಶಬರಿಯು ಈ ರಕ್ತವಾಹಿನಿಯಲ್ಲಿ ಸ್ನಾನ ಮಾಡಲಿ. ಅದರಿಂದ ಕೂಡಲೇ ಗಂಗೆಯ ಶಾಪವು ನಿವೃತ್ತವಾಗುವದು. ಗಂಗೆಯು ಮುಕ್ತವಾಗುವಳು. ಹೀಗೆ ಹೇಳಿ ರಾಮನು ಅಲ್ಲಿ ಇರುವ ಶಬರಿತೀರ್ಥದಲ್ಲಿ ಗಂಗೆಯ ನಿತ್ಯ ಸನ್ನಿಧಾನವು ಇರುವಂತೆ ಮಾಡಿದ.

**ಮಹಾಭಾಗಮಾನಾಂಚ ತೀರ್ಥಂ ಯಸ್ಯೋದರೇಭವೇತ್ ।**
**ತಚ್ಛರೀರಂ ಜಗದ್ವಂದ್ಯಂ ಭವಿಷ್ಯತಿ ನ ಸಂಶಯಃ ॥**

ಭಗವದ್‌ಭಕ್ತರ ಕೈಯಿಂದ ಅಥವಾ ಅವರ ಮೂಲಕವಾಗಿ ಯಾರ ಹೊಟ್ಟೆಯಲ್ಲಿ ತೀರ್ಥೋದಕವು ಹೋಗುವದೋ ಅವರ ಶರೀರವು ಜಗದ್‌ವಂದ್ಯವು ಆಗುವುದರಲ್ಲಿ ಸಂದೇಹವಿಲ್ಲ.

ಹೀಗೆ ಹೇಳಿ ರಾಮನು ಋಷ್ಯಮೂಕ ಪರ್ವತಕ್ಕೆ ತೆರಳಿದ. ಅಲ್ಲಿ ಪಂಪಾಸರೋವರದ ದಂಡೆಯ ಮೇಲೆ ಕಪಿಶ್ರೇಷ್ಠನಾದ ಹನುಮಂತನು ಭೇಟಿಯಾದ. ಅವನ ಮುಖಾಂತರ ಸುಗ್ರೀವನ ಸಖ್ಯವನ್ನು ಬೆಳೆಸಿದ. ಅವನ ಅಣ್ಣನಾದ ವಾಲಿಯನ್ನು ಸಂಹರಿಸಿದ. ಅನಂತರ ವಾಲಿಯ ರಾಜ್ಯದಲ್ಲಿ ಸುಗ್ರೀವನನ್ನೇ ಅಧಿರಾಜನನ್ನಾಗಿ ಮಾಡಿ ಪಟ್ಟಾಭಿಷೇಕ ಮಾಡಿದ.

ಅನಂತರ ಆ ವಾನರ ವೀರನಾದ ಸುಗ್ರೀವನು ಸೀತೆಯನ್ನು ಹುಡುಕಿಕೊಂಡು ಬರಲು ಹನುಮಂತನೇ ಮೊದಲಾದ ಪ್ಲವಂಗ ಪುಂಗವರನ್ನು ದಶದಿಕ್ಕುಗಳಿಗೂ ಕಳಿಸಿದ.

ಅವರಲ್ಲಿ ಪ್ರಮುಖನಾದ ಹನುಮಂತನು ಸಮುದ್ರವನ್ನೂ ಹಾರಿ ಲಂಕಾ ಪಟ್ಟಣವನ್ನು ಸೇರಿ ಸೀತೆಯ ದರ್ಶನವನ್ನು ತೆಗೆದುಕೊಂಡ. ರಾಮನ ವಿಯೋಗದಿಂದ ದುಃಖದಲಿತಳಾದ ಸೀತೆಗೆ ಒಂದು ದಿನವೂ ಕಣ್ಣು ತುಂಬ ನಿದ್ದೆ ಇಲ್ಲ. ಹೊಟ್ಟೆ ತುಂಬ ಆಹಾರ ಇಲ್ಲ. ಪತಿಯ ವಿಯೋಗ ವೈವ್ಹಲ್ಯದಿಂದ ಅವಳ ಕಮಲ ಕೋಮಲವೂ, ನಿತಾಂತ ಕಮನೀಯವೂ ಆದ ದೇಹವೆಲ್ಲವೂ ಕೊರಗಿ, ಸೊರಗಿ ಕಾಷ್ಠವಾಗಿದ್ದಿತು. ಅವಳಿಗೆ ಹನುಮಂತ ರಾಮನು ಕೊಟ್ಟ ಗುರುತಿನ ಉಂಗುರ ತೋರಿಸಿ ರಾಮನ ಸಂದೇಶವನ್ನು ತಿಳಿಸಿದ.

ಅನಂತರ ಮರಳಿ ಹೋಗುವಾಗ ರಾವಣನ ಪ್ರೀತಿಯ ತೋಟವಾದ ಅಶೋಕವನದಲ್ಲಿ ಅಲ್ಲಿನ ಮರಗಳನ್ನೆಲ್ಲ ಮುರಿದು ಬಳ್ಳಿಗಳನ್ನೆಲ್ಲ ಈಡಾಡಿ ಲತಾಮಂಟಪಗಳನ್ನೆಲ್ಲ ಹಾಳುಗೆಡವಿ ರಾವಣನಿಗೆ ಸುದ್ದಿ ಮುಟ್ಟಿಸಿದ. ಆಗ ತನ್ನನ್ನು ಹೊಡೆಯಲು ಬಂದ ಏಳು ಮಂತ್ರಿಗಳ ಮಕ್ಕಳನ್ನು, ರಾವಣನ ಮೆಚ್ಚಿನ ಮಗನಾದ ಅಕ್ಷಕುಮಾರನನ್ನು ತೋರಣದ ಕಂಬ ಕಿತ್ತಿ ಹೊಡೆದು ಸಾಯಿಸಿದ. ಆ ವನವನ್ನು ಕಾಯುತ್ತಲಿದ್ದ ರಾವಣನ ಕಾವಲುಗಾರರೆಲ್ಲರನ್ನೂ ಒಂದೊಂದು ಏಟು ಹಾಕಿ ಕೈಲಾಸಕ್ಕೆ ಕಳುಹಿಸಿದ. ರಾವಣನ ಹಿರಿಯ ಮಗ ಇಂದ್ರಜಿತು ಬಂದ. ಬ್ರಹ್ಮಾಸ್ತ್ರ ಬಂಧನದಿಂದ ಒಳಪಟ್ಟ. ದೈತ್ಯರು ಹನುಮಂತನನ್ನು ರಾವಣನ ಬಳಿಗೆ ಕರೆದೊಯ್ದರು. ಆ ರಾಕ್ಷಸೇಂದ್ರನಿಗೂ ಈ ಕವೀಂದ್ರನಿಗೂ ಖಂಡತುಂಡ ಸಂಭಾಷಣೆ. ಅನಂತರ ತನ್ನ ಬಾಲದ ಬೆಂಕಿಯಿಂದ ಲಂಕಾಪಟ್ಟಣವನ್ನೆಲ್ಲ ಆ ಹನುಮಂತ ಸುಟ್ಟುಹಾಕಿದ. ಸೀತೆ ಕೊಟ್ಟ ಗುರುತನ್ನು ತೆಗೆದುಕೊಂಡು ಬಂದು ರಾಮನಿಗೆ ಒಪ್ಪಿಸಿದ. ಸೀತೆ ಹೇಳಿದ ಎಲ್ಲ ಸಂದೇಶವನ್ನು ತಿಳಿಸಿದ. ಅಲ್ಲಿ ತಾನು ಮಾಡಿದ ಕಾರ್ಯವನ್ನೆಲ್ಲ ಅರುಹಿದ.

ಅನಂತರ ಆ ಶ್ರೀರಾಮನು ಪ್ರಚಂಡವಾದ ವಾನರಸೇನೆಯಿಂದ ಒಡಗೂಡಿ ಸಮುದ್ರ ತೀರಕ್ಕೆ ಬಂದ. ರಾವಣನ ತಮ್ಮನಾದ ವಿಭೀಷಣ ಎಂಬ ಭಗವದ್‌ಭಕ್ತ ತನ್ನ, ಅಣ್ಣ, ಮಡದಿ, ಮಕ್ಕಳು, ಮನೆ, ಪರಿವಾರ, ಎಲ್ಲವನ್ನೂ ಬಿಟ್ಟು ರಾಮನಿಗೆ ಶರಣು ಬಂದ. ಆಗ ಶ್ರೀರಾಮನು ಅವನಿಗೆ ಅಭಯವನ್ನು ನೀಡಿದ. ರಾಕ್ಷಸರ ರಾಜ್ಯದಲ್ಲಿ ಅವನನ್ನೇ ಅಧಿರಾಜನನ್ನಾಗಿ ನಿಯಮಿಸಿದ.

ಸಮುದ್ರವನ್ನು ದಾಟಬೇಕು ಎಂದು ಬಯಸಿ ಸಾಗರನಿಗೆ ಸೈನ್ಯಸಮೇತನಾಗಿ ಲಂಕೆಗೆ ಹೋಗಲು ದಾರಿ ಕೇಳಿದ ಶ್ರೀರಾಮ, ಅಪಾರ ಜಲರಾಶಿಯಿಂದ ಘೂರ್ಮಿಸುವ ಸಾಗರವು ತಾನಾಗಿ ದಾರಿ ಕೊಡದಿರಲು ರಾಮನು ತನ್ನ ಶಾರಂಗ ಬಾಣವನ್ನು ತೆರೆದು ಆ ತೋಯ ರಾಶಿಯನ್ನೆಲ್ಲ ಶೋಷಣೆಮಾಡಿದ. ಅಪರಂಪಾರವಾದ ಸಾಗರದ ಅಪ ನೀರರಾಶಿಯೆಲ್ಲವೂ ಕ್ಷಣಾರ್ಧದಲ್ಲಿ ರಾಮಬಾಣದಿಂದ ಒಣಗಿ ಹೋಯಿತು. ಸಮುದ್ರರಾಜನು ಭೀತಿಯಿಂದ ಉದ್ಭ್ರಾಂತನಾಗಿ ರಾಮನ ಚರಣಗಳಿಗೆ ಶರಣು ಬಂದ. ಕರುಣಾನಿಧಿಯಲ್ಲವೆ ಆ ಶ್ರೀರಾಮ? ಶರಣಾಗತನಾಗಿ ತನ್ನ ಚರಣಗಳಿಗೆ ಪೂಜೆಯನ್ನು ಸಲ್ಲಿಸಿದ ಆ ಸಮುದ್ರದ ಶುಷ್ಕವಾದ, ತೆರೆದ ಒಡಲನೆಲ್ಲ ಮತ್ತೆ ವರುಣಾಸ್ತ್ರವನ್ನು ಬಿಟ್ಟು ಜಲರಾಶಿಯಿಂದ ತುಂಬಿ ಬಿಟ್ಟ.

ಅನಂತರ ಸಮುದ್ರವು ಪ್ರಾರ್ಥನೆ ಮಾಡಿದ್ದರಿಂದ ಅದರ ಮಧ್ಯದಲ್ಲಿ ಸೇತುವೆಯನ್ನು ನಿರ್ಮಿಸಿದ. ರಾಮನ ಸೇವಕರಾದ ಕೋತಿಗಳೂ, ಕರಡಿಗಳೂ ದೊಡ್ಡ ದೊಡ್ಡ ಬೆಟ್ಟಗಳನ್ನು ತಂದು ಬೆಟ್ಟ ಹೆಮ್ಮರಗಳನ್ನೂ ಕಾಡು ಕಂಟಿಗಳನ್ನೂ ಗಿರಿ ಶೃಂಗಗಳನ್ನೂ ಹೆಬ್ಬಂಡೆಗಳನ್ನೂ ಶೈಲಜಾಲಗಳನ್ನೂ ಒಂದರ ಮೇಲೆ ಒಂದರಂತೆ ಇರಿಸಿ, ಒಂದರ ಮುಂದೆ ಒಂದರಂತೆ ಪೇರಿಸಿ ಏರಿಸಿ, ಸಮುದ್ರದ ಮಧ್ಯದಲ್ಲಿ ನೂರು ಯೋಜನಗಳವರೆಗೆ ಗಿಡ ಗುಡ್ಡಗಳನ್ನು ಇಟ್ಟು ವಿರಾಟ್ ಸೇತುವೆಯನ್ನು ಸಮುದ್ರದ ನಟ್ಟ ನಡುವೆ ಕಟ್ಟಿದರು.

ಅದರ ಮೇಲಿಂದ ಎಲ್ಲ ವಾನರರೊಂದಿಗೆ ರಾಮನು ಲಂಕಾಪಟ್ಟಣಕ್ಕೆ ಬಂದು ಇಳಿದ. ಲಂಕೆಯಲ್ಲಿ ರಾಮನ ವಾನರ ಸೇನೆಗೂ ರಾವಣನ ದೈತ್ಯ ಸೇನೆಗೂ ಭಯಂಕರವಾದ ಯುದ್ಧವು ನಡೆಯಿತು. ಯುದ್ಧದ ಮಧ್ಯದಲ್ಲಿ ಒಮ್ಮೆ ಇಂದ್ರಜಿತನು ನಾಗಪಾಶದಿಂದ ರಾಮಲಕ್ಷ್ಮಣರನ್ನು ಬಿಗಿದುಬಿಟ್ಟ. ಆಗ ಗರುಡನು ಬಂದು ಆ ನಾಗಪಾಶದ ಕಟ್ಟನ್ನು ಕಳಚಿದ. ಆದರಿಂದ ವಾನರ ವೀರರ ಉತ್ಸಾಹವು ಇಮ್ಮಡಿಸಿ, ಅವರು ರಕ್ಕಸರನ್ನೆಲ್ಲ ಕೊಂದು ಕುಪ್ಪೆ ಹಾಕಿದರು. ಆಗ ಸಿಟ್ಟಿಗೆದ್ದ ರಾವಣನ ಹಿರಿಯ ಮಗ ಇಂದ್ರಜಿತನು ಬ್ರಹ್ಮಾಸ್ತ್ರದಿಂದ ಎಲ್ಲ ಕೋತಿಗಳನ್ನೂ ಕರಡಿಗಳನ್ನೂ ರಾಮನ ಸೈನಿಕರೆಲ್ಲರನ್ನೂ ಬಂಧಿಸಿದ. ಆಗ ಹನುಮಂತನು ಸಂಜೀವಿನ ಬೆಟ್ಟವನ್ನು ತಂದ. ಅದರ ಗಾಳಿಯಿಂದಲೇ ಸತ್ತು ಬಿದ್ದ ಮರ್ಕಟಗಳೆಲ್ಲವೂ ಮತ್ತೆ ಎದ್ದು ಯುದ್ಧಕ್ಕೆ ಅಣಿಯಾದರು. ರಾವಣನ ತಮ್ಮನಾದ ಕುಂಭಕರ್ಣನನ್ನು ರಾಮನು ತನ್ನ ಬೆಂಕಿಯಂಥ ಬಾಣದಿಂದ ಸಂಹರಿಸಿದ. ಅನಂತರ ಲಕ್ಷ್ಮಣನು ಇಂದ್ರನನ್ನು ಗೆದ್ದು ಇಂದ್ರಜಿತ ಎಂದು ಹೆಸರು ಪಡೆದ ವೈರಿಯ ಚೊಚ್ಚಲ ಮಗನನ್ನು ತನ್ನ ಘೋರಾಸ್ತ್ರದಿಂದ ಹಣಿದು ಹಾಕಿದ.

ಸ್ವಯಂ ರಾವಣ ತಾನೇ ಮಂತ್ರಿ, ಸೇನಾಪತಿ, ಚತುರಂಗ ಸೈನ್ಯದಿಂದ ಒಡಗೂಡಿ ರಾಮನನ್ನು ಹಣಿಯಬೇಕೆಂದು ಹಣಾ ಹಣಿ ಹೋರಾಟ ನಡೆಸಿದ. ಆಗ ರಾವಣನು ತನ್ನ ಶಕ್ತ್ಯಾಯುಧದಿಂದ ಲಕ್ಷ್ಮಣನನ್ನು ಪ್ರಹರಿಸಿ ನೆಲಕ್ಕೆ ಬೀಳಿಸಿದ. ಅದನ್ನು ಕಂಡು ಕೋಪಾಟೋಪದಿಂದ ಉರಿದು ಹೋದ ರಾಮ ಯಮದಂಡದಂತಿರುವ ಸಾವಿರ ಬಾಣಗಳನ್ನು ಬಿಟ್ಟು ರಾವಣನ ಸರ್ವಾಂಗಗಳನ್ನೂ ಸೀಳಿ ನೆತ್ತರು ಬಸಿಯುವಂತೆ ಮಾಡಿದ. ಈ ರಾಮ ಬಾಣದ ಹೊಡೆತ ಬಡೆತಗಳನ್ನು ತಾಳಲಾರದೆ ರಾವಣ ರಣಭೂಮಿಯಿಂದ ಅಂಜಿ ಓಡಿಹೋಗಿ ಲಂಕಾಪಟ್ಟಣ ಸೇರಿಕೊಂಡ. ನೋಡಿದಲ್ಲೆಲ್ಲ ಆ ದೈತ್ಯರಾಜನಿಗೆ ರಾಮನೇ ಬಾಣಹಿಡಿದು ಹೊಡೆಯಬಂದಂತೆ ಕಾಣುತ್ತಿತ್ತು

ಇತ್ತ ರಾವಣನು ರಣಾಂಗಣದಲ್ಲಿ ಬೆನ್ನು ತೋರಿ ಪಲಾಯನಗೈದ ಬಳಿಕ ಅವನ ಬಾಣದಿಂದ ಮೂರ್ಛಿತನಾದ ಲಕ್ಷ್ಮಣನನ್ನು ಪುನರುಜ್ಜೀವನಗೊಳಿಸಲಿಕ್ಕಾಗಿ ಮತ್ತೊಮ್ಮೆ ಆ ಸಂಜೀವಿನಿ ಬೆಟ್ಟವನ್ನು ಮಾರುತಿಯು ತೆಗೆದುಕೊಂಡು ಬಂದ. ಅದರ ಗಾಳಿಯಿಂದಲೇ ಲಕ್ಷ್ಮಣ ಚೇತರಿಸಿಕೊಂಡು ಎದ್ದು ಕುಳಿತ. ಗೆಲುವನ್ನು ತನ್ನ ಕಡೆಗೆ ಎಳೆದು ತರಬೇಕೆಂದು ಒಂದು ಅಭಿಚಾರಿಕ ಹೋಮವನ್ನು ಮಾಡಲು ಉಪಕ್ರಮಿಸಿದರು ಶತ್ರುಗಳು. ವಿಭೀಷಣನಿಂದ ಅದರ ಸುಳಿವು ತಿಳಿದು ಎಲ್ಲ ಮಂಗ ಮಹನೀಯರು ರಾವಣನ ಆ ಯಜ್ಞವನ್ನು ವಿಧ್ವಂಸಗೈದರು. ಆಗ ಕ್ರುದ್ಧನಾದ ದಶಗ್ರೀವ ತನ್ನ ದಿವ್ಯವಾದ ರಥವನ್ನು ಏರಿ ಅಳಿದುಳಿದ ರಾಕ್ಷಸ ಸೈನಿಕರೊಡನೆ ಪ್ರತ್ಯಕ್ಷ ಯುದ್ಧಕ್ಕೆ ಆಗಮಿಸಿದ. ಆಗ ದೇವೇಂದ್ರ ತನ್ನ ಮಾತಲಿಯೊಡನೆ ದಿವ್ಯವಾದ ರಥವನ್ನು ರಾಮನಿಗೆ ಯುದ್ಧಕ್ಕೆ ಕಳಿಸಿದ.

ಅದನ್ನು ಅಧಿರೋಹಣ ಮಾಡಿದ ಶ್ರೀರಾಮ, ರಾವಣನೊಡನೆ ಸಂಗ್ರಾಮರಂಗದಲ್ಲಿ ಸಮರ್ಥರೀತಿಯಲ್ಲಿ ಕಾದಿದ. ಏಳು ಹಗಲು ಏಳು ರಾತ್ರಿ ಆ ರಾಮ ರಾವಣರ ಯುದ್ಧವು ಘೋರಾತಿ ದಾರುಣವಾಗಿ ಜರುಗಿತು. ನಾಕ ಲೋಕದ ದಿಪಾರಸರೆಲ್ಲರೂ ವಿಮಾನದಲ್ಲಿ ಕುಳಿತು ಆ ರಾಮರಾವಣರ ಯುದ್ಧವನ್ನು ಕೌತುಕ ಭರಿತರಾಗಿ ನಿರೀಕ್ಷಿಸಿದರು. ರಘುಕುಲ ತಿಲಕನಾದ ಶ್ರೀರಾಮನು ಲಂಕೇಶ್ವರನ ಹತ್ತು ತಲೆಗಳನ್ನೂ ಕತ್ತರಿಸಿ ಹಾಕಿದ. ಆದರೆ ಪರಮೇಶ್ವರನ ವರದ ಪ್ರಭಾವದಿಂದ ಆ ಹತ್ತೂ ರಾವಣನ ತಲೆಗಳು ಮತ್ತೆ ಚಿಗಿತು ನಿಂತವು. ಆಗ ಶ್ರೀರಾಮಚಂದ್ರ ಭೀಕರವಾದ ಬ್ರಹ್ಮಾಸ್ತ್ರವನ್ನು ಬಿಟ್ಟು ರಾವಣನ ಎದೆಯನ್ನು ಸೀಳಿದ. ಆ ರಾಮಬಾಣವು ರಾವಣನ ವಕ್ಷಸ್ಥಳವನ್ನು ಒಡೆದು ಎದೆಯನ್ನು ಹೊಕ್ಕು, ಬೆನ್ನಿನಿಂದ ಪಾರಾಗಿ ಭೂಮಿಯನ್ನು ನೆಟ್ಟೂ ಪಾತಾಳಕ್ಕೋಯಿತು. ಅಲ್ಲಿ ಅದನ್ನು ನಾಗಕುಲದ ನಾಯಕರೆಲ್ಲೂರೂ ಆ ರಾಮಬಾಣವನ್ನು ಪೂಜಿಸಿದರು. ಅನಂತರ ತಿರುಗಿ ಬಂದು ಆ ಬಾಣವು ರಾಮನಕೈಯನ್ನೇ ಅಲಂಕರಿಸಿತು.

ಪ್ರಚಂಡ ಪರಾಕ್ರಮಿಯಾದ ಆ ದೈತ್ಯ ಸಾರ್ವಭೌಮ ರಾಮಬಾಣದಿಂದ ನೆಲಕ್ಕೆ ಉರುಳಿ ಮರಣ ಹೊಂದಿದ ಬಳಿಕ ಎಲ್ಲ ದೇವತೆಗಳೂ ಆನಂದತುಂದಿಲರಾಗಿ ಜಗದ್ಗುರುವಾದ ಶ್ರೀರಾಮನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ಗಂಧರ್ವರು ಗಾನಗೈದರು. ಅಪ್ಸರೆಯರು ತಣಿದು ಕುಣಿದರು. ತಂಗಾಳಿಯು ಸುಗಂಧಮಯವಾಗಿ ತೀಡಿತು. ಸೂರ್ಯ ಬೆಳಕಿನ ಬೆಟ್ಟವಾಗಿ ಬೆಳಗಿದ. ಮುನಿಗಳು ಹೊಗಳಿದರು. ಸಿದ್ಧರು ಪೊಗಳಿದರು. ಕಿನ್ನರ ಕಿಂಪುರುಷರು ಕೊಂಡಾಡಿದರು.

ಅನಂತರ ಶ್ರೀರಾಮನು ಲಂಕೆಯ ಸಾಮ್ರಾಜ್ಯ ಸಿಂಹಾಸನದಲ್ಲಿ ರಾಕ್ಷಸ ಶ್ರೇಷ್ಠನಾದ ವಿಭೀಷಣನನ್ನು ಕೂಡಿಸಿ ಪಟ್ಟಾಭಿಷೇಕ ಮಾಡಿದ. ಮತ್ತು ವಿಭೀಷಣನನ್ನು ಕುರಿತು ಸಾನುಗ್ರಹ ಭಾಷಣ ಮಾಡಿದ. ''ವಿಭೀಷಣ ! ಮುಗಿಲಿನಲ್ಲಿ ಚಂದ್ರ ಸೂರ್ಯರು ಬೆಳಗುವವರೆಗೆ, ಜಗತ್ತಿನಲ್ಲಿ ಗಾಳಿ ಬೀಸುವವರೆಗೆ, ಭೂಲೋಕದಲ್ಲಿ ರಾಮನ ಕಥೆ ಪ್ರಚಲಿತವಾಗಿ ಇರುವವರೆಗೆ, ನೀನು ರಾಕ್ಷಸ ಸಾಮ್ರಾಜ್ಯವನ್ನು ಆಳುತ್ತ ಇರು. ಅನಂತರ ಕಲ್ಪಾಂತಕಾಲದಲ್ಲಿ ಯೋಗಿಗಳಿಂದ ಮಾತ್ರ ಗಮ್ಯವಾದ ನನ್ನ ಪರಮ ಪದವನ್ನು ಹೊಂದು.''

**ಮಹಾದೇವ:-** ಹೀಗೆ ಪರಾಕ್ರಮಶಾಲಿಯಾದ ಶ್ರೀರಾಮ ವಿಭೀಷಣನಿಗೆ ವರವಿತ್ತು ಸೀತೆಯ ಬಳಿಗೆ ಬಂದ. ಅಲ್ಲಿ ನೆರೆದ ಎಲ್ಲ ಜನರೆದುರು ಸಾಧ್ವಿಯಾದ ಸೀತಾದೇವಿಗೆ ಬಹಳ ಕಠೋರ ವಚನಗಳನ್ನು ಆಡಿದ. ಆದರಿಂದ ಅವಮಾನದ ಉರಿಯಲ್ಲಿ ಬೆಂದುನೊಂದು ಹೋದ ಸಾಧ್ವಿ ಶಿಖಾಮಣಿಯಾದ ಸೀತಾದೇವಿಯು ಧಗಧಗಿಸುವ ಬೆಂಕಿಯಲ್ಲಿ ಬಿದ್ದು ಅಗ್ನಿಪ್ರವೇಶಮಾಡಿದಳು. ಆಗ ಬ್ರಹ್ಮ ರುದ್ರ ಮೊದಲಾದ ಎಲ್ಲ ದೇವತೆಗಳೂ ಕೈ ಮುಗಿದು ರಾಮನಿಗೆ ಬೇಡಿಕೊಂಡರು. ''ರಾಮ! ಸೀತೆಯು ಪರಮಪವಿತ್ರೆ, ಮಹಾ ಸಾಧ್ವೀಶಿಖಾಮಣಿ. ಸೂರ್ಯನಿಂದ ಬೆಳಕನ್ನು ಬಿಡಿಸಲುಬಾರದು. ರಾಮನಿಂದ ಸೀತೆಯನ್ನು ಅಗಲಿಸಲಿಕ್ಕೂ ಬಾರದು. ಇವಳು ಲೋಕಹಿತಕ್ಕಾಗಿ ಜನಕ ಪುತ್ರಿಯಾಗಿ ಜನ್ಮತಾಳಿದ ಜಗನ್ಮಾತೆ. ನೀನು ನಾರಾಯಣ. ಅವಳು ಮಹಾಲಕ್ಷ್ಮಿ. ಸರ್ವಲೋಕಗಳಿಗೂ ನೀನು ತಂದೆ ಅವಳು ತಾಯಿ. ನೀನು ಸರ್ವತ್ರ ವ್ಯಾಪ್ತ. ನಿನ್ನಂತೆ ಅವಳು ಜಗದ್ವ್ಯಾಪಿನಿ, ದಯವಿಟ್ಟು ನೀನು ಆ ಮಹಾಮಾತೆಯನ್ನು ಸ್ವೀಕರಿಸು. ತಡಮಾಡಬೇಡ.''

ಅಷ್ಟರಲ್ಲಿ ಅಗ್ನಿಯು ಸೀತೆಯನ್ನು ಕರೆದುಕೊಂಡು ಬಂದು ಎಲ್ಲ ಸುರ ಅಸುರ ನರ ವಾನರರ ಸಮಕ್ಷಮ ರಾಮನಿಗೆ ಒಪ್ಪಿಸಿ ಹೇಳಿದ.

**ಅಗ್ನಿ:-** ಪ್ರಭು, ಈ ಸೀತೆ ದೇಹದಿಂದ ಶುದ್ಧಳು ಮನಸ್ಸಿನಿಂದ ಶುದ್ಧಳು. ಆಚಾರದಿಂದ ಶುದ್ಧಳು. ವಿಚಾರದಿಂದ ಶುದ್ಧಳು. ಯಾವ ಕಲ್ಮಷವೂ ಅವಳಲ್ಲಿ ಇಲ್ಲ. ಅವಳು ನಿರ್ದೋಷಳು. ಪತಿವ್ರತಾ ರತ್ನ. ಇದು ಸತ್ಯ. ಸತ್ಯ.

**ಮಹಾದೇವ:-** ಅಗ್ನಿಯ ಮಾತಿನಿಂದ ರಾಮನಿಗೆ ಸಂತೋಷವಾಯಿತು. ಅವನು ಆನಂದದಿಂದ ಸೀತೆಯನ್ನು ಪರಿಗ್ರಹಿಸಿದ.

ಯುದ್ಧದಲ್ಲಿ ರಾಕ್ಷಸರಿಂದ ಹತರಾದ ಎಲ್ಲ ವಾನರರನ್ನು ಬ್ರಹ್ಮದೇವನು ವರಕೊಟ್ಟು ಮತ್ತೆ ಬದುಕುವಂತೆ ಮಾಡಿದ. ಆಗ ಮರಿ ಸೂರ್ಯನಂತೆ ಇರುವ ಪುಷ್ಪಕ ವಿಮಾನ ಬಂದಿತು. ಅದನ್ನು ರಾವಣ ಬಲಾತ್ಕಾರದಿಂದ ಕಿತ್ತುಕೊಂಡಿದ್ದ ತನ್ನ ಸೋದರ ಕುಬೇರನಿಂದ: ಅದನ್ನು ವಿಭೀಷಣ ಶ್ರೀರಾಮನಿಗೆ ನೀಡಿದ. ಮತ್ತು ರಾಮಚಂದ್ರನನ್ನು ಭಯ ಭಕ್ತಿಯಿಂದ ವಸ್ತ್ರಾಭರಣವನ್ನು ಇಟ್ಟು ಪೂಜಿಸಿದ.

ಶ್ರೀರಾಮನು ಸೀತೆಯೊಂದಿಗೆ ಹಾಗೂ ಲಕ್ಷ್ಮಣ ಸುಗ್ರೀವ ವಿಭೀಷಣ ಉಳಿದೆಲ್ಲ ವಾನರ ವೀರರಿಂದ ಕೂಡಿಕೊಂಡು ಪುಷ್ಪಕವಿಮಾನವನ್ನು ಏರಿದ. ಅಯೋಧ್ಯೆಗೆ ಹೊರಟ. ಭರದ್ವಾಜರ ಆಶ್ರಮಕ್ಕೆ ರಾಮ ಬಂದು ಅಯೋಧ್ಯೆಗೆ ತಾನುಬರುವ ಸಮಾಚಾರವನ್ನು ಭರತನಿಗೆ ತಿಳಿಸಲಿಕ್ಕಾಗಿ ಹನುಮಂತನನ್ನು ಮುಂದೆ ಕಳಿಸಿದ.

ಅನಂತರ ಆ ಹನುಮಂತನು ಮುಗಿಲಿನ ದಾರಿಯಿಂದ ಅಯೋಧ್ಯೆಗೆ ಹಾರುತ್ತ ಹೊರಟ. ಮಧ್ಯಮಾರ್ಗದಲ್ಲಿ ಗಂಗಾತೀರದಲ್ಲಿ ಗುಹನ ಆಶ್ರಮದಲ್ಲಿ ಇಳಿದ. ಶ್ರೀರಾಮನ ಜೀವದ ಗೆಳೆಯ, ಬೇಡರ ಒಡೆಯನಾದ ಈ ನಿಷಾದ. ಅವನಿಗೆ ಗುಹ ಎಂದು ಹೆಸರು. ತಾನು ಸುಖರೂಪವಾಗಿ ಅಯೋಧ್ಯೆಗೆ ಮರಳಲಿರುವ ಸಮಾಚಾರವನ್ನು ಅವನಿಗೆ ತಿಳಿಸಲು ಶ್ರೀರಾಮ ಹೇಳಿದ್ದ. ಹನುಮಂತ ಅಲ್ಲಿ ಇಳಿದು ರಾಮನ ಪುನರಾಗಮನದ ಸಮಾಚಾರವನ್ನು ತಿಳಿಸಿ ರಾಮಪಟ್ಟಾಭಿಷೇಕ ಮಹೋತ್ಸವಕ್ಕಾಗಿ ಅಯೋಧ್ಯೆಗೆ ಬರಲು ತಿಳಿಸಿದ. ಅನಂತರ ಅವನು ಅಯೋಧ್ಯೆಯ ಹೊರ ವಲಯದಲ್ಲಿ ಇರುವ ನಂದೀಗ್ರಾಮಕ್ಕೆ ಬಂದು ಇಳಿದ. ಅಲ್ಲಿ ರಾಮನ ತಮ್ಮ ಭರತನನ್ನು ಕಂಡ. ಅವನಿಗೆ ಶ್ರೀರಾಮ ಸೀತಾಲಕ್ಷ್ಮಣರೊಂದಿಗೆ ವನವಾಸದಿಂದ ಮರಳಿ ಬರುವ ಸಮಾಚಾರ ತಿಳಿಸಿದ. ಭರತನಿಗೆ ತುಂಬ ಹಿಗ್ಗು. ತನ್ನ ತಮ್ಮ ಗೆಳೆಯರೊಂದಿಗೆ ರಾಮನ ಆಗಮನದ ಆನಂದವನ್ನು ಹಂಚಿಕೊಂಡ. ಮತ್ತೆ ಮತ್ತೆ ಮಾರುತಿಯನ್ನು ಕುರಿತು ರಾಮನಸುದ್ದಿಯನ್ನು ಕೇಳಿದ. ಸೀತೆಯ ಸಂಗತಿಯನ್ನು ತಿಳಿದುಕೊಂಡ. ಲಕ್ಷ್ಮಣನದಿನಚರಿಯನ್ನು ಕೇಳಿಕೊಂಡ. ಆ ಮೂವರು ಕಾಡಿನಲ್ಲಿ ಕಳೆದ ಹದಿನಾಲ್ಕು ವರ್ಷದ ಸುದ್ದಿ ಸಮಾಚಾರ ಘಟನೆಗಳೆಲ್ಲವನ್ನೂ ಕೌತುಕದಿಂದ ಕೇಳಿ ತಿಳಿದು ತನ್ನ ಕುತೂಹಲವನ್ನು ತಣಿಸಿಕೊಂಡ.

ಅನಂತರ ಹನುಮಂತನು ಮತ್ತೆ ಅಯೋಧ್ಯೆಯಿಂದ ಹಾರಿ ಭಾರದ್ವಾಜರ ಆಶ್ರಮವನ್ನು ಸೇರಿದ. ರಾಮ ಹನುಮಂತನಿಗಾಗಿ ಕಾದುಕೊಂಡು ನಿಂತಿದ್ದ. ಭರತನ ಆದರ, ಅತುರತೆ ರಾಮಭಕ್ತಿಯನ್ನು ರಾಮನಿಗೆ ತಿಳಿಸಿದ. ಅದನ್ನು ಕೇಳಿ ರಾಮ ಆನಂದದಿಂದ ಪುಷ್ಪಕದಿಂದ ಹಾರಿ ನಂದೀಗ್ರಾಮಕ್ಕೆ ಬಂದು ಇಳಿದ. ಸೀತೆ, ಲಕ್ಷ್ಮಣ,

ಎಲ್ಲ ಕಪಿವೀರರೂ ರಾಮನ ಹಿಂದಿನಿಂದ ಒಬ್ಬೊಬ್ಬರಾಗಿ ಪುಷ್ಪಕದಿಂದ ಇಳಿದರು. ಭರತ ಅತ್ಯಂತ ಸಂಭ್ರಮ, ಸಂತಸ, ಭ್ರಾತೃ ಭಕ್ತಿಯಿಂದ ಮಂತ್ರಿಪರಿವಾರದೊಂದಿಗೆ ರಾಮನನ್ನು ಎದುರುಗೊಂಡ. ಅಯೋಧ್ಯೆಯ ನಗರ ನಾಯಕರಿಂದ ಒಡಗೂಡಿ ಸಾದರದಿಂದ ವಂದಿಸಿದ ಸೋದರನ ಪಾದಾರವಿಂದಗಳನ್ನು ಆಗ ಶ್ರೀರಾಮ ಪ್ರೇಮೋದ್ರೇಕದಿಂದ ಭರತನನ್ನು ಭರದಿಂದ ಬಿಗಿದಪ್ಪಿದ. ಶತ್ರುಘ್ನನನ್ನು ಗಟ್ಟಿಯಾಗಿ ಅಪ್ಪಿಕೊಂಡ. ಪುರೋಹಿತರಾದ ವಶಿಷ್ಠರಿಗೆ ವಂದಿಸಿದ. ವೃದ್ಧರಾದ ತನ್ನ ಎಲ್ಲ ತಾಯಂದಿರಿಗೂ ನಮಸ್ಕಾರ ಮಾಡಿದ ಸೀತಾಲಕ್ಷ್ಮಣರೊಂದಿಗೆ.

ಭರತನು ಸೀತೆಯ ಪಾದಗಳನ್ನು ಗಟ್ಟಿಯಾಗಿ ಹಿಡಿದು ನಮಸ್ಕರಿಸಿದ. ಅನಂತರ ಲಕ್ಷ್ಮಣನನ್ನು ಆಲಿಂಗಿಸಿಕೊಂಡ ಬಳಿಕ ವಿಭೀಷಣ, ಸುಗ್ರೀವ, ಜಾಂಬವಂತ, ಅಂಗದ, ಹನುಮಂತ, ಸುಷೇಣ, ಮೊದಲಾದ ಎಲ್ಲ ರಾಮಭಕ್ತರನ್ನು ಪ್ರತ್ಯೇಕವಾಗಿ ಹನುಮಂತನಿಂದ ಪರಿಚಯ ಮಾಡಿಕೊಂಡು ಕುಶಲ ಪ್ರಶ್ನೆ ಮಾಡಿ, ಕೈ ಕುಲುಕಿ, ಬೇರೆ ಬೇರೆಯಾಗಿಯೇ ಬಾಹುಗಳಿಂದ ಬಿಗಿದಪ್ಪಿದ. ಅವರೆಲ್ಲರೂ ರಾಮಕಾರ್ಯವನ್ನು ಭಕ್ತಿ ಭಾವದಿಂದ ಶಕ್ತಿ ಮೀರಿ ಮಾಡಿದ್ದನ್ನು ಬಾಯಿ ತುಂಬ ಪ್ರಶಂಸಿಸಿದ.

ಅನಂತರ ಶ್ರೀರಾಮ ಮಂಗಳ ಸ್ನಾನ ಮಾಡಿ ಉತ್ತಮವಾದ ರಾಜೋಚಿತ ವಸ್ತ್ರಗಳನ್ನು ಉಟ್ಟು ಹಣೆಗೆ ತಿಲಕ ಇಟ್ಟು, ಸ್ವರ್ಗಲೋಕದ ಹೂವಿನ ಮಾಲೆಯನ್ನು ಕೊರಳಿಗೆ ಹಾಕಿಕೊಂಡು ಎಲ್ಲ ಸೋದರರು ಹಾಗೂ ತನ್ನ ಪರಿವಾರದವರೊಂದಿಗೆ ರಥವನ್ನು ಏರಿದ. ಸುಮಂತನು ರಾಮನಿಗಾಗಿ ದಿವ್ಯರಥವನ್ನು ಅಲಂಕರಿಸಿದ್ದ. ಭರತ ಕೈ ಹಿಡಿದು ರಾಮನನ್ನು ಸೀತೆಯೊಂದಿಗೆ ಸುಮಂತನಿಂದ ಶೃಂಗಾರಿತವಾದ ಆ ರಥದ ಮಧ್ಯದಲ್ಲಿ ತಂದು ಕುಳ್ಳಿರಿಸಿದ. ರಾಮನ ಆ ರಥಯಾತ್ರೆಯನ್ನು ದೇವತೆಗಳು ಕೂಡ ಹೊಗಳಿದರು. ಆ ರಥಯಾತ್ರೆಯಲ್ಲಿ ರಾಮನ ಸೇನಾಪತಿಯಾದ ಸುಗ್ರೀವ, ಹನುಮಂತ, ವಿಭೀಷಣ ಇವರು ಮೂವರು ಮುಂದೆ ನಡೆದಿದ್ದರು. ಅವರ ಹಿಂದೆ ಭರತ, ಶತ್ರುಘ್ನ, ಲಕ್ಷ್ಮಣ ಅವರ ಹಿಂದೆ ಅಂಗದ, ಸುಷೇಣ, ಜಾಂಬವಂತ, ನಲ, ನೀಲ, ಸುಭಗ, ಶರಭ, ಗಂಧಮಾದನ ಮೊದಲಾದ ಕಪಿವೀರರೂ ನಿಷಾದ ಪತಿಯಾದ ಗುಹನೂ ಮೆಲ್ಲಮೆಲ್ಲನೇ ಕೈ ಮುಗಿದುಕೊಂಡು ನಡೆದಿದ್ದರು. ಕೋಸಲ ರಾಜ್ಯದ ಹಳ್ಳಿ ಪಟ್ಟಣಗಳಲ್ಲಿರುವ ಎಲ್ಲ ಜನರೂ ರಾಮನ ದರ್ಶನಕ್ಕಾಗಿ ಉತ್ಸುಕತೆಯಿಂದ ಸಂಖ್ಯಾತೀತ ಸಂಖ್ಯೆಯಲ್ಲಿ ಪ್ರಚಂಡ ಪ್ರಮಾಣದಲ್ಲಿ ನೆರೆದ್ದಿದರು. ಎಲ್ಲರೂ ಭಕ್ತಿಯಿಂದ ರಾಮನ ಮುಖಚಂದ್ರದರ್ಶನ ದಿಂದಲೇ ತೃಪ್ತರಾಗಿ ರಾಮನ ಧ್ವನಿಯನ್ನು ಕೇಳಿ ಆನಂದಿತರಾಗಿ ರಾಮನನ್ನು ಅನುಸರಿಸಿ ಅರಮನೆಗೆ ಬಂದರು. ಅಯೋಧ್ಯಾ ನಗರ ಹಾಗೂ ತನ್ನ ತಂದೆಯ ಅರಮನೆಯನ್ನು ಕಂಡು ರಾಮನಿಗೆ ತನ್ನ ತಂದೆ ದಶರಥರಾಜನ ನೆನಪಾಗಿ ಕಣ್ಣುತುಂಬಿ ಬಂದಿತು. ಕಂಠ ರುದ್ಧವಾಯಿತು. ಆದರೂ ಅವನು ಸಂಯಮದಿಂದ ಸ್ಥೈರ್ಯವನ್ನು ತಂದುಕೊಂಡು ಎಲ್ಲ ತನ್ನ ದಂಡಕಾರಣ್ಯದ ಪರಿವಾರದೊಂದಿಗೆ ರಾಜಭವನ ಪ್ರವೇಶ ಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ರಾಮಾವತಾರ ಎಂಬ ಎರಡುನೂರ ಇಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*

—o—

# ರಾಮನ ಪಟ್ಟಾಭಿಷೇಕಕ್ಕಾಗಿ ಇಂದ್ರ-ಚಂದ್ರ ರುದ್ರಾದಿ ದೇವತೆಗಳ ಆಗಮನ; ಮಹಾದೇವರಿಂದ ಸೀತಾರಾಮ ಸ್ತೋತ್ರ

ಅಧ್ಯಾಯ - ೨೨೫

**ಮಹಾದೇವ:-** ಅನಂತರ ಒಂದು ಮಂಗಳ ಮುಹೂರ್ತದಲ್ಲಿ ವಶಿಷ್ಠರು, ವಾಮದೇವ, ಜಾಬಾಲಿ, ಕಶ್ಯಪ. ಮಾರ್ಕಂಡೇಯ, ಮೌದ್ಗಲ್ಯ, ಪರ್ವತ, ನಾರದ ಮೊದಲಾದ ಮಾನನೀಯರಾದ ಮುನಿಮಹರ್ಷಿಗಳಿಂದ ಕೂಡಿಕೊಂಡು ಹೋಮಹವನ ಜಪ ಅನುಷ್ಠಾನಾದಿಗಳನ್ನು ಆಚರಿಸಿ ವೈಭವದಿಂದ ಶ್ರೀರಾಮ ಪಟ್ಟಾಭಿಷೇಕ ಮಹೋತ್ಸವವನ್ನು ನೇರವೇರಿಸಿದರು. ಬಗೆಬಗೆಯ ರತ್ನಗಳಿಂದ ಕಂಗೊಳಿಸುವ ಸುವರ್ಣ ಸಿಂಹಾಸನದಲ್ಲಿ ಸೀತಾಸಮೇತನಾದ ಶ್ರೀರಾಮಚಂದ್ರನನ್ನು ಕೂಡಿಸಿ ಎಲ್ಲ ತೀರ್ಥಗಳಿಂದ ಸುವರ್ಣಕಲಶಗಳಲ್ಲಿ ತುಂಬಿ ತಂದ ಪರಿಮಳ ದ್ರವ್ಯಗಳಿಂದ ಒಡಗೂಡಿದ ಪುಣ್ಯೋದಕಗಳಿಂದ ವೇದಮಂತ್ರಗಳನ್ನು ಉಚ್ಚರಿಸುತ್ತ ಪಟ್ಟಾಭಿಷೇಕವನ್ನು ನೆರವೇರಿಸಿದರು. ಸೀತಾರಾಮರ ತಲೆಯ ಮೇಲೆ ತುಳಸಿ. ಕುಶಹೂವು, ಗಂಧ ಬೆರೆಸಿದ ಮಂತ್ರಪೂತವಾದ ಜಲವನ್ನು ಹೋಮಕುಂಭಗಳನ್ನು ಎತ್ತಿ ಸುರಿಯುವಾಗ ಎಲ್ಲ ವಿಪ್ರರೂ ಮುನಿ ಮಹನೀಯರೂ ನಾಲ್ಕು ವೇದಗಳಲ್ಲಿ ಇರುವ ವಿಷ್ಣುಸೂಕ್ತ, ಪುರುಷಸೂಕ್ತ, ಘರ್ಮ ಸೂಕ್ತ, ಸಮುದ್ರಸೂಕ್ತಾದಿ ವೇದಮಂತ್ರಗಳನ್ನು ಉಚ್ಚ ಕಂಠದಿಂದ ಪಠಿಸುತ್ತಿದ್ದರು. ಆಕಾಶದಲ್ಲಿ ದೇವದುಂಧುಭಿಗಳು ಮೊಳಗಿದವು. ಪುಷ್ಪವೃಷ್ಟಿಗಳು ಸುರಿದವು. ಅನಂತರ ಶ್ರೀರಾಮನು ಜಾನಕಿಯೊಂದಿಗೆ ಬಗೆಬಗೆಯ ಬಟ್ಟೆ ಪೀತಾಂಬರ ಆಭರಣ ಅಲಂಕಾರಗಳಿಂದ ಸುಂದರವಾಗಿ ಅಲಂಕೃತನಾಗಿ ಸುವರ್ಣ ಸಿಂಹಾಸನದಲ್ಲಿ ಮಂಡಿತನಾದ. ಛತ್ರ-ಚಾಮರಗಳನ್ನು ಲಕ್ಷ್ಮಣನು ಎತ್ತಿ ಹಿಡಿದ. ಹಿಂಬದಿಯಲ್ಲಿ ನಿಂತುಕೊಂಡು. ಅಕ್ಕಪಕ್ಕದಲ್ಲಿ ಭರತ ಶತ್ರುಘ್ನರು ನಿಂತು ಶ್ರೀರಾಮನಿಗೆ ಚಮರ ಬೀಸಿದರು. ವಿಭೀಷಣನು ಕನ್ನಡಿಯನ್ನು ಹಿಡಿದ. ಸುಗ್ರೀವ ಪೂರ್ಣ ಕಲಶವನ್ನು ತಲೆಯ ಮೇಲೆ ಹೊತ್ತು ನಿಂತ. ಜಾಂಬವಂತನು ರಾಮನಿಗೆ ಭಕ್ತಿಯಿಂದ ಪುಷ್ಪಮಾಲೆಯನ್ನು ಅರ್ಪಿಸಿದ. ಅಂಗದನು ರಾಮನ ತಾಂಬೂಲ ಕರಂಡಕವನ್ನು ಕೈಯಲ್ಲಿ ಹಿಡಿದುಕೊಂಡ. ಹನುಮಂತ ತಲೆಯ ಮೇಲೆ ದೀಪ ಕುಂಡವನ್ನು ಹೊತ್ತು ನಿಂತ. ಸುಷೇಣ ಧ್ವಜವನ್ನು ಎತ್ತಿದ.

ಶ್ರೀರಾಮನು ತನ್ನ ತಂದೆಗೆ ಬೇಕಾದ ಹಾಗೂ ತನ್ನ ಪೂರ್ಣವಿಶ್ವಾಸಕ್ಕೆ ಪಾತ್ರರಾದ ಸೃಷ್ಟಿ, ಜಯಂತ, ವಿಜಯ, ಸೌರಾಷ್ಟ್ರ, ರಾಷ್ಟ್ರವರ್ಧನ, ಅಕೋಪ, ಧರ್ಮಪಾಲ ಎಂಬ ಎಂಟು ಜನ ಚತುರ ಮಂತ್ರಿಗಳನ್ನು ತನ್ನ ಅಷ್ಟಪ್ರಧಾನರನ್ನಾಗಿ ನೇಮಿಸಿದ. ದಿಗ್ದೇಶಗಳಿಂದ ಆಗಮಿಸಿದ ಅನೇಕ ಪೌರರೂ ಪೌರಶ್ರೇಷ್ಠರೂ, ಜಾನಪದ ಜನೇಶ್ವರರೂ, ವೀರವರೇಣ್ಯರೂ, ರಾಜ ಮಹಾರಾಜರೂ ಶ್ರೀರಾಮನ ಪಾದಮೂಲದಲ್ಲಿ ಹೇರಳವಾಗಿ ಕಪ್ಪಕಾಣಿಕೆಗಳನ್ನು ತಂದು ಒಪ್ಪಿಸಿ ತಾವೆಲ್ಲರೂ ರಾಮನ ಆಜ್ಞಾಪಾಲಕರು ಎಂದು ಹೇಳಿಕೊಂಡರು. ವೈಕುಂಠಲೋಕದಲ್ಲಿ ಲಕ್ಷ್ಮೀದೇವಿಯೊಂದಿಗೆ ನಾರಾಯಣನು ಶೋಭಿಸುವಂತೆ ಶ್ರೀರಾಮನು ಅಯೋಧ್ಯೆಯ ಸಿಂಹಾಸನದಲ್ಲಿ ಸೀತಾದೇವಿಯೊಂದಿಗೆ ಅಪೂರ್ವಕಾಂತಿಯಿಂದ ಶೋಭಿಸಿದ. ವಶಿಷ್ಠಾದಿ ಮಹರ್ಷಿಗಳಿಂದ ಪಟ್ಟಾಭಿಷಿಕ್ತನಾಗಿ ಸೂರ್ಯಕುಲದ ಸಿಂಹಾಸನದ ಮೇಲೆ

ಸತೀಮಣಿ ಸೀತೆಯೊಂದಿಗೆ ಮಂಡಿತನಾದ ಪೀತಾಂಬರಧಾರಿ ಶ್ರೀರಾಮನನ್ನು ಕಂಡು ವಿಮಾನಾರೂಢರಾಗಿ ಬಂದ ಎಲ್ಲ ದೇವಾಧಿದೇವತೆಗಳೂ ಹೂಮಳೆಯನ್ನು ಕರೆದು ಶ್ರೀರಾಮನ ಹೆಸರಿನಿಂದ ಜಯಘೋಷವನ್ನು ಮಾಡಿದರು. ಗಂಧರ್ವರು ಗಾನಗೈದರು. ಅಪ್ಸರೆಯರು ನರ್ತಿಸಿದರು. ಸಾಕ್ಷಾತ್ ಲಕ್ಷ್ಮೀದೇವಿಯ ಸ್ವರೂಪತಳಾದ ಸೀತೆಯೊಂದಿಗೆ ಸಿಂಹಾಸನದ ಮೇಲೆ ಆಸೀನನಾದ ರಾಮರೂಪಿ ಶ್ರೀ ಮಹಾವಿಷ್ಣುವನ್ನು ನೋಡಿ ಆನಂದ ಭರಿತರಾಗಿ ಮಹಾದೇವರು ಬದ್ಧಾಂಜಲಿಪುಟರಾಗಿ ಗದ್ಗದಕಂಠದಿಂದ ಶ್ರೀರಾಮನನ್ನು ಸ್ತೋತ್ರ ಮಾಡಿದರು.

**ಮಹಾದೇವ:-**

**ಜಗನ್ಮಾತಾ ಪಿತೃಭ್ಯಾಂ ಚ ಜನನ್ಯೈ ರಾಘವಾಯ ಚ ।**
**ನಮೋ ವಿಷ್ಣುಸ್ವರೂಪಾಯ ಸರ್ವರೂಪ ನಮೋ ನಮಃ ॥**
**ನಮೋ ಬ್ರಹ್ಮೇಂದ್ರ ಪೂಜ್ಯಾಯ ಶಂಕರಾಭಯದಾಯ ಚ ।**

ಜಗತ್ತಿನ ತಾಯಿತಂದೆಯಾದ ರಾಮಸೀತೆಯರಿಗೆ ನಮಸ್ಕಾರ. ಬ್ರಹ್ಮ ಹಾಗೂ ದೇವೇಂದ್ರರಿಂದ ಪೂಜಿತನಾದ ಮತ್ತು ಮಹಾದೇವರಿಗೆ ಅಭಯದಾನ ಮಾಡಿದ ಶ್ರೀರಾಮನಿಗೆ ನಮಸ್ಕಾರ.

**ಆವಾಂ ರಾಮ ಜಗತ್‌ಪೂಜ್ಯೌ ಸದಾ ಯುವಂ ।**
**ತ್ವನ್ನಾಮ ಜಾಪಿನೀ ಗೌರೀ ತ್ವನ್ಮಂತ್ರಜಪವಾನ್ ಅಹಂ ॥**

ರಾಮನೇ, ನಾನು ಹಾಗೂ ನನ್ನ ಪತಿಯಾದ ಪಾರ್ವತಿ ಇಬ್ಬರೂ ಜಗತ್‌ಪೂಜ್ಯರು ಆಗಿರುತ್ತೇವೆ. ನಮಗೆ ಪೂಜ್ಯರೆಂದರೆ ನೀವಿಬ್ಬರು. ನಿನ್ನ ನಾಮವನ್ನು ಪಾರ್ವತಿಯು ಜಪಿಸುತ್ತಲೇ ಇರುತ್ತಾಳೆ. ಹಗಲಿರುಳು. ಅದರಂತೆ ನಾನು ಕೂಡ ನಿನ್ನ ನಾಮವನ್ನು ಸರ್ವದಾ ಜಪಿಸುತ್ತೇನೆ.

**ಮೂರ್ಷೋಮಣಿಕರ್ಣ್ಯಾಂ ತು ಅರ್ಧೋದಕ ನಿವಾಸಿನಃ ।**
**ಅಹಂ ದಿಶಾಮಿ ತೇ ಮಂತ್ರಂ ತಾರಕಂ ಬ್ರಹ್ಮಾದಾಯಕಂ ॥**

ನನ್ನ ಕ್ಷೇತ್ರವಾದ ಕಾಶೀ ಪಟ್ಟಣದಲ್ಲಿ ಮಣಿಕರ್ಣಿಕಾ ತೀರ್ಥದಲ್ಲಿ ನಡುನೀರಿನಲ್ಲಿ ಮರಣವನ್ನು ಹೊಂದಬಯಸುವ ಪ್ರಾಣಿಗೆ ನಾನು ನಿನ್ನ ರಾಮ ಎಂಬ ನಾಮರೂಪವಾದ ತಾರಕ ಮಂತ್ರವನ್ನು ಬ್ರಹ್ಮಪ್ರಾಪ್ತಿಗಾಗಿ ಉಪದೇಶಿಸುತ್ತೇನೆ.

**ಅತಸ್ತ್ವಂ ಜಾನಕೀನಾಥ ಪರಂಬ್ರಹ್ಮಾऽಸಿ ನಿಶ್ಚಿತಂ ।**
**ತ್ವನ್ಮಾಯಾ ಮೋಹಿತಾಃ ಸರ್ವೇ ನ ತ್ವಾಂ ಜಾನಂತಿ ತತ್ತ್ವತಃ ॥**

ಆದುದರಿಂದ ಸೀತಾದೇವಿಯ ಪತಿಯಾದ ರಾಮಚಂದ್ರ ನೀನೇ ಆ ಪರಬ್ರಹ್ಮ ಆಗಿರುತ್ತಿ. ಇದು ನಿಶ್ಚಿತ. ನಿನ್ನ ಮಾಯೆಯಿಂದ ಮೋಹಿತರಾಗಿ ಉಳಿದ ಜನರು ನಿನ್ನನ್ನು ಪಾರಮಾರ್ಥಿಕವಾಗಿ ತಿಳಿಯುವದಿಲ್ಲ.

**ಮಹಾದೇವ:-** ಹೀಗೆ ಶ್ರೀರಾಮಚಂದ್ರನು ಎಲ್ಲ ದೇವತೆಗಳಿಗೂ ತನ್ನ ದಿವ್ಯರೂಪದ ದರ್ಶನ ಮಾಡಿಸಿದ. ಭಗವಂತನ ಆ ವಿಶ್ವರೂಪವನ್ನು ಕಾಣಲು ಕೂಡ ದೇವತೆಗಳಿಗೆ ಸಾಧ್ಯವಾಗಲಿಲ್ಲ. ಆಗ ಅವರು ಭೀತರಾಗಿ ಆ ಭಗವಂತನಿಗೆ ಭಕ್ತಿಯಿಂದ

ನಮಸ್ಕಾರ ಮಾಡಿದರು. ಆಗ ಶ್ರೀರಾಮಚಂದ್ರನು ಮತ್ತೆ ತನ್ನ ಮನುಷ್ಯರೂಪವನ್ನು ತೆಗೆದುಕೊಂಡು ಆ ದೇವತೆಗಳನ್ನೆಲ್ಲ ಪ್ರಸನ್ನಮುಖದಿಂದ ಅನುಗ್ರಹಿಸಿದ. ಶ್ರೀರಾಮನಿಂದ ಆಶೀರ್ವಚನವನ್ನು ಪಡೆದು ಬ್ರಹ್ಮ ರುದ್ರ ಇಂದ್ರ ಮೊದಲಾದ ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ರಾಮನ ಪಟ್ಟಾಭಿಷೇಕಕ್ಕಾಗಿ ಇಂದ್ರ-ಚಂದ್ರ, ರುದ್ರಾದಿ ದೇವತೆಗಳ ಆಗಮನ; ಮಹಾದೇವರಿಂದ ಸೀತಾರಾಮ ಸ್ತೋತ್ರ ಎಂಬ ಎರಡುನೂರ ಇಪ್ಪತ್ತೈದನೇಯ ಅಧ್ಯಾಯ ಮುಗಿದುದು*



## ರಾಮಚರಿತ್ರೆಯ ಉತ್ತರಾರ್ಧ

## ಅಧ್ಯಾಯ - ೨೨೬

**ಮಹಾದೇವ:-** ಅನಂತರ ಶ್ರೀ ರಾಮನು ಸೀತಾದೇವಿಯೊಂದಿಗೆ ಒಂದು ಸಾವಿರ ವರ್ಷ ನಿರಾತಂಕವಾಗಿ ರಾಜ್ಯವನ್ನು ಆಳಿದ. ರಾಮನ ಅಂತಃಪುರದ ಎಲ್ಲ ಜನರೂ ಅದರಂತೆ ಗ್ರಾಮಾಂತರ ವಾಸಿಗಳಾದ ಕೆಲವು ಪುರುಷರೂ ಸೀತೆಯ ಬಗ್ಗೆ ಆಡಿಕೊಳ್ಳ ತೊಡಗಿದರು. ರಾವಣನ ಮನೆಯಲ್ಲಿ ಸೀತೆ ಅನಿವಾರ್ಯವಾಗಿ ಕೆಲವು ದಿನ ಇದ್ದುದು ಅವರ ನಿಂದೆಗೆ ವಿಷಯವಾಗಿದ್ದಿತು. ಇಷ್ಟು ದಿನ ರಾಕ್ಷಸರಾಜನ ಮನೆಯಲ್ಲಿ ಇದ್ದ ಸೀತೆ ಶುದ್ಧಳಾಗಿ ಉಳಿಯುವುದು ಹೇಗೆ ಸಾಧ್ಯ ಎಂದು ಅವರು ಸೀತೆಯ ಮೇಲೆ ಆಕ್ಷೇಪಾಸ್ತ್ರವನ್ನು ಎಸೆಯುತ್ತಿದ್ದರು. ಇದು ಶ್ರೀರಾಮನ ಕಿವಿಯವರೆಗೂ ತಲುಪಿತು. ಲೋಕಾಪವಾದಕ್ಕೆ ಹೆದರಿದ ಶ್ರೀರಾಮ. ರಾಜಪತ್ನಿಯು ವಿವಾದಾತೀತಳು ಆಗಿ ಇರಬೇಕು ಎಂಬ ನೀತಿಯನ್ನು ಲೋಕಕ್ಕೆಲ್ಲ ತೋರಿಸಲಿಕ್ಕಾಗಿ ಸೀತೆಯನ್ನು ತೊರೆಯುವ ಸಂಕಲ್ಪ ಮಾಡಿದ. ತುಂಬು ಗರ್ಭಿಣಿ ಆ ಜಾನಕೀದೇವಿ. ಆದರೂ ರಾಮ ಜನತೆಯ ಮಾತಿಗೆ ಬಾಗುವುದು ರಾಜರ ಕರ್ತವ್ಯ ಎಂದು ತೋರಿಸುವುದಕ್ಕಾಗಿ ಸೀತೆಯನ್ನು ಬಿಟ್ಟ. ಗಂಗಾ ತೀರದಲ್ಲಿ ಇದ್ದ ವಾಲ್ಮೀಕಿ ಮಹರ್ಷಿಯ ಆಶ್ರಮದಲ್ಲಿ ಮುನಿಗಳ ಮಧ್ಯದಲ್ಲಿ ಸೀತೆಯನ್ನು ಇಳಿಸಿ ಬಂದ.

ವಾಲ್ಮೀಕಿಯ ಆಶ್ರಮದ ಸುತ್ತಲೂ ಆನೇಕ ಮುನಿಗಳ ಆಶ್ರಮಗಳು ತಲೆ ಎತ್ತಿದ್ದವು. ಆ ಎಲ್ಲ ಮುನಿಗಳ ಮಡದಿಯರು ರಾಮನ ಸೀತಾ ಪರಿತ್ಯಾಗ ತಮ್ಮ ಸೌಭಾಗ್ಯ ಎಂದುಕೊಂಡರು. ಸೀತಾದೇವಿಯ ಸೇವೆ ಮಾಡುವ ಭಾಗ್ಯ ತಮಗೆ ದೊರತದ್ದಕ್ಕಾಗಿ ಅವರೆಲ್ಲರೂ ಹಿಗ್ಗಿ ಹೂವಾದರು. ವಾಲ್ಮೀಕಿ ಮಹರ್ಷಿಯ ಕರುಣೆಯ ರಕ್ಷೆಯಲ್ಲಿ ಇದ್ದ ಸೀತೆಯನ್ನು ಎಲ್ಲ ಮುನಿಮಾನಿನಿಯರು ಹರ್ಷ ಹಾಗೂ ಹೆಮ್ಮೆಯಿಂದ ಪೂಜಿಸುತ್ತಿದ್ದರು. ಮಹಾರಾಣಿ ಸೀತೆಯು ಆ ಮುನಿಗಳ ಆಶ್ರಮದಲ್ಲಿಯೇ ಕುಶ ಲವ ಎಂಬ ಇಬ್ಬರು ಅವಳಿ ಜವಳಿ ಮಕ್ಕಳನ್ನು ಹೆತ್ತಳು. ವಾಲ್ಮೀಕಿ ಮುನಿಗಳು ಆ ಇಬ್ಬರು ರಾಜಕುಮಾರರಿಗೆ ಕ್ಷತ್ರಿಯೋಚಿತವಾದ ಸಂಸ್ಕಾರವನ್ನು ಮಾಡಿದರು.

ಇತ್ತ ರಾಮನು ತನ್ನ ಮೂವರೂ ಸೋದರರೊಂದಿಗೆ ಧರ್ಮದಿಂದ ಭೂಮಿಯನ್ನು ಪಾಲಿಸಿದ. ಸೀತೆಯನ್ನು ಕಾಡಿಗೆ ಅಟ್ಟಿದ ಬಳಿಕ ರಾಮ ಎಲ್ಲ ಭೋಗಸುಖಗಳನ್ನು ತೊರೆದ. ಮನೆಯಲ್ಲಿ ಇದ್ದರೂ ಬೈರಾಗಿ ಜೀವನವನ್ನೇ ನಡೆಸಿದ. ಯಾವಾಗಲೂ ಪೂಜೆ,

ಪ್ರಜಾಸೇವೆ, ಪ್ರಜಾಹಿತಚಿಂತನ ಇದರಲ್ಲಿಯೇ ಸಮಯವನ್ನು ನೂಕುತ್ತಲಿದ್ದ. ಬ್ರಹ್ಮಚರ್ಯ, ಶಮ, ದಮ, ಯಮ, ನಿಯಮ, ಯಜ್ಞ, ಯಾಗ, ತಪಸ್ಸು, ದಾನ, ಧರ್ಮ, ಕರ್ಮ, ಮುಂತಾದವುಗಳಿಂದ ಮಾನವರು ಎಂಥ ಗೋಳು ಗಂಡಾಂತರಗಳ ಆಪತ್ಕಾಲದಲ್ಲಿಯೂ ಮನದ ಸ್ವಾಸ್ಥ್ಯವನ್ನು ಕಳೆದು ಕೊಳ್ಳದೇ ನ್ಯಾಯನಿಷ್ಠಾರಗಿ ಹೇಗೆ ಬಾಳಬೇಕೆಂಬುದನ್ನು ತನ್ನ ದೃಷ್ಟಾಂತದಿಂದಲೇ ಜಗತ್ತಿಗೆ ತೋರಿಸಿಕೊಟ್ಟ.

ಶತ್ರುಘ್ನನು ಲವಣಾಸುರನನ್ನು ಕೊಂದು ಮಥುರಾಮಂಡಲವನ್ನು ತನ್ನ ಇಬ್ಬರು ಮಕ್ಕಳಿಂದ ಕೂಡಿಕೊಂಡು ಪಾಲನೆ ಮಾಡಿದ. ಭರತ ಸಮುದ್ರದ ಎರಡೂ ಬದಿಗಳಲ್ಲಿ ಇರುವ ಗಂಧರ್ವರನ್ನು ಸಂಹರಿಸಿ ಮಹಾಬಲಿಷ್ಠರಾದ ತನ್ನ ಇಬ್ಬರು ಮಕ್ಕಳನ್ನು ಆ ಸಿಂಧು ದೇಶ ರಕ್ಷಣೆಗಾಗಿ ಅಲ್ಲಿಯೇ ಇರಿಸಿದ. ಪಶ್ಚಿಮದ ಮದ್ರದೇಶದಲ್ಲಿ ಇರುವ ಮದ್ರ ಎಂಬ ರಾಕ್ಷಸರನ್ನು ಯುದ್ಧದಲ್ಲಿ ಗೆದ್ದು ಸಂಹರಿಸಿ ವೀರರಾದ ತನ್ನ ಮಕ್ಕಳನ್ನು ಮದ್ರದೇಶದ ಶಾಸನ ಮಾಡಲಿಕ್ಕಾಗಿ ನಿಯಮಿಸಿದ.

ಬಳಿಕ ಆ ಕಾಲದಲ್ಲಿ ಮೃತ್ಯುವನ್ನು ಅಪ್ಪಿದ ಬ್ರಾಹ್ಮಣ ಬಾಲಕನನ್ನು ಶ್ರೀರಾಮ ಬದುಕಿಸಿದ. ಅನಂತರ ನೈಮಿಷಾರಣ್ಯದಲ್ಲಿ ಇರುವ ಗೌತಮೀನದಿಯ ತೀರದಲ್ಲಿ ಅಶ್ವಮೇಧ ಯಜ್ಞವನ್ನು ಆಚರಿಸಿದ. ಅಶ್ವಮೇಧಯಜ್ಞ ಹೆಂಡತಿಯಿಲ್ಲದೆ ಆಗುವುದಿಲ್ಲ. ಸೀತೆಯನ್ನು ಮನೆಬಿಟ್ಟು ಹೊರಗೆ ಹಾಕಿದ ಬಳಿಕ ರಾಮ ಬೇರೆ ಮದುವೆ ಮಾಡಿಕೊಳ್ಳಲಿಲ್ಲ. ಆದರೆ ಸೀತೆಯ ಒಂದು ಬಂಗಾರದ ಗೊಂಬೆಯನ್ನು ಮಾಡಿ ತನ್ನ ಪಕ್ಕದಲ್ಲಿ ಕೂಡಿಸಿಕೊಂಡು ಅಶ್ವಮೇಧ ಯಾಗವನ್ನು ಸಾಗಿಸಿದ. ಅನಂತರ ಆ ಸೀತೆಯ ಬೊಂಬೆಯೊಂದಿಗೆ ವಾಜಪೇಯ, ಅಗ್ನಿಷ್ಟೋಮ, ವಿಶ್ವಜಿತ, ಗೋಮೇಧ, ವಿಷ್ಣುಯಾಗ, ಮೊದಲಾದ ಅನೇಕ ಯಜ್ಞಗಳನ್ನೂ ಅವುಗಳ ನಂತರ ಹತ್ತು ಸಾವಿರ ಅಶ್ವಮೇಧಗಳನ್ನೂ ವಿಧಿಪೂರ್ವಕವಾಗಿ ನೆರವೇರಿಸಿದ. ಪ್ರತಿಯೊಂದು ಯಜ್ಞದಲ್ಲಿಯೂ ಪ್ರಚಂಡ ಪ್ರಮಾಣದಲ್ಲಿ ಅನ್ನದಾನ ದ್ರವ್ಯದಾನ ಭೂದಾನ, ಗೋದಾನ, ದಕ್ಷಿಣಾದಾನ ಮೊದಲಾದವುಗಳು ಅವಿಚ್ಛಿನ್ನವಾಗಿ ನಡೆಯುತ್ತಲಿದ್ದವು.

ಈ ಸಂದರ್ಭದಲ್ಲಿ ವಾಲ್ಮೀಕಿ ಋಷಿಗಳು ಬಂದು ಸೀತೆಯನ್ನು ತಮ್ಮೊಡನೆ ಕರ ತಂದು ರಾಮನೊಡನೆ ನಿಲ್ಲಿಸಿ ಹೇಳಿದರು.

**ವಾಲ್ಮೀಕಿ:-** ರಾಮ, ಈ ಸೀತೆ ನಿರಪರಾಧಿನಿ. ಅವಳಲ್ಲಿ ಯಾವ ಪಾಪವೂ ಇಲ್ಲ. ಸೂರ್ಯನ ಬೆಳಕಿನಲ್ಲಿ ಧೂಳಿಯಿಲ್ಲ. ಇವಳನ್ನು ತ್ಯಾಗ ಮಾಡುವುದು ನಿನಗೆ ಸರ್ವಥಾ ಯುಕ್ತವಲ್ಲ. ನಿನ್ನನ್ನೇ ನಂಬಿ ನಿನ್ನನ್ನೇ ನೆಚ್ಚಿ, ನೀನೇ ಸರ್ವಸ್ವವೆಂದು ತಿಳಿದ ಈ ಸಾಧ್ವೀ ಮಣಿಯನ್ನು ತ್ಯಜಿಸುವುದು ನಿನಗೆ ಸರ್ವಥಾ ಉಚಿತವಲ್ಲ. ಇವಳನ್ನು ಇಂಥ ಭಾಗ್ಯಲಕ್ಷ್ಮಿಯನ್ನು ನೀನು ಬಿಟ್ಟಿದ್ದಾದರೂ ಏಕೆ?

**ರಾಮ:-** ಬ್ರಾಹ್ಮಣೋತ್ತಮರೇ, ಸೀತೆಯು ನಿರ್ದೋಷಿ. ಪಾಪರಹಿತಳು ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ಮೇಲೆ ನೀವು ಕೂಡ ಸೀತೆಯ ಪರಿಶುದ್ಧಿಯನ್ನು ಇಲ್ಲಿ ಸಾರಿದಿರಿ. ಹಿಂದೆ ಈ ಸೀತೆಯನ್ನು ನಾನು ದಂಡಕಾರಣ್ಯದಲ್ಲಿದ್ದಾಗ ರಾವಣ ಕದ್ದು ಒಯ್ದ. ಆಶ್ರಮದಲ್ಲಿ ಯಾರೂ ಇಲ್ಲದಾಗ ಕಳ್ಳರಂತೆ ಪ್ರವೇಶಿಸಿ ಲಂಕಾಪಟ್ಟಣಕ್ಕೆ ಹೊತ್ತುಕೊಂಡು ಒಯ್ದ. ಆ ರಾವಣನನ್ನು ನಾನು ಕೊಂದು ಅಗ್ನಿ ಮುಖಾಂತರ ಹೊರಬಿದ್ದು ಬಂದ

ನಮಸ್ಕಾರ ಮಾಡಿದರು. ಆಗ ಶ್ರೀರಾಮಚಂದ್ರನು ಮತ್ತೆ ತನ್ನ ಮನುಷ್ಯರೂಪವನ್ನು ತೆಗೆದುಕೊಂಡು ಆ ದೇವತೆಗಳನ್ನೆಲ್ಲ ಪ್ರಸನ್ನಮುಖದಿಂದ ಅನುಗ್ರಹಿಸಿದ. ಶ್ರೀರಾಮನಿಂದ ಆಶೀರ್ವಚನವನ್ನು ಪಡೆದು ಬ್ರಹ್ಮ ರುದ್ರ ಇಂದ್ರ ಮೊದಲಾದ ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ರಾಮನ ಪಟ್ಟಾಭಿಷೇಕಕ್ಕಾಗಿ ಇಂದ್ರ-ಚಂದ್ರ, ರುದ್ರಾದಿ ದೇವತೆಗಳ ಆಗಮನ; ಮಹಾದೇವರಿಂದ ಸೀತಾರಾಮ ಸ್ತೋತ್ರ ಎಂಬ ಎರಡುನೂರ ಇಪ್ಪತ್ತೈದನೇಯ ಅಧ್ಯಾಯ ಮುಗಿದುದು*



## ರಾಮಚರಿತ್ರೆಯ ಉತ್ತರಾರ್ಧ — ಅಧ್ಯಾಯ - ೨೨೬

**ಮಹಾದೇವ:-** ಅನಂತರ ಶ್ರೀ ರಾಮನು ಸೀತಾದೇವಿಯೊಂದಿಗೆ ಒಂದು ಸಾವಿರ ವರ್ಷ ನಿರಾತಂಕವಾಗಿ ರಾಜ್ಯವನ್ನು ಆಳಿದ. ರಾಮನ ಅಂತಃಪುರದ ಎಲ್ಲ ಜನರೂ ಅದರಂತೆ ಗ್ರಾಮಾಂತರ ವಾಸಿಗಳಾದ ಕೆಲವು ಪುರುಷರೂ ಸೀತೆಯ ಬಗ್ಗೆ ಆಡಿಕೊಳ್ಳ ತೊಡಗಿದರು. ರಾವಣನ ಮನೆಯಲ್ಲಿ ಸೀತೆ ಅನಿವಾರ್ಯವಾಗಿ ಕೆಲವು ದಿನ ಇದ್ದುದು ಅವರ ನಿಂದೆಗೆ ವಿಷಯವಾಗಿದ್ದಿತು. ಇಷ್ಟು ದಿನ ರಾಕ್ಷಸರಾಜನ ಮನೆಯಲ್ಲಿ ಇದ್ದ ಸೀತೆ ಶುದ್ಧಳಾಗಿ ಉಳಿಯುವುದು ಹೇಗೆ ಸಾಧ್ಯ ಎಂದು ಅವರು ಸೀತೆಯ ಮೇಲೆ ಆಕ್ಷೇಪಾಸ್ತ್ರವನ್ನು ಎಸೆಯುತ್ತಿದ್ದರು. ಇದು ಶ್ರೀರಾಮನ ಕಿವಿಯವರೆಗೂ ತಲುಪಿತು. ಲೋಕಾಪವಾದಕ್ಕೆ ಹೆದರಿದ ಶ್ರೀರಾಮ. ರಾಜಪತ್ನಿಯು ವಿವಾದಾತೀತಳು ಆಗಿ ಇರಬೇಕು ಎಂಬ ನೀತಿಯನ್ನು ಲೋಕಕ್ಕೆಲ್ಲ ತೋರಿಸಲಿಕ್ಕಾಗಿ ಸೀತೆಯನ್ನು ತೊರೆಯುವ ಸಂಕಲ್ಪ ಮಾಡಿದ. ತುಂಬು ಗರ್ಭಿಣಿ ಆ ಜಾನಕೀದೇವಿ. ಆದರೂ ರಾಮ ಜನತೆಯ ಮಾತಿಗೆ ಬಾಗುವುದು ರಾಜರ ಕರ್ತವ್ಯ ಎಂದು ತೋರಿಸುವುದಕ್ಕಾಗಿ ಸೀತೆಯನ್ನು ಬಿಟ್ಟ. ಗಂಗಾ ತೀರದಲ್ಲಿ ಇದ್ದ ವಾಲ್ಮೀಕಿ ಮಹರ್ಷಿಯ ಆಶ್ರಮದಲ್ಲಿ ಮುನಿಗಳ ಮಧ್ಯದಲ್ಲಿ ಸೀತೆಯನ್ನು ಇಳಿಸಿ ಬಂದ.

ವಾಲ್ಮೀಕಿಯ ಆಶ್ರಮದ ಸುತ್ತಲೂ ಅನೇಕ ಮುನಿಗಳ ಆಶ್ರಮಗಳು ತಲೆ ಎತ್ತಿದ್ದವು. ಆ ಎಲ್ಲ ಮುನಿಗಳ ಮಡದಿಯರು ರಾಮನ ಸೀತಾ ಪರಿತ್ಯಾಗ ತಮ್ಮ ಸೌಭಾಗ್ಯ ಎಂದುಕೊಂಡರು. ಸೀತಾದೇವಿಯ ಸೇವೆ ಮಾಡುವ ಭಾಗ್ಯ ತಮಗೆ ದೊರತದ್ದಕ್ಕಾಗಿ ಅವರೆಲ್ಲರೂ ಹಿಗ್ಗಿ ಹೂವಾದರು. ವಾಲ್ಮೀಕಿ ಮಹರ್ಷಿಯ ಕರುಣೆಯ ರಕ್ಷೆಯಲ್ಲಿ ಇದ್ದ ಸೀತೆಯನ್ನು ಎಲ್ಲ ಮುನಿಮಾನಿನಿಯರು ಹರ್ಷ ಹಾಗೂ ಹೆಮ್ಮೆಯಿಂದ ಪೂಜಿಸುತ್ತಿದ್ದರು. ಮಹಾರಾಣಿ ಸೀತೆಯು ಆ ಮುನಿಗಳ ಆಶ್ರಮದಲ್ಲಿಯೇ ಕುಶ ಲವ ಎಂಬ ಇಬ್ಬರು ಅವಳಿ ಜವಳಿ ಮಕ್ಕಳನ್ನು ಹೆತ್ತಳು. ವಾಲ್ಮೀಕಿ ಮುನಿಗಳು ಆ ಇಬ್ಬರು ರಾಜಕುಮಾರರಿಗೆ ಕ್ಷತ್ರಿಯೋಚಿತವಾದ ಸಂಸ್ಕಾರವನ್ನು ಮಾಡಿದರು.

ಇತ್ತ ರಾಮನು ತನ್ನ ಮೂವರೂ ಸೋದರರೊಂದಿಗೆ ಧರ್ಮದಿಂದ ಭೂಮಿಯನ್ನು ಪಾಲಿಸಿದ. ಸೀತೆಯನ್ನು ಕಾಡಿಗೆ ಅಟ್ಟಿದ ಬಳಿಕ ರಾಮ ಎಲ್ಲ ಭೋಗಸುಖಗಳನ್ನು ತೊರೆದ. ಮನೆಯಲ್ಲಿ ಇದ್ದರೂ ಬೈರಾಗಿ ಜೀವನವನ್ನೇ ನಡೆಸಿದ. ಯಾವಾಗಲೂ ಪೂಜೆ,

ಪ್ರಜಾಸೇವೆ, ಪ್ರಜಾಹಿತಚಿಂತನ ಇದರಲ್ಲಿಯೇ ಸಮಯವನ್ನು ನೂಕುತ್ತಲಿದ್ದ. ಬ್ರಹ್ಮಚರ್ಯ, ಶಮ, ದಮ, ಯಮ, ನಿಯಮ, ಯಜ್ಞ, ಯಾಗ, ತಪಸ್ಸು, ದಾನ, ಧರ್ಮ, ಕರ್ಮ, ಮುಂತಾದವುಗಳಿಂದ ಮಾನವರು ಎಂಥ ಗೋಳು ಗಂಡಾಂತರಗಳ ಆಪತ್ಕಾಲದಲ್ಲಿಯೂ ಮನದ ಸ್ವಾಸ್ಥ್ಯವನ್ನು ಕಳೆದು ಕೊಳ್ಳದೇ ನ್ಯಾಯನಿಷ್ಠಾರಗಿ ಹೇಗೆ ಬಾಳಬೇಕೆಂಬುದನ್ನು ತನ್ನ ದೃಷ್ಟಾಂತದಿಂದಲೇ ಜಗತ್ತಿಗೆ ತೋರಿಸಿಕೊಟ್ಟ.

ಶತ್ರುಘ್ನನು ಲವಣಾಸುರನನ್ನು ಕೊಂದು ಮಥುರಾಮಂಡಲವನ್ನು ತನ್ನ ಇಬ್ಬರು ಮಕ್ಕಳಿಂದ ಕೂಡಿಕೊಂಡು ಪಾಲನೆ ಮಾಡಿದ. ಭರತ ಸಮುದ್ರದ ಎರಡೂ ಬದಿಗಳಲ್ಲಿ ಇರುವ ಗಂಧರ್ವರನ್ನು ಸಂಹರಿಸಿ ಮಹಾಬಲಿಷ್ಠರಾದ ತನ್ನ ಇಬ್ಬರು ಮಕ್ಕಳನ್ನು ಆ ಸಿಂಧು ದೇಶ ರಕ್ಷಣೆಗಾಗಿ ಅಲ್ಲಿಯೇ ಇರಿಸಿದ. ಪಶ್ಚಿಮದ ಮದ್ರದೇಶದಲ್ಲಿ ಇರುವ ಮದ್ರ ಎಂಬ ರಾಕ್ಷಸರನ್ನು ಯುದ್ಧದಲ್ಲಿ ಗೆದ್ದು ಸಂಹರಿಸಿ ವೀರರಾದ ತನ್ನ ಮಕ್ಕಳನ್ನು ಮದ್ರದೇಶದ ಶಾಸನ ಮಾಡಲಿಕ್ಕಾಗಿ ನಿಯಮಿಸಿದ.

ಬಳಿಕ ಆ ಕಾಲದಲ್ಲಿ ಮೃತ್ಯುವನ್ನು ಅಪ್ಪಿದ ಬ್ರಾಹ್ಮಣ ಬಾಲಕನನ್ನು ಶ್ರೀರಾಮ ಬದುಕಿಸಿದ. ಅನಂತರ ನೈಮಿಷಾರಣ್ಯದಲ್ಲಿ ಇರುವ ಗೌತಮೀನದಿಯ ತೀರದಲ್ಲಿ ಅಶ್ವಮೇಧ ಯಜ್ಞವನ್ನು ಆಚರಿಸಿದ. ಅಶ್ವಮೇಧಯಜ್ಞ ಹೆಂಡತಿಯಿಲ್ಲದೆ ಆಗುವುದಿಲ್ಲ. ಸೀತೆಯನ್ನು ಮನೆಬಿಟ್ಟು ಹೊರಗೆ ಹಾಕಿದ ಬಳಿಕ ರಾಮ ಬೇರೆ ಮದುವೆ ಮಾಡಿಕೊಳ್ಳಲಿಲ್ಲ. ಆದರೆ ಸೀತೆಯ ಒಂದು ಬಂಗಾರದ ಗೊಂಬೆಯನ್ನು ಮಾಡಿ ತನ್ನ ಪಕ್ಕದಲ್ಲಿ ಕೂಡಿಸಿಕೊಂಡು ಅಶ್ವಮೇಧ ಯಾಗವನ್ನು ಸಾಗಿಸಿದ. ಅನಂತರ ಆ ಸೀತೆಯ ಬೊಂಬೆಯೊಂದಿಗೆ ವಾಜಪೇಯ, ಅಗ್ನಿಷ್ಟೋಮ, ವಿಶ್ವಜಿತ, ಗೋಮೇಧ, ವಿಷ್ಣುಯಾಗ, ಮೊದಲಾದ ಅನೇಕ ಯಜ್ಞಗಳನ್ನೂ ಅವುಗಳ ನಂತರ ಹತ್ತು ಸಾವಿರ ಅಶ್ವಮೇಧಗಳನ್ನೂ ವಿಧಿಪೂರ್ವಕವಾಗಿ ನೆರವೇರಿಸಿದ. ಪ್ರತಿಯೊಂದು ಯಜ್ಞದಲ್ಲಿಯೂ ಪ್ರಚಂಡ ಪ್ರಮಾಣದಲ್ಲಿ ಅನ್ನದಾನ ದ್ರವ್ಯದಾನ ಭೂದಾನ, ಗೋದಾನ, ದಕ್ಷಿಣಾದಾನ ಮೊದಲಾದವುಗಳು ಅವಿಚ್ಛಿನ್ನವಾಗಿ ನಡೆಯುತ್ತಲಿದ್ದವು.

ಈ ಸಂದರ್ಭದಲ್ಲಿ ವಾಲ್ಮೀಕಿ ಋಷಿಗಳು ಬಂದು ಸೀತೆಯನ್ನು ತಮ್ಮೊಡನೆ ಕರ ತಂದು ರಾಮನೊಡನೆ ನಿಲ್ಲಿಸಿ ಹೇಳಿದರು.

**ವಾಲ್ಮೀಕಿ:-** ರಾಮ, ಈ ಸೀತೆ ನಿರಪರಾಧಿನಿ. ಅವಳಲ್ಲಿ ಯಾವ ಪಾಪವೂ ಇಲ್ಲ. ಸೂರ್ಯನ ಬೆಳಕಿನಲ್ಲಿ ಧೂಳಿಯಿಲ್ಲ. ಇವಳನ್ನು ತ್ಯಾಗ ಮಾಡುವುದು ನಿನಗೆ ಸರ್ವಥಾ ಯುಕ್ತವಲ್ಲ. ನಿನ್ನನ್ನೇ ನಂಬಿ ನಿನ್ನನ್ನೇ ನೆಚ್ಚಿ, ನೀನೇ ಸರ್ವಸ್ವವೆಂದು ತಿಳಿದ ಈ ಸಾಧ್ವೀ ಮಣಿಯನ್ನು ತ್ಯಜಿಸುವುದು ನಿನಗೆ ಸರ್ವಥಾ ಉಚಿತವಲ್ಲ. ಇವಳನ್ನು ಇಂಥ ಭಾಗ್ಯಲಕ್ಷ್ಮಿಯನ್ನು ನೀನು ಬಿಟ್ಟಿದ್ದಾದರೂ ಏಕೆ?

**ರಾಮ:-** ಬ್ರಾಹ್ಮಣೋತ್ತಮರೇ, ಸೀತೆಯು ನಿರ್ದೋಷಿ. ಪಾಪರಹಿತಳು ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ಮೇಲೆ ನೀವು ಕೂಡ ಸೀತೆಯ ಪರಿಶುದ್ಧಿಯನ್ನು ಇಲ್ಲಿ ಸಾರಿದಿರಿ. ಹಿಂದೆ ಈ ಸೀತೆಯನ್ನು ನಾನು ದಂಡಕಾರಣ್ಯದಲ್ಲಿದ್ದಾಗ ರಾವಣ ಕದ್ದು ಒಯ್ದ. ಆಶ್ರಮದಲ್ಲಿ ಯಾರೂ ಇಲ್ಲದಾಗ ಕಳ್ಳರಂತೆ ಪ್ರವೇಶಿಸಿ ಲಂಕಾಪಟ್ಟಣಕ್ಕೆ ಹೊತ್ತುಕೊಂಡು ಒಯ್ದ. ಆ ರಾವಣನನ್ನು ನಾನು ಕೊಂದು ಅಗ್ನಿ ಮುಖಾಂತರ ಹೊರಬಿದ್ದು ಬಂದ

ಶುದ್ಧಳಾದ ಸೀತೆಯನ್ನು ಕರೆದುಕೊಂಡು ಅಯೋಧ್ಯೆಗೆ ಬಂದಿದ್ದೆ. ಪವಿತ್ರಳಾದ ಆ ಸೀತೆಯ ಬಗ್ಗೆ ನಮ್ಮ ಅಯೋಧ್ಯಾನಾಗರಿಕರು ಹಾಗೂ ಹಳ್ಳಿಪಳ್ಳಿಗಳ ಜನರು ಆಕ್ಷೇಪಕಾರಕವಾದ ಅಪವಾದದ ನುಡಿಗಳನ್ನು ಆಡತೊಡಗಿದ್ದರಿಂದ ಅವಳನ್ನು ಪರಿತ್ಯಜಿಸಿದೆ. ಅವಳ ನಡೆನುಡಿ ಶೀಲ ಚಾರಿತ್ರ್ಯ ಎಲ್ಲವೂ ಶುದ್ಧ. ಸಂಶಯಾತೀತ. ಆದರೂ ಲೋಕ ಶಿಕ್ಷಣಕ್ಕಾಗಿ ನಾನು ಅವಳನ್ನು ನಿಮ್ಮ ಆಶ್ರಮದಲ್ಲಿ ತಂದು ಬಿಟ್ಟಿದ್ದೆ. ಈಗ ತಾವು ಅವಳನ್ನು ಇಲ್ಲಿಗೆ ಮರಳಿ ಕರೆತಂದಿದ್ದೀರಿ. ಅವಳ ಪಾವಿತ್ರ್ಯ ಹಾಗೂ ಶುದ್ಧಿಯನ್ನು ಜನರೆದುರು ಸಾರಿ ಹೇಳಿದ್ದೀರಿ. ನನ್ನನ್ನೇ ನಂಬಿದ ಆ ಸೀತೆಯು ಇಲ್ಲಿ ನೆರೆದ ಎಲ್ಲ ರಾಜರು ಹಾಗೂ ಋಷಿಗಳು ಎಲ್ಲ ಪ್ರಜಾಜನರು ಮೊದಲಾದ ಎಲ್ಲ ಜನರಿಗೂ ತನ್ನ ದೇಹಶುದ್ಧಿಯ ಬಗೆಗೆ ವಿಶ್ವಾಸವನ್ನು ಹುಟ್ಟಿಸಿ ತನ್ನ ಪಾವಿತ್ರ್ಯವನ್ನು ಎಲ್ಲರ ಎದುರು ಪ್ರಮಾಣಿಸಿ ಕೊಟ್ಟು ನನ್ನ ಬಳಿಗೆ ಬರಲಿ.

**ಮಹಾದೇವ:-** ರಾಮನು ಅಲ್ಲಿ ನೆರೆದ ಎಲ್ಲ ಮುನಿಮಹಾನುಭಾವರ ಹಾಗೂ ರಾಜಮಹಾರಾಜರ ಎದುರು ಹೀಗೆ ನುಡಿದದ್ದನ್ನು ಕೇಳಿ ಆಶ್ಚರ್ಯಕರವಾದ ರೀತಿಯಲ್ಲಿ ತನ್ನ ಸತೀತ್ವವನ್ನು ಪ್ರಮಾಣಿಸಿ ಕೊಟ್ಟಳು ಆ ಸೀತಾತಾಯಿ.

**ಸೀತಾ:-** ನಾನು ಶ್ರೀರಾಮನನ್ನು ಬಿಟ್ಟು ನನ್ನ ಮನಸ್ಸಿನಲ್ಲಿ ಎಂದೂ ಬೇರೆ ಯಾರನ್ನೂ ಚಿಂತಿಸಿಲ್ಲ. ಚಿಂತಿಸುವುದಿಲ್ಲ. ಈ ಮಾತು ನಿಜವಿದ್ದರೆ ಈಗಲೇ ಈ ಭೂಮಿ ತಾಯಿಯು ನನಗೆ ತನ್ನಲ್ಲಿ ಅವಕಾಶ ನೀಡಲಿ. ಮಾತು, ಕೃತಿ, ಮನಸ್ಸು ಈ ಮೂರರಿಂದ ನಾನು ಅತ್ಯಂತ ಭಕ್ತಿಯಿಂದ ಶ್ರೀರಾಮನ ಸೇವೆಯನ್ನು ಮಾಡಿದ್ದು ನಿಜವಿದ್ದರೆ ಈ ಭೂಮಿತಾಯಿಯು ತನ್ನ ಹೊಟ್ಟೆಯಲ್ಲಿ ನನಗೆ ಇಂಬನ್ನು ನೀಡಲಿ.

ರಾಮನ ಹೊರತು ನಾನು ಬೇರೆ ಯಾವ ಪುರುಷನನ್ನೂ ಶ್ರೇಷ್ಠ ಎಂದು ತಿಳಿದಿಲ್ಲ ಆ ರಾಮನೇ ಪರಂಜ್ಯೋತಿ, ಪರಮಾತ್ಮ ಪರಬ್ರಹ್ಮ ಎಂದು ತಿಳಿದು ಆ ಪತಿಯೇ ಪರಮೇಶ್ವರ ಎಂದು ಬಗೆದು ನಿರಲಸ ವೃತ್ತಿಯಿಂದ ಯಾವಜ್ಜನ್ಮ ಅವನ ಸೇವೆಯನ್ನೇ ನಾನು ಮಾಡಿದ್ದು ಸತ್ಯವಾದರೆ, ನನ್ನ ತಾಯಿಯಾದ ಈ ಧರಣಿದೇವಿಯು ತನ್ನ ಒಡಲಿನಲ್ಲಿ ನನಗೆ ತುಸು ಜಾಗ ಕೊಟ್ಟು ತನ್ನ ಮಡಿಲಲ್ಲಿಯೇ ಮಲಗಿಸಿಕೊಳ್ಳಲಿ.

**ಮಹಾದೇವ:-** ಹೀಗೆ ಸೀತೆಯು ಆಣೆಯಿಟ್ಟು ತನ್ನ ತಾಯಿಯಾದ ಭೂದೇವಿಯನ್ನು ಪ್ರಾರ್ಥಿಸಿಕೊಂಡಳು. ಕೂಡಲೇ ಭೂಮಿಯು ಬಿರಿಯಿತು. ನೆಲದ ಎದೆ ಸೀಳಿ ಭೂಗರ್ಭದ ಒಳಗಿನಿಂದ ಒಂದು ರತ್ನ ಸಿಂಹಾಸನವನ್ನು ಹೊತ್ತು ಗರುಡನು ರಸಾತಲದಿಂದ ಮೇಲಕ್ಕೆದ್ದು ಬಂದ. ಜನರಿಗೆಲ್ಲ ಅತ್ಯಾಶ್ಚರ್ಯ ಆ ರತ್ನ ಸಿಂಹಾಸನದ ಹಿಂದಿನಿಂದಲೇ ಧರಣೀ ದೇವಿಯು ಮೇಲೆ ಎದ್ದು ಬಂದು ಸೀತಾದೇವಿಯನ್ನು ಕೈ ಹಿಡಿದು ಕರೆದುಕೊಂಡು ಹೋಗಿ ತಾನೇ ಸ್ವಾಗತ ನೀಡಿ ಅಭಿನಂದನೆ ಮಾಡಿ ಆ ರತ್ನಪೀಠದ ಮೇಲೆ ಒಯ್ದು ಕೂಡಿಸಿದಳು. ಕೂಡಲೆ ಆಕಾಶದಿಂದ ರಾಶಿ ರಾಶಿಯಾಗಿ ಪುಷ್ಪವೃಷ್ಟಿಯಾಯಿತು. ದೇವಲೋಕದ ಅನೇಕ ಅಪ್ಸರೆಯರು ಸುತ್ತಲೂ ನಿಂತು ಸೀತೆಯನ್ನು ಪೂಜೆಮಾಡುತ್ತಿದ್ದರು. ಎಲ್ಲ ಜನರೂ ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನರೂ, ಹನುಮಂತನೂ ನೋಡುತ್ತಿದ್ದಂತೆಯೆ ಧರಣೀದೇವಿಯ ತನ್ನ ಮಗಳಾದ ಸೀತಾದೇವಿಯನ್ನು ಆ ರತ್ನದ ಆಸನದಲ್ಲಿ ಕುಳ್ಳಿರಿಸಿಕೊಂಡೇ ರಸಾತಳಕ್ಕೆ ಇಳಿದಳು. ಬಿರುಕುಬಿಟ್ಟು ಇಬ್ಭಾಗವಾದ ಭೂಮಿಯು ಮತ್ತೆ ಮುಚ್ಚಿಕೊಂಡಿತು. ಭೂಮಿಯಿಂದ

ಹುಟ್ಟಿಬಂದ ಸೀತಾದೇವಿಯು ಮತ್ತೆ ಆ ಭೂಮಿತಾಯಿಯ ಒಡಲಲ್ಲಿಯೇ ಅಡಗಿಹೋದಳು. ಸೀತೆ ಹೋದಬಳಿಕ ರಿಕ್ತವಾದ ರಾಮನ ಹೃದಯವನ್ನು ಶೋಕವೇ ತುಂಬಿಕೊಂಡಿತು. ಆ ಇಬ್ಬರೂ ಮಕ್ಕಳನ್ನು ಕರೆದುಕೊಂಡು ಋಷಿಗಳು ಹಾಗೂ ರಾಜರಿಂದ ಕೂಡಿ ಅಯೋಧ್ಯೆಯನ್ನು ಪ್ರವೇಶಿಸಿದ ಶ್ರೀರಾಮ.

ಮುಂದೆ ಕೆಲವು ಕಾಲದ ಅನಂತರ ರಾಮನ ಕೌಸಲ್ಯಾ, ಸುಮಿತ್ರಾ, ಕೈಕೇಯಿ ಎಂಬ ತಾಯಂದಿರು ಮರಣ ಹೊಂದಿ ಸ್ವರ್ಗದಲ್ಲಿ ಇರುವ ತಮ್ಮ ಪತಿಯನ್ನು ಕೂಡಿಕೊಂಡರು. ಈ ಭೂಲೋಕದಲ್ಲಿ ರಾಮನು ಒಟ್ಟು ಹನ್ನೊಂದು ಸಾವಿರ ವರ್ಷ ಧರ್ಮದಿಂದ ರಾಜ್ಯವನ್ನು ಆಳಿದ. ಕೊನೆಗೆ ಒಂದು ದಿನ ಕಾಲನು ತಪಸ್ವಿಯ ರೂಪದಿಂದ ರಾಮನ ಬಳಿಗೆ ಬಂದ ಮತ್ತು ರಾಮನನ್ನು ಕುರಿತು ನೋಡಿದ.

**ಕಾಲ:-** ''ಪರಾಕ್ರಮಶಾಲಿಯಾದ ಶ್ರೀರಾಮ, ಬ್ರಹ್ಮದೇವ ನನ್ನನ್ನು ನಿನ್ನ ಬಳಿಗೆ ಕಳಿಸಿದ್ದಾನೆ. ನಿನ್ನ ಬಳಿಗೆ ಏಕಾಂತದಲ್ಲಿ ಮಾತನಾಡಬೇಕಾಗಿದೆ. ನಮ್ಮ ಮಾತುಕತೆ ನಡೆದಾಗ ಬೇರೆ ಯಾರನ್ನೂ ಒಳಗೆ ಬಿಡಬೇಡ ಎಂದು ಕಟ್ಟುನಿಟ್ಟಾಗಿ ಆಜ್ಞೆ ಮಾಡಿ ಓರ್ವ ವ್ಯಕ್ತಿಯನ್ನು ಬಾಗಿಲು ಕಾಯಲು ಕೂಡಿಸು. ನಮ್ಮ ಮಾತು ನಡೆದಾಗ ಮತ್ತೊಬ್ಬರನ್ನು ಅವನು ಒಳಗೆ ಬಿಟ್ಟರೆ ಅವನಿಗೆ ನೀನು ಮರಣಾಂತಿಕ ಶಾಸನ ವಿಧಿಸು.''

ಕಾಲನ ಈ ಮಾತಿಗೆ ಒಪ್ಪಿದ ರಘುನಂದನ. ಲಕ್ಷ್ಮಣನನ್ನು ಕರೆದು ಬಾಗಿಲು ಕಾಯಲು ಕೂಡಿಸಿದ. ''ಲಕ್ಷ್ಮಣ, ಕಾಲಪುರುಷ ಬಂದಿದ್ದಾನೆ. ಬಹಳ ಮಹತ್ವದ ಮಾತನ್ನು ಏಕಾಂತದಲ್ಲಿ ನನಗೆ ತಿಳಿಸಲಿದ್ದಾನೆ. ಆಗ ಯಾರನ್ನೂ ಒಳಗೆ ಬಿಡಬೇಡ. ಬಿಟ್ಟರೆ ನಿನಗೆ ಮರಣ ದಂಡನೆ.''

ರಾಮನ ಈ ಯಮಶಾಸನಕ್ಕೆ ಹಣೆಮಣಿದು ಒಪ್ಪಿಕೊಂಡ ಲಕ್ಷ್ಮಣ. ಬಾಗಿಲು ಕಾಯಲು ಕುಳಿತ. ಕಾಲ ಪುರುಷ ಅರ್ಥಾತ್ ಯಮಧರ್ಮ ಒಳಗೆ ಹೋದ. ರಾಮನಿಗೆ ನಮಸ್ಕಾರ ಮಾಡಿ ಕೈ ಮುಗಿದು ಬಿನ್ನವಿಸಿದ.

**ಕಾಲಪುರುಷ:-** ಪ್ರಭು ರಾಮಚಂದ್ರ, ನೀನು ಈ ಭೂಲೋಕಕ್ಕೆ ಬಂದು ಹತ್ತು ಸಾವಿರ ವರ್ಷದ ಮೇಲೆ ಇನ್ನೊಂದು ಸಾವಿರ ವರುಷ ಕಳೆಯಿತು. ರಾಕ್ಷಸರನ್ನು ಕೊಂದು ನೀನು ದೀರ್ಘಕಾಲ ಭೂಲೋಕದಲ್ಲಿ ಇದ್ದು ಸುರಲೋಕಕ್ಕೆ ಮರಳಿ ಬಾ ಎಂದು ದೇವತೆಗಳು ಹಿಂದೆ ನಿನ್ನನ್ನು ಬಿನ್ನವಿಸಿಕೊಂಡಿದ್ದರು. ಆ ಸಮಯ ಮುಗಿದಿದೆ. ದುಷ್ಟರಾದ ರಾಕ್ಷಸ ಕುಲವೆಲ್ಲ ಅಳಿದಿದೆ. ಭೂಮಿಯ ಭಾರವೆಲ್ಲ ಇಳಿದಿದೆ. ನೀನು ಬಂದ ಅವತಾರದ ಕಾರ್ಯವೆಲ್ಲವೂ ಪೂರೈಸಿದಂತಾಗಿದೆ. ಆದುದರಿಂದ ನೀನು ಇನ್ನು ಮೇಲೆ ಬೇಗ ಮೇಲಿನ ಸ್ವರ್ಗಲೋಕಕ್ಕೆ ಬಾ. ಸುರಲೋಕದಲ್ಲಿರುವ ನಮಗೂ ನಿನ್ನ ಸೇವಾ ಹಾಗೂ ಸಂದರ್ಶನದಿಂದ ಈ ಭೂಲೋಕದ ಭಾಗ್ಯ ದೊರಕಲಿ.

**ಮಹಾದೇವ:-** ಹೀಗೆ ಕಾಲಪುರುಷನು ಬಿನ್ನಹ ಮಾಡಿಕೊಂಡಿದ್ದನ್ನು ಕೇಳಿ ಶ್ರೀರಾಮ ಅದಕ್ಕೆ ಒಪ್ಪಿಗೆ ಕೊಟ್ಟ. ಇಷ್ಟರಲ್ಲಿ ದುರ್ವಾಸ ಋಷಿಗಳು ರಾಮನ ಅರಮನೆಗೆ ಆಗಮಿಸಿದರು. ರಾಮ ಇನ್ನೂ ಕಾಲಪುರುಷನೊಡನೆ ಏಕಾಂತದಲ್ಲಿದ್ದ. ಬಾಗಿಲಲ್ಲಿ ಲಕ್ಷ್ಮಣ, ಸಿಟ್ಟಿನ ಸವಾರಿಯೇರಿಯೇ ಬಂದರು ದೂರ್ವಾಸರು. ಗಡಿಬಿಡಿಯಿಂದ ನುಡಿದರು.

**ದೂರ್ವಾಸರು:-** ಲಕ್ಷ್ಮಣ, ನಾನು ಈ ಕ್ಷಣದಲ್ಲಿಯೇ ಕಾಣಬೇಕಾಗಿದೆ ನಿನ್ನ ಅಣ್ಣನನ್ನು, ರಾಮನಿಗೆ ಹೋಗಿ ತಿಳಿಸು. ಈಗಲೇ ನನ್ನನ್ನು ಒಳಗೆ ಬಿಡು.

**ಲಕ್ಷ್ಮಣ:-** ಈಗ ನಾನು ನಿಮ್ಮನ್ನು ಒಳಗೆ ಬಿಡಲಾರೆ. ತುಸು ತಡೆಯಿರಿ.

**ದೂರ್ವಾಸ:-** ಲಕ್ಷ್ಮಣ, ನನಗೆ ಈಗಲೇ ರಾಮನ ದರ್ಶನ ಮಾಡಿಸದಿದ್ದರೆ ಶಾಪಕೊಡುತ್ತೇನೆ.

ಚಂಡಕೋಪನಾದ ಆ ಮುನಿಯ ಈ ಕೋಪಾಟೋಪದ ಉಕ್ತಿಯನ್ನು ಕೇಳಿ ಲಕ್ಷ್ಮಣ ಗಾಬರಿಯಾದ. ಒಳಗೆ ಹೋಗಿ ರಾಮನಿಗೆ ದೂರ್ವಾಸರ ಆಗಮನವನ್ನು ತಿಳಿಸಿದ. ಲಕ್ಷ್ಮಣ ಒಳಗೆ ಬಂದದ್ದನ್ನು ಕಂಡಕೂಡಲೇ ಕಾಲಪುರುಷ ಅಂತರ್ಧಾನ ಹೊಂದಿದ. ಆಗ ಶ್ರೀರಾಮ ದೂರ್ವಾಸ ಋಷಿಯನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದ. ದೂರ್ವಾಸರು ರಾಮನ ಆತಿಥ್ಯವನ್ನು ಸ್ವೀಕರಿಸಿ ಸಂತುಷ್ಟರಾಗಿ ಹೊರಟರು.

ಕಾಲಪುರುಷನು ಒಳಗೆ ಬಂದವರನ್ನೂ ಬಿಟ್ಟವರನ್ನೂ 'ಮರಣದಂಡದಿಂದ ಶಿಕ್ಷಿಸು' ಎಂದು ಕಠೋರ ಶಾಸನಗೈದು ಅದರಂತೆ ರಾಮನಿಂದ ವಚನ ತೆಗೆದು ಕೊಂಡಿದ್ದ. ಅದನ್ನು ಮುರಿದು ಆ ಏಕಾಂತವನ್ನು ಭಂಗಿಸಿ ಒಳಗೆ ಬಂದವನೂ, ಬಿಟ್ಟವನೂ ತಾನೇ ಆಗಿದ್ದ ಲಕ್ಷ್ಮಣ. ಅಣ್ಣನ ಪ್ರತಿಜ್ಞೆಯನ್ನು ಸತ್ಯಮಾಡಲಿಕ್ಕಾಗಿ ಲಕ್ಷ್ಮಣ ರಾಜ್ಯ ಬಿಟ್ಟು, ಮನೆ ತೊರೆದು, ಬಂಧು ಬಳಗವನ್ನೆಲ್ಲ ತ್ಯಜಿಸಿ ಅಯೋಧ್ಯೆಯನ್ನೂ ದಾಟಿ ಹೊರಗೆ ಹೋದ. ರಾಮನಿಂದ ಅಗಲಿರುವುದು ಅಶಕ್ಯವಾಯಿತು ಭ್ರಾತೃಪ್ರೇಮಿಯಾದ ಆ ರಾಮಾನುಜನಿಗೆ, ಅಣ್ಣನ ವಿರಹದ ಉರಿಯನ್ನು ತಾಳಲಾರದೆ ಸರಯೂ ನದಿಯಲ್ಲಿ ಹಾರಿ ಪ್ರಾಣ ಬಿಟ್ಟ ಪುಣ್ಯಾತ್ಮ ಲಕ್ಷ್ಮಣ. ಅನಂತರ ತನ್ನ ಮೂಲ ರೂಪವಾದ ಶೇಷರೂಪವನ್ನು ಹೊಂದಿ ಸಾವಿರ ಹೆಡೆಗಳಿಂದ ಯುಕ್ತನಾಗಿ ದಿವ್ಯಮಾಲೆ, ದಿವ್ಯಗಂಧ, ದಿವ್ಯವಸ್ತ್ರಗಳಿಂದ ಅಲಂಕೃತನಾಗಿ ಸಾವಿರ ನಾಗಕನ್ಯೆಯರ ಸೇವೆಯನ್ನು ಸ್ವೀಕರಿಸುತ್ತ ವಿಮಾನಾರೂಢನಾಗಿ ವಿಷ್ಣುಪದವನ್ನು ಕುರಿತು ಪ್ರಯಾಣ ಬೆಳೆಸಿದ.

ಅನಂತರ ಶ್ರೀರಾಮನು ಲಕ್ಷ್ಮಣನನ್ನು ಬಿಟ್ಟು ಇರಲಾರದೆ. ತಾನೂ ಪರಂಧಾಮಕ್ಕೆ ಹೊರಟ. ತನ್ನ ಮಕ್ಕಳಾದ ಕುಶ ಲವರನ್ನು ಪಟ್ಟದ ಮೇಲೆ ಕೂರಿಸಿ ಅಧಿಕಾರ ವಹಿಸಿಕೊಟ್ಟ.

ಕುಶಾವತಿಯಲ್ಲಿ ಕುಶನನ್ನೂ, ಶರವತಿಯಲ್ಲಿ ಲವನನ್ನೂ ಪಟ್ಟಗಟ್ಟಿದ ಭರತ, ಶತ್ರುಘ್ನರು ತಮ್ಮ ತಮ್ಮ ಮಕ್ಕಳಿಗೆ ತಮ್ಮ ರಾಜ್ಯದ ಅಧಿಕಾರವನ್ನು ಒಪ್ಪಿಸಿ ಅಣ್ಣನನ್ನು ಹಿಂಬಾಲಿಸಿದರು. ವಿಭೀಷಣ, ಸುಗ್ರೀವ, ಜಾಂಬವಂತ, ಹನುಮಂತ, ನಳ, ನೀಲ, ಸುಷೇಣ, ಗುಹ, ಮೊದಲಾದ ರಾಮ ಭಕ್ತರೆಲ್ಲರೂ ಆ ಪರಮಾತ್ಮನ ಅಭಿಪ್ರಾಯ ತಿಳಿದು ರಾಮನನ್ನು ಹಿಂಬಾಲಿಸಬೇಕೆಂದು ಅಯೋಧ್ಯೆಗೆ ಬಂದರು. ಮತ್ತು ಕೈ ಮುಗಿದು ಕೇಳಿಕೊಂಡರು.

**ರಾಮಭಕ್ತರು:-** ಪ್ರಭು, ನೀನು ಸ್ವರ್ಗಕ್ಕೆ ಪ್ರಯಾಣ ಬೆಳೆಸುವೆ ಎಂಬ ವೃತ್ತಾಂತ ಕೇಳಿ ನಾವೆಲ್ಲರೂ ಧಾವಿಸಿ ಬಂದಿದ್ದೇವೆ. ನಾವು ನಿನ್ನನ್ನು ಬಿಟ್ಟು ಈ ಲೋಕದಲ್ಲಿ ಒಂದು ಕ್ಷಣವೂ ಇರಲಾರೆವು. ನಮ್ಮನ್ನು ನಿನ್ನೊಡನೆ ಕರೆದುಕೊಂಡು ಹೋಗು.

**ರಾಮ:-** ಹಾಗೆಯೇ ಆಗಲಿ. ಆದರೆ ವಿಭೀಷಣ, ನೀನು ಮಾತ್ರ ನಿನ್ನ ಪ್ರತಿಜ್ಞೆಯಂತೆ ಹಾಗೂ ನನ್ನ ಅಪ್ಪಣೆಯಂತೆ ಚಿರಂಜೀವಿಯಾಗಿ ಇಲ್ಲಿಯೇ ಇರು. ಚಂದ್ರ ಸೂರ್ಯರು ಇರುವವರೆಗೆ ಭೂಲೋಕದಲ್ಲಿಯೇ ನೆಲಸು. ಮುಂದೆ ನನ್ನಪದಕ್ಕೆ ಬರುವೆಯಂತೆ.

**ಮಹಾದೇವ:-** ಶ್ರೀರಾಮನು ವಿಭೀಷಣನಿಗೆ ಹೀಗೆ ಆಜ್ಞೆ ಇತ್ತು ತಮ್ಮ ಇಕ್ಷ್ವಾಕು ಕುಲದ ದೇವತೆಯಾದ ರಂಗನಾಥ ಸ್ವಾಮಿಯ ದಿವ್ಯಮೂರ್ತಿಯನ್ನು ಪೂಜೆ ಮಾಡಲಿಕ್ಕೆಂದು ವಿಭೀಷಣನಿಗೆ ಕೊಟ್ಟ. ಅನಂತರ ಹನುಮಂತನನ್ನು ಕುರಿತು ನುಡಿದ.

**ರಾಮ:-** ಕಪೀಶ್ವರ, ಈ ಭೂಲೋಕದಲ್ಲಿ ನನ್ನ ರಾಮಕಥೆ ಪ್ರಚಲಿತವಾಗಿ ಇರುವವರೆಗೆ ನೀನು ಈ ನೆಲದಲ್ಲಿಯೇ ನೆಲಿಸು. ಮುಂದೆ ನನ್ನ ಸಾಯುಜ್ಯವನ್ನು ಹೊಂದು.

ಹನುಮಂತನಿಗೆ ಹೀಗೆ ಅಪ್ಪಣೆ ಮಾಡಿ ಜಾಂಬುವಂತನನ್ನು ಉದ್ದೇಶಿಸಿ ನುಡಿದ ಶ್ರೀರಾಮ.

**ಶ್ರೀರಾಮ:-** ಕರಡಿ ಕುಲದ ಹಿರಿಯನಾದ ಜಾಂಬವಂತ, ದ್ವಾಪರ ಯುಗವು ಬಂದ ಬಳಿಕ ಭೂಮಿಯ ಭಾರವನ್ನು ಹಗುರಗೊಳಿಸಲಿಕ್ಕಾಗಿ ನಾನು ಮತ್ತೊಮ್ಮೆ ಹುಟ್ಟಿ ಬರುತ್ತೇನೆ. ಆಗ ನಿನ್ನೊಡನೆ ಹೋರಾಡಿ ಹರಸುತ್ತೇನೆ.

**ಮಹಾದೇವ:-** ಹೀಗೆ ಶ್ರೀರಾಮಚಂದ್ರನು ತನ್ನ ವಿಶಿಷ್ಟ ಭಕ್ತರಾದ ವಿಭೀಷಣ ಹನುಮಂತ ಜಾಂಬವಂತ ಈ ಮೂವರಿಗೆ ಮಾತ್ರ ತನ್ನೊಡನೆ ಬರಬೇಡ ಎಂದು ಹೇಳಿ ಉಳಿದೆಲ್ಲ ತನ್ನ ಭಕ್ತರಾದ ನರ ವಾನರರು ಹಾಗೂ ಕರಡಿಗಳಿಗೆ ತನ್ನ ಜೊತೆಗೆ ಸ್ವರ್ಗಕ್ಕೆ ಬರಲು ಅನುಮತಿಯನ್ನು ಇತ್ತ. ರಾಮನ ಅನೇಕ ಮಂತ್ರಿಗಳು ಕೆಲವು ಪುರೋಹಿತರು ತಮ್ಮಂದಿರಾದ ಭರತ ಶತ್ರುಘ್ನರು ನಿಷಾದ ಕುಲದ ಒಡೆಯನಾದ ಗುಹನು, ನಲ, ನೀಲ, ಸುಗ್ರೀವ ಮುಂತಾದ ಕಪಿವೀರರು ರಾಮನನ್ನು ಹಿಂಬಾಲಿಸಿ ಹೊರಡಲು ಸಿದ್ಧರಾದರು.

ಪ್ರಯಾಣದ ದಿನ ಶ್ರೀರಾಮನು ಸ್ನಾನಮಾಡಿ ಬಿಳಿಯ ಬಟ್ಟೆ ಧರಿಸಿದ. ಆಚಮನ ಮಾಡಿದ.ಎರಡೂ ಕೈಗಳಲ್ಲಿಯೂ ದರ್ಭವನ್ನು ಹಿಡಿದುಕೊಂಡ ರಾಮನ ಬಲಬದಿಯಲ್ಲಿ ಕೈಯಲ್ಲಿ ಕಮಲವನ್ನು ಹಿಡಿದುಕೊಂಡು ಸಾಕ್ಷಾತ್ ಲಕ್ಷ್ಮೀದೇವಿಯು ನಡೆದಳು. ಎಡಭಾಗದಲ್ಲಿ ಧರಣೀದೇವಿಯು ನಡೆದಳು. ನಾಲ್ಕು ವೇದಗಳು ತಮ್ಮ ಆರು ಅಂಗಗಳೊಡನೆ, ಹದಿನೆಂಟು ಪುರಾಣಗಳು ಇತಿಹಾಸದೊಂದಿಗೆ ರಾಮನನ್ನು ಹಿಂಬಾಲಿಸಿದವು. ಓಂಕಾರ, ವಷಟ್ಕಾರ, ಗಾಯತ್ರೀ, ಸಾವಿತ್ರಿ, ಅಸ್ತ್ರ, ಶಸ್ತ್ರ, ಎಲ್ಲವೂ ಮನುಷ್ಯ ರೂಪವನ್ನು ಧರಿಸಿ ರಾಮನ ಹಿಂದಿನಿಂದ ನಡೆದವು. ಅವರ ಹಿಂದಿನಿಂದ ಭರತ, ಶತ್ರುಘ್ನ, ಮಂತ್ರಿ, ಸೇನಾಪತಿ, ಸುಗ್ರೀವ ಮೊದಲಾದ ವಾನರರು ಅನೇಕ ಕರಡಿಗಳೂ ಪಶುಪಕ್ಷಿಗಳೂ ಕೂಡ ರಾಮನ ಹಿಂದಿನಿಂದ ನಡೆದವು.

ಅನಂತರ ಎಲ್ಲರೂ ಮೂರು ಯೋಜನ ನಡೆದು ಸರಯೂ ನದಿಯ ಪಶ್ಚಿಮವಾಹಿನಿ ಆಗುವಲ್ಲಿ ನಿಂತುಕೊಂಡರು. ಅಲ್ಲಿಗೆ ಆಗಲೇ ಎಲ್ಲ ದೇವತೆಗಳಿಂದ ಒಡಗೂಡಿ ಬ್ರಹ್ಮದೇವರು ಉಪಸ್ಥಿತರಾಗಿದ್ದರು. ಅಲ್ಲಿ ದೇವಾಧಿದೇವತೆಗಳೂ ಋಷಿಮುನಿಗಳೂ ವೇದಮಂತ್ರಗಳಿಂದ ಶ್ರೀರಾಮನನ್ನು ಸ್ತೋತ್ರ ಮಾಡತೊಡಗಿದರು. ಆಗ ಬ್ರಹ್ಮದೇವರು ಕೈ ಮುಗಿದು ಬೇಡಿಕೊಂಡರು.

**ಬ್ರಹ್ಮ:-** ಭಗವನ್ ಮಹಾವಿಷ್ಣುವೇ, ನಿನಗೆ ಮಂಗಳವಾಗಲಿ, ನೀನು ಸುದೈವದಿಂದ ಇಲ್ಲಿಗೆ ಬಂದಿರುವೆ. ನಿನ್ನ ಸೋದರರೊಂದಿಗೆ ದೇವತಾ ಕಾರ್ಯವನ್ನು ನೆರವೇರಿಸಿದ ನೀನು ನಿನ್ನ ಮೂಲ ರೂಪದಿಂದ ಒಂದಾಗು. ಜಗತ್ತಿಗೆಲ್ಲ ನೀನೇ ಗತಿ.

ಹೀಗೆ ಬ್ರಹ್ಮದೇವರು ಬಿನ್ನವಿಸಿಕೊಂಡ ಬಳಿಕ ಭಗವಾನ್ ಶ್ರೀರಾಮಚಂದ್ರನು ದೇವತೆಗಳ ಪುಷ್ಪವೃಷ್ಟಿಯ ಮಧ್ಯದಲ್ಲಿ ತನ್ನ ಮಹಾವಿಷ್ಣುವಿನ ಮೂಲಸ್ವರೂಪದಲ್ಲಿ ಏಕೀಭೂತನಾದನು. ಶತ್ರುಘ್ನ, ಭರತರು ಶಂಖ ಚಕ್ರ ಸ್ವರೂಪದಲ್ಲಿ ವಿಲೀನರಾದರು. ಶಂಖ ಚಕ್ರ ಗದಾ ಶಾರಂಗ ಪದ್ಮಗಳನ್ನು ಧರಿಸಿದ ನಾಲ್ಕು ಭುಜಗಳಿಂದಲೂ ದಿವ್ಯ ಆಭರಣಗಳಿಂದಲೂ ದಿವ್ಯಗಂಧದಿಂದಲೂ ದಿವ್ಯಪೀತಾಂಬರದಿಂದಲೂ ಆ ಮಹಾವಿಷ್ಣುವು ಹದಿನೆಂಟು ವರ್ಷದ ತರುಣನಾಗಿ ಪೂರ್ಣಚಂದ್ರನಂತಿರುವ ಮುಖದಿಂದ ಅಲ್ಲಿ ಶೋಭಾಯಮಾನನಾಗಿ ಕಂಗೊಳಿಸಿದ. ಶ್ರೀದೇವಿ ಭೂದೇವಿ ಎಂಬ ತನ್ನ ಪಟ್ಟದರಸಿಯರಿಂದ ಕೂಡಿ ಸುರಪುರದ ವಿಮಾನವನ್ನು ಆರೋಹಣ ಮಾಡಿದ. ಅದರಲ್ಲಿ ಕಲ್ಪವೃಕ್ಷದ ಕೆಳಗೆ ಕಲ್ಪಿತವಾದ ದಿವ್ಯಸಿಂಹಾಸನದಲ್ಲಿ ಎಲ್ಲ ದೇವತೆಗಳಿಂದಲೂ ಪ್ರಶಂಸಿತನಾಗಿ ಮಂಡಿತನಾದ. ರಾಮನ ನಿತ್ಯ ಸಾನ್ನಿಧ್ಯವನ್ನು ಅಪೇಕ್ಷಿಸಿ ಬಂದ ಎಲ್ಲ ಕಪಿಗಳೂ ಕರಡಿಗಳೂ ಮಂತ್ರಿ ಪರಿವಾರದವರೂ ಪುರೋಹಿತರೂ ಮುನಿ ಮನುಜರೂ ಮುನಿ ಮಹರ್ಷಿ ಮನುಜ ಮಹಾನುಭಾವರೂ ಸರಯೂ ನದಿಯಲ್ಲಿ ಹೊಕ್ಕು, ಪ್ರಾಣ ಪರಿತ್ಯಾಗ ಮಾಡಿ, ದಿವ್ಯರೂಪವನ್ನು ಧರಿಸಿ ಸ್ವರ್ಗ ವಿಮಾನವನ್ನು ಏರಿ ಶ್ರೀರಾಮನ ಪಾದ ತಳದಲ್ಲಿ ಕುಳಿತುಕೊಂಡರು. ಹೀಗೆ ಭಗವಂತನಾದ ಶ್ರೀರಾಮನನ್ನು ಬಿಟ್ಟು ಆಗಲಿ ಈ ಲೋಕದಲ್ಲಿ ಇರಲಾಗದೇ ಭಕ್ತಿಯಿಂದ ಭಗವಂತನನ್ನೇ ಬೆಂಬತ್ತಿದ ಅಸಂಖ್ಯ ನರವಾನರ ಸಿದ್ಧ ಋಷಿ ಮುನಿಗಳು ರಾಮನೊಡನೆಯೇ ವಿಮಾನಾರೂಢರಾಗಿ ದಿವ್ಯ ಲೋಕಕ್ಕೆ ಪಯಣ ಬೆಳೆಸಿದರು.

ಈ ಶ್ರೀರಾಮಚಂದ್ರನ ಚರಿತ್ರೆಯಲ್ಲಿ ಒಂದು ಶ್ಲೋಕ ಅಥವಾ ಅರ್ಧ ಶ್ಲೋಕವನ್ನಾದರೂ ಪಠಿಸಿದರೆ ಕೋಟಿ ಜನ್ಮದ ಪಾಪಗಳೆಲ್ಲವೂ ಪರಿಹಾರವಾಗುತ್ತವೆ. ಪಾರ್ವತಿ, ನಿನ್ನ ಅಪೇಕ್ಷೆಯ ಮೇರೆಗೆ ನಾನು ನಿನಗೆ ಶ್ರೀರಾಮನ ಚರಿತ್ರೆಯನ್ನು ಕಥಿಸಿದ್ದೇನೆ. ಇದನ್ನು ಕೇಳಿ ನೀನು ಧನ್ಯಳಾದೆ. ನಾನು ಕೃತಕೃತ್ಯನಾದೆ. ನಿನಗೆ ನಾನು ಮತ್ತೆ ಬೇರೆ ಏನನ್ನು ಹೇಳಲಿ? ನಿನಗೆ ಯಾವ ವಿಷಯವನ್ನು ಕೇಳುವ ಕುತೂಹಲ ಇದೆ? ಕೇಳು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ರಾಮಚರಿತ್ರೆಯ ಉತ್ತರಾರ್ಧ ಎಂಬ ಎರಡುನೂರ ಇಪ್ಪತ್ತಾರನೇಯ ಅಧ್ಯಾಯ ಮುಗಿದುದು*

—o—

**ಪಾರ್ವತಿ:-** ಪ್ರಿಯಕರನಾದ ಪರಮೇಶ್ವರ, ತಾವು ನಿರೂಪಿಸಿದ ರಘುನಾಥನ ಚರಿತ್ರೆ ಬಹಳ ಚೆನ್ನಾಗಿತ್ತು. ಅದನ್ನು ಕೇಳಿ ನಾನು ಧನ್ಯಳು. ತಾವು ಈಗ ನನಗೆ ವಸುದೇವನ ಪುತ್ರನಾಗಿ ಅವತರಿಸಿದ ಶ್ರೀಕೃಷ್ಣನ ಚರಿತ್ರೆಯನ್ನು ಹೇಳಬೇಕು. ಪಾಪ ಪರಿಹಾರಕ ಅಲ್ಲವೇ ಆ ಕೃಷ್ಣನ ಕಥೆ!

**ಮಹಾದೇವ:-** ದೇವೀ, ವಾಸುದೇವನ ಚರಿತ್ರೆ ಭಕ್ತರಿಗೆ ಬೇಡುವ ಫಲವನ್ನು ನೀಡುವಂತಹದು. ಆ ಕೃಷ್ಣಚರಿತ್ರೆಯನ್ನು ಹೇಳುತ್ತೇನೆ ಕೇಳು. ಯದುಗಳ ವಂಶದಲ್ಲಿ ದೇವಮೀಢನಿಗೆ ವಸುದೇವ ಎಂಬ ಧರ್ಮಾತ್ಮನಾದ ಮಗನು ಇದ್ದ. ಅವನು ಮಥುರಾ ಪಟ್ಟಣದಲ್ಲಿ ದೇವಕನ ಮಗಳಾದ ದೇವಕಿಯನ್ನು ಮದುವೆಯಾದ. ಉಗ್ರಸೇನನ ಮಗನಾದ ಕಂಸ ಮಹಾಬಲಿಷ್ಠ. ಕಂಸನು ಉಗ್ರಸೇನನ ಮಗನಾಗಿದ್ದು ದೇವಕಿಯ ಸೋದರ. ಅವನು ಅಕ್ಕರೆಯಿಂದ ತನ್ನ ತಂಗಿ ಹಾಗೂ ಭಾವಂದಿರು ಕುಳಿತ ರಥವನ್ನು ತಾನೇ ಹೊಡೆಯುತ್ತಲಿದ್ದ ಸಾರಥಿಯಾಗಿ. ಮದುವೆಯ ಮೆರವಣಿಗೆಯ ಆ ರಥೋತ್ಸವ ರಾಜಬೀದಿಗೆ ಬಂದಿತು. ಆಗ ಒಮ್ಮೆಲೇ ಆಕಾಶವಾಣಿ ಆಯಿತು:- "ಕಂಸ, ಇವಳ ಎಂಟನೆಯ ಗರ್ಭ ನಿನಗೆ ಮೃತ್ಯು". ಈ ನಭೋವಾಣಿಯನ್ನು ಕೇಳಿದ ಕೂಡಲೇ ಕಂಸ ತನ್ನ ತಂಗಿಯಾದ ದೇವಕಿಯನ್ನೇ ಕೊಲ್ಲಲು ಉದ್ಯುಕ್ತನಾದ. ಬುದ್ಧಿವಂತನಾದ ವಸುದೇವ ಕೋಪದಿಂದ ಕೆರಳಿ ಕೊಲ್ಲಲು ನಿಂತ ತನ್ನ ಭಾವ ಕಂಸವನ್ನು ಕುರಿತು ನುಡಿದ.

**ವಸುದೇವ:-** ಮಹಾನುಭಾವ, ಈ ದೇವಕಿ ನಿನ್ನ ತಂಗಿ. ದಯಮಾಡಿ ಇವಳನ್ನು ಕೊಲ್ಲಬೇಡ. ಇವಳ ಮಗುವಿನಿಂದಷ್ಟೇ ನಿನಗೆ ಮೃತ್ಯು ! ಅಂದ ಬಳಿಕ ಇವಳನ್ನು ಏಕೆ ಸಂಹರಿಸುವೆ? ಹುಟ್ಟಿ ಹುಟ್ಟಿದಂತೆ ಇವಳ ಶಿಶುಗಳನ್ನೇ ನೀನು ಕೊಂದು ಬಿಡು. ಅದರಿಂದ ಯಾವ ಭಯಕ್ಕೂ ಅವಕಾಶವಿಲ್ಲ.

**ಮಹಾದೇವ:-** ವಸುದೇವ ಮಾತು ಸರಿ ಎನಿಸಿತು ಆ ಕಂಸನಿಗೆ. ಅವನು ದೇವಕಿ ವಸುದೇವರನ್ನು ತನ್ನ ಮನೆಯ ಒಂದು ಕೋಣೆಯಲ್ಲಿ ಕೈದಿಗಳನ್ನಾಗಿ ಬಂದಿಸಿಟ್ಟ. ಇದೇ ಕಾಲದಲ್ಲಿ ಭೂಮಿಭಾರದಿಂದ ಪೀಡಿತಳಾಗಿ ಭೂದೇವಿಯು ಬ್ರಹ್ಮದೇವರ ಬಳಿಗೆ ಹೋದಳು. ಅವರಿಗೆ ನಮಸ್ಕರಿಸಿ ಕೈ ಮುಗಿದು ಕೇಳಿ ಕೊಂಡಳು.

**ಭೂದೇವಿ:-** ಪ್ರಜಾಪತಿಯೇ, ಭೂಲೋಕದಲ್ಲಿ ಪ್ರಾಯಃ ಎಲ್ಲ ಮನುಷ್ಯರೂ ಪಾಪದಿಂದ ಮೋಹಿತರಾಗಿ ಅಧರ್ಮದ ದಾರಿ ಹಿಡಿದಿದ್ದಾರೆ. ಜಗತ್ತಿನಲ್ಲಿಯ ಎಲ್ಲ ಧರ್ಮಗಳನ್ನೂ ಧ್ವಂಸಗೈದಿದ್ದಾರೆ. ವಾಸ್ತವಿಕವಾಗಿ ಈ ಜಗತ್ತನ್ನು ಧರಿಸಿ ಹಿಡಿದಿದ್ದು ಧರ್ಮವೇ. ಈ ಕಾಲದಲ್ಲಿ ಜನರಲ್ಲಿ ಅಲ್ಪಸ್ವಲ್ಪವಾದರೂ ಧರ್ಮವು ಕಂಡು ಬರುವುದಿಲ್ಲ. ಸತ್ಯ, ಶೌಚಗಳಿಂದ ಒಡಗೂಡಿದ ಧರ್ಮದಿಂದಲೇ ಈ ಜಗತ್ತೆಲ್ಲವೂ ಜನಿಸಿದೆ. ದೃಢವಾಗಿ ನೆಲೆಸಿದೆ. ಇಂಥ ಧರ್ಮವನ್ನು ಮರೆತು ಉಚ್ಛೃಂಖಲ ವೃತ್ತಿಯಿಂದ ಅಧರ್ಮದಲ್ಲಿ ಸ್ವೇಚ್ಛಾ ಚಾರಿಗಳಾದ ಪಾಪಿಷ್ಠ ಜನರನ್ನು ನಾನು ಹೊರಲಾರೆ. ಪಾಪಿಗಳ ಭಾರ ನನಗೆ ದುಃಸ್ಸಹ.

**ಮಹಾದೇವ:-** ಹೀಗೆ ಹೇಳಿ, ಭೂದೇವಿಯು ಅಲ್ಲಿಯೇ ಅಂತರ್ಧಾನ ಹೊಂದಿದಳು. ಆಗ ಬ್ರಹ್ಮರುದ್ರಾದಿ ದೇವತೆಗಳು ಕ್ಷೀರ ಸಮುದ್ರದ ಉತ್ತರತೀರಕ್ಕೆ ಬಂದರು. ಆ ಜಗದೊಡೆಯನನ್ನು ಬಗೆಬಗೆಯಿಂದ ಹೊಗಳಿ ಹಾಡಿದರು. ಅವರ ಸ್ತೋತ್ರ ಪ್ರಶಂಸೆಗೆ ಪ್ರಸನ್ನನಾಗಿ ಪರಮಾತ್ಮ ತನ್ನ ಪ್ರತ್ಯಕ್ಷ ದರ್ಶನವನ್ನು ಕರುಣಿಸಿದ. ಮತ್ತು ದೇವತೆಗಳಿಗೆ ಬಂದ ಕಾರಣವೇನೆಂದು ಕೇಳಿದ.

**ಬ್ರಹ್ಮದೇವ:-** ದೇವ ದೇವೋತ್ತಮನಾದ ಜಗನ್ನಾಥ, ಈ ಜಗತ್ತಿನಲ್ಲಿ ಈಗ ಅಸಂಖ್ಯ ರಾಕ್ಷಸರು ಹುಟ್ಟಿದ್ದಾರೆ. ಅವರ ಭಾರದಿಂದ ನೆಲವೇ ಕುಸಿಯುತ್ತಿದೆ. ಈ ಕ್ರೂರ ರಕ್ಕಸರ ಹೊರಲಾರದ ಹೊರೆಯನ್ನು ಹೊತ್ತು ಆ ಭೂಭಾರದಿಂದ ಭೂ ದೇವಿಯು ಭಗ್ನಭುಗ್ನಳಾಗಿದ್ದಾಳೆ. ಜರಾಸಂಧ, ಕಂಸ, ಪ್ರಲಂಬ ಧೇನುಕ ಮುಂತಾದ ದುಷ್ಟದೈತ್ಯರು ಲೋಕಕಂಟಕರಾಗಿ ಜನರನ್ನೆಲ್ಲ ಪೀಡಿಸುತ್ತಲಿದ್ದಾರೆ. ಈ ಭೂಭಾರವನ್ನು ಕಡಿಮೆ ಮಾಡಲಿಕ್ಕಾಗಿ ಅಥವಾ ಇಳಿಸಲಿಕ್ಕಾಗಿ ನೀನೇ ಅವತರಿಸಿ ಬರಬೇಕು.

**ಮಹಾವಿಷ್ಣು:-** ಸುರರೇ, ನಿಮ್ಮ ಬಯಕೆಯಂತೆ ನಾನು ಮಹೀಮಂಡಲದಲ್ಲಿ ಹುಟ್ಟಿ ಬರುತ್ತೇನೆ. ಆ ಎಲ್ಲ ದುಷ್ಟ ದೈತ್ಯರ ಹುಟ್ಟನ್ನು ಅಡಗಿಸುತ್ತೇನೆ. ಯದುಕುಲದಲ್ಲಿ ನಾನು ಮೊದಲು ಮಾನವನಾಗಿ ಅವತರಿಸಿ ಇಳಿದು ಬರುತ್ತೇನೆ. ಧರೆಯ ಹೊರೆಯನ್ನು ಇಳಿಸುತ್ತೇನೆ.

ಭಗವಂತನ ಈ ಸಾಂತ್ವನ ಪರವಾದ ನುಡಿಗಳನ್ನು ಕೇಳಿ ದೇವತೆಗಳ ಅಂತರಂಗ ಸಂತಸದಿಂದ ತುಂಬಿತು. ಅವರು ನಾರಾಯಣನಿಗೆ ನಮಸ್ಕರಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ದೇವತೆಗಳು ಅಲ್ಲಿಂದ ಹೋದಬಳಿಕ ಭಗವಂತ ತನ್ನ ವೈಷ್ಣವೀಮಾಯೆಯನ್ನು ಕರೆದ. ಆ ಯೋಗಮಾಯೆಗೆ ಆದೇಶ ನೀಡಿದ.

**ನಾರಾಯಣ:-** ನಾರಾಯಣಿಯೇ, ಹಿರಣ್ಯಾಕ್ಷನ ಆರು ಮಕ್ಕಳನ್ನು ನೀನು ರಸಾತಲದಿಂದ ಭೂಲೋಕಕ್ಕೆ ತೆಗೆದುಕೊಂಡು ಬಾ. ವಸುದೇವನ ಮಡದಿಯಾದ ದೇವಕೀದೇವಿಯ ಗರ್ಭದಲ್ಲಿ ಆ ಆರು ಜನರು ಹುಟ್ಟಿ ಬರುವಂತೆ ಮಾಡು. ಅನಂತರ ದೇವಕಿಯ ಏಳನೇಯ ಗರ್ಭವೇ ಆದಿಶೇಷನ ಅಂಶಭೂತವಾದ ಬಲರಾಮ ಎಂಬ ನನ್ನ ಅವತಾರ. ಕೆಲವು ದಿನಗಳ ಬಳಿಕ ದೇವಕಿಯ ಉದರದಲ್ಲಿದ್ದ ಆ ಗರ್ಭವನ್ನು ಅವಳ ಸವತಿಯಾದ ರೋಹಿಣಿಯ ಉದರಕ್ಕೆ ನೀನು ವರ್ಗಾಯಿಸು. ದೇವಕಿಯ ಏಳನೆಯ ಗರ್ಭವನ್ನು ನೀನು ಸೆಳೆದು ರೋಹಿಣಿಯ ಗರ್ಭದಲ್ಲಿ ಸ್ಥಾಪಿಸುವುದರಿಂದ ರಿಕ್ತವಾದ ದೇವಕಿಯ ಗರ್ಭದಲ್ಲಿ ಎಂಟನೆಯ ಗರ್ಭವಾಗಿ ನಾನು ಒಡಮೂಡುತ್ತೇನೆ. ನಾನು ಹುಟ್ಟಿದ ಬಳಿಕ ಕೆಲವೇ ಸಮಯದಲ್ಲಿ ನೀನು ಗೋಕುಲದಲ್ಲಿ ನಂದಗೋಪನ ಪತ್ನಿಯಾದ ಯಶೋದೆಯಲ್ಲಿ ಜನಿಸು. ಅನಂತರ ನೀನು ವಿಂಧ್ಯಾಚಲಕ್ಕೆ ಹೋಗು. ಅಲ್ಲಿ ಇಂದ್ರನೇ ಮೊದಲಾದ ದೇವತೆಗಳು ನಿನ್ನನ್ನು ಪೂಜಿಸುವರು. ಶುಂಭ ಮೊದಲಾದ ದುಷ್ಟ ದೈತ್ಯರನ್ನು ನೀನು ವಿಂಧ್ಯವಾಸಿನಿಯಾಗಿ ವಧಿಸು.

ಭಗವಂತನ ಈ ಅಣತಿಯನ್ನು ತಲೆಯಮೇಲೆ ಹೊತ್ತು ಕಾರ್ಯಪ್ರವೃತ್ತಳಾದಳು. ನಾರಾಯಣ ಮಾಯೆ. ಹಿಂದೆ ಹಿರಣಾಕ್ಷನ ಹೊಟ್ಟೆಯಿಂದ ಹುಟ್ಟಿದ ಷಡ್ಗರ್ಭ ಎಂಬ ಆರು ಜೀವಗಳನ್ನು ಒಂದಾದ ಮೇಲೆ ಒಂದರಂತೆ ದೇವಕಿಯ ಗರ್ಭದಲ್ಲಿ ಇರಿಸಿದಳು. ಕಂಸನ ಕಾರಾಗೃಹದಲ್ಲಿ ಬಂದಿಯಾದ ವಸುದೇವ ದೇವಕಿಯರು ತಾವು ಹೆಡೆದ ಆರೂ

ಮಕ್ಕಳನ್ನು ಒಂದೊಂದನ್ನಾಗಿ ಕಂಸನಿಗೆ ಹೋಗಿ ಕೊಟ್ಟರು. ನಿಷ್ಕುರಣಿಯಾದ ಕಂಸ ದೇವಕಿಯ ಆ ಆರೂ ಮಕ್ಕಳನ್ನು ಕ್ರಮವಾಗಿ ಹುಟ್ಟಿದ ಕೂಡಲೇ ಕೊಂದು ಹಾಕಿದ. ಏಳನೇಯ ಬಾರಿ ದೇವಕಿಗೆ ಗರ್ಭ ನಿಂತಿತು. ಆದಿಶೇಷನ ವಂಶದಿಂದ ಸಂಭೂತವಾದ ಆ ಗರ್ಭವನ್ನು ವಿಷ್ಣು ಮಾಯೆಯು ದೇವಕಿಯ ಉದರದಿಂದ ಸೆಳೆದು ಒಯ್ದು ವಸುದೇವನ ಮತ್ತೊಬ್ಬ ಮಡದಿಯಾದ ರೋಹಿಣಿಯ ಹೊಟ್ಟೆಯಲ್ಲಿ ತಂದು ಇಟ್ಟಳು. ಆ ಗರ್ಭದಿಂದ ಈ ಗರ್ಭಕ್ಕೆ ಸೆಳೆದು ಎಳೆದು ತಂದು ಇರಿಸಿದ್ದರಿಂದ ಅವನಿಗೆ ಸಂಕರ್ಷಣ ಎಂದು ಹೆಸರಾಯಿತು. ಭಾದ್ರಪದ ಕೃಷ್ಣ ಅಷ್ಟಮಿದಿನ ರೋಹಿಣಿ ನಕ್ಷತ್ರದಂದು ಪ್ರಾತಃಕಾಲದಲ್ಲಿ ರೋಹಿಣೀದೇವಿಯು ಬಲರಾಮ, ಸಂಕರ್ಷಣ, ರೌಹಿಣೇಯ ಎಂದು ಹೆಸರಾದ ಗಂಡುಮಗುವನ್ನು ಹೆತ್ತಳು.

ಮರುವರ್ಷ ಶ್ರಾವಣ ಮಾಸ, ಕೃಷ್ಣಪಕ್ಷ ಅಷ್ಟಮಿಯ ದಿನ ಅರ್ಧ ರಾತ್ರಿಯ ಸಮಯದಲ್ಲಿ ದೇವಕಿಯು ಕಂಸನ ಬಂದಿಮನೆಯಲ್ಲಿ ಸಾಕ್ಷಾತ್ ಜಗದೀಶ್ವರನಾದ ಮಹಾವಿಷ್ಣುವಿಗೆ ಜನ್ಮವಿತ್ತಳು. ಕನ್ನೈದಿಲೆಯ ಎಲೆಯಂತೆ ಕಪ್ಪು ಬಣ್ಣ, ತಾವರೆಗಣ್ಣು, ನಾಲ್ಕು ತೋಳು, ದೇಹದಲ್ಲಿ ದಿವ್ಯಾಭರಣ, ಎದೆಯಲ್ಲಿ ಶ್ರೀವತ್ಸ, ಹೃದಯದಲ್ಲಿ ಕೌಸ್ತುಭ, ಕೊರಳಲ್ಲಿ ವನಮಾಲೆ, ಮುಂತಾದವುಗಳಿಂದ ಶೋಭಾಯಮಾನನಾಗಿಯೇ ಶ್ರೀಹರಿ ತಾಯಿಯ ಗರ್ಭದಿಂದ ಹೊರಗೆ ಬಂದು ನಿಂತ. ಅವನನ್ನು ನೋಡಿ ವಸುದೇವನು ಕೈ ಮುಗಿದು ಹೇಳಿದ. ''ಭಕ್ತರ ಕಲ್ಪತರುವಾದ ಜಗನ್ನಾಥ, ಅನಾದಿ ಮೂರ್ತಿಯಾದ ನೀನು ಎಲ್ಲ ದೇವತೆಗಳಿಗೂ ಒಡೆಯ. ಕ್ಷರಾಕ್ಷರ ಪುರುಷರಿಗಿಂತ ಉತ್ತಮವಾದ ಪುರುಷೋತ್ತಮ. ಯೋಗಿಧ್ಯೇಯನಾದ ನೀನು ನನ್ನ ಮಗನಾಗಿ ಹುಟ್ಟಿದ್ದು ನನ್ನ ಜನ್ಮಾಂತರದ ಸೌಭಾಗ್ಯ. ಈ ಜನ್ಮದ ತಪೋನುಷ್ಠಾನದ ಪುಣ್ಯಪರಿಪಾಕ. ನಿನ್ನ ಈ ಅದ್ಭುತವಾದ ರೂಪವನ್ನು ದೈತ್ಯರು ಹಾಗೂ ಪಾಪಿಗಳು ನೋಡಿ ಸಹನ ಮಾಡಲಾರರು. ಇದನ್ನು ಉಪಸಂಹರಿಸು.'' ಹೀಗೆ ತಂದೆಯ ಹೇಳಿಕೆಯನ್ನು ಕೇಳಿ ಆ ಜಗದೀಶ್ವರನು ನಾಲ್ಕು ಬಾಹುಗಳಿಂದ ಒಡಗೂಡಿದ ತನ್ನ ರೂಪವನ್ನು ಉಪಸಂಹರಿಸಿ ಪುಟ್ಟಕೂಸು ಆಗಿ ದೇವಕಿಯ ಮಡಿಲಲ್ಲಿ ಪವಡಿಸಿದ. ಅನಂತರ ಅದೇ ಹುಟ್ಟಿದ ಎಳೆ ಮಗುವಿನ ಆದೇಶದಂತೆ ವಸುದೇವನು ಮಗುವಾಗಿ ಮಲಗಿದ ಆ ಕೂಸನ್ನು ದೇವಕಿಯ ಮಡಿಲಿನಿಂದ ಎತ್ತಿಕೊಂಡು ಬಂದಿಖಾನೆಯನ್ನು ದಾಟಿ ಹೊರಗೆ ನಡೆದ. ಶ್ರಾವಣಮಾಸವಾದುದರಿಂದ ಧಾರಾಕಾರವಾಗಿ ಮಳೆ ಸುರಿಯುತ್ತಲಿತ್ತು. ಆಗ ಸಾಗರರಾಜನಾದ ಆದಿಶೇಷನು ತನ್ನ ಸಾವಿರ ಹೆಡೆಗಳನ್ನು ಬಿಡಿಸಿ ವಸುದೇವನ ತಲೆ ಮೇಲೆ ಇರುವ ಆ ಕೂಸಿನ ಮೇಲೆ ಹಿಡಿದನು. ಬಂದೀಖಾನೆಯ ಬಾಗಿಲು ಗೋಡೆ, ಗೋಪುರ ಎಲ್ಲವೂ ಈ ಕೂಸಿನ ಕಾಲಿನ ತುದಿ ತಾಗಿದ ಮಾತ್ರಕ್ಕೆ ಬೀಗ ಮುರಿದು ಬಿದ್ದು ತಮ್ಮಷ್ಟಕ್ಕೆ ತಾವು ತೆರೆದುಕೊಂಡವು. ಬಾಗಿಲುಕಾಯಲು ಕೂಡಿಸಿದ ಎಲ್ಲ ದ್ವಾರಪಾಲಕರು ಯೋಗಮಾಯೆಯಿಂದ ಮೋಹಿತರಾಗಿ ನಿದ್ರಾವಶರಾಗಿದ್ದರು. ದಾರಿಯಲ್ಲಿ ಯಮುನಾ ನದಿ ತುಂಬಿ ಹರಿಯುತ್ತಿತ್ತು. ಆದರೆ ವಸುದೇವ ಬಂದುದನ್ನು ನೋಡಿ ಮಹಾಪೂರದಿಂದ ಹರಿಯುವ ಯಮುನೆಯ ನೀರು ಮೊಣಕಾಲಮಟ ಆಯಿತು. ವಸುದೇವನು ಆ ಯಮುನೆಯನ್ನು ದಾಟಿ ಆಚೆಯ ದಂಡೆಯಲ್ಲಿರುವ ಗೋಕುಲವನ್ನು ಸೇರಿದ. ಅಲ್ಲಿ ಆ ವಜ್ರಭೂಮಿಯಲ್ಲಿ ನಂದನ ಪತ್ನಿಯಾದ ಯಶೋದೆಯು ಅದೇ ಆಗ ಒಂದು

ಕನ್ಯಾರತ್ನವನ್ನು ಹೆತ್ತು ಆಯಾಸದಿಂದ ಮಲಗಿ ಕೊಂಡಿದ್ದಳು. ವಸುದೇವ ಮೆಲ್ಲನೆ ಆ ನಂದಗೋಪನ ಮನೆಯಲ್ಲಿ ಪ್ರವೇಶಿಸಿದ. ಎಲ್ಲರೂ ನಿದ್ರಾಮುದ್ರಿತ ಲೋಚನರು. ನೇರವಾಗಿಪ್ರಸೂತಿ ಕೋಣೆಗೆ ನುಗ್ಗಿದ ವಸುದೇವ. ತಾನು ಮಥುರೆಯ ಕಾರಾಗೃಹದಿಂದ ತಲೆಯ ಮೇಲೆ ಹೊತ್ತು ತಂದ ತನ್ನ ಮಗನನ್ನು ಅಲ್ಲಿ ಯಶೋದೆಯ ಪಕ್ಕದಲ್ಲಿ ಮಲಗಿಸಿದ. ಕನ್ಯೆಯಿದ್ದ ಸ್ಥಳದಲ್ಲಿ ತನ್ನ ಮಗನನ್ನು ಮಲಗಿಸಿ ಮಲಗಿದ ಆ ಕನ್ಯೆಯನ್ನು ತಾನು ಎತ್ತಿಕೊಂಡ ಮೆಲ್ಲಮೆಲ್ಲನೆ. ಹೀಗೆ ಮಕ್ಕಳ ಅದಲು ಬದಲು ಮಾಡಿ ತನ್ನ ಮಗನನ್ನು ಅಲ್ಲಿ ಮಲಗಿಸಿ ಅಲ್ಲಿಯ ಹೆಣ್ಣುಕೂಸನ್ನು ತಾನು ಹೊತ್ತುಕೊಂಡು ನಡೆದ. ಮತ್ತೆ ಮೊದಲಿನಂತೆ ಯಮುನೆಯನ್ನು ದಾಟಿ ಮಥುರಾ ಪಟ್ಟಣಕ್ಕೆ ಆಗಮಿಸಿದ. ಕಂಸನ ಬಂದೀಖಾನೆಗೆ ಬಂದ. ಅಲ್ಲಿ ತನ್ನ ಮಗನನ್ನು ಕರೆದುಕೊಂಡು ಹೋದದ್ದಕ್ಕಾಗಿ ದುಃಖಿಸುತ್ತಲಿರುವ ದೇವಕಿಯ ಕೈಗೆ ಆ ಹೆಣ್ಣುಕೂಸನ್ನು ಕೊಟ್ಟ.

ಆ ಕನ್ಯೆಯು ದೇವಕಿಯ ಮಡಲಿನಲ್ಲಿ ಮಲಗಿಸಿದ ತಕ್ಷಣ ಅಳಲು ಪ್ರಾರಂಭಿಸಿತು. ಕೂಸಿನ ದನಿಯನ್ನು ಕೇಳಿ ಕೂಡಲೇ ಆ ಮನೆಯ ಕಾವಲುಗಾರರು ಓಡುತ್ತ ಹೋಗಿ ಕಂಸನಿಗೆ ದೇವಕಿಯು ಹಡೆದ ಸಮಾಚಾರ ತಿಳಿಸಿದರು. ಕೂಡಲೇ ಕಂಸ ಓಡಿ ಬಂದ. ದೇವಕಿಯ ಮಗ್ಗುಲಲ್ಲಿ ಮಲಗಿದ ಆ ಕನ್ಯೆಯನ್ನು ಕೈಯಲ್ಲಿ ತೆಗೆದುಕೊಂಡ ಮತ್ತು ದೊಡ್ಡದಾದ ಒಂದು ಹೆಬ್ಬಂಡೆಯ ಮೇಲೆ ಅಪ್ಪಳಿಸಿದ. ಆಗ ಆ ಕ್ಷಣದಲ್ಲಿಯೇ ಆ ಕನ್ಯೆಯು ಮುಗಿಲಿಗೆ ಹಾರಿ ಕಂಸನ ತಲೆಗೆ ತನ್ನ ಕಾಲಿನಿಂದ ಒದೆದು ಆಕಾಶಗಾಮಿನಿಯಾದಳು. ಮತ್ತು ಎಂಟು ತೋಳುಗಳಿಂದ ಶೋಭಾಯಮಾನಳಾಗಿ ಮುಗಿಲು ಮಂಟಪದಲ್ಲಿ ನಿಂತೇ ಮಾತನಾಡಿದಳು, ಕಂಸನನ್ನು ಉದ್ದೇಶಿಸಿ.

**ಅಷ್ಟಭುಜಾದೇವಿ:-** ಮೂರ್ಖಾ, ನನ್ನನ್ನು ಕೊಲ್ಲಬೇಕು ಎಂಬ ನಿನ್ನ ಪ್ರಯತ್ನ ವ್ಯರ್ಥ. ಆದರೆ ನಿನ್ನನ್ನು ಕೊಲ್ಲುವ ಪ್ರಭು ಜಗತ್ತಿನಲ್ಲಿ ಹುಟ್ಟಿದ್ದಾನೆ. ಅವನು ನಿನ್ನನ್ನು ಸಂಹರಿಸುತ್ತಾನೆ.

ಹೀಗೆ ಹೇಳಿ ಆ ಅಷ್ಟಭುಜಾದೇವಿ ದೇವಗಂಧರ್ವರು ಹೊಗಳುತ್ತಿರುವಂತೆ ಹಿಮಾಚಲಪರ್ವತಕ್ಕೆ ತೆರಳಿದಳು. ಆಗ ಕಂಸ ಗಾಬರಿಯಾಗಿ ಹೆದರಿ ಹೌಹಾರಿದ. ಪ್ರಲಂಬ, ಚಾಣೂರ ಮೊದಲಾದ ತನ್ನ ವಿಶ್ವಾಸಿಗರಾದ ವೀರರನ್ನು ಬರಮಾಡಿಕೊಂಡ. ಅವರೆಲ್ಲರಿಗೂ ನಡುಗುವ ದನಿಯಿಂದ ಹೇಳಿದ.

**ಕಂಸ:-** ನಮ್ಮಿಂದ ತ್ರಸ್ತ ತಾಡಿತರಾದ ದೇವತೆಗಳು ಹಾಲ್ಗಡಲಿನಲ್ಲಿ ಪವಡಿಸಿದ ವಿಷ್ಣುವಿಗೆ ಶರಣು ಹೋದರು. ಅವನಿಗೆ ಎಲ್ಲ ಸಮಾಚಾರವನ್ನು ತಿಳಿಸಿ ಕೂಡಲೇ ಈ ದುಷ್ಟ ದೈತ್ಯಾಧಮರನ್ನೆಲ್ಲ ಸಂಹರಿಸು' ಎಂದು ಪ್ರಾರ್ಥಿಸಿಕೊಂಡರು. ದೇವತೆಗಳ ಈ ಬಿನ್ನಹವನ್ನು ಮನ್ನಿಸಿ ಜಗದೀಶ್ವರನು ದೇವಕಿಯ ಹೊಟ್ಟೆಯಿಂದ ಮನುಷ್ಯರೂಪ ತಳೆದು ಜನಿಸಿದ್ದಾನೆ. ಅವನು ಎಲ್ಲಿ ಇರುತ್ತಾನೆ ಎಂಬುದನ್ನು ಮಾತ್ರ ನಾವು ಅರಿಯಲಾರೆವು. ಆದುದರಿಂದ ನೀವೆಲ್ಲ ರಾಕ್ಷಸರು ಮನಬಂದ ರೂಪ ವೇಷಗಳನ್ನು ತಳೆದು ದೇಶದಲ್ಲಿ ಇರುವ ಎಲ್ಲ ಬಾಲಕರನ್ನೂ ಕೊಂದುಬಿಡಿರಿ. ನೀವೆಲ್ಲರೂ ಕಾಮರೂಪಿಗಳಾದುದರಿಂದ ಬೇಕುಬೇಕಾದ ರೂಪಗಳನ್ನು ನಿಮಗೆ ಹೊಂದಲು ಬರುವದು. ಬಾಲಕರು ಹೆಚ್ಚಾಗಿರುವ ಪ್ರದೇಶಗಳಿಗೆ ಹೋಗಿ ತಕ್ಕುದಾದ ವೇಷವನ್ನು

ಹಾಕಿಕೊಂಡು ಉಚಿತ ರೂಪವನ್ನು ತಾಳಿ ಜನರಿಗೆ ಸಂಶಯ ಬಾರದಂತೆ ನಗರಗಳಲ್ಲಿ ಪ್ರವೇಶಮಾಡಿ ಎಳೆ ಮಕ್ಕಳನ್ನೆಲ್ಲ ಸಂಹರಿಸಿರಿ, ಅದರಲ್ಲಿಯೂ ಬಲಿಷ್ಠರಾದ ಬಾಲಕರನ್ನು ಮೊದಲು ಕತ್ತು ಹಿಸುಕಿ ಹಾಕಿರಿ.

ಹೀಗೆ ಕಂಸನು ತನ್ನ ಅನುಯಾಯಿಗಳಿಗೆ ಆದೇಶ ನೀಡಿದ ಮತ್ತು ವಸುದೇವ ದೇವಕಿಯರ ಬಳಿಗೆ ಬಂದು ಅವರನ್ನು ಸಂತೈಸಿ ಬಿಡುಗಡೆ ಮಾಡಿದ. ಅವನು ಅರಮನೆಗೆ ತೆರಳಿದ ಬಳಿಕ ವಸುದೇವ ನಂದಗೋಕುಲಕ್ಕೆ ಧಾವಿಸಿದ. ಅಲ್ಲಿ ಯಶೋಧೆಯ ಮಡಿಲಲ್ಲಿ ಬೆಳೆಯುತ್ತಿರುವ ತನ್ನ ಎಳೆ ಕಂದನನ್ನು ನೋಡಿ ಆನಂದಪಟ್ಟ ಮತ್ತು ನಂದನ ಪತಿಯಾದ ಯಶೋದೆಗೆ ಹೇಳಿದ.

**ವಸುದೇವ:-** ಸುಂದರಿ, ಈ ನಿನ್ನ ಮಗನಾದ ಕೃಷ್ಣನಂತೆ ನನ್ನಿಂದ ರೋಹಿಣಿಯಲ್ಲಿ ಜನಿಸಿದ ಈ ಬಲರಾಮನನ್ನೂ ನಿನ್ನ ಮಗನೆಂದೇ ತಿಳಿದು ರಕ್ಷಣೆ ಮಾಡು. ಕಂಸನ ಹೆದರಿಕೆಯಿಂದ ಇವನನ್ನು ನಿನ್ನ ಬಳಿಗೆ ತಂದು ಇರಿಸಿದ್ದೇನೆ.

ವಸುದೇವನ ಮಾತಿನಂತೆ ನಂದಪತ್ನಿಯಾದ ಯಶೋದೆಯು ಆ ರಾಮ ಕೃಷ್ಣರಿಬ್ಬರನ್ನೂ ಆನಂದದಿಂದ ತನ್ನ ಹೊಟ್ಟೆಯ ಮಕ್ಕಳಂತೆ ಪಾಲಿಸಿ ಪೋಷಿಸಲು ಸಮ್ಮತಿಸಿದಳು. ಅದರಿಂದ ಪರಿತೃಪ್ತನಾದ ವಸುದೇವನು ಅಲ್ಲಿಂದ ಹೊರಟು ಮಥುರಾ ಪಟ್ಟಣಕ್ಕೆ ನಡೆದ.

ಒಂದು ದಿನ ವಸುದೇವನಿಗೆ ಗರ್ಗಾಚಾರ್ಯರ ಭೇಟಿ ಆಯಿತು. ಆಗ ವಸುದೇವನು ಗರ್ಗಾಚಾರ್ಯರಿಗೆ ನಂದಗೋಕುಲದಲ್ಲಿ ಇರುವ ತನ್ನ ಇಬ್ಬರೂ ಮಕ್ಕಳಿಗೆ ಕ್ಷತ್ರಿಯೋಚಿತವಾದ ನಾಮಕರಣ ಮಹೋತ್ಸವವನ್ನು ಮಾಡಿಸಬೇಕು ಎಂದು ಬೇಡಿಕೊಂಡ. ಆಗ ಗರ್ಗಾಚಾರ್ಯರು ವಸುದೇವನ ಬಿನ್ನಹದಂತೆ ನಂದವ್ರಜಕ್ಕೆ ಬಂದರು. ಅಲ್ಲಿ ಇರುವ ವಸುದೇವನ ಇಬ್ಬರು ಮಕ್ಕಳಿಗೆ ವಿಧಿಪೂರ್ವಕವಾಗಿ ಕ್ಷತ್ರಿಯೋಚಿತವಾದ ಜಾತಕರ್ಮ ಸಂಸ್ಕಾರವನ್ನು ಮಾಡಿದರು ಮತ್ತು ಇಬ್ಬರಿಗೂ ಶಾಸ್ತ್ರೋಕ್ತವಾಗಿ ನಾಮಕರಣ ವಿಧಾನವನ್ನು ನೆರವೇರಿಸಿದರು. ವಸುದೇವನಿಂದ ರೋಹಿಣಿಯಲ್ಲಿ ಹುಟ್ಟಿದ ಹಿರಿಯಮಗನಿಗೆ ಸಂಕರ್ಷಣ, ರೌಹಿಣೇಯ, ಬಲಭದ್ರ ಬಲರಾಮ, ಮಹಾಬಲ ಮುಂತಾದ ಹೆಸರುಗಳನ್ನು ಇಟ್ಟರು. ಎರಡನೆಯ ಮಗನಿಗೆ ''ಕೃಷ್ಣ'' ಎಂದು ಹೆಸರಿಟ್ಟರು. ಅವನೇ ಮುಂದೆ ಲೋಕದಲ್ಲಿ ಶ್ರೀಧರ, ಶ್ರೀಕರ, ಅನಂತ, ಜಗತ್ಪತಿ, ವಾಸುದೇವ, ಹೃಷೀಕೇಶ ಮುಂತಾದ ಅನೇಕ ನಾಮಗಳಿಂದ ಸುಪ್ರಸಿದ್ಧನಾದ. ನಂದಗೋಕುಲದಲ್ಲಿ ಇದ್ದ, ಜನರೆಲ್ಲ ಸಾಮಾನ್ಯವಾಗಿ ಆ ವಸುದೇವ ಕುಮಾರರನ್ನು ರಾಮಕೃಷ್ಣ ಎಂದು ಕರೆಯುತ್ತಿದ್ದರು. ಹೀಗೆ ಗರ್ಗಾಚಾರ್ಯರು ನಂದಗೋಲದಲ್ಲಿ ಇದ್ದ ವಸುದೇವನ ಮಕ್ಕಳಿಗೆ ಹೆಸರಿಡುವ ಸಮಾರಂಭವನ್ನು ವಿಧಿ ವಿಹಿತವಾದ ರೀತಿಯಿಂದ ನೆರವೇರಿಸಿ ಮಥುರಾ ಪಟ್ಟಣಕ್ಕೆ ತೆರಳಿದರು.

ಮುಂದೆ ಒಂದು ದಿನ ಮಕ್ಕಳನ್ನೆಲ್ಲ ಸಂಹರಿಸುವ ಪೂತನಾ ಎಂಬ ರಕ್ಕಸಿಯನ್ನು ಕಂಸನು ನಂದಗೋಕುಲಕ್ಕೆ ಅಲ್ಲಿಯ ಚಿಕ್ಕ ಮಕ್ಕಳನ್ನು ಕೊಲ್ಲಲಿಕ್ಕಾಗಿ ಕಳಿಸಿಕೊಟ್ಟ. ಬಾಲಘಾತನಿಯಾದ ಆ ಪೂತನಿಯು ರಾತ್ರಿಕಾಲದಲ್ಲಿ ನಂದವ್ರಜಕ್ಕೆ ಬಂದಳು. ಯಶೋದೆಯ ಮಗನಾದ ಕೃಷ್ಣನನ್ನು ಆಡಿಸುವ ನೆಪದಿಂದ ತನ್ನ ತೊಡೆಯ ಮೇಲೆ

ಮಲಗಿಸಿಕೊಂಡಳು. ವಿಷಬಳಿದ ತನ್ನ ಸ್ತನವನ್ನು ಅವನ ಬಾಯಲ್ಲಿ ಇಟ್ಟಳು. ತಕ್ಷಣದಲ್ಲಿ ಕೃಷ್ಣನಿಗೆ ತಿಳಿದು ಹೋಯಿತು. 'ಇವಳು ರಕ್ಕಸಿ. ಎಂದು ಉಲ್ಬಣವಾದ ನಂಜನ್ನು ತೊಡೆದ ಆ ಪೂತನಿಯ ಮೊಲೆಯನ್ನು ಕೃಷ್ಣನು ತನ್ನ ಹಲ್ಲು ಹಚ್ಚಿ ಹೀರಿದ. ಅವನ ಪ್ರಾಣಾಂತಿಕವಾದ ಆ ಸ್ತನಪಾನದಿಂದ ಆ ರಕ್ಕಸಿಯು ಹತಳಾಗಿ ಭಯಂಕರವಾದ ಶಬ್ದದಿಂದ ಚೀತ್ಕಾರಮಾಡಿ, ದೇಹದ ಒಳಗಿನ ಸ್ನಾಯ ಬಂಧವನೆಲ್ಲ ಸಡಿಲಾಗಿ ನೆಲದ ಮೇಲೆ ಉರುಳಿದಳು. ಅವಳ ಚೀತ್ಕಾರದ ಘೋರಧ್ವನಿಯಿಂದ ಭೂಮ್ಯಾಕಾಶಗಳೆರಡೂ ತುಂಬಿದವು. ಅದರಿಂದ ಹೆದರಿ ಹೌಹಾರಿದ ಎಲ್ಲ ಗೋಪಾಲಕರೂ ಅಲ್ಲಿಗೆ ಓಡಿ ಬಂದರು. ಪೂತನಿಯ ಶವ ಪರ್ವತಕಾರಯವಾಗಿ ಬಿದ್ದುಕೊಂಡಿತ್ತು. ಆ ಘಾತಕಿಯಾದ ರಕ್ಕಸಿಯ ಎದೆಯ ಮೇಲೆ ಕೃಷ್ಣನು ಆನಂದದಿಂದ ಆಟ ಆಡುತ್ತಿದ್ದ. ಗೋಪಾಲಕರು ಮೊದಲು ಆ ರಾಕ್ಷಸಿಯ ಉಪದ್ರವ ಆಗಬಾರದು ಎಂದು ಆ ಬಾಲಕೃಷ್ಣನಿಗೆ ಗೋಮಯ ಗೋಮೂತ್ರಗಳಿಂದ ಸ್ನಾನಮಾಡಿಸಿದರು. ಅನಂತರ ಈ ಸಮಾಚಾರವನ್ನು ಕೇಳಿ ನಂದಗೋಪನ ಮಡದಿಯಾದ ಯಶೋದೆಯು ಧಾವಿಸಿ ಬಂದಳು. ರಾಕ್ಷಸಿಯ ಕೈಯಿಂದ ಬದುಕಿ ಬಂದ ಆ ತನ್ನ ಕಂದನನ್ನು ಎತ್ತಿ ತಂದು ಭಗವಂತನ ಪುಣ್ಯನಾಮಗಳಿಂದ ಅವನ ಮೈಯನ್ನೆಲ್ಲ ತೊಳೆದು ಅಭ್ಯಂಗ ಸ್ನಾನ ಮಾಡಿಸಿದಳು.

ಅನಂತರ ಎಲ್ಲ ಗೋಪಾಲಕರೂ ಕೂಡಿ ಪೂತನಿಯ ದೈತ್ಯ ದೇಹವನ್ನು ಕಡಿದು ಊರ ಹೊರಗೆ ಒಟ್ಟಿ ಕೊಳ್ಳಿ ಕೊಟ್ಟು ಸುಟ್ಟು ಹಾಕಿದರು.

ಮುಂದೆ ಮತ್ತೆ ಒಂದು ದಿನ ಆ ನಂದಗೋಕುಲದಲ್ಲಿ ಯಶೋದೆಯು ಕೃಷ್ಣನನ್ನು ಒಂದು ಚಕ್ಕಡಿಯ ಕೆಳಗೆ ಮಲಗಿಸಿದ್ದಳು. ಆಗ ಆ ಮಗು ತನ್ನ ಎರಡೂ ಕಾಲುಗಳನ್ನು ಆಚೀಚೆ ಚಾಚಿ ಅಳತೊಡಗಿತು. ಕೂಸಿನ ಕಾಲಿನ ತುದಿ ತಾಕಿ ಒಮ್ಮೆಲೇ ಆ ಬಂಡಿಯು ಹೊರಳಿ ಬಿದ್ದಿತು. ಆ ಬಂಡಿಯಲ್ಲಿದ್ದ ಕೊಡ, ಬಿಂದಿಗೆ, ಮಡಿಕೆ ಎಲ್ಲವೂ ಕೆಳಗೆ ಬಿದ್ದು ಒಡೆದು ಪುಡಿಪುಡಿಯಾದವು. ಆಗ ಎಲ್ಲ ಗೋಪಗೋಪಿಯರಿಗೂ ಅತ್ಯಾಶ್ಚರ್ಯ. ಒಳಗೆಲ್ಲ ಸಾಮಾನು ತುಂಬಿದ ಆ ಬಂಡಿಯು ಒಮ್ಮೆಲೆ ಈ ಎಳೆ ಕೂಸಿನ ಕಾಲು ತಾಕುವ ಮಾತ್ರದಿಂದ ಹೇಗೆ ಹೊರಳಿ ಬೋರಲಾಗಿ ಬಿದ್ದಿತು? ಈ ಅಕಸ್ಮಿಕಕ್ಕೆ ಏನು ಕಾರಣ? ಎಂದು ಎಲ್ಲರಿಗೂ ಯೋಚಿಸಿದಷ್ಟು ಅತ್ಯಾಶ್ಚರ್ಯವೇ ಆಯಿತು.

ಹೀಗೆ ಯಶೋದೆಯ ಹಾಲು ಕುಡಿದು ಬೆಳೆದ ಆ ಬಾಲಕರಿಬ್ಬರೂ ಆ ನಂದ ವ್ರಜದ ಸುತ್ತಲೂ ಮಂಡೆವೂರಿ ಕೈಗಳನ್ನು ನೆಲಕ್ಕೆ ಹಚ್ಚಿ ಓಡಾಡತೊಡಗಿದರು.

ಒಂದು ದಿನ ಆ ಗೋಕುಲದಲ್ಲಿ ಆಡುತ್ತಲಿರುವ ಗೋವಿಂದನನ್ನು ತೃಣಾವರ್ತ ಎಂಬ ಕಂಸನ ದೂತನಾದ ರಾಕ್ಷಸನು ಎತ್ತಿಕೊಂಡು ಮುಗಿಲಿಗೆ ಜಿಗಿದ. ಅಲ್ಲಿಯೇ ಬಾಲಕೃಷ್ಣ ತೃಣಾವರ್ತನನ್ನು ಸಂಹರಿಸಿದ. ಹೀಗೆ ಆಕಾಶದಲ್ಲಿಯೇ ಅರೆಜೀವನಾದ ಆ ದೈತ್ಯ ನೆಲದ ಮೇಲೆ ಬಿದ್ದ. ಅವನ ದೇಹ ಜಜ್ಜಿ ಪುಡಿ ಪುಡಿಯಾಯಿತು.

ಅನಂತರ ಆ ಮಧುಸೂದನ ಆ ವ್ರಜಭೂಮಿಯ ತುಂಬ ಓಡಾಡಿ ಆಟವಾಡಿ ನಕ್ಕು ನಲಿದು ಹಿಗ್ಗುತ್ತಿದ್ದ. ಗೋಪಿಯರ ಮನೆಮನೆಗೆ ಹೋಗಿ ಕಳ್ಳತನದಿಂದ ಹಾಲು ಕುಡಿದು, ಮೊಸರು ಕದ್ದು, ಬೆಣ್ಣೆ ಮೆದ್ದು ಓಡಿ ಬರುತ್ತಿದ್ದ. ಕೃಷ್ಣನ ಕಾರಸ್ಥಾನವನ್ನೆಲ್ಲ ಬಣ್ಣಿಸಿ ಗೋಪಿಯರು ಯಶೋದೆಯ ಮುಂದೆ ದೂರುತ್ತಿದ್ದರು. ಅದರಿಂದ ಕೋಪಗೊಂಡ

ಯಶೋದೆಯು ಆ ಕೃಷ್ಣನನ್ನು ಹಗ್ಗದಿಂದ ಬಿಗಿದು ತಮ್ಮ ಮನೆಯ ಅಂಗಳದಲ್ಲಿಟ್ಟ ಒರಳಿಗೆ ಕಟ್ಟಿ ಹಾಕಿದಳು. ತಾನು ಹಾಲು. ಮೊಸರು ಮಾರಲು ಹೊರಗೆ ಹೋದಳು. ಆಗ ಒಳಿಗೆ ಕಟ್ಟಿ ಹಾಕಲ್ಪಟ್ಟ ಕೃಷ್ಣನು ಆ ತನ್ನ ಹೊಟ್ಟೆಗೆ ಬಿಗಿದ ಹಗ್ಗವನ್ನು ಜಗ್ಗುತ್ತ ಆ ಒರಳನ್ನು ಕೂಡ ಎಳೆದುಕೊಂಡೇ ನಡೆದ. ಅಂಬೆಗಾಲುಲಿಕ್ಕುತ್ತ ತನ್ನ ಹೊಟ್ಟೆಗೆ ಬಿಗಿದ ಹಗ್ಗದ ತುದಿಯಿಂದ ಒರಳನ್ನು ಕೂಡ ತನ್ನ ಹಿಂದಿನಿಂದ ಸೆಳೆದುಕೊಂಡು ನಂಜದವ್ರಜದ ಬೀದಿಯಲ್ಲಿ ಮುಂದೆ ನಡೆದ. ಅಲ್ಲಿಯ ಸಂದಿಗೊಂದಿಗಳನ್ನು ದಾಟಿ, ಗುಡಿಸಲುಗಳ ಗಡಿಯನ್ನು ಮೀರಿ ಊರ ಹೊರಗೆ ಇರುವ ಜೋಡು ಮತ್ತಿ ಮರಗಳ ಬಳಿಗೆ ಬಂದ. ಎರಡು ಅವಳಿಮರಗಳು ಟಿಸಿಲು ವಡೆದು ಬಾನೆತ್ತರ ಬೀಸಾಗಿ ಬೆಳೆದು ನಿಂತಿದ್ದವು. ಗೋವಿಂದನು ತನ್ನ ಬೆನ್ನ ಹಿಂದಿನಿಂದ ದೊಡ್ಡ ಒರಳನ್ನು ಎಳೆಯುತ್ತ ಆ ಜೋಡು ಮರಗಳ ಬಳಿಗೆ ಬಂದು ಅವರೆಡು ವೃಕ್ಷಗಳ ನಡುವೆ ತಾನು ತೂರಿಕೊಂಡು ಆಚೆ ಬಂದ. ಅವನು ಹಾಗೆಯೇ ಮುಂದೆ ಹೋಗಿ ಒರಳನ್ನು ಜಗ್ಗಿದ. ಆ ಒರಳು ಆ ಜೋಡಿಮರಗಳ ಬೊಡ್ಡೆಗೆ ತಟ್ಟಿ ನಿಂತು ಕೊಂಡಿತು. ಮುಂದೆ ಹೋದ ಕೃಷ್ಣ ಹಗ್ಗದಿಂದ ಒರಳನ್ನು ಮತ್ತೆ ಜಗ್ಗಿದಾಗ ಆ ಎರಡೂ ಹೆಮ್ಮರಗಳು ಒಮ್ಮೆಲೇ ಹೊರಳಿ ಉರುಳಿ ಬಿದ್ದವು. ಆ ಎತ್ತರವಾದ ಮರಗಳು ಮುರಿದು ನೆಲಕ್ಕೆ ಉರುಳಿ ಬೀಳುವಾಗ ಭಯಂಕರವಾದ ಸಪ್ಪಳವಾಯಿತು. ಆಗ ಎಲ್ಲ ಗೋಕುಲದಲ್ಲಿಯ ಹಿಂಡು ಹಿಂಡು ಗೋಪಾಲಕರು ಓಡಿ ಬಂದರು. ಮುಗಿಲೆತ್ತರ ಬೆಳೆದ ಎರಡೂ ಮತ್ತಿ ಮರಗಳು ಬೇರು ಸಹಿತ ಬುಡ ಮೇಲಾಗಿ ಕೃಷ್ಣನ ಆಚೆ ಈಚೆ ಮುರಿದು ಬಿದ್ದಿದ್ದವು. ಆಗ ಯಶೋದೆಯು ಧಾವಿಸಿ ಬಂದು ಕೂಸಿನ ಹೊಟ್ಟೆಗೆ ಬಿಗಿದ ಹಗ್ಗವನ್ನು ಬಿಚ್ಚಿ ಆ ಮಗುವನ್ನು ಎತ್ತಿಕೊಂಡು ಪ್ರೀತಿಯಿಂದ ಹಾಲೂಡಿಸಿದಳು.

ತಾಯಿಯು ಅವನ ಹೊಟ್ಟೆಗೆ ದಾಮದಿಂದ,ಅಂದರೆ ಹಗ್ಗದಿಂದ ಬಿಗಿದು ಕಟ್ಟಿದರ ಮೂಲಕ ಅವನನ್ನು ಅಂದಿನಿಂದ ದಾಮೋದರ ಎಂದು ಕರೆದರು ಎಲ್ಲ ಋಷಿಗಳು. ಶಾಪದಿಂದ ಅವಳಿಮರಗಳಾಗಿ ಹುಟ್ಟಿದ ಕಿನ್ನರರು ಕೃಷ್ಣನ ದೇಹಸ್ಪರ್ಶದಿಂದ ತಮ್ಮ ಈ ಜಡಜನ್ಮವನ್ನು ನೀಗಿ ಗಿಡದ ದೇಹದಿಂದ ಮುಕ್ತರಾಗಿ ದಿವ್ಯ ಶರೀರವನ್ನು ಪಡೆದರು. ಬಳಿಕ ನಂದಗೋಪನೇ ಮೊದಲಾದ ಹಿರಿಯ ಗೋಪಾಲಕರೆಲ್ಲರೂ ಒಂದು ಕಡೆ ಸೇರಿದರು. ನಂದವ್ರಜದಲ್ಲಿ ಒಂದರ ಮೇಲೆ ಒಂದರಂತೆ ಅನರ್ಥಗಳು ಉತ್ಪಾತಗಳು ಮೇಲಿಂದ ಮೇಲೆ ಜರುಗುತ್ತಿರುವುದನ್ನು ಕಂಡು ಆ ಸ್ಥಳವನ್ನೇ ತೊರೆದು ಹೋಗಬೇಕು ಎಂದು ನಿರ್ಧರಿಸಿದರು. ಅದರಂತೆ ಅವರು ಅಲ್ಲಿಂದ ತುಸು ದೂರದಲ್ಲಿರುವ ವೃಂದಾವನಕ್ಕೆ ಬಂದರು. ಯಮುನೆಯ ತೀರದಲ್ಲಿರುವ ಆ ವೃಂದಾವನ ಹಚ್ಚು ಹಸಿರು ಮುರಿಯುವ ಹುಲ್ಲುಗಾವಲುಗಳಿಂದಲೂ, ತಂಪೆರೆವ ತರುಸ್ತೋಮಗಳಿಂದಲೂ, ಹೂವಿನ ಸುಗ್ಗಿಯನ್ನೇ ಹೊತ್ತು ನಿಂತಿರುವ ಸುಂದರವಾದ ಬಗೆ ಬಗೆಯ ಹೂವಿನ ಹಂದರಗಳಿಂದಲೂ, ಬೇರೆ ಬೇರೆ ಬಳ್ಳಿವಾಡಗಳ ಮಂಜು ಲತಾ ಕುಂಜಗಳಿಂದಲೂ ಪರಮ ರಮಣೀಯವಾಗಿತ್ತು. ಗೋವುಗಳಿಗೂ ಗೋಪಿಕಾಸ್ತ್ರೀಯರಿಗೂ ಅತ್ಯಂತ ಹಿತಕರವಾದ ಸೌಕರ್ಯ ಸೌಲಭ್ಯಗಳೆಲ್ಲವೂ ಅಲ್ಲಿ ಇದ್ದವು. ರಾಮಕೃಷ್ಣರು ಅಲ್ಲಿ ಬಂದ ಬಳಿಕ ಆನಂದದಿಂದ ತುರುಕರುಗಳನ್ನು ಕಾಯತೊಡಗಿದರು.

ಒಂದು ದಿನ ಬಕಾಸುರ ಎಂಬ ರಕ್ಕಸನು ಒಂದು ಬಕಪಕ್ಷಿಯ ರೂಪದಿಂದ ಅಲ್ಲಿಗೆ ಬಂದ. ಕರುಗಳ ಹಿಂಡಿನಲ್ಲಿ ಆಟವಾಡುತ್ತಲಿರುವ ಆ ಕೃಷ್ಣನನ್ನು ಕೊಲ್ಲಬೇಕು ಎಂದು

ಆ ದೈತ್ಯಬಕವು ಮೆಲ್ಲಮೆಲ್ಲನೇ ಅವನಿದ್ದಲ್ಲಿಗೆ ಬರತೊಡಗಿತು. ಅದನ್ನು ದೂರಿಂದಲೇ ನೋಡಿ ವಾಸುದೇವನು ಒಂದು ಇಟ್ಟಿಗೆಯ ತುಂಡನ್ನು ಎತ್ತಿ ಆ ಬಕಪಕ್ಷಿಯ ರೆಕ್ಕೆಗೆ ಹೊಡೆದ. ಕೂಡಲೇ ಆ ಬಕಾಸುರನು ಸತ್ತು ನೆಲಕ್ಕೆ ಉರುಳಿದ.

ಮುಂದೆ ಕೆಲವು ದಿನಗಳ ಬಳಿಕ ಒಂದು ದಿನ ಆಕಳು ಹಾಗೂ ಕರುಗಳನ್ನು ಕಾಯುತ್ತ ಕೃಷ್ಣನು ರಾಮನೊಂದಿಗೆ ನೇರಳೆಗಿಡದ ನೆರಳಿನಲ್ಲಿ ಮಲಗಿಕೊಂಡಿದ್ದ. ಆಗ ಅಲ್ಲಿಗೆ ಎಲ್ಲ ದೇವತೆಗಳೊಂದಿಗೆ ಬ್ರಹ್ಮದೇವರು ಆಗಮಿಸಿದರು. ಕೃಷ್ಣನದರ್ಶನಕ್ಕಾಗಿ ಅವರೆಲ್ಲರೂ ಬಂದಾಗ ರಾಮಕೃಷ್ಣರಿಬ್ಬರೂ ಮಲಗಿಕೊಂಡಿದ್ದರು. ಅದನ್ನು ನೋಡಿ ಬ್ರಹ್ಮದೇವನು ಅಲ್ಲಿ ಬರುವ ಬಾಲ ಗೋಪಾಲಕರನ್ನೂ ಮತ್ತು ಎಲ್ಲ ಕರುಗಳನ್ನೂ ಎತ್ತಿಕೊಂಡು ಒಯ್ದನು. ರಾಮಕೃಷ್ಣರು ನಿದ್ದೆ ಮಾಡಿ ಎದ್ದ ಬಳಿಕ ಕಣ್ಣು ತೆಗೆದು ನೋಡಿದರು. ಒಂದು ಕರುವೂ ಅಲ್ಲಿ ಇರಲಿಲ್ಲ. ಹಾಗೂ ತನ್ನ ಜೊತೆಗಾರರಾದ ಗೋಪಾಲ ಬಾಲಕರೂ ಕಣ್ಮರೆಯಾಗಿದ್ದರು. ಆಗ ಕೃಷ್ಣನು ತತ್‌ಕ್ಷಣದಲ್ಲಿಯೇ ತನ್ನ ಶಕ್ತಿಯಿಂದ ಬ್ರಹ್ಮದೇವರು ಎತ್ತಿಕೊಂಡು ಹೋದ ಗೋಪಾಲ ಬಾಲಕರು ಮತ್ತು ಆಕಳಕರುಗಳೂ ಎಷ್ಟು ಇದ್ದವೋ ಅಷ್ಟು ಹೊಸಗೋಪಬಾಲಕರನ್ನೂ ಗೋವತ್ಸಗಳನ್ನೂ ಅಲ್ಲಿಯೇ ತಾನೇ ಹೊಚ್ಚ ಹೊಸದಾಗಿಯೇ ಸೃಷ್ಟಿ ಮಾಡಿದ. ಮೊದಲಿನ ಬಾಲಕರಂತೆಯೇ ಮತ್ತು ಕರುಗಳಂತೆಯೇ ಬಣ್ಣ, ಕಣ್ಣು, ಮೂಗು, ಎತ್ತರ, ನಡಿಗೆ, ನಿಲ್ಲುವು, ಚೆಲುವು ಎಲ್ಲವೂ ಅದೇ ಪ್ರಕಾರವಾಗಿಯೇ ಈ ಹೊಸ ಶಿಶುವತ್ಸಗಳಿಗೂ ಇದ್ದುದರಿಂದ ಯಾರಿಗೂ ಇವು ಬೇರೆ ಕರುಗಳು ಎಂದು ಕಲ್ಪನೆಯೇ ಬರಲಿಲ್ಲ. ಮನೆಗೆ ಸಾಯಂಕಾಲದಲ್ಲಿ ಕೃಷ್ಣ ಆ ಗೋಪ ಬಾಲಕರೊಂದಿಗೆ ತಿರುಗಿ ಬಂದಾಗ ಅವರವರ ತಾಯಿತಂದೆಗಳು ಎಂದಿನಂತೆ ಅವು ತಮ್ಮ ಶಿಶುಗಳೆಂದೇ ಭಾವಿಸಿ ಮೈದಡವಿ ಹಾಲುಣಿಸಿ ಆನಂದ ಪಟ್ಟವು.

ಹೀಗೆ ಒಂದು ವರ್ಷಕಾಲ ಬ್ರಹ್ಮದೇವರು ಗೋಪ ಬಾಲಕರನ್ನೂ ಗೋವತ್ಸಗಳನ್ನೂ ಎತ್ತಿಕೊಂಡು ಹೋದರೂ ಕೃಷ್ಣನ ಸೃಷ್ಟಿ ಸಾಮರ್ಥ್ಯದಿಂದ ಹೊಸ ಗೋಪಬಾಲಕರು ಹಾಗೂ ಗೋವತ್ಸಗಳ ಸೃಷ್ಟಿಯಾಗಿ ಎಲ್ಲ ಕಾರ್ಯಕ್ರಮಗಳು ಯಥಾ ಸಾಂಗವಾಗಿ ನಡೆದವು. ಆ ಕರುಗಳು ಹಾಗೂ ಗೋಪಬಾಲಕರು ಕಳೆದು ಹೋದ ಸಮಾಚಾರ ಯಾರಿಗೂ ಗೊತ್ತೇ ಆಗಲಿಲ್ಲ. ಹೀಗೆ ಒಂದು ವರುಷ ಕಳೆದ ಬಳಿಕ ಬ್ರಹ್ಮದೇವರು ತಾವು ಅಪಹರಿಸಿ ಒಯ್ದ ಗೋಪಬಾಲಕರನ್ನೂ ಆಕಳು ಕರುಗಳನ್ನೂ ತಂದು ಕೃಷ್ಣನಿಗೆ ಒಪ್ಪಿಸಿದರು. ಮತ್ತು ತಮ್ಮ ತಪ್ಪನ್ನು ಒಪ್ಪಿಕೊಂಡು ಭಯಭ್ರಾಂತರಾಗಿ ಆ ಭಗವಂತನನ್ನು ಕುರಿತು ಮಾತನಾಡಿದರು.

ಬ್ರಹ್ಮ:-

ನಮೋ ನಮಸ್ತೆ ಸರ್ವಾತ್ಮನ್ ।
ತತ್ವಜ್ಞಾನ ಸ್ವರೂಪಿಣೇ ॥
ನಿತ್ಯಾನಂದ ಸ್ವರೂಪಾಯ ।
ಪ್ರಯತಾತ್ಮನ್ ಮಹಾತ್ಮನೇ ॥

ಸರ್ವಸ್ವಾಮಿಯೂ, ಜ್ಞಾನಸ್ವರೂಪಿಯೂ, ನಿತ್ಯಾನಂದ ಸ್ವರೂಪಿಯೂ, ಪವಿತ್ರಾತ್ಮನೂ, ಮಹಾತ್ಮನೂ, ಆದ ನಿನಗೆ ನಮೋ ನಮಃ. ನಾನು ನಿನ್ನ

ಮಹಾಮಹಿಮೆಯನ್ನು ತಿಳಿಯಲಾರೆ. ನೀನು ರಕ್ಷಿಸುತ್ತಲಿರುವ ಕರುಗಳನ್ನೆಲ್ಲ ನಾನು ಅಪಹರಿಸಿದೆ. ಈ ನನ್ನ ಮಹಾಪರಾದವನ್ನು ಕ್ಷಮಿಸು. ಶರಣು ಬಂದವರನ್ನೂ ಕರುಣೆಯಿಂದ ಕಾಪಾಡುವ ಭಕ್ತವತ್ಸಲನಲ್ಲವೇ ನೀನು !

ಹೀಗೆ ಬ್ರಹ್ಮದೇವರು ಶ್ರೀಹರಿಯನ್ನು ಸ್ತೋತ್ರ ಮಾಡಿ ನಮಸ್ಕರಿಸಿದರು. ತಾವು ಮಾಡಿದ ವತ್ಸಾಪಹರಣದ ತಪ್ಪಿಗೆ ಕ್ಷಮೆಯನ್ನು ಕೇಳಿದರು. ಆ ಎಲ್ಲ ಕರುಗಳನ್ನು ತಂದು ಆ ಭಗವಂತನಿಗೆ ಒಪ್ಪಿಸಿದರು. ಅನಂತರ ಕೃಷ್ಣಪ್ರಭುವಿನ ಅಪ್ಪಣೆ ಪಡೆದು ಸತ್ಯಲೋಕಕ್ಕೆ ತೆರಳಿದರು. ಅನಂತರ ಗೋಪಾಲಕೃಷ್ಣನು ಎಲ್ಲ ಕರು ಹಾಗೂ ಗೊಲ್ಲಬಾಲಕರೊಡನೆ ನಂದಗೋಕುಲಕ್ಕೆ ತೆರಳಿದ.

ಕೆಲವು ದಿನ ಕಳೆದ ಬಳಿಕ ಒಮ್ಮೆ ಕೃಷ್ಣ ಗೋಪಬಾಲಕರೊಂದಿಗೆ ಕೂಡಿ ಯಮುನಾ ನದಿಗೆ ಆಗಮಿಸಿದ. ಆ ನದಿಯ ಒಂದು ಮಡುವಿನಲ್ಲಿ ಕಾಲೀಯ ಎಂಬ ಘೋರ ಸರ್ಪ ತನ್ನ ಕುಟುಂಬ ಪರಿವಾರದೊಂದಿಗೆ ನೆಲೆಸಿತ್ತು. ಆ ಕಾಳಿಂಗನ ಉಲ್ಬಣವಾದ ವಿಷದಿಂದ ಯಮುನೆಯ ನೀರು ಎಲ್ಲವೂ ವಿಷಮಯವಾಗಿದ್ದಿತು. ಅದನ್ನು ತಿಳಿದು ಕೃಷ್ಣನು ಆ ಹಾವಿನ ಮಡುವಿನಲ್ಲಿ ಜಿಗಿದು ಸಾವಿರ ಹೆಡೆಯ ಆ ಕಾಳಿಯ ಸರ್ಪವನ್ನು ತನ್ನ ಕಾಲಿನಿಂದ ತುಳಿದು ಹಾಕಿದ. ಆ ಘೋರ ನಾಗನ ನಿಮಿರಿ ನಿಂತ ಹೆಡೆಗಳ ಮೇಲೆ ತನ್ನ ಅಡಿಯನ್ನಿಟ್ಟು ಲೀಲೆಯಿಂದ ಕುಣಿದು ಕುಪ್ಪಳಿಸಿದ. ಕೃಷ್ಣನ ಪಾದಾಘಾತದಿಂದ ತಾಡಿತ ಪೀಡಿತನಾಗಿ ಆ ಕಾಳಿಂಗ ಸರ್ಪವು ನೆತ್ತರನ್ನು ಕಕ್ಕಿ ನಿತ್ರಾಣನಾಗಿ ಕೃಷ್ಣನ ಪಾದ ಪ್ರಹಾರದ ಹೊಡೆತವನ್ನು ತಾಳಲಾರದೇ ಮೂರ್ಛಿತನಾಗಿ ಬಿದ್ದ. ಅವನ ಸಾವಿರ ಹೆಡೆಗಳನ್ನು ತುಳಿ ತುಳಿದು ನಿಶ್ಶೇಷ್ಟ ಗೊಳಿಸಿದ್ದ ಶ್ರೀಕೃಷ್ಣ. ಕೆಲನಿಮಿಷಗಳ ಮೇಲೆ ಮೂರ್ಛೆ ತಿಳಿದು ಎದ್ದು ಆ ಕೃಷ್ಣನಿಗೇ ಶರಣುಹೋದ ಕಾಲೀಯ. ಕೃಷ್ಣನು ಅವನನ್ನು ನಿರ್ವಿಷನನ್ನಾಗಿ ಮಾಡಿ ಆ ಯಮುನಾ ನದಿಯ ಮಡುವಿನಿಂದ ಹೊರಗೆ ಕಳಿಸಿದ.

ಕಾಲಿಯನ ಹೆಡೆಗಳ ಮೇಲೆ ಕುಣಿದಾಡಿದ ಕೃಷ್ಣನ ಹೆಜ್ಜೆಗಳು ಮೂಡಿದ್ದರಿಂದ ಅವನಿಗೆ ಗರುಡನ ಹೆದರಿಕೆ ತಪ್ಪಿ ಹೋಗಿತ್ತು. ಆದರಿಂದ ಆ ಕಾಲೀಯ ನಾಗನು ನಿರ್ಭಯನಾಗಿ ಗೋವಿಂದನಿಗೆ ನಮಸ್ಕಾರ ಮಾಡಿ ಮಡದಿ ಮಕ್ಕಳು ಸಮೇತನಾಗಿ ಅಲ್ಲಿಂದ ಹೊರಟು ಹೋದ.

ಕಾಲೀಯನ ವಿಷದಿಂದ ದೂಷಿತವಾದ ಯಮುನೆಯ ನೀರಿನ ಮೇಲಿನ ಗಾಳಿ ಬೀಸಿ ದಂಡೆಯ ಮೇಲಿನ ಎಲ್ಲ ಮರ-ಬಳ್ಳಿಗಳೂ ಒಣಗಿ ಹೋಗಿದ್ದವು. ಹುಲ್ಲು ಹಸರು ಕಮರಿ ಹೋಗಿದ್ದಿತು. ಆ ಕಾಲೀಯ ನಾಗನಿಂದಾಗಿ ಆ ನದೀತೀರದ ಪ್ರದೇಶವೆಲ್ಲವೂ ಘೋರವಾದ ಬೆಂಗಾಡು ಆಗಿತ್ತು. ಕೃಷ್ಣ ಒಮ್ಮೆ ಕರುಣೆ ತುಂಬಿದ ತನ್ನ ದೃಷ್ಟಿಯನ್ನು ಅತ್ತ ಹರಿಸಿದ. ಕೂಡಲೆ ರುಕ್ಷ ಕಾಡಾಗಿ ನಿಂತ ಆ ನದೀತೀರದ ಪರಿಸರ ಪ್ರದೇಶವೆಲ್ಲವೂ ಮತ್ತೆ ಕೊನರಿ, ಚಿಗಿತು, ಕುಡಿ ಮಿಡಿ ಚಿಗುರು ಹೂ ಕಾಯಿಗಳು ದಾಂಗುಡಿಯಿಟ್ಟು, ಭರದಿಂದ ಬೆಳೆದು ವನಸಿರಿಯ ಸೊಬಗಿನಿಂದ ಹಚ್ಚ ಹಸಿರಾಗಿ ಕಂಗೊಳಿಸತೊಡಗಿತು.

ಮುಂದೆ ಪೌಗಂಡ ವಯಸ್ಸಿನಲ್ಲಿ ಕಾಲಿರಿಸಿದ ಬಲರಾಮ ಕೃಷ್ಣರು ಮನೋಹರವಾದ ವೃಂದಾವನದಲ್ಲಿ ತಮ್ಮ ಗೆಳೆಯರಾದ ಗೋಪಬಾಲಕರೊಂದಿಗೆ ಬಗೆ ಬಗೆಯ ಆಟಗಳನ್ನು ಆಡಿದರು. ಬೆಟ್ಟದಂಥ ಬೃಹತ್ಕಾಯವನ್ನು ಕಪಟದಿಂದ ಧರಿಸಿ ಎಲ್ಲ ತುರು ಕರುಗಳನ್ನು

ಗೋಪಾಬಾಲಕರನ್ನೂ ಕಬಳಿಸ ತೊಡಗಿದ ಸರ್ಪರೂಪಿಯಾದ ದೈತ್ಯನನ್ನು ಕೊಂದು ಹಾಕಿದ ಗೋವಿಂದ. ಕಾಲವನದಲ್ಲಿ ಕಾಲಿನಿಂದ ಹೊಡೆಯಲು ಬಂದ ಧೇನುಕಾಸುರನನ್ನು ಎರಡೂ ಕಾಲು ಹಿಡಿದು ತೂರಿ ಒಗೆದು ಸಂಹರಿಸಿದ. ಭಾಂಡೀರ ವನದಲ್ಲಿ ರಾಮಕೃಷ್ಣರು ತುರುಗಾಹಿ ತರಳರ ತಂಡದೊಡನೆ ಆಟ ಆಡುತ್ತಲಿದ್ದಾಗ ಪ್ರಲಂಬ ಎಂಬ ರಾಕ್ಷಸ ಒಬ್ಬ ಗೊಲ್ಲ ಬಾಲಕನ ವೇಷಹಾಕಿಕೊಂಡು ಆ ಗೆಳೆಯರ ಗುಂಪಿನಲ್ಲಿ ನುಗ್ಗಿದ. ಆಟದಲ್ಲಿ ಬಾಲರಾಮನನ್ನು ತನ್ನ ಹೆಗಲಿನ ಮೇಲೆ ಕೂಡಿಸಿಕೊಂಡು ಓಡುತ್ತ ಒಮ್ಮೆಲೇ ಗಗನಕ್ಕೆ ಹಾರಿದ. ಆಗ ಬಲರಾಮನಿಗೆ ಇವನು ತನ್ನನ್ನು ಕೊಲ್ಲಲು ಬಂದ ಘೋರ ರಾಕ್ಷಸ ಎಂದು ತಿಳಿಯಿತು. ಕೂಡಲೇ ಅವನು ಮುಷ್ಟಿ ಬಿಗಿದು ಆ ರಕ್ಕಸನ ನಡು ನೆತ್ತಿಯ ಮೇಲೆ ಬಿಗಿದ. ಆದರಿಂದ ರಕ್ತಕಾರಿ ಆ ದೈತ್ಯ ಕೆಟ್ಟದನಿಯಿಂದ ಚೀರುತ್ತ ತಲೆ ಒಡೆದು ನೆಲದ ಮೇಲೆ ಬಿದ್ದು ಸತ್ತು ಹೋದ.

ಮತ್ತೊಂದು ದಿನ ಕೃಷ್ಣನು ಬೆಳದಿಂಗಳಲ್ಲಿ ಗೋಪಕನ್ಯೆಯರೊಂದಿಗೆ ಆಟವಾಡುತ್ತಲಿದ್ದಾಗ ಅರಿಷ್ಟ ಎಂಬ ದೈತ್ಯನು ಎತ್ತಿನ ರೂಪತೆಗೆದುಕೊಂಡು ಅಲ್ಲಿಗೆ ಬಂದ. ಕೃಷ್ಣನನ್ನು ಕೊಲ್ಲಬೇಕು ಎಂಬ ಹಂಚಿಕೆಯಿಂದ ಹೊಂಚು ಹಾಕಿ ಕೃಷ್ಣನ ಬಳಿ ನಿಂತು ಗುಟುರು ಹಾಕಿದ. ಅವನ ಘೋರ ನಾದವನ್ನು ಕೇಳಿಯೇ ವತ್ಸಪಾಲಕರೆಲ್ಲರೂ ಹೆದರಿ ಹೌಹಾರಿ ಹೋದರು. ಅವನನ್ನು ಕಂಡಕೂಡಲೇ ಕೃಷ್ಣನು ಅಲ್ಲಿಯೇ ಸಮೀಪದಲ್ಲಿ ಇರುವ ಒಂದು ತಾಳೇ ಮರವನ್ನು ಕಿತ್ತಿ ಆ ಎತ್ತಿನ ಎರಡೂ ಕೋಡುಗಳ ನಟ್ಟನಡುವೆ ಬಲವಾಗಿ ಏಟು ಹಾಕಿದ. ಇದರಿಂದ ಆ ದೈತ್ಯಾಕಾರದ ಎತ್ತಿನ ತಲೆ ಒಡೆದು, ಕೋಡು ಮುರಿದು, ರಕ್ತವನ್ನು ವಮನ ಮಾಡಿಕೊಂಡು ಆ ಎತ್ತು ಸತ್ತು ಬಿದ್ದಿತು.

ಹೀಗೆ ಅರಿಷ್ಟಾಸುರನನ್ನು ಸಂಹರಿಸಿದ ಕೆಲವೇ ದಿನಗಳಲ್ಲಿ ಕೇಶೀ ಎಂಬ ಕ್ರೂರ ರಾಕ್ಷಸ ಕುದುರೆಯ ರೂಪ ತೆಗೆದುಕೊಂಡು ಅಲ್ಲಿಗೆ ಬಂದ. ಗೋಕುಲದ ಬಳಿಯಲ್ಲಿ ನಿಂದು ಆ ದೈತ್ಯಕುದುರೆಯು ತನ್ನ ಭಯಂಕರ ಧ್ವನಿಯಿಂದ ಕೆನೆದು ಗರ್ಜನೆ ಮಾಡಿದಾಗ ಮೂರು ಲೋಕಗಳೇ ನಡುಗಿ ಹೋದವು. ಪ್ರಳಯಕಾಲವೇ ಬಂದಿತೆಂದು ದೇವತೆಗಳು ತಲ್ಲಣಿಸಿದರು. ಬ್ರಹ್ಮಾಂಡಭೇದಿಯಾದ ಆ ಭೀಕರನಾದದಿಂದ ಎಲ್ಲ ಗೋಪಾಲಕರೂ ಗೊಲ್ಲತಿಯರೂ ಮೂರ್ಛಿತರಾಗಿ ಬಿದ್ದರು. ತುಸು ಹೊತ್ತಿನ ಬಳಿಕ ಎಚ್ಚರ ಬಂದು ಓಡುತ್ತ ಕೃಷ್ಣನಿದ್ದಲ್ಲಿಗೆ ಬಂದು 'ಕೃಷ್ಣ, ರಕ್ಷಿಸು ರಕ್ಷಿಸು' ಎಂದು ಮೊರೆಯಿಟ್ಟರು. ಆಗ ಭಕ್ತವತ್ಸಲನಾದ ಆ ಮುರಾರಿಯು "ಹೆದರಬೇಡಿರಿ, ಬೆದರಬೇಡಿರಿ. ನಾನು ಮರ್ದಿಸುತ್ತೇನೆ ಆ ದುರ್ದಾನವನನ್ನು. ಅರೆ ನಿಮಿಷ ತಡೆಯಿರಿ ಇದೋ ಬಂದೆ. ಆ ಕೇಶಿಯನ್ನು ಕೊಂದೆ. ನೀವು ಭಯ ಪಡಬೇಡಿರಿ." ಹೀಗೆ ಎನ್ನುತ್ತ ಮುಂದೆ ಬಂದ ಆ ಗೋವಿಂದ. ಮುಂಗಾಲನ್ನು ಎತ್ತಿ ತನ್ನ ಮೇಲೆ ಆಕ್ರಮಣವನ್ನು ಮಾಡಲು ಬಂದ ಕುದುರೆರೂಪಿಯಾದ ಆ ಕೇಶಿ ದೈತ್ಯನ ನಡುನೆತ್ತಿಯ ಮೇಲೆ ಬಲವಾಗಿ ಹೊಡೆದ. ಕೃಷ್ಣನು ಲೀಲಾವಿನೋದದಿಂದ ಎಂಬಂತೆ ಹಗುರಾಗಿ ಹಾಕಿದ ಆ ಮುಷ್ಟಿಪ್ರಹಾರ ಮಾತ್ರದಿಂದಲೇ ಆ ಕುದುರೆಯ ಹಲ್ಲುಗಳೆಲ್ಲವೂ ಉದುರಿ ಹೋದವು. ಕಣ್ಣು ಗುಡ್ಡೆ ಕಿತ್ತಿ ಹೋಯಿತು. ಆಗ ಕೃಷ್ಣನು ಪಕ್ಕದಲ್ಲಿಯೇ ಬಿದ್ದ ಒಂದು ಹೆಬ್ಬಂಡೆಯನ್ನು ಎತ್ತಿ ಆ ದೈತ್ಯನ ಮೇಲೆ ಅಪ್ಪಳಿಸಿದ. ದೈತ್ಯನ ದೇಹ ಪುಡಿ ಪುಡಿಯಾಯಿತು. ಕೇಶಿಯ ಹತನಾದದ್ದನ್ನು ಕಂಡು ದೇವತೆಗಳು ಕೃಷ್ಣನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರು. ಒಳ್ಳೆಯದಾಯಿತು ಎಂದು ಹೊಗಳಿ ಹಾಡಿದರು.

ಹೀಗೆ ಭಗವಾನ್ ವಾಸುದೇವನು ಬಾಲ್ಯದಿಂದ ಮದೋದ್ಧಟರಾದ ಅನೇಕ ದುಷ್ಟ ದೈತ್ಯರನ್ನು ಸಂಹರಿಸಿ ಬಲರಾಮನೊಂದಿಗೆ, ರಮ್ಯವಾದ ವೃಂದಾವನದಲ್ಲಿ ಗೆಳೆಯ ಗೋಪಬಾಲಕರೊಡನೆ ವಿಹರಿಸಿದ. ಕಾಡು ಹೂಗಳ ಮಾಲೆ. ನವಿಲುಗರಿ, ತುಳಸಿಯ ಸರ, ಹಾಗೂ ಹೂವಿನ ಹಾರಗಳನ್ನು ಧರಿಸಿದ. ಹಣೆಯ ಮೇಲೆ ಕಸ್ತೂರಿಯ ಬೊಟ್ಟನ್ನು ಇಟ್ಟು, ಕೊಳಲನ್ನು ಊದಿ, ಮಧುರ ಸಂಗೀತದ ನಾದತರಂಗಗಳನ್ನು ಗಾಳಿಯ ಅಲೆಗಳ ಗುಂಟ ತೇಲಿ ಬಿಡುತ್ತಲಿದ್ದ ಅವನ ಮಧುರ ಮುರಳಿಯ ನಾದದಿಂದ ಅನೇಕ ಗೋಪಸ್ತ್ರೀಯರು ಅವನು ಇದ್ದಲ್ಲಿಗೆ ಧಾವಿಸಿ ಬರುತ್ತಿದ್ದರು.

ಪೂರ್ವಕಾಲದಲ್ಲಿ ದಂಡಕಾರಣ್ಯಕ್ಕೆ ಶ್ರೀರಾಮನು ತಂದೆಯ ಮಾತಿನಂತೆ ವನವಾಸಕ್ಕೆ ಬಂದಾಗ ಅಲ್ಲಿರುವ ಎಲ್ಲ ಮಹರ್ಷಿಗಳು ಶ್ರೀರಾಮನನ್ನು ನೋಡಿದರು. ಕೋಟಿ ಕಾಮರಿಗಿಂತ ಕಾಂತಿ ಕಮನೀಯನಾದ ಆ ರಾಮಮೂರ್ತಿಯನ್ನು ಕಂಡು ಆ ಮಹರ್ಷಿಗಳ ಮನಸ್ಸು ಕೂಡ ಮುಗ್ಧವಾಯಿತು. ಆಗ ಆ ಎಲ್ಲ ಮಹರ್ಷಿಗಳು ಆ ಶ್ರೀಹರಿಯ ಅಂಗಸಂಗವನ್ನುಕಾಮಿಸಿ ತಪಸ್ಸನ್ನು ಮಾಡಿದರು. ಅವನಿಂದ ವರಪಡೆದು ಈ ದ್ವಾಪರ ಯುಗದಲ್ಲಿ ಗೋಪಿಕಾ ಸ್ತ್ರೀಯರಾಗಿ ಹುಟ್ಟಿದರು. ಕೃಷ್ಣನಾಗಿ ಅವತರಿಸಿದ ಅದೇ ರಾಮನ ಮನೋಹರವಾದ ಶರೀರಸೌಂದರ್ಯದಿಂದಲೂ ಮುರಳೀನಾದದ ಮಾಧುರ್ಯದಿಂದಲೂ ಆಕರ್ಷಿತರಾಗಿ ಆ ಕೃಷ್ಣನೊಡನೆ ರಾಸಕ್ರೀಡೆಯನ್ನು ಆಡಿ ತಮ್ಮ ಜನ್ಮಾಂತರದ ಬಯಕೆಯನ್ನು ಈಡೇರಿಸಿಕೊಂಡರು. ಗೋಪಸ್ತ್ರೀಯರ ಜನ್ಮವನ್ನು ತಾಳಿ ಭಗವಂತನೊಂದಿಗೆ ವಿಹರಿಸಿ ಜನ್ಮಾಂತರಗಳಿಂದ ಮುಕ್ತರಾಗಿ ಮೋಕ್ಷವನ್ನು ಹೊಂದಿದರು. ಕಂಸಾದಿದೈತ್ಯರು ಶ್ರೀಹರಿಯಲ್ಲಿ ದ್ವೇಷ ಮಾಡಿ ತನ್ಮಯತೆಯನ್ನು ಹೊಂದಿ ಮುಕ್ತರಾದಂತೆ ಗೋಪಾಂಗನೆಯರು ಪ್ರೇಮ ಕಾಮಗಳಿಂದ ಕೃಷ್ಣನಲ್ಲಿ ತನ್ಮಯತೆಯನ್ನು ಹೊಂದಿ ಭಕ್ತಿ ಮಾಡಿ ಮುಕ್ತರಾದರು. ಭಕ್ತಿ ಇಲ್ಲದೇ ಈ ಪ್ರಂಪಚದಲ್ಲಿ ಯಾರಿಗೂ ಮುಕ್ತಿಯಿಲ್ಲ. ರಾವಣ, ಹಿರಣ್ಯಕಶಿಪು, ಶಿಶುಪಾಲ ಮುಂತಾದ ದೈತ್ಯರಿಗೆ ಬರೀ ದ್ವೇಷದಿಂದಲೇ ಮುಕ್ತಿಯಾಗಿಲ್ಲ. ಅವರ ಆ ಹರಿದ್ವೇಷವು ಆ ಹರಿಯಲ್ಲಿ ಮೊದಲು ತನ್ಮಯತೆಗೆ ಕಾರಣವಾಗಿ, ಆ ತನ್ಮಯತೆಯು ಶ್ರೀಹರಿಯಲ್ಲಿ ಅವಿಚ್ಛಿನ್ನವಾದ ಭಕ್ತಿರೂಪವಾಗಿ ಮಾರ್ಪಟ್ಟಿದ್ದರಿಂದಲೇ ಅವರೆಲ್ಲರಿಗೂ ಮುಕ್ತಿಯಾಯಿತು. ಅದರಂತೆ ಗೋಪಿಕಾಸ್ತ್ರೀಯರ ಮನಸ್ಸಿನಲ್ಲಿ ಹುಟ್ಟಿದ ಕೃಷ್ಣನ ವಿಷಯದಲ್ಲಿ ಇರುವ ಪ್ರೇಮ-ಕಾಮಗಳು ಮೊದಲು ಅವರಿಗೆ ಕೃಷ್ಣನಲ್ಲಿ ತನ್ಮಯತೆಯನ್ನು ತಂದುಕೊಟ್ಟವು. ಆ ತನ್ಮಯತೆಯಿಂದ ಆ ಗೋಪಾಲ ಸ್ತ್ರೀಯರಿಗೂ ಶ್ರೀಹರಿಯಲ್ಲಿ ದೃಡತರವಾದ ಅವಿಚ್ಛಿನ್ನವಾದ ಅತಿಶಯವಾದ ನಿರ್ವ್ಯಾಜ ಭಕ್ತಿಯು ಹುಟ್ಟಿತು. ಅದರಿಂದಲೇ ಅವರಿಗೆ ಮುಕ್ತಿಯೂ ಆಯಿತು. ಭಕ್ತಿಯಿಲ್ಲದ ಬರೀ ಕಾಮಕ್ರೋಧ ದ್ವೇಷಗಳಿಂದ ಯಾರಿಗೂ ಎಂದಿಗೂ ಮುಕ್ತಿಯು ಆಗಲಾರದು.

**ಕಾಮಕ್ರೋಧೌ ನೃಣಾಂ ಲೋಕೇ ನಿರಯಸ್ಯೈವ ಕಾರಣಂ ।**
**ಹರಿಂ ಸಮೇತ್ಯ ಭಾವೇನ ಮುಕ್ತಾ ಗೋಪ್ಯಃ ಸುರದ್ವಿಷಃ ॥**

ಕಾಮ ಕ್ರೋಧ, ದ್ವೇಷಗಳು ಜೀವಿಗಳಿಗೆ ನರಕಕ್ಕೆ ಮಾತ್ರ ಕಾರಣವಾಗುತ್ತವೆ. ಕೃಷ್ಣನನ್ನು ಕಾಮಿಸಿದ ಹಾಗೂ ಪ್ರೇಮಿಸಿದ ಆ ಗೋಪಸ್ತ್ರೀಯರು ಅನಂತರದಲ್ಲಿ ಮನಸ್ಸಿನಲ್ಲಿ ಹುಟ್ಟಿದ ಹರಿ ಭಕ್ತಿಯ ಪ್ರಭಾವದಿಂದ ಆ ಭಗವಂತನಲ್ಲಿ ವಿಲೀನರಾಗಿ

ಭಕ್ತಿಯಿಂದ ಮುಕ್ತಿಯನ್ನು ಹೊಂದಿದರು. ದೈತ್ಯರು ಕೂಡ ಮೊದಲು ಹರಿಯ ದ್ವೇಷ ಮಾಡಿದರೂ ಆ ದ್ವೇಷಭಾವದಿಂದ ಆ ಕೃಷ್ಣನಲ್ಲಿಯೇ ತಮ್ಮ ಮನಸ್ಸನ್ನು ಕೇಂದ್ರೀಕರಿಸಿ ಕೊನೆಗೆ ಭಕ್ತಿಯನ್ನು ಹೊಂದಿ ಆ ಭಕ್ತಿಯಿಂದಲೇ ಮುಕ್ತಿಯನ್ನು ಪಡೆದರು. (ಈ ಅಭಿಪ್ರಾಯವನ್ನು ಮೇಲಿನ ಪದ್ಯದಲ್ಲಿ ಹರಿಂ ಸಮೇತ್ಯ ಭಾವೇನ ಎಂಬ ಶಬ್ದಗಳಿಂದ ಸೂಚಿಸಿದ್ದಾರೆ.)

**ಕಾಮಾದ್ ಭಯಾದ್ವಾ ದ್ವೇಷಾದ್ವಾ ಯೇ ಭಜಂತಿ ಜನಾರ್ದನಂ ।**
**ತೇ ಪ್ರಾಪ್ನುವಂತಿ ವೈಕುಂಠಂ ಕಿಂ ಪುನರ್ಭಕ್ತಿಯೋಗತಃ ॥**

ಕಾಮದಿಂದಾಗಲೀ ಭಕ್ತಿಯಿಂದಾಗಲೀ ದ್ವೇಷದಿಂದಾಗಲೀ ಜನಾರ್ದನನನ್ನು ಕೇಂದ್ರೀಕರಿಸಿಕೊಂಡು ಅವನ ಭಜನೆ ಮಾಡಿದವರು ಕೂಡ ವೈಕುಂಠವನ್ನು ಹೊಂದುತ್ತಾರೆ. ಅಂದ ಬಳಿಕ ಭಕ್ತಿ ಭಾವದಿಂದ ಆ ಭಗವಂತನ ಸೇವೆಗೈದವರು ಮುಕ್ತರಾಗುತ್ತಾರೆ ಎಂದು ಏನು ಹೇಳುವದು? ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡಬೇಕು ಎನ್ನುವದೇ ಈ ಎಲ್ಲ ದೃಷ್ಟಾಂತ ಕಥೆಗಳ ತಾತ್ಪರ್ಯ. ಶ್ರೀ ಹರಿಯಲ್ಲಿ ಕಾಮದ್ವೇಷಗಳನ್ನು ಮಾಡಬೇಕು ಅಂದರೆ ಮಾತ್ರ ಮುಕ್ತಿ ಎಂದು ಇದರ ತಾತ್ಪರ್ಯ ಅಲ್ಲ.

ರಮಣೀಯವಾದ ವೃಂದಾವನದ ಪರಿಸರದಲ್ಲಿಯ ಉಪವನಗಳಲ್ಲಿ ರಾತ್ರಿಯ ಬೆಳದಿಂಗಳಲ್ಲಿ ಗೊಲ್ಲಬಾಲೆಯರು ವೇಣುನಾದರಸಿಕನಾದ ಗೋವಿಂದನೊಂದಿಗೆ ರಾಸಕ್ರೀಡೆಯನ್ನು ಆಡಿ ಆನಂದದಿಂದ ರಮಿಸಿದರು. ಆ ಮೋಹನಾಂಗನ ಮಧುರ ಮುರುಳೀನಾದವನ್ನು ಮನೆಯಲ್ಲಿ ಮಲಗಿಕೊಂಡಾಗ ಕೇಳಿದಕೂಡಲೇ ಹಾಸಿಗೆ ಬಿಟ್ಟು ಎದ್ದು ಗಂಡ, ಮಕ್ಕಳು, ಬಂಧು ಬಳಗ ಎಲ್ಲವನ್ನೂ ಬಿಟ್ಟು ಯಮುನಾ ನದಿದಂಡೆಗೆ ಓಡುತ್ತಿದ್ದರು. ಅಲ್ಲಿ ಕಾಮಾತುರರಾಗಿ ಶ್ರೀಹರಿಯೊಂದಿಗೆ ರಾಸಕ್ರೀಡೆಯಲ್ಲಿ ಬೆರೆಯುತ್ತಿದ್ದರು. ಆ ಗೋಪಾಲಕೃಷ್ಣನನ್ನು ತಮ್ಮ ಬಳ್ಳಿ ದೋಳುಗಳಿಂದ ಆಲಿಂಗಿಸಿ, ಅವನ ಅದರ ಸುಧೆಯನ್ನು ಆಸ್ವಾದಿಸಿ, ಆ ಕೇಶವನೊಡನೆ ಕಾಮಕೇಳೀ ವಿಲಾಸಗಳನ್ನು ಮಾಡಿ ತಣಿಯುತ್ತಿದ್ದರು. ಹೀಗೆ ಎಲ್ಲ ಗೋಪಲಲನೆಯರು ಲಾವಣ್ಯಮೂರ್ತಿಯಾದ ಆ ಗೋವಿಂದನೊಂದಿಗೆ ವೃಂದಾವನದಲ್ಲಿ ಚಕ್ಕಂದದಿಂದ ಸಾನಂದ ವಿಹಾರಗೈದು ಧನ್ಯರಾದರು.

**ಪಾರ್ವತಿ:-**

**ಧರ್ಮ ಸಂರಕ್ಷಣಾರ್ಥಾಯ ಜಗತ್ಯಾಂ ಅವತೀರ್ಯ ಸಃ ।**
**ಪರಧಾರಾಭಿಗಮನಂ ಕಥಂ ಕುರ್ಯಾದ್ ಜನಾರ್ದನಃ ॥**

ಧರ್ಮ ಸಂರಕ್ಷಣಾರ್ಥವಾಗಿಯೇ ಈ ಜಗತ್ತಿನಲ್ಲಿ ಅವತಾರ ಮಾಡಿದ ಆ ಜನಾರ್ದನನು ಪರಸ್ತ್ರೀ ಸಹವಾಸವನ್ನು ಹೇಗೆ ಮಾಡಿದ?

**ಮಹಾದೇವ:-** ಪಾರ್ವತಿ, ಆ ಕೃಷ್ಣನೆಂದರೆ ಸಾಕ್ಷಾತ್ ಪರಬ್ರಹ್ಮ. ಪರಮಾತ್ಮ. ಅವನು ಸ್ವರಮಣ. ಸ್ವಾನಂದ ಮೂರ್ತಿ. ಬೇರೆಯವರೊಡನೆ ವಿಹಾರ ಮಾಡಿಯೇ ಅವನು ಆನಂದವನ್ನು ಪಡೆಯಬೇಕಾಗಿಲ್ಲ. ಈ ಜಗತ್ತೆಲ್ಲವೂ ಅವನಿಗೆ ಶರೀರ. ಸ್ತ್ರೀ ಪುರುಷ ಎಲ್ಲರೂ ಅವನಿಗೆ ಸಮಾನ. ಅವನ ಮನಸ್ಸಿನಲ್ಲಿ ಕಾಮವಾಗಲೀ ವಿಷಯ ವಾಸನೆಯಾಗಲೀ ಲವಮಾತ್ರವೂ ಇಲ್ಲ. ಆದುದರಿಂದಲೇ ವಿಶ್ವವ್ಯಾಪಿಯಾದ ಆ ಕೃಷ್ಣನಿಗೆ ಯಾವ ಪಾಪಲೇಪವೂ ಇರುವುದಿಲ್ಲ.

ಮುಂದೆ ಮಳೆಗಾಲ ಕಳೆದು ಶರತ್ಕಾಲ ಬಂದಿತು. ಆಗ ಬೃಂದಾವನದಲ್ಲಿ ಇರುವ ತುರುಗಾಹಿಗಳೆಲ್ಲರೂ ಕೂಡಿ ಇಂದ್ರನನ್ನು ಉದ್ದೇಶಿಸಿ ಒಂದು ದೊಡ್ಡ ಉತ್ಸವವನ್ನು ಮಾಡಬೇಕು ಎಂದು ಎಲ್ಲ ಸಿದ್ಧತೆಯನ್ನು ಮಾಡತೊಡಗಿದರು. ಆಗ ಕೃಷ್ಣನು ಅದನ್ನು ತಡೆದು ಇಂದ್ರನ ಬದಲು ಗೋವರ್ಧನ ಪರ್ವತಕ್ಕೆ ಪೂಜೆ ಸಲ್ಲಿಸಿ ಮಹೋತ್ಸವವನ್ನು ಗೋಪಾಲಕರಿಂದ ಮಾಡಿಸಿದ. ಅದರಿಂದ ಮಹಾಕೋಪ ಬಂದಿತು ಇಂದ್ರನಿಗೆ. ವೃಂದಾವನದ ಮೇಲೆ ಬಿಟ್ಟುಬಿಡದೇ ಜಡಿ ಮಳೆಯನ್ನು ಏಕಪ್ರಕಾರವಾಗಿ ಸುರಿಸಲು ಅವನು ಮೋಡಗಳಿಗೆ ಆದೇಶ ನೀಡಿದ. ಆನೆಯ ಸೊಂಡೆಯ ಪ್ರಮಾಣದಲ್ಲಿ ಧಾರಾಕಾರವಾಗಿ ಮಳೆ ಸುರಿಯತೊಡಗಿತು. ಏಳು ದಿನ ಹಗಲು ರಾತ್ರಿ ಭಯಂಕರವಾದ ಜಡಿಮಳೆಯು ಸುರಿದು ಜಲಪ್ರಳಯವೇ ಆದಂತೆ ಆಯಿತು. ಆಗ ಶ್ರೀಕೃಷ್ಣನು ಗೋವರ್ಧನ ಬೆಟ್ಟವನ್ನೇ ಕಿತ್ತಿ ದೊಡ್ಡ ಕೊಡೆಯಂತೆ ಬೆರಳಿನಿಂದ ಮೇಲೆ ಎತ್ತಿ ಹಿಡಿದ. ಆ ಬೆಟ್ಟದ ಬುಡದಲ್ಲಿ ಎಲ್ಲ ಗೊಲ್ಲಗೊಲ್ಲತಿಯರು ತುರುಕರುಗಳು ಸುರಕ್ಷಿತವಾಗಿ ಮಳೆಯ ಹನಿ ನೀರೂ ಕೂಡ ತಾಕದೇ ಬೆಚ್ಚಗೆ ನಿಂತುಕೊಂಡರು. ಗೋಪಾಲಕರಿಗೂ ಗೋಪಿಕಾಸ್ತ್ರೀಯರಿಗೂ ಬೇರೆಮನೆಗೆ ಹೋದಂತೆ ಅದೊಂದು ಹೊಸ ತರಹದ ಸುಖದಾಯಕವಾದ ರೋಮಾಂಚಕಾರಿ ಅನುಭವವೇ ಆಯಿತು. ಸುತ್ತಲೂ ಅವಿರತವಾಗಿ ಮಳೆ ಸುರಿಯುತ್ತಲಿದ್ದರೂ ಆ ಗೋವರ್ಧನ ಗಿರಿಯ ಬುಡದಡಿಯಲ್ಲಿ ಸುರಕ್ಷಿತವಾಗಿ ನಿಂತ ಅವರಿಗೆ ಚಳಿ, ಮಳೆ, ಗಾಳಿ ಯಾವದೂ ತಾಕದೇ ಸುಖವಾಗಿ ಇದ್ದರು. ಅವರು ತಮ್ಮ ದೈನಂದಿನ ಜೀವನವನ್ನು ಯಥಾಪ್ರಕಾರವಾಗಿ ಆನಂದದಿಂದ ನಡೆಸಿದರು.

ಇದನ್ನು ನೋಡಿ ಮಹೇಂದ್ರನ ಮದ ಇಳಿದು ಹೋಯಿತು. ಆ ಸಹಸ್ರಾಕ್ಷನ ಎಲ್ಲ ಕಣ್ಣುಗಳೂ ಈಗ ತೆರೆದವು. ಕೃಷ್ಣನ ಈ ಅದ್ಭುತ ಮಹಿಮೆಯನ್ನು ನೋಡಿ ಉದ್ಭ್ರಾಂತನಾದ ಆ ಶಚೀಕಾಂತ. ಕೂಡಲೇ ತನ್ನ ಮೋಡ ಪಡೆಯನ್ನು ಹಿಂದಕ್ಕೆ ಕರೆಸಿಕೊಂಡ. ಮಳೆಯನ್ನು ನಿಲ್ಲಿಸಿದ. ತಾನಾಗಿಯೇ ನಂದಗೋಕುಲಕ್ಕೆ ಬಂದ. ಶ್ರೀಕೃಷ್ಣನ ಬಳಿಗೆ ಐತಂದ. ಆಗ ಕೃಷ್ಣನು ತನ್ನ ಬೆರಳ ತುದಿಯಲ್ಲಿ ಎತ್ತಿ ಹಿಡಿದ ಆ ಗೋವರ್ಧನ ಶೈಲವನ್ನು ಮತ್ತೆ ಮೊದಲಿನಂತೆ ಅದು ಇದ್ದಲ್ಲಿಯೇ ಇಟ್ಟುಬಿಟ್ಟ.

ಎಲ್ಲ ಗೋಪ ಗೋಪಿಯರು ಆ ಬಾಲಗೋಪಾಲ ಕೃಷ್ಣನನ್ನು ಭಕ್ತಿಯಿಂದ ಪೂಜೆ ಮಾಡಿದರು. ಆಗ ದೇವೇಂದ್ರನು ಕೃಷ್ಣನ ಬಳಿಗೆ ಬಂದು ಕೈ ಜೋಡಿಸಿ ಸಂತಸ ದುಂಬಿ ನುಡಿದ.

## ಇಂದ್ರ ಉವಾಚ

**ನಮಸ್ತೇ ಪುಂಡರೀಕಾಕ್ಷ ಶ್ರೀಶ ಸರ್ವೇಶ ಕೇಶವ ।**
**ವೇದಾಂತವೇದ್ಯ ಯಜ್ಞೇಶ ಯಜ್ಞರೂಪ ನಮೋಽಸ್ತುತೇ ॥**

ಕಮಲದಂತೆ ಕಣ್ಣುಳ್ಳ ಸರ್ವಸ್ವಾಮಿಯಾದ, ವೇದಾಂತವೇದ್ಯನಾದ, ಯಜ್ಞ ರೂಪಿಯಾದ, ಲಕ್ಷ್ಮೀಪತಿಯಾದ ಕೇಶವನೆ ನಿನಗೆ ನನ್ನ ನಮೋ ನಮಃ ನಮೋ ನಮಃ.

**ನಮಸ್ತೇ ವಾಸುದೇವಾಯ ಗೋಪವೇಷಾಯ ತೇ ನಮಃ ।**

ಗೋಪಾಲ ವೇಷವನ್ನು ತಳೆದ ವಾಸುದೇವನೇ ನಿನಗೆ ನನ್ನ ವಂದನೆ. ಗೋಪಾಲಕರು ಹಾಗೂ ಗೋ ಮತ್ತು ಗೋವತ್ಸಗಳನ್ನು ಧ್ವಂಸ ಮಾಡಲಿಕ್ಕಾಗಿ ನಾನು

ಅವಿಚ್ಛಿನ್ನ ಮಳೆಗರೆದು ಮಹಾಪರಾಧ ಮಾಡಿದೆ. ನನ್ನ ತಪ್ಪನ್ನು ಮನ್ನಿಸು. ನೀನು ಆದಷ್ಟು ಬೇಗ ಕಂಸನನ್ನು ಸಂಹರಿಸು. ದೇವತೆಗಳಿಗೆ ಹಿತವನ್ನು ಉಂಟು ಮಾಡು. ದುಷ್ಟ ದೈತ್ಯರ ಹಾಗೂ ರಾಜರ ಭಾರದಿಂದ ಭಗ್ನ ಭುಗ್ನಳಾಗಿದ್ದಾಳೆ ಈ ಭೂದೇವಿ. ಅವಳ ಭಾರವನ್ನು ಇಳಿಸಿ ಸಂತೋಷಪಡಿಸು.

ಹೀಗೆ ದೇವೇಂದ್ರನು ಎಲ್ಲ ಸುರ ಸಮೂಹದ ಸ್ವಾಮಿಯಾದ ಶ್ರೀಕೃಷ್ಣನನ್ನು ಸ್ತೋತ್ರ ಮಾಡಿ ಅಮೃತದಿಂದ ಅವನಿಗೆ ಅಭಿಷೇಕ ಮಾಡಿದ. ದೇವಲೋಕದ ದಿವ್ಯವಾದ ವಸ್ತ್ರಾಭರಣಗಳನ್ನು ನೀಡಿದ. ಭಕ್ತಿಯಿಂದ ಆ ಭಗವಂತನನ್ನು ಪೂಜಿಸಿ ಸ್ವರ್ಗಕ್ಕೆ ನಡೆದ ಆ ಸುರನಾಥ.

ಅನಂತರ ಆ ಬಲರಾಮ ಕೃಷ್ಣರು ದೇವಲೋಕದ ದಿವ್ಯವಾದ ಬಟ್ಟೆ ಬರೆ,ಬಂಗಾರ ಆಭರಣಗಳನ್ನು ತೊಟ್ಟು ನಂದಗೋಕುಲದಲ್ಲಿ ಆನಂದದಿಂದ ನಕ್ಕು ನಲಿದಾಡಿದರು.

ಇತ್ತ ನಾರದರು ಮಥುರಾ ಪಟ್ಟಣಕ್ಕೆ ಬಂದು ಕಂಸನಿಗೆ ಕೃಷ್ಣನ ಸಮಾಚಾರವನ್ನೆಲ್ಲ ತಿಳಿಸಿದರು. ''ಇಲ್ಲಿಯೇ ಮಥುರೆಯ ಕಾರಾಗೃಹದಲ್ಲಿ ನಿನ್ನ ತಂಗಿಯಾದ ದೇವಕಿಯು ಎಂಟನೇಯದಾಗಿ ಗಂಡು ಮಗುವನ್ನೇ ಹೆತ್ತಿದ್ದಳು. ವಸುದೇವ ಅಂದೇ ರಾತ್ರಿ ಕಾಲದಲ್ಲಿ ನಿನ್ನ ಕಾವಲುಗಾರರ ಕಣ್ಣು ತಪ್ಪಿಸಿ ನಂದಗೋಕುಲಕ್ಕೆ ಹೋಗಿ ಅಲ್ಲಿ ತನ್ನ ಮಗನನ್ನು ಇಟ್ಟು ಬಂದ. ಆ ವಸುದೇವನ ಕುಮಾರನೇ ನೀನು ಕಳಿಸಿದ ಪೂತನಾ, ತೃಣಾವರ್ತ, ಧೇನುಕಾಸುರ, ವೃಷಭಾಸುರ, ಶಕಟಾಸುರ, ಕೇಶಿ ಮೊದಲಾದ ಬಲಿಷ್ಠರನ್ನೆಲ್ಲ ಕೊಂದು ಹಾಕಿದ್ದಾನೆ. ಯಮುನೆಯ ಮಡುವಿನಲ್ಲಿರುವ ಕಾಳಿಯ ಸರ್ಪವನ್ನು ಕೂಡ ಮರ್ದನ ಮಾಡಿದವ ಆ ವಸುದೇವ ಪುತ್ರನಾದ ಕೃಷ್ಣನೇ. ನಂದನ ಮಗನಾಗಿ ಬೆಳೆದ ಆ ದೇವಕೀ ಪುತ್ರನೇ ಗೋವರ್ಧನ ಬೆಟ್ಟವನ್ನು ತನ್ನ ಕೈಯಿಂದ ಎತ್ತಿ ಹಿಡಿದು ಇಂದ್ರನ ಗರ್ವವನ್ನು ಅಡಗಿಸಿ ಅವನಿಂದ ಪೂಜಿತನಾದ.'' ಎಂದು ಮುಂತಾಗಿ ಕೃಷ್ಣನ ಬಾಲಲೀಲೆ ಹಾಗೂ ಶಕ್ತಿ ಸಾಮರ್ಥ್ಯಗಳನ್ನೆಲ್ಲ ಕಂಸನಿಗೆ ವಿವರವಾಗಿ ತಿಳಿಸಿ ನಾರದರು ಅಲ್ಲಿಂದ ಬ್ರಹ್ಮಲೋಕಕ್ಕೆ ಹೊರಟು ಹೋದರು.

ನಾರದರು ಹೋದ ಬಳಿಕ ಕಂಸನು ಭಯಭ್ರಾಂತನಾದ. ತನ್ನ ಎಲ್ಲ ಮಂತ್ರಿ ಪರಿವಾರದವರನ್ನು ಕರಿಸಿದ. ಅವರೊಡನೆ ಗುಪ್ತಾಲೋಚನೆಯನ್ನು ಮಾಡಿದ. ಏನಾದರೂ ಉಪಾಯ ಮಾಡಿ ಆ ಬಲರಾಮಕೃಷ್ಣರನ್ನು ಮಥುರಾಪಟ್ಟಣಕ್ಕೆ ಕರೆಸಿಕೊಂಡು ಅವರನ್ನು ಕೊಲ್ಲಿಸಬೇಕು ಎಂದು ಹಂಚಿಕೆ ಮಾಡಿದ. ತನ್ನ ಆಸ್ಥಾನದಲ್ಲಿ ಇರುವ ಮದೋನ್ಮತ್ತವಾದ ಆನೆಗಳು, ಜಗಜಟ್ಟಿಗಳಾದ ಬಲಿಷ್ಠ ಮಲ್ಲರು, ಕೊಬ್ಬಿದ ಗೂಳಿಗಳು, ಕ್ರೂರ ಕುದುರೆ ಮುಂತಾದವುಗಳಿಂದ ಹೇಗಾದರೂ ಮಾಡಿ ಚಿಕ್ಕಬಾಲಕರಾದ ಆ ರಾಮಕೃಷ್ಣರನ್ನು ಸಾಯ ಹೊಡೆಯಬೇಕು ಎಂದು ಗುಟ್ಟಾಗಿ ದುಷ್ಟಮಂತ್ರಿಗಳೊಂದಿಗೆ ಮಂತ್ರಾಲೋಚನೆಗೈದ. ''ವತ್ಸಾಸುರ, ಅಘಾಸುರ, ವೃಷಭಾಸುರ, ಕೇಶಿ ಮುಂತಾದ ಮಹಾಬಲಿಷ್ಠರೂ ದರ್ಪಿಷ್ಠರೂ ಆದ ದೈತ್ಯಶ್ರೇಷ್ಠರನ್ನೆಲ್ಲ ವಧಿಸಿದ ಕೃಷ್ಣನನ್ನು ಅವನ ಸ್ವಸ್ಥಾನವಾದ ಆ ವ್ರಜಭೂಮಿಯಲ್ಲಿ ಗೆಲ್ಲುವುದಾಗಲೀ ಕೊಲ್ಲುವುದಾಗಲೀ ಅಶ್ಯಕ್ಯ. ಈ ನಮ್ಮ ಮಥುರಾ ಪಟ್ಟಣಕ್ಕೆ ಅವರು ಬಂದರೆ ಏನಾದರೂ ಯುಕ್ತಿ, ಪ್ರಯುಕ್ತಿ, ಕುಯುಕ್ತಿಗಳನ್ನು ಮಾಡಿ ನಮ್ಮಲ್ಲಿ ಇರುವ ಚಂಡ ಪ್ರಚಂಡರಾದ ಬೆಟ್ಟದಾಕಾರದ ಜಟ್ಟಿಗಳಿಂದಲೂ ಮತ್ತು

ನೆತ್ತಿಗೇರಿದ ಮದ್ದಾನೆಗಳಿಂದಲೂ, ಉಳಿದೆಲ್ಲ ಚತುರಂಗ ಸೇನೆಗಳಿಂದಲೂ, ಜೀವದ ಹಂಗು ತೊರೆದು ಕಾದುವ ನಮ್ಮ ವೀರಸೇನಾಪತಿಗಳಿಂದಲೂ, ಮೋಸ, ವಂಚನೆ, ಮುಂತಾದ ವಾಮಮಾರ್ಗಗಳನ್ನು ಅವಲಂಬಿಸಿಯಾದರೂ ಎಲ್ಲರೂ ಕೂಡಿ ಅವರನ್ನು ಕೊಲ್ಲಿಸಿಬಹುದು. ಅದುದರಿಂದ ಆ ರಾಮಕೃಷ್ಣರನ್ನು ಸವಿನುಡಿಗಳನ್ನಾಡಿ ಮನ ಒಲಿಸಿ ಶತ ಪ್ರಯತ್ನ ಮಾಡಿ ಈ ಮಥುರಾ ಪಟ್ಟಣಕ್ಕೆ ಕರೆದುಕೊಂಡು ಬರಬೇಕು. ಅವರು ಇಲ್ಲಿ ಬಂದರೆ ಸತ್ತಂತೆಯೇ. ರಾಮಕೃಷ್ಣರನ್ನು ಮಥುರಾಪಟ್ಟಣಕ್ಕೆ ಕರೆತರಲು ಅಕ್ರೂರ ಒಬ್ಬನೇ ಚತುರ. ಅವನನ್ನೇ ವೃಂದಾವನಕ್ಕೆ ಕಳಿಸಿ ಆ ಇಬ್ಬರು ಸೋದರರನ್ನು ಇಲ್ಲಿಗೆ ಬರಮಾಡಿಕೊಳ್ಳಬೇಕು'' ಎಂದು ನಿರ್ಧರಿಸಿದರು.

ಅನಂತರ ಕಂಸ ಅಕ್ರೂರನನ್ನು ಕರೆದು ಹೇಳಿದ.

**ಕಂಸ:-** ಅಕ್ರೂರ, ನನ್ನ ಸೋದರಿಯ ಗಂಡನಾದ ವಸುದೇವ ಎಂಥ ನೀಚ ಎನ್ನುವದನ್ನು ನೀನು ತಿಳಿದಿರುವಿಯಷ್ಟೆ ! ಅವನು ನನ್ನನ್ನು ವಂಚಿಸಿ ತನ್ನ ಮಗುವನ್ನು ನಂದಗೋಕುಲದಲ್ಲಿ ಇಟ್ಟು ಬೆಳೆಸುತ್ತಿದ್ದಾನೆ. ಅಲ್ಲಿ ನಂದಗೋಪನ ಮಕ್ಕಳಾಗಿ ಬೆಳೆದ ಅವನ ಮಕ್ಕಳಾದ ರಾಮಕೃಷ್ಣರು ನಾನು ಕಳಿಸಿದ ಕೇಶಿ ಮೊದಲಾದ ರಕ್ಕಸರನ್ನು ಮಣ್ಣು ಮುಕ್ಕಿಸಿದ್ದಾರೆ. ಆ ವೃಂದಾವನದಲ್ಲಿ ಇದ್ದರೆ ಇಂದ್ರಾದಿದೇವತೆಗಳು ಕೂಡ ಆ ರಾಮಕೃಷ್ಣರನ್ನು ಜಯಿಸಲಾರರು. ಮತ್ತು ಸಾಯಿಸಲಾರರು. ಆದುದರಿಂದ ಉಪಾಯದಿಂದ ನೀನು ಅವರನ್ನು ಈ ಮಥುರಾಪಟ್ಟಣಕ್ಕೆ ಕರೆದುಕೊಂಡು ಬಾ. ಈ ಮಥುರಾಪಟ್ಟಣ ಎಂದರೆ ಅವರಿಗೆ ಯಮಪಟ್ಟಣ ಇದ್ದ ಹಾಗೆಯೇ. ಇಲ್ಲಿಗೆ ಬಂದರೆ ಆ ಗೊಲ್ಲಬಾಲಕರನ್ನು ನಮ್ಮ ಜಗದೇಕಮಲ್ಲರಾದ ಜಟ್ಟಿಗಳು ಕೊಲ್ಲುವದು ನಿಶ್ಚಿತ. ಆದುದರಿಂದ ಈಗ ನೀನು ವೃಂದಾವನಕ್ಕೆ ಹೋಗು. ನಮ್ಮಲ್ಲಿ ಬಿಲ್ಲಿನ ಹಬ್ಬವಿದೆ. ಎಂದು ಹೇಳಿ ಅವರನ್ನು ಕರೆದು ಕೊಂಡು ಬಾ. ಆ ಧರ್ನುಯಜ್ಞಕ್ಕಾಗಿ ಎಲ್ಲ ಗೋಪಾಲಕರನ್ನೂ ನಂದಗೋಪ ಮೊದಲಾದ ಯದುಬಂಧುಗಳನ್ನೂ ಬರಲಿಕ್ಕೆ ಹೇಳು. ಈ ಧರ್ನುಯಾಗದಲ್ಲಿ ನಂದಗೋಕುಲದ ನಂದಗೋಪನೇ ಮೊದಲಾದ ಎಲ್ಲ ಗೋಪಾಲಕರೂ ಯಥೇಚ್ಛವಾಗಿ ತಿಂದು ಉಂಡು ತಣಿದು ಹೋಗಲಿ.

ಕಂಸನ ಅಪ್ಪಣೆಯಂತೆ ಅಕ್ರೂರ ವೃಂದಾವನಕ್ಕೆ ಹೋಗಲು ರಥವನ್ನು ಏರಿದ. ಕೃಷ್ಣನನ್ನು ಯಾವಾಗ ಕಾಣೆವೆನೋ ಎಂದೂ ಅವನಿಗೆ ಅತ್ಯಧಿಕ ಉತ್ಕಂಠಕೆ ಕೃಷ್ಣ ದರುಶನ ಲಾಲಸೆಯಿಂದ ಅಕ್ರೂರ ರಥಾರೂಢನಾಗಿ ತ್ವರಿತಗತಿಯಿಂದ ವೃಂದಾವನಕ್ಕೆ ಬಂದ. ಅಕ್ರೂರ ಬಂದಾಗ ಕೃಷ್ಣ ಗೋವುಗಳ ಗುಂಪಿನಲ್ಲಿಯೇ ಇದ್ದ. ಪೀತಾಂಬರವನ್ನು ಉಟ್ಟಿದ್ದ. ಎಲ್ಲ ಆಭರಣಗಳನ್ನು ತೊಟ್ಟಿದ್ದ. ಹಣೆಯ ಮೇಲೆ ಕಸ್ತೂರಿ ತಿಲಕವನ್ನು ಇಟ್ಟಿದ್ದ. ಕಾಡು ತುಳಸಿಯ ಮಾಲೆಯನ್ನು ಕೊರಳಲ್ಲಿ ಹಾಕಿದ್ದ. ಜಡೆಯಲ್ಲಿ ಅಡವಿಯ ಹೂಗಳನ್ನು ಮುಡಿದಿದ್ದ. ಮೈಗೆಲ್ಲ ಚಂದನ ಗಂಧವನ್ನು ಬಳಿದಿದ್ದ. ತುಂಬಿದ ಮೊಡದಂತೆ ಕಪ್ಪು ಬಣ್ಣದಿಂದ ಒಪ್ಪುವ ಕೃಷ್ಣನ ಹೊಂದಾವರೆಯಂತೆ ಸುಂದರವಾದ ಮುಖದಲ್ಲಿ ಮಂದಹಾಸವು ಮಿನುಗುತ್ತಿತ್ತು. ಅವನ ಸುತ್ತಲೂ ಗೋಪಕನ್ಯೆಯರು ನೆರೆದಿದ್ದರು. ಶ್ಯಾಮಸುಂದರ ಶರೀರದ ಆ ಕೃಷ್ಣಮೂರ್ತಿಯನ್ನು ಕಂಡಕೂಡಲೇ ಆನಂದದಿಂದ ಅಕ್ರೂರನ ಮೈ ಪುಳಕಿತವಾಯಿತು. ಕಂಗಳಿಂದ ಆನಂದದ ಬಾಷ್ಪಧಾರೆ ಸುರಿಯಿತು.

ರಥದಿಂದ ಇಳಿದು ಅವನು ಓಡಿ ಹೋಗಿ ಕೃಷ್ಣನನ್ನು ಅಲಿಂಗಿಸಿಕೊಂಡ. ಅನಂತರ ಅವನಿಗೆ ಪ್ರದಕ್ಷಿಣೆ ಹಾಕಿದ. ಅವನ ಕೆಂಬಣ್ಣದ ಕಮಲದಂತೆ ಶೋಭಿಸುವ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಿದ. ಅವನ ಅಡಿದಾವರೆಯ ಹುಡಿಯನ್ನು ತನ್ನ ತಲೆಯಲ್ಲಿ ಧರಿಸಿದ. ಅನಂತರ ಹುಣ್ಣಿಮೆಯ ಚಂದ್ರನಂತೆ ಧವಲದೀಧಿತಿಯಿಂದ ದೇದೀಪ್ಯಮಾನವಾಗಿ ತೋರುವ ಬಲರಾಮನಿಗೂ ನಮಸ್ಕಾರ ಮಾಡಿದ. ಆಗ ರಾಮಕೃಷ್ಣರಿಬ್ಬರೂ ಮತ್ತ ಮತ್ತೆ ತಮ್ಮನ್ನು ನಮಸ್ಕರಿಸುತ್ತಲಿರುವ ಆ ಅಕ್ರೂರನನ್ನು ಮೇಲಕ್ಕೆ ಎಬ್ಬಿಸಿ ತಬ್ಬಿಕೊಂಡು ಆನಂದದಿಂದ ಕೈ ಹಿಡಿದು ತಮ್ಮ ಮನೆಗೆ ಕರೆತಂದರು. ನಂದಗೋಪ ಅವನಿಗೆ ಸ್ವಾಗತ ನೀಡಿದ. ಎತ್ತರವಾದ ಆಸನದ ಮೇಲೆ ಕೂಡಿಸಿದ. ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿದ. ವಸ್ತ್ರಗಳನ್ನು ನೀಡಿದ. ಕಾಣಿಕೆಗಳನ್ನು ಸಲ್ಲಿಸಿದ. ಅನಂತರ ಅಕ್ರೂರನು ಬಲರಾಮಕೃಷ್ಣರಿಗೆ ಹಾಗೂ ನಂದಗೋಪ ಯಶೋದೆಯರಿಗೆ ಬೇರೆ ಬೇರೆಯಾಗಿಯೇ ವಸ್ತ್ರಗಳನ್ನು ಕೊಟ್ಟ. ಆಭರಣಗಳನ್ನು ನೀಡಿದ. ಕುಶಲಪ್ರಶ್ನೆ ಮಾಡಿದ. ಅನಂತರ ಅಕ್ರೂರನು ಉಚ್ಚ ಆಸನದ ಮೇಲೆ ಕುಳಿತುಕೊಂಡ ಬಳಿಕ ನಂದಗೋಪ ಅವನ ಆಯುರಾರೋಗ್ಯಾದಿಗಳನ್ನು ವಿಚಾರಿಸಿ ಬಳಿಕ ಮಥುರಾ ಪಟ್ಟಣದ ರಾಜಕೀಯ ಸ್ಥಿತಿಗತಿ ಹಾಗೂ ವಿದ್ಯಮಾನಗಳನ್ನೆಲ್ಲ ಪ್ರಶ್ನಿಸಿದ. ಆಗ ಅಕ್ರೂರನು ವಿನಯದಿಂದ ಬಾಗಿ ನುಡಿದ.

**ಅಕ್ರೂರ:-** ನಂದಗೋಪ, ನಿನ್ನ ಮನೆಯಲ್ಲಿರುವ ಈ ಕೃಷ್ಣನು ಸಾಮಾನ್ಯ ಮಾನವನಲ್ಲ. ಇವನು ಸಾಕ್ಷಾತ್ ನಾರಾಯಣನೇ. ದೇವತೆಗಳ ಹಾಗೂ ಸಾಧು ಸಜ್ಜನರ ಕಲ್ಯಾಣವನ್ನು ಸಾಧಿಸಲಿಕ್ಕಾಗಿ ಅವನು ಮಾನವರೂಪದಿಂದ ಅವತರಿಸಿ ಬಂದಿದ್ದಾನೆ. ಭೂಮಿಯ ಭಾರವನ್ನು ಇಳಿಸಲಿಕ್ಕಾಗಿ ಆ ದೇವೋತ್ತಮ ವೈಕುಂಠದಿಂದ ಇಳಿದೇ ಬಂದಿದ್ದಾನೆ. ಧರ್ಮದ ಸಂಸ್ಥಾಪನೆಗಾಗಿಯೇ ಅವನು ಹುಟ್ಟಿದ್ದು. ಕಂಸನು ಮೊದಲಾದ ದೈತ್ಯರಿಗೆಲ್ಲ ಅವನಿಂದ ಮೃತ್ಯು ಬರುವದು ನಿಶ್ಚಿತ. ದೇವತೆಗಳು ಮುನಿ ಮಹರ್ಷಿಗಳು ಪ್ರಾರ್ಥಿಸಿಕೊಂಡದ್ದರಿಂದ ಅವನು ಮಥುರಾಪಟ್ಟಣದ ಬಂದಿ ಮನೆಯಲ್ಲಿ ಶ್ರಾವಣ ಮಾಸದ ಕೃಷ್ಣಪಕ್ಷದ ಅಷ್ಟಮಿಯ ದಿನ ಸರಿರಾತ್ರಿಯ ಹೊತ್ತಿನಲ್ಲ ದೇವಕಿಯ ಹೊಟ್ಟೆಯಿಂದ ಹುಟ್ಟಿ ಬಂದ. ಕಂಸನಿಗೆ ಹೆದರಿ ವಸುದೇವ ಆ ಮಗುವನ್ನು ನಿನ್ನ ಮನಗೆ ತಂದು ಯಶೋದೆಯ ಪಕ್ಕದಲ್ಲಿ ಮಲಗಿಸಿದ. ಅಂದು ಅದೇ ವೇಳೆಯಲ್ಲಿ ಯಶೋದೆಯು ಒಂದು ಹೆಣ್ಣು ಮಗುವನ್ನು ಹೆತ್ತು ಆಯಾಸದಿಂದ ಮಲಗಿಕೊಂಡಿದ್ದಳು. ವ್ರಜಭೂಮಿಯಲ್ಲಿಯ ಎಲ್ಲ ಜನರೂ ಗಾಢನಿದ್ರೆಯಲ್ಲಿ ಮಲಗಿದ್ದರು. ಆಗ ವಸುದೇವ ತನ್ನ ಮುದ್ದು ಕಂದನನ್ನು ಯಶೋದೆಯ ಪಕ್ಕದಲ್ಲಿ ಮಲಗಿಸಿ ಅವಳ ಹೆಣ್ಣು ಮಗುವನ್ನು ತಾನು ಎತ್ತಿಕೊಂಡು ಮಥುರಾಪಟ್ಟಣಕ್ಕೆ ಬಂದ. ಕಾರಾಗೃಹದಲ್ಲಿ ಮಗನ ವಿಯೋಗದಿಂದ ದುಃಖಿತಳಾದ ದೇವಕಿಯ ತೊಡೆಯ ಮೇಲೆ ಆ ಯಶೋದೆಯ ಕುಮಾರಿಯನ್ನು ಮಲಗಿಸಿದ. ಕೂಡಲೇ ಆ ಹೆಣ್ಣು ಕೂಸು ದೊಡ್ಡ ದನಿ ತೆಗೆದು ಅಳತೊಡಗಿತು. ಮಗುವಿನ ರೋದನದ ದನಿಯನ್ನು ಕೇಳಿದ ಕೂಡಲೇ ಓಡಿ ಬಂದ ಕಂಸ. ದೇವಕಿಯ ಮಗ್ಗುಲಲ್ಲಿ ಮಲಗಿಕೊಂಡ ಮಗುವನ್ನು ಕೈ ಹಾಕಿ ಸೆಳೆದುಕೊಂಡ. ಹಿಡಿಗೈಯಿಂದ ಹಿಡಿದು ಆ ಕೂಸನ್ನು ಎತ್ತಿ ಮುಗಿಲಿನಲ್ಲಿ ತಿರುಗಿಸಿ ಒಂದು ಹೆಬ್ಬಂಡೆಗೆ ಅಪ್ಪಳಿಸಿದ. ಕೂಡಲೇ ಆ ಹೆಣ್ಣು ಮಗು ಕಂಸನ ಕೈಯಿಂದ ಕೊಸರಿಕೊಂಡು ಮುಗಿಲಿಗೆ ಜಿಗಿದು ಹಾರಿಹೋಯಿತು. ಆಕಾಶದಲ್ಲಿ

ಆ ಕನ್ಯೆಯು ಎಂಟು ಕೈಗಳಿಂದ ಯುಕ್ತಳಾದ ಅಷ್ಟಭುಜಾದೇವಿಯಾಗಿ ಮುಗಿಲು ಮಧ್ಯದಲ್ಲಿ ನಿಂತುಕೊಂಡೇ ಗಂಭೀರಧ್ವನಿಯಿಂದ ಕಂಸನಿಗೆ ಎಚ್ಚರಿಕೆ ಕೊಟ್ಟಿತು.

**ಕನ್ಯಾ:-** ದಾನವಾಧಮ ಕಂಸ, ಸರ್ವದೇವೋತ್ತಮನಾದ ಶ್ರೀಹರಿಯು ನಿನ್ನನ್ನು ಸಂಹರಿಸಲಿಕ್ಕಾಗಿ ವೃಂದಾವನದಲ್ಲಿ ಸುಖವಾಗಿ ಬೆಳೆಯುತ್ತಲಿದ್ದಾನೆ.

**ಅಕ್ರೂರ:-** ಹೀಗೆ ಹೇಳಿ ಯೋಗಮಾಯೆಯು, ಏಕಾನಂಶಾ ಅಷ್ಟಭುಜಾದೇವಿ ಎಂದು ಮುಂತಾಗಿ ಹೆಸರಾದ ಆ ಶ್ರೀಕೃಷ್ಣಸೋದರಿಯು ಕಂಸನಿಗೆ ಎಚ್ಚರಿಕೆಯ ಗಂಟೆಯನ್ನು ಬಾರಿಸಿ ಹಿಮಾಲಯಕ್ಕೆ ಹೊರಟು ಹೋದಳು.

ಅಂದಿನಿಂದ ದುಷ್ಟಾತ್ಮನಾದ ಆ ಕಂಸನು ಭಯಭ್ರಾಂತನಾಗಿ ಆ ವಸುದೇವ ಕುಮಾರನನ್ನು ಕೊಲ್ಲಿಸಲಿಕ್ಕಾಗಿ ವೃಂದಾವನಕ್ಕೆ ಅನೇಕ ದುಷ್ಟದಾನವರನ್ನು ಕಳಿಸಿಕೊಟ್ಟ. ಬಾಲಕೃಷ್ಣ ಕಂಸನ ಆ ಎಲ್ಲ ದೂತ ದೈತ್ಯರನ್ನು ಲೀಲಾಜಾಲವಾಗಿ ಸಂಹರಿಸಿದ. ಬೆರಳುತುದಿಯ ಮೇಲೆ ಗೋವರ್ಧನಗಿರಿಯಂಥ ಬೆಟ್ಟವನ್ನು ಲೀಲೆಯಿಂದ ಎತ್ತಿ ಹಿಡಿದ. ಕಾಲೀಯನಂಥ ದುಷ್ಟಸರ್ಪವನ್ನು ಯಮುನೆಯ ಮಡುವಿನಿಂದ ಹೊರ ಹೊರಡಿಸಿದ. ಕೇಶಿ ಮೊದಲಾದ ಘೋರ ಕ್ರೂರ ರಕ್ಕಸರನ್ನೆಲ್ಲ ಸಂಹರಿಸಿದ. ಸ್ವಯಂ ದೇವೇಂದ್ರ ನೆಲದವರೆಗೆ ನಡೆದುಬಂದು ಅವನ ದರ್ಶನತೆಗೆದುಕೊಂಡು ಹೋದ.

ಬಾಲಕೃಷ್ಣನ ಈ ಎಲ್ಲ ಕೌತುಕದ ಸಮಾಚಾರವನ್ನು ಕೇಳಿ ಕಂಸ ಭೀತಿಯಿಂದ ನಡುಗಿಹೋದ. ಅದಕ್ಕಾಗಿ ಈ ರಾಮಕೃಷ್ಣ ಇಬ್ಬರನ್ನೂ ಮಥುರಾಪಟ್ಟಣಕ್ಕೆ ಕರೆಸಿಕೊಂಡು ಮದೋನ್ಮತ್ತವಾದ ಆನೆಗಳಿಂದಾಗಲೀ ಜಟ್ಟಿಗಳಿಂದಾಗಲೀ ಆ ರಾಮ ಕೃಷ್ಣನನ್ನು ಕೊಲ್ಲಿಸಬೇಕು ಎಂಬ ದುರಾಲೋಚನೆಯಿಂದ ಇಲ್ಲಿಗೆ ನನ್ನನ್ನು ಕಳಿಸಿದ್ದಾನೆ. ಈಗ ವಸುದೇವನನ್ನು ಆ ಕಂಸ ಬಂದೀಮನೆಯಲ್ಲಿ ಇಡದಿದ್ದರೂ ತೊಂದರೆ ಕೊಡುತ್ತಿದ್ದಾನೆ. ಈ ಎಲ್ಲ ಸಮಾಚಾರವನ್ನು ನಿಮಗೆ ನಾನು ತಿಳಿಸಿದ್ದೇನೆ. ಈ ವ್ರಜಭೂಮಿಯಲ್ಲಿರುವ ಎಲ್ಲ ಗೋಪಾಲಕರೂ ಮಥುರೆಯಲ್ಲಿರುವ ಆ ಬಿಲ್ಲಿನ ಹಬ್ಬಕ್ಕೆ ಬರಲಿ. ಅಲ್ಲಿರುವ ಬಗೆಬಗೆಯ ಭಕ್ಷ್ಯಭೋಜ್ಯಪರಮಾನ್ನಗಳನ್ನು ಭೋಜನ ಮಾಡಲಿ. ಅದಕ್ಕಾಗಿ ನೀವೆಲ್ಲರೂ ನಾಳೆ ಹಾಲು ಮೊಸರು ತುಪ್ಪ ಬೆಣ್ಣೆ ಮೊದಲಾದ ನಿಮ್ಮಲ್ಲಿ ಇರುವ ಗವ್ಯ ಪದಾರ್ಥಗಳನ್ನು ತೆಗೆದುಕೊಂಡು ಮಥುರಾಪಟ್ಟಣಕ್ಕೆ ಹೊರಡಿರಿ. ಮುಖ್ಯವಾಗಿ ಬಲರಾಮ ಕೃಷ್ಣರನ್ನು ನಿಮ್ಮೊಡನೆ ಕರೆದುಕೊಂಡು ಹೊರಡಿರಿ. ರಾಮಕೃಷ್ಣರಿಗೆ ಕಂಸನಿಂದ ಯಾವುದೇ ಅಪಾಯ ಭಯ ಇರುವದಿಲ್ಲ. ಕೃಷ್ಣನು ನಿಶ್ಚಿತವಾಗಿಯೂ ಕಂಸನನ್ನು ಸಂಹರಿಸುತ್ತಾನೆ. ಈ ವಿಷಯದಲ್ಲಿ ನಿಮಗೆ ಸಂಶಯವೇ ಬೇಡ. ಯಾವ ಭಯವೂ ಬೇಡ.

ಅಕ್ರೂರನ ಈ ಮಾತುಗಳನ್ನು ಕೇಳಿ ನಂದಗೋಪನೇ ಮೊದಲಾದ ಹಿರಿಯ ಗೋಪಾಲಕರೆಲ್ಲರೂ ಹೆದರಿಹೋದರು. ದುಃಖಸಾಗರದಲ್ಲಿಯೇ ಮುಳುಗಿದರು. ಆಗ ಕೃಷ್ಣನು ಅವರೆಲ್ಲರನ್ನೂ ಕರೆದು "ಯಾರೂ ಇನಿತೂ ಹೆದರಬೇಡಿರಿ. ನಾನು ನಾಳೆಯೇ ಅಣ್ಣ ಬಲರಾಮನೊಂದಿಗೆ ಮಥುರಾಪಟ್ಟಣಕ್ಕೆ ಹೋಗುತ್ತೇನೆ, ದೈತ್ಯ ಧುರೀಣನಾದ ದುರುಳ ಕಂಸನನ್ನು ಧ್ವಂಸಮಾಡಿ ಬರುತ್ತೇನೆ. ದುಷ್ಟ ಪಾಪಿಷ್ಠರಾದ ದೈತ್ಯಾಧಮರನ್ನೆಲ್ಲ ವಧಿಸಿ ಅಖಂಡ ಭೂಮಂಡಲವನ್ನೆಲ್ಲ ಸುರಕ್ಷಿತವಾಗಿ ಕಾಪಾಡುತ್ತೇನೆ. ನೀವು ಯಾರೂ ಭಯಪಡಬೇಡಿರಿ. ನೀವೆಲ್ಲರೂ ನಿಶ್ಚಿಂತೆಯಿಂದ ಮಥುರಾ ಪಟ್ಟಣಕ್ಕೆ ಹೊರಡಿರಿ.

ಕೃಷ್ಣನ ಈ ದಿಟ್ಟ ನುಡಿಗಳನ್ನು ಕೇಳಿ ಧೈರ್ಯಬಂದಿತು ನಂದನೇ ಮೊದಲಾದ ಗೋಪವೃದ್ಧರಗೆ. ಅಕ್ರೂರನ ವಚನದಿಂದಲೂ ಹಾಗೂ ತಾವು ಗೋಕುಲ ಹಾಗೂ ವೃಂದಾವನಗಳಲ್ಲಿ ಪ್ರತ್ಯಕ್ಷವಾಗಿ ತಮ್ಮ ಕಣ್ಣುಗಳಿಂದಲೇ ನೋಡಿದ ಬಾಲಕೃಷ್ಣನ ಪ್ರೌಢ ಲೀಲೆಗಳನ್ನೂ ಅವನ ಲೋಕೋತ್ತರ ವಿರಾಟ ಶಕ್ತಿಯನ್ನೂ ನೆನೆದು ಅವನ ಅಮಾನುಷ ಮಹಿಮೆಯ ವಿಷಯದಲ್ಲಿ ಭರವಸೆಯನ್ನು ತಾಳಿದರು. ಹಾಲು ಮೊಸರು ತುಪ್ಪ ಬೆಣ್ಣೆಗಳನ್ನು ತೆಗೆದುಕೊಂಡು ಮತ್ತು ಬಗೆ ಬಗೆಯ ಮೃಷ್ಟಾನ್ನಗಳನ್ನು ಮಾಡಿ ಕೊಂಡು ಮಥುರಾಗಮನದ ಸಿದ್ಧತೆಯನ್ನು ಮಾಡಿದರು.

ಇತ್ತ ಅಕ್ರೂರನು ನಂದಗೋಪನ ಮನೆಯಲ್ಲಿ ಯಶೋದಾದೇವಿಯು ಮಾಡಿ ಬಡಿಸಿದ ಅಮೃತದಂಥ ಸಾತ್ವಿಕ ಭೋಜನವನ್ನು ಆನಂದದಿಂದ ಊಟ ಮಾಡಿದ. ಭೋಜನಾನಂತರ ಆಚಮನ ಮಾಡಿದ ಆ ಅಕ್ರೂರನಿಗೆ ನಂದಗೋಪ ತಾಂಬೂಲವನ್ನು ನೀಡಿದ.

ಸಂಜೆ ಸೂರ್ಯಾಸ್ತವಾದ ಬಳಿಕ ಅಕ್ರೂರನು ಸಂಧ್ಯಾವಂದನೆಗೈದು ರಾಮಕೃಷ್ಣ ರೊಡನೆ ಹಾಲು ಅನ್ನ ಊಟ ಮಾಡಿದ. ಮತ್ತು ರಾತ್ರಿ ಭೋಜನೋತ್ತರ ಹೂವು ಹಾಸಿದ ಮಂಚದ ಮೇಲೆ ಮೆತ್ತಗಿನ ಹಾಸಿಗೆಯ ಮೇಲೆ ಮಲಗಿದ ಕೃಷ್ಣನನ್ನು ನೋಡಿ ಅಕ್ರೂರನಿಗೆ ಪರಮಾನಂದವಾಯಿತು. ಅವನ ಕಂಗಳಲ್ಲಿ ಹರ್ಷಾಶ್ರು. ಮೈ ತುಂಬ ರೋಮಾಂಚ. ಅವನು ನಿದ್ದೆಯನ್ನು ತೊರೆದು ಕೃಷ್ಣನ ಅಡಿದಾವರೆಗಳನ್ನು ನೀವುತ್ತ ಪಾದಸಂವಾಹನ ಮಾಡಿದ ''ಇಂದು ನಾನು ಧನ್ಯನಾದೆ. ಭಗವಂತನ ಕಾಲುಗಳನ್ನು ಒತ್ತುವ ಸೌಭಾಗ್ಯ ಇಂದು ನನಗೆ ಪ್ರಾಪ್ತವಾಗಿದೆ. ಮೂರು ಲೋಕದ ಐಶ್ವರ್ಯವೆಲ್ಲವೂ ಇಂದು ನನ್ನ ಕರಗತವಾಗಿದೆ. ಬೇಕು ಎಂದಾಗ ಬ್ರಹ್ಮಾದಿದೇವತೆಗಳಿಗೂ ಕೂಡ ದೊರಕಲಾರದ ಭಗವಂತನ ಕೋಮಲವಾದ ಕಾಲುಗಳ ಕೈಂಕರ್ಯವು ನನಗೆ ದೊರೆತದ್ದು ಜನ್ಮಾಂತರದ ಸುಕೃತ. ಲಕ್ಷ್ಮೀದೇವಿಯು ತನ್ನ ಕೋಮಲ ಕರಪಲ್ಲವಗಳಿಂದ ಸಂವಾಹನಗೈಯುವ ಹರಿಚರಣಗಳ ಪಾವನ ಸ್ಪರ್ಶವು ಇಂದು ನನಗೆ ಲಭಿಸಿದ್ದು ನನ್ನ ಸುದೈವ.''

ಹೀಗೆ ತನ್ನ ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತ ಭಗವದ್ ಭಕ್ತನಾದ ಅಕ್ರೂರನು ಬೆಳಗಾಗುವರೆಗೆ ಕೃಷ್ಣನ ಪಾದ ಪದ್ಮಗಳನ್ನು ಬಿಟ್ಟರಲೇ ಇಲ್ಲ. ಇಡೀ ರಾತ್ರಿಯೆಲ್ಲವೂ ಶ್ರೀಕೃಷ್ಣನ ಕಾಲುಗಳನ್ನು ಮೆತ್ತಗೆ ಒತ್ತುತ್ತಲೇ ಇದ್ದ. ಅಂದಿನ ರಾತ್ರಿ ಅಕ್ರೂರನಿಗೆ ವಿಚಿತ್ರವಾದ ಬ್ರಹ್ಮಾನಂದದ ಅನುಭವ.

ನಸುಕು ಹರಿಯಿತು. ಅಕ್ರೂರ ಭಕ್ತಿಯಿಂದ ಸುಪ್ರಭಾತ ಹೇಳಿದ. ಅನಂತರ ರಾಮಕೃಷ್ಣರು ಹಾಸಿಗೆ ಬಿಟ್ಟು ಮೇಲೆ ಎದ್ದರು ತಾಯಿ ಯಶೋದೆಯ ಅಡಿದಾವರೆಗಳನ್ನು ಗಟ್ಟಿಯಾಗಿ ಹಿಡಿದು ಹಣೆ ಹಚ್ಚಿ ನಮಸ್ಕರಿಸಿದರು. ಅವರಿಬ್ಬರನ್ನು ಎಬ್ಬಿಸಿ ಯಶೋದೆಯು ಪ್ರೀತಿಯಿಂದ ತಬ್ಬಿಕೊಂಡಳು. ಮಕ್ಕಳಿಬ್ಬರೂ ತನ್ನನ್ನು ಬಿಟ್ಟು ಮಥುರೆಗೆ ಹೊರಟದ್ದರಿಂದ ಅವಳಿಗೆ ಅತ್ಯಂತ ದುಃಖವಾಗಿದ್ದಿತು. ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿಯುತ್ತಲ್ಲಿದವು. ಮತ್ತೆ ಮತ್ತೆ ಅವಳು ಅವರಿಬ್ಬರನ್ನು ಬಿಗಿದಪ್ಪಿ ನೆತ್ತಿ ಮೂಸಿ ಮೈದಡವಿ ಮುದ್ದಾಡಿ ಆಶೀರ್ವಾದಮಾಡಿ ಬೀಳ್ಕೊಟ್ಟಳು.

ಅಕ್ರೂರನು ಕೂಡ ಯಶೋದೆಯ ಪಾದಗಳಿಗೆ ಪೊರಮೊಟ್ಟ. ಕೈ ಜೋಡಿಸಿ ಹೇಳಿದ ''ತಾಯಿ, ನೀನು ಶೋಕಿಸಬೇಡ. ಈ ನಿನ್ನ ಮಗನಾದ ಕೃಷ್ಣನು ಕಂಸನನ್ನು ಸಿಗಿದು

ಹಾಕುವ. ಎಲ್ಲ ಜಗತ್ತಿಗೆ ಅಧಿರಾಜನು ಆಗುವ. ಇದರಲ್ಲಿಯ ಸಂಶಯವೇ ಇಲ್ಲ. ನನ್ನ ಮೇಲೆ ದಯೆದೋರು.''

ಹೀಗೆ ಹೇಳಿ ಅಕ್ರೂರನು ಬಲರಾಮ ಶ್ರೀಕೃಷ್ಣರೊಂದಿಗೆ ರಥವನ್ನು ಏರಿದ. ವೃಂದಾವನದಲ್ಲಿಯ ಹಿರಿಯ ನಂದಗೋಪನೆ ಮೊದಲಾದ ಗೋಪವೃದ್ಧರೆಲ್ಲ ಹಾಲು ಮೊಸರು ಬೆಣ್ಣೆ ತುಪ್ಪಗಳೆಲ್ಲವನ್ನೂ ಹಿಡಿದುಕೊಂಡು ಮಥುರೆಗೆ ಪ್ರಯಾಣ ಹೊರಟರು. ಗೋಪಿಕಾಸ್ತ್ರೀಯರು ಕೃಷ್ಣನನ್ನು ಬಿಟ್ಟು ಇರಲಾಗದೇ ಕಣ್ಣೀರು ಕರೆಯುತ್ತ ಅವನನ್ನು ಹಿಂಬಾಲಿಸಿದರು. ರಥದ ಹಿಂದಿನಿಂದ ಓಡುತ್ತ ತನ್ನ ಕಡೆಗೆ ನೋಡುತ್ತ ಬರುತ್ತಲಿರುವ ಆ ಗೋಪಾಂಗನೆಯರನ್ನು ಕಂಡು ಕೃಷ್ಣನು ರಥವನ್ನು ನಿಲ್ಲಿಸಿ ಅವರನ್ನೆಲ್ಲಸಮಾಧಾನ ಮಾಡಿ ಮನೆಗೆ ಹಿಂದಿರುಗಲು ಹೇಳಿದ. ರಥವು ನಾಗಾಲೋಟದಿಂದ ಮುಂದೆ ಓಡಿತು ಅವನ ವಿರಹದಿಂದ ವಿಹ್ವಲರಾದ ಆ ದನಗಾಹಿ ವನಿತೆಯರು ಶೋಕಸಂತಪ್ತರಾಗಿ ಕೃಷ್ಣಾ ಕೃಷ್ಣಾ ಗೋವಿಂದ ಎಂದು ಒದರುತ್ತ ಅತ್ತು ಅತ್ತು ಕಣ್ಣೀರಿನ ಕೋಡಿ ಹರಿಸಿದರು ಈ ಕೃಷ್ಣನ ರಥವು ಕಣ್ಮರೆಯಾದರೂ ಅವರಿನ್ನೂ ಅವನು ಹೋದ ದಿಕ್ಕನ್ನೆ ನಿಟ್ಟಿಸುತ್ತ ನಿರಾಶರಾಗಿ ವಿಲಪಿಸುತ್ತ ನಿಂತುಕೊಂಡರು.

ಇತ್ತ ಆಕ್ರೂರ ರಾಮಕೃಷ್ಣರನ್ನು ಕೂಡಿಸಿಕೊಂಡು ರಥವನ್ನು ವೇಗವಾಗಿ ಹೊಡೆದ. ದಾರಿಯಲ್ಲಿ ಯಮುನಾ ನದಿಯ ದಂಡೆಗೆ ಬಂದಾಗ ರಥವನ್ನು ನಿಲ್ಲಿಸಿದ. ತಾನು ರಥದಿಂದ ಇಳಿದು ತನ್ನ ಸ್ನಾನ ಸಂಧ್ಯೆ ಪೂಜಾದಿ ಅಹ್ನಿಕಗಳನ್ನು ಮಾಡಲು ಯಮುನೆಯ ನೀರಿಗೆ ಇಳಿದ. ಮುಳುಗು ಹಾಕಿದ. ಯಮುನೆಯ ಪ್ರವಾಹದಲ್ಲಿ ಮುಳುಗಿ ಅಘಮರ್ಷಣ ಮಂತ್ರವನ್ನು ಜಪಿಸತೊಡಗಿದ. ಆಗ ಅವನಿಗೆ ಆ ನೀರಿನ ಒಳಗೆ ದಿವ್ಯಚಂದನ ಬಳಿದುಕೊಂಡು ಮುತ್ತಿನ ಆಭರಣಗಳನ್ನು ಧರಿಸಿದ. ರಾಮಕೃಷ್ಣರು ಆ ಯಮುನೆಯ ಗರ್ಭದಲ್ಲಿ ಗೋಚರಿಸಿದರು. ತಾನು ಸ್ನಾನಕ್ಕೆ ಬರುವಾಗ ರಥದಲ್ಲಿಯೇ ಇದ್ದ ಆ ರಾಮಕೃಷ್ಣರು ಯಮುನೆಯ ನೀರಿನ ತರಂಗಾಂತರಂಗದಲ್ಲಿ ಬಂದು ಕೂತಿದ್ದು ಯಾವಾಗ ಮತ್ತು ಹೇಗೆ ಎಂದು ಕೌತುಕವಾಯಿತು. ಅಕ್ರೂರ ಒಮ್ಮೆಲೇ ನೀರಿನಿಂದ ಮೇಲೆ ಎದ್ದ. ರಥದ ಕಡೆ ದೃಷ್ಟಿ ಹರಿಸಿದ. ಸೋದರರಿಬ್ಬರೂ ಸರಸಾಲಾಪಗೈಯುತ್ತ ರಥದಲ್ಲಿಯೇ ಅಧಿಷ್ಠಿತರಾಗಿದ್ದರು. ಅವರಿಬ್ಬರನ್ನು ಕಣ್ತುಂಬ ನೋಡಿ ಮತ್ತೆ ನೀರಿನಲ್ಲಿ ಮುಳುಗಿದ ಅಕ್ರೂರ. ಅಲ್ಲಿಯ ಪ್ರವಾಹದ ಆಳದಲ್ಲಿ ಆದಿಶೇಷನ ಅಂಕಪರ್ಯಂಕದಲ್ಲಿ ಲಕ್ಷ್ಮೀದೇವಿಯೊಂದಿಗೆ ಅದೇ ಕೃಷ್ಣ ಶೋಭಿಸುತ್ತಿದ್ದಾನೆ. ಸನಕಾದಿಗಳು ಅವನನ್ನು ಸ್ತೋತ್ರ ಮಾಡುತ್ತಲಿದ್ದಾರೆ ದೇವಾಧಿದೇವತೆಗಳು ಕೈಂಕರ್ಯಕ್ಕಾಗಿ ಕಾದು ನಿಂತಿದ್ದಾರೆ. ಹೀಗೆ ಮತ್ತೆ ಮತ್ತೆ ಮೇಲೆ ಎದ್ದು ನೀರಿನಲ್ಲಿ ಮುಳುಗಿ ಜಲ ಸ್ಥಲ ಎರಡು ಕಡೆಗೂ ಭಗವಂತನ ದಿವ್ಯ ರೂಪವನ್ನು ಕಂಡು ಅತ್ಯಾಶ್ಚರ್ಯವಾಯಿತು. ಆ ಅಕ್ರೂರನಿಗೆ, ಅವನು ಗದ್ಗದಿತ ಕಂಠನಾಗಿ ಕೃಷ್ಣನನ್ನು ಸ್ತೋತ್ರ ಮಾಡಿದ.

## ಅಕ್ರೂರ ಕೃತ ಶ್ರೀಕೃಷ್ಣ ಸ್ತೋತ್ರಂ

ಕಾಲಾತ್ಮನೇ ನಮಸ್ತುಭ್ಯಮನಾದಿನಿಧನಾಯ ಚ ।
ಅವ್ಯಕ್ತಾಯ ನಮಸ್ತುಭ್ಯಮವಿಕಾರಾಯ ತೇ ನಮಃ ॥

ಭೂತಭರ್ತ್ರೇ ನಮಸ್ತುಭ್ಯಂ ಭೂತವ್ಯಾಪ್ತಾಯ ತೇ ನಮಃ ।
ನಮಸ್ತೇ ಸರ್ವ ಭೂತಾನಾಂ ನಿಯಂತ್ರೇ ಪರಮಾತ್ಮನೇ ॥

ವಿಕಾರಾಯಾವಿಕಾರಾಯ ಪ್ರತ್ಯಕ್ಷ ಪುರುಷಾಯ ಚ ।
ಗುಣಭರ್ತ್ರೇ ನಮಸ್ತುಭ್ಯಂ ನಿಯಮಾಯ ನಮೋ ನಮಃ ॥

ದೇಶಕಾಲಾದಿ ನಿರ್ಭೇದರಹಿತಾಯ ಪರಾತ್ಮನೇ ।
ಅನಂತಾಯ ನಮಸ್ತುಭ್ಯಂ ಅಚ್ಯುತಾಯ ನಮೋ ನಮಃ ॥

ಗೋವಿಂದಾಯ ನಮಸ್ತುಭ್ಯಂ ತ್ರಯೀನಾಥಾಯ ಶಾರ್ಙ್ಗಿಣೇ ।
ನಾರಾಯಣಾಯ ವಿಶ್ವಾಯ ವಾಸುದೇವಾಯ ತೇ ನಮಃ ॥

ವಿಷ್ಣವೇ ಪುರುಷರೂಪಾಯ ಶಾಶ್ವತಾಯ ನಮೋ ನಮಃ ।
ಪದ್ಮನೇತ್ರಾಯ ನಿತ್ಯಾಯ ಶಂಖ ಚಕ್ರಧರಾಯ ಚ ॥

ಉದ್ಯತ್ಕೋಟ ರವಿಪ್ರಖ್ಯಭೂಷಣಾಂಚಿತ ವರ್ಚಸೇ ।
ಹರಯೇ ಸರ್ವಲೋಕಾನಾಮೀಶ್ವರಾಯ ನಮೋ ನಮಃ ॥

ಸವಿತ್ರೇ ಸರ್ವ ಜಗತಾಂ ಬೀಜಾಂ ಪರಮಾತ್ಮನೇ ।
ಸಂಕರ್ಷಣಾಯ ಕೃಷ್ಣಾಯ ಪ್ರದ್ಯುಮ್ನಾಯ ನಮೋ ನಮಃ ॥

ಅನಿರುದ್ಧಾಯ ಧಾತ್ರೇ ಚ ವಿಧಾತ್ರೇ ವಿಶ್ವಯೋನಯೇ ।
ಸಹಸ್ರ ಮೂರ್ತಯೇ ತುಭ್ಯಂ ಬಹುಮೂರ್ಧಾಂಘ್ರಿಬಾಹವೇ ॥

ಸಹಸ್ರನಾಮ್ನೇ ನಿತ್ಯಾಯ ಪುರುಷಾಯ ನಮೋ ನಮಃ ।
ನಮಸ್ತೇ ನಾಗಪರ್ಯಂಕ ಶಾಯಿನೇ ಸೌಮ್ಯರೂಪಿಣೇ ॥

ಕೇಶವಾಯ ನಮಸ್ತುಭ್ಯಂ ಪೀತ ವಸ್ತ್ರಧರಾಯ ಚ ।
ಲಕ್ಷ್ಮೀಘನಕುಚಾಶ್ಲೇಷ ವಿಮರ್ದೋಜ್ವಲವಕ್ಷಸೇ ॥

ಶ್ರೀಧರಾಯ ನಮಸ್ತುಭ್ಯಂ ಶ್ರೀಶಾಯಾಽನಂತ ರೂಪಿಣೇ ॥

**ಮಹಾದೇವ:-** ಅಕ್ರೂರನು ಯಮುನಾ ನದಿಯ ನೀರಿನ ಅಂತರಂಗದಲ್ಲಿ ಭಗವಂತನ ದಿವ್ಯಮೂರ್ತಿಯನ್ನು ಸಾಕ್ಷಾತ್ಕರಿಸಿಕೊಂಡು ಭಕ್ತ್ಯುದ್ರೇಕದಿಂದ ಶ್ರೀಕೃಷ್ಣನನ್ನು ಸ್ತುತಿಸಿ ಬಣ್ಣಿಸಿದ ಈ ಕೃಷ್ಣಸ್ತೋತ್ರವನ್ನು ಸ್ನಾನಮಾಡುವಾಗ ಪಠಣ ಮಾಡಿದರೆ ಸರ್ವತೀರ್ಥಗಳಲ್ಲಿಯೂ ಸ್ನಾನ ಮಾಡಿದ ಪುಣ್ಯವನ್ನು ಪಡೆಯುತ್ತಾರೆ. ಪರಮ ಭಕ್ತನಾದ ಅಕ್ರೂರನು ಹೀಗೆ ಶ್ರೀಕೃಷ್ಣನನ್ನು ಸ್ತೋತ್ರ ಮಾಡಿ ನೀರಿನಿಂದಲೂ ಅಲ್ಲಿಯೇ ಇದ್ದ ಸುಗಂಧಿ ತುಳಸಿಗಳಿಂದಲೂ ಪೂಜೆ ಮಾಡಿ ಮೇಲೆ ಎದ್ದು ದಂಡೆಗೆ ಬಂದ. ರಥದ ಬಳಿಗೆ ಸಾರಿದ. ರಥದಲ್ಲಿಯೇ ನಗುತ್ತ ಕುಳಿತಿದ್ದರು ರಾಮಕೃಷ್ಣರು. ಅವರಿಗೆ ನಮಸ್ಕಾರ

ಮಾಡಿದ. ಅಕ್ರೂರ ವಿನಯದಿಂದ ಕೈಜೋಡಿಸಿ ನಿಂತುಕೊಂಡ. ಮೆಲುನಗೆಯಿಂದ ಅವನನ್ನು ಮಾತನಾಡಿಸಿದ ಗೋವಿಂದ.

**ಕೃಷ್ಣ:-** ಅಕ್ರೂರ, ಯಮುನೆಯ ನೀರಿನಲ್ಲಿ ನೀನು ಯಾವ ಆಶ್ಚರ್ಯವನ್ನು ಕಂಡೆ ?

**ಅಕ್ರೂರ:-** ಕೃಷ್ಣ, ಈ ಜಗತ್ತಿನಲ್ಲಿ ಅತ್ಯಾಶ್ಚರ್ಯಕರವಾದ ವಸ್ತು ಎಂದರೆ ನೀನೇ. ನೀನು ಇಲ್ಲಿಯೇ ಇದ್ದು ಎಲ್ಲ ಕಡೆಗೂ ವ್ಯಾಪಿಸಿರುವೆ. ಇದು ಪರಮಾಶ್ಚರ್ಯವಲ್ಲವೇ? ನೀನು ಒಬ್ಬನೇ ಆದರೂ ಪೃಥವಿ, ಜಲ, ತೇಜ ವಾಯು ಆಕಾಶ ಪಂಚಭೂತಾತ್ಮಕನೂ ಆಗಿ ಇರುವದು ಆಶ್ಚರ್ಯವಲ್ಲದೇ ಮತ್ತೇನು? ಕೋಟಿ ಮನ್ಮಥರಿಗಿಂತ ಸುಂದರನಾದ ನೀನು ಮೀನ, ಆಮೆ, ಹಂದಿ, ಸಿಂಹ ಮೊದಲಾದ ರೂಪಗಳನ್ನು ತಳೆದಿರುವೆ. ಇದೂ ಒಂದು ಆಶ್ಚರ್ಯವೆ ಸರಿ. ನೀನು ಏಕೈಕ ಪ್ರಭುವಾದರೂ ಬ್ರಹ್ಮರುದ್ರಾದಿ ದೇವತೆಗಳಲ್ಲಿಯೂ ಇಂದ್ರಾದಿ ದಿಕ್ಪಾಲಕರಲ್ಲಿಯೂ ಇದ್ದು ತತ್ತಚ್ಛಬ್ದವಾಚ್ಯನಾಗಿ ಅನೇಕ ಅವತಾರಗಳನ್ನು ಮಾಡಿ ಅನೇಕ ರೂಪಿಯಾಗಿ ಕಾಣಿಸಿಕೊಳ್ಳುವಿ. ಇದಕ್ಕಿಂತ ಆಶ್ಚರ್ಯ ಏನು? ನೀನು ಇಲ್ಲಿ ರಥದಲ್ಲಿಯೇ ಕುಳಿತಿದ್ದರೂ ಯಮುನೆಯ ನೀರಿನ ಅಂತರಾಳದಲ್ಲಿ ಶೇಷಶಾಯಿಯಾಗಿ ನನಗೆ ದರ್ಶನವನ್ನು ಕೊಟ್ಟೆ. ಅದನ್ನು ನೋಡಿ ಧನ್ಯನಾಗಿ ನಾನು ನಿನ್ನನ್ನು ನೀರಿನ ನಟ್ಟ ನಡುವೆ ನಿಂತು ಪೂಜೆ ಮಾಡಿ ಇಲ್ಲಿಗೆ ಬಂದಾಗ ಈ ರಥದಲ್ಲಿಯೂ ನೀನು ನಾನು ಸ್ನಾನಕ್ಕೆ ಹೋಗುವಾಗ ಕುಳಿತಂತೆಯೇ ಕುಳಿತಿರುವೆ. ಈ ಎಲ್ಲ ಆಶ್ಚರ್ಯ ಪರಂಪರೆಗಳನ್ನು ನೋಡಿ ನಾನು ಚಕಿತನು ಆಗಿದ್ದೇನೆ. ಚಮತ್ಕೃತನೂ ಆಗಿದ್ದೇನೆ. ನಿನಗೆ ನನ್ನ ಸಾಷ್ಟಾಂಗ ಪ್ರಣಾಮ.

ಹೀಗೆ ಹೇಳಿ ಅಕ್ರೂರ ರಥಾರೋಹಣ ಮಾಡಿದ. ತ್ವರಿತಗತಿಯಿಂದ ಮಥುರಾ ಪಟ್ಟಣಕ್ಕೆ ಬಂದ. ಅಗಸೆಯ ಬಾಗಿಲ ಬಳಿಯಲ್ಲಿಯೇ ಅವರನ್ನು ಇಳಿಸಿ ಬಿಟ್ಟ. ರಾಮ ಕೃಷ್ಣರನ್ನು ಕರೆತಂದ ಸಮಾಚಾರ ತಿಳಿಸಿದ. ಕಂಸನಿಗೆ ಒಳ್ಳೇ ಹಿಗ್ಗು. ಅವನಿಗೆ ಕೃಷ್ಣ ತನ್ನ ಕೈಯಲ್ಲಿಯೇ ಸಿಕ್ಕು ಬಿಟ್ಟ. ಇನ್ನೇನು ಅವನು ಮಥುರೆಯಲ್ಲಿ ಮರಣವನ್ನು ಅಪ್ಪುವದು ನಿಶ್ಚಿತ ಎಂದು ಕಂಸ ಭಾವಿಸಿದ. ಆ ರಾಮಕೃಷ್ಣರನ್ನು ಕರೆ ತಂದದ್ದಕ್ಕಾಗಿ ಅಭಿನಂದಿಸಿದ ಅಕ್ರೂರನನ್ನು. ಕಂಸನಿಂದ ಸತ್ಕೃತನಾಗಿ ಅಕ್ರೂರ ತನ್ನ ಮನೆಗೆ ಮರಳಿದ.

ಮಥುರಾ ಪಟ್ಟಣದಲ್ಲಿ ಬಲರಾಮಕೃಷ್ಣರು ಬೀದಿ ಗುಂಟ ನಡೆದರು. ಅದು ಸಂಜೆಯ ಸಮಯ ಸಂಜೆಯ ಹೊಂಬಣ್ಣ ಆ ಗೋಪಾಲ ಬಾಲಕರ ಕಾಯ ಕಾಂತಿಗೆ ಕಮನೀಯತೆಯನ್ನು ಒದಗಿಸಿತ್ತು. ಇಬ್ಬರೂ ಅಣ್ಣ ತಮ್ಮಂದಿರು ಕೈ ಕೈ ಹಿಡಿದು ಕೊಂಡು ಮಂದಹಾಸ ಮಾಡುತ್ತ ರಾಜಬೀದಿಯಲ್ಲಿ ಕಟ್ಟಾನೆಗಳಂತೆ ದಿಟ್ಟ ಹೆಜ್ಜೆಗಳನ್ನಿಡುತ್ತ ಮುನ್ನಡೆದರು.

ಅದೇ ವೇಳೆಯಲ್ಲಿ ಅರಮನೆಯ ಅಗಸ ರಾಜರ ಬಟ್ಟೆಗಳಿಗೆ ಬಣ್ಣ ಹಾಕಿ ಅರಮನೆಗೆ ಕೊಡಲು ತೆಗೆದುಕೊಂಡು ಹೊರಟಿದ್ದ. ಅವನಿಗೆ ಬಟ್ಟೆ ಕೊಡಲು ಕೇಳಿದರು, ಬಲರಾಮಕೃಷ್ಣರು. ಆದರೆ ಉದ್ಧಟನಾದ ಆ ಅರಮನೆಯ ಅಗಸ ಬಟ್ಟೆಗಳನ್ನು ಕೊಡದೇ ಇವರಿಗೆ ಕೆಟ್ಟ ಮಾತನಾಡಿ ಗದರಿಸಿದ. ಆಗ ಕ್ರೋಧ ಮುದ್ರೆ ತಳೆದು ಕೃಷ್ಣ ತನ್ನ ಅಂಗೈಯಿಂದ ಆ ರಜಕನನ್ನು ಹೊಡೆದ. ಅವನ ಈ ಏಟನ್ನು ತಾಳಲಾರದೇ ಆ ಅಗಸ ನಡು ಬೀದಿಯಲ್ಲಿಯೇ ನೆತ್ತರಕಾರಿ ನೆಲಕ್ಕೆ ಬಿದ್ದ. ಆಗ ಕೃಷ್ಣನು ಅವನು ಹೊತ್ತು ತಂದ ಬಟ್ಟೆಯ ಮೂಟೆಯನ್ನು ಬಿಚ್ಚಿ ತನ್ನ ಜೊತೆಗೆ ಬಂದ ಎಲ್ಲ ದನಗಾಹಿಗಳಿಗೂ ಒಳ್ಳೊಳ್ಳೆ ಬೆಲೆ ಬಾಳುವ ಪಟ್ಟೆ ಪೀತಾಂಬರಗಳನ್ನು ತೆಗೆದುಕೊಟ್ಟ. ಎಲ್ಲವನ್ನೂ ಹಂಚಿಬಿಟ್ಟ. ತಾವು ಕೂಡ ರಾಮಕೃಷ್ಣರು ಉತ್ತಮವಾದ ವಸ್ತ್ರಗಳನ್ನು ಉಟ್ಟುತೊಟ್ಟುಕೊಂಡರು.

ಮುಂದೆ ಆ ಬಲರಾಮ ಕೇಶವರು ಓರ್ವ ಮಾಳಿಯ ಮನೆಗೆ ಬಂದರು. ಇವರನ್ನು ಕಂಡ ಕೂಡಲೇ ಆ ಮಾಲಾಕಾರನು ತನ್ನ ಬಳಿಯಲ್ಲಿ ಇದ್ದ ಬುಟ್ಟಿ ಬುಟ್ಟಿ ಹೂಗಳನ್ನೆಲ್ಲ ರಾಮಕೃಷ್ಣರ ಮುಂದೆ ಇಟ್ಟು ಕೈ ಮುಗಿದ. ತಾನೇ ಪೋಣಿಸಿ ಮಾಲೆ ಮಾಡಿ ಇಟ್ಟ ಹೂವಿನ ಸರಗಳನ್ನು ಆ ಗೋಪಾಲಕರಿಗೆ ಹಾಗೂ ರಾಮಕೃಷ್ಣರಿಗೆ ಆನಂದದಿಂದ ನೀಡಿ, ಇಡಿಸಿ, ಅಲಂಕರಿಸಿ ಪೂಜೆ ಮಾಡಿದ.

ಅನಂತರ ಪೀತಾಂಬರಧಾರಿಯಾದ ಕೃಷ್ಣನೂ ನೀಲಾಂಬರ ಧಾರಿಯಾದ ಬಲರಾಮನೂ ರಾಜಬೀದಿಯಲ್ಲಿ ರಾಜರಂತೆ ಒಳ್ಳೊಳ್ಳೆ ಬಟ್ಟೆಬರೆ ಹೂವಿನ ಹಾರಗಳಿಂದ ವಿರಾಜಮಾನರಾಗಿ ಮಥುರೆಯ ಮಹಾನಗರದ ಮಾರ್ಗಮಧ್ಯದಲ್ಲಿ ಮೆಲ್ಲಮೆಲ್ಲನೇ ಮುಂದೆ ಬಂದರು. ದಾರಿಯಲ್ಲಿ ಕಂಸನ ರಾಣೀವಾಸಕ್ಕೆ ಚಂದನ ಗಂಧವನ್ನು ಹಿಡಿದು ಕೊಂಡು ಹೊರಟ ಓರ್ವ ಕುಬ್ಜೆಯು ಕಂಡಳು. ಅವಳ ಮೈಯೆಲ್ಲವೂ ಮೂರು ಕಡೆ ಮಣಿದಿತ್ತು. ಗೂನು ಬೆನ್ನಿನಿಂದ ಬಾಗಿ ಸೊಟ್ಟಾಗಿ ಹೆಜ್ಜೆಯಿಟ್ಟು ನಡಿಯುತ್ತಲಿರುವ ಆ ತ್ರಿವಕ್ರೆಯ ಕೈಯಲ್ಲಿ ನಸುಗಂಪು ಸೂಸುವ ಗಂಧ ಚಂದನದ ಪಂಚಪಾತ್ರೆ ಕಲಶಗಳು ಇದ್ದವು. ಆ ಶ್ರೀಗಂಧದ ಸೌರಭದಿಂದ ರಾಮಕೃಷ್ಣರು ಅವಳಿಗೆ ಗಂಧವನ್ನು ಕೊಡು ಎಂದು ಕೇಳಿದರು. ಆಗ ಆನಂದ ಭರಿತಳಾದ ಆ ಕುಬ್ಜೆಯು ಮುಗುಳ ನಗೆ ನಕ್ಕು ಆ ಬಾಲಗೋಪಾಲಕೃಷ್ಣರಿಗೆ ತಾನು ತಂದ ಶ್ರೀಗಂಧ ಚಂದನ ಕರ್ದಮವನ್ನು ಹಚ್ಚಿಕೊಳ್ಳಲು ನೀಡಿದಳು. ರಾಮಕೃಷ್ಣರೂ ಉಳಿದೆಲ್ಲ ಗೋಪಾಲ ಬಾಲಕರೂ ಆ ಶ್ರೀಗಂಧವನ್ನು ಮೈಗೆಲ್ಲ ಪೂಸಿಕೊಂಡು ಅಲಂಕೃತರಾದರು. ತಮಗೆ ಗಂಧವನ್ನು ನೀಡಿ ಉಪಕಾರ ಮಾಡಿದ ಆ ಗೂನಿಯ ಮನಸ್ಸು ಸುಂದರವಾದರೂ ಅಂಕುಡೊಂಕಾಗಿ ಮೂರು ಕಡೆ ಮಣಿದು ವಿದ್ರೂಪವಾಗಿತ್ತು ಅವಳ ಶರೀರ. ಅವಳ ಮೇಲೆ ಶ್ರೀಕೃಷ್ಣನು ದಯೆ ತೋರಿ ಅವಳ ದೇಹ ಮುಟ್ಟಿ ತನ್ನ ಪಾದದಿಂದ ಅವಳ ಪಾದವನ್ನು ಮೆಟ್ಟಿ ಗದ್ದ ಹಿಡಿದು ಮೇಲಕ್ಕೆ ಎತ್ತಿದ. ಅವಳ ದೇಹದ ಬಾಗು, ಗೂನು, ಅಂಕು ಡೊಂಕಗಳೆಲ್ಲವನ್ನು ತಿದ್ದಿ ಸರಳಗೊಳಿಸಿ ಸುಂದರ ತರವಾದ ರೂಪವನ್ನು ಕರುಣಿಸಿದ.

ಅನಂತರ ಆ ಬಲರಾಮ ಶ್ರೀಕೃಷ್ಣರು ತಮ್ಮ ತುರುಗಾಹಿ ತರುಣರ ತಂಡದೊಡನೆ ಯಜ್ಞಶಾಲೆಗೆ ಬಂದರು. ಅಲ್ಲಿಂದ ಧನುಃಶಾಲೆಯಲ್ಲಿ ಹೊಕ್ಕರು. ಅಲ್ಲಿ ಬೆಟ್ಟದಂತೆ ಬೃಹದಾಕಾರವಾಗಿ ಇಟ್ಟ ಭಾರೀ ಗಾತ್ರದ ಒಂದು ಬಿಲ್ಲು ಇದ್ದಿತು. ಅದನ್ನು ನೋಡಿ ಕೃಷ್ಣನು ಅದರ ಬಳಿಗೆ ಹೋದ. ಲೀಲೆಯಿಂದ ಆ ದೈತ್ಯ ಚಾಪವನ್ನು ಎತ್ತಿದ.

ಮನ ಬಂದತ್ತ ಮಣಿಸಿ ಕ್ಷಣಾರ್ಧದಲ್ಲಿ ಮುರಿದು ಹಾಕಿದ. ಬ್ರಹ್ಮಾಂಡವೇ ಬಿರಿಯುವಂಥ ಭೀಕರ ಶಬ್ದ ಉಂಟಾಯಿತು ಆ ಧನುರ್ಭಂಗದಿಂದ. ಅದನ್ನು ಕೇಳಿಯೇ ಕಂಗೆಟ್ಟ ಕಂಸ. ಕೂಡಲೇ ಬರಮಾಡಿಕೊಂಡ ತನ್ನ ಮಂತ್ರಿಗಳನ್ನು ಹಾಗೂ ಸೇನಾಪತಿಗಳನ್ನು. ಪ್ರಮುಖರಾದ ದೈತ್ಯಧುರೀಣರಿಗೆಲ್ಲ ಕರೆ ಹೋಯಿತು. ತನ್ನ ಆಶ್ರಯದಲ್ಲಿ ಇದ್ದ ಜಟ್ಟಿಗಳನ್ನೆಲ್ಲ ಕರೆ ಕಳುಹಿಸಿದ.

ಅವರಲ್ಲಿ ಚಾಣೂರ ವಿಶಿಷ್ಟ ಮತ್ತು ಬಲಿಷ್ಠ. ಅವನೊಬ್ಬ ಬಹಳ ಗಟ್ಟಿಯಾದ ಜಗಜಟ್ಟಿ. ಅವನ್ನು ಉದ್ದೇಶಿಸಿ ಕಳವಳಗೊಂಡ ಕಂಸ ನುಡಿದ.

**ಕಂಸ:-** ಚಾಣೂರ, ನಮ್ಮ ಪಕ್ಷದ ರಾಕ್ಷಸರನ್ನೆಲ್ಲ ಯಮಪಟ್ಟಣಕ್ಕೆ ಅಟ್ಟಿದ ರಾಮಕೃಷ್ಣರು ಮಥುರೆಗೆ ಬಂದಿದ್ದಾರೆ. ನಾಳೆ ಪ್ರಾತಃಕಾಲದಲ್ಲಿ ಅವರನ್ನು ನನ್ನ ಆಸ್ಥಾನಕ್ಕೆ

ಕರೆಸುವೆ. ಮದದಿಂದ ಕೊಬ್ಬಿದ ಆ ಇಬ್ಬರೂ ಬಾಲಕರನ್ನು ಹೇಗಾದರೂ ಮಾಡಿ ನೀನು ಕೊಲ್ಲಿಸು. ಮತ್ತು ಮದಿದ ಆನೆಗಳಿಂದ ಹೊಡೆಯಿಸಿ ತುಳಿಸಿ ಅಥವಾ ಮಲ್ಲಯುದ್ಧ ಆಡಿ ಇಲ್ಲವೇ ಬೇರೆ ಯಾವದಾದರೂ ಹಂಚಿಕೆಯಿಂದ ಅವರನ್ನು ಸಾಯಿಸಬೇಕು.

ಹೀಗೆ ಹೇಳಿ ಭಯಭ್ರಾಂತನಾದ ಕಂಸ ಕೃಷ್ಣನ ಹೆದರಿಕೆಯಿಂದ ತನ್ನ ಅರಮನೆಯ ಅಟ್ಟದ ಮೇಲೆ ಹೋಗಿ ಕುಳಿತುಕೊಂಡ, ಅರಮನೆಗೆ ಬರುವ ಎಲ್ಲ ಬಾಗಿಲುಗಳ ಮುಂಭಾಗಗಳಲ್ಲಿಯೂ ಮದತುಂಬಿದ ಗಂಡಾನೆಗಳನ್ನು ನಿಲ್ಲಿಸಿದ. ಈ ಸಮಾಚಾರವೆಲ್ಲ ಕೃಷ್ಣನಿಗೆ ಅಂದೇ ರಾತ್ರಿ ತಿಳಿದು ಬಂದಿತು. ಆದರೂ ಅವನು ನಿಶ್ಚಿಂತೆಯಿಂದ ಅಣ್ಣನೊಡನೆ ಯಜ್ಞ ಶಾಲೆಯಲ್ಲಿ ವಿಶ್ರಮಿಸಿ ನಿದ್ದೆ ಮಾಡಿದ. ನುಸುಕು ತೆಗೆದಕೂಡಲೇ ರಾಮಕೃಷ್ಣರಿಬ್ಬರೂ ಹಾಸಿಗೆಯಿಂದ ಮೈಮುರಿದು ಮೇಲೆ ಎದ್ದರು. ತಿಳಿ ನೀರಿನಲ್ಲಿ ಮಿಂದರು. ಅಲಂಕಾರ ಮಾಡಿಕೊಂಡರು. ಅಲ್ಪೋಪಹಾರವನ್ನು ಸ್ವೀಕರಿಸಿದರು. ಇಬ್ಬರಿಗೂ ಕಂಸನೊಡನೆ ಹೋರಾಟದ ತವಕ. ಬೇಗ ಸಂಗ್ರಾಮ ರಂಗಭೂಮಿಗೆ ಹೋಗಿ ಕಂಸನು ಸಾಕಿದ ಎಲ್ಲ ಮಲ್ಲರನ್ನೂ ಹಣಿದು ಮಣ್ಣು ಮುಕ್ಕಿಸಬೇಕು. ಮತ್ತು ಅವನ ಮದ್ದಾನೆಗಳನ್ನೆಲ್ಲ ಮೊದಲೇ ಮರ್ದಿಸಬೇಕು ಎಂಬ ಉತ್ಸಾಹ ಇಬ್ಬರಲ್ಲಿಯೂ ತುಂಬಿ ತುಳುಕುತ್ತಿತ್ತು. ಗುಹೆಯಿಂದ ಹೊರಟ ಸಿಂಹದಂತೆ ಅವರಿಬ್ಬರೂ ಹೊರಬಿದ್ದು ಅರಮನೆಯ ಬಾಗಿಲ ಬಳಿಗೆ ಬಂದರು. ಕುವಲಯಾಪೀಡ ಎಂಬ ಹೆಸರಿನ ಕಂಸನ ಕ್ರೂರವಾದ ಮದ್ದಾನೆ ಮದತುಂಬಿ ಪುಟ್ಟ ಬೆಟ್ಟದಂತೆ ಝೂಲಾಡುತ್ತ ನಿಂತುಕೊಂಡಿತ್ತು. ಮದೋತ್ಕಟವಾದ ಆ ಮತ್ತಮಾತಂಗವನ್ನು ಕಂಡಕೂಡಲೇ ಕೃಷ್ಣನು ಗಟ್ಟಿಯಾಗಿ ಅದರ ಸೊಂಡೆ ಹಿಡಿದು ಆಚೀಚೆ ಎಳೆದಾಡಿ ಓಡಾಡಿಸಿ ಅನಂತರ ಸೊಂಡಿಲನ್ನು ಕೈಯಲ್ಲಿ ಹಿಡಿದುಕೊಂಡೇ ಅದರ ಮೇಲೆ ಜಿಗಿದು ಕುಳಿತ. ಅನಂತರ ನೆಲದಲ್ಲಿ ಹಾರಿ ನಾಲ್ಕು ಕಡೆಗೂ ಆ ಆನೆಯನ್ನು ತಿರುಗಿಸಿ ನೆಲದ ಮೇಲೆ ಉರುಳಿಸಿದ. ಕೃಷ್ಣನ ಪ್ರಹಾರದಿಂದ ಆ ದೈತ್ಯಕಾಯದ ಮದೋತ್ಕಟವಾದ ಆನೆಯ ಎಲುಬುಗಳೆಲ್ಲ ಮುರಿದು ಕೆಟ್ಟ ಧನಿಯಿಂದ ಘೀಳಿಟ್ಟು ಅದು ನೆಲದ ಮೇಲೆ ಬಿದ್ದು ಪ್ರಾಣ ಬಿಟ್ಟಿತು. ಆ ಕುವಲಯಾಪೀಡದ ಎರಡುಕೋರೆದಾಡೆಗಳನ್ನು ಕಿತ್ತಿ ಕೈಯಲ್ಲಿ ಎತ್ತಿ ಹಿಡಿದುಕೊಂಡು ಆ ರಾಮಕೇಶವರಿಬ್ಬರೂ ಕಂಸನು ನಿರ್ಮಿಸಿದ ಯುದ್ಧರಂಗದಲ್ಲಿ ಪ್ರವೇಶಿಸಿದರು. ಆ ಇಬ್ಬರೂ ಗೋಪಾಲಬಾಲಕರ ಅಸಾಮಾನ್ಯವಾದ ಶಕ್ತಿ ಪರಾಕ್ರಮಗಳನ್ನು ಕಣ್ಣಾರೆ ಕಂಡ ದೈತ್ಯವೀರರೆಲ್ಲರೂ ರಂಗಭೂಮಿಯನ್ನು ಬಿಟ್ಟು ಓಡಿಹೋಗಿ ಕಂಸನ ಅಂತಃಪುರವನ್ನು ಸೇರಿ ಕೊಂಡರು. ಒಳಗೆ ಹೋಗಿ ಗಟ್ಟಿಯಾಗಿ ಬಾಗಿಲು ಹಾಕಿಕೊಂಡು ಕಿಟಕಿ ಕಪಾಟುಗಳನ್ನು ಮುಚ್ಚಿ ಕೊಂಡು ಎಲ್ಲ ರಾಜಮಲ್ಲರೂ ಮಂತ್ರಿಸೇನಾಪತಿಗಳೂ ಸಾವಿರಾರು ಜನರು ಅಂತಃಪುರದ ಆವರಣದಲ್ಲಿ ಅವಿತುಕುಳಿತುಕೊಂಡರು. ಆ ಬಲರಾಮಕೃಷ್ಣರು ಅರಮನೆಯ ಬಾಗಿಲು ಕಪಾಟುಗಳನ್ನು ಕಾಲಿನಿಂದ ಒದ್ದು ಮುರಿದು ತೆಗೆದು ಒಳಹೊಕ್ಕರು. ಅಲ್ಲಿರುವ ಸೇನಾಪತಿಗಳನ್ನೂ ದೈತ್ಯರನ್ನೂ ಮಲ್ಲರನ್ನೂ ಹೊಡೆದು ಬಡೆದು ಕೈ ಕಾಲು ಮುರಿದು ಮುಟಿಕೆ ಮಾಡಿ ಒಗೆದು ಆನೆಯ ಕೋರೆದಾಡೆಯನ್ನು ತಿರುಗಿಸುತ್ತ ಅರಮನೆಯಲ್ಲಿ ನಿಂತುಕೊಂಡರು. ರಾಮಕೃಷ್ಣರ ಈ ಲೀಲಾಲಾಸ್ಯ ಹಾಗೂ ಸಾನಂದ ಹಾಸ್ಯಗಳನ್ನು ನೋಡಿ ಕಂಸ ಹೆದರಿ ಹೌಹಾರಿದ. ತನ್ನ ಆಸ್ಥಾನದ ಅಪ್ರತಿಮಮಲ್ಲನಾದ ಜಗದೇಕಮಲ್ಲ ನೆನಿಸಿದ ಚಾಣೂರನನ್ನು ಕರೆದು ಹೇಳಿದ.

**ಕಂಸ:-** "ಚಾಣೂರ, ಏನಾದರೂ ಮಾಡು. ಈ ಚಿಕ್ಕ ಬಾಲಕರನ್ನು ಇಂದು ಇಲ್ಲಿಯೇ ಕೊಂದು ಬಿಡು. ನಿನಗೆ ನನ್ನ ಅರ್ಧರಾಜ್ಯವನ್ನೇ ಕೊಡುತ್ತೇನೆ."

ಕಂಸನು ಹೀಗೆ ತನ್ನ ಆಸ್ಥಾನದ ಜಟ್ಟಿಗಳಿಗೆ ಬಿನ್ನವಿಸಿದ್ದನ್ನು ಕೇಳಿ ರಾಮಕೃಷ್ಣರು ರಂಗಮಧ್ಯದಲ್ಲಿ ಯುದ್ಧಕ್ಕೆ ಸಿದ್ಧರಾಗಿ ನಿಂತುಕೊಂಡರು. ಅಲ್ಲಿ ನೆರೆದ ಎಲ್ಲ ಮಲ್ಲಮುಖಂಡರಿಗೆ ಕೃಷ್ಣ ಒಂದು ಮೇರು ಪರ್ವತದಂತೆ ಕಂಡ. ಕಂಸನಿಗಂತೂ ಪ್ರಳಯ ಕಾಲದ ಕಾಡ್ಗಿಚ್ಚಿನಂತೆ ತೋರಿದ. ಅಲ್ಲಿ ಮೇಲು ಬದಿಯಲ್ಲಿ ಈ ಮಲ್ಲ ಯುದ್ಧವನ್ನು ನೋಡಲು ಪ್ರೇಕ್ಷಕ ಸ್ಥಾನದಲ್ಲಿ ಕುಳಿತ ಮಹಿಳೆಯರಿಗಂತೂ ಸಾಕ್ಷಾತ್ ಮನ್ಮಥನ ಪ್ರತಿರೂಪದಂತೆ ಕಂಡ ಆ ಕೃಷ್ಣ. ವಸುದೇವ ಅಕ್ರೂರ ನಂದಗೋಪ ಹಾಗೂ ಉಳಿದೆಲ್ಲ ಯಾದವರೂ ಆ ರಂಗಭೂಮಿಯ ಮೇಲ್ಭಾಗದಲ್ಲಿ ಬಂದು ಈ ಮಲ್ಲ ಮಧುಸೂದನರ ದ್ವಂದ್ವ ಯುದ್ಧವನ್ನು ಕುತೂಹಲದಿಂದ ನೋಡಲು ಕುಳಿತಕೊಂಡರು. ಅಂಗನೆಯರ ಗುಂಪಿನಲ್ಲಿ ದೇವಕಿಯು ಬಂದು ಕುಳಿತು ತನ್ನ ಹಾಲು ಗಲ್ಲದ ಹಸುಳೆ ಬೆಟ್ಟದಂತಿರುವ ಆ ಜಟ್ಟಿಗಳೊಡನೆ ಹೋರಾಡಲು ಸಿದ್ಧನಾಗಿ ನಿಂತದ್ದನ್ನು ನೋಡಿ ಕಣ್ಣೀರು ಕರೆಯುತ್ತ ದುಃಖಾರ್ತಳಾಗಿ ನಿಂತುಕೊಂಡಳು.

ರಣವಾದ್ಯಗಳು ಭೋರ್ಗರೆದವು. ಚಾಣೂರ ಬಂದು ಕೃಷ್ಣನನ್ನು ಕೆಣಕಿದ. ಮುಷ್ಟಿಕ ಬಲರಾಮನನ್ನು ಎದುರಿಸಿದ. ನಾಲ್ಕೂ ವೀರವರೇಣ್ಯರ ನಡುವೆ ನಿಕರದ ದ್ವಂದ್ವಯುದ್ಧ ಘೋರಾಕಾರವಾಗಿ ನಡೆಯಿತು. ಮುಷ್ಟಿಯಿಂದ ಗುದ್ದಿ, ಕಾಲಿನಿಂದ ಒದ್ದು, ಪ್ರಹಾರದಿಂದ ಮರ್ದಿಸಿ ಇಬ್ಬರೂ ಮಲ್ಲರನ್ನು ಕ್ಷಣಾರ್ಧದಲ್ಲಿ ರಾಮಕೃಷ್ಣರು ದಣಿದು ಕುಣಿಸಿದರು. ಕೆಲ ಹೊತ್ತು ಅವರೊಡನೆ ಆಟವಾಡಿ ಅನಂತರ ಜನಾರ್ದನನು ಚಾಣೂರನ ಮೈ ಮುರಿದು ಲೀಲೆಯಿಂದ ಅವನನ್ನು ನೆಲಕ್ಕೆ ಉರುಳಿಸಿದ. ಆ ದುಷ್ಟ ದೈತ್ಯ ನೆಲದ ಮೇಲೆ ಬಿದ್ದು ನೆತ್ತರ ಕಾರಿ ಮರಣ ಹೊಂದಿದ. ಅನಂತರ ಬಲರಾಮ ಮುಷ್ಟಿಕನ ಎದೆಗೆ ಮುಷ್ಟಿಯಿಂದ ಹೊಡೆದು ಪ್ರಾಣಾಂತಿಕ ಪ್ರಹಾರಗೈದ. ಆದರಿಂದ ಆ ಜಟ್ಟಿಯ ಮೈಯೊಳಗಿನ ಮೂಳೆಗಳೆಲ್ಲವೂ ಮುರಿದು ಸ್ನಾಯು ಹರಿದು ದೇಹ ಮುದ್ದೆಯಾಗಿ ನೆಲದ ಮೇಲೆ ಬಿದ್ದುಕೊಂಡಿತು. ಅದನ್ನು ನೋಡಿ ಉಳಿದ ಎಲ್ಲ ಜಟ್ಟಿಗಳೂ ಪಲಾಯನ ಸೂತ್ರವನ್ನು ಪಠಿಸಿದರು.

ಕಂಸನಿಗೆ ಇದರಿಂದ ಮತ್ತಷ್ಟೂ ಹೆದರಿಕೆ ಆಯಿತು. ಅವನು ಆ ರಂಗಸ್ಥಳದ ಒಂದು ಬದಿಯಲ್ಲಿ ಎತ್ತರವಾದ ಅಟ್ಟದ ಮೇಲೆ ಕುಳಿತುಕೊಂಡಿದ್ದನು. ಅದನ್ನು ಕಂಡ ಕೂಡಲೇ ಕೃಷ್ಣನು ಟಣ್ಣನೇ ಕಂಸ ಕುಳಿತ ಅಟ್ಟದ ಮೇಲಿನ ಮಂಚಕ್ಕೆ ಹಾರಿದ. ಅಂಗೈಮುಂಗೈಗಳಿಂದ ಕಂಸನ ತಲೆಯನ್ನು ಜಜ್ಜಿದ. ಅನಂತರ ಅವನನ್ನು ಎತ್ತಿ ಆ ಮೇಲುಪ್ಪರಿಗೆಯಿಂದ ರಂಗಭೂಮಿಯ ಮಧ್ಯದಲ್ಲಿ ತೂರಿ ಒಗೆದ. ಆದರಿಂದ ಕಂಸನ ಎಲ್ಲ ಅವಯವಗಳು ಒಡೆದು ಸಿಡಿದು ಪುಡಿಪುಡಿಯಾಗಿ ನೆಲದಮೇಲೆ ಬಿದ್ದವು. ಹೀಗೆ ಕೃಷ್ಣನು ಕಂಸನನ್ನು ಕೊಂದಬಳಿಕ ರಾಮನು ಕಂಸನ ತಮ್ಮನಾದ ಸುನಾಮನನ್ನು ಬಿಗಿದ ಮುಷ್ಟಿಯಿಂದ ನಡುನೆತ್ತಿಗೆ ಕುಟ್ಟಿ ಕೊಂದು ಹಾಕಿದ. ಹೀಗೆ ರಾಮಕೃಷ್ಣರಿಬ್ಬರೂ ತಮ್ಮಿಬ್ಬರನ್ನು ಕೊಲ್ಲಲಿಕ್ಕಾಗಿ ಕಂಸನು ನಿರ್ಮಿಸಿದ ಸಂಗ್ರಾಮದ ರಂಗಭೂಮಿಯಲ್ಲಿ ಆ ಕಂಸ ಬಂಧುಗಳಿಬ್ಬರನ್ನು ವಧಿಸಿ ಮಲಗಿಸಿ, ಅಲ್ಲಿಯೇ ಇದನ್ನೆಲ್ಲ ನೋಡುತ್ತಾ ಕುಳಿತ ತಮ್ಮ ತಾಯಿಯ ಬಳಿಗೆ ಓಡಿಬಂದರು. ಭಕ್ತಿಯಿಂದ ನಮಸ್ಕರಿಸಿದರು. ಆಗ ದೇವಕಿಯು ಆ ತನ್ನ

ಮಕ್ಕಳಿಬ್ಬರ್ನನೂ ಪ್ರೀತಿಯಿಂದ ತಬ್ಬಿಕೊಂಡು ಮೈದಡವಿ ಮುದ್ದಾಡಿ ಮಸ್ತಕವನ್ನು ಮೂಸಿನೋಡಿ ಪ್ರೀತಿಯ ಮಳೆಗರೆದಳು. ಅವಳ ಹೃದಯದಿಂದ ಪ್ರೀತಿರಸದ ಪ್ರವಾಹವಾಗಿ ಹಾಲು ಸುರಿಯಿತು. ಮುಗಿಲಿನಲ್ಲಿ ದೇವ ದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿ ಉದುರಿದವು. ಅದರೊಡನೆ ಋಷಿಮುನಿಗಳ ಪ್ರಶಂಸಾವೃಷ್ಟಿಯೂ ಬೆರೆಯಿತು. ಅನಂತರ ಕೃಷ್ಣನ ಗುಂಪಿನಲ್ಲಿ ಕುಳಿತ ಹಿರಿಯ ಗೋಪಾಲಕರನ್ನೂ ನಂದಗೋಪನನ್ನೂ ಹುಡುಕಿ ಪ್ರೀತಿಯಿಂದ ನಮಸ್ಕರಿಸಿದ. ಬಳಿಕ ಶ್ರೀಕೃಷ್ಣನು ಆ ನಂದಗೋಪನನ್ನು ಹಾಗೂ ಹಿರಿಯ ಗೋಪಾಲಕರನ್ನು ಮತ್ತು ತನ್ನ ಗೆಳೆಯರನ್ನೂ ಕಂಸನ ಅರಮನೆಗೆ ಕರೆದುಕೊಂಡು ಹೋಗಿ ರಾಶಿ ರಾಶಿಯಾಗಿ ಮುತ್ತು, ರತ್ನ, ವಜ್ರ, ವೈಡೂರ್ಯಗಳನ್ನು ನೀಡಿದ. ಹಿಡಿ ಹಿಡಿಯಾಗಿ ನಗ ನಾಣ್ಯಗಳನ್ನು ತಂದು ಅವರ ಮುಂದೆ ಸುರಿದ. ಬಗೆ ಬಗೆಯ ಬಟ್ಟೆ ಪೀತಾಂಬರಗಳನ್ನೂ ಎಲ್ಲ ರೀತಿಯ ಆಭರಣ ಅಲಂಕಾರಗಳನ್ನೂ ತಂದು ಅವರ ಮುಂದೆ ಒಟ್ಟಿದ. ಮತ್ತು ನಂದಗೋಕುಲಕ್ಕೆ ಅವುಗಳನ್ನೆಲ್ಲ ಕಟ್ಟಿ ಕೊಟ್ಟು ಕಳಿಸಿದ. ಹೀಗೆ ನಂದಗೋಪಾದಿ ಬಂಧು ಬಳಗ ಇಷ್ಟಮಿತ್ರರನ್ನೆಲ್ಲ ಧನ, ದಾನ್ಯ, ಬಟ್ಟೆ, ಬಂಗಾರ, ಮುತ್ತು ರತ್ನಗಳಿಂದ ಸಂತೋಷಪಡಿಸಿ ವೃಂದಾವನಕ್ಕೆ ಬೀಳ್ಕೊಟ್ಟ. ತನ್ನನ್ನು ಬಿಟ್ಟು ಹೋಗಲು ಮನಸ್ಸು ಬಾರದೇ ದುಃಖಿಸುತ್ತಲಿರುವ ಆ ಎಲ್ಲ ಗೋಪಾಲಕರ ವೃಂದವನ್ನೂ ಸಂತೈಸಿ ಹೇರಳವಾದ ಕಾಣಿಕೆಗಳಿಂದ ಸಂತೋಷಪಡಿಸಿ ಊರಿಗೆ ಕಳುಹಿಸಿಕೊಟ್ಟ ತನ್ನ ತಾಯಿಯ ತಂದೆಯಾದ ಉಗ್ರಸೇನ ರಾಜನ ಬಳಿಗೆ ಬಂದ. ಅವನನ್ನು ಕಂಸ ಎಂದೋ ಬಂದೀಖಾನೆಯಲ್ಲಿ ಬೇಡಿ ಬಿಗಿದು ಕತ್ತಲೆಯ ಕೋಣೆಯಲ್ಲಿ ಸೆರೆ ಇಟ್ಟಿದ್ದ. ಕೃಷ್ಣನು ಮೊದಲು ಅವನ ಸಂಕಲೆಗಳನ್ನು ಕಡಿದು ಕಳಚಿ ಹಾಕಿ ಬಿಡುಗಡೆ ಮಾಡಿದ. ಅನಂತರ ಮಧುರಾ ಸಾಮ್ರಾಜ್ಯದ ಸಿಂಹಾಸನದ ಮೇಲೆ ಆ ಕಂಸನ ತಂದೆಯಾದ ಉಗ್ರಸೇನನನ್ನು ಕೂಡಿಸಿ ಪಟ್ಟಾಭಿಷೇಕವನ್ನು ಮಾಡಿದ. ಬ್ರಾಹ್ಮಣರಿಂದ ಕಂಸನ ಉತ್ತರ ಕ್ರಿಯೆಗಳನ್ನು ಮಾಡಿಸಿದ. ಅಕ್ರೂರ ಮೊದಲಾದ ಯಾದವ ಶ್ರೇಷ್ಠರಿಗೆ ಅಧಿಕಾರ ಸೂತ್ರಗಳನ್ನು ಒಪ್ಪಿಸಿದ. ಸ್ವಯಂ ತಾನೇ ಮುಂದಾಗಿ ನಿಂತುಕೊಂಡು ಧರ್ಮದಿಂದ ಹಾಗೂ ನೀತಿಯಿಂದ ಯಾದವರ ರಾಜ್ಯವು ಸರ್ವಸಮರ್ಥವಾಗಿ ನಿಲ್ಲುವಂತೆ ಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಶ್ರೀ ಕೃಷ್ಣ ಚರಿತ್ರೆಎಂಬ ಎರಡುನೂರ ಇಪ್ಪತ್ತೇಳನೇಯ ಅಧ್ಯಾಯ ಮುಗಿದುದು*

—o—

## ಸಾಂದೀಪನಿ ಗುರುಗಳಲ್ಲಿ ಅಧ್ಯಯನ, ಜರಾಸಂಧ ಕಾಲಯವನರೊಡನೆ ಯುದ್ಧ ಮುಚಕುಂದನಿಗೆ ಮುಕ್ತಿ

ಅಧ್ಯಾಯ - ೨೨೮

**ಮಹಾದೇವ:-** ಅನಂತರ ವಸುದೇವನು ಬಲರಾಮ ಹಾಗು ಶ್ರೀಕೃಷ್ಣರ ಮುಂಜಿವೆಯನ್ನು ಗರ್ಗಾಚಾರ್ಯರ ಪೌರೋಹಿತ್ಯದಲ್ಲಿ ವಿಧಿಪೂರ್ವಕವಾಗಿ ನೆರವೇರಿಸಿದ. ಉಪನಯನ ಸಂಸ್ಕಾರವನ್ನು ಮಾಡಿಕೊಂಡು ಅವರಿಬ್ಬರೂ ಸಾಂದಿಪನೀ ಗುರುಗಳ ಗುರುಕುಲಕ್ಕೆ ತೆರಳಿದರು. ಅವರಲ್ಲಿ ವೇದ ಶಾಸ್ತ್ರಗಳನ್ನೆಲ್ಲ ಓದಿದರು. ಗುರುದಕ್ಷಿಣೆಯಾಗಿ ಅವರ ಸತ್ತಮಗುವನ್ನು ಮತ್ತೆ ಬದುಕಿಸಿ ತಂದು ಕೊಟ್ಟರು. ಅವರ ಆಶೀರ್ವಾದವನ್ನು ಪಡೆದು ಮಥುರಾ ಪಟ್ಟಣಕ್ಕೆ ಚಿತ್ತೈಸಿದರು.

ಕೃಷ್ಣನು ಕಂಸನನ್ನು ಕೊಂದ ಸಮಾಚಾರ ಅವನ ಮಾವನಾದ ಜರಾಸಂಧನಿಗೆ ತಿಳಿಯಿತು. ಅವನು ತನ್ನ ಇಬ್ಬರೂ ಹೆಣ್ಣು ಮಕ್ಕಳ ವೈಧವ್ಯಕ್ಕೆ ಕಾರಣನಾದ ಕೃಷ್ಣನ ಮೇಲೆ ಕಿಡಿಕಿಡಿಯಾದ. ಅಸಂಖ್ಯ ಅಕ್ಷೋಹಿಣೀ ಸೈನ್ಯವನ್ನು ಸಜ್ಜುಗೊಳಿಸಿ ಕೊಂಡು ಮಧುರಾಪಟ್ಟಣದ ಮೇಲೆ ಅವನು ದಾಳಿ ಇಟ್ಟ. ಆನೆ, ಕುದುರೆ, ರಥ ಕಾಲಾಳುಗಳಿಂದ ಕೂಡಿದ ಜರಾಸಂಧನ ಪ್ರಚಂಡ ಸೇನೆಯು ಮಥುರಾ ಪಟ್ಟಣಕ್ಕೆ ಬಲವಾದ ಮುತ್ತಿಗೆ ಹಾಕಿ ಯಾದವವೀರರನ್ನು ತರಿಯ ತೊಡಗಿತು. ಆಗ ಕೃಷ್ಣನು ತನ್ನ ಮೂಲರೂಪದ ರಥವನ್ನು ನೆನೆದ. ಕೂಡಲೇ ದಾರುಕನು ವಿಷ್ಣುವಿನ ಸುಗ್ರೀವ ಪುಷ್ಪಕವೆಂಬ ಶ್ರೇಷ್ಠವಾದ ರಥವನ್ನು ಹೂಡಿಕೊಂಡು ಕೃಷ್ಣನಿದ್ದಲ್ಲಿಗೆ ಆಗಮಿಸಿದ. ದಿವ್ಯ ಪುಷ್ಪ ಮೊದಲಾದ ಕುದುರೆಗಳು ಎಳೆಯುವ, ಶಂಖ ಚಕ್ರಾದಿ ತನ್ನ ಆಯುಧಗಳಿಂದ ಒಡಗೂಡಿದ ಮತ್ತು ಗರುಡಧ್ವಜದಿಂದ ಶೋಭಿಸುವ ಆ ತನ್ನ ರಥವನ್ನು ಗೋವಿಂದನು ಬಲರಾಮನೊಡನೆ ಏರಿ ಜರಾಸಂಧನ ಸೈನ್ಯದೊಂದಿಗೆ ನಿಕರದ ಹೋರಾಟವನ್ನು ನಡೆಸಿದ. ಜರಾಸಂಧ ಹಾಗೂ ಅವನ ವೀರಸೇನಾಪತಿಗಳು ಪ್ರಯೋಗಿಸಿದ ಎಲ್ಲ ಶಸ್ತ್ರಾಸ್ತ್ರಗಳನ್ನು ವನದಲ್ಲಿ ಹೊತ್ತಿದ ಕಾಡ್ಗಿಚ್ಚು ಒಣಗಿದ ತರಗೆಲೆಗಳನ್ನು ಸುಟ್ಟು ಹಾಕುವಂತೆ ಕ್ಷಣಾರ್ಧದಲ್ಲಿ ಛಿನ್ನ ವಿಚ್ಛಿನ್ನಗೊಳಿಸಿ ಸೈನಿಕರನ್ನೆಲ್ಲ ಕೊಚ್ಚಿ ಹಾಕಿದ. ಬಲರಾಮನು ತನ್ನ ನೇಗಿಲು ಹಾಗು ಒನಕೆಯ ಆಯುಧಗಳಿಂದ ಲಕ್ಷ ಲಕ್ಷ ಸೈನಿಕರ ತಲೆ ಒಡೆದು, ಎದೆ ಸೀಳಿ, ರುಂಡ ಮುಂಡಗಳನ್ನು ಈಡಾಡಿದ. ಕೃಷ್ಣನ ಚಕ್ರ ಗದ ಮತ್ತು ಶಾರ್ಙಧನುಸ್ಸು ಮುಂತಾದ ಆಯುಧಗಳು ಜರಾಸಂಧನ ಎಲ್ಲ ಸೈನ್ಯವನ್ನು ನಿಃಪಾತ ಮಾಡಿ ನಿರ್ಮೂಲಗೈದು ವಿಜಯಲಕ್ಷ್ಮಿಯನ್ನು ಕೃಷ್ಣನೆಡೆಗೆ ಎಳೆದುತಂದವು. ಆಗ ಕೃಷ್ಣನು ತನ್ನ ಶಂಖವನ್ನು ಉತ್ಸಾಹದಿಂದ ಊದಿದ. ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು.

ಇದನ್ನು ಕಂಡ ಜರಾಸಂಧ ದುಃಖತೃಪ್ತನಾದ ಕ್ರೋಧ ಸಂತ್ರಸ್ತ ಆದ. ಬಲರಾಮನ ಮೇಲೆ ಏರಿ ಬಿದ್ದು ಹೋರಾಟ ನಡೆಸಿದ. ಆಗ ಬಲರಾಮನು ತನ್ನ ಆಯುಧವಾದ ನೇಗಿಲನ್ನು ಎತ್ತಿಕೊಂಡು ಜರಾಸಂಧನ ರಥದ ಬಳಿ ಸಾಗಿದ. ಜಿಗಿದು ಅವನ ರಥವನ್ನು ಏರಿದ. ಆ ಜರಾಸಂಧನನ್ನು ಹಿಡಿದು ಕೇಶಪಾಶವನ್ನು ಜಗ್ಗಿ ಬಗ್ಗಿಸಿ ಒನಕೆಯಿಂದ ತಲೆಯನ್ನು ಹೊಡೆಯಲು ಉದ್ಯುಕ್ತನಾದ. ಅದನ್ನು ದೂರದಿಂದಲೇ ನೋಡಿದ ಕೃಷ್ಣನು

ಕರುಣೆಯಿಂದ 'ಕೊಲ್ಲಬೇಡ' ಎಂದು ಅಣ್ಣನಿಗೆ ಹೇಳಿದ. ತಮ್ಮನ ಮಾತಿನಂತೆ ಬಲರಾಮ ತನ್ನ ಕೈಯಲ್ಲಿ ಸಿಕ್ಕ ಜರಾಸಂಧನನ್ನು 'ಬದುಕು ಹೋಗು' ಎಂದು ಹೇಳಿ ಬಿಟ್ಟು ಕೊಟ್ಟ. ಅನಂತರ ರಾಮಕೃಷ್ಣರಿಬ್ಬರೂ ತಮ್ಮ ರಥಾರೋಹಣ ಮಾಡಿ ಜಯಘೋಷ ಮಾಡುತ್ತ ಮಥುರಾಪಟ್ಟಣವನ್ನು ಪ್ರವೇಶಿಸಿದರು.

ಕೃಷ್ಣನ ಕೃಪೆಯಿಂದ ಬದುಕಿ ಉಳಿದ ಬಲರಾಮನಿಂದ ಜೀವದಾನ ಪಡೆದ ಜರಾಸಂಧನಿಗೆ ಮಾತ್ರ ಇದರಿಂದ ಬಹಳ ನಾಚಿಕೆಯಾಯಿತು. ಹೇಗಾದರೂ ಮಾಡಿ ಇದರ ಸೇಡನ್ನು ತೀರಿಸಿಕೊಳ್ಳಬೇಕೆಂದು ಅವನು ನಿರ್ಧರಿಸಿದ. ಮಹಾಪರಾಕ್ರಮಶಾಲಿಯಾದ ಕಾಲಯವನನಿಗೆ ಇದೆಲ್ಲ ಸಮಾಚಾರವನ್ನು ತಿಳಿಸಿ ತನಗೆ ಸಹಾಯವನ್ನು ಮಾಡಲು ಕೇಳಿಕೊಂಡ. ಅವನ ಬಿನ್ನಹವನ್ನು ಮನ್ನಿಸಿ ಕಾಲಯವನ ರಾಮಕೃಷ್ಣರನ್ನು ಕೊಲ್ಲಲಿಕ್ಕಾಗಿ ತನ್ನ ಅಪರಂಪಾರ ಸೇನಾಸನ್ನಾಹದೊಂದಿಗೆ ಮಥುರಾ ಪಟ್ಟಣಕ್ಕೆ ದಾಳಿ ಇಟ್ಟ. ಹಿಂದೊಮ್ಮೆ ಜರಾಸಂಧನ ಭೀಕರವಾದ ದಾಳಿಯನ್ನು ಎದುರಿಸಿ ಕ್ಷೀಣ ಕ್ಷಾಮವಾದ ಮಥುರಾ ಮತ್ತೊಮ್ಮೆ ಕಾಲಯವನನ ದಾಳಿಯನ್ನ ತಾಳಲಾರದು ಎಂದು ನಿರ್ಧರಿಸಿ ಕೃಷ್ಣ ಸಮುದ್ರಮಧ್ಯದಲ್ಲಿ ದ್ವಾರಕಾ ಎಂಬ ಪಟ್ಟಣವನ್ನು ನಿರ್ಮಿಸಿದ. ಸಮುದ್ರವನ್ನು ಯಾಚಿಸಿ ಮೂವತ್ತು ಯೋಜನ ವಿಸ್ತಾರವಾದ ಸ್ಥಳವನ್ನು ಪಡೆದು ಅದರಲ್ಲಿ ಅನೇಕ ಅರಮನೆ, ಸಿರಿಮನೆ, ಬಂಗಾರದ ಕೋಟೆ, ಕೊತ್ತಲ, ತೋರಣ, ಸಭಾ ಮಂಟಪ, ಉದ್ಯಾನ, ಉಪವನ, ಹೊಕ್ಕರಣೆ, ಮಣಿಮಯಮಂದಿರ, ಗೋಪುರ ಮುಂತಾದವುಗಳಿಂದ ಸುಂದರಾತಿ ಸುಂದರವಾಗಿ ದ್ವಾರಕೆಯು ದೇವೇಂದ್ರನ ಅಮರಾವತಿಯಂತೆ ಶೋಭಿಸುತ್ತಿತ್ತು. ಮಥುರಾಪಟ್ಟಣದ ಎಲ್ಲ ನಾಗರಿಕರು ರಾತ್ರಿ ಕಾಲದಲ್ಲಿ ಮಲಗಿಕೊಂಡಾಗಲೇ ಅವರಿಗೆ ಎಚ್ಚರವಾಗದಂತೆ ಎಲ್ಲರನ್ನು ಮೆಲ್ಲನೆ ದ್ವಾರಕ ಪಟ್ಟಣದ ದಿವ್ಯ ಭವ್ಯವಾದ ಸುಂದರ ಮಂದಿರಗಳಲ್ಲಿ ತಂದು ಮಲಗಿಸಿ ಬಿಟ್ಟ. ಮಥುರೆಯಲ್ಲಿ ಮಲಗಿದ ಎಲ್ಲ ಯಾದವರೂ ಬೆಳಗಾಗುವಷ್ಟರಲ್ಲಿ ಶೃಂಗಾರವಾದ ಬಂಗಾರದ ಭವನಗಳಲ್ಲಿ ತಮ್ಮ ಮಡದಿ ಮಕ್ಕಳು ಸಹಿತವಾಗಿ ಒಂದು ನಿಂತಿದ್ದನ್ನು ನೋಡಿ ಅತ್ಯಾಶ್ಚರ್ಯ ಪಟ್ಟರು. ಪ್ರತಿಯೊಬ್ಬರ ಗಗನ ಚುಂಬಿತವಾದ ರತ್ನ ಪ್ರಾಸಾದಗಳಲ್ಲಿ ಹೇರಳವಾಗಿ ಧನ ಧಾನ್ಯ ವಸ್ತ್ರ ಸುವರ್ಣ ಮುತ್ತು ರತ್ನ ಅಲಂಕಾರ ಆಭರಣ ಶಯ್ಯಾ ಆಸನ ಎಲ್ಲವೂ ರಾಶಿರಾಶಿಯಾಗಿ ತುಂಬಿ ತುಳುಕುತ್ತಲಿದ್ದವು. ಇದೆಲ್ಲವು ಶ್ರೀಕೃಷ್ಣನ ಪ್ರಸಾದ ಎಂದು ಬಗೆದು ಇಂದ್ರಪುರಿಯಲ್ಲಿ ದೇವತೆಗಳು ಇದ್ದಂತೆ ಆನಂದದಿಂದ ವಾಸ ಮಾಡಿದರು ಎಲ್ಲ ಯಾದವರು.

ಹೀಗೆ ಯಾದವರನ್ನೆಲ್ಲ ಸಮುದ್ರ ಮಧ್ಯದ ನಡುನೀರಿನ ನಟ್ಟ ನಡುವೆ ಇರುವ ದ್ವಾರಕಾಪಟ್ಟಣದಲ್ಲಿ ಸುರಕ್ಷಿತವಾಗಿ ಇಟ್ಟು ರಾಮಕೃಷ್ಣರು ಮಥುರಾಪಟ್ಟಣಕ್ಕೆ ಬಂದರು. ಆಗಸೆಯ ಬಾಗಿಲಲ್ಲಿ ಯುದ್ಧಕ್ಕೆ ಸಿದ್ಧರಾಗಿ ನಿಂತುಕೊಂಡರು. ಬಲರಾಮ ತನ್ನ ಹಲ ಮತ್ತು ಮುಸಲ ಎಂಬ ಎರಡು ಆಯುಧಗಳಿಂದ ಕಾಲಯವನನ ಸೈನ್ಯವನ್ನೆಲ್ಲ ಕೊಚ್ಚಿಹಾಕಿದ. ಕೃಷ್ಣನು ತನ್ನ ಶಾರ್ಙಬಿಲ್ಲಿನಿಂದ ಬೆಂಕಿ ಉಗಳುವ ಬಾಣಗಳನ್ನು ಬಿಟ್ಟು ಯವನ ಸೇನೆಯನ್ನು ದಗ್ಧಮುಗ್ಧವನ್ನಾಗಿ ಮಾಡಿದ. ಹೀಗೆ ಕೃಷ್ಣನು ಕಾಲಯವನನ ಸೇನೆಯೊಂದಿಗೆ ಕಿಂಚಿತ್ ಕಾಲ ಪರ್ಯಂತ ಕಾದಾಡಿ ಅನಂತರ ರಣಾಂಗಣದಿಂದ ಮೆಲ್ಲನೆ ಕಾಲ್ತೆಗೆದ. ಯುದ್ಧ ಭೂಮಿಯಿಂದ ಒಮ್ಮೆಲೆ ಓಡತೊಡಗಿದ. ಕಾಲಯವನನು ನಿಲ್ಲು ನಿಲ್ಲು ಎನ್ನುತ್ತ

ಅವನನ್ನು ಬೆನ್ನಟ್ಟಿದ. ಮುಂದೆ ಮುಂದೆ ಓಡುವ ಕೃಷ್ಣ. ಅವನ ಹಿಂದೆ ಹಿಂದೆ ಓಡುವ ಕಾಲಯವನ. ಕೃಷ್ಣನು ಚಪಲ ಚರಣದಿಂದ ಓಡುತ್ತಾ ಕಾಡಿನ ದಾರಿ ಹಿಡಿದ. ಅವನನ್ನು ಬಿಡದೆ ಬೆಂಬತ್ತಿದ ಕಾಲಯವನ. ಅರಣ್ಯದ ನಟ್ಟನಡುವೆ ಒಂದು ದೊಡ್ಡ ಗುಹೆ. ಓಡುತ್ತ ಓಡುತ್ತ ಕೃಷ್ಣ ಆ ಗುಹೆಯಲ್ಲಿ ಹೊಕ್ಕ. ಇನ್ನೇನು ಕೃಷ್ಣ ತನಗೆ ಸಿಕ್ಕ ಎಂದು ಉತ್ಸಾಹದಿಂದ ಕಾಲಯವನನು ನುಗ್ಗಿದ ಆ ಗುಹೆಯಲ್ಲಿ ಆ ಗುಹೆಯ ಒಳಗೆ ಮುಚಕುಂದ ಎಂಬ ಮಹಾರಾಜ ಮಲಗಿದ್ದ. ಕೃಷ್ಣ ಅವನಿಗೆ ಕಾಣದಂತೆ ಒಂದೆಡೆ ಅಡಗಿಕೊಂಡ. ಕಾಲಯವನನು ಗದೆಯನ್ನು ಹೆಗಲ ಮೇಲೆ ಇರಿಸಿ ಕೃಷ್ಣನನ್ನು ಕೊಲ್ಲಬೇಕೆಂಬ ಹಂಬಲದಿಂದ ಆ ಗುಹಾ ಗರ್ಭದಲ್ಲಿ ಪ್ರವೇಶಿಸಿದ. ಅಲ್ಲಿ ಮಲಗಿದ ಮುಚಕುಂದ ಮಹಾರಾಜನನ್ನು ನೋಡಿ ಅವನನ್ನೇ ಕೃಷ್ಣ ಎಂದು ಭಾವಿಸಿದ. ಕಾಲಿನಿಂದ ಮಲಗಿದ ಮಹಾನುಭಾವನಾದ ಮುಚಕುಂದ ಮಹಾರಾಜನನ್ನು ಒದ್ದು ಬಿಟ್ಟ. ತಕ್ಷಣದಲ್ಲಿ ಎಚ್ಚರವಾಯಿತು ಮಹಾರಾಜನಿಗೆ. ಕೋಪದಿಂದ ಅವನ ಎರಡೂ ಕಣ್ಣುಗಳೂ ಗುಲಗಂಜಿ. ಸಿಟ್ಟಿಗೆದ್ದ ಆ ಮುನಿ ಮಹಾರಾಜ ಹುಂಕಾರ ಶಬ್ದ ಮಾಡಿದ. ತನ್ನ ನಿದ್ರಾಭಂಗ ಮಾಡಿದ ಕಾಲಯವನನನ್ನು ಸಿಟ್ಟಿನಿಂದ ಕಣ್ಣು ತೆಗೆದು ನೋಡಿದ. ಮುಚಕುಂದ ಮಹಾರಾಜನ ಕೋಪೋದ್ದೀಪ್ತವಾದ ನೋಟದಿಂದಲೇ ಕಾಲಯವನ ಸುಟ್ಟು ಬೂದಿಯಾದ. ಆಗ ಮರೆಯಲ್ಲಿ ನಿಂತ ಕೃಷ್ಣ ಮುಚಕುಂದ ಮಹಾರಾಜನ ಎದುರು ನಿಂತುಕೊಂಡ. ಶಂಖ, ಚಕ್ರ, ಗದಾ, ಪದ್ಮಗಳನ್ನು ಕೈಯಲ್ಲಿ ಧರಿಸಿ, ಪೀತಾಂಬರವನ್ನು ಉಟ್ಟು, ಕನ್ನೈದಿಲೆಯಂತೆ ಕಪ್ಪು ಬಣ್ಣದಿಂದ ಒಪ್ಪುವ ಶ್ರೀಕೃಷ್ಣನನ್ನು ನೋಡಿ ಒಮ್ಮೆಲೆ ಮುಚಕುಂದ ಮಹಾರಾಜ ಎದ್ದು ನಿಂತ. ಅವನ ಮೈ ತುಂಬ ಹಿಗ್ಗಿನ ಮುಳ್ಳು. ಕಣ್ಣಿನ ಅಂಚಿನಲ್ಲಿ ಆನಂದಬಾಷ್ಪದ ಬಿಂದುಗಳು ಜಯ ಜಯ ಜಗನ್ನಾಥ ಎಂದು ಸ್ತೋತ್ರ ಮಾಡುತ್ತಾ ನಮಸ್ಕಾರ ಮಾಡಿದ. ಶ್ರೀಕೃಷ್ಣನಿಗೆ ಮತ್ತೆ ಮತ್ತೆ ವಂದಿಸಿದ.

**ನಮಃ ಪರಮಕಲ್ಯಾಣ ನಮಸ್ತೇ ಪರಮಾತ್ಮನೇ ।**
**ವಾಸುದೇವಾಯ ಶಾಂತಾಯ ಯದೂನಾಂಪತಯೇ ನಮಃ ॥**

ಅವನ ಈ ಸ್ತೋತ್ರವನ್ನು ಕೇಳಿ ಪರಿತುಷ್ಟನಾದ ಶ್ರೀಹರಿಯು ''ಬಯಸಿದ ವರವನ್ನು ಬೇಡು'' ಎಂದು ಹೇಳಿದ.

ಆಗ ಭಕ್ತಿಯುಕ್ತನಾದ ಆ ಮುಚಕುಂದ ಮಹಾರಾಜ ಮುಕ್ತಿಯನ್ನು ಕೊಡು ಎಂದು ಕೇಳಿಕೊಂಡ. ದಯಾಸಾಗರನಾದ ಶ್ರೀಕೃಷ್ಣ ಆ ಮುಚಕುಂದ ಮಹಾರಾಜನಿಗೆ ಮೋಕ್ಷವನ್ನು ಕರುಣಿಸಿದ. ಮುಚಕುಂದ ಮಹಾರಾಜನು ತನ್ನ ದೇಹವನ್ನು ತ್ಯಜಿಸಿ ದಿವ್ಯ ದೇಹವನ್ನು ಧರಿಸಿ ಮುಕ್ತಿ ಮಂದಿರದೆಡೆಗೆ ನಡೆದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಸಾಂದೀಪನಿ ಗುರುಗಳಲ್ಲಿ ಅಧ್ಯಯನ, ಜರಾಸಂಧ ಕಾಲಯವನರೊಡನೆ ಯುದ್ಧ ಮುಚಕುಂದನಿಗೆ ಮುಕ್ತಿ ಎಂಬ ಎರಡುನೂರ ಇಪ್ಪತ್ತೆಂಟನೇಯ ಅಧ್ಯಾಯ ಮುಗಿದುದು*

—o—

**ಅಧ್ಯಾಯ - ೨೯**

## ಜರಾಸಂಧನ ಸೋಲು. ಬೇರೆ ಬೇರೆ ರಾಜಕನ್ಯೆಯರೊಂದಿಗೆ ಶ್ರೀಕೃಷ್ಣನ ವಿವಾಹ ರುಕ್ಮಿಣೀ ಸ್ವಯಂವರ

**ಮಹಾದೇವ:-** ಶ್ರೀಕೃಷ್ಣನು ಮುಚಕುಂದನಿಂದ ಕಾಲಯವನನ್ನು ಕೊಲ್ಲಿಸಿ, ಅವನಿಗೆ ಮುಕ್ತಿಯನ್ನೇ ವರವನ್ನಾಗಿ ನೀಡಿ ಅಲ್ಲಿಂದ ಹೊರಬಿದ್ದ. ಕಾಲಯವನನು ಹತನಾದುದನ್ನು ಕೇಳಿ ಜರಾಸಂಧ ಮತ್ತೆ ಸೈನ್ಯವನ್ನು ಸೇರಿಸಿ. ರಾಮಕೃಷ್ಣರೊಡನೆ ಸೆಣಸಾಡಿದ. ಜರಾಸಂಧನ ಈ ಹೊಸ ಸೈನ್ಯವನ್ನೆಲ್ಲ ಕೃಷ್ಣ ಯಮಪುರಿಗೆ ಅಟ್ಟಿದ. ಮತ್ತೆ ಬಲರಾಮನಿಗೂ ಜರಾಸಂಧನಿಗೂ ದ್ವಂದ್ವಯುದ್ಧ. ಒನಕೆಯಿಂದ ಜರಾಸಂಧನ ಎದೆಗೆ ಬಲರಾಮ ಕುಟ್ಟಿದ. ಆ ಮಗಧರಾಜ ಮೂರ್ಛಿತನಾಗಿ ನೆಲಕ್ಕೆ ಉರುಳಿದ. ಅವನಿಗೆ ಎಚ್ಚರ ಬಂದಾಗ ಬುದ್ಧಿಯು ಬಂದಿತು. ಇನ್ನು ಗೆಲುವು ತನಗೆ ಕನಸಿನ ಗಂಟು ಎಂದು ನಿರ್ಧರಿಸಿ ಜರಾಸಂಧ ರಣಾಂಗಣದಿಂದ ಓಟ ಕಿತ್ತಿದ. ಆ ರಾಮಕೃಷ್ಣರ ವೈರ ವಿರೋಧಗಳನ್ನು ಬಿಟ್ಟು ತನ್ನ ರಾಜಧಾನಿಗೆ ಮುಖ ಒಣಗಿಸಕೊಂಡು ಮರಳಿದ. ರಾಮಕೃಷ್ಣರು ಗೆಲುವು ಹಾಗೂ ವಿಜಯಲಕ್ಷ್ಮಿಯ ಒಲವು ಪಡೆದು ದ್ವಾರಕಾಪುರಿಯನ್ನು ಪ್ರವೇಶಿಸಿದರು.

ಆಗ ದೇವೇಂದ್ರನು ವಾಯುದೇವನ ಮುಖಾಂತರ ಶ್ರೀಕೃಷ್ಣನಿಗೆ ವಿಶ್ವಕರ್ಮ ನಿರ್ಮಿಸಿದ ಸುಧರ್ಮಾ ಎಂಬ ದೇವಸಭೆಯನ್ನು ಕಳುಹಿಸಿಕೊಟ್ಟ. ಅದರಲ್ಲಿ ಮೆತ್ತಗಿನ ಅನೇಕ ಚಿತ್ರ ವಿಚಿತ್ರವಾದ ಆಸನಗಳು, ಬಂಗಾರದ ಛತ್ರಗಳು, ವಜ್ರ ವೈಡೂರ್ಯಗಳಿಂದ ರಚಿತವಾದ ಬಗೆ ಬಗೆಯ ದಿವ್ಯ ಹಾರಗಳು, ಅನೇಕ ದೀಪ ರತ್ನಗಳು ಮುಂತಾದವುಗಳಿಂದ ಅನನ್ಯ ಸಾಮಾನ್ಯವಾದ ಸೌಂದರ್ಯ ಶೋಭೆಯನ್ನು ಹೊಂದಿ ರಾರಾಜಿಸುತ್ತಿತ್ತು. ಆ ದೇವಸಭೆ. ಅಂಥ ದಿವ್ಯವಾದ ಸುರಸಭೆಯನ್ನು ಹೊಂದಿ ಉಗ್ರಸೇನನೆ ಮೊದಲಾದ ವೀರರು ಹರ್ಷ ಪುಲಕಿತರು ಆದರು.

ಇಕ್ಷ್ವಾಕು ವಂಶದಲ್ಲಿ ಹುಟ್ಟಿದ ರೈವತ ಎಂಬ ರಾಜನು ತನ್ನ ಸರ್ವಲಕ್ಷಣ ಸಂಪನ್ನಳಾದ ರೇವತಿ ಎಂಬ ಕನ್ಯೆಯನ್ನು ಬಲರಾಮನಿಗೆ ಕೊಟ್ಟು ಮದುವೆ ಮಾಡಿದ.

ವಿದರ್ಭ ದೇಶದ ದೊರೆಯಾದ ಭೀಷ್ಮಕರಾಜನಿಗೆ ರುಕ್ಮಿಯೆ ಮೊದಲಾದ ಗಂಡು ಮಕ್ಕಳು ರುಕ್ಮಿಣಿ ಎಂಬ ಒಬ್ಬ ಹೆಣ್ಣು ಮಗಳು ಇದ್ದಳು. ಸಾಕ್ಷಾತ್ ಲಕ್ಷ್ಮೀದೇವಿಯೇ ಹಿಂದೆ ಸೀತೆಯಾಗಿ ಆ ರಾಮನ ಕೈ ಹಿಡಿದು ಈಗ ರುಕ್ಮಿಣಿಯಾಗಿ ಅವತಾರ ಮಾಡಿದ್ದಳು. ಸರ್ವಲಕ್ಷಣ ಸಂಪನ್ನಳಾದ ಆ ಮಹಾತಾಯಿ ಎಲ್ಲ ಅವತಾರಗಳಲ್ಲಿ ಶ್ರೀವಿಷ್ಣುವಿನ ಕಾರ್ಯಸಾಧಿಕೆ ಮತ್ತು ಸಹಾಯ ಕಾರಿಕೆ. ಈಗ ಅವಳೇ ಈ ಕೃಷ್ಣಾವತಾರದಲ್ಲಿ ಶ್ರೀಕೃಷ್ಣನ ಕೈ ಹಿಡಿದು ಅವತಾರ ಕಾರ್ಯವನ್ನು ಸಾಧಿಸಲಿಕ್ಕಾಗಿ ರುಕ್ಮಿಣಿಯಾಗಿ ಜನಿಸಿ ಬಂದಿದ್ದಳು.

ಪೂರ್ವಕಾಲದ ಹಿರಣ್ಯಾಕ್ಷ ಹಿರಣ್ಯಕಶ್ಯಪು ಎಂಬ ದೈತ್ಯರು ತ್ರೇತಾಯುಗದಲ್ಲಿ ರಾವಣ ಕುಂಭಕರ್ಣರಾಗಿ ರಾಮನಿಂದ ಹತರಾಗಿದ್ದರು. ಈಗ ಅವರೇ ಶಿಶುಪಾಲ ದಂತವಕ್ತ್ರರಾಗಿ ಚೇದಿವಂಶದಲ್ಲಿ ಹುಟ್ಟಿದ್ದರು. ರುಕ್ಮಿಯು ತನ್ನ ತಂಗಿಯಾದ ರುಕ್ಮಿಣಿಯನ್ನು ಶಿಶುಪಾಲನಿಗೆ

ಕೊಡಬೇಕೆಂದು ಸಂಕಲ್ಪಿಸಿದ್ದ. ಬಾಲ್ಯದಿಂದಲೇ ಶ್ರೀಕೃಷ್ಣನ ಗುಣಗಳನ್ನು ಕೇಳಿ ಅವನಲ್ಲಿಯೇ ಆಸಕ್ತಿಯನ್ನೂ ಅನುರಕ್ತಿಯನ್ನೂ ಹೊಂದಿದ ರುಕ್ಮಿಣಿಯು ಶಿಶುಪಾಲನನ್ನು ಎಂದಿಗೂ ಒಪ್ಪಲಿಲ್ಲ. ಕೃಷ್ಣನನ್ನೇ ಪತಿಯಾಗಿ ಪಡೆಯಲು ಬಗೆ ಬಗೆಯ ದಾನ ಧರ್ಮಗಳನ್ನು ನೀಡಿದಳು. ವ್ರತ ಉಪವಾಸಗಳನ್ನು ಮಾಡಿದಳು. ದೇವತಾರ್ಚನೆಯನ್ನು ನೆರವೇರಿಸಿದಳು. ಹಗಲಿರುಳು ಆ ಶ್ರೀಹರಿಯೇ ಪತಿಯಾಗಿ ದೊರಕಬೇಕೆಂದು ಅವನ ಧ್ಯಾನ ಮಾಡಿದಳು. ಆದರೆ ಅವಳ ತಂದೆಯಾದ ಭೀಷ್ಮಕನು ತನ್ನ ಹಿರಿಯ ಮಗನಾದ ರುಕ್ಮಿಯ ಸಲಹೆಯಂತೆ ಶಿಶುಪಾಲನಿಗೆ ಮದುವೆ ಮಾಡಿಕೊಡಬೇಕೆಂದು ಪ್ರಯತ್ನ ಮಾಡಿದ.

ಇದನ್ನೆಲ್ಲ ತಿಳಿದು ಜಾಣೆಯಾದ ರುಕ್ಮಿಣಿಯು ತಮ್ಮ ಪುರೋಹಿತನ ಮಗನಾದ ಬ್ರಾಹ್ಮಣನನ್ನು ಕೃಷ್ಣನ ಕಡೆಗೆ ದ್ವಾರಕೆಗೆ ಕಳುಹಿಸಿದಳು. ಆ ಬ್ರಾಹ್ಮಣನು ದ್ವಾರಕೆಗೆ ಬಂದು ಬಲರಾಮ ಕೃಷ್ಣರಿಂದ ಪರಿಪೂಜಿತನಾಗಿ ಏಕಾಂತದಲ್ಲಿ ಅವರಿಗೆ ರುಕ್ಮಿಣಿಯ ಅಪೇಕ್ಷೆಯನ್ನು ಮತ್ತು ಅವಳ ಸಂದೇಶವನ್ನು ತಿಳಿಸಿದನು. ಅದನ್ನು ಕೇಳಿ ರಾಮಕೃಷ್ಣರಿಬ್ಬರೂ ಗಗನಗಾಮಿಯಾದ ತಮ್ಮ ರಥವನ್ನು ಏರಿಕೊಂಡು ವಿದರ್ಭ ನಗರಕ್ಕೆ ಬಂದರು. ಎಲ್ಲ ರಾಷ್ಟ್ರಗಳಿಂದಲೂ ರಾಜ ಮಹಾರಾಜರು ಆ ವಿವಾಹ ಮಹೋತ್ಸವಕ್ಕೆ ಆಗಮಿಸಿದರು.

ಮದುವೆಯ ಅಲಂಕಾರ ಆಭರಣಗಳನ್ನೆಲ್ಲ ತೊಟ್ಟು ಪೀತಾಂಬರವನ್ನು ಉಟ್ಟು ರುಕ್ಮಿಣಿಯು ಗೆಳತಿಯರೊಂದಿಗೆ ದುರ್ಗಾದೇವಿಯನ್ನು ಪೂಜಿಸಲಿಕ್ಕಾಗಿ ಊರ ಹೊರಗೆ ಇರುವ ದುರ್ಗಾದೇವಿಯ ದೇವಸ್ಥಾನಕ್ಕೆ ಬಂದಳು. ಇದೇ ಕಾಲದಲ್ಲಿ ಕೃಷ್ಣನು ಅಲ್ಲಿಗೆ ಬಂದು ರುಕ್ಮಿಣಿಯನ್ನು ತನ್ನ ರಥದಲ್ಲಿ ಕೂಡಿಸಿಕೊಂಡು ಅಲ್ಲಿಂದ ಹೊರಟು ಬಿಟ್ಟ. ಸಿಟ್ಟಿಗೆದ್ದ ಜರಾಸಂಧನೇ ಮೊದಲಾದ ರಾಜರು. ರುಕ್ಮಿಯನ್ನು ಮುಂದೆ ಮಾಡಿಕೊಂಡು ಕೃಷ್ಣನ ಬೆನ್ನು ಹತ್ತಿದರು. ಕೃಷ್ಣನ ಅಣ್ಣನಾದ ಬಲರಾಮನು ರಥದಿಂದ ತಾನು ಕೆಳಗೆ ಇಳಿದು ತನ್ನ ಆಯುಧವಾದ ನೇಗಿಲು ಹಾಗೂ ಒನಕೆಗಳನ್ನು ಎತ್ತಿ ವೈರಿಗಳನ್ನೆಲ್ಲ ಹೊಡೆದು ಒಟ್ಟಿದ. ಅವನು ನೇಗಿಲು ಹಾಕಿ ಎಳೆದಾಗ ಆನೆ ಕುದುರೆ, ರಥ, ಕಾಲಾಳುಗಳ ರಾಶಿ ಹಾಕಿದಂತೆ ಒಂದೆಡೆ ಬಂದು ಬೀಳುತ್ತಿದ್ದವು. ಆಗ ಬಲರಾಮನು ತನ್ನ ಮುಸಲಾಯುಧವನ್ನು ಎತ್ತಿ ಅವರನ್ನೆಲ್ಲ ಜಜ್ಜುತ್ತಿದ್ದ. ಅದರಿಂದ ವೈರಿ ಸೇನೆಯ ಆನೆ, ಕುದುರೆ, ರಥ, ಪಾದಚಾರಿಗಳು ಮೊದಲಾದವನ್ನೆಲ್ಲಾ ತನ್ನ ಒನಕೆ ಹಾಗೂ ನೇಗಿಲುಗಳಿಂದ ಹೊಡೆದು ಕೊಚ್ಚಿ ಹಾಕುತ್ತಿದ್ದ. ಹೀಗೆ ಕ್ಷಣಾರ್ಧದಲ್ಲಿ ಬಲರಾಮ ವೈರಿ ಸೈನ್ಯವನ್ನೆಲ್ಲ ಕೊಂದು ಹಾಕಿದ.

ಅನಂತರ ಕೋಪಿಷ್ಠನಾದ ಆ ರುಕ್ಮಿಯು ತನ್ನ ಧನುಷ್ಟಂಕಾರ ಮಾಡಿ ಅನೇಕ ಬಾಣಗಳನ್ನು ಬಿಟ್ಟು ಕೃಷ್ಣನನ್ನು ಎದುರಿಸಿದ. ಹದನವಾದ ಬಗೆ ಬಗೆಯ ಬಾಣಗಳನ್ನು ತೆಗೆದು ಗುರಿ ಇಟ್ಟು ಕೃಷ್ಣನನ್ನು ಪ್ರಹರಿಸಿದ. ಆಗ ಗೋವಿಂದನು ನಕ್ಕು ತನ್ನ ಒಂದೇ ಬಾಣದಿಂದ ರುಕ್ಮಿಯ ರಥವನ್ನು ಪುಡಿಗಟ್ಟಿ, ಕುದುರೆಗಳನ್ನು ಕೆಡಹಿ ಸಾರಥಿಯನ್ನು ಕೊಂದು ಧ್ವಜವನ್ನು ಮುರಿದು, ಪತಾಕೆಯನ್ನು ಹರಿದು ಅವನ ಶಸ್ತ್ರಾಸ್ತ್ರಗಳನ್ನೆಲ್ಲ ಸೀಳಿ, ಅವನನ್ನು ವಿರಥ ಹಾಗೂ ನಿರಾಯುಧನನ್ನಾಗಿ ಮಾಡಿದ. ಆಗ ರುಕ್ಮಿಯು ಪಾದಚಾರಿಯಾಗಿಯೇ ಕೃಷ್ಣನನ್ನು ಹೊಡೆಯಲು ಖಡ್ಗವನ್ನು ಹಿಡಿದು ಎತ್ತಿ ಬಂದ. ಆಗ ಕೃಷ್ಣನು ತನ್ನ ಬಾಣದಿಂದ ಖಡ್ಗವನ್ನು ಕತ್ತರಿಸಿದ. ಮುಷ್ಟಿಯನ್ನು ಬಿಗಿದು ಅವನ ಎದೆಗೆ

ಹೊಡೆದು ಮತ್ತು ಅವನನ್ನು ಜೀವಂತ ಸೆರೆ ಹಿಡಿದು ತನ್ನ ತೀಕ್ಷ್ಣವಾದ ಖಡ್ಗದಿಂದ ಅವನ ತಲೆಯನ್ನು ಬೋಳಿಸಿ ಬಿಟ್ಟ. ಅದರಿಂದ ದುಃಖಿತಪ್ತನಾದ ರುಕ್ಮಿಯು ಹಾವಿನಂತೆ ನಿಟ್ಟುಸಿರು ಬಿಡುತ್ತಾ ತನ್ನ ಪಟ್ಟಣವನ್ನು ಪ್ರವೇಶಿಸಿದ. ಅಲ್ಲಿಯೇ ವಾಸ ಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಜರಾಸಂಧನ ಸೋಲು. ಬೇರೆ ಬೇರೆ ರಾಜಕನ್ಯೆಯರೊಂದಿಗೆ ಶ್ರೀಕೃಷ್ಣನ ವಿವಾಹ ರುಕ್ಮಿಣೀ ಸ್ವಯಂವರ ಎಂಬ ಎರಡುನೂರ ಇಪ್ಪತ್ತೊಂಬತ್ತನೇಯ ಅಧ್ಯಾಯ ಮುಗಿದುದು*



## ರುಕ್ಮಿಣೀ ವಿವಾಹ ವರ್ಣನ

**ಅಧ್ಯಾಯ - ೨೩೦**

**ಮಹಾದೇವ:-** ಅನಂತರ ಶ್ರೀಕೃಷ್ಣನು ಬಲರಾಮ ರುಕ್ಮಿಣಿ ಮತ್ತು ತನ್ನ ಸಾರಥಿಯಾದ ದಾರುಕನಿಂದ ಕೂಡಿಕೊಂಡು ರಥಾರೂಢನಾಗಿ ದ್ವಾರಕೆಗೆ ಶೀಘ್ರಗತಿಯಿಂದ ತೆರಳಿದ. ಅಲ್ಲಿ ಶುಭದಿನದಲ್ಲಿ ವೇದೋಕ್ತವಾದ ವಿಧಿಯಿಂದ ಸುವರ್ಣದ ಆಭರಣಗಳನ್ನು ತೊಟ್ಟು ರುಕ್ಮಿಣಿಯನ್ನು ಮದುವೆ ಮಾಡಿಕೊಂಡ. ವಸುದೇವ ಉಗ್ರಸೇನ, ಅಕ್ರೂರ, ಬಲರಾಮ ಮುಂತಾದ ಹಿರಿಯ ಯಾದವರೆಲ್ಲರೂ ನಿಂತು ಶ್ರೀಕೃಷ್ಣ ರುಕ್ಮಿಣಿಯರ ವಿವಾಹ ಮಂಗಳ ಮಹೋತ್ಸವವನ್ನು ಒಳ್ಳೆ ವಿಜೃಂಭಣೆಯಿಂದ ನೆರವೇರಿಸಿದರು.

**ನಂದಗೋಪೋಽಥ ಗೋಪಾಲೈ ರ್ಗೋಪವೃಂದೈಸ್ಸಮಾಗತಃ ।**
**ಸ್ವಲಂಕೃತಾಭಿ ರ್ಯೋಷಾಭಿರ್ಯಶೋದಾಪಿ ಸಮಾಗತಾ ॥**

ಕೃಷ್ಣನ ಈ ಮೊಟ್ಟ ಮೊದಲನೆಯ ಮದುವೆಗೆ ನಂದಗೋಪನು ಎಲ್ಲ ಗೋಪಾಲ ಬಾಲಕರಿಂದಲೂ ಗೋಪವೃದ್ಧರಿಂದಲೂ ಕೂಡಿಕೊಂಡು ಬಂದಿದ್ದ. ಯಶೋದೆಯೂ ಕೂಡ ಬಗೆಬಗೆಯ ವಸ್ತ್ರಾಲಂಕಾರಗಳಿಂದ ಶೃಂಗಾರಿತರಾದ ವೃಂದಾವನದ ಸುಂದರಿಯರಿಂದ ಒಡಗೂಡಿಕೊಂಡು ಗೋವಿಂದನ ಮದುವೆಗೆಂದು ಬಂದಿದ್ದಳು.

ವಸುದೇವನ ದೇವಕಿಯೇ ಮೊದಲಾದ ಎಲ್ಲ ಹೆಂಡಂದಿರು ಮತ್ತು ಬಲರಾಮನ ಮಡದಿಯಾದ ರೇವತಿಯೇ ಮೊದಲಾದ ಎಲ್ಲ ಪೌರ ಪ್ರಮದೆಯರು ಉತ್ಸಾಹದಿಂದ ವೈವಾಹಿಕ ಕಾರ್ಯಗಳನ್ನೆಲ್ಲ ಆನಂದದಿಂದ ನೆರವೇರಿಸಿದರು. ಈ ವಿವಾಹ ಕಾರ್ಯದಲ್ಲಿ ಮಾಡಬೇಕಾದ ದೇವತಾ ಆರಾಧನೆಯನ್ನು ವಯೋವೃದ್ಧರಾದ ರಾಜಸ್ತ್ರೀಯರ ಮುಖಾಂತರ ಮಾಡಿಸಲಾಯಿತು. ಪ್ರಭೂತವಾಗಿ ಬ್ರಾಹ್ಮಣರಿಗೆ ಭೂರಿ ಭೋಜನ, ದಕ್ಷಿಣೆ, ವಸ್ತ್ರಾಲಂಕಾರಗಳನ್ನು ಇತ್ತು ಸತ್ಕರಿಸಲಾಯಿತು. ನಂದಗೋಪನೆ ಮೊದಲಾದ ವೃಂದಾವನದ ಎಲ್ಲ ಗೋಪಾಲಕರಿಗೂ ಯಶೋದೆಯೇ ಮೊದಲಾದ ವ್ರಜಭೂಮಿಯ ವನಿತೆಯರಿಗೂ ಲಗ್ನದ ಕಾಣಿಕೆಯೆಂದು ಮತ್ತು ರತ್ನಾದಿ ಅಲಂಕಾರಗಳನ್ನೂ ಮತ್ತು ಪಟ್ಟೆ ಪೀತಾಂಬರಗಳನ್ನೂ ಕೊಟ್ಟು ಸತ್ಕರಿಸಲಾಯಿತು.

ವೇದ ವೇದಾಂತ ವಿದ್ವಾಂಸರಾದ ಬ್ರಾಹ್ಮಣರು ಶಾಸ್ತ್ರೋಕ್ತವಾದ ವಿಧಿಯಿಂದ ವಿವಾಹ ಸಮಾರಂಭವನ್ನು ವೈಭವದಿಂದ ನೆರವೇರಿಸಿದರು. ಅನಂತರ ಕೃಷ್ಣರುಕ್ಮಿಣಿಯರು

ಹಿರಿಯರಾದ ಎಲ್ಲ ಬ್ರಾಹ್ಮಣರಿಗೂ, ಜ್ಞಾನ ವೃದ್ಧರಿಗೂ ನಮಸ್ಕರಿಸಿದರು. ಮತ್ತು ಹಿರಿಯ ಅಣ್ಣನಾದ ಬಲರಾಮನಿಗೂ ವಂದಿಸಿದರು.

ವಿವಾಹದ ನಂತರ ಎಲ್ಲ ಜನರು ಶ್ರೀಹರಿಯಿಂದ ಸತ್ಕೃತರಾಗಿ ತಮ್ಮ ತಮ್ಮ ಮನೆಗಳಿಗೆ ತೆರಳಿದ ಬಳಿಕ ಶ್ರೀಕೃಷ್ಣನು ರುಕ್ಮಿಣಿ ದೇವಿಯೊಂದಿಗೆ ದಿವ್ಯವಾದ ಸೌಧದಲ್ಲಿ ಸುಖದಿಂದ ವಾಸಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ರುಕ್ಮಿಣೀ ವಿವಾಹ ವರ್ಣನ ಎಂಬ ಎರಡುನೂರ ಮೂವತ್ತನೇಯ ಅಧ್ಯಾಯ ಮುಗಿದುದು*

—o—

## ಶ್ಯಮಂತಕಮಣಿಯ ಕತೆ, ಜಾಂಬವತಿ ಸತ್ಯಭಾಮೆಯರೊಂದಿಗೆ ಕೃಷ್ಣನ ಮದುವೆ. ನರಕಾಸುರ ಸಂಹಾರ

ಅಧ್ಯಾಯ - ೨೩೧

**ಮಹಾದೇವ:-** ವಿಷ್ಣು ಪತ್ನಿಯಾದ ಭೂದೇವಿಯು ಸತ್ಯಾ ಎಂಬ ಹೆಸರಿನಿಂದ ಸತ್ರಾಜಿತನ ಮಗಳಾಗಿ ಜನಿಸಿ ಕೃಷ್ಣನನ್ನು ವರಿಸಿದಳು. ಅದೇ ಭಗವಂತನ ಮತ್ತೊಬ್ಬ ಪತ್ನಿಯಾದ ನೀಲಾದೇವಿಯು ಸಾಕ್ಷಾತ್ ಸೂರ್ಯನ ಮಗಳಾಗಿ ಕಾಲಿಂದೀ ಎಂಬ ಹೆಸರಿನಿಂದ ಹುಟ್ಟಿ ಕೃಷ್ಣನ ಕೈ ಹಿಡಿದಳು. ವಿಂದಾನುವಿಂದನ ಪುತ್ರಿಯಾದ ಮಿತ್ರವೃಂದೆಯನ್ನು ಸ್ವಯಂವರದಲ್ಲಿ ಏಳು ಕೊಬ್ಬಿದ ಗೂಳಿಗಳನ್ನು ಮರ್ದಿಸಿ ಕೃಷ್ಣ ವಿವಾಹವಾದ.

ಸತ್ರಾಜಿತನ ಬಳಿಯಲ್ಲಿ ಶ್ಯಮಂತಕ ಎಂಬ ಒಂದು ರತ್ನವಿದ್ದಿತು. ಅದನ್ನು ಅವನು ತನ್ನ ತಮ್ಮನಾದ ಪ್ರಸೇನನಿಗೆ ಧರಿಸಲು ಕೊಟ್ಟಿದ್ದ. ಒಂದು ದಿನ ಕೃಷ್ಣ ಆ ಮಣಿಯನ್ನು ತನಗೆ ಕೊಡು ಎಂದು ಕೇಳಿದ. ಅದಕ್ಕೆ ಪ್ರಸೇನ "ಕೃಷ್ಣ, ಇದು ಕೊಡುವ ರತ್ನ ಅಲ್ಲ. ಪ್ರತಿದಿನವೂ ಈ ಶ್ಯಮಂತಕಮಣಿಯು ಇಪ್ಪತ್ತು ತೊಲೆ ತೂಕದ ಒಂದು ಭಾರದಷ್ಟು ಬಂಗಾರವನ್ನು ನೀಡುವದು. ಅದರಿಂದ ಇದನ್ನು ನಾವು ಯಾರಿಗೂ ಕೊಡುವುದಿಲ್ಲ" ಎಂದು ಹೇಳಿದ. ಅದನ್ನು ಕೇಳಿ ಕೃಷ್ಣ ಅದರ ವಿಚಾರ ಬಿಟ್ಟು ಬಿಟ್ಟ.

ಒಂದು ದಿನ ಶ್ರೀಕೃಷ್ಣ ಎಲ್ಲ ಯಾದವರಿಂದ ಕೂಡಿ ಬೇಟೆ ಆಡಲಿಕ್ಕೆ ಕಾಡಿಗೆ ಹೋಗಿದ್ದ. ಎಲ್ಲ ಯದುವೀರರೂ ಆ ಗೊಂಡಾರಣ್ಯದಲ್ಲಿ ಕ್ರೂರಪ್ರಾಣಿಗಳನ್ನು ಬೇಟೆಯಾಡುತ್ತ ತಮ್ಮ ಮನ ಬಂದತ್ತ ನುಗ್ಗಿದರು. ಪ್ರಸೇನನೂ ಆ ಕಗ್ಗಾಡಿನ ಗುತ್ತಾಗಿ ಬೆಳೆದ ಗಿಡಗಳ ಗೂಢ ಜಾಡುಗೂಡುಗಳಲ್ಲಿ ನುಗ್ಗಿ ಕಂಡ ಮೃಗಗಳನ್ನು ತುಂಡರಿಸುತ್ತ ಒಬ್ಬನೇ ಬೇಟೆಯಾಡುತ್ತ ನಡೆದಿದ್ದ. ಆಗ ಒಂದು ಕ್ರೂರ ಸಿಂಹವು ಬಂದು ಪ್ರಸೇನನ್ನು ಕೊಂದು ಅವನು ಕೊರಳಲ್ಲಿ ಕಟ್ಟಿಕೊಂಡ ಶ್ಯಮಂತಕ ರತ್ನವನ್ನು ಅಪಹರಿಸಿತು. ಮುಂದೆ ಜಾಂಬವಂತನೆಂಬ ಕರಡಿಯು ಬಂದು ಆ ಸಿಂಹವನ್ನು ಹೊಡೆದು ಬೀಳಿಸಿ ಆ ಮಣಿಯನ್ನು ತೆಗೆದುಕೊಂಡು ತನ್ನ ಗುಹೆಗೆ ಹೋಯಿತು.

ಇತ್ತ ಕೃಷ್ಣ ತನ್ನ ಮಿತ್ರರಾದ ಯಾದವರೊಂದಿಗೆ ಸಾಯಂಕಾಲದವರೆಗೂ ಬೇಟೆಯ ಆಟವಾಡಿದ. ಅಂದು ಭಾದ್ರಪದ ಶುಕ್ಲ ಚತುರ್ಥಿಯ ದಿನ ಚಂದ್ರೋದಯ ಆದುದನ್ನು ಕಂಡು ಮರಳಿ ದ್ವಾರಕೆಗೆ ಗೆಳೆಯರೊಂದಿಗೆ ತಿರುಗಿಬಂದ.

ಪ್ರಸೇನ ಮಾತ್ರ ಬರಲಿಲ್ಲ. ಅದನ್ನು ನೋಡಿ ಯಾದವರು ''ಕೃಷ್ಣನೇ ಬೇಟೆಯ ನೆಪದಿಂದ ಕಾಡಿಗೆ ಕರೆದೊಯ್ದು ಕೊಂದು ಶ್ಯಮಂತಕ ಮಣಿಯನ್ನು ಅಪಹರಿಸಿದ್ದಾನೆ. ಇದರಲ್ಲಿ ಸಂಶಯವೇ ಇಲ್ಲ'' ಎಂದು ಪರಸ್ಪರ ಮಾತನಾಡಿಕೊಂಡರು. ಇದು ಕೃಷ್ಣನ ಕಿವಿಗೂ ತಲುಪಿತು. ಮೂಢ ಜನರು ತನ್ನ ಮೇಲೆ ಹೊರಿಸಿದ ಆ ಅಪವಾದವನ್ನು ತೊಳೆದು ಕೊಳ್ಳಲು ಶ್ರೀಕೃಷ್ಣ ನಿರ್ಧರಿಸಿದ. ಎಲ್ಲ ಯಾದವವೀರರನ್ನು ಮತ್ತೆ ಅಡವಿಗೆ ಕರೆದುಕೊಂಡು ಹೋದ. ಅಲ್ಲಿಯ ನಿಬಿಡವಾದ ಒಳಕಾಡಿನಲ್ಲಿ ಸಿಂಹದಿಂದ ಹತನಾಗಿ ಬಿದ್ದ ಪ್ರಸೇನನ್ನು ತೋರಿಸಿದ. ಅನಂತರ ಆ ಯಾದವರನ್ನೆಲ್ಲ ಅಲ್ಲಿಯೇ ಕೂಡಿಸಿ ತಾನೊಬ್ಬನೆ ಮತ್ತೆ ಆ ಗೂಢ ಕಾಡಿನಲ್ಲಿ ಗದೆಯನ್ನು ಹಿಡಿದು ಹೊಕ್ಕ. ದೂರದಲ್ಲಿ ಒಂದು ಗುಹೆಯ ಬಾಗಿಲಲ್ಲಿ ಮಣಿಯನ್ನು ಹಿಡಿದುಕೊಂಡು ಬಂದ ಸಿಂಹವು ಸತ್ತುಬಿದ್ದಿತ್ತು. ಅಲ್ಲಿಂದ ಮುಂದೆ ಹೋಗಿ ಕೃಷ್ಣ ಆ ಗಹನತರವಾದ ಗುಹೆಯಲ್ಲಿ ಪ್ರವೇಶಿಸಿದ. ಅದೊಂದು ಮುತ್ತು, ರತ್ನ ಬಂಗಾರಗಳಿಂದ ಶೃಂಗಾರಿತವಾದ ದಿವ್ಯ ಮನೆಯಂತಿತ್ತು. ಕರಡಿಗಳ ಒಡೆಯನಾದ ಜಾಂಬವಂತನ ದಾಸಿಯು ಒಂದು ತೊಟ್ಟಿಲಿಗೆ ಆ ಶ್ಯಮಂತಕಮಣಿಯನ್ನು ಕಟ್ಟಿ ಅದನ್ನು ತೂಗುತ್ತಿದ್ದಳು.

**''ಸಿಂಹ ಪ್ರಸೇನಮವಧಿತ್ ಸಿಂಹೋ ಜಾಂಬವತಾ ಹತಃ ।**
**ಸುಕುಮಾರಕ ಮಾರೋದೀಃ ತವ ಹ್ಯೇಷಃ ಶ್ಯಮಂತಕ ॥**

ಸಿಂಹವು ಪ್ರಸೇನನನ್ನು ಕೊಂದಿತು. ಆ ಸಿಂಹವನ್ನು ಜಾಂಬವಂತನು ಕೊಂದು ಈ ಶ್ಯಮಂತಕ ರತ್ನವನ್ನು ತಂದಿದ್ದಾನೆ. ಮಗು ಅಳಬೇಡ. ಈಗ ಶ್ಯಮಂತಕ ರತ್ನ ನಿನ್ನದೇ.''

ಹೀಗೆ ಹಾಡು ಹಾಡುತ್ತ ದಾಸಿ ತೊಟ್ಟಿಲು ತೂಗುತ್ತಿದ್ದಳು. ಅದನ್ನು ಕೇಳಿ ಕೃಷ್ಣ ತನ್ನ ಶಂಖ ಊದಿದ. ಅದರ ಧ್ವನಿ ಕೇಳಿ ಜಾಂಬವಂತ ಎದ್ದು ಬಂದ. ಈ ಕೃಷ್ಣನಿಗೂ ಜಾಂಬವಂತನಿಗೂ ಹತ್ತು ದಿನ ಹಣಾಹಣಿ ಹೋರಾಟ ನಡೆಯಿತು. ದಿನ ದಿನಕ್ಕೆ ಜಾಂಬವಂತನ ಶಕ್ತಿ ಕುಗ್ಗುತ್ತಿತ್ತು. ಕೃಷ್ಣನ ಬಲ ಬೆಳೆಯುತ್ತಿತ್ತು. ವಜ್ರ ಸಮಾನವಾದ ಮುಷ್ಟಿ ಪ್ರಹಾರಗಳಿಂದ ಕೃಷ್ಣನನ್ನು ಹೊಡೆದು ಹಣ್ಣಾದ ಜಾಂಬವಂತ. ಹಿಂದೆ ತ್ರೇತಾಯುಗದಲ್ಲಿ ಶ್ರೀರಾಮ ತನಗೆ ಹೇಳಿದ ಮಾತು ನೆನಪಿಗೆ ಬಂತು. ಆ ರಾಮಸ್ವಾಮಿಯೇ ಧರ್ಮರಕ್ಷಣೆಗಾಗಿ ಈ ದ್ವಾಪರದಲ್ಲಿ ಅವತರಿಸಿ ತನ್ನ ಮನೋರಥವನ್ನು ಈಡೇರಿಸಲಿಕ್ಕಾಗಿ ತನ್ನ ಗುಹೆಗೆ ಬಂದಿದ್ದಾನೆಂದು ಜಾಂಬವಂತನಿಗೆ ನಿಶ್ಚಯವಾಯಿತು. ಕೂಡಲೇ ಯುದ್ಧವನ್ನು ನಿಲ್ಲಿಸಿದ. ಕೃಷ್ಣನಿಗೆ ಕೈ ಮುಗಿದು ನಮಸ್ಕರಿಸಿ 'ನೀನು ಯಾರು? ಎಂದು ಕೇಳಿದ. ಅದಕ್ಕೆ ಕೃಷ್ಣ ನಸುನಕ್ಕು ''ನಾನು ವಸುದೇವನ ಮಗ. ಶ್ಯಮಂತಕ ರತ್ನಕ್ಕಾಗಿ ನಿನ್ನ ಬಳಿಗೆ ಬಂದಿದ್ದೇನೆ. ಬೇಗ ಅದನ್ನು ಕೊಡು. ಇಲ್ಲದಿದ್ದರೆ ನನ್ನ ಕೈಯಿಂದ ಸತ್ತು ಹೋಗುವೆ'' ಎಂದು ಹೇಳಿದ.

**ಜಾಂಬವಂತ:-** ''ದೇವಕಿನಂದನ, ನಿನ್ನ ದರ್ಶನದಿಂದ ನಾನು ಧನ್ಯನಾದೆ. ನಾನು ಹಿಂದೆ ರಾಮಾವತಾರದಲ್ಲಿ ನಿನ್ನ ದಾಸನಾಗಿದ್ದೆ. ನಿನ್ನೊಡನೆ ಯುದ್ಧ ಮಾಡಬೇಕೆಂದು ಬೇಡಿಕೊಂಡಿದ್ದೆ. ಇಂದು ನೀನು ನನ್ನ ಆ ಅಪೇಕ್ಷೆಯನ್ನು ಪೂರ್ಣ ಮಾಡಿರುವೆ. ನನ್ನ ಅಪರಾಧವನ್ನು ಕ್ಷಮಿಸು. ನನ್ನ ಮೇಲೆ ಅನುಗ್ರಹವನ್ನು ಮಾಡು'' ಎಂದು ನಮಸ್ಕಾರ ಮಾಡಿ ಬೇಡಿಕೊಂಡ. ಕೃಷ್ಣನನ್ನು ದಿವ್ಯವಾದ ರತ್ನ ಪೀಠದ ಮೇಲೆ ಕೂಡಿಸಿದ. ಅವನ ತಾವರೆಯಂಥ ಚರಣಗಳನ್ನು ತಿಳಿನೀರಿಂದ ತೊಳೆದ. ಅರ್ಘ್ಯಪಾದ್ಯಾದಿಗಳನ್ನು ನೀಡಿದ.

ಮಧುಪರ್ಕವನ್ನು ವಸ್ತ್ರ ಆಭರಣಗಳನ್ನು ಕೊಟ್ಟ. ಶಾಸ್ತ್ರೋಕ್ತವಾಗಿ ಶ್ರೀಕೃಷ್ಣನ ಪೂಜೆಗೈದ. ಮತ್ತು ತನ್ನ ಮಗಳಾದ ಜಾಂಬವತಿಯನ್ನು ವಿಧಿಪೂರ್ವಕವಾಗಿ ಕೃಷ್ಣನಿಗೆ ಮದುವೆ ಮಾಡಿಕೊಟ್ಟ. ಶ್ಯಮಂತಕ ಹಾಗೂ ಉಳಿದ ಅನೇಕ ರತ್ನಗಳನ್ನು ತಂದು ಅಳಿಯನಿಗೆ ಕಾಣಿಕೆಯಾಗಿ ನೀಡಿದ. ಗೋವಿಂದನು ತನ್ನ ಪುರಾತನ ಭಕ್ತನಾದ ಜಾಂಬವಂತನು ನೀಡಿದ ಕನ್ಯಾರತ್ನವನ್ನು ಆನಂದದಿಂದ ಮದುವೆಯಾಗಿ ಅವನು ಕೊಟ್ಟ ಶ್ಯಮಂತಕ ರತ್ನವನ್ನೂ ಉಳಿದ ಬೇರೆ ಬೇರೆ ಮಣಿ ಮುತ್ತುಗಳನ್ನೂ ಸ್ವೀಕರಿಸಿ ದ್ವಾರಕೆಗೆ ಮರಳಿದ. ಸತ್ರಾಜಿತನನು ಕರೆಯಿಸಿ ಅವನಿಗೆ ಶ್ಯಮಂತಕ ರತ್ನವನ್ನು ಕೊಟ್ಟು ಬಿಟ್ಟ. ಆಗ ಸತ್ರಾಜಿತನು ತನ್ನ ಮಗಳಾದ ಸತ್ಯಭಾಮೆಯನ್ನು ಕೃಷ್ಣನಿಗೆ ಕೊಟ್ಟು ಮದುವೆ ಮಾಡಿ ಆ ಶ್ಯಮಂತಕವನ್ನು ತನ್ನ ಮಗಳಿಗೆ ನೀಡಿದ. ಭಾದ್ರಪದ ಶುಕ್ಲ ಚತುರ್ಥಿ ದಿನ ಚಂದ್ರದರ್ಶನ ಮಾಡಿದ್ದರಿಂದ ಈ ಸ್ಯಮಂತಕರತ್ನವನ್ನು ಕದ್ದ ಅಪವಾದ ಬಂದಿತ್ತು. ಆದುದರಿಂದ ಯಾರೂ ಆ ಚತುರ್ಥಿ ಯಂದು ಚಂದ್ರನನ್ನು ನೋಡಬಾರದು. ಅಕಸ್ಮಾತ್ ಆಗಿ ಚತುರ್ಥೀದಿನದಂದು ಚಂದ್ರನನ್ನು ನೋಡಿದರೆ ಈ ಶ್ಯಮಂತಕ ಮಣಿಯ ಕಥೆಯನ್ನು ಕೇಳಬೇಕು. ಆದರಿಂದ ಮಾನವನರು ಸುಳ್ಳು ಅಪವಾದಗಳೆಲ್ಲ ತೊಳೆದು ಹೋಗುವವು.

ಸುಲಕ್ಷಣಾ, ನಾಗ್ನಜಿತೀ, ಸುಶೀಲಾ ಈ ಮೂವರು ಮದ್ರರಾಜನ ಮಕ್ಕಳಾದ ಕನ್ಯಾಮಣಿಗಳು. ಈ ಮೂವರು ಸ್ವಯಂವರದಲ್ಲಿ ಕೃಷ್ಣನನ್ನೇ ವರಿಸಿದರು. ಶುಭಮುಹೂರ್ತದಲ್ಲಿ ಕೃಷ್ಣ ಈ ಮೂವರು ಮದ್ರರಾಜಕುಮಾರಿಯರ ಕೊರಳಿಗೆ ಮಂಗಳ ಸೂತ್ರ ಕಟ್ಟಿ ವಿವಾಹವಾದ. ಹೀಗೆ ಕೃಷ್ಣ ಎಂಟು ಜನ ಪಟ್ಟ ಮಹಿಷಿಯರನ್ನು ವಿವಾಹವಾದ.

**''ರುಕ್ಮಿಣೀ ಸತ್ಯಭಾಮಾ ಚ ಕಾಲಿಂದೀ ಚ ಶುಚಿಸ್ಮಿತಾ ।**
**ಮಿತ್ರವಿಂದಾ ಜಾಂಬವತೀ ನಾಗ್ನಜಿತ್ಯ: ಸುಲಕ್ಷಣಾ : ॥**
**ಸುಶೀಲಾ ನಾಮ ತನ್ವಂಗೀ ಮಹಿಷೀ ಚಾಷ್ಟಮೀಸ್ಮೃತಾ ॥**

ಶ್ರೀರುಕ್ಮಿಣೀ, ಸತ್ಯಭಾಮಾ, ಕಾಲಿಂದೀ, ಮಿತ್ರವಿಂದಾ, ಜಾಂಬವತೀ, ನಾಗ್ನಜಿತೀ, ಸುಲಕ್ಷಣಾ, ಸುಶೀಲಾ ಈ ಎಂಟು ಕನ್ಯೆಯರು ಕೃಷ್ಣನ ಕೈ ಹಿಡಿದ ಅಷ್ಟಮಹಿಷಿಯರು ಅರ್ಥಾತ್ ಎಂಟು ಜನ ಪಟ್ಟರಾಣಿಯರು ಎಂದು ಪ್ರಸಿದ್ಧರಾದರು.

ಭೂದೇವಿಯ ಮಗನಾದ ನರಕಾಸುರ ಮಹಾಬಲಿಷ್ಠ ಅಷ್ಟೇ ಕೋಪಿಷ್ಠ. ಎಲ್ಲಕ್ಕೂ ಮಿಗಿಲಾಗಿ ದರ್ಪಿಷ್ಠ. ಅವನು ಸಮರದಲ್ಲಿ ಅಮರ ಸೇನೆಯನ್ನೆಲ್ಲ ಸೋಲಿಸಿದ. ಇಂದ್ರನನ್ನು ಜಯಿಸಿದ. ದೇವಮಾತೆಯಾದ ಅದಿತಿದೇವಿಯ ಕರ್ಣಕುಂಡಲಗಳನ್ನು ಅಪಹರಿಸಿದ. ಮತ್ತು ದೇವೇಂದ್ರನ ಐರಾವತ ಎಂಬ ಆನೆಯನ್ನೂ ಉಚ್ಚೈಶ್ರವ ಎಂಬ ಕುದುರೆಯನ್ನೂ ಉಳಿದೆಲ್ಲ ದೇವಲೋಕದ ಅನರ್ಘ್ಯ ರತ್ನಗಳನ್ನೂ ದೋಚಿಕೊಂಡು ಹೋದ. ಕುಬೇರನ ಕೋಶಕ್ಕೆ ನುಗ್ಗಿ ಅಸಂಖ್ಯ ಮಣಿ ಮಾಣಿಕ್ಯಗಳನ್ನೂ ಶಂಖ ಪದ್ಮಾದಿನಿಧಿಗಳನ್ನು ಅಪಹರಿಸಿದ. ದೇವಲೋಕದ ಅಪ್ಸರೆಯರನ್ನೂ ವಜ್ರಾದಿ ಆಯುಧಗಳನ್ನೂ ಕಿತ್ತುಕೊಂಡ. ಅವುಗಳಿಂದಲೇ ದೇವತೆಗಳನ್ನು ಹೊಡೆದೋಡಿಸಿ ಗಗನಗಾಮಿ ದಿವ್ಯನಗರದಲ್ಲಿ ವಾಸಮಾಡಿದ. ಅವನಿಂದ ಸಂತ್ರಸ್ತರಾದ ದೇವತೆಗಳು ಇಂದ್ರನೊಂದಿಗೆ ಕೃಷ್ಣನಲ್ಲಿ ಮೊರೆ ಇಟ್ಟರು.

ಅದನ್ನು ಕೇಳಿ ಕೃಷ್ಣನು ಗರುಡನನ್ನು ನೆನೆದ. ಆಗ ಗರುಡ ಬಂದು ಕೃಷ್ಣನಿಗೆ ನಮಸ್ಕಾರ ಮಾಡಿ ನಿಂತ. ಅನಂತರ ಕೃಷ್ಣ ಸತ್ಯಭಾಮೆಯೊಂದಿಗೆ ಗರುಡಾರೂಢನಾಗಿ ನರಕಾಸುರನ ರಾಜಧಾನಿಗೆ ಬಂದ. ತನ್ನನ್ನು ತಡೆಯಬಂದ ಶೂರವೀರ ರಕ್ಕಸರನ್ನೆಲ್ಲ ಸುದರ್ಶನ ಚಕ್ರದಿಂದ ಹೊಡೆದು ವಧಿಸಿ ತನ್ನ ಪಾಂಚಜನ್ಯ ಎಂಬ ಶಂಖವನ್ನು ಊದಿದ. ಆಗ ನರಕಾಸುರ ಎದ್ದು ಬಂದ. ಕೃಷ್ಣನೊಡನೆ ಕಲಿತನದಿಂದ ಕಾದಿದ. ಕೆಲ ನಿಮಿಷ ನರಕಾಸುರನೊಡನೆ ಹೋರಾಡಿದ. ಬಳಿಕ ಕೃಷ್ಣನು ತನ್ನ ಅರ್ಧಚಂದ್ರಾಕಾರವಾದ ಬಾಣದಿಂದ ಆ ದೈತ್ಯನ ಬಿಲ್ಲನ್ನು ಕತ್ತರಿಸಿದ. ಮತ್ತು ತನ್ನ ದಿವ್ಯಾಸ್ತ್ರದಿಂದ ನರಕಾಸುರನ ಎದೆಗೆ ಪ್ರಹರಿಸಿದ. ಅದರಿಂದ ಆ ಭೌಮಾಸುರ ಎದೆ ಸೀಳಿ ನೆಲಕ್ಕೆ ಉರುಳಿದ. ಆಗ ಭೂದೇವಿಯ ಪ್ರಾರ್ಥನೆಯಂತೆ ಕೃಷ್ಣ ಅವನ ಬಳಿಗೆ ಬಂದು ''ನಿನಗೆ ಬೇಕಾದ ವರ ಕೇಳು'' ಎಂದು ಹೇಳಿದ. ಅದನ್ನು ಕೇಳಿ ನರಕಾಸುರ ಭಕ್ತಿಯಿಂದ ನಮಿಸಿ ವರ ಕೇಳಿದ.

**ನರಕಾಸುರ:-** ಜಗದೀಶ್ವರ, ನಾನು ಮರಣ ಹೊಂದಿದ ಇಂದಿನ ಈ ಅಶ್ವಿನಿ ಕೃಷ್ಣನ ಪಕ್ಷದ ಚತುರ್ದಶಿ ದಿನದಲ್ಲಿ ಯಾರು ಮಂಗಳ ಸ್ನಾನ ಮಾಡುವರೋ ಅವರಿಗೆ ನರಕ ಆಗಬಾರದು.

ಅದಕ್ಕೆ ಶ್ರೀಕೃಷ್ಣನು 'ತಥಾಸ್ತು' ಎಂದು ಹೇಳಿದ. (ಅಂದಿನಿಂದ ಅಥಿತಿ ನರಕ ಚತುರ್ದಶಿ' ಎಂದು ಪ್ರಸಿದ್ಧವಾಯಿತು). ಆಗ ಆ ನರಕಾಸುರ ಬ್ರಹ್ಮರುದ್ರಾದಿ ದೇವತೆಗಳಿಂದ ಪೂಜಿತವಾದ ಕೃಷ್ಣನ ಪಾದಾರವಿಂದಗಳನ್ನು ಭಕ್ತಿಯಿಂದ ನೋಡುತ್ತಲೇ ಪ್ರಾಣಬಿಟ್ಟ. ಅದರಿಂದ ಅವನು ಶ್ರೀಹರಿಯ ಸಾರೂಪ್ಯ ಮುಕ್ತಿಯನ್ನು ಹೊಂದಿದ. ಅದನ್ನು ಕಂಡು ದೇವತೆಗಳು ಹೂವಿನ ಮಳೆಗರೆದರು.

ಅನಂತರ ಕೃಷ್ಣನು ನರಕಾಸುರನ ರಾಜಧಾನಿಯಲ್ಲಿ ಪ್ರವೇಶಿಸಿ ಅವನು ದೇವತೆಗಳಿಂದ ಬಲಪ್ರಯೋಗ ಮಾಡಿ ತಂದ ಐರಾವತ ಉಚ್ಚೈಶ್ರವ, ಅದಿತಿಯ ಕರ್ಣ ಕುಂಡಲ, ಮಣಿ ಪರ್ವತ ಹಾಗೂ ಉಳಿದೆಲ್ಲ ರತ್ನಗಳನ್ನೂ ದೇವೇಂದ್ರನಿಗೆ ಒಪ್ಪಿಸಿದ. ನರಕನು ಎಲ್ಲ ರಾಷ್ಟ್ರಗಳನ್ನೂ ಗೆದ್ದು ಎಲ್ಲ ದೇಶಗಳಿಂದ ಬಲಾತ್ಕಾರದಿಂದ ಅಪಹರಿಸಿ ಹದಿನಾರು ಸಾವಿರ ಹೆಂಗೆಳೆಯರನ್ನು ತನ್ನ ಸೆರಮನೆಯಲ್ಲಿ ತಂದಿರಿಸಿದ್ದ. ಕೃಷ್ಣ ಅವರೆಲ್ಲರನೂ ಕಾರಗೃಹದಿಂದ ಬಿಡುಗಡೆ ಮಾಡಿದ. ಅವರೆಲ್ಲರಿಗೂ ಶ್ರೀಕೃಷ್ಣನೇ ತಮಗೆ ಪತಿ ಆಗಬೇಕೆಂದು ಬಯಸಿ ಭಗವಂತನನ್ನು ಬೇಡಿಕೊಂಡರು. ಅವರ ಭಕ್ತಿಯುಕ್ತವಾದ ಬೇಡಿಕೆಗೆ ಒಪ್ಪಿ ಶ್ರೀಹರಿ ಒಂದು ಸುಮುಹೂರ್ತದಲ್ಲಿ ಆ ಹದಿನಾರು ಸಾವಿರ ಹದಿಹರೆಯದ ಕನ್ಯಾಮಣಿಗಳನ್ನು ಮದುವೆ ಆದ.

ಅನಂತರ ನರಕಾಸುರನ ಮಕ್ಕಳೆಲ್ಲರೂ ತಮ್ಮ ಅಜ್ಜಿಯಾದ ಭೂದೇವಿಯನ್ನು ಮುಂದೆ ಮಾಡಿ ಶ್ರೀಕೃಷ್ಣನಿಗೆ ಶರಣು ಬಂದರು. ಆಗ ಗೋವಿಂದ ಅವನ ಮಕ್ಕಳಿಗೆ ಆ ರಾಜ್ಯವನ್ನೆಲ್ಲ ಒಪ್ಪಿಸಿದ. ಇಂದ್ರನ ವಿಮಾನದಲ್ಲಿ ಎಲ್ಲ ಹದಿನಾರು ಸಾವಿರ ಸ್ತ್ರೀಯರನ್ನೂ ದೇವದೂತರ ಮುಖಾಂತರ ದ್ವಾರಕಾಕ್ಕೆ ಕಳಿಸಿಕೊಟ್ಟು ತಾನು ಸತ್ಯ ಭಾಮೆಯೊಂದಿಗೆ ಗರುಡಾರೂಢನಾಗಿ ಸ್ವರ್ಗಲೋಕಕ್ಕೆ ಪ್ರಯಾಣ ಬೆಳೆಸಿದ. ಅಲ್ಲಿ ದೇವಮಾತೆಯಾದ ಅದಿತಿ ದೇವಿಗೆ ಸತ್ಯಭಾಮೆಯೊಂದಿಗೆ ನಮಸ್ಕರಿಸಿ ಶಚೀದೇವಿಯ ಅಂತಃಪುರಕ್ಕೆ ತೆರಳಿದ. ಶಚೀದೇವಿಯು ಸತ್ಯಭಾಮೆಯನ್ನು ಆದರಿಸಿ ಉಪಚರಿಸಿ ಆಸನದ ಮೇಲೆ ಕೂಡಿಸಿ ಸತ್ಕರಿಸಿದಳು.

ಅದೇ ವೇಳೆಯಲ್ಲಿ ನಂದನವನದಲ್ಲಿ ಸೇವಕರು ಪಾರಿಜಾತದ ಹೂಗಳನ್ನು ಹರಿದು ತಂದು ಶಚಿಯ ಮುಂದೆ ಇರಿಸಿದರು. ಆಗ ಆ ಇಂದ್ರಾಣಿಯು 'ಮಾನವ ಲೋಕದ ನಾರಿಯಾದ ಸತ್ಯಭಾಮೆಯು ದೇವಲೋಕದ ಈ ಪಾರಿಜಾತ ಕುಸುಮಗಳನ್ನು ಧರಿಸಲು ಅರ್ಹಳಲ್ಲ' ಎಂದು ಭಾವಿಸಿ ಅವಳಿಗೆ ಕೊಡದೇ ತಾನೊಬ್ಬಳೇ ಆ ಪಾರಿಜಾತಪುಷ್ಪಗಳನ್ನು ತನ್ನ ಮುಡಿಯಲ್ಲಿ ಮುಡಿದುಕೊಂಡಳು. ಅದರಿಂದ ಸತ್ಯಭಾಮೆಗೆ ಅವಮಾನವಾದಂತಾಗಿ ಅವಳು ಸಿಟ್ಟಿನಿಂದ ಅಲ್ಲಿಂದ ಎದ್ದು ಬಂದು ಕೃಷ್ಣನಿಗೆ ಶಚಿಯ ಔದ್ಧತ್ಯವನ್ನು ನಿವೇದಿಸಿದಳು.

ಅದನ್ನು ಕೇಳಿ ಕೃಷ್ಣ ನೇರವಾಗಿ ನಂದನವನಕ್ಕೆ ನಡೆದ. ಅಲ್ಲಿದ್ದ ಪಾರಿಜಾತ ಮರವನ್ನೇ ಕಿತ್ತಿದ. ಗರುಡನ ಮೇಲೆ ಇಟ್ಟು ಸತ್ಯಭಾಮೆಯೊಂದಿಗೆ ಅಲ್ಲಿಂದ ಹೊರಟ. ತಡೆಯ ಬಂದ ಸುರ ಸೈನಿಕರನ್ನೆಲ್ಲ ಹೊಡೆದಟ್ಟಿದ. ವಸುಗಳೂ ಮರುದ್ಗಣಗಳೂ ಸಾಧ್ಯರೂ ಸ್ವಯಂ ದೇವೇಂದ್ರನೂ ಕೃಷ್ಣನೊಡನೆ ಯುದ್ಧಕ್ಕಿಳಿದರು. ಐರಾವತವನ್ನು ಏರಿ ಇಂದ್ರ ಹಾಗೂ ಇತರೇ ದೇವತೆಗಳು ಕೃಷ್ಣನನ್ನು ಸುತ್ತುಗಟ್ಟಿ ಬಾಣಗಳ ಮಳೆಯನ್ನು ಕೃಷ್ಣನ ಮೇಲೆ ಸುರಿದರು. ಅವೆಲ್ಲವುಗಳನ್ನೂ ಕೃಷ್ಣ ಸುದರ್ಶನ ಚಕ್ರದಿಂದ ಮುರಿದು ಮುಟಗಿ ಮಾಡಿದ. ಗರುಡ ಸಿಟ್ಟಿಗೆದ್ದು ತನ್ನ ಭಯಂಕರವಾದ ರೆಕ್ಕೆಗಳಿಂದ ಹೊಡೆದು ಸುರಸತ್ತಮರನ್ನೆಲ್ಲ ನೆಲಕ್ಕುರುಳಿಸಿದ. ಆಗ ಶಚೀಪತಿ ವಜ್ರಾಯುಧವನ್ನು ಕೃಷ್ಣನ ಮೇಲೆ ಬೀಸಿದ. ಅದನ್ನು ಆ ಗೋವಿಂದ ಎಡಗೈಯಲ್ಲಿ ಹಿಡಿದು ತನ್ನ ಬಳಿಯಲ್ಲಿಯೇ ಇಟ್ಟುಕೊಂಡ. ಅದರಿಂದ ಭಯ ಭ್ರಾಂತನಾದ ಮಹೇಂದ್ರ ಕೃಷ್ಣನಿಗೆ ಶರಣು ಬಂದ. ನಮಸ್ಕರಿಸಿ ಕೈ ಮುಗಿದು ಬಾಗಿ ಬೇಡಿಕೊಂಡ.

**ಇಂದ್ರ:-** ಕೃಷ್ಣಾ, ಈ ಪಾರಿಜಾತ ದೇವಯೋಗ್ಯ. ಇದನ್ನು ಮನುಷ್ಯಲೋಕಕ್ಕೆ ಏಕೆ ಒಯ್ಯುವೆ?

ಎಂದು ಕೇಳಿದ. ಅದಕ್ಕೆ ಕೃಷ್ಣನು "ಶಚಿಯು ಸತ್ಯಭಾಮೆಗೆ ಇದರ ಹೂಗಳನ್ನು ಕೊಡದೇ ಅವಮಾನಿಸಿದ್ದರಿಂದ ಇದನ್ನು ಅವಳ ಅಪೇಕ್ಷೆಯಂತೆ ಭೂಲೋಕಕ್ಕೆ ಒಯುತ್ತೇನೆ. ನನ್ನ ಅವತಾರ ಸಮಾಪ್ತಿಯಾಗುವವರೆಗೆ ಅದು ದ್ವಾರಕೆಯ ಸತ್ಯಭಾಮೆಯ ಮನೆಯ ಅಂಗಳದಲ್ಲಿಯೇ ಇರುವದು. ನನ್ನ ಅವತಾರ ಸಮಾಪ್ತಿಯ ನಂತರ ಮತ್ತೆ ಮರಳಿ ಸುರಲೋಕಕ್ಕೆ ಬರುವದು." ಎಂದು ಹೇಳಿ ಇಂದ್ರನ ವಜ್ರವನ್ನು ಇಂದ್ರನಿಗೇ ಕೊಟ್ಟು ಪಾರಿಜಾತದ ವೃಕ್ಷವನ್ನು ಮಾತ್ರ ಸ್ವರ್ಗದಿಂದ ದ್ವಾರಕೆಗೆ ತಂದು ಸತ್ಯಭಾಮೆಯ ಅರಮನೆಯ ಅಂಗಳದಲ್ಲಿ ಇಟ್ಟ.

ಹೀಗೆ ಶ್ರೀಕೃಷ್ಣ ತನ್ನ ಎಲ್ಲ ಪತ್ನಿಯರನ್ನೂ ಅವರವರ ಮನೋಭೀಷ್ಟಗಳನ್ನೆಲ್ಲ ಪೂರೈಸಿ ಆನಂದ ಪಡಿಸುತ್ತಿದ್ದ. ಹಗಲು ರಾತ್ರಿ ತಾನು ಒಬ್ಬನೇ ಇದ್ದರೂ ಹದಿನಾರು ಸಾವಿರ ಎಂಟು ಸತೀಸುದತಿಯರ ಮನೆಯಲ್ಲಿ ತಾನು ಅನೇಕ ರೂಪಗಳಿಂದ ವಾಸಮಾಡಿ ಅವರೆಲ್ಲರಿಗೂ ಸಂತೋಷವನ್ನು ಉಂಟು ಮಾಡುತ್ತಿದ್ದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಸ್ಯಮಂತಕಮಣಿಯ ಕತೆ, ಜಾಂಬವತಿ ಸತ್ಯಭಾಮೆಯರೊಂದಿಗೆ ಕೃಷ್ಣನ ಮದುವೆ. ನರಕಾಸುರ ಸಂಹಾರ ಎಂಬ ಎರಡುನೂರ ಮೂವತ್ತೊಂದನೇಯ ಅಧ್ಯಾಯ ಮುಗಿದುದು*

**ಮಹಾದೇವ:-** ರುಕ್ಮಿಣಿ ದೇವಿಯಲ್ಲಿ ಶ್ರೀಕೃಷ್ಣನಿಂದ ಪ್ರದ್ಯುಮ್ನ ಜನಿಸಿದ. ಕಾಮನೇ ಪ್ರದ್ಯುಮ್ನನಾಗಿ ಹುಟ್ಟಿದ. ಮಹಾಬಲಿಷ್ಠನಾದ ಪ್ರದ್ಯುಮ್ನ ಶಂಬರಾಸುರನನ್ನು ಸಂಹರಿಸಿದ. ಪ್ರದ್ಯುಮ್ನನು ರುಕ್ಮಿಯ ಮಗಳನ್ನು ಮದುವೆಯಾದ. ಆ ಪ್ರದ್ಯುಮ್ನನ ಮಗನೇ ಅನಿರುದ್ಧ ಬಾಣಾಸುರನ ಮಗಳಾದ ಉಷಾ ಎಂಬ ಕನ್ಯಾಮಣಿಯನ್ನು ಮದುವೆಯಾದ.

ಒಂದು ದಿನ ಬಾಣ ಕುಮಾರಿಯಾದ ಆ ಉಷೆಯು ತನ್ನ ಕನಸಿನಲ್ಲಿ ತಾವರೆಗಣ್ಣಿನ ಓರ್ವ ಹದಿಹರೆಯದ ತರುಣನನ್ನು ಸಂಧಿಸಿದಳು. ಎಚ್ಚರ ಆದ ಬಳಿಕ ತಾನು ಕನಸಿನಲ್ಲಿ ಕಂಡ ಮನದನ್ನನನ್ನು ಕಾಣದೇ ಶೋಕಿಸ ತೊಡಗಿದಳು. ತನ್ನ ಗೆಳತಿಯಾದ ಚಿತ್ರಲೇಖಿಗೆ ತಾನು ಕನಸಿನಲ್ಲಿ ಸಂಗಮಿಸಿದ ಪ್ರಿಯಕರನ ಸಮಾಚಾರವನ್ನು ತಿಳಿಸಿದಳು. ಈ ನನ್ನ ಕನಸಿನ ಪತಿಯೊಡನೆ ಹೇಗಾದರೂ ಮಾಡಿ ನನಗೆ ವಿವಾಹವಾಗುವಂತೆ ಮಾಡು ಎಂದು ಬಿನ್ನವಿಸಿದಳು.

ಆಗ ಚತುರಳಾದ ಆ ಚಿತ್ರಲೇಖೆಯು ಭೂಲೋಕದಲ್ಲಿ ಇರುವ ಎಲ್ಲ ತರುಣರ ಚಿತ್ರಗಳನ್ನು ಒಂದು ಬಟ್ಟೆಯ ಪಟ್ಟಿಯಲ್ಲಿ ಬರೆದು ತೋರಿಸಿದಳು. ಯದುವಂಶದ ಕೃಷ್ಣ, ಬಲರಾಮ, ಪ್ರದ್ಯುಮ್ನ, ಅನಿರುದ್ಧ ಮೊದಲಾದವರೆಲ್ಲರ ಚಾರು ಚಿತ್ರಗಳನ್ನು ಲೇಖಿಸಿದಳು. ಅದರಲ್ಲಿ ಅನಿರುದ್ಧನ ಚಿತ್ರ ಕಂಡಕೂಡಲೇ ಆ ಉಷೆಯು ಹರ್ಷ ಪುಳಕಿತಳಾಗಿ "ಇವನೇ ನನ್ನ ಕನಸಿನ ಮನದನ್ನ" ಎಂದು ಹೇಳಿದಳು.

ಆಗ ಅವಳ ಪ್ರಾಣಸಖಿಯಾದ ಚಿತ್ರಲೇಖೆಯು ದ್ವಾರಕೆಯ ಶ್ರೀಕೃಷ್ಣನ ಅಂತಃಪುರದಲ್ಲಿದ್ದ ಈ ಪ್ರದ್ಯುಮ್ನ ಕುಮಾರನನ್ನು ತರಲು ಹಂಚಿಕೆ ಹೂಡಿದಳು. ತನ್ನ ಮಾಯೆಯಿಂದ ದ್ವಾರಕಾ ಪಟ್ಟಣಕ್ಕೆ ಹೋದಳು. ಕೃಷ್ಣನ ಅಂತಃಪುರದಲ್ಲಿ ಪ್ರವೇಶಿಸಿದಳು. ಅಲ್ಲಿ ಹುಡುಕಾಡಿ ಅನಂತರ ಪ್ರದ್ಯುಮ್ನನ ಮಂದಿರಕ್ಕೆ ಬಂದು ಅಲ್ಲಿಯ ಚಂದ್ರಶಾಲೆಯಲ್ಲಿ ಗಾಢನಿದ್ದೆಯಲ್ಲಿದ್ದ ಅನಿರುದ್ಧನನ್ನು ನೋಡಿದಳು. ತನ್ನ ಮಾಯಾ ಕೌಶಲ್ಯದಿಂದ ಅನಿರುದ್ಧನಿಗೆ ಎಚ್ಚರವಾಗದಂತೆ ಎತ್ತಿಕೊಂಡು ಬಂದು ಮಾಹಿಷ್ಮತಿಯಲ್ಲಿ ಬಾಣನ ಅಂತಃಪುರದಲ್ಲಿನ ಉಷಾಕುಮಾರಿಯ ಶಯ್ಯಾಗೃಹದಲ್ಲಿ ಮೆತ್ತೆಗೆ ತಂದು ಇರಿಸಿದಳು. ನಿದ್ದೆ ತಿಳಿದು ಎದ್ದ ಆ ಅನಿರುದ್ಧ ತನ್ನ ಪರ್ಯಂಕದಲ್ಲಿಯೇ ಆಸೀನಳಾದ ಸರ್ವಾಂಗಸುಂದರಿಯಾದ ಬಾಣ ಕುಮಾರಿಯನ್ನು ನೋಡಿದ. ಅವಳ ಶರೀರದ ವಿಲಕ್ಷಣ ಕಾಂತಿ ಹಾಗೂ ಸೌಂದರ್ಯ ಸಿರಿಯನ್ನು ಕಂಡು ಮುಗ್ಧನಾದ. ಆ ಉಷಾ ಹಾಗೂ ಅನಿರುದ್ಧರು ಪರಸ್ಪರ ಅನುರಾಗದಿಂದ ಮೆಚ್ಚಿ ಕೂಡಿ ಆ ಅಂತಃಪುರದ ಉಪ್ಪರಿಗೆಯಲ್ಲಿಯೇ ಆನಂದದಿಂದ ರಮಮಾಣರಾದರು.

ಹೀಗೆ ರಸನಿಮಿಷದಲ್ಲಿ ಒಂದು ತಿಂಗಳು ಕಳೆದದ್ದು ಆ ಪ್ರೇಮಿಗಳಿಗೆ ತಿಳಿಯಲೇ ಇಲ್ಲ. ಒಂದು ದಿನ ಅಂತಃಪುರದ ಕೆಲವು ಮುದಿ ದಾಸಿಯರು ಈ ಸಮಾಚಾರವನ್ನೆಲ್ಲ ಬಾಣಾಸುರನಿಗೆ ಹೋಗಿ ತಿಳಿಸಿದರು. ಅದನ್ನು ಕೇಳಿ ಬಾಣಾಸುರನ ಕಣ್ಣು ಕೆಂಪಗಾದವು ಕೂಡಲೇ ಅನಿರುದ್ಧನನ್ನು ಹಿಡಿದು ತರಲು ಅವನು ಆದೇಶ ನೀಡಿದ. ಅವರೆಲ್ಲರೂ ಶಸ್ತ್ರಾಸ್ತ್ರವನ್ನು ಹಿಡಿದು ಅನಿರುದ್ಧನನ್ನು ಹಿಡಿದು ತರಲು ಅಂತಃಪುರದಲ್ಲಿದ್ದ ಉಷೆಯ

ಶಯ್ಯಾಗಾರಕ್ಕೆ ನುಗ್ಗಿದರು. ಆ ಗಲಾಟೆಯನ್ನು ಕೇಳಿ ಅಂತಃಪುರದಿಂದ ಹೊರಬಂದ ಅನಿರುದ್ಧ ಅರಮನೆಯ ಒಂದು ಕಂಬವನ್ನು ಕಿತ್ತಿ ರಾಜಭಟರ ಕೈಕಾಲು ಮುರಿದು ಕಳಿಸಿದ. ಆಗ ಕೋಪದಿಂದ ಉರಿಯುತ್ತ ಸ್ವಯಂ ಬಾಣಾಸುರನೇ ಅನಿರುದ್ಧನನ್ನು ಮರ್ದಿಸಲಿಕ್ಕಾಗಿ ಧಾವಿಸಿ ಬಂದನು. ಅನಿರುದ್ಧನಿಗೂ ಬಾಣಾಸುರನಿಗೂ ಘನಘೋರ ಯುದ್ಧ ಆಯಿತು. ಕೊನೆಗೆ ಬಾಣಾಸುರ ಸರ್ಪಾಸ್ತ್ರದಿಂದ ಅನಿರುದ್ಧನನ್ನು ಬಿಗಿದು ಕಟ್ಟಿ ಹಾಕಿದ.

ಇತ್ತ ಶ್ರೀಕೃಷ್ಣನು ನಾರದರ ಮುಖದಿಂದ ಬಾಣಾಸುರನ ಬಂದೀಖಾನೆಯಲ್ಲಿ ತನ್ನ ಮೊಮ್ಮಗ ಬಂಧಿತನಾದದ್ದನ್ನು ಕೇಳಿದ. ಬಲರಾಮ, ಪ್ರದ್ಯುಮ್ನ, ಹಾಗೂ ಯಾದವ ಸೇನೆಯಿಂದ ಕೂಡಿಕೊಂಡು ತಾನು ಕೂಡ ಗರುಡನ ಹೆಗಲನ್ನು ಏರಿ ಮಾಹಿಷ್ಮತಿಗೆ ಬಂದ. ಆ ನಗರದ ಅಗಸೆಯ ಬಾಗಿಲ ಬಳಿಯಲ್ಲಿಯೇ ಮಹಾದೇವನು ಆ ನಗರ ರಕ್ಷಣೆಗಾಗಿ ಶಸ್ತ್ರ ಹಿಡಿದು, ನಿಂತುಕೊಂಡಿದ್ದ. ಹಿಂದೆ ಬಾಣಾಸುರನು ತಪಸ್ಸು ಮಾಡಿ ವರ ಬೇಡಿದ್ದರಿಂದ ಅವನ ಅಪೇಕ್ಷೆಯಂತೆ ಶಂಕರ ಅವನ ಪುರ ರಕ್ಷಕನಾಗಿ ನಿಂತುಕೊಂಡಿದ್ದ. ದ್ವಾರಪಾಲಕನಾದ ಆ ಪರಮೇಶ್ವರ ಮೊಮ್ಮಗನನ್ನು ಬಿಡಿಸಲು ಬಂದ ಕೃಷ್ಣನನ್ನು ಬಾಗಿಲ ಬಳಿಯಲ್ಲಿಯೇ ತಡೆದು ನಿಲ್ಲಿಸಿದ. ಶಿವನಿಗೂ ಕೇಶವನಿಗೂ ಮಾಹಿಷ್ಮತಿಯ ಅಗಸೆಯ ಬಾಗಿಲ ಮುಂದೆ ಭಯಂಕರ ಹೋರಾಟ ನಡೆಯಿತು. ಬಹಳ ಹೊತ್ತಿನವರೆಗೆ ಕೃಷ್ಣನೊಡನೆ ಯುದ್ಧ ಮಾಡಿ ಆ ಕೈಲಾಸಪತಿಯು ಕೃಷ್ಣನ ಮೇಲೆ ಉರಿಯುತ್ತಿರುವ ತಾಪ ಜ್ವರವನ್ನು ಬಿಟ್ಟ. ಅದಕ್ಕೆ ಪ್ರತಿಯಾಗಿ ಕೃಷ್ಣ ಶೀತಜ್ವರವನ್ನು ಪ್ರಯೋಗಿಸಿದ. ಅವರಿಂದ ಬಿಡಲ್ಪಟ್ಟ ತಾಪಜ್ವರ, ಶೀತಜ್ವರಗಳು ಅವರಿಬ್ಬರನ್ನೂ ಬಾಧಿಸಲಿಲ್ಲ. ಆದರೆ ಅವರೆಡೂ ಭೂಲೋಕದಲ್ಲಿ ಹೊಕ್ಕು, ಇಲ್ಲಿಯ ಜನರನ್ನು ಬಾಧಿಸುತ್ತ ಈ ನೆಲದಲ್ಲಿಯೇ ಉಳಿದುಕೊಂಡವು. ಅನಂತರ ಕೃಷ್ಣನು ಶಿವನ ಮೇಲೆ ಮೋಹನಾಸ್ತ್ರ ಪ್ರಯೋಗಿಸಿದ. ಅದರಿಂದ ಗೌರೀಪತಿಯು ಮೂರ್ಛಿತನಾಗಿ ನೆಲದ ಮೇಲೆ ಒರಗಿದ. ಅದರಿಂದ ಸಿಟ್ಟಿಗೆದ್ದ ಸ್ಕಂದ ತನ್ನ ಶಕ್ತ್ಯಾಯುಧವನ್ನು ಎತ್ತಿ ಕೃಷ್ಣನನ್ನು ಹೊಡೆಯಲು ಬಂದ. ಕೇವಲ ಹೂಂಕಾರ ಧ್ವನಿಯಿಂದಲೇ ಅವನದನ್ನು ಭಗ್ನಗೊಳಿಸಿ ತಿರುಗಿ ಕಳಿಸಿದ. ಹೀಗೆ ಶಿವ ಸ್ಕಂದ ಇಬ್ಬರೂ ತಂದೆ ಮಕ್ಕಳನ್ನು ಗೆದ್ದು ಶ್ರೀಕೃಷ್ಣ ತನ್ನ ಪಾಂಚಜನ್ಯ ಶಂಖವನ್ನು ಊದಿದ. ಅದನ್ನು ಕೇಳಿ ಬಾಣಾಸುರ ರಥಾರೂಢನಾಗಿ ಕೃಷ್ಣನೊಡನೆ ಯುದ್ಧಕ್ಕೆ ಬಂದು ನಿಂತ. ತನ್ನ ಸಾವಿರ ಬಾಹುಗಳಿಂದ ಏಕಾಕಾಲಕ್ಕೆ ಸಾವಿರಾರು ಅಸ್ತ್ರ ಶಸ್ತ್ರಗಳನ್ನು ಕೃಷ್ಣನ ಮೇಲೆ ತೂರಿದ. ಆ ಎಲ್ಲ ಶಸ್ತ್ರಾಸ್ತ್ರಗಳನ್ನು ಶ್ರೀಕೃಷ್ಣ ಚಕ್ರದಿಂದ ನಿಷ್ಕ್ರಿಯಗೊಳಿಸಿದ. ನಷ್ಟಗೊಳಿಸಿದ. ಮತ್ತು ಬಾಣಾಸುರನ ಎರಡು ತೋಳು ಬಿಟ್ಟು ಉಳಿದ. ಎಲ್ಲ ಸಾವಿರ ತೋಳುಗಳನ್ನು ಕಡಿದು ಹಾಕಿದ. ಅಷ್ಟರಲ್ಲಿ ಪಾರ್ವತೀದೇವಿಯು ಶ್ರೀಕೃಷ್ಣನ ಸಮೀಪಕ್ಕೆ ಬಂದು ಬೇಡಿಕೊಂಡಳು.

**ಪಾರ್ವತಿ:-**

**ಕೃಷ್ಣ, ಕೃಷ್ಣ, ಜಗನ್ನಾಥ, ನಾರಾಯಣ ದಯಾನಿಧೇ ।**
**ದಾಸ್ಯಸ್ಮಿ ತವ ದೇವೇಶ ಪೂರ್ವಭಾವೇ ಯದೂತ್ತಮ ॥**

ಜಗನ್ನಾಥನಾದ ಕೃಷ್ಣ ನೀನು ದಯಾನಿಧಿ. ನಾನು ನಿನ್ನ ದಾಸಿ. ನೀನು ನನ್ನ ಪೂರ್ವ ಜನ್ಮದಲ್ಲಿ ನನ್ನ ತಪಸ್ಸಿನಿಂದ ಪ್ರಸನ್ನನಾಗಿ 'ಸೌಭಾಗ್ಯಂ, ಶಾಶ್ವತಂ ದತ್ತಂ' ಶಾಶ್ವತ ಸೌಭಾಗ್ಯವನ್ನು ದಯಪಾಲಿಸಿರುವೆ. ಆ ನಿನ್ನ ಮಾತನ್ನು ಈಗ ಸತ್ಯಮಾಡು. ನನ್ನ ಪತಿಯಾದ

ಪರಮೇಶ್ವರ ನಿನ್ನ ಮೋಹನಾಸ್ತ್ರದಿಂದ ಮೂರ್ಛಿತನಾಗಿ ಮಲಗಿದ್ದಾನೆ. ಈಗ ಅವನಿಗೆ ನೀನು ಜೀವದಾನವನ್ನು ನೀಡಿ ನನ್ನ ಸೌಭಾಗ್ಯವನ್ನು ಕಾಪಾಡು.

ಪಾರ್ವತಿಯ ಪ್ರಾರ್ಥನೆಯಂತೆ ಕೃಷ್ಣ ಉಪಸಂಹರಿಸಿದ ತನ್ನ ಮೋಹನಾಸ್ತ್ರವನ್ನು. ಆದರಿಂದ ಪರಮೇಶ್ವರನು ಎದ್ದು ಕುಳಿತ. ಕೈ ಮುಗಿದು ಶ್ರೀಕೃಷ್ಣನನ್ನು ಸ್ತೋತ್ರ ಮಾಡಿದ.

**ಕೃಷ್ಣ ಕೃಷ್ಣ ಜಗನ್ನಾಥ ಜಾನೇ ತ್ವಾಂ ಪುರುಷೋತ್ತಮಂ ।**
**ಪರೇಶಂ ಪರಮಾತ್ಮಾನಮನಾದಿ ನಿಧನಂ ಪರಂ ॥**

ಜಗದೊಡೆಯನಾದ ಕೃಷ್ಣ ನೀನು ಎಲ್ಲ ಜೀವರಿಗಿಂತಲೂ ಸರ್ವ ಶ್ರೇಷ್ಠರಾದ ಪುರುಷೋತ್ತಮ ಎಂದು ನಾನು ತಿಳಿದಿದ್ದೇನೆ. ಲಕ್ಷ್ಮೀಪತಿಯಾದ ನೀನೇ ಪರಮಾತ್ಮ ನಿನಗೆ ಹುಟ್ಟು ಸಾವು ಯಾವುದೂ ಇಲ್ಲ.

**ಪ್ರಸೀದ ಮೇ ನಮಸ್ತುಭ್ಯಂ ಪ್ರಸೀದ ಮಮ ಶಾಶ್ವತ ।**
**ಪ್ರಸೀದ ಮೇ ಜಗತ್ ಸ್ವಾಮಿನ್ ಪ್ರಸೀದಾಚ್ಯುತ ಕೇಶವ ॥**

ನಿತ್ಯ ಸತ್ಯ ಸ್ವರೂಪಿಯಾದ ಅಚ್ಯುತನೇ, ಜಗತ್ತಿನ ಸ್ವಾಮಿಯಾದ ನೀನು ನನ್ನ ಮೇಲೆ ಪ್ರಸನ್ನನಾಗು. ನಿನಗೆ ನನ್ನ ನಮಸ್ಕಾರ.

**''ತಸ್ಮಾನ್ ಮಯಾ ಕೃತಂ ಯಚ್ಚ ಪರಾಧ ಪ್ರಭೋ ।**
**''ಕ್ಷಮಸ್ವ ಕರುಣಾ ಸಿಂಧೋ ಗುಣ್ಯೈಃ ಶುಭತಮೈ ಸ್ತವ ॥**

ನಾನು ಮಾಡಿದ ಅಪರಾಧವನ್ನೆಲ್ಲ ಕ್ಷಮಿಸು. ನೀನು ಕರುಣಾ ಸಾಗರನಲ್ಲವೇ?

ಹೀಗೆ ಮಹಾರುದ್ರದೇವರು ಶ್ರೀಹರಿಯನ್ನು ಸ್ತೋತ್ರ ಮಾಡಿ ಬಿನ್ನವಿಸಿಕೊಂಡರು.

**ಮಹಾದೇವ:-** ಪ್ರಭು, ನಾನು ಈ ಬಾಣಾಸುರನ ತಪಸ್ಸಿಗೆ ಮೆಚ್ಚಿ ಅವನಿಗೆ ಎಂದೂ ಯಾರಿಂದಲೂ ಸಾಯದಂಥ ''ಅಮರತ್ವ'' ರೂಪ ವರವನ್ನು ಕೊಟ್ಟಿದ್ದೇನೆ. ನೀನು ನನ್ನ ಮಾತನ್ನು ನಡೆಸಬೇಕು. ನನ್ನ ಕಿಂಕರನಾದ ಬಾಣನ ಪ್ರಾಣವುಳಿಸು.

ರುದ್ರದೇವರ ಈ ವಿಜ್ಞಪ್ತಿಯನ್ನು ಮನ್ನಿಸಿದ ಮಧುಸೂದನ. ಅವನ ಚಕ್ರ ಬಾಣಸುರನ ಒಂಬತ್ತುನೂರಾ ತೊಂಬತ್ತೆಂಟು ತೋಳುಗಳನ್ನು ಕಡಿದು ಅವನ ಕುತ್ತಿಗೆಯನ್ನು ಕತ್ತರಿಸುವದರಲ್ಲಿತ್ತು. ನೆತ್ತರಿನ ಧಾರೆ ಆ ದೈತ್ಯನ ದೇಹದಿಂದ ಕೋಡಿ ಇಟ್ಟು ಹರಿಯುತ್ತಿತ್ತು. ಈ ಸಂದರ್ಭದಲ್ಲಿ ಪರಮೇಶ್ವರನ ಪ್ರಾರ್ಥನೆಯಂತೆ ಪುರುಷೋತ್ತಮ ತನ್ನ ಚಕ್ರವನ್ನು ಹಿಂತೆಗೆದುಕೊಂಡ. ಬಲಿಯ ಮಗನಾದ ಬಾಣಾಸುರನನ್ನು ಕರುಣೆಯಿಂದ ಬಿಟ್ಟುಬಿಟ್ಟ. ಆದರಿಂದ ಮಹಾದೇವರು ಪ್ರೀತರಾಗಿ ಪಾರ್ವತಿಯೊಡನೆ ತನ್ನ ವಾಹನವಾದ ಎತ್ತನ್ನು ಹತ್ತಿಕೊಂಡು ಕೈಲಾಸಕ್ಕೆ ನಡೆದರು.

ಅನಂತರ ಬಾಣಾಸುರ ಕೃಷ್ಣನನ್ನು ವಂದಿಸಿದ, ಬಲರಾಮನಿಗೂ ನಮಸ್ಕರಿಸಿದ. ಅವರಿಬ್ಬರನ್ನು ತನ್ನ ಅರಮನೆಗೆ ಕರೆದುಕೊಂಡು ಹೋದ. ಬಂಧನದಲ್ಲಿರಿಸಿದ ಪ್ರದ್ಯುಮ್ನಪುತ್ರನಾದ ಅನಿರುದ್ಧನನ್ನು ಬಿಡುಗಡೆ ಮಾಡಿದ. ದಿವ್ಯವಾದ ವಸ್ತ್ರಗಳನ್ನು ಇತ್ತು. ಬೆಲೆ ಬಾಳುವ ಆಭರಣಗಳನ್ನು ನೀಡಿದ. ತನ್ನ ಮಗಳಾದ ಉಷಾಕುಮಾರಿಯನ್ನು ಅನಿರುದ್ಧನಿಗೆ ಧಾರೆಯೆರೆದು ಕೊಟ್ಟು ವೈಭವದಿಂದ ವಿವಾಹ ಮಹೋತ್ಸವವನ್ನು

ನೆರವೇರಿಸಿದ. ರಾಮಕೃಷ್ಣರನ್ನು ಮತ್ತು ಪ್ರದ್ಯುಮ್ನ ಮತ್ತು ಕೃಷ್ಣ ಪರಿವಾರವನ್ನು ಯಥಾವಿಧಿ ಪೂಜಿಸಿದ. ನಂತರ ಶ್ರೀಕೃಷ್ಣನು ಉಷಾ ಅನಿರುದ್ಧರನ್ನು ಕರೆದುಕೊಂಡು ತನ್ನ ರಥದಲ್ಲಿಯೇ ಕೂಡಿಸಿಕೊಂಡು ಎಲ್ಲ ಬಂಧು ಮಿತ್ರ ಪರಿವಾರದವರೊಂದಿಗೆ ತನ್ನ ರಾಣೀವಾಸ ಸಹಿತವಾಗಿ ತನ್ನ ದ್ವಾರಕಾ ಪಟ್ಟಣಕ್ಕೆ ಬಂದ. ಅನಿರುದ್ಧನು ಬಾಣಪುತ್ರಿಯಾದ ಉಷಾಸುಂದರಿಯೊಂದಿಗೆ ಮಣಿಮಯಮಂದಿರದಲ್ಲಿ ಬಗೆಬಗೆಯ ಭೋಗ ವಿಲಾಸ ಸುಖವನ್ನು ಅನುಭವಿಸುತ್ತ ವಾಸ ಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಉಷಾ ಅನಿರುದ್ಧರ ಪ್ರೇಮ ವಿವಾಹ ಎಂಬ ಎರಡುನೂರ ಮೂವತ್ತೆರಡನೇಯ ಅಧ್ಯಾಯ ಮುಗಿದುದು*



## ಪೌಂಡ್ರಕ ವಾಸುದೇವನ ಶಾಸನ

ಅಧ್ಯಾಯ - ೨೩೩

**ಮಹಾದೇವ:-** ಪೌಂಡ್ರಕ ವಾಸುದೇವ ಎಂಬ ಹೆಸರಿನ ಕಾಶಿಯನರೇಶನು ವಾರಾಣಸಿಯಲ್ಲಿ ಹನ್ನೆರಡು ವರ್ಷ ಮಹಾದೇವರನ್ನು ಕುರಿತು ತಪಸ್ಸು ಮಾಡಿದ. ಉಪವಾಸ ಇದ್ದು ಓಂ ನಮಃ ಶಿವಾಯ ಎಂಬ ಪಂಚಾಕ್ಷರಿ ಜಪವನ್ನು ಭಕ್ತಿಯಿಂದ ಆಚರಿಸಿದ. ಈ ಪಂಚಾಕ್ಷರಿ ಮಂತ್ರದ ಪುರಶ್ಚರಣದ ಅನಂತರ ಶಂಕರನನ್ನು ತನ್ನ ನೇತ್ರ ಕಮಲವನ್ನು ಅರ್ಪಿಸಿ ಪೂಜೆಗೈದ. ಅದರಿಂದ ಪರಿತುಷ್ಟನಾದ ಪರಮೇಶ್ವರ ಆ ಪೌಂಡ್ರಕನಿಗೆ ಅಭೀಷ್ಟವಾದ ವರವನ್ನು ಕೇಳು ಎಂದು ಹೇಳಿದ.

ಆಗ ಆ ಪೌಂಡ್ರಕನು "ವರಪ್ರದನಾದ ಈಶ್ವರ ! ನೀನು ನನಗೆ ವಾಸುದೇವನಿಗೆ ಸಮಾನವಾದ ರೂಪವನ್ನು ಕೊಡು" ಎಂದು ಕೇಳಿಕೊಂಡ. ಪ್ರಸನ್ನನಾದ ಶಿವ ಶ್ರೀಕೃಷ್ಣನಂಥ ತಾವರೆಗಣ್ಣು, ಶಂಖ, ಚಕ್ರ, ಗದಾ, ಪದ್ಮಗಳಿಂದ ಕೂಡಿದ, ನಾಲ್ಕು ಕೈಗಳು ಪೀತಾಂಬರ, ಕಿರೀಟ ಕುಂಡಲ ಎಲ್ಲವನ್ನೂ ನೀಡಿದ. ಎಲ್ಲ ವಿಧದಿಂದಲೂ ಕೃಷ್ಣನಿಗೆ ಸಮಾನವಾದ ಚಿನ್ಹಗಳನ್ನು ಲಕ್ಷಣಗಳನ್ನು ಹೊಂದಿದ ಆ ಪೌಂಡ್ರಕ ವಾಸುದೇವ "ನಾನೇ ನಿಜವಾದ ವಾಸುದೇವ" ಎಂದು ಎಲ್ಲರ ಎದುರು ಹೇಳಿಕೊಂಡ.

ಒಂದು ದಿನ ಸ್ವರ್ಗಲೋಕದಿಂದ ನಾರದರು ಕಾಶಿಗೆ ಬಂದರು. ನಾನೇ ವಾಸುದೇವ ಎಂದು ಮದದಿಂದ ಬೀಗಿ ನಿಂತ ಆ ಪೌಂಡ್ರಕನಿಗೆ "ವಸುದೇವನ ಮಗನಾದ ಕೃಷ್ಣನನ್ನು ಗೆಲ್ಲುವವರೆಗೆ ನೀನು ನಿಜವಾದ ವಾಸುದೇವ ಆಗಲಾರೆ" ಎಂದು ಹೇಳಿದರು.

ನಾರದರ ಈ ಮಾತನ್ನು ಕೇಳಿ ಮರುಕ್ಷಣದಲ್ಲಿಯೇ ಪೌಂಡ್ರಕ ತನ್ನ ಗರುಡಧ್ವಜವುಳ್ಳ ರಥವನ್ನು ಏರಿ ಚತುರಂಗ ಸೇನೆಯೊಂದಿಗೆ ದ್ವಾರಕೆಗೆ ಬಂದ. ಆಗಸೆಯ ಬಾಗಿಲ ಬಳಿ ನಿಂತು ಕೃಷ್ಣನಿಗೆ ಯುದ್ಧಕ್ಕೆ ಬರಲು ಹೇಳಿ ಕಳಿಸಿದ. ಕೃಷ್ಣ ಅದನ್ನು ಕೇಳಿದ. ಕೂಡಲೇ ಗರುಡನನ್ನು ಆರೋಹಣ ಮಾಡಿ ಪೌಂಡ್ರಕನೊಡನೆ ಯುದ್ಧಮಾಡಲು ಪಟ್ಟಣದಿಂದ ಹೊರಗೆ ಬಂದ. ತನ್ನ ಶಾರ್ಙ್ಗ ಧನುಸ್ಸಿನಲ್ಲಿ ಬೆಂಕಿಯನ್ನೇ ಕಾರುವ ಬಾಣಗಳನ್ನು ಹೂಡಿ ನಿಮಿಷಾರ್ಧದಲ್ಲಿ ಪೌಂಡ್ರಕನ ಸೇನೆಯನ್ನೆಲ್ಲ ಸಂಹರಿಸಿದ. ಇನ್ನೊಂದು ಬಾಣದಿಂದ ಪೌಂಡ್ರಕನ ಕೈಗೆ ಹತ್ತಿದ ಶಂಖ, ಚಕ್ರ, ಗದಾದಿ

ಆಯುಧಗಳನ್ನೆಲ್ಲ ಮುರಿದು ಹಾಕಿದ. ನಂತರ ತನ್ನ ಸುದರ್ಶನ ಚಕ್ರದಿಂದ ಕಿರೀಟ ಕುಂಡಲದಿಂದ ಶೋಭಿಸುವ ಪೌಂಡ್ರಕನ ತಲೆಯನ್ನು ಕತ್ತರಿಸಿ ಕಾಶೀ ಪಟ್ಟಣದಲ್ಲಿರುವ ಅವನ ಅಂತಃಪುರದಲ್ಲಿ ಬೀಳುವಂತೆ ಮಾಡಿದ. ಅದನ್ನು ನೋಡಿ ಕಾಶೀವಾಸಿಗಳಿಗೆಲ್ಲ ಅತ್ಯಾಶ್ಚರ್ಯವಾಯಿತು. ಅವನ ಮಗನಾದ ದಂಡಪಾಣಿಯು ತನ್ನ ತಂದೆಯು ಕೃಷ್ಣನಿಂದ ಹತನಾದುದನ್ನು ಕೇಳಿ ಸಿಟ್ಟಿಗೆದ್ದು ಬೆಂಕಿಯ ಬೆಟ್ಟದಂತೆ ಉರಿಯತೊಡಗಿದ. ಮಹಾದೇವರನ್ನು ಕುರಿತು ಯಜ್ಞ ಮಾಡಿ ಅದರಿಂದ ಒಂದು ಮಾಹೇಶ್ವರೀ ಎಂಬ ಹೆಸರಿನ ಕೃತ್ಯೆಯನ್ನು ಪಡೆದ. ಅಗ್ನಿಜ್ವಾಲೆಗಳನ್ನೇ ಉಗುಳುವ ಉರಿಮಾಲೆಯ ಕೆಂಗಣ್ಣಿನ ಶೂಲಧಾರಿಯಾದ ಆ ಕೃತ್ಯಾ ಎಂಬ ಆ ಬೆಂಕಿಯ ಬೊಂಬೆಯನ್ನು ಕೃಷ್ಣನನ್ನು ಕೊಂದು ಬಾ ಎಂದು ಕಳಿಸಿದ. ಆ ಕೃತ್ಯೆಯು ದ್ವಾರಕೆಯನ್ನು ದಹಿಸುತ್ತ ಬರತೊಡಗಿದಾಗ ಯಾದವರೆಲ್ಲರೂ ಪ್ರಳಯ ಕಾಲವೇ ಬಂದಿತೆಂದು ಬೆದರಿ ಬೆಕ್ಕಸಬೆರಗಾಗಿ ಕೃಷ್ಣನಿಗೆ ಮೊರೆಯಿಟ್ಟರು.

ಅದನ್ನು ಕಂಡು ಶ್ರೀಕೃಷ್ಣ ಆ ಕೃತ್ಯೆಯನ್ನು ಕಡೆಗಾಣಿಸಲಿಕ್ಕಾಗಿ ತನ್ನ ಸುದರ್ಶನ ಚಕ್ರವನ್ನು ಬಿಟ್ಟ. ಕೋಟಿ ಸೂರ್ಯರಂತೆ ಕಾಂತಿಯುಕ್ತವಾದ ಆ ಸುದರ್ಶನ ಚಕ್ರ ಮುಂದೆ ಬಂದ ಕೂಡಲೇ ಆ ಮಾಹೇಶ್ವರಿ ಕೃತ್ಯೆಯ ಶಕ್ತಿ ಶೌರ್ಯಕಾಂತಿ ಎಲ್ಲವೂ ಉಡುಗಿ ಅಡಗಿ ಹೋದವು. ಅದು ಆ ಚಕ್ರದಿಂದ ಭಯಭೀತವಾಗಿ ಕರ್ಕಶಧ್ವನಿಯಿಂದ ಕೂಗುತ್ತ ಕಾಶಿಯ ಕಡೆಗೆ ಓಡಿತು. ಸುದರ್ಶನ ಬೆನ್ನಟ್ಟಿತು. ಹೆದರಿ ಕಂಗೆಟ್ಟ ಆ ಕೃತ್ಯೆಯು ಕಾಶಿರಾಜನ ಅಂತಃಪುರವನ್ನು ಹೊಕ್ಕಿತು. ಸುದರ್ಶನವು ಅಲ್ಲಿಯೂ ಅದನ್ನು ಬಿಡಲಿಲ್ಲ. ಅರಮನೆಯಲ್ಲಿಯೇ ಪ್ರವೇಶಿಸಿ ಆ ಮಾಹೇಶ್ವರಿ ಕೃತ್ಯೆಯನ್ನು ಮೊದಲು ಸುಟ್ಟು ಬೂದಿಯನ್ನಾಗಿ ಮಾಡಿತು. ಅನಂತರ ಆ ದಂಡಪಾಣಿ ಎಂಬ ಕಾಶೀರಾಜನನ್ನು ಅವನ ಅರಮನೆಯನ್ನೂ ಭಸ್ಮ ಮಾಡಿ ಎಲ್ಲ ದೇವತೆಗಳಿಂದ ಪೂಜಿತನಾಗಿ ದ್ವಾರಕಾಪಟ್ಟಣಕ್ಕೆ ಮರಳಿ ಶ್ರೀಕೃಷ್ಣನ ಕೈಯನ್ನು ಅಲಂಕರಿಸಿತು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ ಪೌಂಡ್ರಕ ವಾಸುದೇವನ ಶಾಸನ ಎಂಬ ಎರಡುನೂರ ಮೂವತ್ತಮೂರನೇಯ ಅಧ್ಯಾಯ ಮುಗಿದುದು*

—o—

ಜರಾಸಂಧವಧ, ಕೃಷ್ಣ ಸುದಾಮರ ಭೇಟ್ಟಿ | ಅಧ್ಯಾಯ - ೨೩೪

ಮಹಾಭಾರತ ಅಖ್ಯಾನ

**ಮಹಾದೇವ:-** ಕೃಷ್ಣ ಕಂಸನನ್ನು ಕೊಂದ ಬಳಿಕ ಜರಾಸಂಧ ಅವನ ಮೇಲೆ ದ್ವೇಷವನ್ನು ಸಾಧಿಸುತ್ತಲೇ ಇದ್ದ. ಯಾದವರನ್ನು ಎಲ್ಲ ರೀತಿಯಿಂದ ಪೀಡಿಸುವದೇ ಅವನ ಜೀವನದ ಮುಖ್ಯ ಉದ್ದೇಶ ಆಗಿದ್ದಿತು. ಅವನ ಉಪದ್ರವವನ್ನು ತಾಳಲಾರದೇ ಅವರು ದುಃಖಿತರಾಗಿ ಕೃಷ್ಣನನ್ನು ಮೊರೆ ಹೊಕ್ಕರು. ಆಗ ಕೃಷ್ಣನು ಭೀಮಾರ್ಜುನರನ್ನು ಕರೆದ. ಮತ್ತು ಹೇಳಿದ. ''ಈ ಜರಾಸಂಧ ರುದ್ರದೇವರನ್ನು ಪೂಜಿಸಿ ಶಸ್ತ್ರಗಳಿಂದ ಸಾಯಬಾರದು ಎಂದು ವರ ಪಡೆದುಕೊಂಡಿದ್ದಾನೆ. ಆದುದರಿಂದ ಭೀಮ ನೀನು ಅವನೊಡನೆ ಮಲ್ಲ ಯುದ್ಧ ಮಾಡಿ ಅವನನ್ನು ಗೆಲ್ಲು ಮತ್ತು ಕೊಲ್ಲು.''

ಈ ಗುಪ್ತಾಲೋಚನೆಯಂತೆ ಶ್ರೀಕೃಷ್ಣ ಭೀಮಾರ್ಜುನರೊಂದಿಗೆ ಜರಾಸಂಧನ ರಾಜಧಾನಿಗೆ ತೆರಳಿದ. ಬ್ರಾಹ್ಮಣ ವೇಷವನ್ನು ತೊಟ್ಟು ಮೂವರೂ ಅವನ ಅಂತಃಪುರಕ್ಕೆ ಬಂದರು.

ಮಹಾಶಿವಭಕ್ತ ಆ ಜರಾಸಂಧ. ಅಸಂಖ್ಯಕ್ಷತ್ರಿಯ ರಾಜರನ್ನು ಯುದ್ಧದಲ್ಲಿ ಗೆದ್ದು ಸೆರೆ ಹಿಡಿದು ತಂದು, ಪ್ರತಿತಿಂಗಳ ಕೃಷ್ಣ ಪಕ್ಷ ಚತುರ್ದಶಿಯ ದಿನ ಒಬ್ಬೊಬ್ಬ ರಾಜರನ್ನು ಕೊಂದು, ಅವರ ರಕ್ತದಿಂದ ಭೈರವನಿಗೆ ಬಲಿಯನ್ನು ನೀಡುತ್ತಿದ್ದ. ಇದಕ್ಕಾಗಿ ದೇಶದಲ್ಲಿರುವ ಅಸಂಖ್ಯರಾಜ ಮಹಾರಾಜರನ್ನು ಬಂದೀಖಾನೆಯಲ್ಲಿ ತಂದು ಇರಿಸಿದ್ದ. ಅವನ ಈ ನರಬಲಿಯನ್ನು ತಪ್ಪಿಸಲಿಕ್ಕಾಗಿ ಕೃಷ್ಣ ಅಲ್ಲಿಗೆ ಭೀಮನನ್ನು ಕರೆತಂದದ್ದು.

ಮೂವರು ತೇಜಸ್ವಿಗಳಾದ ಬ್ರಾಹ್ಮಣರು ಒಮ್ಮೆಲೇ ತನ್ನ ಅಂತಃಪುರಕ್ಕೆ ಬಂದುದನ್ನು ಕೇಳಿ ಹಿಗ್ಗಾಯಿತು ಆ ಜರಾಸಂಧನಿಗೆ. ಅವರಿಗೆ ದಂಡ ಪ್ರಣಾಮ ಮಾಡಿದ. ಉಚಿತ ಆಸನಗಳನ್ನು ನೀಡಿದ. ಅರ್ಘ್ಯಪಾದ್ಯಗಳನ್ನು ಕೊಟ್ಟು ''ನಿಮಗೆ ಏನು ಬೇಕು? ಬಯಸಿದ್ದನ್ನು ನೀಡುತ್ತೇನೆ'' ಎಂದು ಕೈ ಮುಗಿದು ಕೇಳಿದ. ಆಗ ಕೃಷ್ಣ ನಕ್ಕು ನುಡಿದ.

**ಕೃಷ್ಣ:-** ಜರಾಸಂಧ, ನಾನು ಕೃಷ್ಣ, ಇವ ಭೀಮ. ಇವ ಅರ್ಜುನ ಯುದ್ಧಕ್ಕಾಗಿ ಬಂದಿದ್ದೇವೆ. ದ್ವಂದ್ವಯುದ್ಧದ ಭಿಕ್ಷೆ ಬೇಡುತ್ತಿದ್ದೇವೆ. ನಾವು ಮೂವರಲ್ಲಿ ಬೇಕಾದವರನ್ನು ಆರಿಸಿಕೊ.

ಆಗ ಜರಾಸಂಧ ದ್ವಂದ್ವಯುದ್ಧಕ್ಕೆ ಭೀಮನನ್ನೇ ಆರಿಸಿಕೊಂಡ. ಭೀಮ ಜರಾಸಂಧರ ನಡುವೆ ಭೀಕರವಾದ ಮಲ್ಲಯುದ್ಧ ನಡೆಯಿತು. ಇಪ್ಪತ್ತೈದು ದಿವಸ ಆದರೂ ಇನ್ನೂ ಜಯಾಪಜಯ ನಿರ್ಣಯ ಆಗಲಿಲ್ಲ. ಆಗ ಕೃಷ್ಣ ಸನ್ನೆಗೈದ. ಅವನ ಸಂಕೇತವನ್ನು ತಿಳಿದುಕೊಂಡ ಬಲಭೀಮ ಜರಾಸಂಧನನ್ನು ದ್ವಂದ್ವಯುದ್ಧದಲ್ಲಿ ಕೆಳಗೆ ಕೆಡವಿ, ದೇಹವನ್ನು ಸೀಳಿ, ಎರಡು ಭಾಗ ಮಾಡಿ ನೆಲದ ಮೇಲೆ ಚೆಲ್ಲಿದ. ಹೀಗೆ ಜರಾಸಂಧನನ್ನು ಭೀಮನಿಂದ ಕೊಲ್ಲಿಸಿ ಅವನು ಬಂದೀಮನೆಯಲ್ಲಿ ಬಂಧಿಸಿ ಇಟ್ಟ ಎಲ್ಲ ರಾಜರನ್ನು ಶ್ರೀಕೃಷ್ಣ ಬಿಡುಗಡೆ ಮಾಡಿದ. ಕಾರಾಗೃಹದಿಂದ ಮುಕ್ತರಾದ ಆ ಎಲ್ಲ ಕ್ಷತ್ರಿಯ ರಾಜರು ಕೃಷ್ಣನನ್ನು ನಮಸ್ಕರಿಸಿ ಭೀಮನನ್ನು ಹೊಗಳಿ ತಮ್ಮ ತಮ್ಮ ದೇಶಗಳಿಗೆ ತೆರಳಿದರು.

ಅನಂತರ ಭೀಮಾರ್ಜುನರಿಂದ ಕೂಡಿಕೊಂಡು ಶ್ರೀಕೃಷ್ಣ ಇಂದ್ರಪ್ರಸ್ಥಕ್ಕೆ ಆಗಮಿಸಿದ. ತನ್ನ ನೇತೃತ್ವದಲ್ಲಿಯೇ ಧರ್ಮರಾಜನಿಂದ ರಾಜಸೂಯ ಯಾಗವನ್ನು ಮಾಡಿಸಿದ. ಯಜ್ಞಸಮಾಪ್ತಿ ಕಾಲದಲ್ಲಿ ಧರ್ಮರಾಜನು ಭೀಷ್ಮರ ಸಲಹೆಯಂತೆ ಕೃಷ್ಣನಿಗೆ ಅಗ್ರ ಪೂಜೆಯನ್ನು ಮಾಡಿದ. ಇದನ್ನು ತಾಳಲಿಕ್ಕೆ ಆಗಲಿಲ್ಲ ಶಿಶುಪಾಲನಿಗೆ. ಅವನು ಆ ಸಭೆಯಲ್ಲಿಯೇ ಕೃಷ್ಣನ ವಿರುದ್ಧ ಅನೇಕ ಆಕ್ಷೇಪಗಳನ್ನು ಎತ್ತಿ, ಮನಬಂದಂತೆ ಹಳಿದು ಜರಿದು ಕೃಷ್ಣನನ್ನು ಧಿಕ್ಕರಿಸಿ ನಿಂದಿಸಿದ. ಆಗ ಗೋವಿಂದ ತನ್ನ ಸುದರ್ಶನ ಚಕ್ರದಿಂದ ಶಿಶುಪಾಲನ ಶಿರಚ್ಛೇದನವನ್ನು ಮಾಡಿದ.

ಮೂರು ಜನ್ಮದ ಅನಂತರ ಶಿಶುಪಾಲ ಹರಿಯಿಂದ ಹತನಾಗಿ ಅವನ ಸಾರೂಪ್ಯವನ್ನು ಹೊಂದಿದ. ಸಾರೂಪ್ಯ ಎಂದರೆ ಕೃಷ್ಣನಿಗೆ ಸಮಾನವಾದ ಶಂಖ, ಚಕ್ರ, ಗದಾ, ಪೀತಾಂಬರ ಮೊದಲಾದವುಗಳಿಂದ ಶೋಭಿಸುವ ವೈಷ್ಣವ ರೂಪವನ್ನು ಹೊಂದುವುದು ಎಂದು ಅರ್ಥ. ಇದು ಒಂದು ಮೋಕ್ಷದ ಪ್ರಕಾರ.

ಕೃಷ್ಣ ಶಿಶುಪಾಲನನ್ನು ಕೊಂದ ಎಂಬ ಸಮಾಚಾರವನ್ನು ಕೇಳಿ ದಂತವಕ್ರ ಮಥುರಾ ಪಟ್ಟಣಕ್ಕೆ ಲಗ್ಗೆಯಿಟ್ಟ. ಇದನ್ನು ಕೇಳಿ ಕೃಷ್ಣ ತನ್ನ ರಥವನ್ನು ಓಡಿಸುತ್ತ ಮಥುರಾ ಪಟ್ಟಣದ ಹೆಬ್ಬಾಗಿಲ ಬಳಿಯಲ್ಲಿ ಬಂದು ಇಳಿದ. ಅಲ್ಲಿಯೇ ಯಮುನೆಯ ತೀರದಲ್ಲಿ ಕೃಷ್ಣ ದಂತವಕ್ರರಲ್ಲಿ ಮಹಾಯುದ್ಧ ಪ್ರಾರಂಭ ಆಯಿತು. ಕೃಷ್ಣನ ಒಂದೇ ಗದಾ ಪ್ರಹಾರದಿಂದ ದಂತವಕ್ತ್ರನ ಮೈ ಕೈ ಎಲ್ಲವೂ ಪುಡಿ ಪುಡಿ ಆಗಿ ಮರಣವನ್ನು ಅಪ್ಪಿದ. ಅವನು ಕೂಡ ಶ್ರೀಹರಿಯ ಸಾಯುಜ್ಯ ಮೋಕ್ಷವನ್ನು ಹೊಂದಿದ.

ಜಯ ವಿಜಯರೆಂಬ ವಿಷ್ಣುವಿನ ದ್ವಾರಪಾಲಕರು ಸನಕಾದಿಗಳ ಶಾಪದಿಂದ ಹಿರಣ್ಯಾಕ್ಷ, ರಾವಣ, ಕುಂಭಕರ್ಣ, ಶಿಶುಪಾಲ, ದಂತವಕ್ತ್ರ ಎಂದು ಮೂರು ಜನ್ಮಗಳನ್ನು ತಳೆದು ಮೂರು ಜನ್ಮಗಳಲ್ಲಿ ಆ ಮುಕುಂದನಿಂದಲೇ ಮರಣ ಹೊಂದಿ ಮೋಕ್ಷವನ್ನು ಪಡೆದರು.

ಹೀಗೆ ಕೃಷ್ಣನು ದಂತವಕ್ರನನ್ನು ಸಂಹರಿಸಿ ಮಥುರಾಪಟ್ಟಣವನ್ನು ನೋಡಿಕೊಂಡು ಅಲ್ಲಿಯೇ ಯಮುನೆಯನ್ನು ದಾಟಿ ನಂದಗೋಕುಲಕ್ಕೆ ಹೋದ. ಅಲ್ಲಿಯ ವೃಂದಾವನದ ಮಂದಿರದಲ್ಲಿರುವ ತನ್ನ ಬಾಲ್ಯದ ತಾಯಿ ತಂದೆಯರಾದ ಯಶೋದಾ ನಂದಗೋಪರನ್ನು ಕಂಡು ನಮಸ್ಕಾರ ಮಾಡಿದ. ಬಹು ದಿನಗಳ ಮೇಲೆ ಕೃಷ್ಣನನ್ನು ಕಂಡ ಆ ನಂದಗೋಪ ದಂಪತಿಗಳು ಭಾಷ್ಪ ಗದ್ಗದ ಕಂಠರಾಗಿ ಕೃಷ್ಣನನ್ನು ಭರದಿಂದ ಬಿಗಿದಪ್ಪಿದರು. ಅನಂತರ ಕೃಷ್ಣನು ಗೋಕುಲ ಹಾಗೂ ವೃಂದಾವನಗಳಲ್ಲಿ ಇರುವ ಪ್ರತಿಯೊಬ್ಬ ತುರುಗಾಹಿಗಳ ಮನೆಗೆಲ್ಲ ಹೋಗಿ ಚಿಕ್ಕವರನ್ನೆಲ್ಲ ಮಾತನಾಡಿಸಿ ಹಿರಿಯ ಗೋಪವೃದ್ಧರಿಗೆಲ್ಲ ನಮಸ್ಕರಿಸಿ ಅವರ ಯೋಗಕ್ಷೇಮವನ್ನು ವಿಚಾರಿಸಿದ. ಪ್ರತಿಯೊಬ್ಬರಿಗೂ ಹೇರಳವಾಗಿ ಹೊನ್ನು, ರನ್ನ, ಮುತ್ತು, ಮಾಣಿಕ್ಯಾದಿಗಳನ್ನು ನೀಡಿದ. ಅವರೆಲ್ಲರನ್ನೂ ಸಂತೋಷ ಪಡಿಸಿದ. ಬೇಕಾದಗ ಬರುತ್ತೇನೆ ಅಥವಾ ನೀವೇ ದ್ವಾರಕೆಗೆ ಬನ್ನಿರಿ. ಎಂದು ಅವರೆಲ್ಲರಿಗೂ ಆಶ್ವಾಸನೆಯನ್ನು ನೀಡಿದ. ಅನಂತರ ಕೃಷ್ಣನು ಅರವತ್ತು ದಿನ ನಂದನ ಮನೆಯಲ್ಲಿಯೇ ಆನಂದದಿಂದ ವಾಸಮಾಡಿದ. ತನ್ನ ವಿರಹದಿಂದ ಕಾತರರಾದ ಎಲ್ಲ ಗೋಪಾಂಗನೆಯರನ್ನು ಭೆಟ್ಟಿಯಾಗಿ ಮಾತನಾಡಿ ರಮಿಸಿ ಸಂತೋಷಪಡಿಸಿದ. ಮತ್ತೆ ಮೊದಲಿನಂತೆ ದನ ಕಾಯುವ ಗೋಪಾಲಕ ವೇಷವನ್ನೇ ಧರಿಸಿದ. ನವಿಲ ಗರಿಯನ್ನೂ ಕೊಳಲನ್ನೂ ಬುತ್ತಿಯ ಗಂಟನ್ನೂ

ಹಿಡಿದುಕೊಂಡು, ಗೋಪಾಲಕರನ್ನು ಕರೆದುಕೊಂಡು, ತುರುಕರುಗಳನ್ನು ಕಾಯುತ್ತ ಯಮುನೆಯ ದಂಡೆಯಲ್ಲಿ ತನ್ನ ಗೋಪಮಿತ್ರರೊಂದಿಗೆ ಆಟವಾಡಿದ. ಯಮುನೆಯ ರಮ್ಯವಾದ ಮಳಲಿನ ಮೈದಾನದಲ್ಲಿ ಸುಗಂಧಿ ಹೂವಿನ ಬಳ್ಳಿ ಹಾಗೂ ಗಿಡಗಳಿಂದ ಒಡಗೂಡಿದ ಕುಂಜ ನಿಕುಂಜಗಳಲ್ಲಿ ಗೋಪಸ್ತ್ರೀಯರೊಂದಿಗೆ ಹಗಲಿರುಳು ಕ್ರೀಡೆ ಆಡಿದ.

ಹೀಗೆ ವೃಂದಾವನ ಹಾಗೂ ನಂದಗೋಕುಲದಲ್ಲಿಯ ಪ್ರತಿಯೊಂದು ಜನ ದನಕರುಗಳ ಮೇಲೆಲ್ಲ ತನ್ನ ಪ್ರೇಮಾಮೃತ ಸಿಂಚನ ಮಾಡುತ್ತ ಎರಡು ತಿಂಗಳ ಕಾಲ ಆನಂದದಿಂದ ಅಲ್ಲಿ ವಾಸ ಮಾಡಿದ. ಅಲ್ಲಿ ಇರುವ ನಂದಗೋಪನೇ ಮೊದಲಾದ ಎಲ್ಲ ಗೋಪಾಲಕರೂ ತಮ್ಮ ತಮ್ಮ ಮಡದಿ ಮಕ್ಕಳೊಂದಿಗೆ ವಾಸುದೇವನ ಪರಮ ಪ್ರಸಾದದಿಂದ ದಿವ್ಯರೂಪ ಧರಿಸಿ ವಿಮಾನರೂಢರಾಗಿ ವೈಕುಂಠಲೋಕಕ್ಕೆ ಪ್ರಯಾಣ ಮಾಡಿದರು. ವೃಂದಾವನದಲ್ಲಿರುವ ಪಶುಪಕ್ಷಿ ಖಗ ಮೃಗಗಳು ಕೂಡ ಕೃಷ್ಣನ ಕರುಣಾಕಟಾಕ್ಷದಿಂದ ಲಕ್ಷಿತವಾಗಿ ಮೋಕ್ಷವನ್ನು ಹೊಂದಿದವು.

ಹೀಗೆ ನಂದಗೋಪನ ಬಂಧು ಮಿತ್ರ ಪರಿವಾರ ವರ್ಗಕ್ಕೆಲ್ಲ ತನ್ನ ಸ್ಥಾನವಾದ ವೈಕುಂಠ ಲೋಕವನ್ನು ಇತ್ತು ಶ್ರೀಕೃಷ್ಣನು ದ್ವಾರಕಾಪಟ್ಟಣಕ್ಕೆ ಆಗಮಿಸಿದ. ಅಲ್ಲಿ ವಸುದೇವ ಉಗ್ರಸೇನ, ಬಲರಾಮ ಪ್ರದ್ಯುಮ್ನ, ಅನಿರುದ್ಧ. ಅಕ್ರೂರ ಮೊದಲಾದ ಕೃಷ್ಣನ ಬಂಧು ಬಳಗದವರು ಎಲ್ಲರೂ ಪ್ರತಿದಿನ ಆ ಭಗವಂತನನ್ನು ಭಗವದ್ಬುದ್ಧಿಯಿಂದ ಪೂಜಿಸುತ್ತಿದ್ದರು. ಕೃಷ್ಣನೂ ಈ ಎಲ್ಲ ಹಿರಿಯರನ್ನೂ ಹಾಗೂ ತನ್ನ ಪುತ್ರ ಪೌತ್ರಾದಿ ಪರಿವಾರ ವರ್ಗವನ್ನೂ ಅನ್ನ, ಪಾನ, ಸುಖ, ಸೌಭಾಗ್ಯ, ಐಶ್ವರ್ಯ, ಭೋಗಾನು ಭೋಗಗಳನ್ನೆಲ್ಲ ಕೊಟ್ಟು ಆನಂದ ಸಾಮ್ರಾಜ್ಯದಲ್ಲಿ ತೇಲಾಡಿಸಿದ. ಮತ್ತು ತನ್ನ ಹದಿನಾರು ಸಾವಿರ ರಮಣಿಯನರ್ನೂ ಅಷ್ಟ ಮಹಿಷಿಯರನ್ನು ರತ್ನಮಯವಾದ ವರ್ಣಮಂದಿರಗಳಲ್ಲಿ ಇಟ್ಟು ಸುಖ ಸೌಭಾಗ್ಯ ಸಾಮಗ್ರಿಗಳನ್ನೆಲ್ಲ ಕೊಟ್ಟು, ಪ್ರತಿಯೊಬ್ಬರ ಮನೆಯಲ್ಲಿಯೂ ತಾನು ಹಗಲಿರುಳು ಇದ್ದು. ವಿಶ್ವರೂಪಧರನಾಗಿ ಸುಖಶಯ್ಯಾ ಆಸನ ಪರ್ಯಂಕರಗಳಲ್ಲಿ ರಮಿಸಿ ಸಂತೋಷ ಪಡಿಸಿದ.

ಬಲರಾಮ ಕೃಷ್ಣರ ಸಹಾಧ್ಯಾಯಿ ಹಾಗೂ ಬಾಲಮಿತ್ರನಾದ ಕುಚೇಲ ಎಂಬ ಬ್ರಾಹ್ಮಣ ಕಡು ಬಡತನದಲ್ಲಿ ಕಷ್ಟ ಪಡುತ್ತಿದ್ದ. ಅವನು ಒಂದು ದಿನ ತನ್ನ ಹಾಗೂ ಕೃಷ್ಣನ ಎಳೆತನದ ಗೆಳೆತನವನ್ನು ನೆನೆದು ಕೃಷ್ಣನ ಭೇಟಿಯನ್ನು ತೆಗೆದುಕೊಳ್ಳಬೇಕು ಎಂದು ನಿರ್ಧರಿಸಿದ. ಆದರೆ ಮಿತ್ರನ ಭೆಟ್ಟಿಗೆ ಬರಿಕೈಯಲ್ಲಿ ಹೋಗುವದು ಹೇಗೆ? ಮನೆಯಲ್ಲಿಯಂತೂ ಏನೂ ಇರಲಿಲ್ಲ. ನೆರೆಹೊರೆಯ ನಾಕು ಮನೆಗಳಲ್ಲಿ ಒಂದೊಂದು ಮುಷ್ಟಿ ಅವಲಕ್ಕಿಯನ್ನು ಬೇಡಿ ತಂದು. ಅದನ್ನು ಜೀರ್ಣಶೀರ್ಣವಾದ ಒಂದು ಹಳೆಯ ಬಟ್ಟೆಯಲ್ಲಿ ಕಟ್ಟಿಕೊಂಡು ಕೃಷ್ಣನನ್ನು ನೋಡಲು ದ್ವಾರಕಾ ಪಟ್ಟಣಕ್ಕೆ ಆಗಮಿಸಿದ. ಅವನು ದ್ವಾರಕೆಗೆ ಆಗಮಿಸಿ ರುಕ್ಮಿಣಿಯ ಅಂತಃಪುರದ ಬಾಗಿಲ ಬಳಿಯಲ್ಲಿ ಬಂದು ಒಂದು ಕ್ಷಣ ಸುಮ್ಮನೆ ನಿಂತುಕೊಂಡ. ಕೃಷ್ಣ ಅವನನ್ನು ದೂರಿಂದಲೇ ನೋಡಿದ ಅವನ ಗುರುತನ್ನೂ ಹಿಡಿದ. ಧಾವಿಸಿ ಬಂದು ಆನಂದದಿಂದ ಎದುರುಗೊಂಡ. ಕುಚೇಲನಿಗೆ ನಮಸ್ಕರಿಸಿದ. ಕೈ ಹಿಡಿದು ಕರೆ ತಂದ ಮನೆಯ ಒಳಗೆ. ರುಕ್ಮಿಣಿ ಬಂಗಾರದ ಕಲಶದಲ್ಲಿ ನೀರು ತಂದಳು. ದಂಪತಿಗಳು ಕೂಡಿ ಅವನ ಪಾದ ಪ್ರಕ್ಷಾಲನೆ ಮಾಡಿದರು. ಹೀಗೆ ಶ್ರೀಕೃಷ್ಣ ರುಕ್ಮಿಣಿಯರು ತನ್ನ ಕಾಲು ಹಿಡಿದು,

ಬಿಸಿನೀರಿನಿಂದ ತೊಳೆದು, ಅಂಗಾಲಿಗೆ ಹಣೆಹಚ್ಚಿ ನಮಸ್ಕರಿಸಿದಾಗ ಸುದಾಮ ನಡುಗತೊಡಗಿದ. ಪರಮಾತ್ಮನ ಮೈತ್ರಿಯ ಪ್ರೀತ್ಯುದ್ರೇಕವನ್ನೂ ಲೋಕಶಿಕ್ಷಾರ್ಥವಾಗಿ ಅವನು ಮಾಡುವ ಪಾದಪೂಜೆಯನ್ನು ತನ್ನಂಥ ನರ ಮನುಷ್ಯ ಹೇಗೆ ಸ್ವೀಕರಿಸುವದು? ಅವನು ಕೈಕೊಂಡ ಕಾರ್ಯವನ್ನಾದರೂ ಹೇಗೆ ತಡೆಯುವದು? ಅವನು ಮಾಡುವ ಬ್ರಾಹ್ಮಣ ಪೂಜೆಯನ್ನು ಹೇಗೆ ನಿಷೇಧಿಸುವದು? ಯಾವದೂ ತಿಳಿಯದೇ ಅವನು ಭಕ್ತಿನಿರ್ಭರನಾಗಿ ನಿಂತುಕೊಂಡ. ಕೃಷ್ಣರುಕ್ಮಿಣಿಯರು ಅವನ ಪಾದವನ್ನು ಮುಟ್ಟಿದಾಗ ಅವನ ಇಡೀ ದೇಹವೇ ಕಂಪಾಯಮಾನವಾಗ ತೊಡಗಿತು. ಅನಂತರ ಕುಚೇಲನಿಗೆ ಆ ಕೃಷ್ಣನ ಅಂತಃಪುರದಲ್ಲಿ ಪಂಚಭಕ್ಷ್ಯ ಪಕ್ವಾನ್ನ ಭೋಜನ, ನಳಪಾಕ ಮಧುಪಾಕಗಳ ರಸದೂಟ, ಕೃಷ್ಣನ ಅಷ್ಟ ಮಹಿಷಿಯರ ಆದರ, ಅತಿಥ್ಯ, ಉಪಚಾರ, ಪ್ರೀತಿ, ವಿಶ್ವಾಸದ ಸರಸಾಲಾಪ ಭೋಜನದಲ್ಲಿಯ ಪ್ರತಿಯೊಂದು ಪದಾರ್ಥವೂ ಅಮೃತೋಪಮ.

ಹೀಗೆ ಕೃಷ್ಣ ತನ್ನ ವಿದ್ಯಾರ್ಥಿ ಜೀವನದ ಜೀವಮಿತ್ರನಾದ ಕುಚೇಲನಿಗೆ ಅಮೃತ ಭೋಜನ ಮಾಡಿಸಿ ತೃಪ್ತಿಪಡಿಸಿದ. ಅನಂತರ ವಿಶ್ರಾಂತಿ ತೆಗೆದುಕೊಂಡು ಎದ್ದ ಬಳಿಕ ಸುಖ ಸಂಕಥಾ ವಿನೋದಗೋಷ್ಠಿ ಪ್ರಾರಂಭವಾಯಿತು. ಆಗ ಸುಧಾಮನು ತನ್ನ ಊರಿಂದ ಹಳೆಯ ಹರಕು ಚಿಂದಿ ಬಟ್ಟೆಯಲ್ಲಿ ಕಟ್ಟಿಕೊಂಡು ತಂದ ಅವಲಕ್ಕಿಯ ಗಂಟನ್ನು ಬಿಚ್ಚಿದ. ಅದರಲ್ಲಿರುವ ಅವಲಕ್ಕಿಯನ್ನು ಕೃಷ್ಣ ತಾನೇ ಕೈ ಹಾಕಿ ತೆಗೆದುಕೊಂಡ ತಾನು ತಿಂದ. ನಗುತ್ತ ಆನಂದದಿಂದ ತನ್ನ ಮಡದಿಯರಿಗೂ ಹಂಚಿದ. ಸುದಾಮನ ಆ ಅವಲಕ್ಕಿಯನ್ನು ಸುಧಾದಂತೆ ಸ್ವಾದಿಷ್ಠ ಎಂದು ಬಣ್ಣಿಸುತ್ತ ಕೃಷ್ಣ ಕುಟುಂಬದವರೆಲ್ಲರೂ ತಿಂದು ತೃಪ್ತಿಯ ಮಂದಹಾಸವನ್ನು ಸೂಸಿದರು. ಸಕುಟುಂಬನಾದ ಶ್ರೀಹರಿ ಕುಚೇಲನ ಅವಲಕ್ಕಿಯನ್ನು ತಿಂದ ತಕ್ಷಣದಲ್ಲಿ ಕುಚೇಲನಿಗೆ ಒಮ್ಮೆಲೆ ಅಪಾರ ಐಶ್ವರ್ಯ ಪ್ರಾಪ್ತಿಯಾಯಿತು. ಅವನ ಮನೆಯಲ್ಲಿ ಧನಧಾನ್ಯ, ವಸ್ತ್ರ ಆಭರಣ ಬಂಗಾರ ಬೆಳ್ಳಿ, ಮುತ್ತು, ರತ್ನ ಮಣಿ ಮಾಣಿಕ್ಯ ನಗ ನಾಣ್ಯ ಎಲ್ಲವೂ ಸಮೃದ್ಧಿಯಿಂದ ತುಂಬಿ ತುಳುಕಿತು. ಕುಚೇಲ ಇನ್ನೂ ದ್ವಾರಕಾ ಪಟ್ಟಣದಲ್ಲಿ ಇದ್ದಾಗಲೇ ಮಹಾಲಕ್ಷ್ಮಿ ಅವನ ಮನೆ ತುಂಬಿದಳು. ಕುಬೇರನ ಐಶ್ವರ್ಯವನ್ನೇ ಕುಚೇಲನ ಮನೆಯಲ್ಲಿ ತಂದು ಒಟ್ಟಿದಳು. ಸುಧಾಮನಿಗೆ ಮಾತ್ರ ಇದಾವ ಸಮಾಚಾರವೂ ಗೊತ್ತಿಲ್ಲ. ಕೆಲವು ದಿನಗಳವರೆಗೆ ಕುಚೇಲ ಶ್ರೀಕೃಷ್ಣನ ಅರಮನೆಯ ಅತಿಥ್ಯ ಹಾಗೂ ರಾಜಭೋಗ ಗಳನ್ನು ಅನುಭವಿಸುತ್ತ ಆನಂದದಿಂದ ಇದ್ದು ಕೃಷ್ಣನಿಗೆ ಹೇಳಿ ತನ್ನ ಊರ ಕಡೆಗೆ ಹೊರಟ. ಮಿತ್ರನನ್ನು ಆದರದಿಂದ ಬೀಳ್ಕೊಟ್ಟ ಕೃಷ್ಣ ಹೋಗುವಾಗ ಕುಚೇಲನಿಗೆ ಏನನ್ನೂ ಕೊಡಲಿಲ್ಲ. ದಾರಿಯಲ್ಲಿ ಬರುವಾಗ ''ಕೃಷ್ಣ ತನ್ನಲ್ಲಿ ಬೇಕಾದಷ್ಟು ಐಶ್ವರ್ಯವಿದ್ದರೂ ನನಗೆ ಮಾತ್ರ ಒಂದು ತುಂಡು ಬಟ್ಟೆಯನ್ನೂ ಕೊಡಲಿಲ್ಲ. ಒಂದು ಕಾಸು ಹಣವನ್ನೂ ನೀಡಲಿಲ್ಲ.'' ಎಂದು ಕೊಂಡರೂ ನೊಂದುಕೊಳ್ಳಲಿಲ್ಲ. ಕಡು ಬಡವನಾದ ತನ್ನ ಗುರುತನ್ನು ಮರೆಯದೇ 'ಮಿತ್ರಾ' ಎಂದು ಕರೆದು ತನ್ನನ್ನು ಆದರಿಸಿ. ಆಲಿಂಗಿಸಿ, ಆತ್ಮೀಯ ಭಾವನೆಯಿಂದ ಮಹಿಷಿಯರೊಂದಿಗೆ ಎಂಥ ಅತಿಥ್ಯ ನೀಡಿದ! ಎಷ್ಟು ಉಪಚಾರ ಮಾಡಿದ! ರುಕ್ಮಿಣಿ ದೇವಿಯೊಂದಿಗೆ ತನ್ನಂಥ ಹುಲುಮಾನವನ ಪಾದತೊಳೆದ. ಎಂಥ ಭಕ್ತವತ್ಸಲ ಈ ಭಗವಂತ! ಕ್ಷುದ್ರ ನರನಾದ ನಾನೆಲ್ಲಿ? ಸಾಕ್ಷಾತ್ ಲಕ್ಷ್ಮೀಪತಿಯಾದ ನಾರಾಯಣರೂಪಿ ಕೃಷ್ಣನೆಲ್ಲಿ? ಆದರೂ ಆ ಸ್ವಾಮಿ ನನಗೆ ಎಂಥ ಗೌರವ ಮಾಡಿ ಅನುಗ್ರಹಿಸಿದ.

ಅವನ ದರ್ಶನದಿಂದ ನಾನು ಧನ್ಯನಾದೆ ಎಂದು ವಿಚಾರಿಸುತ್ತ. ಕೃಷ್ಣನ ದ್ವಾರಕಾ ಸಂದರ್ಶನವನ್ನೇ ನೆನೆಯುತ್ತ ರೋಮಾಂಚಿತನಾಗಿ ದಾರಿಯುದ್ದಕ್ಕೂ ಕೃಷ್ಣನ ಧ್ಯಾನಮಾಡುತ್ತ ತನ್ನ ಊರಿಗೆ ಬಂದ. ಅವನ ಮನೆ ಧನ ಧಾನ್ಯ ಸಮೃದ್ಧವಾಗಿದ್ದಿತು. ಐಶ್ವರ್ಯದಿಂದ ಸಂಪನ್ನವಾಗಿದ್ದಿತು. ತನ್ನ ಮೊದಲಿನ ಪರ್ಣಕುಟೀರ ಹೋಗಿ ವೈಭವ ಪೂರ್ಣ ಭವ್ಯ ಭವನವಾಗಿದ್ದಿತು. ಭುವನದ ಐಶ್ವರ್ಯವೆಲ್ಲವೂ ಆ ಭವನದಲ್ಲಿ ತುಂಬಿದ್ದಿತು. ಕೃಷ್ಣನ ಪ್ರಸಾದದಿಂದ ಲಬ್ಧವಾದ ಆ 'ಪ್ರಸಾದ ಪವಿತ್ರವಾದ ಐಶ್ವರ್ಯ. ಧನ ಧಾನ್ಯ ಸಮೃದ್ಧಿ ಎಲ್ಲವೂ ತನಗೆ ಸಿದ್ಧಿಸಿದೆ ಎಂದು ಹೃದಯದಲ್ಲಿ ಹಿಗ್ಗಿದ. ದಾರಿದ್ರ್ಯದಲ್ಲಿಯೇ ಬೆಳೆದ ಅವನ ಧರ್ಮಪತ್ನಿಯು ಭಗವದನುಗ್ರಹದಿಂದ ಬಂದ ಆ ಅಪಾರ ಐಶ್ವರ್ಯದಿಂದ ಗರ್ವಿಷ್ಠಳಾಗದೇ "ಎಲ್ಲವೂ ಭಗವದ್ ಭಕ್ತಿಯಿಂದ ಒದಗಿ ಬಂದ ಭಾಗ್ಯ" ಎಂದು ಶ್ರೀಹರಿಯ ಪ್ರಾಸಾದವನ್ನು ನೆನೆಯುತ್ತ ಬೆಲೆ ಬಾಳುವ ಬಟ್ಟೆ, ಬಂಗಾರ, ಮುತ್ತು ರತ್ನಾದಿ ಆಭರಣಗಳಿಂದ ಅಲಂಕೃತಳಾಗಿ ಪತಿ ಅತಿಥಿ ಅಭ್ಯಾಗತರ ಸೇವೆ ಮಾಡಿದಳು. ಆ ತನ್ನ ಪ್ರೀತಿಯ ಮಡದಿಯೊಡನೆ ಕುಚೇಲ ಭೂಲೋಕದಲ್ಲಿ ಲಭ್ಯವಾದ ಎಲ್ಲ ಸುಖಸೌಭಾಗ್ಯಗಳನ್ನು ಅನುಭವಿಸಿ ಆನಂದದಿಂದ ಬಹುಕಾಲ ತನ್ನ ದಿವ್ಯ ಪ್ರಸಾದದಲ್ಲಿ ವಾಸ ಮಾಡಿದ. ಹರಿ ಪ್ರೀತಿಗಾಗಿ ಅನೇಕ ಯಜ್ಞಯಾಗಗಳನ್ನು ಮಾಡಿದ. ದಾನ, ಧರ್ಮ ಗಳನ್ನು ನೀಡಿದ. ಜಪ, ತಪ, ಉಪವಾಸ, ವ್ರತ, ಅನ್ನದಾನ, ವಿದ್ಯಾದಾನ, ದೇವತಾರಾಧನೆ ಭೂರಿಭೋಜನ ದಕ್ಷಿಣಾದಾನ ಮುಂತಾದ ಪುಣ್ಯ ಕರ್ಮಗಳನ್ನು ಶ್ರೀಹರಿಯು ಕೊಟ್ಟ ಐಶ್ವರ್ಯದಿಂದ ಸಾಂಗವಾಗಿ ಶಾಸ್ತ್ರೋಕ್ತವಾಗಿ ಮಾಡಿ ಪರಮಾತ್ಮನ ಅತ್ಯರ್ಥ ಪ್ರಸಾದಕ್ಕೆ ಪಾತ್ರನಾದ. ದಂಪತಿಗಳಿಬ್ಬರೂ ಆ ಭಗವಂತನಲ್ಲಿ ನಿರತಿಶಯವಾದ ಭಕ್ತಿಯನ್ನು ಮಾಡಿ ತಮ್ಮ ಸರ್ವಸಂಪತ್ತು ಐಶ್ವರ್ಯ ಮಕ್ಕಳು ಮನೆ ಧರ್ಮ ಕರ್ಮ ಸರ್ವವನ್ನೂ ಕೃಷ್ಣ ಪರಮಾತ್ಮನಿಗೆ ನಿಷ್ಕಾಮಬುದ್ಧಿಯಿಂದ ಸಮರ್ಪಣೆಗೈದು ಮೋಕ್ಷ ಪದವನ್ನು ಹೊಂದಿದರು.

ಇತ್ತ ಧೃತರಾಷ್ಟ್ರನ ಜೇಷ್ಠ ಪುತ್ರನಾದ ದುರ್ಯೋಧನ ತನ್ನ ತಮ್ಮನಾದ ದುಃಶ್ಯಾಸನ ಹಾಗೂ ಶಕುನಿ ಕರ್ಣ ಮುಂತಾದವರಿಂದ ಕೂಡಿಕೊಂಡು ಪಾಂಡವರೊಡನೆ ಕಪಟ ದ್ಯೂತ ಆಡಿದರು. ಮೋಸದಿಂದ ಆ ಲೆತ್ತದಾಟದಲ್ಲಿ ಪಂಚ ಪಾಂಡವರನ್ನು ಸೋಲಿಸಿ ಅವರ ರಾಜ್ಯ ಐಶ್ವರ್ಯವನ್ನೆಲ್ಲ ಕಿತ್ತಿಕೊಂಡರು. ತಮ್ಮ ರಾಷ್ಟ್ರದಿಂದ ಅವರನ್ನು ಹೊರಗೆ ಹಾಕಿ ಕಾಡಿಗೆ ಅಟ್ಟಿದರು. ಧರ್ಮ, ಭೀಮ, ಅರ್ಜುನ, ನಕುಲ, ಸಹದೇವ ಎಂಬ ಪಾಂಡುರಾಜನ ಐವರೂ ಮಕ್ಕಳು ತಮ್ಮ ಪತ್ನಿಯಾದ ದ್ರೌಪದಿಯೊಂದಿಗೆ ಹನ್ನೆರಡು ವರ್ಷ ವನವಾಸವನ್ನು ಅನುಭವಿಸಿದರು. ಮತ್ಸ್ಯದೇಶದ ಅಧಿಪತಿಯಾದ ವಿರಾಟರಾಜನ ಅರಮನೆಯಲ್ಲಿ ಒಂದು ವರ್ಷ ಅಜ್ಞಾತವಾಸವನ್ನು ಅನುಭವಿಸಿದರು. ಅನಂತರ ಶ್ರೀಕೃಷ್ಣನನ್ನು ಸಂಧಾನಕ್ಕಾಗಿ ಕೌರವರ ಬಳಿಗೆ ಕಳಿಸಿದರು. ದುರಾಧರರಾದ ದುರ್ಯೋಧನಾದಿ ಕೌರವರ ಸ್ವಾರ್ಥದಿಂದ ಸಂಧಿ ವಿಫಟಿತವಾಯಿತು. ಕೌರವ ಪಾಂಡವರ ನಡುವೆ ಕುರುಕ್ಷೇತ್ರದಲ್ಲಿ ಭಯಂಕರವಾದ ಮಹಾಯುದ್ಧವು ನಡೆಯಿತು.

ಆಗ ಶ್ರೀಕೃಷ್ಣನು ಅರ್ಜುನನಿಗೆ ಸಾರಥಿಯಾದ. ಪಾಂಡವರಿಗೆ ಸಹಾಯಕನಾದ. ಆ ಮಧ್ಯಮ ಪಂಡಾವನಲ್ಲಿ ತನ್ನ ಶಕ್ತಿಯನ್ನು ತುಂಬಿದ. ಪಾಂಡವರ ಕೌರವನ ಹನ್ನೊಂದು ಅಕ್ಷೋಹಿಣೀ ಸೈನ್ಯವನ್ನೆಲ್ಲ ಸಂಹರಿಸಿದ. ದುರ್ಯೋಧನ, ಭೀಷ್ಮ, ದ್ರೋಣ,

ಕರ್ಣ, ದುಃಶ್ಯಾಸನ, ಶಕುನಿ, ಶಲ್ಯ ಅಶ್ವತ್ಥಾಮ, ಜಯದ್ರಥ ಮುಂತಾದ ಅತಿರಥ ಮಹಾರಥ ವೀರಾಧಿವೀರರೆಲ್ಲರೂ ಸೋಲು ಸಾವು ನೋವುಗಳನ್ನು ಅನುಭವಿಸಿ ಕುರುಕ್ಷೇತ್ರದಲ್ಲಿ ಹತಪತಿತರಾದರು. ಅನಂತರ ಶ್ರೀಕೃಷ್ಣನು ಅಖಂಡ ಭೂಮಂಡಲಕ್ಕೆಲ್ಲ ಪಾಂಡವರನ್ನೇ ಪ್ರಭುಗಳನ್ನಾಗಿ ಮಾಡಿ ಧರ್ಮರಾಜನನ್ನು ಹಸ್ತಿನಾವತಿಯ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡಿ ಭೂಭಾರವನ್ನೆಲ್ಲ ಹಗುರ ಗೊಳಿಸಿ ತನ್ನ ದ್ವಾರಕಾಪಟ್ಟಣಕ್ಕೆ ಮರಳಿ ಬಂದ.

ಧರ್ಮರಾಜನು ಕೃಷ್ಣನ ಅಪ್ಪಣೆಯಂತೆ ಧರ್ಮಶಾಸನವನ್ನು ಮಾಡುತ್ತಲಿದ್ದಾಗ ಒಂದು ದಿನ ವೈದಿಕ ಬ್ರಾಹ್ಮಣ ಸತ್ತು ಹೋದ ತನ್ನ ಐದು ವರ್ಷದ ಮಗನ ಹೆಣವನ್ನು ರಾಜಭವನದ ಮುಂದೆ ಹಾಕಿ ಎದೆ ಎದೆ ಬಡಿದುಕೊಂಡು ಅಳತೊಡಗಿದ. ಕೃಷ್ಣನನ್ನು ಕೂಗಿ ಕೂಗಿ ಕರೆಯುತ್ತ ಆಕ್ರೋಶ ಮಾಡಿದ. "ಕೃಷ್ಣ, ನನ್ನ ಐದು ಜನ ಮಕ್ಕಳು ಈ ಮೊದಲು ಸತ್ತು ಹೋಗಿದ್ದಾರೆ. ನನ್ನ ಈ ಆರನೇ ಮಗ ಹುಟ್ಟಿ ಐದು ವರ್ಷವಾಗಿತ್ತು. ಈಗ ಈ ಮಗನೂ ಸತ್ತು ಹೋದ. ಮುಂದೆ ನನಗೆ ಏನು ಗತಿ? "ಭಗವಾನ್, ಹೇಗಾದರೂ ಮಾಡಿ ನನ್ನ ಈ ಮಗನನ್ನು ಬದುಕಿಸಿ ಕೊಡು ಇಲ್ಲದಿದ್ದರೆ ನಿನ್ನ ಈ ಅರಮನೆಯ ಬಾಗಿಲಲ್ಲಿ ಬಿದ್ದು ನಾನು ಸತ್ತು ಹೋಗುತ್ತೇನೆ. ಎಂದು ಕರುಣಾಜನಕವಾಗಿ ಕೂಗಿ, ಚೀರಿಕೃಷ್ಣನನ್ನು ಕರೆ ಕರೆದು ರೋಧಿಸತೊಡಗಿದ. ಅದನ್ನು ಕೇಳಿಯೂ ಕೃಷ್ಣ ತಲೆ ತಗ್ಗಿಸಿಕೊಂಡು ತೆಪ್ಪನೇ ಕುಳಿತುಕೊಂಡಿದ್ದ.

ಅಷ್ಟರಲ್ಲಿ ಕೃಷ್ಣನ ದರ್ಶನಕ್ಕಾಗಿ ಅರ್ಜುನ ದ್ವಾರಕೆಗೆ ಬಂದ. ಕೃಷ್ಣನ ಎದುರು ಕಲ್ಲು ಕೂಡ ಕರಗವಂತೆ ಕರುಣಾಜನಕವಾಗಿ ಶೋಕ ಮಾಡುತ್ತಿದ್ದ ಪುತ್ರಶೋಕ ವಿಹ್ವಲನಾದ ಆ ವೈದಿಕ ಬ್ರಾಹ್ಮಣನನ್ನು ನೋಡಿದ. ಅವನ ಐದು ವರ್ಷದ ಮಗ ಸತ್ತು ಅದರ ಶವ ರಾಜಭವನದ ಹೊಸ್ತಿಲ ಬಳಿಯಲ್ಲಿಯೇ ಬಿದ್ದಿತ್ತು. ಅದನ್ನು ತಬ್ಬಿಕೊಂಡು ಆ ಬ್ರಾಹ್ಮಣ ಎದೆ ಎದೆ ಬಡಿದುಕೊಂಡು ವಿಲಪಿಸುತ್ತಿದ್ದ. ಅದನ್ನು ಕಂಡು ಅರ್ಜುನನ ಕರುಳು ಕರಗಿತು. ಕಣ್ಣು ಹನಿಯಿತು. ಅವನ ಮುಂದೆ ಬಂದು ಆ ಬ್ರಾಹ್ಮಣನಿಗೆ ಹೇಳಿದ.

**ಅರ್ಜುನ:-** ವಿಪ್ರೋತ್ತಮ, ನೀವು ಅಳಬೇಡಿರಿ. ನಾನು ನಿಮ್ಮ ಮಗನನ್ನು ಬದುಕಿಸುತ್ತೇನೆ. ನೀವು ನಿಶ್ಚಿಂತೆಯಿಂದ ಇರಿ. ಹೀಗೆ ಪ್ರತಿಜ್ಞೆ ಮಾಡಿದ. ಆ ವೈದಿಕ ಬ್ರಾಹ್ಮಣನಿಗೆ ಅಭಯವನ್ನು ನೀಡಿದ. ಆದರಿಂದ ಆ ಬ್ರಾಹ್ಮಣನಿಗೆ ಮಗ ಬದುಕಿ ಬಂದಷ್ಟೆ ಆನಂದವಾಯಿತು, ಅರ್ಜುನನ ಆಶ್ವಾಸನೆಯಿಂದ. ಸತ್ಯ ಪ್ರತಿಜ್ಞನಾದ ಅರ್ಜುನನ ವಚನದಿಂದ ಮಗನ ಪುನರುಜ್ಜೀವನದ ಭರವಸೆಯನ್ನು ತಾಳಿದ ಆ ಬ್ರಾಹ್ಮಣ ಅರ್ಜುನನೆಡೆಗೆ ಆಸೆಯಿಂದ ನೋಡುತ್ತ ಕುಳಿತ.

ಅನಂತರ ಅರ್ಜುನ ತನಗೆ ಗೊತ್ತಿದ್ದ ಸಂಜೀವನಾಸ್ತ್ರಗಳನ್ನು ಅಭಿಮಂತ್ರಿಸಿ ಆ ಮೃತ ಬಾಲಕನನ್ನು ಬದುಕಿಸಲು ಪ್ರಯತ್ನಿಸಿದ. ಅವನು ಎಷ್ಟು ಮಂತ್ರ ತಂತ್ರ ಮಾಡಿದರೂ ಸತ್ತ ಮಗು ಮತ್ತೆ ಬದುಕಲಿಲ್ಲ. ಪ್ರಾರ್ಥನೆ ಪ್ರಯತ್ನ ಎಲ್ಲವೂ ವ್ಯರ್ಥವಾಯಿತು. ಅವನ ಪ್ರತಿಜ್ಞೆ ಸುಳ್ಳಾಯಿತು. ಪಂಚತ್ವವನ್ನು ಹೊಂದಿದ, ಆ ಪಂಚವರ್ಷದ ವಿಪ್ರಕುಮಾರನ ಮೈಯಲ್ಲಿ ಅರ್ಜುನನ ಶತಪ್ರಯತ್ನದಿಂದಲೂ ಜೀವ ಸಂಚಾರ ಆಗಲೇ ಇಲ್ಲ. ಇದರಿಂದ ಅರ್ಜುನನ ಪ್ರತಿಜ್ಞಾ ಭಂಗ ಆಯಿತು. ಆಗ ಅವನು ತಾನು ಭ್ರಷ್ಟ ಪ್ರತಿಜ್ಞನಾದುದರಿಂದ

ಪ್ರಾಣಾರ್ಪಣೆಯನ್ನು ಮಾಡುತ್ತೇನೆ. ಎಂದು ಮರಣಕ್ಕೆ ಸಿದ್ಧನಾದ. ಕೃಷ್ಣ ಇದನ್ನೆಲ್ಲವನ್ನು ನೋಡಿದ. ಪ್ರಾಣ ಕೊಡಲು ಹೊರಟ ಅರ್ಜುನನ್ನು ಮೊದಲು ತಡೆದು ನಿಲ್ಲಿಸಿದ. ಅನಂತರ ಆ ವೈದಿಕ ಬ್ರಾಹ್ಮಣನನ್ನು ಕುರಿತು "ವಿಪ್ರೋತ್ತಮ ಭಯಪಡಬೇಡ. ನಿನ್ನ ಮೃತಸುತನನ್ನು ನಾನು ಮರಳಿ ಬದುಕಿಸುತ್ತೇನೆ. ನನ್ನ ಮಾತನ್ನು ನಂಬು" ಎಂದು ಆಶ್ವಾಸನೆ ನೀಡಿದ. ಅರ್ಜುನನೊಡನೆ ಗರುಡನ ಮೇಲೆ ಸವಾರಿ ಮಾಡಿದ. ವಿಷ್ಣು ಲೋಕಕ್ಕೆ ತೆರಳಿದ.

ಅಲ್ಲಿ ಒಂದು ದಿವ್ಯವಾದ ಮಣಿ ಮಂಟಪ. ಅದರ ಮಧ್ಯದಲ್ಲಿ ನಾರಾಯಣ. ಅಕ್ಕಪಕ್ಕದಲ್ಲಿ ಶ್ರೀದೇವಿ ಭೂದೇವಿಯರು ಆ ಲಕ್ಷ್ಮಿನಾರಾಯಣರನ್ನು ನೋಡಿ ಕೃಷ್ಣಾರ್ಜುನರಿಬ್ಬರೂ ನಮಸ್ಕರಿಸಿದರು. ಆಗ ನಾರಾಯಣ ಎದ್ದು ಬಂದು ಕೃಷ್ಣನನ್ನು ಆಲಿಂಗಿಸಿದ. "ಬಂದ ಉದ್ದೇಶವೇನು" ಎಂದು ಕೇಳಿದ? ಈ ವೈದಿಕ ಬ್ರಾಹ್ಮಣನ ಸತ್ತ ಮಕ್ಕಳನ್ನೆಲ್ಲ ಮತ್ತೆ ತಿರುಗಿ ಅವನಿಗೆ ಕೊಟ್ಟು ಬಿಡು ಎಂದು ಕೃಷ್ಣ ಹೇಳಿದ. ಕೃಷ್ಣನ ಮಾತಿನಂತೆ ಭಗವಾನ್ ನಾರಾಯಣನು ಆ ಬ್ರಾಹ್ಮಣನ ಹಿಂದೆ ಸತ್ತ ಐದು ಮಕ್ಕಳನ್ನೂ ಇದೀಗ ಮರಣಿಸಿದ ಆರನೇಯ ಮಗನನ್ನೂ ತಂದು ಕೃಷ್ಣನಿಗೆ ಒಪ್ಪಿಸಿದ. ವಿಪ್ರಕುಮಾರನನ್ನು ಶ್ರೀಕೃಷ್ಣ ಗರುಡನ ಮೇಲೆ ಕೂಡಿಸಿಕೊಂಡು ದ್ವಾರಕಾಪಟ್ಟಣಕ್ಕೆ ತಂದು ಇಳಿಸಿದ. ಕೃಷ್ಣನ ಅರಮನೆಯ ಬಾಗಿಲಲ್ಲಿ ಸತ್ತ ಮಗನಿಗಾಗಿ ಅತ್ತು ಅತ್ತು ವಿಷಣ್ಣ ನಿಷಣ್ಣನಾದ ಆ ಬ್ರಾಹ್ಮಣನಿಗೆ ಅವನ ಆ ಎಲ್ಲ ಆರೂ ಮಕ್ಕಳನ್ನೂ ಒಪ್ಪಿಸಿದ. ಐದು ಐದು ವರ್ಷದ ಆರು ಮಕ್ಕಳು ಎಂದೋ ಸತ್ತು ಹೋಗಿದ್ದರೂ ಕೃಷ್ಣನ ದಯದಿಂದ ಈಗ ಪುನರುಜ್ಜೀವಿತರಾಗಿ ಬಂದುದನ್ನು ಕಂಡು ಅತ್ಯಂತ ಹರ್ಷಿತನಾದ ಆ ವಿಪ್ರ. ಕೃಷ್ಣ ಪರಮಾತ್ಮನ ಪಾದಗಳ ಮೇಲೆ ತನ್ನ ಆ ಎಲ್ಲ ಮಕ್ಕಳನ್ನು ತಂದು ಹಾಕಿ ತಾನು ದಂಡ ಪ್ರಣಾಮ ಮಾಡಿದ. ಶ್ರೀಕೃಷ್ಣನನ್ನು ವಂದಿಸಿ ಹಸ್ತಿನಾವತಿಗೆ ಅವನ ಅಪ್ಪಣೆ ಪಡೆದು ಹೊರಟು ಹೋದ. ಕೃಷ್ಣನು ತನ್ನ ಹದಿನಾರು ಸಾವಿರದ ಎಂಟು ಹೆಂಡಂದಿರಲ್ಲಿ ಒಬ್ಬೊಬ್ಬರಲ್ಲಿ ಹತ್ತು ಹತ್ತು ಗಂಡು ಒಂದೊಂದು ಹೆಣ್ಣು ಮಕ್ಕಳನ್ನು ಪಡೆದ. ಕೃಷ್ಣನ ಮಕ್ಕಳು ಮೊಮ್ಮಕ್ಕಳು ಮರಿ ಮಕ್ಕಳ ಸಂಖ್ಯೆ ಇಷ್ಟು ಎಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ.

ಅಸಂಖ್ಯರಾದ ಯಾದವರಿಂದ ಪೃಥಿವಿಯೆಲ್ಲವೂ ತುಂಬಿಹೋಯಿತು. ಮತ್ತೆ ಭೂಮಿಗೆ ಭಾರ ಹೆಚ್ಚಾಯಿತು ಎಂದು ಕೃಷ್ಣ ಬಗೆದ. ಋಷಿಯ ಶಾಪದ ನೆವದಿಂದ ಈ ಮನುಷ್ಯಭಾರದ ಹೊರೆಯನ್ನು ಹಗುರಗೊಳಿಸಬೇಕು ಎಂದು ಅವನು ನಿರ್ಧರಿಸಿದ. ಒಮ್ಮೆ ಎಲ್ಲ ಯಾದವ ಕುಮಾರರು ಜಲ ವಿಹಾರ ಮಾಡಲಿಕ್ಕಾಗಿ ನರ್ಮದಾ ನದಿಯ ತೀರಕ್ಕೆ ಬಂದರು. ಆ ನರ್ಮದಾನದಿಯ ದಂಡೆ ಮೇಲೆ ಕಣ್ವ ಮಹರ್ಷಿಗಳು ತಪಸ್ಸು ಮಾಡುತ್ತ ಕುಳಿತುಕೊಂಡಿದ್ದರು. ಅವರನ್ನು ನೋಡಿ ತರುಣರಾದ ಕೃಷ್ಣನ ಮಕ್ಕಳು ಹಾಗೂ ಮೊಮ್ಮಕ್ಕಳಿಗೆಲ್ಲ ಏನಾದರೂ ಕುಚೇಷ್ಟೆ ಮಾಡುವ ದುರ್ಬುದ್ಧಿ ಉಂಟಾಯಿತು. ಅವರೆಲ್ಲರೂ ಜಾಂಬವತಿಯ ಮಗನಾದ ಸಾಂಬನಿಗೆ ಗರ್ಭಿಣಿ ಹೆಣ್ಣು ಮಗಳ ವೇಷ ಹಾಕಿದರು. ಹೊಟ್ಟೆಗೆ ಬಂದು ಉಕ್ಕಿನ ಒನಕೆಯನ್ನು ಇಟ್ಟು ಸೀರೆ ಉಡಿಸಿ ಕಣ್ವ ಋಷಿಗಳಿಗೆ ತಂದು ನಮಸ್ಕಾರ ಮಾಡಿಸಿದರು. ತಾವೂ ಕೂಡ ನಮಸ್ಕಾರ ಮಾಡಿ ಆ ಯದುಕುಮಾರರು "ಈ ಗರ್ಭಿಣಿಯಾದ ಹೆಣ್ಣು ಮಗಳು ಗಂಡು ಹಡಿಯುವಳೋ ಹೆಣ್ಣು ಹಡಿಯುವಳೋ?" ಎಂದು ತಾವು ಹೇಳಿರಿ ಎಂದು ಕೇಳಿದರು. ಕಣ್ವರ ಅಂತರ್ದೃಷ್ಟಿಗೆ ಯಾದವ ತರುಣರ ಈ ಕುಚೇಷ್ಟೆಯ ಕಪಟಕಾರಸ್ಥಾನವೆಲ್ಲವೂ ತಿಳಿದು ಬಿಟ್ಟಿತು. ಅದರಿಂದ

ಕೋಪಗೊಂಡ ಕಣ್ವರು ''ಇವಳು ಹೊಟ್ಟೆಗೆ ಕಟ್ಟಿಕೊಂಡ ಆ ಉಕ್ಕಿನ ಒನಕೆಯಿಂದಲೇ ನೀವೆಲ್ಲರೂ ಸತ್ತು ಹೋಗಿರಿ'' ಎಂದು ಶಾಪ ಕೊಟ್ಟರು. ಅನಂತರ ಎಲ್ಲರಿಗೂ ಬುದ್ಧಿ ಬಂದಿತು. ಆ ಶಾಪಾಕ್ಷರವನ್ನು ಕೇಳಿ ಸಂಭ್ರಾಂತರಾದ ತರುಣ ಯಾದವರೆಲ್ಲರೂ ಕೃಷ್ಣನ ಬಳಿಗೆ ಬಂದು ನಡೆದ ಸಮಾಚಾರವನ್ನೆಲ್ಲ ತಿಳಿಸಿದರು. ಆಗ ಕೃಷ್ಣ ಆ ಒನಕೆಯನ್ನು ಮುರಿದು ತುಂಡು ತುಣಕು ಮಾಡಿ ಪುಡಿ ಗೈದು ಯಮುನೆಯ ಒಂದು ಮಡುವಿನಲ್ಲಿ ಚೆಲ್ಲಿಸಿದ. ಆ ಒನಕೆಯ ಪುಡಿಯಂದ ಜಲಾಶಯದಲ್ಲಿ ವಜ್ರದಂತೆ ಕಠೋರವಾದ ಜೊಂಡು ಹುಲ್ಲು ಅದರ ತೀರದ ತುಂಬ ಬೆಳೆದು ನಿಂತಿತು. ಆ ಒನಕೆಯನ್ನು ಕುಟ್ಟಿ ಪುಡಿ ಮಾಡಿದ ಬಳಿಕ ಅದರ ಅಣಸದ ಕೆಳ ಭಾಗವು ಪುಡಿ ಮಾಡಲು ಬರಲೇ ಇಲ್ಲ. ತಿಕ್ಕಿ ತಿಕ್ಕಿ ಚೂಪಾಗಿ ಕಿರಿ ಬೆರಳಿನಷ್ಟು ಆ ಒನಕೆಯ ತುಂಡು ಉಳಿಯಿತು. ಅದನ್ನು ಸಮುದ್ರದಲ್ಲಿ ಎಸೆದರು. ಅದನ್ನು ಒಂದು ಮೀನು ನುಂಗಿತು. ಆ ಮೀನವನ್ನು ಒಬ್ಬ ಮೀನುಗಾರನು ಬಲೆ ಹಾಕಿ ಹಿಡಿದು ಮನೆಗೆ ಒಯ್ದ. ಆ ಮೀನದ ಹೊಟ್ಟೆಯಲ್ಲಿದ್ದ ತಿಕ್ಕಿ ತಿಕ್ಕಿ ಸವೆದು ಚಿಕ್ಕ ತುಂಡಾದ ಒನಕೆಯನ್ನು ಆ ಬೇಟೆಗಾರನು ತನ್ನ ಬಾಣದ ತುದಿಯಲ್ಲಿ ಸಿಕ್ಕಿಸಿದ.

ಒಂದು ದಿನ ಬಲರಾಮ, ಕೃಷ್ಣ, ಪ್ರದ್ಯುಮ್ನ ಮುಂತಾದ ಎಲ್ಲ ಯಾದವರು ಒಂದು ಮಹೋತ್ಸವದ ಜಾತ್ರೆಯನ್ನು ಮಾಡಲು ಆ ಜಲಾಶಯದ ಸಮೀಪದ ಬಂದರು. ವನ ಭೋಜನವನ್ನು ಮಾಡಿದರು. ಸ್ವಚ್ಛಂದಚಾರಿಗಳಾದ ಯಾದವರು ಯಾವದೇ ವಿಧಿ ನಿಷೇಧಗಳ ಪರಿವೆಯಿಲ್ಲದೇ ಯಥೇಚ್ಛವಾಗಿ ಮದ್ಯ ಕುಡಿದರು ಮಾಂಸ ತಿಂದರು. ಅದರಿಂದ ಮದ ಅವರಲ್ಲಿ ತುಂಬಿತು. ಸುರಾಪಾನದ ದುಂಧಿಯಲ್ಲಿ ಎಲ್ಲರೂ ಬಡೆದಾಡಲು ಪರಸ್ಪರ ಹೋರಾಡಲು ಪ್ರಾರಂಭ ಮಾಡಿದರು. ಅದೇ ಸರೋವರದಲ್ಲಿ ಬೆಳೆದ ವಜ್ರಕಠೋರವಾದ ಆ ಜೊಂಡು ಹುಲ್ಲಿನ ತುಂಡುಗರಿಕೆಗಳನ್ನು ಕೈಯಲ್ಲಿ ಹಿಡಿದು ಒಬ್ಬರಿಗೊಬ್ಬರು ಹೊಡೆದು ಬಡಿದು ಮಡಿದು ಬಿದ್ದರು. ಪ್ರದ್ಯುಮ್ನನೇ ಮೊದಲಾದ ಎಲ್ಲ ಯಾದವರು ಕೆಲವೇ ಗಳಿಗೆಯಲ್ಲಿ ಪರಸ್ಪರವಾಗಿ ಪ್ರಹಾರಗೈದು ಪ್ರಾಣಾಂತಿಕ ಪೆಟ್ಟಿನಿಂದ ಮರಣ ಹೊಂದಿದರು.

ಹೀಗೆ ಆ ಒನಕೆಯ ತುಂಡಿನ ನೆಪದಿಂದ ಎಲ್ಲರೂ ಹೋರಾಡಿಹತರಾದ ಬಳಿಕ ಶ್ರೀಕೃಷ್ಣ ಮಾತ್ರ ಅನೇಕ ಬಳ್ಳಿಗಳಿಂದೊಡಗೂಡಿದ ಒಂದು ಹೆಮ್ಮರದ ಬಳಿಗೆ ಬಂದು ಅದರ ಕೆಳಗೆ ಒರಗಿದ. ಮೊಣಕಾಲ ಮೇಲೆ ಪಾದವನ್ನು ಇಟ್ಟು ವಿಶ್ರಮಿಸಿದಾಗ ಒಬ್ಬ ಬೇಡನು ಬಂದು ಧ್ವಜವಜ್ರಾಂಕುಶ ಚಿನ್ಹದಿಂದ ಶ್ರೀಹರಿಯ ಪಾದಕಮಲವನ್ನು ಒಂದು ಚಿಗರೆಯ ಮರಿ ಇರಬಹುದು ಎಂದು ಭಾವಿಸಿ ಒನಕೆಯ ತುಂಡನ್ನು ಬಾಣದ ತುದಿಯಲ್ಲಿ ಸಿಕ್ಕಿಸಿ ಗುರಿಯಿಟ್ಟು ಕೃಷ್ಣನ ಕಾಲಿಗೆ ಹೊಡೆದ. ಅನಂತರ ಅವನಿಗೆ ತಿಳಿಯಿತು ತಾನು ಹೊಡೆದದ್ದು ಮೃಗ ಅಲ್ಲ ಮಹಾವಿಷ್ಣು ಎಂದು. ಕೂಡಲೇ ಅವನು ಭಯಭ್ರಾಂತನಾಗಿ ನಡುಗುತ್ತ ಕೃಷ್ಣನ ಬಳಿಗೆ ಬಂದು ಕೈ ಮುಗಿದು ಗಲ್ಲ ಬಡಿದುಕೊಂಡು ಬಿನ್ನಹ ಮಾಡಿಕೊಂಡ : ''ಭಗವನ್, ನನಗೆ ತಿಳಿಯದೇ ನಾನು ಮಹಾಪರಾಧ ಮಾಡಿದೆ. ಕ್ಷಮಿಸು''. ಹೀಗೆ ಮತ್ತೆ ಮತ್ತೆ ಕೃಷ್ಣನ ಕಾಲಿಗೆ ಎರಗಿ ಬೇಡಿಕೊಳ್ಳುವ ಆ ಬೇಡನನ್ನು ಭಗವಂತನು ತನ್ನ ಎರಡೂಕೈಗಳಿಂದ ಎತ್ತಿ ''ನಿನ್ನಿಂದ ಯಾವ ಅಚಾತುರ್ಯವೂ ನಡೆದಿಲ್ಲ. ನೀನು ಹೆದರಬೇಡ'' ಎಂದು ಸಂತೈಸಿದ. ಮತ್ತು ಅವನಿಗೆ ಅಭಯದಾವನ್ನು

ನೀಡಿದ. ಅನಂತರ ಅವನಿಗೆ ಯೋಗಿಗಳಿಗೆ ಮಾತ್ರ ಹೋಗಲು ಸಾಧ್ಯವಿದ್ದ ವಿಷ್ಣುಲೋಕವನ್ನೂ ಶಾಶ್ವತ ಸುಖವನ್ನೂ ಕರುಣಿಸಿದ.

ಅದೇ ಮುಹೂರ್ತದಲ್ಲಿ ಮಹಾವಿಷ್ಣು ಆದ ಶ್ರೀಕೃಷ್ಣನು ತನ್ನ ಮನುಷ್ಯರೂಪವನ್ನು ತನ್ನ ಮಡದಿ ಮಕ್ಕಳು ಸಹಿತವಾಗಿ ಇಲ್ಲಿಯೇ ಬಿಟ್ಟು ಉಪನಿಷನ್ಮಯವಾದ ದೇದೀಪ್ಯಮಾನವಾದ ವಾಸುದೇವಲೋಕಕ್ಕೆ ಪ್ರಯಾಣ ಮಾಡಿದ. ಸಾವಿರ ಸೂರ್ಯರಿಗೆ ಸಮಾನವಾದ ಕಾಂತಿಯಿಂದ ಬೆಳಗುತ್ತ ದಿವ್ಯ ಅಪ್ಸರಾ ಸ್ತ್ರೀಯರಿಂದ ಒಡಗೂಡಿದ ಮತ್ತು ಸುವರ್ಣಮಯವಾದ ಆ ವಾಸುದೇವ ಲೋಕ. ಇದಕ್ಕೂ ಮೊದಲು ಕೃಷ್ಣನ ಸಾರಥಿಯಾದ ದಾರಕನು ಕೃಷ್ಣನ ರಥವನ್ನು ತೆಗೆದುಕೊಂಡು ಅವನ ಬಳಿಗೆ ಬಂದ.

ಆಗ ಶ್ರೀಹರಿ ದಾರುಕನಿಗೆ ಕೂಡಲೇ ಅರ್ಜುನನನ್ನು ಕರೆದುಕೊಂಡು ಬಾ ಎಂದು ಅಪ್ಪಣೆ ಮಾಡಿದ. ಅವನ ಅಪ್ಪಣೆಯಂತೆ ದಾರುಕ ವನೋವೇಗದಿಂದ ಓಡುವ ಆ ರಥದಿಂದ ಹಸ್ತಿನಾವತಿಗೆ ಹೋಗಿ ಅರ್ಜುನನನ್ನು ಕೃಷ್ಣನಿದ್ದಲ್ಲಿಗೆ ಕರೆದುಕೊಂಡು ಬಂದ. ಆಗ ಅರ್ಜುನ ಕೈ ಮುಗಿದು ನಾನು ಏನು ಮಾಡಲಿ ಎಂದು ವಿನಯದಿಂದ ಕೇಳಿದ. ಅದಕ್ಕೆ ಕೃಷ್ಣನು ''ಅರ್ಜುನ, ನಾನು ನನ್ನ ವಿಷ್ಣುಲೋಕಕ್ಕೆ ಪ್ರಯಾಣ ಮಾಡುತ್ತೇನೆ ನೀನು ದ್ವಾರಕೆಗೆ ಹೋಗಿ ನನ್ನ ಅಷ್ಟ ಮಹಿಷಿಯರನ್ನೆಲ್ಲ ಇಲ್ಲಿ ಕರೆತಂದು ನನ್ನೆಡೆಗೆ ಕಳಿಸಿಕೊಡು'' ಎಂದು ಹೇಳಿದ. ಅದರಂತೆ ಅರ್ಜುನನು ದ್ವಾರಕಾಪಟ್ಟಣಕ್ಕೆ ತೆರಳಿದ.

ಆಗ ದೇವತೆಗಳೆಲ್ಲರೂ ಕೃಷ್ಣನ ಮೇಲೆ ಪುಷ್ಪವೃಷ್ಟಿಯನ್ನು ಸುರಿದರು. ಕೃಷ್ಣನು ತನ್ನ ಮನುಷ್ಯ ದೇಹವನ್ನು ಬಿಟ್ಟು ತನ್ನ ಮೂಲವಾದ ವಾಸುದೇವ ಶರೀರವನ್ನು ಧಾರಣ ಮಾಡಿ ಗರುಡಾರೂಢನಾಗಿ ತನ್ನ ಮಹಾಲೋಕಕ್ಕೆ ಪ್ರಸ್ಥಾನ ಬೆಳೆಸಿದ.

ಇತ್ತ ಅರ್ಜುನನು ದಾರುಕನೊಡನೆ ದ್ವಾರಕಾಪಟ್ಟಣಕ್ಕೆ ಬಂದ. ವಸುದೇವ ಉಗ್ರಸೇನರಿಗೂ ರುಕ್ಮಿಣಿಯೇ ಮೊದಲಾದ ಅಷ್ಟ ಮಹಿಷಿಯರಿಗೂ ಉಳಿದ ಎಲ್ಲ ಕೃಷ್ಣನ ಪರಿವಾರಕ್ಕೂ ಕೃಷ್ಣನ ಪರಂಧಾಮದ ಪ್ರಯಾಣವನ್ನು ತಿಳಿಸಿದ. ಅದನ್ನು ಕೇಳಿ ದುಃಸ್ಸಹ ದುಃಖೋದ್ರೇಕದಿಂದ ವಿಹ್ವಲರಾದ ಅವರೆಲ್ಲರೂ ಅಂತಃಪುರದಿಂದ ಹೊರಬಿದ್ದು ಕೃಷ್ಣನಿದ್ದಲ್ಲಿಗೆ ಬಂದರು. ಮತ್ತು ಪರಸ್ಪರ ಬಡೆದಾಡಿ ಮಡಿದು ಬಿದ್ದ ಅಸಂಖ್ಯ ಯಾದವ ವೀರರನ್ನು ನೋಡಿ ದುಃಖದಗ್ಧರಾಗಿ ಹೋದರು. ರಾಮಕೃಷ್ಣ, ಪ್ರದ್ಯುಮ್ನ, ಅನಿರುದ್ಧ, ಉಳಿದೆಲ್ಲ ತರುಣ ಯಾದವರು. ಕೃಷ್ಣನ ಪುತ್ರ ಪೌತ್ರರು ಯಾವ ಕಾರಣವೂ ಇಲ್ಲದೇ ಆಕಸ್ಮಿಕವಾಗಿ ಒಮ್ಮೆಲೇ ಮಡಿದು ಹೋದುದನ್ನು ನೋಡಿ ಕಿಂಕರ್ತವ್ಯ ಮೂಢರಾಗಿ ಏನೂ ತಿಳಿಯದೇ ಕರುಣಾ ಜನಕವಾಗಿ ರೋಧಿಸಿದರು. ಪರಸ್ಪರ ಹೊಡೆದಾಡಿ ತಮ್ಮ ತಮ್ಮ ಬಂಧು ಮಿತ್ರರಿಂದಲೇ ಮರಣ ಹೊಂದಿದ ಆ ಯದುಕುಮಾರರಿಗೆ ಅಂತ್ಯ ಸಂಸ್ಕಾರವನ್ನು ಮಾಡಲಿಕ್ಕಾಗಿ ದೊಡ್ಡದಾದ ಚಿತೆಯನ್ನು ಸಿದ್ಧಪಡಿಸಿದರು. ಆ ಸರೋವರದ ದಂಡೆಯ ಮೇಲೆ ಮೃತರಾಗಿ ಬಿದ್ದ ಯಾದವ ವೀರರಿಗೆಲ್ಲ ಅಗ್ನಿ ಸಂಸ್ಕಾರವನ್ನು ಮಾಡಿದರು. ಮತ್ತು ಶ್ರೀಕೃಷ್ಣ,ಹಾಗೂ ಬಲರಾಮ, ಪ್ರದ್ಯುಮ್ನ ಅನಿರುದ್ಧ ಹಾಗೂ ಉಳಿದೆಲ್ಲ ತಮ್ಮ ಪುತ್ರ ಪೌತ್ರಾದಿಗಳ ದುಃಖವನ್ನು ತಾಳಲಾರದೇ ಇನ್ನು ಮೇಲೆ ತಾವು ಏಕೆ ಭೂಮಿಯ ಮೇಲೆ ಬದುಕಿ ಇರಬೇಕು ಎಂದು ಯೋಚಿಸಿ ವಸುದೇವ, ಉಗ್ರಸೇನ ಅಕ್ರೂರ ಮೊದಲಾದ ಯಾದವ ವೃದ್ಧರೆಲ್ಲರೂ ತಮ್ಮ ಪತ್ನೀ ಸಹಿತರಾಗಿಯೇ ಆ ಚಿತಾಗ್ನಿಯಲ್ಲಿ ಹೊಕ್ಕು ಅಗ್ನಿ ನಾರಾಯಣನಿಗೆ ಆಹುತಿಯಾದರು.

ಅನಂತರ ಅರ್ಜುನನು ಚಂದನ, ಅಗರು, ಶ್ರೀಗಂಧ ಮೊದಲಾದ ಸುಗಂಧಿ ಕಾಷ್ಠಗಳಿಂದ ಒಂದು ಬೇರೆ ಚಿತೆಯನ್ನು ಸಿದ್ಧಗೊಳಿಸಿದ. ಅದರಲ್ಲಿ ವೈದಿಕ ಅಗ್ನಿಯನ್ನು ಹೊತ್ತಿಸಿದ. ಅದರ ಮೇಲೆ ಕೃಷ್ಣನ ದೇಹವನ್ನು ಇಟ್ಟು ಶಾಸ್ತ್ರೋಕ್ತ ವಿಧಿಯಿಂದ ಅದಕ್ಕೆ ಅಂತ್ಯ ಸಂಸ್ಕಾರವನ್ನು ಮಾಡಿದ. ಕೃಷ್ಣನ ಪಟ್ಟ ಮಹಿಷಿಯರಾದ ರುಕ್ಮಿಣಿ, ಸತ್ಯಭಾಮಾ, ಕಾಲಿಂದೀ, ಮಿತ್ರವಿಂದಾ, ಜಾಂಬವತೀ, ನಾಗ್ನಜಿತಿ, ಸುಶೀಲಾ, ಸುಲಕ್ಷಣಾ, ಎಂಬ ಮಹಾರಾಣಿಯರು ಕೃಷ್ಣನ ಆ ಚಿತಾಗ್ನಿಯಲ್ಲಿ ಪ್ರವೇಶಿಸಿ ಕೃಷ್ಣನು ಬಿಟ್ಟು ಹೋದ ಆ ಮಾನುಷ ಶರೀರವನ್ನು ತಬ್ಬಿಕೊಂಡು ಅದೇ ಅಗ್ನಿಯಲ್ಲಿ ತಮ್ಮ ದೇಹ ದಹನವನ್ನು ಮಾಡಿಕೊಂಡು ದಿವ್ಯ ವಿಮಾನವನ್ನು ಅರೋಹಣ ಮಾಡಿ ವಿಷ್ಣು ಲೋಕಕ್ಕೆ ಪ್ರಯಾಣವನ್ನು ಮಾಡಿದರು. ರೇವತಿಯು ಬಲರಾಮನ ಶರೀರವನ್ನು ಆಲಿಂಗಿಸಿಕೊಂಡು ಅಗ್ನಿಪ್ರವೇಶವನ್ನು ಮಾಡಿದಳು. ಅನಂತರ ದಿವ್ಯದೇಹವನ್ನು ಹೊಂದಿ ದಿವ್ಯ ವಿಮಾನರೂಢಳಾಗಿ ಸಂಕರ್ಷಣ ಲೋಕವನ್ನು ಹೊಂದಿದಳು. ಇದರಂತೆ ರುಕ್ಮಿಯ ಮಗಳು ಪ್ರದ್ಯುಮ್ನನ ದೇಹವನ್ನು ಉಷಾದೇವಿಯು ಅನಿರುದ್ಧನ ದೇಹವನ್ನೂ ಆಲಿಂಗಿಸಿ ಅಗ್ನಿಪ್ರವೇಶವನ್ನು ಮಾಡಿದರು ಅರ್ಜುನ ಇವರೆಲ್ಲರ ಔರ್ಧ್ವದೇಹಿಕ ಕೃತ್ಯವನ್ನು ಮಾಡಿ ಮುಗಿಸಿದ. ಕೃಷ್ಣನ ಸಾರಥಿಯಾದ ದಾರುಕನು ಕೂಡ ಸುಗ್ರೀವ ಎಂಬ ಕೃಷ್ಣನ ದಿವ್ಯವಾದ ರಥವನ್ನು ಆರೋಹಣ ಮಾಡಿ ವಿಷ್ಣುಲೋಕ ಪ್ರಯಾಣ ಬೆಳೆಸಿದ. ಪಾರಿಜಾತ ವೃಕ್ಷ ಮತ್ತು ಸುಧರ್ಮಾ ಎಂಬ ದೇವಸಭೆ ಎರಡೂ ಮತ್ತೆ ಮರಳಿ ಇಂದ್ರಲೋಕಕ್ಕೆ ಹೊರಟ ಹೋದವು.

ಕೃಷ್ಣನು ಪರಂಧಾಮಕ್ಕೆ ಪ್ರಯಾಣ ಬೆಳೆಸಿದ ಬಳಿಕ ದ್ವಾರಕಪಟ್ಟಣವು ಸಮುದ್ರದಲ್ಲಿ ಮುಳುಗಿತು. ಅರ್ಜುನನು ಕೃಷ್ಣನ ಹದಿನಾರು ಸಾವಿರ ಹೆಂಡಂದಿರನ್ನು ತನ್ನೊಡನೆ ಕರೆದು ಕೊಂಡು ಹಸ್ತಿನಾವತಿಗೆ ತೆರಳಿದ. ದಾರಿಯಲ್ಲಿ ಕೆಲವು ಕಳ್ಳರು ಅವನನ್ನು ತಡೆದು ಆ ಸ್ತ್ರೀಯರನ್ನೆಲ್ಲ ಅಪಹರಿಸಿಕೊಂಡು ಹೋಗಿ ಬಿಟ್ಟರು. ಅದನ್ನು ಕಣ್ಣಿನಿಂದ ನೋಡುತ್ತಿದ್ದರೂ ಅರ್ಜುನನಿಗೆ ಏನೂ ಮಾಡಲಾಗಲಿಲ್ಲ. ಅವನಿಗೆ ತನ್ನ ಗಾಂಡೀವ ಧನುಸ್ಸನ್ನು ಎತ್ತಲಿಕ್ಕೆ ಕೂಡ ಆಗಲಿಲ್ಲ. ಅರ್ಜುನನ ಈ ದೌರ್ಬಲ್ಯವನ್ನು ಕಂಡು ಉತ್ಸಾಹಿತರಾದ ಆ ಕಳ್ಳರು ಆ ಕೃಷ್ಣನ ಕಾಂತೆಯರನ್ನೆಲ್ಲ ಬಲಾತ್ಕಾರದಿಂದ ಸೆಳೆದುಕೊಂಡೊಯ್ದರು.

ಇವರೆಲ್ಲರೂ ಹಿಂದೆ ಗಂಧರ್ವಸ್ತ್ರೀಯರಾಗಿದ್ದರು. ಕೆಲವರು ದೇವತಾಸ್ತ್ರೀಯರು. ಇವರೆಲ್ಲರೂ ಅಷ್ಟಾವಕ್ರಮುನಿಯನ್ನು ಕಂಡು ನಕ್ಕರು. ಅದರಿಂದ ಸಿಟ್ಟಿಗೆದ್ದ ಆ ಋಷಿ ನೀವೆಲ್ಲ ವೇಶ್ಯಾಸ್ತ್ರೀಯರಾಗಿ ಎಂದು ಶಾಪಕೊಟ್ಟ. ಅದರಿಂದ ಪಶ್ಚಾತ್ತಾಪದಗ್ಧರಾದ ಗಂಧರ್ವಕನ್ಯೆಯರು ಆ ಮುನಿಯನ್ನು ಕ್ಷಮಿಸಬೇಕೆಂದು ಕೇಳಿ ಬೇಡಿಕೊಂಡಾಗ ಆ ಮುನಿ ಒಳ್ಳೆಯದಾಗಲಿ ಎಂದು ಆಶೀರ್ವಾದ ಮಾಡಿದ. ಅದರ ಪ್ರಭಾವದಿಂದ ಅವರು ಶ್ರೀಕೃಷ್ಣನ ಕೈಹಿಡಿದು ಅವನ ಸೌಭಾಗ್ಯವತಿಯರು ಎನಿಸಿಕೊಂಡರು.

ಇತ್ತ ಅರ್ಜುನನು ಕಳ್ಳರಿಂದ ಸೋತು ಕೃಷ್ಣನೊಡನೆಯೇ ನನ್ನ ಶಕ್ತಿ, ಪರಾಕ್ರಮ ಐಶ್ವರ್ಯ ಎಲ್ಲವೂ ಹೋಯಿತು ಎಂದು ಹಸ್ತಿನಾವತಿಗೆ ಬಂದ.

ಈ ಪಾವನವಾದ ಕೃಷ್ಣನ ಚರಿತ್ರವನ್ನು ಪಾರ್ವತಿ, ನಾನು ನಿನಗೆ ಹೇಳಿದ್ದೇನೆ. ಇದನ್ನು ಭಕ್ತಿಯಿಂದ ಸ್ಮರಣ ಪಠಣ ಮಾಡಿದವರಿಗೆ ವಿಷ್ಣುಲೋಕ ಪ್ರಾಪ್ತಿಯು ನಿಶ್ಚಿತವಾಗಿಯೂ ಆಗುವದು.

**ಮಹಾದೇವ:-** ಮಾನವರು ಸದಾಕಾಲದಲ್ಲಿಯೂ ಕೃಷ್ಣಾಯನಮಃ ಎಂಬ ಮಂತ್ರವನ್ನು ಉಚ್ಚಾರ ಮಾಡುತ್ತಲೇ ಇರಬೇಕು.

**ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ**
**ಪ್ರಣತ ಕ್ಲೇಶ ನಾಶಾಯ ಗೋವಿಂದಾಯ ನಮೋ ನಮಃ**

ಈ ಮಂತ್ರವನ್ನು ಪ್ರತಿದಿನವೂ ಭಕ್ತಿಯಿಂದ ಪಠಣ ಮಾಡುವವರು ಸರ್ವಪಾಪಗಳಿಂದ ಮುಕ್ತರಾಗಿ ವಿಷ್ಣುಲೋಕವನ್ನು ಹೊಂದುತ್ತಾರೆ, ಗಿರಿರಾಜ ನಂದಿನಿ.

**ಸರ್ವೇಷಾಮೇವ ದೇವಾ ನಾಮೀಶ್ವರೋಽಸೌ ಜನಾರ್ದನಃ**
**ರಕ್ಷಣಾಯ ಚ ಲೋಕಾನಾಂ ಅವಸ್ಥಾಂತರ ಮೇತಿ ಚ**

ಈ ಜನಾರ್ದನನು ಎಲ್ಲ ದೇವತೆಗಳಿಗೂ ಅಧೀಶ್ವರ ಜಗದ್ರಕ್ಷಣೆಗಾಗಿಯೇ ಅವನು ಬೇರೆ ಬೇರೆ ರೂಪಗಳನ್ನು ತೆಗೆದುಕೊಂಡು ಬರುತ್ತಾನೆ. ಪೂರ್ವಕಾಲದಲ್ಲಿ ತ್ರಿಪುರಾಸುರನನ್ನು ಸಂಹಾರ ಮಾಡುವಾಗ ನಾನು ಶ್ರೀಹರಿಯನ್ನು ಪೂಜಿಸಿದೆ. ಬುದ್ಧರೂಪವನ್ನು ಧರಿಸಿ ವೈರಿಗಳನ್ನೆಲ್ಲ ಮೋಹಗೊಳಿಸಿದ. ಆ ಮೋಹಕವಾದ ಬೌದ್ಧ ಶಾಸ್ತ್ರದಿಂದ ಮೋಹಿತರಾಗಿ ದೈತ್ಯರೆಲ್ಲರೂ ಧರ್ಮಶಾಸ್ತ್ರದಿಂದ ವಿಮುಖರಾದರು. ಎಲ್ಲ ಬೌದ್ಧರು ಎಲ್ಲ ಧರ್ಮಗಳನ್ನೂ ಪರಿತ್ಯಜಿಸಿದರು. ನಾನು ನಾರಾಯಣಾಸ್ತ್ರದಿಂದ ಎಲ್ಲ ದೇವಶತ್ರುಗಳನ್ನೂ ಸಂಹರಿಸಿದೆ. ಮತ್ತು ಕಲಿಯುಗದ ಕೊನೆಯ ಭಾಗದಲ್ಲಿ ಆ ಶ್ರೀಹರಿಯು ಬ್ರಾಹ್ಮಣರ ಮನೆಯಲ್ಲಿ ಹುಟ್ಟಿ ಕ್ರೂರರಾದ ಮ್ಲೇಂಚ್ಛರನ್ನೂ ಸಂಹರಿಸುತ್ತಾನೆ ಕಲ್ಕಿರೂಪದಿಂದ.

ಪಾರ್ವತಿ, ಜಗದೊಡೆಯನಾದ ಆ ಶ್ರೀಹರಿಯ ಬೇರೆ ಬೇರೆ ಅವತಾರಗಳನ್ನು ನಾನು ನಿನಗೆ ಹೇಳಿದೆ. ನಿನಗೆ ಮತ್ತೆ ಏನನ್ನು ಕೇಳುವ ಅಪೇಕ್ಷೆ ಇದೆ ಹೇಳು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಜರಾಸಂಧವಧ, ಕೃಷ್ಣ ಸುದಾಮರ ಭೆಟ್ಟಿ ಮಹಾಭಾರತ ಆಖ್ಯಾನ ಎಂಬ ಎರಡುನೂರ*
*ಮೂವತ್ತನಾಲ್ಕನೇಯ ಅಧ್ಯಾಯ ಮುಗಿದುದು*

—೦—

**ಪಾರ್ವತಿ:-** ದೇವಶ್ರೇಷ್ಠನಾದ ಮಹಾದೇವ, ನೀವು ನನ್ನ ಮೇಲೆ ಕೃಪೆ ಮಾಡಿ ಶ್ರೀಹರಿಯ ಅವತಾರದ ವೈಭವವನ್ನು ನಿರೂಪಿಸಿದಿರಿ. ಅದರಲ್ಲಿಯೂ ಬಲರಾಮ ಕೃಷ್ಣರ ಚರಿತೆಯು ಅತ್ಯಂತ ಆಶ್ಚರ್ಯಕರ. ಸೂರ್ಯವಂಶದ ರಾಮಚಂದ್ರ ಚಂದ್ರವಂಶದ ಶ್ರೀಕೃಷ್ಣ ಇವರಿಬ್ಬರ ಚಾರುತರವೂ ಚೇತೋಹಾರಿಯೂ ಆದ ಚರಿತ್ರವನ್ನು ನೂರು ಕಲ್ಪ ಕೇಳಿದರೂ ನನಗೆ ಸಾಕು ಎನಿಸುವುದಿಲ್ಲ. ಈ ಹರಿಕಥಾಮೃತವು ನಿಜವಾಗಿಯೂ ಜೀವಿಗಳಿಗೆ ಪರಮಾನಂದದಾಯಕ. ಈಗ ನಾನು ಆ ಶ್ರೀವಿಷ್ಣುವಿನ ಮಾಹಾತ್ಮ್ಯ ಮತ್ತು ಅವನ ಮೂರ್ತಿ ಸಾಲಿಗ್ರಾಮ, ಪ್ರತಿಮಾದಿಗಳ ಪೂಜೆಯ ವಿಧಾನವನ್ನು ನಿಮ್ಮ ಮುಖದಿಂದ ಕೇಳಲು ಇಚ್ಛಿಸುತ್ತೇನೆ ದಯವಿಟ್ಟು ಹೇಳಿರಿ.

**ಮಹಾದೇವ:-** ದೇವಿ, ದೇವೋತ್ತಮನಾದ ಶ್ರೀಹರಿಯ ಪ್ರತಿಮೆಗಳ ಸ್ಥಾಪನೆಯು ಎರಡು ವಿಧವಾಗಿವೆ. ಆ ಪ್ರತಿಮೆಗಳೂ ಎರಡೂ ವಿಧವಾಗಿವೆ. ಸ್ವಯಂ ವ್ಯಕ್ತ ಮೂರ್ತಿಗಳು ಸ್ಥಾಪಿತ ಮೂರ್ತಿಗಳು ಎಂದು. ಕಲ್ಲು, ಮಣ್ಣು, ಕಟ್ಟಿಗೆ, ಪಂಚಲೋಹ ಮುಂತಾದವುಗಳಿಂದ ಶ್ರೀಹರಿಯ ಪ್ರತಿಮೆಯನ್ನು ಮಾಡಿಸಿ ವೇದ, ಸ್ಮೃತಿ ಹಾಗೂ ಆಗಮಗಳಲ್ಲಿ ಹೇಳಿದಂತೆ ವಿಧಿಪೂರ್ವಕವಾಗಿ ಮೂರ್ತಿಸ್ಥಾಪನೆಗೈದು ಪೂಜೆ ಮಾಡುವುದು ಒಂದು ವಿಧ. ಇದಕ್ಕೆ ಸ್ಥಾಪನಾ ವಿಧಿ ಎನ್ನುವರು. ಕಲ್ಲು ಕಟ್ಟಿಗೆ ಮುಂತಾದವುಗಳಲ್ಲಿ ಸ್ವಯಂ ಶ್ರೀಹರಿಯು ತಾನಾಗಿಯೇ ಭಕ್ತರ ಹಿತಕ್ಕಾಗಿ ಒಲಿದು ಸನ್ನಿಹಿತನಾಗಿದ್ದರೆ ಅದು ಸ್ವಯಂವ್ಯಕ್ತಸ್ಥಾನ ಎನಿಸುತ್ತದೆ. ದೇವತೆಗಳು ಹಾಗೂ ಮಹರ್ಷಿಗಳು ಮತ್ತು ಮಹಾಜ್ಞಾನಿಗಳ ಭಕ್ತಿಗೆ ಪ್ರಸನ್ನನಾಗಿ ಅವರಿಗೆ ತನ್ನನ್ನು ಪೂಜೆ ಮಾಡಲು ಅನುಕೂಲ ವಾಗಲೆಂದು ಒಮ್ಮೊಮ್ಮೆ ಶ್ರೀಹರಿಯು ಕಲ್ಲು ಕಟ್ಟಿಗೆಗಳಲ್ಲಿ ತಾನಾಗಿ ಅಭಿವ್ಯಕ್ತನೂ ಸನ್ನಿಹಿತನೂ ಆಗುತ್ತಾನೆ. ಯಾರಿಗೆ ಪ್ರಸನ್ನನಾಗಿ ಶ್ರೀಹರಿಯು ಯಾವ ಪ್ರತಿಮೆಯಲ್ಲಿ ಅವಿರ್ಭವಿಸುವನೋ ಅವರು ಅಲ್ಲಿಯೇ ಆ ಭಗವಂತನನ್ನು ಭಕ್ತಿಯಿಂದ ಪೂಜಿಸಬೇಕು.

ಇಕ್ಷ್ವಾಕು ರಾಜರಿಗೆ ಸುಪ್ರಸನ್ನನಾಗಿ ಶ್ರೀರಂಗನಾಥ ಸ್ವಾಮಿಯು ಭುಜಂಗ ಶಾಯಿಯಾಗಿಯೇ ಪ್ರಾದುರ್ಭೂತ ಆಗಿದ್ದ. ಶ್ರೀರಂಗಪಟ್ಟಣದಲ್ಲಿ ಇರುವ ಶ್ರೀರಂಗ ಶಾಯಿಯಾದ ಆ ಶ್ರೀಹರಿಯನ್ನು ವಿಧಿಪೂರ್ವಕವಾಗಿ ಪೂಜಿಸಬೇಕು. ಅದು ಒಂದು ಶ್ರೇಷ್ಠವಾದ ಸ್ವಯಂ ವ್ಯಕ್ತ ಸ್ಥಾನ.

ಇದರಂತೆ ಕಾಶಿಯಲ್ಲಿ ನಾನು ಮಾಡಿದ ಪೂಜೆ ಹಾಗೂ ಪರ್ಯುಪಾಸನೆಗಳಿಗೆ ಪ್ರಸನ್ನನಾಗಿ ಮಾಧವರೂಪದಿಂದ ವ್ಯಕ್ತನಾಗಿದ್ದಾನೆ ಶ್ರೀಹರಿ. ಆದ್ದರಿಂದ ನಾನು ಭಕ್ತಿಯಿಂದ ಅವನನ್ನು ಕಾಶಿಯಲ್ಲಿ ಪೂಜಿಸುತ್ತೇನೆ. ಶ್ರೀಹರಿಯು ಯಾವ ಯಾವ ಮನೆ ಅಥವಾ ಮಂದಿರಗಳಲ್ಲಿ ಸ್ವಯಂ ವ್ಯಕ್ತನಾಗಿ ಸನ್ನಿಹಿತನಾಗಿರುವನೋ ಅಲ್ಲಿ ಎಲ್ಲ ಕಡೆಗೂ ಹೋಗಿ ನಾನು ಆ ಭಗವಂತನನ್ನು ಪೂಜಿಸಿ ಆನಂದ ಪಡುತ್ತೇನೆ. ಸ್ಥಾಪನೆ ಮಾಡಿದ ಮೂರ್ತಿಗಳಲ್ಲಿ ಸರಿಯಾದ ಪ್ರತಿಷ್ಠಾಪನೆ, ಆವಾಹನೆ, ಪೂಜೆ ಆರಾಧನೆಗಳು ಇಲ್ಲದಿದ್ದರೆ ಭಗವಂತನ ಸನ್ನಿಧಾನ ಬರುವುದಿಲ್ಲ. ಜನರಿಗೆ ಫಲವೂ ಲಭಿಸುವುದಿಲ್ಲ. ಆದರೆ

ಸ್ವಯಂವ್ಯಕ್ತ ಸ್ಥಳಗಳಲ್ಲಿ ಮಾತ್ರ ದೊಡ್ಡವರ ಭಕ್ತಿಗೆ ಪ್ರಸನ್ನನಾಗಿ ಪರಮಾತ್ಮನು ಸ್ವಯಂ ಪ್ರಾದುರ್ಭೂತನಾಗಿ ಪ್ರಕಟವಾದರೆ ಈ ಆವಾಹನಾದಿಗಳಿಲ್ಲದೇ ಕೇವಲ ಭಕ್ತಿಯುಕ್ತವಾದ ಸೇವಾ ಮತ್ತು ಉಪಾಸನೆಗಳಿಂದಲೇ ಪ್ರೀತನಾಗಿ ಪರಮಾತ್ಮನು ಫಲವನ್ನು ನೀಡುತ್ತಾನೆ.

ದೊಡ್ಡವರ ಸ್ಥಾಪನೆ ಮಾಡಿದ ಕಲ್ಲು ಕಟ್ಟಿಗೆ ಅಥವಾ ಪಂಚಲೋಹಾತ್ಮಕವಾದ ಮೂರ್ತಿಗಳಲ್ಲಿಯೂ ಶಾಸ್ತ್ರೋಕ್ತ ರೀತಿಯಿಂದ ಪ್ರತಿಷ್ಠಾಕಾರ್ಯವನ್ನು ನೆರವೇರಿಸಿ ಆಗಮೋಕ್ತಪದ್ಧತಿಯಿಂದ ಪೂಜೆಯನ್ನು ಮಾಡಿದರೆ ಭಗವಂತನು ಪ್ರೀತ ಪ್ರಸನ್ನನಾಗಿ ಭಕ್ತರಿಗೆ ಪ್ರತ್ಯಕ್ಷಗೋಚರನು ಆಗುವನು. ಈ ಸ್ಥಾಪಿತ ಪ್ರತಿಮೆಗಳಲ್ಲಿ ಎರಡು ವಿಧ. ಸ್ಥಿರ, ಚರ ಎಂದು. ಮಠ, ಮಂದಿರ ಮನೆಗಳಲ್ಲಿ, ದೇವಾಲಯಗಳಲ್ಲಿ, ನದಿತೀರಗಳಲ್ಲಿ ವೃಕ್ಷ ತಲದಲ್ಲಿ, ಮುಂತಾದ ಕಡೆಗಳಲ್ಲಿ ಸ್ಥಿರ ಮೂರ್ತಿಗಳನ್ನು ಸ್ಥಾಪಿಸಿ ಶಾಸ್ತ್ರ ಪುರಾಣೋಕ್ತ ಪದ್ಧತಿಯಿಂದ ಭಗವಂತನನ್ನು ಪೂಜಿಸಬೇಕು. ಚರ ಪ್ರತಿಮೆಗಳಲ್ಲಿಯೂ ಕೂಡ ದೊಡ್ಡವರಿಂದ ವಿಧಿಪೂರ್ವಕವಾಗಿ ಸ್ಥಾಪನಾ ಆವಾಹನೆಗಳನ್ನು ಮಾಡಿಸಿ. ಅಂಥ ಪ್ರತಿಮೆಗಳನ್ನು ಬೇಕಾದಲ್ಲಿ ತೆಗೆದುಕೊಂಡು ಹೋಗಿ ಪೂಜೆ ಮಾಡಬೇಕು. ಅಜ್ಞರಾಗಲೀ, ಪ್ರಾಜ್ಞರಾಗಲೀ, ಪಾಮರರಾಗಲೀ, ಯಾರಾದರೂ, ಭಕ್ತಿಯಿಂದ ಈ ಪ್ರತಿಮೆಗಳನ್ನು ಶಾಸ್ತ್ರೋಕ್ತ ವಿಧಿಯಿಂದ ಪೂಜಿಸಿ ಪುಣ್ಯ ಫಲವನ್ನು ಪಡೆಯಬಹುದು.

ಇದರಂತೆ ತಪಸ್ಸು, ಯಜ್ಞ, ದಾನ, ಧರ್ಮ, ವ್ರತ, ಉಪಾಸನೆಗಳಿಂದಲೂ ಭಗವಂತನ ಸೇವೆಯನ್ನು ಮಾಡಬೇಕು. ಈ ಭರತಖಂಡದಲ್ಲಿ ಭಗವಂತನು ಅನೇಕ ಕ್ಷೇತ್ರಗಳಲ್ಲಿ ನಿತ್ಯವೂ ಸನ್ನಿಹಿತನಾಗಿರುತ್ತಾನೆ. ಜಗನ್ನಾಥಪುರಿ, ಕೂರ್ಮಕ್ಷೇತ್ರ, ಬ್ರಹ್ಮಾಚಲ, ಕರವೀರ, ಕಾಶಿ, ಪ್ರಯಾಗ, ಶಾಲಿಗ್ರಾಮಬೆಟ್ಟ, ದ್ವಾರಕಾ, ನೈಮಿಷಾರಣ್ಯ, ಬದರಿಕಾಶ್ರಮ, ಮಥುರಾ, ವೆಂಕಟಾಚಲ, ಶ್ವೇತಾದ್ರಿ, ಪೌಂಡರೀಕ, ಕೃತಶೌಚ, ಗರುಡಾಚಲ, ಕಂಚಿ, ಅನಂತಶಯನ, ಶ್ರೀರಂಗ, ಬದರಿಕಾಶ್ರಮ, ವರಾಹಗಿರಿ, ವಾಮನಾಶ್ರಮ, ಮುಂತಾದ ಸ್ಥಳಗಳಲೆಲ್ಲ ಶ್ರೀಹರಿಯು ಸ್ವಯಂ ವ್ಯಕ್ತನಾಗಿ ಭಕ್ತಿಯಿಂದ ಸೇವಿಸುವ ಭಕ್ತರಿಗೆ ಇಷ್ಟಾರ್ಥಗಳನ್ನು ಕರುಣಿಸುತ್ತಾರೆ.

**ಸ್ವಯಮೇವ ಹಿ ಸಾನ್ನಿಧ್ಯಂ ಯಸ್ಮಿನ್ ಯಾತಿ ಜನಾರ್ದನಃ ।**
**ತಸ್ಥಾನಂ ಹಿ ಸ್ವಯಂವ್ಯಕ್ತಂ ವದಂತಿ ಮುನಯಃ ಶುಭಾಃ ॥**

ಎಲ್ಲಿ ಶ್ರೀಹರಿಯು ತಾನಾಗಿಯೇ ಅಭಿವ್ಯಕ್ತನಾಗಿ ಸನ್ನಿಹಿತನಾಗಿರುವನೋ, ಆ ಸ್ಥಾನಕ್ಕೆ ಮುನಿಗಳು ಸ್ವಯಂವ್ಯಕ್ತ ಸ್ಥಾನ ಎಂದು ಕರೆಯುತ್ತಾರೆ.

ಶ್ರೇಷ್ಠರಾದ ಭಗವದ್ಭಕ್ತರು ಶ್ರುತಿ, ಸ್ಮೃತಿ, ಪುರಾಣ, ಆಗಮೋಕ್ತ ಪದ್ಧತಿಗಳಿಂದ ದೇವರನ್ನು ಪ್ರತಿಷ್ಠೆಗೈದು ತಮ್ಮ ಮಂತ್ರ ಶಕ್ತಿಯಿಂದ ಅದರಲ್ಲಿ ಶ್ರೀಹರಿಯ ಸಾನಿಧ್ಯ ಬರುವಂತೆ ಮಾಡಿದ ಸ್ಥಳಗಳು ಶ್ರೀಹರಿಯ ವಿಶೇಷ ಸಾನಿಧ್ಯದಿಂದ ಫಲಪ್ರಾಪ್ತವಾಗುತ್ತವೆ. ಇಂಥ ಸ್ಥಾಪಿತ ಮೂರ್ತಿಗಳ ಪೂಜೆಯನ್ನು ಮನೆಯಲ್ಲಿಯೂ ಮಠ ಮಂದಿರ ದೇವಾಲಯಗಳಲ್ಲಿಯೂ ಭಕ್ತನು ಮಾಡಬೇಕು. ಪ್ರತಿಯೊಬ್ಬ ವಿಷ್ಣುಭಕ್ತನು ಪ್ರತಿನಿತ್ಯವೂ ಸಾಲಿಗ್ರಾಮ ಪೂಜೆಯನ್ನು ಮಾಡಬೇಕು. ಸಾಲಿಗ್ರಾಮ ಇಲ್ಲದ ಮನೆ, ಹಾಗೂ ಸಾಲಿಗ್ರಾಮ ಇದ್ದರೂ ಪೂಜೆ ಆಗದೇ ಇರುವ ಮನೆ ಇವೆರಡೂ ಅಪವಿತ್ರ. ಪ್ರತಿಯೊಬ್ಬ ಆಸ್ತಿಕರ ಮನೆಯಲ್ಲಿ ಪ್ರತಿ ದಿನವೂ ಸಾಲಿಗ್ರಾಮ ಪೂಜೆಯು ನಡೆಯಲೇಬೇಕು.

ಆ ಶ್ರೀಹರಿಯ ಸೇವೆಯು ಎಂಟು ವಿಧವಾಗಿದೆ.

**ಅರ್ಚನಂ ಮಂತ್ರ ಪಠನಂ ಯಾಗಯೋಗೌ ಮಹಾತ್ಮನಃ ।**
**ನಾಮಸಂಕೀರ್ತನಂ ಸೇವಾ ತಚ್ಚಿಹ್ನೈರಂಕನಂ ತಥಾ ॥**
ತದೀಯಾರಾಧನಂ ಚ ಸ್ಯಾನ್ನವಧಾಭಿದ್ಯತೇ ಶುಭೇ ।

೧ ಪೂಜೆ, ೨ ವೇದ ಪುರಾಣೋಕ್ತ ಮಂತ್ರಗಳ ಉಚ್ಚಾರಣೆ ೩ ಭಾಗವತ, ವೇದ, ಉಪನಿಷತ್ತು, ಗೀತೆ ಮುಂತಾದ ಪವಿತ್ರ ಗ್ರಂಥಗಳ ಪಾರಾಯಣ, ಯಜ್ಞ ಭಕ್ತಿಯೋಗದ ಉಪಾಸನೆ, ನಾಮಜಪ, ಅವನ ಗುಣಗಳ ಗಾಯನ, ಪ್ರದಕ್ಷಿಣ ನಮಸ್ಕಾರಾದಿ ಸೇವೆ, ಅವನ ಚಿನ್ಹಗಳಾದ ಶಂಖಚಕ್ರಾದಿಗಳನ್ನು ದೇಹದ ಮೇಲೆ ಧರಿಸುವದು, ಮತ್ತು ಪ್ರತಿದಿನವೂ ತಪ್ಪದೇ ಅವನ ಪೂಜೆಯನ್ನು ಮಾಡುವದು. ಹೀಗೆ ಒಂಭತ್ತು ಬಗೆಯಾಗಿ ಭಗವಂತನ ಸೇವೆಯನ್ನು ಮಾಡಬೇಕು.

**ನವಕರ್ಮ ವಿಧಾನೇಜ್ಯಾ ವಿಪ್ರಸ್ಯ ಸತತಂ ಸ್ಮೃತಾ ।**

ಈ ಒಂಭತ್ತು ವಿಧವಾದ ಪೂಜಾ ಪ್ರಕಾರಗಳಿಂದ ಭಗವಂತನ ಆರಾಧನೆಯನ್ನು ಬ್ರಾಹ್ಮಣನಾದವನು ಪ್ರತಿದಿನವೂ ಮಾಡಬೇಕು. ಕ್ಷತ್ರಿಯರಿಗೂ ಕೂಡ ಈ ಒಂಭತ್ತು ವಿಧವಾದ ಕರ್ಮಗಳಿಂದಲೇ ಭಗವಂತನ ಪೂಜೆಯು ವಿಹಿತವಾಗಿದೆ.

**ತತ್‌ಚಿನ್ಹೈರಂಕನಂ ಸೇವಾ ತದೀಯಾನಾಂಚ ಪೂಜನಂ ।**
**ಮಂತ್ರವರ್ಣಸ್ಯ ಜಪನಂ ನಾಮಸಂಕೀರ್ತನಂ ಹರೇಃ ॥**
**ವಂದನಂಚ ವಿಶಾಂ ಪ್ರೋಕ್ತಂ ಷಟ್ಕರ್ಮೇಜ್ಯಾ ವಿಧಾನತಃ ॥**

ವೈಶ್ಯರು, ಹರಿಯ ಚಿನ್ಹೆಗಳಾದ ಶಂಖಚಕ್ರಾದಿಗಳನ್ನು ಧರಿಸುವದು, ಭಗವದ್ಭಕ್ತರ ಸೇವೆ ಮಾಡುವುದು, ಸ್ವಯಂ ಆ ಶ್ರೀಹರಿಯ ಪೂಜೆ ಮಾಡುವದು, ಮಂತ್ರಜಪ, ಶ್ರೀಹರಿಯ ನಾಮ ಸಂಕೀರ್ತನ ಹಾಗೂ ಪ್ರದಕ್ಷಿಣೆ ನಮಸ್ಕಾರಗಳು ಇವು ಆರು ಕ್ಷತ್ರಿಯರಿಗೆ ವಿಹಿತವಾದ ಭಗವತ್ಪೂಜೆ ಆಗಿದೆ.

**ನಾಮಸಂಕೀರ್ತನಂ ಸೇವಾ ಪೂಜನಂ ವಂದನಂ ತಥಾ ।**
**ಅರ್ಚನಂ ಚ ತದೀಯಾನಾಂ ಪಂಚೇಜ್ಯಾ ಶೂದ್ರ ಜನ್ಮನಃ ॥**

ಭಗವಂತನ ನಾಮಸಂಕೀರ್ತನ, ಪ್ರದಕ್ಷಿಣ, ನಮಸ್ಕಾರಾದಿಗಳಿಂದ ಅಥವಾ ಗುಡಿಸುವದು, ಸಾರಿಸುವದು, ದೇವಾಲಯಗಳನ್ನು ಅಲಂಕರಿಸುವದು, ಮೊದಲಾದ ಸೇವೆ, ಪೂಜೆ, ಭಗವದ್ಭಕ್ತರ ಅರ್ಚನೆ, ವಂದನೆ, ಇವು ಐದು ಶೂದ್ರರಿಗೆ ವಿಹಿತವಾದ ಭಗವತ್ಪೂಜೆ.

ಎಲ್ಲ ವರ್ಣದವರೂ ಜಾತಿಯವರೂ ಭಗವಂತನ ಪೂಜೆಯನ್ನು ಪ್ರತಿಮೆ ಅಥವಾ ಶಾಲಿಗ್ರಾಮಗಳಿಗೆ ಮಾಡುವ ಮೊದಲು ತನ್ನ ಅಂತರಂಗದಲ್ಲಿಯೇ ಪರಮಾತ್ಮನ ಮಾನಸ ಪೂಜೆಯನ್ನು ತಮ್ಮ ಯೋಗ್ಯತೆಗೆ ತಕ್ಕಂತೆ ಮಾಡಬೇಕು. ಶ್ರೀಹರಿಯನ್ನು ಬಿಟ್ಟು ಬೇರೆ ಬೇರೆ ದೇವತೆಗಳನ್ನು ಪೂಜಿಸಬಾರದು. ಎಲ್ಲ ವಿಷ್ಣುಭಕ್ತರೂ ತಮ್ಮ ತಮ್ಮ ವರ್ಣ ಮತ್ತು ಆಶ್ರಮಗಳಿಗೆ ಅನುಗುಣವಾದ ವೇದ ಶಾಸ್ತ್ರ ಸ್ಮೃತಿಪುರಾಣಗಳಲ್ಲಿ ಹೇಳಿದಂತೆ ವಿಹಿತ ಕರ್ಮಗಳನ್ನು ಆಚರಿಸಬೇಕು. ಎಲ್ಲ ಮನುಷ್ಯರು ಭಗವಂತನ ಮಾನಸ ಪೂಜೆಯನ್ನು ಮಾಡಬೇಕು.

**ಶಮೋದಮಸ್ತಮಃ ಶೌಚಂ ಸತ್ಯಮಾಮಿಷ ವರ್ಜನಂ ।**
**ಅಸ್ತೇಯಮೇವಾऽ ಹಿಂಸಾಚ ಸರ್ವೇಷಾಂ ಧರ್ಮಸಾಧನಂ ॥**

ಭಗವಂತನಲ್ಲಿ ಭಕ್ತಿ, ಇಂದ್ರಿಯನಿಗ್ರಹ, ತಪಸ್ಸು, ಅಂತರಂಗ ಬಹಿರಂಗ ಶುದ್ಧಿ, ಸತ್ಯವನ್ನು ನುಡಿಯುವದು, ಮದ್ಯ ಮಾಂಸಗಳನ್ನು ಬಿಡುವದು, ಪರದ್ರವ್ಯವನ್ನು ಅಪಹರಿಸದೇ ಇರುವದು ಮತ್ತು ಅಹಿಂಸೆ, ಇವು ಎಲ್ಲ ಧರ್ಮದವರೂ, ವರ್ಣದವರೂ ಅವಶ್ಯವಾಗಿ ಪಾಲಿಸಲೇಬೇಕಾದ ಧರ್ಮಗಳು. ಉಳಿದ ಕರ್ಮಾನುಷ್ಠಾನಗಳನ್ನು ವೇದಶಾಸ್ತ್ರಗಳಲ್ಲಿ ಹೇಳಿದಂತೆ ವರ್ಣ ಆಶ್ರಮಗಳಿಗನುಗುಣವಾಗಿ ಆಚರಿಸಬೇಕು. ಪ್ರತಿದಿನವೂ ಉಷಃಕಾಲದಲ್ಲಿಯೇ ಎದ್ದು ಕೈಕಾಲು ಮುಖಗಳನ್ನು ತೊಳೆದು ಕೊಳ್ಳಬೇಕು. ಅನಂತರ ಶ್ರೀಹರಿಯ ನಾಮಸ್ಮರಣೆಯನ್ನು ಮಾಡುತ್ತಾ ನಮಸ್ಕಾರ ಮಾಡಬೇಕು. ಹಾಗೂ ಗುರುಗಳನ್ನು ವಂದಿಸಬೇಕು. ವಿಷ್ಣು ಸಹಸ್ರನಾಮವನ್ನು ಪಠಿಸಬೇಕು. ಅನಂತರ ದೂರಹೋಗಿ ಮಲಮೂತ್ರ ವಿಸರ್ಜನೆ ಮಾಡಿ, ಮೃತ್ತಿಕಾಶೌಚವನ್ನು ಮಾಡಿಕೊಳ್ಳಬೇಕು. ಬಳಿಕ ದಂತಧಾವನ ಮಾಡಿಕೊಂಡು ವಿಧಿಪೂರ್ವಕವಾಗಿ ಸ್ನಾನ ಮಾಡಬೇಕು.

ಸ್ನಾನಮಾಡುವಾಗ ತುಳಸೀಗಿಡದ ಬುಡದಲ್ಲಿರುವ ಮಣ್ಣನ್ನು ಅದರ ಎಲೆಯನ್ನು ತೆಗೆದುಕೊಂಡು 'ಓಂ ನಮೋ ನಾರಾಯಣಾಯ' ಎಂಬ ಮೂಲ ಮಂತ್ರದಿಂದ ಹಾಗೂ ಗಾಯತ್ರಿ ಮಂತ್ರದಿಂದ ಅಭಿಮಂತ್ರಿಸಿ ಅದನ್ನು ಅಂಗಾಂಗಳಿಗೆ ಹಚ್ಚಿಕೊಂಡು ಸ್ನಾನ ಮಾಡಬೇಕು. ನೀರಿನಲ್ಲಿ ಹರಿಯ ಪಾದದಿಂದ ಹುಟ್ಟಿದ ಗಂಗೆಯನ್ನು ಆವಾಹನೆ ಮಾಡಿ ಮುಳುಗಿ ಹಾಕಿ ಅಘಮರ್ಷಣ ಮಂತ್ರವನ್ನು ಜಪಿಸಬೇಕು. ಅನಂತರ ಆಚಮನ, ಮಾರ್ಜನ ಮುಂತಾದವುಗಳನ್ನು ಮಾಡಿಕೊಂಡು ಸ್ನಾನ ಮಾಡಬೇಕು. ಸ್ನಾನಕಾಲದಲ್ಲಿ ಮೂಲ ಮಂತ್ರ ೨೮ ಸಲ ಜಪಮಾಡಿ ದೇವರ ಪ್ರಾರ್ಥನೆಯನ್ನೂ ಮಾಡಿ ನೀರನ್ನು ಅಭಿಮಂತ್ರಿಸಿ ಮುಳುಗು ಹಾಕಬೇಕು. ಮತ್ತೆ ಆಚಮನ ಮಾಡಿ ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ ತರ್ಪಣಕೊಡಬೇಕು. ಅನಂತರ ವಸ್ತ್ರಗಳನ್ನು ಹಿಂಡಿ ಮೈವರಿಸಿಕೊಂಡು ಆಚಮನ ಮಾಡಿ ಮಡಿಬಟ್ಟೆಯನ್ನು ಉಟ್ಟುಕೊಂಡು ಬಳಿಕ ಗೋಪೀಚಂದನದಿಂದ ಹಣೆ ಮುಂತಾದವುಗಳಲ್ಲಿ ವಿಹಿತವಾದ ಮಂತ್ರಗಳನ್ನು ಉಚ್ಚರಿಸುತ್ತಾ ನಾಮ ಮುದ್ರಾದಿಗಳನ್ನು ಧರಿಸಬೇಕು. ವಿಧಿಪೂರ್ವಕವಾಗಿ ಸಂಧ್ಯಾವಂದನವನ್ನೂ, ಗಾಯತ್ರೀ ಜಪವನ್ನು ಮಾಡಿ ಅನಂತರ ಕೈ ಕಾಲು ತೊಳೆದುಕೊಂಡು ಮೌನದಿಂದ ದೇವರ ಕೋಣೆಯಲ್ಲಿ ಪ್ರವೇಶಿಸಬೇಕು.

ತಳಿರು ತೋರಣ ಹೂವಿನ ಸರಗಳಿಂದ ಅಲಂಕೃತವಾದ ಶುಭ್ರ ಪೀಠದಲ್ಲಿ ಲಕ್ಷ್ಮಿ ನಾರಾಯಣ ಸಾಲಿಗ್ರಾಮ ಅಥವಾ ಪ್ರತಿಮೆಗಳನ್ನು ಕೂಡಿಸಿ ವಿಧಿಪೂರ್ವಕವಾಗಿ ಗಂಧ ತುಳಸೀ ಅಕ್ಷತೆಗಳಿಂದ ಪೂಜೆ ಮಾಡಬೇಕು. ಮನೆಯಲ್ಲಿರುವ ಸಾಲಿಗ್ರಾಮ ಮೂರ್ತಿಗಳನ್ನಾಗಲೀ ಗುಡಿಯಲ್ಲಿರುವ ಭಗವನ್ಮೂತಿಗಳನ್ನಾಗಲೀ ಸ್ವಯಂ ವ್ಯಕ್ತ ಮೂರ್ತಿಗಳನ್ನಾಗಲೀ ಶ್ರುತಿಸ್ಮೃತಿ ಆಗಮಗಳಲ್ಲಿ ಹೇಳಿದಂತೆ ಪೂಜೆಯನ್ನು ಮಾಡಬೇಕು. ವೈಖಾನಸ ಆಗಮವು ಶ್ರೌತಾಗಮ ಎನಿಸುತ್ತದೆ. ವಸಿಷ್ಠಾಗಮವು ಸ್ಮಾರ್ತಾಗಮ ಎನಿಸುತ್ತದೆ. ಪಂಚರಾತ್ರಾಗಮವು, ದಿವ್ಯಾಗಮವು ಎನಿಸುತ್ತದೆ. ವಿಷ್ಣುವಿನ ಪೂಜೆಯ ವಿಧಾನದಲ್ಲಿ ಯಾವ ಲೋಪವನ್ನೂ ಮಾಡಬಾರದು. ಆವಾಹನ, ಆಸನ, ಅರ್ಘ್ಯ, ಗಂಧ,

ಪುಷ್ಪ, ಅಕ್ಷತಾ ಪಾದ್ಯ, ಧೂಪ, ದೀಪ, ನೈವೇದ್ಯ, ತಾಂಬೂಲ, ನಮಸ್ಕಾರ, ಪ್ರದಕ್ಷಿಣೆ ಇವುಗಳಿಂದ ವಿಷ್ಣುವಿನ ಪೂಜೆಯನ್ನು ಸಂತೋಷದಿಂದ ಮತ್ತು ಮೂಲಮಂತ್ರದಿಂದ ಮಾಡಬೇಕು. ಪ್ರತಿಯೊಂದು ಉಪಚಾರದ ಅನಂತರ ಪುಷ್ಪಾಂಜಲಿ (ಬೊಗಣಿ ತುಂಬ ಹೂ)ಯನ್ನು ಅರ್ಪಿಸಬೇಕು. ಆವಾಹನ ಮುದ್ರೆಯಿಂದ ಭಗವಂತನನ್ನು ಆವಾಹಿಸಿ, ಪುಷ್ಪಕ ಮುದ್ರೆಯಿಂದ ಆಸನವನ್ನು ನೀಡಬೇಕು. ತುಳಸೀದಳ ಮಿಶ್ರಿತವಾದ ಶುದ್ಧ ನೀರಿನಿಂದ ಸ್ನಾನ, ಆಚಮನ, ಅರ್ಘ್ಯ ಮುಂತಾದುವುಗಳನ್ನು ನೀಡಬೇಕು. ಸುವಾಸಿತ ತೈಲದಿಂದ ದೇವರಿಗೆ ಅಭ್ಯಂಜನ ಸ್ನಾನವನ್ನು ಮಾಡಿಸಬೇಕು. ಕಸ್ತೂರಿ ಚಂದನಾದಿಗಳಿಂದ ಉದ್ವರ್ತನ (ಉಜ್ಜಿ ದೇವರ ಮೂರ್ತಿಗಳನ್ನು ಚಂದನ ಕಸ್ತೂರಿ ಪುಡಿಗಳಿಂದ ತೊಳೆದು ಸ್ವಚ್ಛ ಮಾಡುವದಕ್ಕೆ ಉದ್ವರ್ತನ ಎನ್ನುವರು.) ಮೊದಲಾದವುಗಳನ್ನು ಮಾಡಿ ಸುಗಂಧ ನೀರಿನಿಂದ ಪುರುಷ ಸೂಕ್ತ ಮಂತ್ರ ಹೇಳಿ ದೇವರಿಗೆ ಸ್ನಾನ ಮಾಡಿಸಬೇಕು. ಅನಂತರ ವಸ್ತ್ರ, ಆಭರಣಗಳನ್ನು ಉಡಿಸಿ ಇಡಿಸಿ ಅಲಂಕಾರ ಮಾಡಿ ಮಧುಪರ್ಕ ಸುಗಂಧಿ ಪುಷ್ಪ, ದಶಾಂಗ ಹಾಕಿದ ಧೂಪ, ದೀಪ, ಪಾಯಸ, ಪೂರಿ, ಮೊದಲಾದ ಬಗೆಬಗೆಯ ನೈವೇದ್ಯ ತಾಂಬೂಲ, ಮಂಗಳಾರತೀ, ಹೂವಿನ ಸರಗಳನ್ನು ಏರಿಸುವದು. ಪ್ರದಕ್ಷಿಣೆ ನಮಸ್ಕಾರ, ಸ್ತೋತ್ರ ಪಾಠ, ಗರುಡನ ಹೆಗಲಿನ ಮೇಲೆ ಮಲಗಿಸುವದು, ಮಂಗಲಾರ್ಘ್ಯ, ಮುಂತಾದವುಗಳನ್ನು ಮಾಡಿ ಬಳಿಕ ವೈಶ್ವ ದೇವವನ್ನು ಮಾಡಬೇಕು. ಅನಂತರ ಪುರುಷಸೂಕ್ತ ಶ್ರೀಸೂಕ್ತಗಳನ್ನು ಹೇಳಿ ಹೋಮ ಮಾಡಬೇಕು. ಮೂಲಮಂತ್ರವನ್ನೂ ಉಚ್ಚರಿಸಿ ೧೦೮ ಅಥವಾ ೨೮ ಸಲ ಯಜ್ಞರೂಪಿಯಾದ ಪರಮಾತ್ಮನನ್ನುದ್ದೇಶಿಸಿ ಹೋಮ ಮಾಡಬೇಕು.

ಮೊದಲು ಲಕ್ಷ್ಮೀದೇವಿಯಿಂದ ಒಡಗೂಡಿಕೊಂಡು ಇರುವ ಶ್ರೀಹರಿಯನ್ನು ಧ್ಯಾನ ಮಾಡಿ ಹರಿಯ ನಾಮವನ್ನು ಉಚ್ಚರಿಸಿ ಹೋಮಕುಂಡದಲ್ಲಿ ಆಹುತಿಯನ್ನು ಹಾಕಬೇಕು. ಭೂದೇವಿ, ನೀಲಾದೇವಿ ಮತ್ತು ವಿಮಲಾ ಮುಂತಾದ ಶಕ್ತಿಗಳನ್ನು, ಅನಂತರ ಗರುಡ, ಶೇಷ, ಇಂದ್ರಾದಿ ದೇವತೆಗಳನ್ನು ಕುರಿತು ನಾಮೋಚ್ಚಾರಣ ಪೂರ್ವಕವಾಗಿ ಆಹುತಿಗಳನ್ನು ಅಗ್ನಿಕುಂಡದಲ್ಲಿ ನೀಡಬೇಕು. ಬಳಿಕ ಅನಿರುದ್ಧ, ಸಂಕರ್ಷಣ, ವಾಸುದೇವ ಮೂರ್ತಿಗಳಿಗೂ ಕೇಶವಾದಿ ೨೪ ಮೂರ್ತಿಗಳಿಗೂ ಆಹುತಿಗಳನ್ನು ನೀಡಬೇಕು. ಅನಂತರ ಮತ್ಸ್ಯಕೂರ್ಮಾದಿ ದಶಾವತಾರಗಳು, ಶಂಖ ಚಕ್ರಾದಿ ಆಯುಧಗಳು ಕುಮುದ ಕುಮುದಾಕ್ಷ ಮುಂತಾದ ಅಷ್ಟದಿಕ್ಪಾಲಕರೂ ಚಂದ್ರಾದಿದೇವತೆಗಳನ್ನೂ ಇಂದ್ರಾದಿಲೋಕ ಪಾಲಕರು ಕೂರ್ಮಾದಿದೇವತೆಗಳು ಇವರನ್ನೂ ಉದ್ದೇಶಿಸಿ ಆಹುತಿಯನ್ನು ಕೊಟ್ಟು ಯಜ್ಞ ಮಾಡಬೇಕು. ಇದಕ್ಕೆ ವೈಕುಂಠ ಹೋಮ ಎನ್ನುವರು. ದೇವಸ್ಥಾನಾದಿಗಳಲ್ಲಿ ತಪ್ಪದೇ ಈ ವೈಕುಂಠ ಹೋಮವನ್ನು ಮಾಡಬೇಕು. ಮನೆಗಳಲ್ಲಿ ದೇವರಪೂಜೆ ಮಾಡಿ ಪಂಚಯಜ್ಞ ವಿಧಾನದಿಂದ ಬಲಿ ನೀಡಿ ಅನಂತರ ಆಚಮನ ಮಾಡಬೇಕು.

ಅನಂತರ ತನಗೆ ಸಮಯ ಸಿಕ್ಕಷ್ಟು ಮಂತ್ರ ಜಪವನ್ನು ವಿಧಿಪೂರ್ವಕವಾಗಿ ಸಾವಿರ, ನೂರು, ಯಥಾಶಕ್ತಿ ಮಾಡಬೇಕು. ಅತಿಥಿಗಳ ದಾರಿ ಕಾಯುತ್ತಾ ಶಕ್ಯವಾದಷ್ಟು ಬಾರಿ ಜಪವನ್ನು ಆವೃತ್ತಿಮಾಡಿ. ಮನೆಗೆ ಬಂದ ಭಗವದ್ಭಕ್ತರಿಗೆ ಉತ್ಕೃಷ್ಟವಾದ ಅನ್ನಪಾನಾದಿಗಳಿಂದ ಸಂತೋಷಪಡಿಸಿ ಕಳುಹಿಸಬೇಕು. ಭೃತ್ಯರನ್ನು ಊಟ ಮಾಡಿಸಿ ಕೊನೆಗೆ ಯಜಮಾನ ದಂಪತಿಗಳು ಊಟ ಮಾಡಬೇಕು.

ನಿಜವಾದ ವಿಷ್ಣುಭಕ್ತನಾದವನು ವಿಷ್ಣುವಿನಹೊರತು ಬೇರೆ ಯಾರನ್ನೂ ಎಂದೂ ಪೂಜಿಸಬಾರದು. ಯಾವುದಾದರೂ ಕ್ಷುದ್ರ ಸಿದ್ಧಿ ಅಥವಾ ದಾಕ್ಷಿಣ್ಯಗಳಿಗಾಗಿ ಯಕ್ಷ ರಾಕ್ಷಸ ಮುಂತಾದ ಮದ್ಯ ಮಾಂಸ ಪ್ರಿಯರಾದ, ದೇವತಾ ಆರಾಧನೆಯು ಮದ್ಯಪಾನಕ್ಕೆ ಸಮಾನವಾಗಿದ್ದು, ಕುಂಭೀ ಪಾಕಾದಿ ನರಕಗಳಿಗೆ ಕಾರಣವಾಗುತ್ತದೆ. ಯಕ್ಷ ಭೂತಾದಿಗಳ ಪೂಜೆಯಿಂದ ಪಿಶಾಚಾದಿ ತಾಮಸಶಕ್ತಿಗಳ ಉಪಾಸನೆಯಿಂದ ಮಾನವನು ಹೊಲಸಿನಲ್ಲಿ ಕ್ರಿಮಿಯಾಗಿ ಸಾವಿರ ವರ್ಷ ನರಳುತ್ತಾನೆ.

ವೇದೋಕ್ತವಾದ ಅಥವಾ ಪ್ರತಿಪಾದಿತವಾದ ಅನ್ಯದೇವತೆಗಳ ಪೂಜೆಯನ್ನೂ ಕೂಡ ಸ್ವತಂತ್ರವಾಗಿ ಎಂದೂ ಮಾಡಬಾರದು. ಮಾಡುವುದೇ ಆದರೆ ಮೊದಲು ಶ್ರೀಹರಿಯ ಪೂಜೆಯನ್ನು ಮಾಡಿ, ಅವನ ಪರಿವಾರತ್ವೇನ ಅನ್ಯ ದೇವತೆಗಳ ಪೂಜೆಯನ್ನ ಮಾಡಬೇಕು. ಶ್ರೀಹರಿಗೆ ಸಮರ್ಪಣೆ ಮಾಡಿದ ನೈವೇದ್ಯವನ್ನು ಅವರಿಗೆ ನೀಡಬೇಕು. ಶ್ರೀಹರಿಗೆ ಸಮರ್ಪಿಸಿದ, ನೈವೇದ್ಯ ಶೇಷದಿಂದಲೇ ಹೋಮವನ್ನು ಮಾಡಬೇಕು. ಹರಿಗೆ ನಿವೇದಿತವಾದದ್ದನ್ನೇ ದೇವತೆಗಳಿಗೂ ಪಿತೃಗಳಿಗೂ ನೀಡಿದರೆ ಅನಂತ ಪುಣ್ಯ.

ಪ್ರಾಣಿಗಳಿಗೆ ಪೀಡೆಯನ್ನು ಆಸ್ತಿಕನಾದ ಮನುಷ್ಯನು ಎಂದೂ ಕೊಡಬಾರದು. ಪರರಿಗೆ ಉಪದ್ರವವನ್ನು ಕೊಡುವುದು ನರಕಕ್ಕೆ ಕಾರಣವಾಗುವುದು. ತಾನು ದಾನ ನೀಡದೆ ಬೇರೆಯವರಿಂದ ಕೇವಲ ದಾನ ಸ್ವೀಕರಿಸುವುದು ಚೌರ್ಯ ಎನಿಸುತ್ತದೆ. ಅದು ನರಕ.

ಬೆಳ್ಳುಳ್ಳಿ, ಮದ್ಯಪಾನ, ಮೂಲಂಗಿ, ಗಜ್ಜರಿ, ನುಗ್ಗೆಕಾಯಿ, ಬಿಲ್ವಫಲ, ಪಡುವಲ, ಸೊರೆಕಾಯಿ, ಬದನೆಕಾಯಿ, ಮುಂತಾದ ಪದಾರ್ಥಗಳನ್ನು ಮನುಷ್ಯರು ತಿನ್ನಬಾರದು. ವಿಷ್ಣುಭಕ್ತರು ಅಲ್ಲದವರ ಮತ್ತು ಪತಿತರ ಅನ್ನವನ್ನು ಹಾಗೂ ದೇವರಿಗೆ ಸಮರ್ಪಣೆ ಮಾಡದ ಅನ್ನವನ್ನು ನಾಯಿಯ ಮಾಂಸಕ್ಕೆ ಸಮ ಎಂದು ತ್ಯಾಗ ಮಾಡಬೇಕು. ಯಕ್ಷ, ರಾಕ್ಷಸ, ಭೂತ, ಕೂಶ್ಮಾಂಡ, ಗಣಾಧೀಶ, ಭೈರವ, ಭೂತಪ್ರೇತ, ಪಿಶಾಚ ಮುಂತಾದವುಗಳ ಪೂಜೆ ಮಾತ್ರ ಮಾಡಿದರೆ ಸಾವಿರ ವರ್ಷ ರೌರವ ನರಕದಲ್ಲಿ ಕೊಳೆಯಬೇಕಾಗುವದು.

ಅಗಮ್ಯಾಗಮನ, ಹಿಂಸೆ, ಪರಿದ್ರವ್ಯದ ಅಪಹಾರ ಮತ್ತು ಅಭಕ್ಷಭಕ್ಷಣ ಈ ನಾಲ್ಕರಿಂದ ಪುರುಷನಿಗೆ ಕೂಡಲೇ ನರಕ ಪ್ರಾಪ್ತಿಯಾಗುವುದು ಮತ್ತು ಪತಿತ ಪಾಖಂಡಿಗಳ ಸಂಪರ್ಕದಿಂದ ಮನುಷ್ಯನು ನರಕಕ್ಕೆ ಹೋಗುತ್ತಾನೆ.

ವಿಷ್ಣುವಿನಲ್ಲಿ ಭಕ್ತಿಯುಳ್ಳವನು ಭಗವದ್ಭಾಕ್ತಾ ಎಂದು ಕರೆಸಿಕೊಳ್ಳುತ್ತಾನೆ. ಆ ಭಕ್ತಿಯು ಒಂಭತ್ತು ವಿಧವಾಗಿದೆ.

**ಸುದರ್ಶನೋರ್ಧ್ವ ಪುಂಡ್ರಾದಿತ ಚ್ಚಿಹ್ನೈ ರಂಕವಂ ಶುಭಮ್ ।**
**ಸದ್ಗುರೋರ್ಮಂತ್ರ ಪಠನಂ ಆಚನಂ ವಿಧಿನಾ ಹರೇಃ ॥**

**ಸ್ಮರಣಂ ಕೀರ್ತನಂ ವಿಷ್ಣೋಃ ಸೇವಾ ಚ ಪರಮಾತ್ಮನಃ ।**
**ಪ್ರಣಾಮಸ್ತಸ್ಯ ಪುರತಃ ತದೀಯಾನಾಂಚ ಪೋಜನಮ್ ॥**
**ಪ್ರಸಾದತೀರ್ಥ ಸೇವಾಚ ಭಕ್ತಿರ್ನವವಿಧಾಸ್ಮೃತಾ ॥**

೧) ಗೋಪಿ ಚಂದನದಿಂದ ನಾಮಧಾರಣ ಶಂಖ ಚಕ್ರಾದಿ ಚಿಹ್ನಧಾರಣ ೨) ಒಳ್ಳೆ ಗುರುಗಳಿಂದ ಮಂತ್ರೋಪದೇಶ ತೆಗೆದುಕೊಂಡು ಆ ಮಂತ್ರವನ್ನು ವಿಧಿಪೂರ್ವಕವಾಗಿ

ಜಪಿಸುವುದು. ೩) ಶಾಸ್ತ್ರೋಕ್ತ ವಿಧಿಯಿಂದ ಶ್ರೀಹರಿಯನ್ನು ಪೂಜಿಸುವುದು ೪) ಪ್ರತಿನಿತ್ಯ ಶ್ರೀಕೃಷ್ಣನ ಸ್ಮರಣೆ ಮಾಡುವುದು, ೫) ಶ್ರೀಹರಿಯ ಪುಣ್ಯಕರವಾದ ಮಹಿಮೆಯನ್ನು ಹಾಡುವುದು ಅಥವಾ ಸತತ ನಾಮೋಚ್ಚಾರ ಮಾಡುವುದು. ೬) ಪೂಜೆ ಪ್ರದಕ್ಷಿಣೆ ನಮಸ್ಕಾರಾದಿಗಳಿಂದಾಗಿ ಜಪೋಪವಾಸ ವ್ರತ ನಿಯಮಗಳಿಂದಾಗಲಿ ಶ್ರೀಹರಿಯ ಸೇವೆ ಗೈಯುವುದು. ೭) ಶ್ರೀಹರಿಗೆ ಪ್ರದಕ್ಷಿಣೆ ನಮಸ್ಕಾರ ಹಾಕುವುದು. ೮) ವಿಷ್ಣುಭಕ್ತರಾದ ವೇದಶಾಸ್ತ್ರ ವಿದ್ವಾಂಸರನ್ನು ಪೂಜಿಸುವುದು. ೯) ಶ್ರೀಹರಿಗೆ ನಿವೇದಿತವಾದ ನೈವೇದ್ಯಪ್ರಸಾದವನ್ನು, ತೀರ್ಥವನ್ನು ಭಕ್ತಿಯಿಂದ ಸ್ವೀಕರಿಸುವುದು. ಇದು ನವ ವಿಧವಾದ ಭಕ್ತಿಯನೆನಿಸುವುದು.

ಹೀಗೆ ನವ ವಿಧವಾದ ಭಕ್ತಿಯನ್ನು ಮಾಡಿ ಭಗವಂತನ ಆರಾಧನೆ ಗೈಯುವವರು ಉದ್ಧೃತರಾಗುವರು. ತ್ರಿಕಾಲದಲ್ಲಿಯೂ ಮನೆಯಲ್ಲಿ ಭಗವಂತನಿಗೆ ಪ್ರತಿ ನಿತ್ಯವು ಪೂಜೆ, ನೈವೇದ್ಯ ಸಮರ್ಪಣೆ ಮಂಗಳಾರತಿ ಪ್ರದಕ್ಷಿಣೆ ನಮಸ್ಕಾರಾದಿ ಸೇವೆಯನ್ನು ಸಲ್ಲಿಸಬೇಕು. ಇವೆಲ್ಲವೂ ನಿತ್ಯ ಪೂಜೆಯ ವಿಧಾನ, ದಿನ ವಿಶೇಷಗಳಲ್ಲಿ ಮಾಡುವ ವಿಶಿಷ್ಟ ಪೂಜೆ ನೈಮಿತ್ತಿಕ ಪೂಜೆಯೆನಿಸುವುದು.

ಕಾರ್ತಿಕ ಮಾಸದಲ್ಲಿ ಜಾತೀ ಪುಷ್ಪದಿಂದ ಎಂದರೆ ಮಲ್ಲಿಗೆ ಹೂಗಳಿಂದ ದೇವರಿಗೆ ಪುಷ್ಪಾರ್ಚನೆ ಮಾಡಬೇಕು ಮತ್ತು ಅಖಂಡ ದೀಪದಾನವನ್ನು ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ಧನುರ್ಮಾಸದಲ್ಲಿ ಒಂದು ತಿಂಗಳವರೆಗೆ ನೈದಿಲೆ ಕೆಂಪು ಕಣಗಿಲೆ ಮುಂತಾದ ಹೂಗಳನ್ನು ಏರಿಸಿ ಪ್ರಾತಃಕಾಲದಲ್ಲಿಯೇ ಪೂಜೆ ಮಾಡಿ ಧೂಪ ದೀಪ ನೈವೇದ್ಯಗಳನ್ನು ಸಮರ್ಪಿಸಿ ಕೊನೆಗೆ ವಿದ್ವದ್ ಜನರಿಗೆ ಭೋಜನ ಮಾಡಿಸಬೇಕು. ಮಾಘ ಮಾಸದಲ್ಲಿ ಪ್ರಾತಃಸ್ನಾನ ಕಮಲ ಕುಸುಮಗಳಿಂದ ಶ್ರೀಹರಿಯ ಅರ್ಚನೆ, ತುಪ್ಪ ಪಾಯಸದ ನೈವೇದ್ಯ ಮುಂತಾದವುಗಳನ್ನು ಭಕ್ತಿಯಿಂದ ಮಾಡಬೇಕು. ವಸಂತ ಮಾಸದಲ್ಲಿ ಬಕುಳ ಚಂಪಕ ಮುಂತಾದ ಹೂಗಳಿಂದ ದೇವರಪೂಜೆ ಅನ್ನ ಪಾಯಸ ನೈವೇದ್ಯ ಅವುಗಳ ಕೊನೆಯಲ್ಲಿ ವಿಷ್ಣುಭಕ್ತರ ಭೋಜನ ಮುಂತಾದವುಗಳು ವಿಹಿತವಾಗಿದೆ. ವೈಶಾಖ ಮಾಸದಲ್ಲಿ ಕಮಲ ಪುಷ್ಪಗಳಿಂದ ದೇವರಿಗೆ ಕುಸುಮಾರ್ಚನೆ, ಮೊಸರು ಅನ್ನ ನೈವೇದ್ಯ, ಪಾನಕ ಸಮರ್ಪಣೆ ಮುಂತಾದವುಗಳು ವಿಹಿತವಾಗಿರುತ್ತವೆ. ಜೇಷ್ಠ ಮಾಸದಲ್ಲಿ ಬಿಳೀ ಕಮಲ ಕನ್ನೈದಿಲೆ, ಕೆಂಪು ಬಣ್ಣದ ಪಾಚಲ ಪುಷ್ಪ ಮುಂತಾದವುಗಳಿಂದ ದೇವರ ಪೂಜೆ ಮಾವಿನಹಣ್ಣು ಅಥವಾ ಮಾವಿನಕಾಯಿಯ ಪದಾರ್ಥಗಳನ್ನು ದೇವರಿಗೆ ನಿವೇದಿಸಿ ವಿಷ್ಣು ಭಕ್ತರಿಗೆ ಭೋಜನ ಮಾಡಿಸಬೇಕು. ಆಷಾಢ ಮಾಸದಲ್ಲಿ ಶ್ರೀಪುಷ್ಪಗಳಿಂದ ಲಕ್ಷ್ಮೀಪತಿಯ ಪೂಜೆ ಪಾಯಸ, ನೈವೇದ್ಯ ಮತ್ತು ವಿಪ್ರ ಭೋಜನ ಮಾಸದ ಕೊನೆಗೆ ಭಗವದ್ಭಕ್ತರ ಸೇವೆ ಸಂತರ್ಪಣಗಳನ್ನು ಮಾಡಬೇಕು. ಶ್ರಾವಣಮಾಸದಲ್ಲಿ ಸುರಹೊನ್ನೆಯ ಹೂಗಳಿಂದ ಭಗವತ್ ಪೂಜೆ ಪರಮಾನ್ನ ನೈವೇದ್ಯ ಮುಂತಾದುವುಗಳು ವಿಹಿತವಾಗಿವೆ. ಅದರಲ್ಲಿಯೂ ಶ್ರಾವಣ ಮಾಸದಲ್ಲಿ ಕೇದಿಗೆ ಹೂಗಳಿಂದ ಭಗವತ್ ಪೂಜೆ ತುಪ್ಪ ಸಕ್ಕರೆಯಿಂದ ತಯಾರಿಸಿದ ಅನಾರಸ, ವಡೆ, ಫೇಡೆ ಮುಂತಾದ ಪದಾರ್ಥಗಳಿಂದ ಬ್ರಾಹ್ಮಣ ಭೋಜನವು ವಿಶೇಷ ಹರಿ ಪ್ರಾಣಕಾರಕ, ಭಾದ್ರಪದದಲ್ಲಿ ಕೋಲು, ಮಲ್ಲಿಗೆ, ಗೋರಂಡಿ ಹೂ ಮೊದಲಾದವುಗಳಿಂದ ಪುಷ್ಪಾರ್ಚನೆ, ಖೀರಿನ ನೈವೇದ್ಯ, ಗೋದಾನಗಳನ್ನು ಮಾಡಬೇಕು. ಅಶ್ವೀಜ ಮಾಸದಲ್ಲಿ ನೀಲ

ಕಮಲಗಳಿಂದ ಭಗವತ್ ಪೂಜೆ ಅಪ್ಪಿ ಪಾಯಸದಿಂದ ವಿದ್ವತ್ ಭೋಜನ ಮುಂತಾದವುಗಳು ಶಾಸ್ತ್ರ ವಿಹಿತವಾಗಿರುತ್ತವೆ. ಕಾರ್ತಿಕ ಮಾಸದಲ್ಲಿ ಎಳೆ ತುಳಸೀ ದಳದಿಂದ ಭಗವದರ್ಚನೆ ಸಕ್ಕರೆ ಹಾಲು ಬೆರೆಸಿ ಉತ್ತಮ ಪಾಯಸ, ವಡೆ, ಫೇಡೆ, ಮುಂತಾದುವುಗಳಿಂದ ಭಗವಂತನಿಗೆ ನೈವೇದ್ಯ ಹಾಗೂ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

ಅಮಾವಾಸ್ಯೆ ಶನಿವಾರ ಸಂಕ್ರಮಣ ವ್ಯತೀಪಾತ ಸೂರ್ಯ ಚಂದ್ರಗ್ರಹಣ ವಿಷ್ಣು ನಕ್ಷತ್ರ, ಗುರುಗಳ ಪುಣ್ಯದಿವಸ, ಶ್ರೀಹರಿಯ ಜಯಂತೀ ದಿನಗಳಂಥ ಪರ್ವಕಾಲ ಪುಣ್ಯ ಕಾಲಗಳಲ್ಲಿ ವಿಷ್ಣುವನ್ನು ಉದ್ದೇಶಿಸಿ ಹೋಮಹವನಾದಿಗಳನ್ನು ಮಾಡಬೇಕು. ವೇದ ಮಂತ್ರಗಳನ್ನು ಹೇಳಿ ಒಂದೊಂದು ಋಷಿಗೂ ದೇವರಿಗೂ ಪುಷ್ಪಂಜಲಿಯನ್ನು ಸಮರ್ಪಿಸಬೇಕು. ವಿಷ್ಣು ಭಕ್ತರಿಗೆ ಪಕ್ವಾನ್ನ ಭೋಜನ ಮಾಡಿಸಿ ವಿಶೇಷ ದಕ್ಷಿಣೆಯನ್ನು ನೀಡಬೇಕು. ಎಲ್ಲ ವೇದ ಮಂತ್ರಗಳನ್ನು ಉಚ್ಚರಿಸಿ ಆಹುತಿ ಹಾಕಿ ಸಂಹಿತಾ ಹೋಮವನ್ನು ಮಾಡುವದು ಉತ್ತಮ ಕಲ್ಪ. ಅಷ್ಟು ಆಗದಿದ್ದರೆ ಏಳು ದಿವಸ ವಿಷ್ಣುವಿನ ಮಹಿಮೆ ಹೇಳುವ ಸೂಕ್ತದಿಂದಾದರೂ ಹೋಮ ಹಾಗೂ ಪುಷ್ಪಾರ್ಚನೆಗಳನ್ನು ಮಾಡಬೇಕು. ಅಥವಾ ಮಂತ್ರ ರತ್ನಯೆನಿಸಿದ ನಾರಾಯಣಾಷ್ಟಕ್ಷರ ಮಂತ್ರವನ್ನು ಸಾವಿರ ಎಂಟುಸಲ ಉಚ್ಚರಿಸಿ ಹೋಮ ಮಾಡಿ ಭಾಗವತೋತ್ತಮರಿಗೆ ಭೋಜನ ಮಾಡಿಸಬೇಕು. ಕೊನೆಯಲ್ಲಿ ವೈಷ್ಣವ ಸುದರ್ಶ ಅನುದಾನ ಸೂಕ್ತಗಳಿಂದ ಅವಭೃತ ಸ್ನಾನ ಮಾಡಿ, ಬ್ರಾಹ್ಮಣೋತ್ತಮರ ಪಾದ ಪ್ರಕ್ಷಾಲನೆ ಗೈಯಬೇಕು. ಗಂಧ, ಪುಷ್ಪ, ತಾಂಬೂಲ, ವಸ್ತ್ರ, ಆಭರಣ, ಫಲ ಮುಂತಾದವುಗಳನ್ನು ಯಥಾಶಕ್ತಿ ನೀಡಿ ಸಮೀಚೀನ ಭೋಜನ ಮಾಡಿಸಿ ನಮಸ್ಕಾರ ಮಾಡಿ ಕಳುಹಿಸಬೇಕು. ಹೀಗೆ ಯಾವ ಜನ್ಮ ಮನುಷ್ಯನು ಬದುಕಿ ಇರುವವರೆಗೆ ವಿಷ್ಣುವನ್ನು ವೈಷ್ಣವರನ್ನು ಪೂಜೆ ಮಾಡಬೇಕು.

**ಅರ್ಚಯಿತ್ವಾಽಪಿ ಗೋವಿಂದಂ ತದೀಯಿಯಾನ್ ನಾರ್ಚಯೇತ್ ಪುನಃ ।**
**ನ ಸ ಭಾಗವತೋ ಜ್ಞೇಯ ಕೇವಲಂ ಧಾಂಭಿಕಃ ಸ್ಮೃತಃ ॥**

ಗೋವಿಂದನನ್ನು ಪೂಜೆ, ಮಾಡಿದರೂ ಅವನ ಭಕ್ತರನ್ನು ಪೂಜಿಸದೆ ಇದ್ದರೆ ಅವನು ಭಾಗವತ ಅಲ್ಲ ಎಂದರೆ ನಿಜವಾದ ಭಕ್ತನಲ್ಲ. ಆದುದರಿಂದ ಮನುಷ್ಯರು ಸರ್ವಪ್ರಯತ್ನದಿಂದಲೂ ವೈಷ್ಣವರ ಪೂಜೆ ಮಾಡಬೇಕು.

ಪಾರ್ವತೀ ನಿನ್ನ ಅಪೇಕ್ಷೆಯಂತೆ ವಿಷ್ಣುವಿನ ನಿತ್ಯ ನೈಮಿತ್ತಕ ಪೂಜೆಯ ವಿಧಾನವನ್ನು ನಿನಗೆ ಹೇಳಿದ್ದೇನೆ. ಮತ್ತೆ ಏನನ್ನು ನೀನು, ಕೇಳ ಎಯಸುವೇ?

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ವಿಷ್ಣುಪೂಜೆಯ ವಿಧಾನ ಮತ್ತು ವಿಷ್ಣುಭಕ್ತರ ಆಚಾರ*
*ಎಂಬ ಎರಡುನೂರ ಮೂವತ್ತೈದನೇಯ ಅಧ್ಯಾಯ ಮುಗಿದುದು*

—○—

ವಾಮದೇವ ಋಷಿಯಿಂದ

ವಿಷ್ಣುಸಹಸ್ರನಾಮದ ಉಪದೇಶ

ಶಿವನಿಂದ ರಾಮಶಬ್ದದ ನಿರ್ವಚನ

ಅಧ್ಯಾಯ - ೨೩೭

**ವಶಿಷ್ಠ:-** ಮಹಾದೇವರು ನೀನು ಏನನ್ನು ಕೇಳಬಯಸುವಿ? ಎಂದು ಪಾರ್ವತಿಗೆ ಪ್ರಶ್ನಿಸಿದಾಗ ಆ ಸತೀಮಣಿಯು ಪತಿಯ ಪಾದಗಳಿಗೆ ಪ್ರಣಮಿಸಿ ಕೈ ಜೋಡಿಸಿ ನುಡಿದಳು.

**ಪಾರ್ವತಿ:-** ನಾಥ, ತಾವು ಗುಹ್ಯಾತಿ ಗುಹ್ಯತರವಾದ ವಿಷ್ಣುವಿನ ಸ್ವರೂಪವನ್ನೂ ವೈಷ್ಣವ ಧರ್ಮವನ್ನೂ ನನ್ನ ಎದುರು ಪ್ರತಿಪಾದನೆ ಮಾಡಿದಿರಿ. ಅದನ್ನೆಲ್ಲ ಕೇಳಿ ನಾನು ಧನ್ಯಳು ಆದೆ. ಕೃತಕೃತ್ಯತೆಯನ್ನು ಹೊಂದಿದೆ. ನಿನ್ನ ಪ್ರಸಾದದಿಂದ ದೇವೇಶನಾದ ಶ್ರೀರಾಮನ ಪೂಜೆಯನ್ನು ನಾನು ಭಕ್ತಿಯಿಂದ ಮಾಡುತ್ತೇನೆ.

**ಮಹಾದೇವ:-**

**ಸಾಧು, ಸಾಧು ಮಹಾದೇವಿ, ಸಾಧು, ಸಾಧು ವರಾನನೇ ।**
**ಅರ್ಚಯಸ್ವ ಹೃಷಿಕೇಶಂ ಲಕ್ಷ್ಮೀ ಭರ್ತಾರಮಚ್ಯುತಮ್ ॥**

ಮಹಾದೇವಿ, ಬಹಳ ಒಳ್ಳೆಯದಾಯಿತು, ನೀನು ಉತ್ತಮ ಕೆಲಸ ಮಾಡಿದೆ. ಸುಂದರಿ, ನಿನ್ನ ವಿಚಾರವು ಕೂಡ ಶ್ರೇಷ್ಠವಾಗಿದೆ. ಲಕ್ಷ್ಮೀಯ ಪತಿಯಾದ ಹೃಷಿಕೇಶನನ್ನು ಭಕ್ತಿಯಿಂದ ಪೂಜಿಸು. ಗುರುವು, ಉಪದೇಶಿಸಿದ ಮಾರ್ಗದಿಂದ ಪೂಜೆ ಮಾಡಿದರೆ ಮಾತ್ರ ಕೇಶವನು ಅಭೀಷ್ಠಿತವಾದ ಅರ್ಥವನ್ನು ಹೊಂದುತ್ತಾನೆ. ಇಲ್ಲದಿದ್ದರೆ ಇಲ್ಲ.

ಪರಮೇಶ್ವರನ ಆದೇಶದಂತೆ ವಿಷ್ಣುವಿನ ಪೂಜೆ ಮಾಡಬೇಕೆಂದು ತವಕಗೊಂಡ ಆ ಪಾರ್ವತೀದೇವಿಯು ವಾಮದೇವ ಮುನಿಯ ಆಶ್ರಮಕ್ಕೆ ತೆರಳಿದಳು. ಅಲ್ಲಿ ಹೋಗಿ ಅವರಿಗೆ ನಮಸ್ಕರಿಸಿದಳು. ವಿನಯದಿಂದ ಆ ಮುನಿಪುಂಗವರಿಗೆ ಕೈ ಜೋಡಿಸಿ ಕೇಳಿದಳು.

**ಪಾರ್ವತಿ:-** ಪೂಜ್ಯರೇ, ನಿಮ್ಮ ಅನುಗ್ರಹದಿಂದ ಶ್ರೀಹರಿಯ ಆರಾಧನೆಯನ್ನು ಚೆನ್ನಾಗಿ ಮಾಡಬೇಕೆಂದು ನಿರ್ಧರಿಸಿದ್ದೇನೆ. ದ್ವಿಜಶ್ರೇಷ್ಠರಾದ ತಾವು ಅನುಮತಿಯನ್ನು ನೀಡಬೇಕು. ಪಾರ್ವತಿಯ ಈ ಬಿನ್ನಹವನ್ನು ಮನ್ನಿಸಿ ವಾಮದೇವ ಮಹರ್ಷಿಗಳು ಶ್ರೇಷ್ಠ ಮಂತ್ರವನ್ನು ಉಪದೇಶಿಸಿ ವಿಷ್ಣು ಸಹಸ್ರನಾಮವನ್ನು ಪೂಜಾವಿಧಾನವನ್ನು ಕೂಡ ತಿಳಿಸಿಕೊಟ್ಟರು. ಮತ್ತು ವ್ರತಸ್ಥಳಾದ ಪಾರ್ವತಿಯನ್ನು ಕುರಿತು ಮಾತನಾಡಿದರು.

**ವಾಮದೇವ:-** ಶುಭಾಂಗಿ, ನೀನು ಪ್ರತಿನಿತ್ಯವೂ ಪ್ರಾತಃಕಾಲದಲ್ಲಿ ಹೃಷಿಕೇಶನನ್ನು ಪೂಜೆ ಮಾಡಿ ವಿಷ್ಣು ಸಹಸ್ರನಾಮವನ್ನು ಪಠಿಸು.

ಹೀಗೆ ತನ್ನ ಗುರುವಾದ ವಾಮದೇವರಿಂದ ಉಪದೇಶಿಸಲ್ಪಟ್ಟ ಆ ಭವಾನಿಯು ಸಂತುಷ್ಟಳಾಗಿ ಗುರುಗಳನ್ನು ಪೂಜಿಸಿ ನಮಸ್ಕರಿಸಿ ತನ್ನ ಮನೆಗೆ ತೆರಳಿದಳು. ಮನೆಯಲ್ಲಿ ತನ್ನ ಗುರು ವಾಮದೇವ ಹೇಳಿದಂತೆ ಭಕ್ತಿಯಿಂದ ಭಗವಂತನನ್ನು ಪೂಜಿಸಿದಳು. ಮತ್ತು ಪ್ರತಿದಿನವೂ ತಪ್ಪದೇ ವಿಷ್ಣುಸಹಸ್ರನಾಮದ ಜಪವನ್ನೂ ಪಾರಾಯಣವನ್ನೂ ಮಾಡುತ್ತ ಸುಖವಾಗಿ ಇದ್ದಳು.

ಮುಂದೆ ಒಂದು ದಿನ ಕೆಲವು ದಿನಗಳ ಕಳೆದ ಬಳಿಕ ಮಹಾದೇವನು ಕೈಲಾಸ ಶಿಖರದಲ್ಲಿ ಮಹಾವಿಷ್ಣುವಿನ ಆರಾಧನೆಗೈದು ನೈವೇದ್ಯ ಸಮರ್ಪಣಾದಿಗಳನ್ನು ಮಾಡಿ ಅಂದು ದ್ವಾದಶಿಯಾದುದರಿಂದ ಬೇಗನೆ ಭೋಜನಕ್ಕೆ ಕುಳಿತುಕೊಂಡರು. ನನ್ನ ಜೊತೆಗೆ ಊಟ ಮಾಡಲಿಕ್ಕೆ ಬಾ ಎಂದು ಪಾರ್ವತಿಯನ್ನು ಕರೆದರು. ಆಗ ಪಾರ್ವತಿಯು ಪತಿ ಪರಮೇಶ್ವರನನ್ನು ಕುರಿತು ಮಾತನಾಡಿದಳು.

**ಪಾರ್ವತಿ:-** ಪ್ರಭು, ನಾನು ವಿಷ್ಣು ಸಹಸ್ರನಾಮವನ್ನು ಹೇಳದೇ ಊಟ ಮಾಡುವುದಿಲ್ಲ. ನನ್ನ ಈ ಸಹಸ್ರನಾಮದ ಜಪ ಇನ್ನೂ ಮುಗಿದಿಲ್ಲ. ನೀವು ಊಟ ಮಾಡಿರಿ. ನಾನು ಈ ಜಪವನ್ನು ಮುಗಿಸಿ ಬಂದು ಅನಂತರ ಊಟ ಮಾಡುತ್ತೇನೆ.

**ಮಹಾದೇವ:-**

**ಧನ್ಯಾನಿ, ಕೃತಕೃತ್ಯಾನಿ ವಿಷ್ಣು ಭಕ್ತಾನಿ ಪಾರ್ವತಿ ।**
**ದುರ್ಲಭಾ ವೈಷ್ಣವೀ ಭಕ್ತಿರ್ಭಾಗಧ್ಯೇಯಂ ವಿನೇಶ್ವರಿ ॥**

ಪಾರ್ವತೀ, ನೀನು ಧನ್ಯಳು. ಏಕೆಂದರೆ ನೀನು ವಿಷ್ಣುವಿನ ಪರಮ ಭಕ್ತಳು ಆಗಿರುವೆ. ಆದ್ದರಿಂದ ನೀನು ಕೃತಕೃತಳೂ ಆಗಿರುವೆ. ಒಳ್ಳೆಯ ಭಾಗ್ಯ ಇರದಿದ್ದರೆ ವಿಷ್ಣು ಭಕ್ತಿಯು ಹುಟ್ಟಲಾರದು.

**ರಮಂತೇ ಯೋಽಗಿನೋಽನಂತೆ ಸತ್ಯಾನಂದೇ ಚಿದಾತ್ಮನಿ ।**
**ತೇನ ರಾಮಪದೇ ನಾಸೌ ಪರಂಬ್ರಹ್ಮಾಽಭಿ ಜೀಯತೆ ॥**

ಜ್ಞಾನಾನಂದ ಸ್ವರೂಪಿಯೂ, ಆದಿ, ಮಧ್ಯ, ಅಂತ್ಯಗಳಿಂದ ರಹಿತನೂ ಆದ ಶ್ರೀಹರಿಯಲ್ಲಿ ಎಲ್ಲ ಯೋಗಿಗಳೂ ಭಕ್ತಿಯಿಂದ ಆನಂದವನ್ನು ಪಡುತ್ತಾರೆ. ಮುಂದೆ ಮೋಕ್ಷದಲ್ಲಿ ಸಂತೋಷವನ್ನು ಪಡುತ್ತಾರೆ. ಆದುದರಿಂದ ಪರಬ್ರಹ್ಮನಾದ ಆ ಪರಮಾತ್ಮನೇ ರಾಮ ಎಂಬ ಪದದಿಂದ ಹೇಳಲ್ಪಡುತ್ತಾನೆ.

**ರಾಮ ರಾಮೇತಿ ರಾಮೇತಿ, ರಮೆ । ರಾಮೆ ಮನೋರಮೆ ।**
**ಸಹಸ್ರನಾಮ ತತ್ತುಲ್ಯಂ ರಾಮ ನಾಮ ವರಾನನೇ ॥**

ಸುಂದರಳಾದ ಪಾರ್ವತಿ, ಮನೋಹರವಾದ ರಾಮ, ರಾಮ, ರಾಮ ಎಂಬ ರಾಮನಾಮದ ಜಪವನ್ನು ಮಾಡುತ್ತ ನಾನು ಮನೋಹರನಾದ ಶ್ರೀರಾಮನಲ್ಲಿಯೇ ಆನಂದದಿಂದ ಆಸಕ್ತನಾಗಿದ್ದೇನೆ. ಈ ರಾಮ ಎಂಬ ಒಂದೇ ಶಬ್ದವು ವಿಷ್ಣುಸಹಸ್ರನಾಮದಲ್ಲಿಯ ಸಾವಿರ ಹರಿನಾಮಗಳಿಗೆ ಸಮಾನವಾಗಿವೆ.

**ರಕಾರಾದೀನಿ ನಾಮಾನಿ ಶೃಣ್ವತೋ ಮಮ ಪಾರ್ವತಿ ।**
**ಮನಃ ಪ್ರಸನ್ನತಾಂ ಯಾತಿ ರಾಮನಾಮಾಭಿ ಶಂಕಯಾಃ ॥**

ರ ಕಾರದಿಂದ ಶುರುವಾಗುವ ಯಾವ ಹೆಸರನ್ನು ಕೇಳಿದರೂ ನನ್ನ ಮನಸ್ಸು ಪ್ರಸನ್ನವಾಗುತ್ತದೆ. ರಾಮ ಎಂಬ ಹೆಸರಿನ ಮೊದಲು 'ರ' ಕಾರವೇ ಇದ್ದುದರಿಂದ 'ರ' ಅಕ್ಷರದಿಂದ ಪ್ರಾರಂಭವಾಗುವ ಎಲ್ಲ ಶಬ್ದಗಳೂ ನಾಮಗಳೂ ನನಗೆ ಪ್ರಿಯವಾಗಿವೆ.

**ರಾಮೇತ್ಯುಕ್ತ್ವಾ ಮಹಾದೇವಿ ಭುಂಕ್ಷ್ವ ಸಾರ್ಧಂ ಮಯಾಧುನಾ ।**

ದೇವಿ ಆದುದರಿಂದ ನೀನು ಈಗ ರಾಮ ಎಂಬ ಪವಿತ್ರನಾಮವನ್ನು ಒಂದು ಸಲ ಉಚ್ಚರಿಸಿ ಬಿಡು. ನೀನು ವಿಷ್ಣು ಸಹಸ್ರನಾಮವನ್ನು ಪಾರಾಯಣ ಮಾಡಿದ ಪುಣ್ಯವು ನಿನಗೆ ಬರುವುದು. ಇದರಿಂದ ಪ್ರತಿನಿತ್ಯ ಸಹಸ್ರನಾಮ ಪಾರಾಯಣ ಮಾಡಿಯೇ ಊಟ ಮಾಡುವ ನಿನ್ನ ವ್ರತವೂ ಸಾಂಗವಾದಂತಾಯಿತು. ನನಗೆ ನಿನ್ನ ಜತೆ ಊಟ ಮಾಡುವ ಅಪೇಕ್ಷೆಯೂ ಪೂರ್ಣವಾದಂತಾಯಿತು.

ಪತಿ ಶಂಕರನ ಈ ವಚನವನ್ನು ಕೇಳಿ ಪಾರ್ವತಿಯು ವಿಷ್ಣುವಿನ ಸಹಸ್ರನಾಮಗಳಿಗೆ ಸಮಾನವಾದ ರಾಮ ಎಂಬ ಮಂಗಳನಾಮವನ್ನು ಭಕ್ತಿಯುತಳಾಗಿ ಪಠಿಸಿದಳು. ಅನಂತರ ಮಹಾದೇವರ ಅಪೇಕ್ಷೆಯಂತೆ ಅವರ ಜತೆಗೆ ಕುಳಿತು ಊಟವನ್ನು ಮಾಡಿದಳು.

ಭೋಜನಾ ನಂತರ ಪತಿ ಪರಮೇಶ್ವರನೊಡನೆ ಸರಸಾಲಾಪ ಮಾಡುತ್ತ ಕುಳಿತುಕೊಂಡಾಗ ಪಾರ್ವತಿಯು ಪರಮೇಶ್ವರನನ್ನು ಕೇಳಿದಳು.

**ಪಾರ್ವತಿ:-** ರಾವಣನ ವೈರಿಯಾದ ಆ ಶ್ರೀರಾಮಚಂದ್ರನ ಬೇರೆ ಪುಣ್ಯಕರವಾದ ನಾಮಗಳು ಇದ್ದರೆ, ಅದನ್ನು ನನಗಾಗಿ ದಯವಿಟ್ಟು ತಿಳಿಸಿರಿ.

**ಮಹಾದೇವ:-** ಪಾರ್ವತಿ, ರಾಮಚಂದ್ರನ ನಾಮಗಳು, ಲೌಕಿಕ, ವೈದಿಕ ಎಂದು ಎರಡು ಬಗೆಯಾಗಿವೆ. ಶ್ರೀರಾಮನ ಆ ಎಲ್ಲ ಲೌಕಿಕ ವೈದಿಕ ನಾಮಗಳಲ್ಲಿ ಶ್ರೀರಾಮ ಸಹಸ್ರನಾಮದಲ್ಲಿ ಬರುವ ಸಾವಿರ ಹೆಸರುಗಳು ಅತ್ಯಂತ ಶ್ರೇಷ್ಠವಾಗಿವೆ. ಆ ಸಾವಿರ ನಾಮಗಳಲ್ಲಿಯೂ ಮುಖ್ಯ ನಾಮ ಎಂದರೆ ನೂರ ಎಂಟು ರಾಮನಾಮಗಳು. ಶ್ರೀರಾಮನ ಒಂದೊಂದು ನಾಮವೂ ಎಲ್ಲ ವೇದಗಳಿಗಿಂತ ಮಿಗಿಲಾಗಿವೆ. ಆ ರಾಮನ ಮುಖ್ಯವಾದ ಕೆಲವು ನಾಮಗಳನ್ನು ಅಷ್ಟೋತ್ತರ ಶತನಾಮಾವಳಿ ರೂಪವಾಗಿ ಹೇಳುತ್ತೇನೆ ಕೇಳು.

ಮಹಾದೇವರು ನಿರೂಪಿಸಿದ ನೂರೆಂಟು ರಾಮನಾಮಾವಳಿ

**ಓಂ ಶ್ರೀರಾಮೋ ರಾಮಚಂದ್ರಶ್ಚ ರಾಮಭದ್ರಶ್ಚ ಶಾಶ್ವತ ।**
**ರಾಜೀವಲೋಚನಃ ಶ್ರೀಮಾನ್ ರಾಜೇಂದ್ರೋ ರಘು ಪುಂಗವಃ ॥೧॥**

**ಜಾನಕೀ ವಲ್ಲಭೂಜೈತ್ರೋಜಿತಾಮಿತ್ರೋ ಜನಾರ್ದನಃ ।**
**ವಿಶ್ವಾಮಿತ್ರಪ್ರಿಯೋದಾಂತಃ ಶರಣಾಗತ ವತ್ಸಲಃ ॥೨॥**

**ವಾಲಿಪ್ರಮಥನೋ ವಾಗ್ಮೀ ಸತ್ಯವಾಕ್ ಸತ್ಯವಿಕ್ರಮಃ ।**
**ಸತ್ಯವ್ರತೋ ವ್ರತಫಲಃ ಸದಾ ಹನುಮದಾಶ್ರಯಃ ॥೩॥**

**ಕೌಶಲೇಯಃ ಖರಧ್ವಂಸೀ ವಿರಾಧವಧ ಪಂಡಿತಃ ।**
**ವಿಭೀಷಣ ಪರಿತ್ರಾತಾ ದಶಗ್ರೀವಾ ಶಿರೋಹರಃ ॥೪॥**

**ಸಪ್ತಕಾಲ ಪ್ರಭೇತ್ತಾ ಚ ಹರಕೋದಂಡ ಖಂಡನಃ ।**
**ಜಾಮದಗ್ನಿ ಮಹಾದರ್ಪ ದಲನಸ್ತಾಟಕಾಂತಕೃತ್ಃ ॥೫॥**

**ವೇದಾಂತಪಾರೋ ವೇದಾತ್ಮಾ ಭವಭಂಧೈಕ ಭೇಷಜಂ ।**
**ದೂಷಿಣತ್ರಿಷಿರೋರಿಶ್ಚ ತ್ರಿಮೂರ್ತಿಸ್ತ್ರಿ ಗುಣಾತ್ಮಕಃ ॥೬॥**

ಮುಂದೆ ಒಂದು ದಿನ ಕೆಲವು ದಿನಗಳ ಕಳೆದ ಬಳಿಕ ಮಹಾದೇವನು ಕೈಲಾಸ ಶಿಖರದಲ್ಲಿ ಮಹಾವಿಷ್ಣುವಿನ ಆರಾಧನೆಗೈದು ನೈವೇದ್ಯ ಸಮರ್ಪಣಾದಿಗಳನ್ನು ಮಾಡಿ ಅಂದು ದ್ವಾದಶಿಯಾದುದರಿಂದ ಬೇಗನೆ ಭೋಜನಕ್ಕೆ ಕುಳಿತುಕೊಂಡರು. ನನ್ನ ಜೊತೆಗೆ ಊಟ ಮಾಡಲಿಕ್ಕೆ ಬಾ ಎಂದು ಪಾರ್ವತಿಯನ್ನು ಕರೆದರು. ಆಗ ಪಾರ್ವತಿಯು ಪತಿ ಪರಮೇಶ್ವರನನ್ನು ಕುರಿತು ಮಾತನಾಡಿದಳು.

**ಪಾರ್ವತಿ:-** ಪ್ರಭು, ನಾನು ವಿಷ್ಣು ಸಹಸ್ರನಾಮವನ್ನು ಹೇಳದೇ ಊಟ ಮಾಡುವುದಿಲ್ಲ. ನನ್ನ ಈ ಸಹಸ್ರನಾಮದ ಜಪ ಇನ್ನೂ ಮುಗಿದಿಲ್ಲ. ನೀವು ಊಟ ಮಾಡಿರಿ. ನಾನು ಈ ಜಪವನ್ನು ಮುಗಿಸಿ ಬಂದು ಅನಂತರ ಊಟ ಮಾಡುತ್ತೇನೆ.

**ಮಹಾದೇವ:-**

**ಧನ್ಯಾನಿ, ಕೃತಕೃತ್ಯಾನಿ ವಿಷ್ಣು ಭಕ್ತಾನಿ ಪಾರ್ವತಿ ।**
**ದುರ್ಲಭಾ ವೈಷ್ಣವೀ ಭಕ್ತಿರ್ಭಾಗಧ್ಯೇಯಂ ವಿನೇಶ್ವರಿ ॥**

ಪಾರ್ವತೀ, ನೀನು ಧನ್ಯಳು. ಏಕೆಂದರೆ ನೀನು ವಿಷ್ಣುವಿನ ಪರಮ ಭಕ್ತಳು ಆಗಿರುವೆ. ಆದ್ದರಿಂದ ನೀನು ಕೃತಕೃತಳೂ ಆಗಿರುವೆ. ಒಳ್ಳೆಯ ಭಾಗ್ಯ ಇರದಿದ್ದರೆ ವಿಷ್ಣು ಭಕ್ತಿಯು ಹುಟ್ಟಲಾರದು.

**ರಮಂತೇ ಯೋऽಗಿನೋऽನಂತೆ ಸತ್ಯಾನಂದೇ ಚಿದಾತ್ಮನಿ ।**
**ತೇನ ರಾಮಪದೇ ನಾಸೌ ಪರಂಬ್ರಹ್ಮಾऽಭಿ ಜೀಯತೆ ॥**

ಜ್ಞಾನಾನಂದ ಸ್ವರೂಪಿಯೂ, ಆದಿ, ಮಧ್ಯ, ಅಂತ್ಯಗಳಿಂದ ರಹಿತನೂ ಆದ ಶ್ರೀಹರಿಯಲ್ಲಿ ಎಲ್ಲ ಯೋಗಿಗಳೂ ಭಕ್ತಿಯಿಂದ ಆನಂದವನ್ನು ಪಡುತ್ತಾರೆ. ಮುಂದೆ ಮೋಕ್ಷದಲ್ಲಿ ಸಂತೋಷವನ್ನು ಪಡುತ್ತಾರೆ. ಆದುದರಿಂದ ಪರಬ್ರಹ್ಮನಾದ ಆ ಪರಮಾತ್ಮನೇ ರಾಮ ಎಂಬ ಪದದಿಂದ ಹೇಳಲ್ಪಡುತ್ತಾನೆ.

**ರಾಮ ರಾಮೇತಿ ರಾಮೇತಿ, ರಮೆ । ರಾಮೆ ಮನೋರಮೆ ।**
**ಸಹಸ್ರನಾಮ ತತ್ತುಲ್ಯಂ ರಾಮ ನಾಮ ವರಾನನೇ ॥**

ಸುಂದರಳಾದ ಪಾರ್ವತಿ, ಮನೋಹರವಾದ ರಾಮ, ರಾಮ, ರಾಮ ಎಂಬ ರಾಮನಾಮದ ಜಪವನ್ನು ಮಾಡುತ್ತ ನಾನು ಮನೋಹರನಾದ ಶ್ರೀರಾಮನಲ್ಲಿಯೇ ಆನಂದದಿಂದ ಆಸಕ್ತನಾಗಿದ್ದೇನೆ. ಈ ರಾಮ ಎಂಬ ಒಂದೇ ಶಬ್ದವು ವಿಷ್ಣುಸಹಸ್ರನಾಮದಲ್ಲಿಯ ಸಾವಿರ ಹರಿನಾಮಗಳಿಗೆ ಸಮಾನವಾಗಿವೆ.

**ರಕಾರಾದೀನಿ ನಾಮಾನಿ ಶೃಣ್ವತೋ ಮಮ ಪಾರ್ವತಿ ।**
**ಮನಃ ಪ್ರಸನ್ನತಾಂ ಯಾತಿ ರಾಮನಾಮಾಭಿ ಶಂಕಯಾಃ ॥**

ರ ಕಾರದಿಂದ ಶುರುವಾಗುವ ಯಾವ ಹೆಸರನ್ನು ಕೇಳಿದರೂ ನನ್ನ ಮನಸ್ಸು ಪ್ರಸನ್ನವಾಗುತ್ತದೆ. ರಾಮ ಎಂಬ ಹೆಸರಿನ ಮೊದಲು 'ರ' ಕಾರವೇ ಇದ್ದುದರಿಂದ 'ರ' ಅಕ್ಷರದಿಂದ ಪ್ರಾರಂಭವಾಗುವ ಎಲ್ಲ ಶಬ್ದಗಳೂ ನಾಮಗಳೂ ನನಗೆ ಪ್ರಿಯವಾಗಿವೆ.

**ರಾಮೇತ್ಯುಕ್ತ್ವಾ ಮಹಾದೇವಿ ಭುಂಕ್ಷ್ವ ಸಾರ್ಧಂ ಮಯಾಧುನಾ ।**

ದೇವಿ ಆದುದರಿಂದ ನೀನು ಈಗ ರಾಮ ಎಂಬ ಪವಿತ್ರನಾಮವನ್ನು ಒಂದು ಸಾ ಉಚ್ಚರಿಸಿ ಬಿಡು. ನೀನು ವಿಷ್ಣು ಸಹಸ್ರನಾಮವನ್ನು ಪಾರಾಯಣ ಮಾಡಿದ ಪುಣ್ಯವು ನಿನಗೆ ಬರುವುದು. ಇದರಿಂದ ಪ್ರತಿನಿತ್ಯ ಸಹಸ್ರನಾಮ ಪಾರಾಯಣ ಮಾಡಿಯೇ ಊಟ ಮಾಡುವ ನಿನ್ನ ವ್ರತವೂ ಸಾಂಗವಾದಂತಾಯಿತು. ನನಗೆ ನಿನ್ನ ಜತೆ ಊಟ ಮಾಡುವ ಅಪೇಕ್ಷೆಯೂ ಪೂರ್ಣವಾದಂತಾಯಿತು.

ಪತಿ ಶಂಕರನ ಈ ವಚನವನ್ನು ಕೇಳಿ ಪಾರ್ವತಿಯು ವಿಷ್ಣುವಿನ ಸಹಸ್ರನಾಮಗಳಿಗೆ ಸಮಾನವಾದ ರಾಮ ಎಂಬ ಮಂಗಳನಾಮವನ್ನು ಭಕ್ತಿಯುತಳಾಗಿ ಪಠಿಸಿದಳು. ಅನಂತರ ಮಹಾದೇವರ ಅಪೇಕ್ಷೆಯಂತೆ ಅವರ ಜತೆಗೆ ಕುಳಿತು ಊಟವನ್ನು ಮಾಡಿದಳು.

ಭೋಜನಾ ನಂತರ ಪತಿ ಪರಮೇಶ್ವರನೊಡನೆ ಸರಸಾಲಾಪ ಮಾಡುತ್ತ ಕುಳಿತುಕೊಂಡಾಗ ಪಾರ್ವತಿಯು ಪರಮೇಶ್ವರನನ್ನು ಕೇಳಿದಳು.

**ಪಾರ್ವತಿ:-** ರಾವಣನ ವೈರಿಯಾದ ಆ ಶ್ರೀರಾಮಚಂದ್ರನ ಬೇರೆ ಪುಣ್ಯಕರವಾದ ನಾಮಗಳು ಇದ್ದರೆ, ಅದನ್ನು ನನಗಾಗಿ ದಯವಿಟ್ಟು ತಿಳಿಸಿರಿ.

**ಮಹಾದೇವ:-** ಪಾರ್ವತಿ, ರಾಮಚಂದ್ರನ ನಾಮಗಳು, ಲೌಕಿಕ, ವೈದಿಕ ಎಂದು ಎರಡು ಬಗೆಯಾಗಿವೆ. ಶ್ರೀರಾಮನ ಆ ಎಲ್ಲ ಲೌಕಿಕ ವೈದಿಕ ನಾಮಗಳಲ್ಲಿ ಶ್ರೀರಾಮ ಸಹಸ್ರನಾಮದಲ್ಲಿ ಬರುವ ಸಾವಿರ ಹೆಸರುಗಳು ಅತ್ಯಂತ ಶ್ರೇಷ್ಠವಾಗಿವೆ. ಆ ಸಾವಿರ ನಾಮಗಳಲ್ಲಿಯೂ ಮುಖ್ಯ ನಾಮ ಎಂದರೆ ನೂರ ಎಂಟು ರಾಮನಾಮಗಳು. ಶ್ರೀರಾಮನ ಒಂದೊಂದು ನಾಮವೂ ಎಲ್ಲ ವೇದಗಳಿಗಿಂತ ಮಿಗಿಲಾಗಿವೆ. ಆ ರಾಮನ ಮುಖ್ಯವಾದ ಕೆಲವು ನಾಮಗಳನ್ನು ಅಷ್ಟೋತ್ರ ಶತನಾಮಾವಳಿ ರೂಪವಾಗಿ ಹೇಳುತ್ತೇನೆ ಕೇಳು.

ಮಹಾದೇವರು ನಿರೂಪಿಸಿದ ನೂರೆಂಟು ರಾಮನಾಮಾವಳಿ

**ಓಂ ಶ್ರೀರಾಮೋ ರಾಮಚಂದ್ರಶ್ಚ ರಾಮಭದ್ರಶ್ಚ ಶಾಶ್ವತ ।**
**ರಾಜೀವಲೋಚನಃ ಶ್ರೀಮಾನ್ ರಾಜೇಂದ್ರೋ ರಘು ಪುಂಗವಃ ॥೧॥**

**ಜಾನಕೀ ವಲ್ಲಭೂಜೈತ್ರೋಜಿತಾಮಿತ್ರೋ ಜನಾರ್ದನಃ ।**
**ವಿಶ್ವಾಮಿತ್ರಪ್ರಿಯೋದಾಂತಃ ಶರಣಾಗತ ವತ್ಸಲಃ ॥೨॥**

**ವಾಲಿಪ್ರಮಥನೋ ವಾಗ್ಮೀ ಸತ್ಯವಾಕ್ ಸತ್ಯವಿಕ್ರಮಃ ।**
**ಸತ್ಯವ್ರತೋ ವ್ರತಫಲಃ ಸದಾ ಹನುಮದಾಶ್ರಯಃ ॥೩॥**

**ಕೌಶಲೇಯಃ ಖರಧ್ವಂಸೀ ವಿರಾಧವಧ ಪಂಡಿತಃ ।**
**ವಿಭೀಷಣ ಪರಿತ್ರಾತಾ ದಶಗ್ರೀವಾ ಶಿರೋಹರಃ ॥೪॥**

**ಸಪ್ತಕಾಲ ಪ್ರಭೇತ್ತಾ ಚ ಹರಕೋದಂಡ ಖಂಡನಃ ।**
**ಜಾಮದಗ್ನಿ ಮಹಾದರ್ಪ ದಲನಸ್ತಾಟಕಾಂತಕೃತ್ ॥೫॥**

**ವೇದಾಂತಪಾರೋ ವೇದಾತ್ಮಾ ಭವಭಂಧೈಕ ಭೇಷಜಂ ।**
**ದೂಷಿಣತ್ರಿಪಿರೋರಿಶ್ಚ ತ್ರಿಮೂರ್ತಿಸ್ತ್ರಿ ಗುಣಾತ್ಮಕಃ ॥೬॥**

ತ್ರಿವಿಕ್ರಮ ಸ್ತ್ರೀಲೋಕಾತ್ಮಾ ಪುಣ್ಯಚಾರಿತ್ರ್ಯ ಕೀರ್ತನಃ ।
ತ್ರಿಲೋಕ ರಕ್ಷಕೋ ಧನ್ವೀ ದಂಡ ಕಾರಣ್ಯ ವಾಸಕೃತ್ ॥೭॥

ಅಹಲ್ಯಾಪಾವನಶ್ಚೈವ ಪಿತೃಭಕ್ತೋ ವರಪ್ರದಃ ।
ಜಿತೇಂದ್ರಿಯೋ ಜಿತಕ್ರೋಧೋ ಜಿತಲೋಭೋ ಜಗದ್ಗುರುಃ ।
ಋಕ್ಷವಾನರ ಸಂಪಾತಾ ಚಿತ್ರಕೂಟ ಸಮಾಶ್ರಯಃ ॥೮॥

ಜಯಂತತ್ರಾಣವರದಃ ಸುಮಿತ್ರಾಪುತ್ರ ಸೇವಿತಃ ।
ಸರ್ವದೇವಾಧಿ ದೇವಶ್ಚ ಮೃತವಾನರ ಜೀವನಃ ॥೯॥

ಮಾಯಾಮಾರೀಚಹಂತಾ ಚ ಮಹಾಭಾಗೋ ಮಹಾಭುಜಃ ।
ಸರ್ವದೇವಸ್ತುತಸೌಮ್ಯೋ ಬ್ರಹ್ಮಣ್ಯೋ ಮುನಿಸತ್ತಮಃ ॥೧೦॥

ಮಹಾಯೋಗೀ ಮಹೋದಾರಃ ಸುಗ್ರೀವಸ್ಥಿರ ರಾಜ್ಯದಃ ।
ಸರ್ವಪುಣ್ಯಾಧಿಕ ಫಲಃ ಸ್ಮೃತಸರ್ವಾಘನಾಶನಃ ॥೧೧॥

ಆದಿಪುರುಷೋ ಮಹಾಪುರುಷಃ ಪರಮ ಪುರುಷಃ ತಥಾ ।
ಪುಣ್ಯೋದಯೋ ಮಹಾಸಾರಃ ಪುರಾಣ ಪುರುಷೋತ್ತಮ ॥೧೨॥

ಸ್ಮಿತವಕ್ತ್ರೋಮಿತಭಾಷಿ ಪೂರ್ವಭಾಷಿ ಚ ರಾಘವಃ ।
ಅನಂತಗುಣಗಂಭೀರೋ ಧೀರೋ ದಾಂತ ಗುಣೋತ್ತರ ॥೧೩॥

ಮಾಯಾಮಾನುಷ ಚಾರಿತ್ರೋ ಮಹಾದೇವಾಧಿ ಪೂಜಿತಃ ।
ಸೇತುಕೃತ್‌ಜಿತ್ ವಾರೀಷುಃ ಸರ್ವತೀರ್ಥಮಯೋ ಹರಿಃ ॥೧೪॥

ಶಾಮಾಂಗಃ ಸುಂದರಃ ವೀರ ಪೀತಾವಾಸಾ ಧನುರ್ಧರಃ
ಸರ್ವಯಜ್ಞಾಧಿಪೋ ಯಜ್ಞೋ ಜರಾಮರಣ ವರ್ಜಿತಃ ॥೧೫॥

ಶಿವಲಿಂಗ ಪ್ರತಿಷ್ಠಿತಾ ಸರ್ವಾಕ್ಷ ಗಣವರ್ಜಿತಃ
ಪರಮಾತ್ಮಾ ಪರಬ್ರಹ್ಮ ಸಚ್ಚಿದಾನಂದ ವಿಗ್ರಹ ॥೧೬॥

ಪರಂಜ್ಯೋತಿಃ ಪರಂಧಾಮ ಪರಾಕಾಶಃ ಪರಾತ್ಮರಾಃ ।
ಪರೇಶಃ ಪಾರಗಃ ಪಾರಃ ಸರ್ವಭೂತಾತ್ಮಕಃ ಶಿವಾಃ ॥೧೭॥

ಇತಿ ಶ್ರೀರಾಮಚಂದ್ರಸ್ಯ ನಾಮ್ನಾಮಷ್ಟೋತ್ತರ ಶಕಂ
ಗುಹ್ಯಾದ್ ಗುಹ್ಯತರಂ ದೇವೀ ತವಸ್ನೇಹಾತ್ ಪ್ರಕೀರ್ತಿತಂ ॥೧೮॥

ಯಃ ಪಠೇತ್ ಶೃಣುಯಾದ್ವಾಪಿ ಭಕ್ತಿಯುಕ್ತೇನ ಚೇತಸಾ
ಸರ್ವೈಃ ಪ್ರಮುಚ್ಯತೇ ಪಾಪೈಃ ಕಲ್ಪಕೋಟಿ ಶತೋದ್ಭವೈಃ ॥೧೯॥

ಜಲಾನಿ ಸ್ಥಲತಾಂ ಯಾಂತಿ ಶತ್ರವೋ ಯಾಂತಿ ಮಿತ್ರತಾಂ ।
ರಾಜಾನೋ ದಾಸತಾಂ ಯಾಂತಿ ವಹ್ನಯೋ ಯಾಂತಿ ಸೌಮ್ಯತಾಂ ॥೨೦॥

ಅನುಕೂಲ್ಯಂ ಚ ಭೂತಾನಿ ಸ್ಥೈರ್ಯಂ ಯಾಂತಿ ಚಲಾಶ್ರೀಯಃ ॥

ಈ ರಾಮಚಂದ್ರ ಅಷ್ಟೋತ್ರ ಶತನಾಮ ಸ್ತೋತ್ರವು ಅತ್ಯಂತ ಗುಹ್ಯ ಮತ್ತು ಪರಮ ರಹಸ್ಯ. ನಿನ್ನ ಮೇಲಿನ ಪ್ರೀತಿಯಿಂದ ನಾನು ನಿನಗೆ ಹೇಳಿದ್ದೇನೆ. ಇದರ ಪಠಣ ಶ್ರವಣದಿಂದ ಸರ್ವ ಪಾಪಗಳ ಪರಿಹಾರವಾಗುವುದು. ಶತ್ರುಗಳೂ ಮಿತ್ರರಾಗುವರು. ರಾಜರೂ ದಾಸರಾಗುವರು. ಅವರ ಮನೆಯಲ್ಲಿ ಲಕ್ಷ್ಮೀ ಸ್ಥಿರವಾಗಿ ಉಳಿಯುವಳು.

**''ರಾಮಂ ದುರ್ವಾದಲ ಶಾಮಂ ಪದ್ಮಾಕ್ಷಂ ಪೀತ ವಾಸಸಂ**

ಪೀತಾಂಬರವನ್ನು ಧರಿಸಿದ ದೂರ್ವಾದಳದಂತೆ ಶ್ಯಾಮ ಸುಂದರನಾದ ರಾಮನನ್ನು ಅವನ ದಿವ್ಯ ನಾಮಗಳಿಂದ ಸ್ತೋತ್ರ ಮಾಡುವವರು ಮತ್ತೆ ಸಂಸಾರಕ್ಕೆ ಮರಳಿ ಬರುವುದಿಲ್ಲ.

**ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೆ ।**
**ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥**

ಎಲ್ಲರಿಗೂ ಕಲ್ಯಾಣವನ್ನುಂಟು ಮಾಡುವ ಚಂದ್ರನಂತೆ ಆಹ್ಲಾದಕನಾದ ಜಗತ್ ಜನ್ಮಾದಿ ಕಾರಣನಾದ ರಘುಕುಲದ ದೊರೆಯಾದ ಸೀತಾಪತಿಯಾದ ಜಗನ್ನಾಥನಾದ ಶ್ರೀರಾಮನಿಗೆ ನನ್ನ ನಮಸ್ಕಾರ. ಈ ಮಂತ್ರವನ್ನು ಹಗಲು ರಾತ್ರಿ ಜಪಿಸುವವನು ಎಲ್ಲ ಪಾಪಗಳಿಂದ ಮುಕ್ತನಾಗಿ ವಿಷ್ಣುವಿನ ಸಾಯುಜ್ಯ ರೂಪವಾದ ಮೋಕ್ಷವನ್ನು ಹೊಂದುತ್ತಾನೆ.

**ವಶಿಷ್ಠ:-** ಪರಮೇಶ್ವರನು ಪ್ರೀತಿಯಿಂದ ಹೇಳಿದ, ಶ್ರೀರಾಮನಾಮದ ಮಹಿಮೆಯನ್ನು ಕೇಳಿ ಪಾರ್ವತಿಗೆ ಪರಮಾನಂದವಾಯಿತು. ಅವಳು ಆ ನಂದಿವಾಹನನನ್ನು ವಂದಿಸಿ ನುಡಿದಳು.

**ಪಾರ್ವತಿ:-**

**ಆಹೋ ಮಹಾತ್ಮ್ಯ ಅತುಲಂ ರಾಮಸ್ಯ ಪರಮಾತ್ಮನಃ ।**
**ತ್ವತ್ ಪ್ರಸಾದಾತ್ ಹರೇಃರ್ಭಕ್ತಿಃ ಜನ್ಮ ಜನ್ಮ ನಿಚಾಸ್ತುಮೆ ॥**

ಪರಮಾತ್ಮನಾದ ಶ್ರೀರಾಮಚಂದ್ರನ ಮಹಿಮೆ ಅಪಾರ. ಅದ್ವಿತೀಯ ಮತ್ತು ನಿನ್ನ ಅನುಗ್ರಹದಿಂದ ನನಗೆ ಜನ್ಮ ಜನ್ಮಾಂತರದಲ್ಲಿಯೂ ಇದೇ ರೀತಿಯಾಗಿ ಶ್ರೀಹರಿಯಲ್ಲಿ ಅವಿಚ್ಛಿನ್ನವಾದ ಭಕ್ತಿಯು ಇರಲಿ.

ಹೀಗೆ ಹೇಳಿ ವಿಷ್ಣುಭಕ್ತಾಗ್ರೇಸರಳಾದ ಗೌರೀದೇವಿಯು ಹಗಲಿರುಳು ಯಾವಾಗಲೂ ಎಲ್ಲ ಅವಸ್ಥೆಗಳಲ್ಲಿಯೂ ರಾಮಾಯ ರಾಮಭದ್ರಾಯ ಎಂಬ ಮಂತ್ರವನ್ನು ಜಪಮಾಡುತ್ತ ಸುಖದಿಂದ ಕೈಲಾಸ ಪರ್ವತದಲ್ಲಿ ವಾಸ ಮಾಡಿದಳು, ಪತಿ ಪರಮೇಶ್ವರನೊಂದಿಗೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ವಾಮದೇವ ಋಷಿಯಿಂದ ವಿಷ್ಣು ಸಹಸ್ರನಾಮದ ಉಪದೇಶ ಶಿವನಿಂದ ರಾಮಶಬ್ದದ*
*ನಿರ್ವಚನ ಎಂಬ ಎರಡುನೂರ ಮೂವತ್ತಾರನೇಯ ಅಧ್ಯಾಯ ಮುಗಿದುದು*

—o—

## ಭೃಗು ಋಷಿಗಳಿಂದ ತ್ರಿಮೂರ್ತಿಗಳ ಪರೀಕ್ಷೆ ವಿಷ್ಣುವಿನ ಶ್ರೇಷ್ಠತ್ವ ಪ್ರತಿಪಾದನೆ

**ಅಧ್ಯಾಯ - ೨೩೭**

**ದಿಲೀಪ:-** ಗುರುಗಳೇ ತಾವು ನನಗೆ ಸರ್ವಧರ್ಮಗಳನ್ನೂ ನಿರೂಪಿಸಿದಿರಿ. ಜೀವಾತ್ಮನ ಸಾಮಾನ್ಯ ಸ್ವರೂಪವನ್ನೂ ಪರಮಾತ್ಮನ ವಿಶಿಷ್ಟ ಸ್ವರೂಪವನ್ನೂ ಪ್ರತಿಪಾದಿಸಿದಿರಿ. ಸ್ವರ್ಗ ಮೋಕ್ಷಗಳ ಸ್ಥಿತಿಗತಿಗಳನ್ನೂ ಅವರೆಡರ ಸಾಧನಗಳನ್ನು ಹೇಳಿದಿರಿ. ಇದನ್ನೆಲ್ಲ ತಮ್ಮ ಬಾಯಿಂದ ಕೇಳಿ ನಾನು ಧನ್ಯನಾದೆ. ಈಗ ನನ್ನ ಮನಸ್ಸಿನಲ್ಲಿ ಒಂದೇ ಸಂದೇಹವು ಉಳಿದಿದೆ. ಮಹಾದೇವರು ಪರಮ ಭಾಗವತರಲ್ಲಿ ಶ್ರೇಷ್ಠರು. ಅವರಿಗೆ ಇಂಥ ನಿಂದಿತವಾದ ರೂಪವು ಹೇಗೆ ಬಂದಿತು? ಜಗತ್ತಿನಲ್ಲಿ ಎಲ್ಲ ಕಡೆಯೂ ಪಾರ್ವತಿಯೊಂದಿಗೆ ಅವರು ಯೋನಿ ಲಿಂಗಸ್ವರೂಪದಿಂದ ಏಕೆ ಪೂಜಿತರಾಗುತ್ತಿದ್ದಾರೆ. ಮೂರು ಕಣ್ಣು, ನಾಕು ಕೈ, ಐದು ಮೋರೆ ಉಳ್ಳ ಆ ಶೂಲಪಾಣಿಯಾದ ಮಹಾದೇವನು ಲಿಂಗರೂಪಿಯಾಗಿ ಏಕೆ ಕುಳಿತು ಕೊಂಡಿದ್ದಾನೆ. ಇವೆಲ್ಲವನ್ನೂ ನನಗಾಗಿ ಹೇಳಿರಿ.

**ವಶಿಷ್ಠ:-** ಪೂರ್ವಕಾಲದಲ್ಲಿ ಸ್ವಾಯಂಭುವ ಮನುವು ಮಂದರ ಪರ್ವತಕ್ಕೆ ಎಲ್ಲ ಋಷಿಗಳೊಡನೆ ಆಗಮಿಸಿದ. ಅಲ್ಲಿ ಒಂದು ದೀರ್ಘ ಸತ್ರವನ್ನು ಪ್ರಾರಂಭಿಸಿದ. ಸ್ವಾಯಂಭುವ ಮನುವು ಶುರು ಮಾಡಿದ ಆ ಯಜ್ಞಕ್ಕೆ ಅನೇಕ ವೇದ ವಿದ್ವಾಂಸರೂ ಶಾಸ್ತ್ರ ಪಂಡಿತರೂ, ಧರ್ಮಶಾಸ್ತ್ರ ಪಾರಂಗತರೂ ಆದ ಅನೇಕ ಋಷಿಗಳು, ಮುನಿಗಳೂ ಯೋಗಿಗಳೂ ಬಂದಿದ್ದರು. ಆ ವಿದ್ವಾಂಸರಾದ ಮುನೀ ಮನೀಷಿಗಳ ಸಮ್ಮೇಳನದಲ್ಲಿ ದೇವತಾ ತತ್ವ ವಿಚಾರವು ಪ್ರಸ್ತುತವಾಯಿತು. "ಬ್ರಹ್ಮ, ವಿಷ್ಣು ಮಹೇಶ್ವರರಲ್ಲಿ ಮೋಕ್ಷವನ್ನು ಕೊಡುವ ಜೀವೋತ್ತಮರು ಯಾರು? ಯಾರ ಪಾದೋದಕವನ್ನು ಕುಡಿಯಬೇಕು? ಯಾರ ಉಚ್ಛಿಷ್ಟವಾದ ನೈವೇದ್ಯವನ್ನು ಭಕ್ಷಿಸಬೇಕು? ಈ ತ್ರಿಮೂರ್ತಿಗಳಲ್ಲಿ ನಿಜವಾದ ನಾಶ ರಹಿತನಾದ ಪರಮಾತ್ಮನು ಯಾರು?" ಎಂಬ ವಿಷಯದಲ್ಲಿ ವಾದ ವಿವಾದ ಎದ್ದಿತು. ರುದ್ರನೇ ಸರ್ವೋತ್ತಮ ಎಂದು ಸಾಧಿಸಿದವರು ಹಲವರು. ಬ್ರಹ್ಮನೇ ಪರಮ ಪೂಜ್ಯ, ಪರಬ್ರಹ್ಮ ಎಂದು ವಾದಿಸುವವರು ಕೆಲವರು. ಸೂರ್ಯನೇ ಸರ್ವಶ್ರೇಷ್ಠ ಹಾಗೂ ಪೂಜ್ಯ ಎಂದು ಪ್ರಸ್ಥಾಪಿಸುವವರು ಅನೇಕ ಜನರು. ಸರ್ವಾಂತರ್ಯಾಮಿಯಾದ ಸಾಕ್ಷಾತ್ ಶ್ರೀಹರಿಯೇ ದೇವತಾ ಶ್ರೇಷ್ಠ ಎಂದು ವಿದ್ವಾಂಸರಾದ ದ್ವಿಜರು ಹಲವಾರು ಜನ ಘೋಷಣೆ ಮಾಡಿದರು.

ಹೀಗೆ ಎಲ್ಲ ಪ್ರಾಜ್ಞ ಪುಂಗವರಾದ ಮುನಿ ಮಹರ್ಷಿಗಳೆಲ್ಲರೂ ತಮ್ಮ ತಮ್ಮಲ್ಲಿ ವಾದ ವಿವಾದ ಮಾಡುತ್ತ ಕುಳಿತುಕೊಂಡಾಗ ಸ್ವಾಯಂಭುವ ಮನುವು ಅವರಿಗೆ ನುಡಿದನು. ಪುಂಡರೀಕದಂತೆ ಕಣ್ಣುಗಳುಳ್ಳ ಸಾಕ್ಷಾತ್ ಶ್ರೀದೇವಿಗೆ ಪತಿಯಾದ ಶ್ರೀಹರಿಯೇ ಪುರುಷೋತ್ತಮ; ದೇವೋತ್ತಮ.

ಸ್ವಾಯಂಭುವ ಮನುವಿನ ಈ ನಿರ್ಣಾಯಕ ಉತ್ತರ ಕೇಳಿ ಎಲ್ಲ ಮಹರ್ಷಿಗಳೂ ಕೈ ಮುಗಿದು ತಪೋನಿಧಿಯಾದ ಭೃಗು ಋಷಿಗೆ ಹೇಳಿದರು.

**ಋಷಿಗಳು:-** ಮುನಿ ಶ್ರೇಷ್ಠ, ಈ ತ್ರಿಮೂರ್ತಿಗಳಲ್ಲಿ ಯಾರು ಗರಿಷ್ಠರು ಎಂಬ ವಿಷಯದಲ್ಲಿ ನಮಗೆ ಬಂದ ಸಂಶಯವನ್ನು ಪರಿಹಾರ ಮಾಡುವದರಲ್ಲಿ ನೀವು ಒಬ್ಬರೇ ಸಮರ್ಥರು, ಆದ್ದರಿಂದ ನೀವು ಈ ಬ್ರಹ್ಮ ವಿಷ್ಣು ಮಹೇಶ್ವರರ ಲೋಕಕ್ಕೆ ಹೋಗಿ ಸಮೀಪದಲ್ಲಿ ನಿಂತು ಆ ಮೂವರ ಸಾಕ್ಷಾತ್ ಶರೀರವನ್ನು ನೋಡಿ ಶುದ್ಧ ಸತ್ವ ಗುಣವು ಸಂಪೂರ್ಣವಾಗಿ ಯಾರಲ್ಲಿರುತ್ತದೆಯೋ ಅವರು ಪೂಜ್ಯರು. ನೀವು ಮೂರು ಕಡೆ ಹೋಗಿ ಆ ಮೂವರನ್ನೂ ಸರಿಯಾಗಿ ಪರೀಕ್ಷೆ ಮಾಡಿ ಬನ್ನಿರಿ.

ಈ ಮೂವರಲ್ಲಿ ಯಾರ ತೀರ್ಥ ಹಾಗೂ ಚಿಕ್ಕ ನೈವೇದ್ಯವು ದೇವತೆಗಳಿಗೂ ಪಿತೃಗಳಿಗೂ ಪರಮ ಪಾವನವಾಗುವುದೋ ಅಂಥ ಜೀವೋತ್ತಮನು ಯಾರು? ಸರ್ವೋತ್ತಮನು ಯಾರು? ಇದನ್ನು ಪರೀಕ್ಷಿಸಿ ನಿರ್ಧರಿಸಿಕೊಂಡು ಬನ್ನಿರಿ.

**ವಶಿಷ್ಠ:-** ಹೀಗೆ ಎಲ್ಲ ಮುನಿಗಳು ಪ್ರಾರ್ಥನೆ ಮಾಡಿಕೊಂಡ ಬಳಿಕ ಭೃಗು ಋಷಿಗಳು ವಾಯುಮಾರ್ಗದಿಂದ ಕೈಲಾಸಕ್ಕೆ ಹಾರಿದರು. ಮಹಾದೇವರ ಮನೆಯ ಬಾಗಿಲಿಗೆ ಬಂದರು. ದ್ವಾರಪಾಲಕನಾಗಿ ಅಲ್ಲಿ ನಿಂತು ಕೊಂಡಿದ್ದ ನಂದೀಶ್ವರ ಅವನಿಗೆ ಭೃಗು ಋಷಿಗಳು ಹೇಳಿದರು.

**ಭೃಗು:-** ಸುರೋತ್ತಮನಾದ ಮಹಾದೇವನನ್ನು ಕಾಣಲು ಈ ಕೈಲಾಸಕ್ಕೆ ಬಂದಿದ್ದೇನೆ. ಇದನ್ನು ನಿನ್ನ ಒಡೆಯನಾದ ಶಂಕರನಿಗೆ ತಿಳಿಸು.

ಆ ಮುನಿಯ ಮಾತು ಕೇಳಿ ಎಲ್ಲ ಶಿವಗಣಗಳ ಅಧೀಶ್ವರನಾದ ನಂದಿಯು ಭೃಗುಮಹರ್ಷಿಯನ್ನು ಕುರಿತು ಬಿರುಸಾಗಿಯೇ ಹೇಳಿದ.

**ನಂದಿ:-** ಮುನಿಶ್ರೇಷ್ಠ, ಶಂಕರನು ಮಹಾದೇವಿಯೊಂದಿಗೆ ವಿಹರಿಸುತ್ತಿರುವದರಿಂದ ಈಗ ಅವನ ಬಳಿ ಹೋಗುವದು ಸರಿ ಅಲ್ಲ. ನಿನಗೆ ಬದುಕಬೇಕು, ಎಂಬ ಇಚ್ಛೆ ಇದ್ದರೆ ಈಗಲೇ ಇಲ್ಲಿಂದ ತಿರುಗಿ ಹೊರಟು ಹೋಗು.

ನಂದೀಶ್ವರನಿಂದ ನಿರಾಕರಿಸಲ್ಪಟ್ಟ ಭೃಗು ಋಷಿಯು ಅಲ್ಲಿಯೇ ಪಾರ್ವತಿ ಪರಮೇಶ್ವರರ ಮನೆಯ ಹೊರಗೆ ಕುಳಿತುಕೊಂಡ. ಮಹಾದೇವರು ಒಮ್ಮೆಯೂ ಹೊರಗೆ ಬರಲಿಲ್ಲ. ಈ ಋಷಿಗೆ ದರ್ಶನ ಕೊಡಲಿಲ್ಲ. ಆದರಿಂದ ಕ್ರುದ್ಧನಾದ ಭೃಗು ಋಷಿಯು ಮಹಾದೇವರಿಗೆ ಶಾಪ ನೀಡಿದ.

**ಭೃಗು:-** ಸ್ತ್ರೀಲಂಪಟನಾದ ಈ ಶಂಕರ ನಾರಿಯ ಸಂಗ ಸಂಭ್ರಮದಲ್ಲಿ ಮತ್ತನಾಗಿ ನನ್ನನ್ನು ಅವಮಾನಿಸಿದ್ದಾನೆ. ಅಜ್ಞಾನ ತುಂಬಿದ ಈ ಮೂಢನು ತಾನು ಯಾರು ಎಂಬುದನ್ನು ತಿಳಿದಿಲ್ಲ. ಕಾಮಾಂಧನಾಗಿ ಯಾವಾಗಲೂ ವನಿತಾ ವಿಹಾರ ಲೋಲುಪನಾಗಿ ಇರುವ ಈ ಇಬ್ಬರೂ ಕಾಮುಕ ದಂಪತಿಗಳಿಗೆ ಯೋನಿಲಿಂಗ ಸ್ವರೂಪವೇ ಪ್ರಾಪ್ತವಾಗಲಿ. ತಮೋಗುಣದಿಂದ ತುಂಬಿತುಳುಕುವ ಇವನು ಬ್ರಾಹ್ಮಣನಾದ ನನ್ನನ್ನು ಅವಮಾನ ಮಾಡಿದ್ದಾನೆ. ಆದ್ದರಿಂದ ಇವನ ಬ್ರಾಹ್ಮಣತ್ವವು ನಷ್ಟವಾಗಲಿ. ಯಾವ ಬ್ರಾಹ್ಮಣನೂ ಇವನನ್ನು ಪೂಜಿಸದೇ ಇರಲಿ ಈ ಮಹಾದೇವರಿಗೆ ಅರ್ಪಿಸಿದ ಅನ್ನ, ನೀರು, ಹೂ ಎಲ್ಲವೂ ನಿರ್ಮಾಲ್ಯವಾಗಲಿ.

ಕೋಪಿಷ್ಠನಾದ ಭೃಗು ಮುನಿಯು ಲೋಕಪೂಜಿತನಾದ ಶಂಕರನನ್ನು ಹೀಗೆ ಶಪಿಸಿ ತನ್ನನ್ನು ತಡೆದ ನಂದಿಗೂ ಕೂಡ ಶಾಪ ಹಾಕಿದ.

**ಭೃಗು:-** ಈ ಲೋಕದಲ್ಲಿ ಭಸ್ಮ, ಲಿಂಗ, ಮೂಳೆ ಮುಂತಾದವುಗಳನ್ನು ಧಾರಣ ಮಾಡಿದ ರುದ್ರದೇವರ ಭಕ್ತರೆಲ್ಲರೂ ಪಾಖಂಡಿಗಳಾಗಿ ವೇದಬಾಹ್ಯರೂ ಆಗಿರಿ.

ಹೀಗೆ ತನಗೂ ತನ್ನ ಭೃತ್ಯರಿಗೂ ಹಿಡಿ ಹಿಡಿ ಶಾಪ ಹಾಕಿದ ಭೃಗುಮುನಿಯ ಶಾಪಾಟೋಪವನ್ನು ಕಂಡು ಕೋಪಗೊಂಡ ಪರಮೇಶ್ವರನು ಕೈಯಲ್ಲಿ ತ್ರಿಶೂಲವನ್ನು ಎತ್ತಿ ಭೃಗುಬ್ರಾಹ್ಮಣನನ್ನು ಕೊಲ್ಲಲು ಧಾವಿಸಿದ. ಆಗ ಪಾರ್ವತಿಯು ಶಂಕರನ ಪಾದದ ಮೇಲೆ ಬಿದ್ದು ಕೈ ಮುಗಿದು ವಿನಯದಿಂದಲೇ ಅವನನ್ನು ಬ್ರಹ್ಮಹತ್ಯೆಯಿಂದ ತಿರುಗಿಸಿದಳು. ಅನಂತರ ಭೃಗುಮುನಿಯು ಮಹಾದೇವರ ಹಣೆಯ ನಡುವಿನ ಕೋಟಿ ಸೂರ್ಯರ ಕಾಂತಿಯಿಂದ ದೇದೀಪ್ಯಮಾನವಾದ ನಡುಗಣ್ಣನ್ನು ನೋಡಿ ನಕ್ಕು ತನ್ನ ಪಾದದಲ್ಲಿಯೂ ಕಣ್ಣನ್ನು ತೋರಿದ, ಮತ್ತು ತನ್ನ ಶಾಪವನ್ನೇ ಪುನರುಚ್ಚರಿಸಿ ''ನನ್ನ ಮಾತು ಎಂದೂ ಸುಳ್ಳಾಗಲಾರದು. ನೀನು ಕುರೂಪಿಯಾಗುವುದು ನಿಶ್ಚಿತ'' ಎಂದು ನುಡಿದು ಅಲ್ಲಿಂದ ಹೊರಗೆ ನಡೆದ.

ಅಂದಿನಿಂದ ಬ್ರಾಹ್ಮಣರಿಗೆ ಶಿವನ ಪಾದೋದಕ ನಿರ್ಮಾಲ್ಯಾದಿಗಳು ಅಗ್ರಾಹ್ಯ ಆದವು.

**ತತಃ ಪ್ರಭೃತಿಃ ವಿಪ್ರಾಣಾಂ ತಸ್ಯ ಪಾದೋದಕಾದಿಕಂ ।**
**ಅಗ್ರಾಹ್ಯಮಭವದ್ ರಾಜನ್ ಸರ್ವಭೂತಾಹಿ ಪಶ್ಯತು ॥**
**ಪಾಶಂಡೈಃ ಪೂಜ್ಯಮಾನಸ್ತು ಲಿಂಗರೂಪಧರಾಶಿವಃ ॥**

ಸರ್ವಪ್ರಾಣಿಗಳಿಗೆ ಅಧೀಶ್ವರನಾದರೂ ಆ ಶಿವನನ್ನು ತೊಳೆದ ತೀರ್ಥವನ್ನು ಪಾದೋದಕ ಎಂದು ವಿಪ್ರರು ಸ್ವೀಕರಿಸುವದಿಲ್ಲ. ಶಿವನಿಗೆ ಈ ಲಿಂಗದ ರೂಪವು ಭೃಗುಮುನಿಯು ಶಾಪ ಕೊಟ್ಟ ದಿನದಿಂದಲೇ ಬಂದಿತು. ಪಾಷಂಡಿಗಳು ಅವನನ್ನು ಅಂದಿನಿಂದ ಪೂಜಿಸತೊಡಗಿದರು.

ಕೈಲಾಸ ಲೋಕದಿಂದ ಆ ಭೃಗುಮುನಿಯು ಬ್ರಹ್ಮಲೋಕಕ್ಕೆ ನೇರವಾಗಿ ನಡೆದ. ಎಲ್ಲ ದೇವತೆಗಳೊಂದಿಗೆ ಉಚ್ಚತರವಾದ ಆಸನದ ಮೇಲೆ ಆಸೀನನಾದ ಬ್ರಹ್ಮದೇವರಿಗೆ ಕೈ ಮುಗಿದು, ಅವರ ಎದುರೇ ಅಂಜಲಿ ಬದ್ಧನಾಗಿ ನಿಂತಕೊಂಡ. ಆದರೂ ಬ್ರಹ್ಮದೇವರು ಆ ಭೃಗುಋಷಿಗೆ ಸ್ವಾಗತ ಸತ್ಕಾರ ಮಾಡಲಿಲ್ಲ. ಕಣ್ಣೆತ್ತಿ ನೋಡಲಿಲ್ಲ. ಒಂದು ಮಾತನ್ನು ಕೂಡ ಬಾಯಿ ತೆರೆದು ಆಡಲಿಲ್ಲ. ಇದರಿಂದ ಭೃಗುಋಷಿಗೆ ಸಿಟ್ಟು ಬಂದಿತು. ಬ್ರಹ್ಮದೇವನಿಗೆ ತನ್ನ ಶಾಪವನ್ನು ಎಸೆದ.

**ಭೃಗು:-** ಬ್ರಹ್ಮ, ನೀನು ರಜೋಗುಣದಿಂದ ಉದ್ರಿಕ್ತನಾಗಿ ನನ್ನನ್ನು ಅವಮಾನಿಸಿದೆ. ನೀನು ಜಗತ್ತಿನಲ್ಲಿ ಪೂಜೆ ಇಲ್ಲದವನು ಆಗು ಯಾರೂ ನಿನ್ನ ಪೂಜೆಯನ್ನು ಮಾಡದಿರಲಿ.

**ವಶಿಷ್ಠ:-** ಹೀಗೆ ಭೃಗುಋಷಿಯು ಶಾಪಕೊಟ್ಟ ಬಳಿಕ ಈ ಜಗತ್ತಿನಲ್ಲಿ ಯಾರೂ ಬ್ರಹ್ಮದೇವರ ಪೂಜೆಯನ್ನೇ ಮಾಡುವುದಿಲ್ಲ. ಹೀಗೆ ಬ್ರಹ್ಮದೇವರಿಗೆ ಶಾಪಕೊಟ್ಟು ಆ ಭೃಗುಬ್ರಾಹ್ಮಣ ವೈಕುಂಠ ಲೋಕಕ್ಕೆ ನಡೆದ. ಕ್ಷೀರ ಸಮುದ್ರದ ಉತ್ತರ ತಟದಲ್ಲಿ ಇರುವ ಆ ವಿಷ್ಣುಲೋಕದಲ್ಲಿ ಯಾರೂ ತಡೆಯಲಿಲ್ಲ, ಆ ಭೃಗುಮುನಿಯನ್ನು. ಅಂತಃಪುರದಲ್ಲಿಯೇ ಒಳ ನಡೆದ, ಆ ಮಹರ್ಷಿ. ಅಲ್ಲಿ ಸೂರ್ಯನಂತೆ ಹೊಳೆಯುವ ವಿಮಾನ ಮಂಟಪದಲ್ಲಿ ಒಂದು ಶೇಷ ಪರ್ಯಂಕ. ಆ ಹಾವಿನ ಹಾಸಿಗೆಯ ಮೇಲೆ

ಹಾಯಾಗಿ ಮಲಗಿದ್ದಾನೆ ಹರಿ. ಅವನ ಕಾಲಬದಿಯಲ್ಲಿ ಕುಳಿತು ಲಕ್ಷ್ಮೀದೇವಿ ಅವನ ಎರಡೂ ಪಾದಗಳನ್ನು ನೀವುತ್ತಲಿದ್ದಾಳೆ. ಇದನ್ನು ಕಂಡು ಬ್ರಹ್ಮಾಂಡ ಕೋಪ ಬಂದಿತು. ಆ ಭೃಗುಋಷಿಗೆ ಅವನು ತನ್ನ ಎಡಗಾಲನ್ನು ಎತ್ತಿ ಒದ್ದು ಬಿಟ್ಟ ಶ್ರೀಹರಿಯ ವಕ್ಷಸ್ಥಲಕ್ಕೆ. ಕೂಡಲೇ ಭಗವಂತ ಎದ್ದ. ಬ್ರಾಹ್ಮಣನ ಪಾದ ಸ್ಪರ್ಶದಿಂದ ನಾನು ಧನ್ಯ ಧನ್ಯ ಎಂದು ಆನಂದೋದ್ಗಾರ ತೆಗೆದ. ತನ್ನ ಎರಡೂ ಕೈಗಳಿಂದ ಭೃಗುಬ್ರಾಹ್ಮಣನ ಎರಡು ಪಾದಗಳನ್ನು ಗಟ್ಟಿಯಾಗಿ ಹಿಡಿದು ನಮಸ್ಕಾರ ಮಾಡಿ ಮೆತ್ತಗೆ ಅವನ ಕಾಲುಗಳನ್ನು ಒತ್ತಿ ಮೆಲ್ಲನೆ ಮಧುರ ಮಾತುಗಳನ್ನು ನುಡಿದ.

**ವಿಷ್ಣು:-**

**ಧನ್ಯೋ ಸ್ಮ್ಯದ್ಯೈವ ವಿಪ್ರರ್ಷೇ ಕೃತಕೃತ್ಯೋಽಸ್ಮಿ ಸರ್ವದಾ ।**
**ತ್ವತ್ ಪಾದಸ್ಪರ್ಶನಾದೋಃ ಮಂಗಲಂ ಮೇ ಭವಿಷ್ಯತಿ ॥**

ಬ್ರಾಹ್ಮಣೋತ್ತಮ, ನಾನು ಇಂದು ಧನ್ಯನಾದೆ ಮತ್ತು ಕೃತಕೃತ್ಯನೂ ಆದೆ. ನನ್ನ ದೇಹಕ್ಕೆ ತಮ್ಮಂತಹವರ ಪಾದಸ್ಪರ್ಶವು ಆದ್ದರಿಂದ ನಮಗೆ ಮುಂದೆ ಎಲ್ಲ ವಿಧದ ಮಂಗಳ ಉಂಟಾಗುವುದರಲ್ಲಿ ಸಂದೇಹವಿಲ್ಲ.

**ಸಮಸ್ತ ಸಂಪತ್ಸ ಮವಾಪ್ತಿ ಹೇತವಃ ಸಮುದ್ಧಿತ್ತಾಪತ್‌ಕುಲ ಧೂಮಕೇತವಃ**
**ಅಪಾರ ಸಂಸಾರ ಸಮುದ್ರಸೇತವಃ ಪುನಂತು ಮಾಂ ಬ್ರಾಹ್ಮಣ ಪಾದ ಪಾಂಸವಃ ॥**

ಎಲ್ಲ ವಿಧ ಸಂಪತ್ತು ಬರಲು ಕಾರಣವಾದ ಕುತ್ತು ಆಪತ್ತುಗಳಿಗೆಲ್ಲ ಧೂಮಕೇತುವಿನಂತೆ ಇರುವ ಅಪಾರವಾದ ಸಂಸಾರವೆಂಬ ಸಮುದ್ರದ ಸೇತುವಿನಂತಿರುವ ಬ್ರಾಹ್ಮಣರ ಪಾದದ ಧೂಳಿಯು ನನ್ನನ್ನು ಪವಿತ್ರನನ್ನಾಗಿ ಮಾಡಲಿ.

ಹೀಗೆ ಹೇಳಿ ಎದ್ದು ಲಕ್ಷ್ಮೀದೇವಿಯಿಂದ ಒಡಗೂಡಿ ಅರ್ಘ್ಯ, ಪಾದ್ಯ, ಆಸನ, ಗಂಧ ಚಂದನ, ದಿವ್ಯಹಾರ ಮುಂತಾದವುಗಳನ್ನು ನೀಡಿ ಭಕ್ತಿಯಿಂದ ಆ ಮಹರ್ಷಿಯ ಪೂಜೆ ಮಾಡಿದ. ಭಗವಂತನ ಈ ವಿನಯ ಸೌಜನ್ಯ, ಸಜ್ಜನಿಕೆ, ಭಕ್ತವಾತ್ಸಲ್ಯ, ಕ್ಷಮಾಗುಣ ಮುಂತಾದವುಗಳನ್ನು ಕಂಡು ಭೃಗುಋಷಿಗೆ ಪರಮಾನಂದವಾಯಿತು. ಅವನ ಕಂಗಳಿಂದ ಆನಂದ ಬಾಷ್ಪಗಳು ಉದುರಿದವು. ಎದ್ದು ಬಂದು ಆ ನಾರಾಯಣನ ಪಾದ ಮುಟ್ಟಿ ಆ ಮುನಿಯು ನಮಸ್ಕಾರ ಮಾಡಿದ. ಕೈ ಜೋಡಿಸಿ ಸಂತಸ ತುಂಬಿ ನುಡಿದ. ಆ ತೀಕ್ಷ್ಣ ತಪಸ್ವಿಭೃಗು.

**ಭೃಗು:-**

**ಅಹೋರೂಪ ಮಹೋಶಾಂತಿ ರಹೋಜ್ಞಾನ ಮಹೋದಯಾ ।**
**ಅಹೋಸು ನಿರ್ಮಲಾ ಕ್ಷಾಂತಿ ರಹೋ ಸತ್ವಗುಣಂ ಹರೇಃ ॥**

ಅಬ್ಬಾ ! ಏನು ರೂಪ ! ಎಂತಹ ಕಾಂತಿ ! ಏನು ಶಾಂತಿ ! ಏನು ಜ್ಞಾನ ! ಎಷ್ಟು ದಯೆ ! ಎಂಥ ಕ್ಷಮಾಗುಣ ! ಎಂಥ ಸಾತ್ವಿಕತೆ ಈ ಶ್ರೀಹರಿಯಲ್ಲಿ.

**ಅನರ್ಹಾ ಬ್ರಹ್ಮ ರುದ್ರಾದ್ಯಾ ರಜಸ್ತಮೋ ವಿಮಿಶ್ರಿತಾ ।**
**ತ್ವಂ ಶುದ್ಧಸತ್ವ ಗುಣವಾನ್ ಪೂಜನಿಯೋಗ್ರಜನ್ಮನಾಂ ॥**

ಬ್ರಹ್ಮರುದ್ರ ಮೊದಲಾದ ದೇವತೆಗಳು ರಜೋಗುಣದಿಂದಲೂ ತಮೋಗುಣ

ದಿಂದಲೂ ಕೂಡಿರುತ್ತಾರೆ. ಆದ್ದರಿಂದ ಅವರು ಬ್ರಾಹ್ಮಣರಿಗೆ ಪೂಜನೀಯರು ಆಗಲಾರರು. ಶುದ್ಧ ಸತ್ವಗುಣದ ಮೂರ್ತಿಯಾದ ನೀನು ಮಾತ್ರ ನಮ್ಮೆಲ್ಲರಿಗೂ ಪೂಜನೀಯನೂ ವಂದನೀಯನೂ ಆಗಿರುತ್ತಿ.

**ತ್ವತ್‌ಪಾದಸ್ವರಿಲಂ ಸೇವ್ಯಂ ಪಿತೃಣಾಂಚ ದಿವೌಕಸಾಂ ।**
**ಸರ್ವೇಷಾಂ ಬೂಸೂರಾಣಾಂಚ ಮುಕ್ತಿದಂ ಕಲ್ಮಷಾಪಹಂ ॥**

ನಿನ್ನ ಪಾದ ತೊಳೆದ ನೀರು ಪಿತೃಗಳಿಗೂ ದೇವತೆಗಳಿಗೂ ಸೇವಿಸಲು ಯೋಗ್ಯವಾಗಿದೆ. ಎಲ್ಲ ಭೂಮಿಯಲ್ಲಿರುವ ಭಗವದ್ಭಕ್ತರಿಗೆ ವಿಷ್ಣುವಿನ ಪಾದೋದಕವು ಮಾತ್ರ ಪಾಪವನ್ನು ಕಳೆದು ಮುಕ್ತಿಯನ್ನು ನೀಡುವುದು.

**ತದ್ಭುಕ್ತೊಚ್ಚಿ ಶೇಷಂ ವೈ ಪಿತೃಣಾಂಚ ದಿವೌಕಸಃ ।**
**ಸರ್ವೇಷಾಂ ಭೂಸೂರಾಣಾಂಚ ಮುಕ್ತಿದಂ ಕಲ್ಪಷಾಪಹಂ ॥**

ನೀನು ಉಂಡು ಬಿಟ್ಟ ಉಚ್ಛಿಷ್ಟಶೇಷವು ಅರ್ಥಾತ್ ನೈವೇದ್ಯವು ಎಲ್ಲ ದೇವತೆಗಳಿಗೂ ಪಿತೃಗಳಿಗೂ ಬ್ರಾಹ್ಮಣರಿಗೂ ಪಾಪ ಪರಿಹಾರಕವೂ ಮುಕ್ತಿದಾಯಕವೂ ಆಗಿರುತ್ತದೆ.

**ಇತರೇಷಾಂಚು ದೇವಾನಾಮನ್ನಂ ಪುಷ್ಪಂ ಜಲಂತಥಾ ।**
**ಅಸ್ಪಶ್ಯಂತು ಭವೇತ್ಸರ್ವಂ ನಿರ್ಮೂಲ್ಯಂ ಸುರಯಾ ಸದುಂ ॥**

ಮಹಾವಿಷ್ಣುವೇ ನಿನ್ನ ಹೊರತು ಬೇರೆ ದೇವತೆಗಳಿಗೆ ಅರ್ಪಿಸಿದ ಅನ್ನ ಏರಿಸಿದ ಹೂವು ತೊಳೆದ ತೀರ್ಥ ಅಥವಾ ಪಾದೋದಕ ಇವೆಲ್ಲವೂ ಮದ್ಯಕ್ಕೆ ಸಮಾನ. ಬಾಡಿದ ಹೂವಿನಂತೆ ತ್ಯಾಜ್ಯ.

**ನಾನ್ಯಂ ದೇವಂತು ವಿಕ್ಷೇತ ಬ್ರಾಹ್ಮಣೋ ನ ಚ ಪೂಜಯೇತ್ ।**
**ನಾನ್ಯಪ್ರಸಾದಂ ಭುಂಜಿತ ನಾನ್ಯಸ್ಯಾಯತನಂ ವಿಶೇತ ॥**

ಬ್ರಹ್ಮಜ್ಞಾನಿಯಾದವನು ವಿಷ್ಣುವಿನ ಹೊರತು ಬೇರೆ ದೇವರನ್ನು ನೋಡಬಾರದು. ಪೂಜೆಯನ್ನು ಮಾಡಬಾರದು. ಬೇರೆ ದೇವತೆಯ ಪ್ರಸಾದವನ್ನೂ ತಿನ್ನಬಾರದು. ವಿಷ್ಣುವಿನ ಹೊರತು ಬೇರೊಬ್ಬ ದೇವತೆಯ ಗುಡಿಗೂ ಕೂಡ ಹೋಗಬಾರದು.

**ನ ದದಾತೀಹ ಯೋ ವಿಪ್ರಃ ಪಿತೃಣಾಂ ಶ್ರಾದ್ಧ ಕರ್ಮಣಿ ।**
**ತ್ವದ್ ಭುಕ್ತಮನ್ನಂ ತೀರ್ಥಂಚ ತತ್‌ಸರ್ವಂ ನಿಷ್ಫಲಂ ಭವೇತ್ ॥**

ಯಾವ ವಿಪ್ರನು ಪಿತೃಗಳ ಶ್ರಾದ್ಧದಲ್ಲಿ ವಿಷ್ಣುವಿನ ಪಾದ ತೊಳೆದ ತೀರ್ಥವನ್ನು ಮತ್ತು ಅವನಿಗೆ ನೈವೇದ್ಯ ತೋರಿಸಿದ ಅನ್ನವನ್ನು ಪಿತೃಗಳಿಗೂ ಬ್ರಾಹ್ಮಣರಿಗೂ ನೀಡುವುದಿಲ್ಲವೋ ಅಂಥ ಶ್ರಾದ್ಧವೆಲ್ಲವೂ ವ್ಯರ್ಥವಾಗುತ್ತದೆ.

**ತಸ್ಮಾತ್ ತ್ವಮೇವ ಸರ್ವೆಷಾಂ ಪೂಜ್ಯೊ ನಾನ್ಯೋಸ್ತಿ ಕಶ್ಚನ ।**
**ಮೋಹಾದ್ ಯಃ ಪೂಜಯೇದ್‌ನ್ಯಾನ್ ಸ ಪಾಖಂಡಿ ಭವಿಷ್ಯತಿ ॥**

ಆದುದರಿಂದ ಶ್ರೀಹರಿಯೆ ನೀನೇ ವಿಪ್ರರಿಗೆಲ್ಲ ಪರಮಪೂಜ್ಯನು ಆಗಿರುತ್ತಿ ಬೇರೆ ಯಾರೂ ಪೂಜ್ಯರು ಅಲ್ಲ. ಮೋಹದಿಂದ ಯಾರಾದರೂ ಬೇರೆ ದೇವತೆಗಳನ್ನು ಪೂಜಿಸಿದರೆ ಅವನು ಪಾಖಂಡಿ ಆಗುತ್ತಾನೆ. ಎಲ್ಲ ಜ್ಞಾನಿಗಳಾದ ಬ್ರಾಹ್ಮಣರು ನಿನ್ನ ಸೇವೆ

ಮಾಡುವುದರಿಂದ ನೀನು ಆ ಬ್ರಾಹ್ಮಣರ ಮೇಲೆ ಪ್ರೇಮ ಮಾಡುವೆ, ಬ್ರಹ್ಮ ಎಂದು ಕರೆಯಿಸಿಕೊಳ್ಳಲ್ಪಡುವ ಎಲ್ಲ ವೇದರಾಶಿಯಿಂದ ನೀನೇ ಪ್ರತಿಪಾದ್ಯನೂ ಮುಖ್ಯ ತಾತ್ಪರ್ಯ ವಿಷಯನೂ ಆಗಿರುತ್ತಿ. ಮತ್ತು ಬ್ರಹ್ಮ ಶಬ್ದದ ಮುಖ್ಯಾರ್ಥವಾದ ಗುಣಪರಿಪೂರ್ಣತ್ವವು ನಿನ್ನಲ್ಲಿಯೇ ಪರ್ಯಾಪ್ತವಾಗಿರುತ್ತದೆ. ಮತ್ತು ನಿನ್ನ ಮುಖ್ಯ ಅಧಿಷ್ಠಾನವಾದ ಬ್ರಹ್ಮನಲ್ಲಿ ನಿಂತು ಹದಿನಾಲ್ಕು ಲೋಕಗಳ ಸೃಷ್ಟಿಯನ್ನು ಮಾಡಿದ ಆ ಬ್ರಹ್ಮನ ಮೇಲೆ ಅನುಗ್ರಹ ವೃಷ್ಟಿಯನ್ನು ಸುರಿಸುವಿ. ಬ್ರಹ್ಮ ಶಬ್ದ ವಾಚ್ಯರಾದ ಎಲ್ಲ ಜೀವರನ್ನು ಕರುಣೆಯಿಂದ ಕಾಪಾಡುವೆ. ಈ ಎಲ್ಲ ಕಾರಣಗಳಿಂದ ನಿನಗೆ ಬ್ರಹ್ಮಣ್ಯ ಎಂದು ಕರೆಯುತ್ತಾರೆ.

**ಬ್ರಹ್ಮಣೋ ದೇವಕೀ ಪುತ್ರೋ ಬ್ರಹ್ಮಣೋ ಮಧುಸೂದನ ।**
**ಬ್ರಹ್ಮಣೋ ಪುಂಡರೀಕಾಕ್ಷೋ ಬ್ರಹ್ಮಣೋ ವಿಷ್ಣುರಚ್ಯುತ ।**
**ನಮೋ ಬ್ರಹ್ಮಣ್ಯ ದೇವಾಯ ವಾಸುದೇವಾಯ ವಿಷ್ಣವೇ ॥**

ಎಂದು ಎಲ್ಲ ಜ್ಞಾನಿಗಳು ನಿನ್ನನ್ನು ಸ್ತೋತ್ರ ಮಾಡುತ್ತಾರೆ.

ಭೂಲೋಕದಲ್ಲಿ ಇರುವ ಎಲ್ಲ ಋಷಿಗಳು ನನ್ನನ್ನು ತ್ರಿಮೂರ್ತಿಗಳ ಪರೀಕ್ಷೆಗಾಗಿ ಕಳಿಸಿಕೊಟ್ಟಿದ್ದಾರೆ. ಪರಮ ಶ್ರೇಷ್ಠತ್ವ ಸೂಚಕವಾದ ಶುದ್ಧ ಸತ್ವಗುಣವು ಯಾರಲ್ಲಿ ಸಂಪೂರ್ಣವಾಗಿ ತುಂಬಿಕೊಂಡಿದೆ ಎಂಬುದನ್ನು ನಮಗೆ ಪರೀಕ್ಷಿಸಬೇಕಾಗಿತ್ತು. ಬ್ರಹ್ಮ ರುದ್ರಾದಿಗಳು ರಜೋಗುಣ ತಮೋಗುಣ ಪ್ರಚುರರೆಂದು ಕಂಡುಕೊಂಡೆ ಮತ್ತು ನೀನು ಮಾತ್ರ ಶುದ್ಧ ಸತ್ವಗುಣದ ಮೂರ್ತಿ, ಪರಾತ್ಪರ ಪರತತ್ವ ಎನಿಸಿದ ದೇವತೆ ಪರಮಾತ್ಮ ಎಂದು ಅರಿತುಕೊಂಡೆ.

**ತವಶೀಲ ಗುಣಾನ್ ಜ್ಞಾತು ಚರಣಂ ಮಮಕೇಶವ**
**ದತ್ತಂ ವಕ್ಷಸಿ ಗೋವಿಂದ ತತ್ ಕ್ಷಂತವ್ಯಂ ಕೃಪ ನಿಧೇ ॥**

ನಿನ್ನ ಶೀಲ ಗುಣಗಳನ್ನು ಅರಿತುಕೊಳ್ಳಲಿಕ್ಕಾಗಿಯೇ ನಾನು ನಿನ್ನ ವಕ್ಷಸ್ಥಲವನ್ನು ನನ್ನ ಕಾಲುಗಳಿಂದ ಪರೀಕ್ಷಿಸಿದೆ. ಗೋವಿಂದ ನನ್ನನ್ನು ಕ್ಷಮಿಸು.

ಹೀಗೆ ಹೇಳಿ ಭೃಗು ಮಹರ್ಷಿಯು ವಿಷ್ಣುವಿಗೆ ಮತ್ತೆ ಮತ್ತೆ ನಮಸ್ಕಾರ ಮಾಡಿದ. ಮತ್ತು ಅಲ್ಲಿಂದ ಆ ವೈಕುಂಠ ಲೋಕದಿಂದ ಹೊರಟು ಭೂ ಲೋಕದಲ್ಲಿ ಯಜ್ಞ ನಡೆದಲ್ಲಿಗೆ ಬಂದ. ತ್ರಿಮೂರ್ತಿಗಳ ಮೂರೂ ಲೋಕಗಳಿಗೆ ಹೋಗಿ ಬಂದ ಆ ಮಹಾಪುರುಷನನ್ನು ಕಂಡು ಯಜ್ಞದೀಕ್ಷಿತರಾದ ಎಲ್ಲ ಮುನಿ ಮಹರ್ಷಿಗಳು ಎದ್ದು ನಿಂತು ಅವನಿಗೆ ಸ್ವಾಗತ ನೀಡಿ ಸತ್ಕಾರ ಮಾಡಿ ನಮಸ್ಕರಿಸಿ ಪೂಜೆಗೈದು ''ನಿಮ್ಮ ತ್ರಿಲೋಕ ಸಂಚಾರದ ಫಲ ಶ್ರುತಿ ಏನು?'' ಎಂದು ಕೇಳಿದರು. ಆಗ ಭೃಗು ಋಷಿಗಳು ಆ ಮುನಿ ಮನೀಷಿಗಳಿಗೆ ತಾನು ತ್ರಿಮೂರ್ತಿಗಳನ್ನು ಕೂಡ ಪ್ರತ್ಯಕ್ಷವಾಗಿ ಕಂಡು ಪರೀಕ್ಷೆ ಮಾಡಿ ಒಂದು ನಿರ್ಧಾರಕ್ಕೆ ಬಂದುದನ್ನು ತಿಳಿಸಿದರು.

**ಭೃಗುಮುನಿ:-**

**ರಜಸ್ತಮೋ ಗುಣೋದ್ರಿಕ್ತೌ ವಿಧಿಷಾನೌ ಸುರೋತ್ತಮೌ ।**
**ಶಪ್ತೌಮಯಾ ನಪೂಜ್ಯಾತೌ ವಿಪ್ರಾಣಾಂ ಋಷಿ ಸತ್ತಮ ॥**

ಬ್ರಹ್ಮ ಮತ್ತು ಮಹಾದೇವರು ರಜೋಗುಣ ಹಾಗೂ ತಮೋಗುಣಗಳಿಂದ

ಯಾವಾಗಲೂ ಉದ್ರಿಕ್ತರಾಗಿಯೇ ಇರುತ್ತಾರೆ. ಆದ್ದರಿಂದ ಅವರು ನನ್ನಿಂದ ಶಪಿತರಾಗಿದ್ದಾರೆ. ನನಗಾಗಲಿ ನಿಮಗಾಗಲಿ, ಅವರು ಪೂಜ್ಯರಲ್ಲ.

**ಶುದ್ಧ ಸತ್ವ ಮಯೋ ವಿಷ್ಣುಃ ಕಲ್ಯಾಣ ಗುಣಸಾಗರಃ ।**
**ನಾರಾಯಣ ಪರಬ್ರಹ್ಮ ವಿಪ್ರಾಣಾಂ ದೈವತೋ ಹರಿಃ ॥**

ಶುದ್ಧ ಸತ್ವಮಯನೂ ಕಲ್ಯಾಣ ಗುಣಗಳಿಗೆ ಸಮುದ್ರದೋಪಾದಿಯಲ್ಲಿ ಇರುವವನೂ ಗುಣಪರಿಪೂರ್ಣನೂ ಆದ ನಾರಾಯಣನೇ ಪರಬ್ರಹ್ಮ, ಪರಮಾತ್ಮ, ವಿಪ್ರರಿಗೆಲ್ಲ ಅವನೇ ಪೂಜ್ಯ ದೇವ.

**ಸ ಏವ ಪೂಜ್ಯೋ ವಿಪ್ರಾಣಾಂ ನೇತರಃ ಪುರುಷಃ ರ್ಪಭಃ ।**
**ಮೋಹಾಧ್ಯಃ ಪೂಜಯೇನ್ಯಂ ಸ ಪಾಖಂಡೀ ಭವಿಷ್ಯತಿ ॥**

ವಿಪ್ರರಿಗೆಲ್ಲ ಆ ವಿಷ್ಣು ಒಬ್ಬನೇ ಪೂಜ್ಯನಾಗಿರುತ್ತಾನೆ. ಬೇರೆ ಯಾವ ಪುರುಷನೂ ಪೂಜ್ಯನಲ್ಲ. ಆ ಹರಿಯ ಹೊರತು ಬೇರೆ ದೇವರನ್ನು ಪೂಜಿಸಿದರೆ, ಅವನು ಪಾಖಂಡಿ ಎನಿಸುತ್ತಾನೆ.

**ತಸ್ಮಾತ್ ವಿಷ್ಣೋಃಪಸಾದೋವೈ ಸೇವಿತವ್ಯೋ ದ್ವಿಜನ್ಮನಾಂ ।**
**ತಸ್ಯ ಪಾದೋದಕಂ ಸೇವ್ಯ ಭುಕ್ತೋಚ್ಛಿಷ್ಠ ಚ ಪಾವನಂ ॥**

ಆ ವಿಷ್ಣುವಿನ ಪ್ರಸಾದವನ್ನೇ ಎಲ್ಲ ದ್ವಿಜರೂ ಸೇವಿಸಬೇಕು. ಅವನ ಪಾದ ತೊಳೆದ ನೀರನ್ನು ಅಥವಾ ಅವನಿಗೆ ಅಭಿಷೇಕ ಮಾಡಿದ ನೀರನ್ನು ತೀರ್ಥ ಎಂದು, ಪಾದೋದಕ ಎಂದು ಪ್ರಾಶನ ಮಾಡಬೇಕು. ಅವನು ಉಂಡು ಬಿಟ್ಟ ನೈವೇದ್ಯ ಶೇಷವು ಪರಮ ಪವಿತ್ರ. ಅದನ್ನು ಎಲ್ಲ ಬ್ರಾಹ್ಮಣರೂ ತಿನ್ನಬೇಕು.

**ತಸ್ಮಾತ್ ಅನ್ಯಂ ಪರಿತ್ಯಜ್ಯ ವಿಷ್ಣು ದೇವಂ ಸನಾತನಂ ।**
**ಪೂಜಯಧ್ವಂ ದ್ವಿಜಶ್ರೇಷ್ಠ ಯಾವಜ್ಜೀವ ಮತಂದ್ರಿತಾಃ ॥**

ಆದ್ದರಿಂದ ಇತರರನ್ನು ಬಿಟ್ಟು ವಿಷ್ಣುವನ್ನೇ ಬದುಕಿ ಇರುವವರೆಗೆ ದ್ವಿಜಶ್ರೇಷ್ಠರಾದ ನೀವೆಲ್ಲರೂ ಆಲಸ್ಯ ಮಾಡದೇ ಪೂಜೆ ಮಾಡಿರಿ.

**ತಸ್ಯಾವರ್ಣ ಪೂಜಾನಾಂ ತ್ರಿದಶಾ ನ್ಯರ್ತಯೇತ್ಸದಾ ।**
**ಅರ್ಚಯೇನ್ ಮಂತರತ್ನೇನ ವಿಧಿನಾ ಪುರುಷೋತ್ತಮಂ ॥**

ಉಳಿದ ಎಲ್ಲ ಬ್ರಹ್ಮರುದ್ರಾದಿ ದೇವತೆಗಳನ್ನು ಶ್ರೀಹರಿಯ ಆವರಣ ಪೂಜೆಯಲ್ಲಿ ವಿಶಿಷ್ಟ ಸ್ಥಾನಗಳಲ್ಲಿ ಆವಾಹಿಸಿ ಪೂಜೆ ಮಾಡಬೇಕು. ಮಂತ್ರ ರತ್ನ ಎನಿಸಿದ ನಾರಾಯಣನ ಅಷ್ಟಾಕ್ಷರ ಮಂತ್ರ, ವಾಸುದೇವ ದ್ವಾದಶಾಕ್ಷರ ಮಂತ್ರ ಮುಂತಾದ ಶ್ರೇಷ್ಠ ಮಂತ್ರಗಳಿಂದ ಆ ಪುರುಷೋತ್ತಮನಾದ ಶ್ರೀಹರಿಯನ್ನೇ ವಿಧಿಪೂರ್ವಕವಾಗಿ ಪೂಜೆ ಮಾಡಬೇಕು.

**ವಶಿಷ್ಠ:-** ಹೀಗೆ ಭೃಗುಋಷಿಯು ತನ್ನ ಪ್ರತ್ಯಕ್ಷ ಅನುಭವದಿಂದ ವಿಷ್ಣುವೇ ಸರ್ವಶ್ರೇಷ್ಠ ಎಂದು ಕಂಡುಕೊಂಡು ತನ್ನ ನಿರ್ಣಯವನ್ನು ಘೋಷಣೆ ಮಾಡಿದ್ದನ್ನು ಕೇಳಿ ತಿಳಿದು ಆ ಎಲ್ಲ ಮುನಿ ಮನೀಷಿ ಮಹಾನುಭಾವರು ಸಂತುಷ್ಟರಾದರು. ಸರ್ವಶಾಸ್ತ್ರ ಸಮ್ಮತವೂ ನಿಗಮಾಗಮಗಳಿಗೆ ಅಭಿಪ್ರೇತವೂ ಆದ ಇಂಥ ಪರಮಶ್ರೇಷ್ಠ ತತ್ವವನ್ನು ಘಂಟಾಘೋಷವಾಗಿ ಸಾರಿದ ಭೃಗುಋಷಿಯನ್ನು ಅಭಿನಂದಿಸಿ ಅವರಿಗೆ ಸತ್ಕಾರ ಮಾಡಿದರು.

ದಿಲೀಪರಾಜ ಭೃಗು ಬ್ರಾಹ್ಮಣನ ಶಾಪದಿಂದಲೇ ಮಹಾದೇವ ದಂಪತಿಗಳಿಗೆ ಈ ಯೋನಿಲಿಂಗ ಸ್ವರೂಪವು ಪ್ರಾಪ್ತವಾಗಿದೆ. ಮುಂದೆ ಶ್ರೀರಾಮನ ಹಸ್ತಸ್ಪರ್ಶದಿಂದ ಅದೇ ರೂಪವು ನಿರ್ಮಲವೂ ಸರ್ವದೇವ ಪೂಜ್ಯವೂ ಆಗುವದು.

**ರಾಘವ ಸರ್ವದೇವನಾಂ ಪಾವನಃ ಪುರುಷೋತ್ತಮಃ ।**
**ಸ್ಪೃಷ್ಟಾದೃಷ್ಟಾಶ್ಚ್ಯ ತೇನೈವ ವಿಮಲಾ ಶಂಕರಾದಯಃ ॥**

ದೇವೋತ್ತಮನಾದ ಆ ರಾಮನೇ ಲೋಕ ಪಾವನ ಅವನು ಮುಟ್ಟಿದ ಮಾತ್ರಕ್ಕೆ ಅಥವಾ ನೋಡಿದ ಮಾತ್ರಕ್ಕೆ ಶಂಕರಾದಿಗಳು ಕೂಡ ನಿರ್ಮಲರಾಗಿದ್ದಾರೆ. ಶರಣಂ ಗಚ್ಛ ಯದೀಚ್ಛತಿ ಪರಮಂ ಪದಂ.

ನಿನಗೆ ಪರಮ ಪದವಾದ ಮುಕ್ತಿ ಬೇಕಾಗಿದ್ದರೆ ಆ ವಿಷ್ಣುವಿಗೆ ಶರಣು ಹೋಗು. ವೇದಸಮ್ಮತವಾದ ಈ ಪದ್ಮಪುರಾಣವನ್ನು ನಾನು ನಿನಗೆ ಹೇಳಿದ್ದೇನೆ. ಇದನ್ನು ಪೂರ್ವಕಾಲದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ಇದನ್ನು ಬ್ರಹ್ಮದೇವರು ನಿರೂಪಿಸಿದರು. ಇದನ್ನು ಶಂಖಚಕ್ರ, ಗದಾಪದ್ಮಾದಿ ವಿಷ್ಣು ಲಾಂಛನಗಳನ್ನು ಊರ್ಧ್ವ ಪುಂಡ್ರಾದಿ ದ್ವಾದಶಿ ನಾಮಗಳನ್ನು ಧರಿಸಿದ, ವಾಚಕನ ಮುಖದಿಂದ ಕೇಳಿದವರು, ಧರ್ಮ, ಅರ್ಥ, ಮೋಕ್ಷ, ಕಾಮ ಎಂಬ ಚತುರ್ವಿಧ ಪುರುಷಾರ್ಥಗಳನ್ನು ಹೊಂದುತ್ತಾರೆ. ದ್ವಾದಶಿ, ಶ್ರವಾಣಾರ್ಕ, ಸಂಕ್ರಾಂತಿ, ಗ್ರಹಣ, ಅಮಾವಾಸ್ಯೆ, ಹುಣ್ಣಿಮೆ ದಿನಗಳಲ್ಲಿ ಈ ಪದ್ಮಪುರಾಣ ಒಂದು ಅಧ್ಯಾಯ ಅಥವಾ ಒಂದು ಶ್ಲೋಕ, ಅಥವಾ ಒಂದು ಪಾದಪದ್ಯವನ್ನಾದರೂ ಶ್ರವಣ ಪಠಣ, ಪಾರಾಯಣ ಮಾಡಿದವರು ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದ ಪುಣ್ಯಫಲ ಪಡೆಯುತ್ತಾರೆ. ಆದ್ದರಿಂದ ಮಹಾರಾಜ ನೀನು ಆ ಹೃಷಿಕೇಷನನ್ನು ಅರ್ಚಿಸು.

**ಸೂತ:-** ಹೀಗೆ ಗುರುಗಳಾದ ವಶಿಷ್ಠರಿಂದ ಆಜ್ಞಪ್ತನೂ ಉಪದಿಷ್ಟನೂ ಆದ ದಿಲೀಪರಾಜನು ಅವರಿಗೆ ನಮಸ್ಕರಿಸಿ, ಗುರು ಪೂಜೆ ಮಾಡಿ ಅವರಿಂದ ಮಂತ್ರೋಪದೇಶ ಹೊಂದಿ ಅವರ ಅಪ್ಪಣೆಯಂತೆ ತಾನು ಬದುಕಿ ಇರುವವರೆಗೂ ನಿತ್ಯ ನಿರಂತರ ಶ್ರೀವಿಷ್ಣುವಿನ ಪೂಜೆ ಮಾಡಿ ಹಗಲಿರುಳು ಆರಾಧನೆ ಗೈದ. ಆದರಿಂದ ಮುಂದೆ ಯೋಗಿಗಮ್ಯವಾದ ಶ್ರೀಹರಿಯ ದಿವ್ಯಪದವನ್ನು ಹೊಂದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಭೃಗು ಋಷಿಗಳಿಂದ ತ್ರಿಮೂರ್ತಿಗಳ ಪರೀಕ್ಷೆ ವಿಷ್ಣುವಿನ ಶ್ರೇಷ್ಠತ್ವ ಪ್ರತಿಪಾದನೆ ಎಂಬ*
*ಎರಡುನೂರ ಮೂವತ್ತೇಳನೇಯ ಅಧ್ಯಾಯ ಮುಗಿದುದು*

—o—

ಯಾವಾಗಲೂ ಉದ್ರಿಕ್ತರಾಗಿಯೇ ಇರುತ್ತಾರೆ. ಆದ್ದರಿಂದ ಅವರು ನನ್ನಿಂದ ಶಪಿತರಾಗಿದ್ದಾರೆ. ನನಗಾಗಲಿ ನಿಮಗಾಗಲಿ, ಅವರು ಪೂಜ್ಯರಲ್ಲ.

**ಶುದ್ಧ ಸತ್ವ ಮಯೋ ವಿಷ್ಣುಃ ಕಲ್ಯಾಣ ಗುಣಸಾಗರಃ ।**
**ನಾರಾಯಣ ಪರಬ್ರಹ್ಮ ವಿಪ್ರಾಣಾಂ ದೈವತೋ ಹರಿಃ ॥**

ಶುದ್ಧ ಸತ್ವಮಯನೂ ಕಲ್ಯಾಣ ಗುಣಗಳಿಗೆ ಸಮುದ್ರದೋಪಾದಿಯಲ್ಲಿ ಇರುವವನೂ ಗುಣಪರಿಪೂರ್ಣನೂ ಆದ ನಾರಾಯಣನೇ ಪರಬ್ರಹ್ಮ, ಪರಮಾತ್ಮ, ವಿಪ್ರರಿಗೆಲ್ಲ ಅವನೇ ಪೂಜ್ಯ ದೇವ.

**ಸ ಎವ ಪೂಜ್ಯೋ ವಿಪ್ರಾಣಾಂ ನೇತರಃ ಪುರುಷಃ ರ್ಪಭಃ ।**
**ಮೋಹಾಧ್ಯಃ ಪೂಜಯೇನ್ಯಂ ಸ ಪಾಖಂಡೀ ಭವಿಷ್ಯತಿ ॥**

ವಿಪ್ರರಿಗೆಲ್ಲ ಆ ವಿಷ್ಣು ಒಬ್ಬನೇ ಪೂಜ್ಯನಾಗಿರುತ್ತಾನೆ. ಬೇರೆ ಯಾವ ಪುರುಷನೂ ಪೂಜ್ಯನಲ್ಲ. ಆ ಹರಿಯ ಹೊರತು ಬೇರೆ ದೇವರನ್ನು ಪೂಜಿಸಿದರೆ, ಅವನು ಪಾಖಂಡಿ ಎನಿಸುತ್ತಾನೆ.

**ತಸ್ಮಾತ್ ವಿಷ್ಣೋಃಪಸಾದೋವ್ಯೈ ಸೇವಿತವ್ಯೋ ದ್ವಿಜನ್ಮನಾಂ ।**
**ತಸ್ಯ ಪಾದೋದಕಂ ಸೇವ್ಯ ಭುಕ್ತೋಚ್ಛಿಷ್ಠ ಚ ಪಾವನಂ ॥**

ಆ ವಿಷ್ಣುವಿನ ಪ್ರಸಾದವನ್ನೇ ಎಲ್ಲ ದ್ವಿಜರೂ ಸೇವಿಸಬೇಕು. ಅವನ ಪಾದ ತೊಳೆದ ನೀರನ್ನು ಅಥವಾ ಅವನಿಗೆ ಅಭಿಷೇಕ ಮಾಡಿದ ನೀರನ್ನು ತೀರ್ಥ ಎಂದು, ಪಾದೋದಕ ಎಂದು ಪ್ರಾಶನ ಮಾಡಬೇಕು. ಅವನು ಉಂಡು ಬಿಟ್ಟ ನೈವೇದ್ಯ ಶೇಷವು ಪರಮ ಪವಿತ್ರ. ಅದನ್ನು ಎಲ್ಲ ಬ್ರಾಹ್ಮಣರೂ ತಿನ್ನಬೇಕು.

**ತಸ್ಮಾತ್ ಅನ್ಯಂ ಪರಿತ್ಯಜ್ಯ ವಿಷ್ಣು ದೇವಂ ಸನಾತನಂ ।**
**ಪೂಜಯಧ್ವಂ ದ್ವಿಜಶ್ರೇಷ್ಠ ಯಾವಜ್ಜೀವ ಮತಂದ್ರಿತಾಃ ॥**

ಆದ್ದರಿಂದ ಇತರರನ್ನು ಬಿಟ್ಟು ವಿಷ್ಣುವನ್ನೇ ಬದುಕಿ ಇರುವವರೆಗೆ ದ್ವಿಜಶ್ರೇಷ್ಠರಾದ ನೀವೆಲ್ಲರೂ ಆಲಸ್ಯ ಮಾಡದೇ ಪೂಜೆ ಮಾಡಿರಿ.

**ತಸ್ಯಾವರ್ಣ ಪೂಜಾನಾಂ ತ್ರಿದಶಾ ನ್ಯರ್ತಯೇತ್ಸದಾ ।**
**ಅರ್ಚಯೇನ್ ಮಂತರತ್ನೇನ ವಿಧಿನಾ ಪುರುಷೋತ್ತಮಂ ॥**

ಉಳಿದ ಎಲ್ಲ ಬ್ರಹ್ಮರುದ್ರಾದಿ ದೇವತೆಗಳನ್ನು ಶ್ರೀಹರಿಯ ಆವರಣ ಪೂಜೆಯಲ್ಲಿ ವಿಶಿಷ್ಟ ಸ್ಥಾನಗಳಲ್ಲಿ ಆವಾಹಿಸಿ ಪೂಜೆ ಮಾಡಬೇಕು. ಮಂತ್ರ ರತ್ನ ಎನಿಸಿದ ನಾರಾಯಣನ ಅಷ್ಟಾಕ್ಷರ ಮಂತ್ರ, ವಾಸುದೇವ ದ್ವಾದಶಾಕ್ಷರ ಮಂತ್ರ ಮುಂತಾದ ಶ್ರೇಷ್ಠ ಮಂತ್ರಗಳಿಂದ ಆ ಪುರುಷೋತ್ತಮನಾದ ಶ್ರೀಹರಿಯನ್ನೇ ವಿಧಿಪೂರ್ವಕವಾಗಿ ಪೂಜೆ ಮಾಡಬೇಕು.

**ವಶಿಷ್ಠ:-** ಹೀಗೆ ಭೃಗುಋಷಿಯು ತನ್ನ ಪ್ರತ್ಯಕ್ಷ ಅನುಭವದಿಂದ ವಿಷ್ಣುವೇ ಸರ್ವಶ್ರೇಷ್ಠ ಎಂದು ಕಂಡುಕೊಂಡು ತನ್ನ ನಿರ್ಣಯವನ್ನು ಘೋಷಣೆ ಮಾಡಿದ್ದನ್ನು ಕೇಳಿ ತಿಳಿದು ಆ ಎಲ್ಲ ಮುನಿ ಮನೀಷಿ ಮಹಾನುಭಾವರು ಸಂತುಷ್ಟರಾದರು. ಸರ್ವಶಾಸ್ತ್ರ ಸಮ್ಮತವೂ ನಿಗಮಾಗಮಗಳಿಗೆ ಅಭಿಪ್ರೇತವೂ ಆದ ಇಂಥ ಪರಮಶ್ರೇಷ್ಠ ತತ್ವವನ್ನು ಘಂಟಾಘೋಷವಾಗಿ ಸಾರಿದ ಭೃಗುಋಷಿಯನ್ನು ಅಭಿನಂದಿಸಿ ಅವರಿಗೆ ಸತ್ಕಾರ ಮಾಡಿದರು.

ದಿಲೀಪರಾಜ ಭೃಗು ಬ್ರಾಹ್ಮಣನ ಶಾಪದಿಂದಲೇ ಮಹಾದೇವ ದಂಪತಿಗಳಿಗೆ ಈ ಯೋನಿಲಿಂಗ ಸ್ವರೂಪವು ಪ್ರಾಪ್ತವಾಗಿದೆ. ಮುಂದೆ ಶ್ರೀರಾಮನ ಹಸ್ತಸ್ಪರ್ಶದಿಂದ ಅದೇ ರೂಪವು ನಿರ್ಮಲವೂ ಸರ್ವದೇವ ಪೂಜ್ಯವೂ ಆಗುವದು.

**ರಾಘವ ಸರ್ವದೇವನಾಂ ಪಾವನಃ ಪುರುಷೋತ್ತಮಃ ।**
**ಸ್ಪೃಷ್ಟ್ವಾದೃಷ್ಟ್ವಾಶ್ಚ್ಯ ತೇನೈವ ವಿಮಲಾ ಶಂಕರಾದಯಃ ॥**

ದೇವೋತ್ತಮನಾದ ಆ ರಾಮನೇ ಲೋಕ ಪಾವನ ಅವನು ಮುಟ್ಟಿದ ಮಾತ್ರಕ್ಕೆ ಅಥವಾ ನೋಡಿದ ಮಾತ್ರಕ್ಕೆ ಶಂಕರಾದಿಗಳು ಕೂಡ ನಿರ್ಮಲರಾಗಿದ್ದಾರೆ. ಶರಣಂ ಗಚ್ಛ ಯದೀಚ್ಛತಿ ಪರಮಂ ಪದಂ.

ನಿನಗೆ ಪರಮ ಪದವಾದ ಮುಕ್ತಿ ಬೇಕಾಗಿದ್ದರೆ ಆ ವಿಷ್ಣುವಿಗೆ ಶರಣು ಹೋಗು. ವೇದಸಮ್ಮತವಾದ ಈ ಪದ್ಮಪುರಾಣವನ್ನು ನಾನು ನಿನಗೆ ಹೇಳಿದ್ದೇನೆ. ಇದನ್ನು ಪೂರ್ವಕಾಲದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ಇದನ್ನು ಬ್ರಹ್ಮದೇವರು ನಿರೂಪಿಸಿದರು. ಇದನ್ನು ಶಂಖಚಕ್ರ, ಗದಾಪದ್ಮಾದಿ ವಿಷ್ಣು ಲಾಂಛನಗಳನ್ನು ಊರ್ಧ್ವ ಪುಂಡ್ರಾದಿ ದ್ವಾದಶಿ ನಾಮಗಳನ್ನು ಧರಿಸಿದ, ವಾಚಕನ ಮುಖದಿಂದ ಕೇಳಿದವರು, ಧರ್ಮ, ಅರ್ಥ, ಮೋಕ್ಷ, ಕಾಮ ಎಂಬ ಚತುರ್ವಿಧ ಪುರುಷಾರ್ಥಗಳನ್ನು ಹೊಂದುತ್ತಾರೆ. ದ್ವಾದಶಿ, ಶ್ರವಾಣಾರ್ಕ, ಸಂಕ್ರಾಂತಿ, ಗ್ರಹಣ, ಅಮಾವಾಸ್ಯೆ, ಹುಣ್ಣಿಮೆ ದಿನಗಳಲ್ಲಿ ಈ ಪದ್ಮಪುರಾಣ ಒಂದು ಅಧ್ಯಾಯ ಅಥವಾ ಒಂದು ಶ್ಲೋಕ, ಅಥವಾ ಒಂದು ಪಾದಪದ್ಯವನ್ನಾದರೂ ಶ್ರವಣ ಪಠಣ, ಪಾರಾಯಣ ಮಾಡಿದವರು ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದ ಪುಣ್ಯಫಲ ಪಡೆಯುತ್ತಾರೆ. ಆದ್ದರಿಂದ ಮಹಾರಾಜ ನೀನು ಆ ಹೃಷಿಕೇಷನನ್ನು ಅರ್ಚಿಸು.

**ಸೂತ:-** ಹೀಗೆ ಗುರುಗಳಾದ ವಶಿಷ್ಠರಿಂದ ಆಜ್ಞಪ್ತನೂ ಉಪದಿಷ್ಟನೂ ಆದ ದಿಲೀಪರಾಜನು ಅವರಿಗೆ ನಮಸ್ಕರಿಸಿ, ಗುರು ಪೂಜೆ ಮಾಡಿ ಅವರಿಂದ ಮಂತ್ರೋಪದೇಶ ಹೊಂದಿ ಅವರ ಅಪ್ಪಣೆಯಂತೆ ತಾನು ಬದುಕಿ ಇರುವವರೆಗೂ ನಿತ್ಯ ನಿರಂತರ ಶ್ರೀವಿಷ್ಣುವಿನ ಪೂಜೆ ಮಾಡಿ ಹಗಲಿರುಳು ಆರಾಧನೆ ಗೈದ. ಆದರಿಂದ ಮುಂದೆ ಯೋಗಿಗಮ್ಯವಾದ ಶ್ರೀಹರಿಯ ದಿವ್ಯಪದವನ್ನು ಹೊಂದಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಉತ್ತರಖಂಡದಲ್ಲಿನ*
*ಭೃಗು ಋಷಿಗಳಿಂದ ತ್ರಿಮೂರ್ತಿಗಳ ಪರೀಕ್ಷೆ ವಿಷ್ಣುವಿನ ಶ್ರೇಷ್ಠತ್ವ ಪ್ರತಿಪಾದನೆ ಎಂಬ*
*ಎರಡುನೂರ ಮೂವತ್ತೇಳನೇಯ ಅಧ್ಯಾಯ ಮುಗಿದುದು*

—o—

# ಕ್ರಿಯಾಯೋಗಸಾರ

## ಏಳನೆಯ ಖಂಡ

ಜೈಮಿನೀ ವೇದವ್ಯಾಸ ಸಂವಾದ | ಅಧ್ಯಾಯ - ೧

**ಲಕ್ಷ್ಮೀನಾಥಪಾದರವಿಂದ ಯುಗಲಂ ಬ್ರಹ್ಮೇಶ್ವರಾದ್ಯಾಮರ ।**
**ಶ್ರೇಣೀ ನಮಃ ಶಿರೋಮೂಲಮಮಲಂ ವಂದಾಮಹೇ ಸುತತಂ ॥**

**ಭಕ್ತ್ಯಾಯೋಗಿ ಮನಸ್ತಡಾಗ ಸುಷು ಮಾ ಸಂದೋಹ ಪುಷ್ಯತ್ತಮಃ ।**
**ಗಂಗಾಂಭೋ ಮಕರಂದ ಬಿಂದು ನಿಕರಂ ಸಂಸಾರ ದುಃಖಾಪಹಮ್ ॥**

ಬ್ರಹ್ಮರುದ್ರ ಮೊದಲಾದ ಶ್ರೇಷ್ಠ ದೇವತೆಗಳೆಲ್ಲರೂ ತಲೆ ಬಾಗಿಸಿ ನಮಸ್ಕರಿಸುವ, ಲಕ್ಷ್ಮೀಪತಿಯಾದ ನಾರಾಯಣನ ಪಾದವೆಂಬ ಜೋಡು ತಾವರೆ ಹೂಗಳನ್ನು ಯಾವಾಗಲೂ ವಂದಿಸುತ್ತೇವೆ. ಯೋಗಿಗಳ ಮಾನಸ ಸರೋವರದ ಶೋಭೆಯು ಈ ಶ್ರೀಹರಿಯ ಪಾದ ಕಮಲದಿಂದ ಅಭಿವೃದ್ಧಿಯನ್ನು ಹೊಂದಿರುತ್ತದೆ. ಈ ಅರವಿಂದದಿಂದ ಜನುಗಿದ ಜೇನಿನ ಹನಿಯ ಸಮೂಹವೇ ಗಂಗೆಯ ನೀರು. ಇದರಿಂದ ಸಂಸಾರದ ದುಃಖವೆಲ್ಲವೂ ಪರಿಹಾರವಾಗುತ್ತದೆ.

**''ವೇದೇಭ್ಯ ಉದ್ಧೃತ್ಯ ಸಮಸ್ತ ಧರ್ಮಾನ್ ಯೋಽಯಂ**
**ಪುರಾಣೇಷು ಜಗದಿ ದೇವಃ ।**
**ವ್ಯಾಸ ಸ್ವರೂಪೇಣ ಜಗದ್ಧಿತಾಯ ವಂದೇ ತಮೇತಂ ಕಮಲಾ**
**ಸಮೇತಂ ॥**

ವೇದ ಧರ್ಮಗಳನ್ನೆಲ್ಲ ಎತ್ತಿ ಪುರಾಣರೂಪದಿಂದ ಜಗತ್ತಿನ ಕಲ್ಯಾಣಕ್ಕಾಗಿ ಹೇಳಿದ. ವ್ಯಾಸರೂಪಿಯಾದ ಲಕ್ಷ್ಮೀಪತಿ ಹರಿಯನ್ನು ನಮಿಸುವೆ.

ಹಿಂದೆ ಒಂದಾನೊಂದು ಕಾಲದಲ್ಲಿ ಜಗತ್ತಿಗೆ ಹಿತವನ್ನೇ ಬಯಸುವ ಮಹಾನುಭಾವರಾದ ಮುನಿ ಪುಂಗವರು ರಮಣೀಯವಾದ ನೈಮಿಷಾರಣ್ಯದಲ್ಲಿ ಕೂಡಿದರು. ಸತ್ಕಥಾಗೋಷ್ಠಿಯನ್ನು ಮಾಡಿದರು. ಇದೇ ವೇಳೆಯಲ್ಲಿ ಶಿಷ್ಯರಿಂದ ಕೂಡಿಕೊಂಡು ಸೂತ ಪೌರಾಣಿಕ ಆಗಮಿಸಿದ, ಶ್ರೀಹರಿಯನ್ನು ನೆನೆಯುತ್ತ. ಮಹಾತೇಜಸ್ವಿ ಈ ವ್ಯಾಸ ಶಿಷ್ಯನಾದ ಸೂತ. ಹಾಗೂ ಎಲ್ಲ ಶಾಸ್ತ್ರಗಳ ತುದಿ ಮೊದಲುಗಳನ್ನು ಕಂಡವ. ಆಳಕ್ಕೆ ಇಳಿದವ. ಅಗಲವನ್ನು ಅಳೆದವ. ಅವನ ಯೋಗ್ಯತೆ ಗೊತ್ತು, ಅಲ್ಲಿ ನೆರೆದ ಶೌನಕಾದಿ ತಪೋಧನರಿಗೆ. ಆ ನೈಮಿಷಾರಣ್ಯದಲ್ಲಿ ನೆರೆದ ಎಲ್ಲ ಮುನಿ ಮನೀಷಿಗಳು ಪರಮ ವೈಷ್ಣವರು. ಎಲ್ಲ ಶಾಸ್ತ್ರ ಪುರಾಣಗಳ ರಹಸ್ಯವನ್ನು ಭಗವಾನ್ ವ್ಯಾಸರಿಂದ ಚೆನ್ನಾಗಿ ಅರಿತು ಸ್ವಯಂ ಸರ್ವಶಾಸ್ತ್ರ ಪಂಡಿತನಾದರೂ ಆ ಸೂತ ವಿಷ್ಣುಭಕ್ತರಾದ ಆ ಶೌನಕಾದಿ ಮುನಿಗಳಿಗೆ ದಂಡ ಪ್ರಣಾಮ ಮಾಡಿದ. ಆ ಎಲ್ಲ ಮುನಿಗಳು ಆ ಸೂತ ಪುರಾಣಿಕರನ್ನು

ಆದರಿಸಿ, ಪೂಜಿಸಿ, ಎತ್ತರವಾದ ಆಸನದ ಮೇಲೆ ಕುಳ್ಳಿರಿಸಿದರು. ಅನಂತರ ಆ ಶೌನಕಾದಿ ಮುನಿಗಳು ಕೈ ಮುಗಿದು ಮಾತನಾಡಿದರು.

**ಶೌನಕ:-** ಮಹರ್ಷಿಯಾದ ಸೂತ, ನೀನು ಎಲ್ಲವನ್ನೂ ಬಲ್ಲ ಸರ್ವಜ್ಞನೇ ಸರಿ. ಈಗ ಕಲಿಕಾಲ ಬಂದಿದೆ. ಮಾನವರಿಗೆ ಭಗವಂತನಲ್ಲಿ ಧೃಡವಾದ ಭಕ್ತಿ ಹುಟ್ಟಲು ಉಪಾಯವು ಏನು? ಈ ಕಲಿಯುಗದಲ್ಲಿ ಪ್ರಾಯಃ ಎಲ್ಲ ಜನರೂ ವೇದ ವಿದ್ಯೆ ಓದುವದನ್ನು ಬಿಟ್ಟು ಪಾಪಕರ್ಮಗಳಲ್ಲಿಯೇ ಯಾವಾಗಲೂ ನಿರತರು. ಅವರಿಗೆ ಶ್ರೇಯಸ್ಸು ಹೇಗೆ ಉಂಟಾಗಬೇಕು? ಕಲಿಯುಗದಲ್ಲಿ ಪ್ರಾಣಿಗಳೆಲ್ಲರೂ ಅನ್ನಗತಪ್ರಾಣರು. ಅವರ ಆಯುಷ್ಯವೂ ಅಲ್ಪ. ದಾರಿದ್ರ್ಯವು ಅವರ ಬೆನ್ನಿಗೆ ಬಿದ್ದಿರುವುದು. ಅವರ ದುಃಖಗಳಿಗೆ ಕೊನೆಯೇ ಇಲ್ಲ. ಎಂದಿಗಾದರೂ ಪುಣ್ಯ ಎನ್ನುವುದು ಪರಿಶ್ರಮದಿಂದ ಮಾತ್ರ ಲಭ್ಯ. ಕಲಿಯುಗದಲ್ಲಿ ಪುಣ್ಯ ಸಂಪಾದನೆಗಾಗಿ ಪ್ರಯಾಸವನ್ನೇ ಯಾರೂ ಮಾಡುವದಿಲ್ಲ. ಆದರಿಂದ ಪುಣ್ಯವೂ ಅವರಿಗೆ ಲಭಿಸುವದಿಲ್ಲ. ಆ ಇದ್ದಷ್ಟು ಪುಣ್ಯವು ಕರಗಿ ಹೋದ ಬಳಿಕ ಅವರ ವಂಶವೇ ಕರಗಿ ನಾಶವಾಗಿ ಹೋಗುವದು. ಆದುದರಿಂದ ಅಲ್ಪಶ್ರಮ, ಅಲ್ಪವಿತ್ತ, ಅಲ್ಪ ಕಾಲಗಳಲ್ಲಿ ಮಹತ್ಪುಣ್ಯವು ಬರುವ ಉಪಾಯವೇನಾದರೂ ಇದ್ದರೆ ಹೇಳು. ಈ ಕಲಿಯುಗದಲ್ಲಿ ಜ್ಞಾನವನ್ನು ಸಂಪಾದನೆ ಮಾಡಿದರೂ ಇನ್ನೊಬ್ಬರಿಗೆ ಕೊಡುವದಿಲ್ಲವೋ ಅವರಿಗೆ ನರಸಿಂಹ ದೇವರು ಪ್ರಸನ್ನರಾಗುವದಿಲ್ಲ. ಜ್ಞಾನ ರತ್ನಗಳಿಂದಲೂ, ಹಾಗೇ ರತ್ನಗಳಿಂದಲೂ ಇನ್ನೊಬ್ಬರನ್ನು ಸಂತೋಷಪಡಿಸುವ ಮನುಷ್ಯನು ಮಾನವ ರೂಪದ ಶ್ರೀಹರಿಯೇ ಎಂದು ತಿಳಿದುಕೊಳ್ಳಬೇಕು. ವೇದ ವೇದಾಂಗ ಪಾರಂಗತನಾದ ನಿನ್ನ ಹೊರತು ವ್ಯಾಸ ವಾಙ್ಮಯವನ್ನು ಸರಿಯಾಗಿ ಹೇಳುವಂಥ ಬುದ್ಧಿವಂತ ಈ ಭೂಲೋಕದಲ್ಲಿಯೇ ಬೇರೆ ಇಲ್ಲ.

**ಸೂತ:-** ಮುನಿವರ್ಯನಾದ ಶೌನಕ ! ಈ ಎಲ್ಲ ಬ್ರಹ್ಮ ವೃಂದಕ್ಕೆ ಗುರುಸ್ಥಾನದಲ್ಲಿ ಇದ್ದ ನೀನು ವೈಷ್ಣವ ವೃಂದಕ್ಕೆ ಅಗ್ರೇಸರ. ಏಕೆಂದರೆ ನೀನು ಎಲ್ಲರಿಗೂ ಹಿತವನ್ನು ಬಯಸುತ್ತಿರುವೆ. ನೀನು ಇಚ್ಛಿಸಿದ ವಸ್ತು ಎಂದರೆ ಹೊನ್ನು, ರನ್ನ, ಮಣ್ಣು ಯಾವುದೂ ಅಲ್ಲ. ಮುಖ್ಯವಾಗಿ ನೀನು ಬಯಸಿದ್ದು ಲೋಕಕಲ್ಯಾಣ. ಶ್ರೀಸಾಮಾನ್ಯರ ಹಿತ. ಅದೆಲ್ಲ ವನ್ನು ನಾನು ವಿಷ್ಣು ಭಕ್ತರಿಗಾಗಿ ಅಥವಾ ನಿಮಗಾಗಿ ಹೇಳುತ್ತೇನೆ. ಪೂರ್ವಕಾಲದಲ್ಲಿ ಜೈಮಿನಿ ಎಂಬ ಮಹರ್ಷಿಯು ವೇದ ವ್ಯಾಸರ ಬಳಿಗೆ ಬಂದು ಒಂದು ಪ್ರಶ್ನೆ ಕೇಳಿದ.

**ಜೈಮಿನಿ:-** ಸತ್ಯವತಿಯ ಮಗನಾದ ಸರ್ವಧರ್ಮಗಳನ್ನು ಬಲ್ಲ ಮುನಿಯೇ ಕಲಿಯುಗದಲ್ಲಿ ಮೋಕ್ಷವು ಯಾವುದರಿಂದ ಆಗುವದೆಂಬುದನ್ನು ಹೇಳು?

ಜೈಮಿನಿಯ ಈ ಪ್ರಶ್ನೆಯನ್ನು ಕೇಳಿ ಪರಮ ತುಷ್ಟರಾದ ವ್ಯಾಸರು ಹೇಳಲಿಕ್ಕೆ ಪ್ರಾರಂಭ ಮಾಡಿದರು.

**ವ್ಯಾಸ:-** ಮುನಿಶ್ರೇಷ್ಠರಾದ ಜೈಮಿನಿಯೇ ನೀನು ನಾರಾಯಣನನ ಕಥೆಯನ್ನು ಕೇಳಲು ಬಯಸುತ್ತಿರುವೆ. ದೊಡ್ಡವರ ಬಾಯಿಂದ ಸತ್ಕಥೆಯನ್ನು ಕೇಳಿದರೆ ಅದು ಮೋಕ್ಷಕ್ಕೆ ಕಾರಣವಾಗುತ್ತದೆ. ಸತ್ಕಥಾ ಶ್ರವಣದಲ್ಲಿ ಯಾರಿಗೆ ಆದರ ಇರುವದಿಲ್ಲವೋ ಅವರನ್ನು ಸೃಷ್ಟಿ ಮಾಡಿದ್ದೇ ವ್ಯರ್ಥ ಎಂದು ಬ್ರಹ್ಮದೇವನು ಭಾವಿಸುತ್ತಾನೆ. ಭೂದೇವಿಯು ಅಂತಹ ದುಷ್ಟಜನರನ್ನು ಹೊರಲಾರೆ ಎಂದು ದುಃಖ ಪಡುತ್ತಾಳೆ.

ಈ ಭೂಲೋಕದಲ್ಲಿ ಎಲ್ಲಿ ಶ್ರೀಹರಿಯ ಕಥೆಯು ಇದೆಯೋ ಆ ಸ್ಥಾನವನ್ನು ಪರಮಾತ್ಮನು ಎಂದೂ ಬಿಟ್ಟು ಹೋಗುವದಿಲ್ಲ.

**ಪ್ರಭಾವಂ ವಾಸು ದೇವಸ್ಯ ಶ್ರುತ್ವಾಹೃಷ್ಯಂತಿ ಯೋಜನಾ ।**
**ಜ್ಞೇಯಾಸ್ತ ಏವ ದೇವಾಂಶಾಃ ಪೂಜ್ಯಾ ದೃಶ್ಯಾಶ್ಚ ಸತ್ತಮಾಃ ॥**

ಶ್ರೀಹರಿಯ ಪ್ರಭಾವವನ್ನು ಕೇಳಿ ಯಾರು ಸಂತೋಷ ಪಡುವರೋ ಅವರು ದೇವಾಂಶರೆಂದೇ ತಿಳಿಯಬೇಕು. ಅವರ ಪೂಜೆಯನ್ನೇ ಮಾಡಬೇಕು. ಅವರ ಪ್ರಸಾದವನ್ನು ಪಡೆಯಲು ಕಾಯ್ದುಕೊಂಡು ನಿಂತಿರಬೇಕು. ನಾರಾಯಣನ ಪ್ರಭಾವವನ್ನು ಯಾರು ಉಪಹಾಸ ಮಾಡುವರೋ ಅಥವಾ ದ್ವೇಷಿಸುವರೋ ಅಂತಹ ಮನುಷ್ಯರು ದೈತ್ಯ ಅಂಶದಿಂದ ಹುಟ್ಟಿ ನರಕವನ್ನು ಹೊಂದುತ್ತಾರೆ. ನಾರಾಯಣನ ಕಥೆಯು ಎಲ್ಲಿ ಪ್ರತಿದಿನವೂ ನಡೆಯುವದೋ ಅಲ್ಲಿಯೇ ಗಂಗೆ ಮೊದಲಾದ ಎಲ್ಲ ತೀರ್ಥಗಳು ಇರುತ್ತವೆ. ಮುನಿಯೇ ನಾರಾಯಣನ ಕಡೆಯಿಂದ ಕೂಡಿದ ಈ ಕ್ರಿಯಾ ಯೋಗ ಸಾರ ಖಂಡವನ್ನು ಇತಿಹಾಸ ಸಹಿತವಾಗಿ ನೀನು ಕೇಳು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಜೈಮಿನೀ ವೇದವ್ಯಾಸ ಸಂವಾದ ಎಂಬ ಮೊದಲನೆಯ ಅಧ್ಯಾಯ ಮುಗಿದುದು*



## ಶ್ರೀಹರಿಯಿಂದ ಮಧುಕೈಟಭರ ಸಂಹಾರ — ಅಧ್ಯಾಯ - ೨

**ವೇದವ್ಯಾಸ:-** ಸೃಷ್ಟಿಯ ಆದಿಕಾಲದಲ್ಲಿ ಮಹಾವಿಷ್ಣುವು ಈ ಚರಾಚರಾತ್ಮಕವಾದ ಪ್ರಪಂಚಕ್ಕೆ ಉತ್ಪತ್ತಿ ಸ್ಥಿತಿಲಯಗಳನ್ನು ಮಾಡಲಿಕ್ಕಾಗಿ ತ್ರಿಮೂರ್ತಿಯು ಆದ. ಸೃಷ್ಟಿಕರ್ತ, ಪಾಲನಕರ್ತಾ, ಸಂಹಾರಕರ್ತಾ ತಾನೇ ಆಗಿ ತ್ರಿಮೂರ್ತಿ ಎನಿಸಿದ. ಈ ಜಗತ್ತಿನ ಸೃಷ್ಟಿಯನ್ನು ಮಾಡಲಿಕ್ಕಾಗಿ ತನ್ನ ದೇಹದ ಬಲ ಬದಿಯಿಂದ ಬ್ರಹ್ಮ ಎಂಬ ಹೆಸರಿನ ಶ್ರೇಷ್ಠ ಪುರುಷನನ್ನು ಹುಟ್ಟಿಸಿದ. ಅನಂತರ ಈ ಜಗತ್ತಿನ ರಕ್ಷಣೆಗಾಗಿ ತನ್ನ ದೇಹದ ವಾಮಭಾಗದಿಂದ ಕೇಶವ ಎಂಬ ತನ್ನ ಒಂದು ಅಂಶವನ್ನು ಸೃಷ್ಟಿಸಿದ. ತನ್ನ ನಡುವಿನ ಅಂಗದಿಂದ ಜಗತ್ತಿನ ಸಂಹಾರಕ್ಕಾಗಿ ರುದ್ರನನ್ನು ನಿಲ್ಲಿಸಿದ. ಹೀಗೆ ಒಬ್ಬನೇ ಇದ್ದ ವಿಷ್ಣುವು ಮೂರು ರೂಪಗಳನ್ನು ತೆಗೆದುಕೊಂಡು ಹುಟ್ಟಿಸುತ್ತಾನೆ ಕಾಯುತ್ತಾನೆ ಕೊಲ್ಲುತ್ತಾನೆ.

**ಏಕೋ ವಿಷ್ಣುಃ ತ್ರಿಧಾ ಭೂತ್ವಾ ಸೃಜತ್ಯತ್ತಿ ಚ ಪಾತಿಚ ।**
**ತಸ್ಮಾದ್ಭೇದೋ ನ ಕರ್ತವ್ಯಃ ತ್ರಿಷು ಲೋಕೇಷು ಸತ್ತಮೈಃ ॥**

ಆದುದರಿಂದ ಸಜ್ಜನರಾದವರು ಆ ಮೂವರು ದೇವತೆಗಳಲ್ಲಿ ಭೇದ ಬುದ್ಧಿಯನ್ನು ಮಾಡಬಾರದು.

ಆ ಮಹಾವಿಷ್ಣುವಿನ ಆಜ್ಞೆಯಿಂದ ಜಗತ್ ಸೃಷ್ಟಿಕಾರಕನಾದ ಬ್ರಹ್ಮನು ಪೃಥ್ವಿ, ಆಕಾಶ, ವಾಯು, ಜಲ, ವಹ್ನಿ ಎಂಬ ಪಂಚ ಮಹಾಭೂತಗಳನ್ನು ನಿರ್ಮಿಸಿದ. ಮತ್ತು ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನೋಲೋಕ ತಪೋಲೋಕ ಸತ್ಯಲೋಕ ಮುಂತಾದ ಏಳು ಲೋಕಗಳನ್ನು ಆ ಬ್ರಹ್ಮದೇವ ರಚಿಸಿದ. ಅನಂತರ ಆ ಚತುರ್ಮುಖನು

ಭೂಲೋಕದ ಕೆಳಗಡೆ ಅತಲ ಎಂಬ ಲೋಕವನ್ನು ಅದರ ಕೆಳಗೆ ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲ, ಎಂಬ ಲೋಕಗಳನ್ನು ನಿರ್ಮಿಸಿದ. ದೇವತೆಗಳ ನಿವಾಸಕ್ಕಾಗಿ ಭೂಮಂಡಲದ ಮಧ್ಯದಲ್ಲಿ ರತ್ನಸಾಸು ಎಂಬ ಬಂಗಾರದ ಬಟ್ಟಲನ್ನು ರೂಪಿಸಿದ. ಹಾಗೂ ಮಂದರಾಚಲ, ಚರಮಾಚಲ, ತ್ರಿಕೂಟಾಚಲ, ಉರಿಯಾಚಲ ಎಂಬ ಬೆಟ್ಟಗಳನ್ನು ರೂಪಿಸಿದ, ಅದರ ಆಚೆ ಲೋಕಾಲೋಕ ಪರ್ವತ. ಅದರ ಮಧ್ಯದಲ್ಲಿ ಸಪ್ತಸಾಗರಗಳು ಸಪ್ತದ್ವೀಪಗಳು ಎಲ್ಲವೂ ಬ್ರಹ್ಮನಿಂದ ನಿರ್ಮಾಣಗೊಂಡವು. ಈ ಜಂಬೂದ್ವೀಪದ ಎರಡು ಪಟ್ಟು ಪ್ಲಕ್ಷದ್ವೀಪ. ಅದರ ಎರಡು ಪಟ್ಟು ಅದರ ಆಚೆಗಿರುವ ಶಾಲ್ಮಲೀ ದ್ವೀಪ, ಹೀಗೆ ಏಳು ದ್ವೀಪಗಳು ಏಳು ಬಗೆಯಾದ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿವೆ. ಉಪ್ಪಿನ ಸಮುದ್ರ ಕಬ್ಬಿನ ರಸದ ಸಮುದ್ರ ಮಧ್ಯದ ಸಮುದ್ರ, ತುಪ್ಪದ ಸಮುದ್ರ, ಮೊಸರಿನ ಸಮುದ್ರ, ಹಾಲಿನ ಸಮುದ್ರ, ನೀರಿನ ಸಮುದ್ರ ಹೀಗೆ ಏಳು ಸಮುದ್ರಗಳು ಒಂದೊಂದು ದ್ವೀಪವನ್ನು ಸುತ್ತುಹಾಕುವವು.

ಈ ಎಲ್ಲ ದ್ವೀಪಗಳಲ್ಲಿಯೂ ಬ್ರಹ್ಮದೇವರು ಮರ, ಬಳ್ಳಿ, ಕಂಟಿ, ಹುಲ್ಲು, ಜೊಂಡು ಮುಂತಾದ ಸ್ಥಾವರ ಜೀವಗಳನ್ನು ನಿರ್ಮಿಸಿದ. ಅನಂತರ ಪಶುಪಕ್ಷಿ ಕ್ರಿಮಿ ಕೀಟ ಮುಂತಾದ ಪ್ರಾಣಿಗಳನ್ನು ದೇವ ಮನುಷ್ಯ ನಾಗ ವಿದ್ಯಾಧರರನ್ನು ದಕ್ಷನೇ ಮೊದಲಾದ ಪ್ರಜಾಪತಿಗಳನ್ನು ಬ್ರಾಹ್ಮಣ, ಕ್ಷತ್ರಿಯ, ಶೂದ್ರ ಮೊದಲಾದ ನಾಲ್ಕು ಜಾತಿಯ ಜನರನ್ನು ಮತ್ತು ವರ್ಣ ಬಾಹ್ಯರನ್ನು. ಅವರ ನಡತೆಯನ್ನು ಸೃಷ್ಟಿ ಮಾಡಿದ ಆ ಬ್ರಹ್ಮ. ಹಿಮಾಲಯದ ದಕ್ಷಿಣ ಹಾಗೂ ವಿಂಧ್ಯಾದ್ರಿಯ ಉತ್ತರದಲ್ಲಿ ಇರುವ ವಿಶಾಲವಾದ ಭೂಖಂಡವು ಭಾರತದೇಶ ಎಂದು ಕರೆಯಲ್ಪಡುತ್ತದೆ. ಈ ಭಾರತದೇಶದಲ್ಲಿ ಹುಟ್ಟಿ ಶಾಸ್ತ್ರೋಕ್ತವಾದ ಧರ್ಮಕರ್ಮವನ್ನು ಮಾಡುವವರು ಸಾಕ್ಷಾತ್ ಕೇಶವನೇ ಇದ್ದಂತೆ. ಈ ಭಾರತ ದೇಶದಲ್ಲಿ ಹುಟ್ಟಿ ನಾರಾಯಣನ ಸೇವೆಯಲ್ಲಿಯೇ ಯಾರ ಬುದ್ಧಿಯು ಉತ್ಕಂಠಿತವಾಗಿದೆಯೋ ಮತ್ತು ಶ್ರೀಹರಿಯಲ್ಲಿಯೇ ಧೃಢವಾದ ಭಕ್ತಿಯು ಯಾರಿಗೆ ಹುಟ್ಟಿದೆಯೋ ಅವನ ಜನ್ಮ ಸಫಲ. ಜೀವನ ಸಾರ್ಥಕ. ವಿಷ್ಣು ಭಕ್ತರು ಇಲ್ಲದ ದೇಶದಲ್ಲಿ ಒಂದು ಕ್ಷಣವೂ ಇರಬಾರದು. ಜನ್ಮಾಂತರದಲ್ಲಿ ಮಾಡಿದ ಪಾಪವು ಅಲ್ಪವಾಗಿರಲೀ, ಬಹಳವಾಗಿರಲಿ ಭಗವದ್ಭಕ್ತರ ದರ್ಶನ ಮಾಡಿಕೊಂಡರೆ ತಕ್ಷಣದಲ್ಲಿ ನಾಶವಾಗುತ್ತದೆ. ವಿಷ್ಣುವಿನ ಕಾಲು ತೊಳೆದ ಪಾದೋದಕ ತೀರ್ಥವನ್ನು ತಲೆಯ ಮೇಲೆ ಧಾರಣ ಮಾಡುವವರಿಗೆ ಗಂಗಾಸ್ನಾನ ದಿಂದ ಏನು ಮಾಡಬೇಕಾಗಿದೆ? ಒಂದು ಮೂಹೂರ್ತವಾಗಲೀ, ಅರ್ಧ ಮೂಹೂರ್ತವಾಗಲೀ ವೈಷ್ಣವರು ನಿಂತ ನೆಲ ಕ್ಷೇತ್ರ, ಮಿಂದ ಜಲ ತೀರ್ಥ. ಅದೇ ಒಂದು ತಪೋವನ ಇದ್ದಂತೆ. ಅನ್ನ, ನೀರು, ಅಥವಾ ಹಣ್ಣು, ಕಾಯಿ, ಯಾವುದನ್ನಾದರೂ ವಿಷ್ಣುಭಕ್ತನಿಗೆ ನೀಡಿದರೆ ಅದು ಅಕ್ಷಯವಾಗುತ್ತದೆ. ಆದ್ದರಿಂದ ಬ್ರಾಹ್ಮಣ ಶ್ರೇಷ್ಠನಾದ ಶೌನಕ, ನೀನು ಕೂಡ ಕೇಶವನನ್ನು ಆರಾಧನೆಗೈದು ಭಕ್ತಿಯಿಂದ ಪೂಜಿಸು. ಅದರಿಂದ ಆ ಮಹಾವಿಷ್ಣುವಿನ ಪರಮಪದವನ್ನು ಹೊಂದು.

**ಸೂತ:-** ವ್ಯಾಸರ ಈ ಮಾತನ್ನು ಕೇಳಿ ಅವರ ಶಿಷ್ಯನಾದ ಜೈಮಿನಿಯು ತಲೆಯ ಮೇಲೆ ಕೈಯನ್ನು ಕಮಲಕುಂಡಲದಂತೆ ಜೋಡಿಸಿ ಪ್ರಶ್ನೆ ಕೇಳಿದ.

**ಜೈಮಿನಿ:-** ಪೂಜ್ಯರೇ, ಗುರುವಿನ ಲಕ್ಷಣ ಏನು? ವೈಷ್ಣವರು ಎಂದರೆ ಯಾರು?

**ವೇದವ್ಯಾಸ:-** ಪೂರ್ವಕಾಲದಲ್ಲಿ ಶ್ರೀ ಹರಿಯು ಮಧುಕೈಟಭ ಎಂಬ ದೈತ್ಯರನ್ನು ಸಂಹರಿಸಿದ. ಬಳಿಕ ಬ್ರಹ್ಮದೇವರು ಪ್ರಶ್ನೆ ಮಾಡಿದರು. ಅದಕ್ಕೆ ಭಗವಂತನು ಹೇಳಿದ ಉತ್ತರವನ್ನೇ ನಾನು ಈಗ ನಿಮಗೆ ಹೇಳುತ್ತೇನೆ ಕೇಳಿರಿ.

ಪೂರ್ವಕಾಲದಲ್ಲಿ ಕಲ್ಪದ ಕೊನೆಯ ಭಾಗದಲ್ಲಿ ಶ್ರೀಹರಿಯು ತನ್ನ ರುದ್ರರೂಪದಿಂದ ಪ್ರಪಂಚವನ್ನೆಲ್ಲ ಸಂಹರಿಸಿ ಯೋಗ ಮಾಯೆಯಿಂದ ತಾನು ಮಲಗಿಕೊಂಡ. ಆಗ ಸರ್ವ ಪ್ರಪಂಚವೇ ನೀರಿನಲ್ಲಿ ಮುಳುಗಿ ಹೋಯಿತು. ಆ ನಾರಾಯಣನ ಹೊಕ್ಕಳದ ಹೊಂದಾವರೆಯಿಂದ ಬ್ರಹ್ಮ ಹುಟ್ಟಿದ. ಆ ಬ್ರಹ್ಮನು ಆದಿ ಪುರುಷನಾದ ಶ್ರೀಹರಿಯನ್ನು ಧ್ಯಾನ ಮಾಡುತ್ತ ಕುಳಿತುಕೊಂಡ.

ಅದೇ ಕಾಲದಲ್ಲಿ ವಿಷ್ಣುವಿನ ಕಿವಿಯೊಳಗಿನ ಕೆಸರಿನಿಂದ ಮಧುಕೈಟಭ ಎಂಬ ಘೋರ ರೂಪಿಗಳಾದ ದಾನವರು ಹುಟ್ಟಿದರು. ಒಬ್ಬನ ಹೆಸರು ಮಧು ಇನ್ನೊಬ್ಬ ಕೈಟಭ ದಾರುಣ ರೂಪದ ಆ ಇಬ್ಬರೂ ಕ್ರೂರ ರಕ್ಕಸರು ಆಕಾಶದಲ್ಲಿ ಮದೋನ್ಮತ್ತರಾಗಿ ತಿರುಗ ತೊಡಗಿದರು. ವಿಷ್ಣುವಿನ ಹೊಕ್ಕಳದ ಹೊಕ್ಕರಣಿಯಲ್ಲಿ ಹುಟ್ಟಿದ ಹೊಂದಾವರೆಯ ಮೇಲೆ ನಾಲ್ಕು ಮೊಗದ ಒಬ್ಬ ಸುಂದರ ಪುರುಷ ಕುಳಿತದ್ದನ್ನು ಅವರು ನೋಡಿದರು. ಕೂಡಲೇ ಅವರು ತಮ್ಮ ಕಂಗಳನ್ನು ಕೆಂಪಗೆ ಮಾಡಿ ಆ ಬ್ರಹ್ಮನನ್ನು ಕೊಲ್ಲಲು ಹೊರಟರು. ಅದನ್ನು ನೋಡಿ ಬ್ರಹ್ಮನು ಗಾಬರಿಯಾಗಿ ಭಗವಂತನ ಮೇಲೆ ನಿದ್ರಾಮುದ್ರೆಯನ್ನು ಎಳೆದ ಯೋಗನಿದ್ರೆಯನ್ನು ಸ್ತೋತ್ರಮಾಡಿದರು ಮತ್ತು ಹೇಳಿದರು.

**ಬ್ರಹ್ಮ:-** ದೇವಿ, ಮಧು ಮತ್ತು ಕೈಟಭ ಎಂಬ ಕ್ರೂರರಾದ ರಾಕ್ಷಸರು ನನ್ನನ್ನು ಕೊಲ್ಲಲು ಬರುತ್ತಲಿದ್ದಾರೆ. ನೀನು ನಿನ್ನ ಮಾಯೆಯಿಂದ ಅವರನ್ನು ಸೋಲಿಸು. ಅಚ್ಯುತನನ್ನು ಬಿಟ್ಟುಬಿಡು. ಬ್ರಹ್ಮದೇವರ ಪ್ರಾರ್ಥನೆಯಂತೆ ಆ ಯೋಗ ನಿದ್ರೆಯಿಂದ ವಿಷ್ಣುವಿನನ್ನು ಬಿಟ್ಟು ಮುಕ್ತನನ್ನಾಗಿ ಮಾಡಿದಳು. ಅನಂತರ ಶ್ರೀಮನ್ನಾರಾಯಣನು ಯೋಗನಿದ್ರೆಯಿಂದ ಎಚ್ಚತ್ತು ಅಂತರಿಕ್ಷದಲ್ಲಿಯೇ ಐದುಸಾವಿರ ವರ್ಷ ಯುದ್ಧ ಮಾಡಿದ. ಇಬ್ಬರಿಗೂ ಗೆಲವು ಒಲವು ತೋರಲೇ ಇಲ್ಲ.

ಕೊನೆಗೆ ಒಂದು ದಿನ ಆ ಮಧುಕೈಟಭರಿಬ್ಬರೂ ವಿಷ್ಣುವನ್ನು ಕಂಡು ''ನಮ್ಮಿಂದ ವರವನ್ನು ಪಡೆದುಕೊ ನಿನಗೆ ಬೇಕಾದುದನ್ನು ಕೇಳು ನಾನು ಕೊಡುತ್ತೇನೆ'' ಎಂದು ಹೇಳಿದರು. ಆಗ ವಿಷ್ಣು ನಕ್ಕು ಅವರಿಗೆ ಹೇಳಿದ.

**ಶ್ರೀಹರಿ:-** ದೈತ್ಯವೀರರೇ ನೀವು ಇಬ್ಬರೂ ನನ್ನ ಮೇಲೆ ಪ್ರೀತರಾಗಿದ್ದರೆ ನನ್ನಿಂದ ಮರಣವನ್ನು ಆದಷ್ಟು ಬೇಗನೇ ಹೊಂದಿರಿ.

**ಮಧುಕೈಟಭರು:-** ನೀನು ನಮ್ಮಿಬ್ಬರನ್ನು ನೀರು ಇಲ್ಲದೇ ಇರುವ ನೆಲದ ಮೇಲೆಯೇ ಹೊಡೆದು ಕೊಲ್ಲಬೇಕು.

ತಥಾಸ್ತು ಎಂದು ಹೇಳಿದ ಕೇಶವ. ಆ ಇಬ್ಬರೂ ಬಲಿಷ್ಠರಾದ ದೈತ್ಯರನ್ನು ನೀರಿಲ್ಲದ ನೆಲದಲ್ಲಿ ಕರೆತಂದು ತನ್ನ ಸುದರ್ಶನ ಚಕ್ರದಿಂದ ಸಂಹರಿಸಿದ. ಅದರಿಂದ ಪರಿತುಷ್ಟನಾದ ಆ ಪರಮೇಷ್ಠಿ ಬ್ರಹ್ಮನ ಭಕ್ತಿಯುಕ್ತನಾಗಿ ಮಹಾವಿಷ್ಣುವನ್ನು ಸ್ತೋತ್ರ ಮಾಡಿದ.

ಬ್ರಹ್ಮ ಉವಾಚ-

ನಮೋ ನಮಸ್ತೇ ಪರಮೇಶ್ವರಾಯ ಪ್ರಪನ್ನ ಸರ್ವಾರ್ತಿ ವಿನಾಶನಾಯ ।
ನಮೋ ನಮಸ್ತೇ ತ್ರಿಗುಣಾತ್ಮಕಾಯ ನಾರಾಯಣಾಯಾಮಿತವಿಕ್ರಮಾಯ ॥೧॥

ತ್ವತ್‌ಪಾದ ಪಾಥೋಯ ಯುಗಂ ಪ್ರಫನ್ನಾಃ ಜನಾಃ ಕ್ವಚಿನ್ನೋ ವಿಪದುಂ ಪ್ರಪನ್ನಾಃ ।
ಎತನ್ಮಯಾ ಜ್ಞಾತಮನಂತ ಕೀರ್ತೇ ಸದೋಹೃತೇಯಂ ಮಹತಿ ಮಮಾಪತ್ ॥೨॥

ಯೋಗೇಶ್ವರೋಸಿ ಸದಯೋಶಿ ಜಗತ್ರಯೇಷ ತ್ವಂ ದೇವದೇವ ಶರಣಾಗತಪಾಲಕೇಶ ।
ತ್ವಂ ನಿರ್ದಯೊರಿ ನಿಕರಸ್ಯ ವಿನಾಶನೇಷು ಯದ್ರಕ್ಷಿತೋಹ ಮಸುಕೌನಿಹತೌ ತ್ವಯತೌ ॥೩॥

ಯದ್ಯಪ್ಯೂತೀವ ಕಠಿಣೌ ಮಧುಕರಿತ ಭೌತೌ ಮನ್ಯೇ ತಥಾಪಿ ಸ್ವಜನಾವಿಹ ಚೇತಸಾಹಂ ।
ಯಸ್ಮಾತ್ ಸ್ವಜೀವನ ವಿನಾಶ ವರಪ್ರಧಾನೈಃ ಸಂತೋಷಿತೋಖಿಲ ಶುಭಪ್ರದ ಈಶ್ವರಃ ತ್ವಂ ॥೪॥

ರಮ್ಯೈಜಗತ್ರಯಮಿದಂ ಪುರುಷಸ್ಯ ತಸ್ಯ ನಶ್ಯಂತಿ ಸರ್ವರಿಪವ; ಸ್ವಕುಲೈಃ ಸಮೇತಾಃ ।
ವೃದ್ಧಿಂ ವೃಜಂತಿ ಸುಹೃದೋಶಿಲ ಬಾಂಧವಾಶ್ವ ಎಂಪಶ ನಿ ತ್ಯೆ ಮಮರೇಶ ದಯಾಭಿರತ್ರ ॥೫॥

ಲಕ್ಷ್ಮೀಮುಖಾಂಬುಜ ಮಧೂರತ ದೇವದೇವ ಸಂಸಾರಿ ಲೋಕ ಭಯಶೋಕವಿನಾಶಕಾರಿನ್ ।
ತ್ವಚ್ಚಾರು ಪಾರ ಕಮಲದ್ವಯಮಾಶ್ರಯಂತಮ್ । ಮಾಂ ಪಾಹಿ ನಾಥ ಕೃಪಯಾ ಸತತಂ ನಮಸ್ತೇ ॥೬॥

ಪ್ರಸೀದ ಪುಂಡರೀಕಾಕ್ಷಪ್ರಸೀದ ಕಮಲೇಶ್ವರ ಪ್ರಸೀದ ಸರ್ವಭೂತೇಷ ವಿಶ್ವಂಭರ ನಮೋ

ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ನಮೋನಮಃ ।
ಪರಿತ್ರಾಹಿ ಪರಿತ್ರಾಹಿ ಪರಿತ್ರಾಹಿ ಜನನ್ಮಯಃ ॥೮॥

೧) ಶರಣು ಬಂದವರ ದುಃಖವನ್ನು ನಾಶಮಾಡುವ ಪರಮೇಶ್ವರನೇ ನಿನಗೆ ನಮ್ಮ ನಮಸ್ಕಾರ. ತ್ರಿಗುಣಾತ್ಮಕನೂ, ಅಪರಿಮಿತ ಪರಾಕ್ರಮಶಾಲಿಯೂ ಆದ ನಾರಾಯಣನೇ ನಿನಗೆ ನಮ್ಮ ನಮಸ್ಕಾರ.

೨) ನಿನ್ನ ಪಾದಗಳಿಗೆ ಶರಣು ಬಂದವರು ಎಂದೂ ಹುಟ್ಟು ವಿಪತ್ತಿನಲ್ಲಿ ಬೀಳುವುದಿಲ್ಲ. ಇದಕ್ಕೆ ನಾನೇ ದೃಷ್ಟಾಂತ. ನನ್ನ ಮೇಲೆ ಬಂದ ಘೋರ ಆಪತ್ತನ್ನು ನೀನು ಇದೀಗ ಪರಿಹರಿಸಿದೆ. ಅಪರಿಮಿತ ಕೀರ್ತಿಯುಳ್ಳ ನಿನ್ನ ಮಹಿಮೆಯನ್ನು ನಾನು ಇದೀಗ ತಿಳಿದುಕೊಂಡೆ.

೩) ಶರಣಾಗತರನ್ನು ಪಾಲನ ಮಾಡುವ ದೇವ ದೇವ, ಯೋಗೇಶ್ವರನಾದ ನೀನು ಮೂರು ಲೋಕಕ್ಕೆಲ್ಲ ಒಡೆಯನಾಗಿದ್ದು ದಯಾಪರಿಪೂರ್ಣನಾಗಿರುವೆ. ಆದರೆ ವೈರಿಗಳ ನಾಶಮಾಡುವುದರಲ್ಲಿ ಮಾತ್ರ ನೀನು ನಿರ್ದಯ. ಆದ್ದರಿಂದಲೇ ಆ ದುಷ್ಟ ದೈತ್ಯರಿಬ್ಬರನ್ನು ಸಂಹರಿಸಿ ನನ್ನನ್ನು ರಕ್ಷಿಸಿದೆ.

೪) ಯದ್ಯಪಿ ಆ ಮದುಕೈಟಭರಿಬ್ಬರೂ ಬಹಳ ಕ್ರೂರ ರಕ್ಕಸರು. ಆದರೂ ಅವರೂ ಕೂಡ ನನಗೆ ಆತ್ಮೀಯರೆಂದೇ ನಾನು ಭಾವಿಸುತ್ತೇನೆ. ಯಾಕೆಂದರೆ ಅವರು ನಿನ್ನಿಂದ ಸಾಯಬೇಕೆಂದು ವರಬೇಕೆಂದು ಎಲ್ಲರಿಗೂ ಕಲ್ಯಾಣವನ್ನುಂಟು ಮಾಡುವ ನಿನ್ನನ್ನು ಸಂತೋಷ ಪಡಿಸಿದರು.

೫) ಎಲ್ಲ ದೇವತೆಗಳಿಗೂ ದೊರೆಯಾದ ನೀನು ದಯಾ ಪೂರ್ಣವಾದ ದೃಷ್ಟಿಯಿಂದ ಯಾರನ್ನು ನೋಡುವೆಯೋ ಆ ಮನುಷ್ಯನಿಗೆ ಲೋಕವೆಲ್ಲವೂ ಆನಂದಪ್ರದ, ರಮಣೀಯ. ಅವನ ವೈರಿಗಳೆಲ್ಲರೂ ಸಪರಿವಾರ ಸತ್ತು ಹೋಗುವರು. ಅವನ ಬಾಂಧವರೆಲ್ಲರೂ ಅಭಿವೃದ್ಧಿ ಪಡೆಯುವರು. ಮಿತ್ರರು ಉತ್ಕರ್ಷವನ್ನು ಹೊಂದುವರು.

೬) ಲಕ್ಷ್ಮಿದೇವಿಯ ಮೊಗವೆಂಬ ಸೊಗೈಸುವ ದುಂಬಿಯಂತಿರುವ ದೇವ ದೇವ ನೀನು. ಸಂಸಾರಿಗಳಾದ ಮಾನವರ ಶೋಕಗಳನ್ನೆಲ್ಲ ನಾಶಪಡಿಸುವೆ. ನಿನ್ನ ಸುಂದರವಾದ ಚರಣದ್ವಂದ್ವವನ್ನು ಆಶ್ರಯಿಸಿದ, ನನ್ನನ್ನು ಜಗನ್ನಾಥ ರಕ್ಷಿಸು. ನಿನಗೆ ನನ್ನ ನಿರಂತರ ನಮಸ್ಕಾರ.

೭) ತಾವರೆಗಣ್ಣಿನ ಕಮಲಾಪತಿಯೇ ಪ್ರಸನ್ನನಾಗು, ಪ್ರಸನ್ನನಾಗು, ಸರ್ವಪ್ರಾಣಿಗಳ ನಿಯಾಮಕನಾದ ವಿಶ್ವಂಭರ ನೀನು ನನ್ನ ಮೇಲೆ ಸುಪ್ರಸನ್ನನಾಗು. ನಿನಗೆ ನನ್ನ ನಮಸ್ಕಾರ.

೮) ಜಗತ್ತಿನ ಹುಟ್ಟು ಉಳಿವು ಅಳಿವು ಪಾಲನ ಪೋಷಣೆ ಎಲ್ಲವನ್ನೂ ಮಾಡುವದರಿಂದ ಜಗನ್ಮಯಾ ಎನಿಸಿದ ಸ್ವಾಮಿ, ನಿನಗೆ ನಮಸ್ಕಾರ ನಿನಗೆ ವಂದನೆ. ನಿನಗೆ ನಮನ. ಜಗದೀಶ ನಮ್ಮನ್ನು ರಕ್ಷಿಸು. ಕರುಣೆಯಿಂದ ಕಾಪಾಡು, ಪಾಲಿಸು.

ಬ್ರಹ್ಮದೇವರ ಈ ಸ್ತೋತ್ರದಿಂದ ಸುಪ್ರಸನ್ನನಾದ ಭಗವಂತ ಅವರಿಗೆ ಬಯಸಿದ ವರ ಕೇಳಿದ.

**ಬ್ರಹ್ಮ:-** ಸ್ವಾಮಿ ನೀನು ನನ್ನ ಮೇಲೆ ತುಷ್ಟನಾಗಿದ್ದರೆ ನಿನ್ನ ಭಕ್ತರಿಗೆ ಎಂದೂ ಕುತ್ತು ಆಪತ್ತುಗಳು ಬಾರದಂತೆ ಮಾಡು. ಇದೇ ನಾನು ನಿನ್ನಿಂದ ಅಪೇಕ್ಷಿಸುವ ವರ.

**ನಾರಾಯಣ:-** ಇದೋ ಕೊಟ್ಟೆ ನೀನು ಕೇಳಿದ ವರವನ್ನು. ನನ್ನ ಭಕ್ತನಿಗೆ ಇನ್ನು ಮೇಲೆ ಭೂಲೋಕದಲ್ಲಿ ಆಪತ್ತು ಬರಲಾರದು. ನಾನು ಯಾವಾಗಲೂ ವಿಷ್ಣು ಶರೀರಗಳಲ್ಲಿಯೇ ವಾಸಮಾಡುತ್ತೇನೆ. ಆದ್ದರಿಂದ ಆ ವೈಷ್ಣವರು ಎಂದೂ ವಿಪತ್ತುಗಳಲ್ಲಿ ಬೀಳಲಾರರು.

**ಬ್ರಹ್ಮ:-** ನಾನು ಮಾಡಿದ ಈ ಸ್ತೋತ್ರವನ್ನು ಭಕ್ತಿಯಿಂದ ಪಠಣ ಮಾಡುವವರನ್ನು ಇನ್ನು ಮುಂದೆ ಪ್ರೀತಿಯಿಂದ ಸಂರಕ್ಷಣೆ ಮಾಡು. ಕೈಟಭಾರಿಯೇ ವಿಷ್ಣುಭಕ್ತರು ಯಾರು ? ನಿಜವಾದ ವೈಷ್ಣವನ ಗುಣಲಕ್ಷಣಗಳು ಏನು? ಇವನು ವೈಷ್ಣವ ಎಂದು ಮಾನವರನ್ನು ಹೇಗೆ ಗುರುತಿಸುವುದು ಅದನ್ನು ಹೇಳು.

**ನಾರಾಯಣ:-**

**ಕಾಮಕ್ರೋಧ ವಿಹೀನಾಯೇ ಹಿಂಸಾದಂಭವಿವರ್ಜಿತಾಃ ।**
**ಲೋಭಮೋಹವಿಹೀನಾಶ್ಚ ನೇಯಾಸ್ತೇ ವೈಷ್ಣವಾ ಜನಾಃ ॥**

ಕಾಮಕ್ರೋಧಗಳನ್ನು ಬಿಟ್ಟು ಹಿಂಸೆ ಹಾಗೂ ದಂಭಗಳನ್ನು ವರ್ಜಿಸಿ, ಲೋಭ ಮೋಹಗಳನ್ನು ಕಳೆದು ಕೊಂಡವರು ವೈಷ್ಣವ ಅಥವಾ ವಿಷ್ಣುಭಕ್ತ ಎನಿಸುವರು.

**ಏಕಾದಶಿ ವ್ರತಂ ಏಷ ಭಕ್ತಿ ಭಾವೇನ ಕುರ್ವತೇ ।**
**ಗಾಯಂತಿ ಮಮ ನಾಮಾನಿ ನೇಯಾಸ್ತೇ ವೈಷ್ಣವಾಜನಾಃ ॥**

ಭಕ್ತಿಯಿಂದ ಏಕಾದಶಿ ಉಪವಾಸ, ಜಾಗರ, ದ್ವಾದಶಿ ಪ್ರಾತಃಕಾಲ ಪಾರಣೆಗಳನ್ನು ಮಾಡುವವರು ಮತ್ತು ನನ್ನ ನಾಮ ಸಂಕೀರ್ತನೆ ಗೈಯುವವರು ವೈಷ್ಣವರು. ದೇವರ ಗುಡಿ ಕಟ್ಟಿಸುವವರು, ತುಳಸೀ ಮಾಲೆ, ಕಮಲಾಕ್ಷ ಮಾಲೆಗಳನ್ನು ಧರಿಸುವವರು, ಶಂಖ ಚಕ್ರಾದಿ ನನ್ನ ಆಯುಧಗಳ ಚಿನ್ಹಗಳನ್ನು ಧರಿಸುವವರು, ಕೊರಳಲ್ಲಿ ನೆಲ್ಲಿಕಾಯಿಯ ಮಾಲೆಯನ್ನು ಧರಿಸುವವರು, ನೆಲ್ಲೀ ಎಲೆಗಳಿಂದ ನನ್ನನ್ನು ಪೂಜಿಸುವವರು ವೈಷ್ಣವರು. ತುಳಸೀ ಮೂಲ ಮೃತ್ತಿಕೆಯನ್ನು ಹಣೆಯ ಮೇಲೆ ಧರಿಸುವವರು, ಗಂಗಾಸ್ನಾನ ಮಾಡುವವರು, ಪ್ರತಿ ನಿತ್ಯ ಸಾಲಿಗ್ರಾಮ ಪೂಜೆ ಮಾಡುವವರು, ಮನೆಯಲ್ಲಿ ಪುರಾಣ ಶ್ರವಣ ಮಾಡುವವರು ನಿಜವಾದ ವೈಷ್ಣವರು. ದೇವರ ಗುಡಿಯಲ್ಲಿ ಪ್ರತಿದಿನ ಕಸ ಗೂಡಿಸುವವರು, ದೀಪ ಹಚ್ಚುವವರು, ಹಳೆಯ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡುವವರು, ಹೊಸ ಗುಡಿಗಳನ್ನು ಕಟ್ಟಿಸುವವರು, ಇದ್ದ ದೇವಾಲಯಗಳನ್ನು ಅಲಂಕರಿಸುವವರು, ವಿದ್ಯಾದಾನ ಮಾಡುವರು, ಹೆದರಿದವರಿಗೆ ಅಭಯ ಹಸ್ತ ನೀಡುವವರು, ವಿಷ್ಣುವಿನ ಪಾದದೋಕವನ್ನು ತಲೆಯ ಮೇಲೆ ಸಿಂಪಡಿಸಿಕೊಳ್ಳುವವರು, ಹರಿಯ ನೈವೇದ್ಯ ಉಣ್ಣುವವರು, ಹಸಿದವರಿಗೆ ಅನ್ನ, ನೀರು ನೀಡುವವರು, ಉಪವನವನ್ನು ನಿರ್ಮಿಸುವವರು ಆಲದ ಮರಗಳನ್ನು ಬೆಳೆಸುವವರು, ಗೋಸೇವೆ ಮಾಡುವವರು, ತಾಯಿ ತಂದೆಗಳ ಸೇವೆಯನ್ನು ಭಕ್ತಿಯಿಂದ ಮಾಡುವವರು, ಹಿರಿಯ ಅಣ್ಣ, ಅಕ್ಕಂದಿರ ಸೇವೆಯನ್ನು ಮಾಡುವವರು, ಪರನಿಂದೆಯನ್ನು ಮಾಡದವರು ವೈಷ್ಣವರು ಎಂದು ತಿಳಿದು ಕೊಳ್ಳಬೇಕು. ದೇವರ ಸ್ವತ್ತು, ಹೆರವರ ಹಣ, ಬ್ರಾಹ್ಮಣರ ದ್ರವ್ಯಗಳನ್ನು ವಿಷದಂತೆ ಯಾರು ಕಾಣುವರೋ, ಅವರು ವೈಷ್ಣವರು. ಹೆಚ್ಚಿನ ಮಾತೇಕೇ ಬ್ರಹ್ಮ? ಯಾರು ಪ್ರತಿನಿತ್ಯವೂ ಮನೆಯಲ್ಲಿ ನನ್ನ ಪೂಜೆಯನ್ನು ಮಾಡುತ್ತಾರೆಯೋ ಅವರು ವೈಷ್ಣವರೆಂದು ತಿಳಿದುಕೋ. ಇನ್ನು ಮೇಲೆ ನೀನು ಮೊದಲು ಇದ್ದಂತೆಯೇ ಈ ಪ್ರಪಂಚವನ್ನು ಸೃಷ್ಟಿ ಮಾಡು. ಹೀಗೆ ಹೇಳಿ ಆ ಮಹಾವಿಷ್ಣು ಅಲ್ಲಿಯೇ ಅಂತರ್ಧಾನ ಹೊಂದಿದ. ಅನಂತರ ಬ್ರಹ್ಮನು ಮೊದಲು ಇದ್ದಂತೆಯೇ ಈ ಪ್ರಪಂಚದ ಸೃಷ್ಟಿ ಮಾಡಿದ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಶ್ರೀಹರಿಯಿಂದ ಮಧುಕೈಟಭರ ಸಂಹಾರ ಎಂಬ ಎರಡನೇಯ ಅಧ್ಯಾಯ ಮುಗಿದುದು*

## ಮನೋಭದ್ರರಾಜಪುತ್ರರ ಪೂರ್ವಜನ್ಮದ ಕಥೆ ಗೃಧ್ರ ದಂಪತಿಗಳಿಗೆ ಮುಕ್ತಿ

ಅಧ್ಯಾಯ - ೩

**ಜೈಮಿನಿ:-** ನನಗೆ ಕ್ರಿಯಾಯೋಗದ ತತ್ತ್ವವನ್ನು ಹೇಳಿರಿ

**ವೇದವ್ಯಾಸ:-** ಈ ಭೂಲೋಕದಲ್ಲಿ ಮನುಷ್ಯ ಜನ್ಮವೇ ದುರ್ಲಭ. ಮಾನವರಾಗಿ ಹುಟ್ಟಿದ ಬಳಿಕ ಮೋಕ್ಷವನ್ನು ಪಡೆಯಲಿಕ್ಕಾಗಿ ಯೋಗವನ್ನು ಅಭ್ಯಾಸ ಮಾಡಬೇಕು. ಆ ಯೋಗವು ಕ್ರಿಯಾ ಯೋಗ, ಧ್ಯಾನ ಯೋಗ, ಎಂದು ಎರಡು ವಿಧವಾಗಿದೆ. ಅವುಗಳಲ್ಲಿ ಮೊದಲನೇಯದಾದ ಕ್ರಿಯಾಯೋಗವು ಸರ್ವಾಭಿಷ್ಟಗಳನ್ನು ಈಡೇರಿಸಿ ಕೊಡುವುದು. ಗಂಗಾಸ್ನಾನ, ವಿಷ್ಣುಪೂಜೆ, ದಾನಧರ್ಮ, ಜ್ಞಾನಿಗಳಲ್ಲಿ ಭಕ್ತಿ, ಏಕಾದಶಿ ವ್ರತಗಳಲ್ಲಿ ನಿಷ್ಠೆ, ಧಾತ್ರಿ, ತುಳಸಿಗಳಲ್ಲಿ ನಿಷ್ಠೆ, ಅತಿಥಿ ಪೂಜೆ ಮುಂತಾದ ಧರ್ಮ ಕಾರ್ಯಗಳ ಅನುಷ್ಠಾನವು ಕ್ರಿಯಾಯೋಗ ಎಂದು ಎನಿಸಿಕೊಳ್ಳುತ್ತದೆ. ಈ ಕ್ರಿಯಾಯೋಗ ಇಲ್ಲದೇ ಬರೀ ಧ್ಯಾನ ಯೋಗದಿಂದ ಯಾವ ಸಿದ್ಧಿಯೂ ಲಭಿಸಲಾರದು.

**ಜೈಮಿನಿ:-** ಗುರುಗಳೇ, ಕ್ರಿಯಾ ಯೋಗದ ಅಂಗಗಳು ಯಾವವು? ಅವುಗಳ ಮಹಿಮೆ ಏನು? ಗಂಗೆಯ ಗುಣ, ವಿಷ್ಣು ಪೂಜೆಯ ಫಲ ಏನು ಇದೆ? ಎಂತು ಇದೆ? ದಾನಗಳಲ್ಲಿ ಯಾವ ದಾನ ಶ್ರೇಷ್ಠ? ಯಾವ ಭಕ್ತಿ ಶ್ರೇಷ್ಠ? ಏಕಾದಶಿ ವ್ರತದ ಫಲವು ಏನು? ನೆಲ್ಲಿಯ ಮರದಲ್ಲಿ ತುಳಸಿಯ ಗಿಡದಲ್ಲಿ ಭಕ್ತಿ ಮಾಡುವುದು ಎಂದರೇನು? ಇದೆಲ್ಲವನ್ನೂ ನನಗೆ ಹೇಳಿರಿ.

**ವೇದವ್ಯಾಸ:-** ದ್ವಿಜಶ್ರೇಷ್ಠನಾದ ಜೈಮಿನಿ ನೀನೇನೋ ಪ್ರಶ್ನೆ ಮಾಡಿದೆ. ಆದರೆ ನಿನ್ನ ಪ್ರಶ್ನೆಗಳಿಗೆ ಪೂರ್ಣ ಉತ್ತರ ಹೇಳುವುದು ನನ್ನಿಂದ ಶಕ್ಯವಿಲ್ಲ. ಆದರಿಂದ ಸಂಕ್ಷೇಪವಾಗಿ ಹೇಳುತ್ತೇನೆ. ಏಕ ಚಿತ್ತದಿಂದ ಕೇಳು. ಗಂಗೆಯ ಗುಣಗಳನ್ನು ಯಾವವು ಏನು ಎಂದು ಪ್ರಶ್ನಿಸಿದ್ದೆ ಅಲ್ಲವೆ? ಗಂಗಾ ಎಂಬ ಎರಡು ಅಕ್ಷರಗಳನ್ನು ಜಪಿಸಿದ ಮಾತ್ರಕ್ಕೆ ಪಾಪಗಳೆಲ್ಲವೂ ಕಳೆದು ಹೋಗುವವು. ಅದರಲ್ಲಿಯೂ ಗಂಗಾ ದ್ವಾರ, ಪ್ರಯಾಗ ಮತ್ತು ಗಂಗಾ ಪ್ರಯಾಗ ಸಂಗಮ, ಈ ಮೂರು ಸ್ಥಳಗಳಲ್ಲಿ ಗಂಗೆಯು ದುರ್ಲಭ. ಇಂದ್ರಾದಿ ದೇವತೆಗಳೂ ಕೂಡ ಮನೋಹರವಾದ ಗಂಗಾದ್ವಾರಕ್ಕೆ ಬಂದು ಅಲ್ಲಿ ಸ್ನಾನ ದಾನಾದಿಗಳನ್ನು ಮಾಡುತ್ತಾರೆ. ದೈವ ಯೋಗದಿಂದ ಗಂಗಾದ್ವಾರಕ್ಕೆ ಬಂದು ಅಲ್ಲಿ ದೇಹತ್ಯಾಗ ಮಾಡಿದ ಮನುಷ್ಯ ಪಶು ಕ್ರಿಮಿಕೀಟಗಳೂ ಕೂಡ ಮೋಕ್ಷವನ್ನು ಹೊಂದುತ್ತವೆ. ಈ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಚಂದ್ರವಂಶದಲ್ಲಿ ಮನೋಭದ್ರ ಎಂಬ ಬಲಿಷ್ಠನಾದ ರಾಜನು ಇದ್ದ. ಅವನ ಪಟ್ಟಮಹಿಷಿಯಾದ ಹೇಮಪ್ರಭೆ ಯಾವಾಗಲೂ ಸವಿ ಮಾತನಾಡುವ ಸಾಧ್ವೀಮಣಿ. ಸರ್ವರ ರಕ್ಷಣೆಗಳಿಂದ ಒಡಗೂಡಿದ ಮಹಾಪತಿವ್ರತೆ. ಆ ಮನೋಭದ್ರ ಮಹಾರಾಜನು ಯುದ್ಧದಲ್ಲಿ ತನ್ನ ವೈರಿಗಳನ್ನು ಗೆದ್ದು, ಸಮುದ್ರಪರ್ಯಂತ ಭೂಮಿಯನ್ನೆಲ್ಲ ಧರ್ಮದಿಂದ ಆಳುತ್ತಲಿದ್ದ. ಒಂದು ದಿನ ಆ ಮಹಾರಾಜ, ತನ್ನ ಮಂತ್ರಿಗಳನ್ನೆಲ್ಲ ಕರೆದು ಸಭೆಯಲ್ಲಿ ಪ್ರೀತಿಯಿಂದ ಹೀಗೆ ನುಡಿದ.

**ಮನೋಭದ್ರ:-** ಮಾನ್ಯಮಂತ್ರಿಗಳೇ, ಈ ಸಮಗ್ರಭೂಮಂಡಲವನ್ನೆಲ್ಲ ನಾನು ಇಷ್ಟು ದಿನ ನ್ಯಾಯದಿಂದ ಪರಿಪಾಲನೆ ಮಾಡಿದೆ. ಎಲ್ಲ ಶತ್ರುಗಳನ್ನು ಸಂಹರಿಸಿದೆ.

ಯೋಗ್ಯರಾದ ವಿದ್ವಾಂಸರಿಗೆ ದಾನ ಧರ್ಮ ನೀಡಿ ಸಂತೋಷ ಪಡಿಸಿದೆ. ನಮ್ಮ ಗೋತ್ರದಲ್ಲಿ ಜನಿಸಿದವರೆಲ್ಲರನ್ನೂ ಪಾಲಿಸಿ ಪೋಷಿಸಿದೆ. ಅನೇಕ ಯಜ್ಞಗಳನ್ನು ಮಾಡಿದೆ. ಹೇರಳವಾಗಿ ದಕ್ಷಿಣೆಯನ್ನು ನೀಡಿದೆ. ಆದರೆ ಈಗ ಮಾತ್ರ ನನ್ನ ದೇಹಕ್ಕೆ ಮುಪ್ಪು ಹಿಡಿದಿದೆ. ಈ ವಾರ್ಧಕ್ಯವು ನನ್ನ ದೇಹದ ಬಲವನ್ನೆಲ್ಲ ಅಳಿದಿದೆ. ನನ್ನ ಆತ್ಮವನ್ನೇ ಈ ಮುಪ್ಪು ಹಿಂಡಿ ಹಿಪ್ಪಿ ಮಾಡಿದೆ. ಈಗ ನಾನು ದುರ್ಬಲನಾಗಿದ್ದರಿಂದ ಏನನ್ನೂ ಮಾಡಲಾರೆ. ಸಾಮರ್ಥ್ಯ ರಹಿತನಾದ ಪುರುಷನಲ್ಲಿ ರಾಜ್ಯಸಿರಿ ಶೋಭಿಸುವದಿಲ್ಲ. ಆದ್ದರಿಂದ ನಾನು ಈಗ ನನ್ನ ರಾಜ್ಯವನ್ನೆಲ್ಲ ವಿಭಾಗ ಮಾಡಿ ನನ್ನ ಇಬ್ಬರು ಮಕ್ಕಳಿಗೆ ಕೊಡಬೇಕೆಂದು ಅಪೇಕ್ಷಿಸುತ್ತೇನೆ. ಇದಕ್ಕೆ ನಿಮ್ಮೆಲ್ಲರ ಸಮ್ಮತಿ ಇದೆಯಷ್ಟೇ?

**ಮಂತ್ರಿಗಳು:-** ಪ್ರಭು, ನೀವು ನೀತಿಸಂಪನ್ನರು. ನಿಮ್ಮ ಅಭಿಪ್ರಾಯವೇ ನಮ್ಮ ಅಭಿಪ್ರಾಯ ನೀವು ಹೇಳಿದ್ದೇ ಸರಿ. ಇದರಲ್ಲಿ ಸಂದೇಹವಿಲ್ಲ. ಅನಂತರ ರಾಜ, ವೀರಭದ್ರ ಯಶೋಭದ್ರ ಎಂಬ ತನ್ನ ಇಬ್ಬರು ಮಕ್ಕಳಿಗೆ ಹೇಳಿಕಳಿಸಿದ. ರಾಜನಸುದೈವದಿಂದ ಅವನ ಆ ಇಬ್ಬರೂ ಕುಮಾರರು ಸರ್ವಗುಣ ಸಂಪನ್ನರೂ ಪಿತೃಭಕ್ತರೂ ಶಾಂತ ಮೂರ್ತಿಗಳೂ ಧರ್ಮನಿಷ್ಠರೂ ಆಗಿದ್ದರು. ಅವರಿಬ್ಬರೂ ಮಕ್ಕಳಿಗೆ ರಾಜನು ತನ್ನ ರಾಜ್ಯವನ್ನು ವಿಭಾಗ ಮಾಡಿಕೊಟ್ಟ. ಇದೇ ವೇಳೆಯಲ್ಲಿ ಅಲ್ಲಿಗೆ ಒಂದು ಹದ್ದು ತನ್ನ ಮಡದಿಯೊಂದಿಗೆ ಬಂದಿತು. ಸಭೆಯ ನಟ್ಟನಡುವೆ ಪತ್ನಿಯೊಡನೆ ಬಂದು ಕುಳಿತಿತು. ಅವೆರಡೂ ಗೃಧ್ರದಂಪತಿಗಳನ್ನು ನೋಡಿ ರಾಜನಿಗೆ ಬಹಳ ಸಂತೋಷವಾಗಿ ಅವನು ಪ್ರಶ್ನೆ ಮಾಡಿದ.

**ರಾಜ:-**ನಿಮ್ಮಿಬ್ಬರ ಇಲ್ಲಿಯ ಶುಭಾಗಮನದ ಕಾರಣ ಏನು? ಎಂಬುದನ್ನು ಹೇಳಿರಿ.

**ಗೃಧ್ರ:-** ಮಹಾರಾಜ, ನಾನೊಬ್ಬ ಹದ್ದು. ಇವಳು ನನ್ನ ಹೆಂಡತಿ. ನಾನು ನಿನ್ನ ಇಬ್ಬರೂ ಮಕ್ಕಳ ಸಂಪತ್ತು ನೋಡಲು ಸ್ವಸಂತೋಷದಿಂದ ಇಲ್ಲಿಗೆ ಬಂದಿದ್ದೇನೆ. ಈ ಇಬ್ಬರೂ ರಾಜಕುಮಾರರು ಹಿಂದಿನ ಜನ್ಮದಲ್ಲಿ ಅನುಭವಿಸಿದ ವಿಪತ್ತಿಯನ್ನು ನಾವು ಕಣ್ಣಿನಿಂದ ನೋಡಿದ್ದೇವೆ. ಆದುದರಿಂದ ಈ ಜನ್ಮದಲ್ಲಿ ಇವರ ಸಂಪತ್ತಿಯನ್ನು ನೋಡಲು ನಾವು ಇಲ್ಲಿಗೆ ಬಂದಿದ್ದೇವೆ.

ಹದ್ದಿನ ಮಾತನ್ನು ಕೇಳಿ ರಾಜನಿಗೆ ಪರಮಾಶ್ಚರ್ಯವಾಯಿತು. ಅವನು ಕೌತುಕಗೊಂಡು ನುಡಿದ.

**ರಾಜ:-** ಗೃಧ್ರನೇ ಇವರಿಬ್ಬರ ಪೂರ್ವಜನ್ಮದ ವೃತ್ತಾಂತವು ನಿನಗೆ ಹೇಗೆ ತಿಳಿಯಿತು ? ತಿಳಿದಿದ್ದರೆ ಅದನ್ನು ಪೂರ್ಣವಾಗಿ ಹೇಳು.

**ಗೃಧ್ರ:-** ಹಿಂದೆ ದ್ವಾಪರಯುಗದಲ್ಲಿ ಇವರಿಬ್ಬರೂ ಸತ್ಯಘೋಷ ಎಂಬ ಹೆಸರಿನ ಶೂದ್ರನ ಮಕ್ಕಳು. ಗರ, ಸಂಗರ ಎಂದು ಇವರಿಬ್ಬರ ಹೆಸರು. ಒಂದು ದಿನ ಇವರಿಬ್ಬರು ತಮ್ಮ ಮನೆಯಲ್ಲಿಯೇ ಮರಣ ಹೊಂದಿದರು. ಅವರನ್ನು ಸೆಳೆದೊಯ್ಯಲು ಕೈಯಲ್ಲಿ ಮೃತ್ಯುಪಾಶವನ್ನು ಹಿಡಿದು ಅಸಂಖ್ಯ ಯಮಕಿಂಕರರು ಆಗಮಿಸಿದರು. ತೊಗಲಿನ ಪಾಶದಿಂದ ಇಬ್ಬರು ಸೋದರರನ್ನು ಬಿಗಿದು ಯಮಪಟ್ಟಣಕ್ಕೆ ಕರೆದು ಕೊಂಡು ಹೋದರು. ಅವರಿಬ್ಬರನ್ನು ನೋಡಿ ಯಮಧರ್ಮನು ಚಿತ್ರಗುಪ್ತನನ್ನು ಕೇಳಿದ.

**ಯಮಧವ:-** ಇವರಿಬ್ಬರ ಎಲ್ಲ ವೃತ್ತಾಂತವನ್ನು ವಿಚಾರಿಸಿರಿ.

ಅವನ ಅಪ್ಪಣೆಯಿಂದ ಚಿತ್ರಗುಪ್ತನು ಮೊದಲಿನಿಂದಲೇ ವಿಚಾರಿಸಿದ. ಅವರ ಕರ್ಮಗಳ ಶುಭಾಶುಭಗಳನ್ನು ಮೂಲದಿಂದಲೇ ನೋಡಿ. ಯಮಧರ್ಮನಿಗೆ ಹೇಳಿದ.

**ಚಿತ್ರಗುಪ್ತ:-** ಮಹಾಬಾಹುವೇ, ನಿಜವಾಗಿಯೂ ಇವರಿಬ್ಬರೂ ಹಿಂದೆ ಪುಣ್ಯಕರವಾದ ವ್ರತಾನುಷ್ಠಾನ ಮಾಡಿದ ಮಹನೀಯರು. ಆದರೆ ಇವರು ಹಿಂದಿನ ಜನ್ಮದಲ್ಲಿ ಬಹಳ ದೊಡ್ಡದಾದ ಪಾಪವನ್ನು ಕೂಡ ಮಾಡಿದ್ದಾರೆ. ಇವರು ಗತಜನ್ಮದಲ್ಲಿ ವ್ರತ ಉಪವಾಸ ದೇವರ ಪೂಜೆ ಮುಂತಾದ ಪುಣ್ಯ ಕರ್ಮಗಳನ್ನು ಬೇಕಾದಷ್ಟು ಮಾಡಿದರೂ ಲೋಭದಿಂದ ದಾನವನ್ನು ಮಾಡುತ್ತಿರಲಿಲ್ಲ. ಜನರು ಬಂದು ನೀಡಿದ ಎಲ್ಲ ಬಗೆಯ ಬಗೆಯ ದಾನಗಳನ್ನು ಸ್ವೀಕರಿಸುತ್ತಿದ್ದರು. ತಾವು ಮಾತ್ರ ಒಂದು ದಿನವೂ ಒಂದು ಹಿಡಿಕಾಸನ್ನು ಯಾರಿಗೂ ನೀಡುತ್ತಿರಲಿಲ್ಲ. ಅಷ್ಟು ಮಾತ್ರವಲ್ಲದೇ ಹಣದ ಆಸೆ ಅತಿಯಾಗಿ ಇವರು ಎಷ್ಟೋ ಬ್ರಾಹ್ಮಣರ, ವಿದ್ವಾಂಸರ ಹಾಗೂ ಅನಾಥರ ಹಣವನ್ನು ಎತ್ತಿ ಹಾಕಿದರು. ಬ್ರಹ್ಮಸ್ವದ ಅಪಹಾರ ಘೋರಪಾಪ. ಆದ್ದರಿಂದ ಇವರು ಕಳೆದ ಜನ್ಮದಲ್ಲಿ ಶುಷ್ಕವಾದ ವ್ರತ ಉಪವಾಸ ಪ್ರಾತಃ ಸ್ನಾನ ದೇವಪೂಜೆ ಮುಂತಾದವುಗಳನ್ನು ಮಾಡಿದರೂ ಸ್ವಯಂ ದಾನ ನೀಡದೇ ಇರುವದರಿಂದ ಅತೀ ಲೋಭದಿಂದ ಬ್ರಹ್ಮಸ್ವವನ್ನು ಅಪಹಾರ ಮಾಡಿದ್ದರಿಂದ ಚಿರಕಾಲ ನರಕಯಾತನೆಗೆ ಅರ್ಹರಾಗಿದ್ದಾರೆ.

ಚಿತ್ರಗುಪ್ತನ ಈ ವರದಿಯನ್ನು ಕೇಳಿ ಯಮಧರ್ಮನು ಆ ಗರ ಮತ್ತು ಸಂಗರ ಎಂಬ ಸತ್ಯಘೋಷನ ಮಕ್ಕಳನ್ನು ಘೋರ ನರಕದಲ್ಲಿ ಬೀಳಿಸಿದನು.

ಅದೇ ದಿನ ನಾನು ಕೂಡ ಈ ನನ್ನ ಪತ್ನಿಯೊಂದಿಗೆ ಯಮ ಪಟ್ಟಣಕ್ಕೆ ತರಲ್ಪಟ್ಟೆ. ಈ ಯಮದೂತರಿಂದ ನಾನು ಮಾಡಿದ ಪಾಪವನ್ನು ಕೂಡ ಮೊದಲಿನಿಂದ ಹೇಳುತ್ತೇನೆ ಕೇಳು.

ಹಿಂದೆ ನಾನು ಸೌರಾಷ್ಟ್ರದೇಶದಲ್ಲಿ ಸರ್ವಗ ಎಂಬ ಹೆಸರಿನ ಬ್ರಾಹ್ಮಣನಾಗಿ ಹುಟ್ಟಿದೆ. ವೇದ ವೇದಾಂತಗಳಲ್ಲಿ ವಿಶಾರದನಾಗಿದ್ದೆ. ಮಂಜೂಷಿಕಾ ಎಂಬ ಈ ನನ್ನ ಮಡದಿಯು ಪರಮಪತಿವ್ರತೆ ಆಗಿದ್ದಳು. ಚೆಲವು ಒಲವು ಎರಡನ್ನೂ ಅಲಂಕಾರವಾಗಿ ಪಡೆದ ಈ ಸುಂದರ ಧರ್ಮಪತ್ನಿಯೊಂದಿಗೆ ಪಂಡಿತ ಪ್ರಕಾಂಡನಾದ ನಾನು ಮದೋನ್ಮತ್ತನಾದೆ. ರೂಪ, ಯೌವನ, ಐಶ್ವರ್ಯ, ಅನುಕೂಲಳಾದ ಸುಂದರ ಪತ್ನಿ ಪ್ರಚಂಡ ಪಾಂಡಿತ್ಯ ಎಲ್ಲವೂ ನನಗೆ ಸುದೈವದಿಂದ ಒದಗಿ ಬಂದದ್ದರಿಂದ ಉನ್ಮತ್ತತನವು ನನ್ನಲ್ಲಿ ನನಗೆ ಗೊತ್ತಾಗದಂತೆ ತಲೆ ಎತ್ತಿ ನನ್ನನ್ನು ಮದಿಷ್ಠನನ್ನಾಗಿ ಮಾಡಿತು, ರಾಜಸಭೆಗಳಲ್ಲಿ ನನಗೆ ಗೌರವ, ಕೈ ತುಂಬ ಧನ, ಕೊರಳ ತುಂಬ ಹಾರ, ಬಾಯಿತುಂಬ ಪ್ರಶಂಸೆ, ದೇಶದ ತುಂಬ ಕೀರ್ತಿ ಇವೆಲ್ಲವುಗಳೂ ನನಗೆ ಏಕಕಾಲಕ್ಕೆ ಲಭಿಸಿದ್ದರಿಂದ ನಾನು ಮದ್ದೋನ್ಮತ್ತನು ಆದೆ. ನನ್ನ ತಾಯಿ ತಂದೆಗಳನ್ನು ಕೂಡ ದೂರ ಮಾಡಿದೆ. ನನ್ನ ತಾಯಿ ತಂದೆಗಳು ಕೂಡ ಮಹಾಪಾಖಂಡಿಗಳು. ಅವರಿಗೆ ಸರ್ವದಾ ದುಷ್ಟರ ಸಹವಾಸ. ಅದೇ ನೆವವನ್ನು ಮುಂದೆ ಮಾಡಿ ನಾನು ಅವರನ್ನು ಮನೆಬಿಟ್ಟು ಹೊರಗೆ ಹಾಕಿದೆ. ಪಿತೃಗಳನ್ನು ಬೇಕಾದಷ್ಟು ಐಶ್ವರ್ಯವಿದ್ದರೂ ಅವರಿಗೆ ಕೊಡದೇ ಅವರಿಗೆ ಹೊಟ್ಟೆಗೆ ಹಾಕದೇ ಮನೆಯಿಂದ ಹೊರಗೆ ಅಟ್ಟಿ ಸ್ವಾರ್ಥಿಯಾಗಿ ಮಡದಿಯೊಂದಿಗೆ ಸುಖೋಪಭೋಗ ಲಾಲಸನಾಗಿ ವಿಲಾಸೀ ಜೀವನವನ್ನು ನಡೆಸಿದ್ದರಿಂದ ಯಮದೂತರು ಮರಣಾ ನಂತರ ನಮ್ಮನ್ನು ನರಕದಲ್ಲಿ ಹಾಕಿದರು. ನಮ್ಮ ತಾಯಿ ತಂದೆಗಳೂ ಕೂಡ

ಪಾಖಂಡಿಗಳ ಸಹವಾಸದಿಂದ ಸ್ವಯಂ ತಾವೂ ಪಾಖಂಡಿಗಳಾದ್ದರಿಂದ ನರಕದಲ್ಲಿ ಬೇಯುತ್ತಲಿದ್ದರು. ಹೀಗೆ ಅನೇಕ ಸಾವಿರ ವರ್ಷಗಳ ನರಕಯಾತನೆಯನ್ನು ಅನುಭವಿಸಿದ ಬಳಿಕ ನಾನು ಹಾಗೂ ನನ್ನ ಪತ್ನಿಯಾದ ಮಂಜೂಷಿಕೆಯು ಹದ್ದುಗಳಾಗಿ ಹುಟ್ಟಿದೆವು. ಸತ್ತ ಪ್ರಾಣಿಗಳ ಮಾಂಸವನ್ನು ಕಿತ್ತಿ ತಿನ್ನುವ ಈ ಕುತ್ಸಿತ ಯೋನಿಯಲ್ಲಿ ಈಗ ಬಳಲುತ್ತಿದ್ದೇವೆ. ತಾಯಿ ತಂದೆಗಳನ್ನು ಧಿಕ್ಕರಿಸಿ ಪೋಷಣೆ ಮಾಡದೇ ಸ್ವಾರ್ಥಾಂಧರಾಗಿ ನಡೆದಿದ್ದರ ಪಾಪದ ಫಲವನ್ನು ಉಣ್ಣುತ್ತಿದ್ದೇವೆ.

ಪಾಖಂಡಿಗಳ ವೇದನಿಂದಕರ ದೇವ ದ್ವೇಷಿಗಳ ಸಹವಾಸವನ್ನು ಮಾಡಿದ ನನ್ನ ತಾಯಿತಂದೆಗಳು ಸಾವಿರಾರು ವರ್ಷಗಳು ನರಕಲೋಕದ ಯಮಯಾತನೆಯನ್ನು ಅನುಭವಿಸಿ ಈಗ ದೀಪದ ಹುಳಗಳಾಗಿ ತಮ್ಮ ದುಷ್ಕರ್ಮದ ಫಲವನ್ನು ಅನುಭವಿಸುತ್ತಿದ್ದಾರೆ. ಈ ಶಲಭ (ದೀಪದ ಹುಳ) ಜನ್ಮದಲ್ಲಿ ಅವರು ಒಂದು ಪುಣ್ಯ ಕರ್ಮವನ್ನು ಮಾಡಿದರು. ಅದನ್ನು ವಿಸ್ಮಯಕರವಾದ ಆ ಘಟನೆಯನ್ನು ಹೇಳುತ್ತೇನೆ ಕೇಳು.

ದೀಪದ ಹುಳ ಬಹಳ ಹಗುರವಾದ ಕೀಟ. ಒಂದು ದಿನ ಭರದಿಂದ ಬೀಸಿತು ಬಿರುಗಾಳಿ. ಆ ಗಾಳಿಗುಂಟ ಹಾರಿ ಹೋದವು ಈ ಎರಡೂ ದೀಪದ ಹುಳಗಳು. ಆ ಗಾಳಿಯು ತನ್ನ ಅಲೆಗುಂಟ ಎರಡೂ ಶಲಭಗಳನ್ನು ತೇಲಾಡಿಸಿ ತೂರಾಡಿಸಿ ಕೊನೆಗೆ ಗಂಗಾ ಪ್ರವಾಹದಲ್ಲಿ ತಂದು ಒಗೆಯಿತು. ಎಳೆ ಮೈಯ ತೆಳುಪೊರೆಯಂತಿರುವ ಆ ಎರಡು ದ್ವಿಪದ ಹುಳುಗಳು ಗಂಗೆಯ ನೀರಿನಲ್ಲಿ ಬಿದ್ದು ತೆರೆಗಳ ನಡುವೆ ಸಿಕ್ಕು ಒದ್ದಾಡಿ ಪ್ರಾಣ ಬಿಟ್ಟವು. ಗಂಗೆಯ ನಡುನೀರಿನಲ್ಲಿಯೇ ಮರಣ ಹೊಂದಿದ್ದರಿಂದ ಇವುಗಳ ಪಾಪವೆಲ್ಲವೂ ಪರಿಹಾರವಾಯಿತು. ಅನಂತರ ಅವುಗಳನ್ನು ಒಯ್ಯಲು ಸುಂದರರಾದ ವಿಷ್ಣುದೂತರು ವಿಮಾನದಿಂದ ಆಗಮಿಸಿದರು.

ಶಲಭ ಜನ್ಮವನ್ನು ಹೊಂದಿದ ಆ ನನ್ನ ಇಬ್ಬರೂ ಮಾತಾಪಿತೃಗಳು ಪಾವನವಾದ ಗಂಗಾಜಲದ ಸ್ಪರ್ಶದ ಪುಣ್ಯದಿಂದ ಹಾಗೂ ಜಲ ಮಧ್ಯದಲ್ಲಿಯೇ ಒದಗಿ ಬಂದ ಮರಣದ ಮಹಿಮೆಯಿಂದ ಪಾಪ ರಹಿತರಾಗಿ ದಿವ್ಯ ದೇಹವನ್ನು ಧರಿಸಿದರು. ಕೊರಳಲ್ಲಿ ಪವಿತ್ರವಾದ ತುಳಸೀ ಮಾಲೆಯನ್ನು ಹಾಕಿಕೊಂಡು ದಿವ್ಯವಾದ ವಿಮಾನವನ್ನು ಆರೋಹಣ ಮಾಡಿ ಸತ್ಯಲೋಕಕ್ಕೆ ಪ್ರಯಾಣ ಮಾಡಿದರು. ಅನಂತರ ಬ್ರಹ್ಮದೇವರ ಆಜ್ಞೆಯಿಂದ ಸ್ವರ್ಗಕ್ಕೆ ಬಂದು ಅಲ್ಲಿ ಕೆಲವು ದಿನ ಇದ್ದು, ಸುಖಪಟ್ಟು ಈಗ ರಾಜಭೋಗವನ್ನು ಅನುಭವಿಸಲು ನಿನ್ನ ವಂಶದಲ್ಲಿ ಮಕ್ಕಳಾಗಿ ಹುಟ್ಟಿದ್ದಾರೆ.

ಗಂಗೆಯಲ್ಲಿ ಮರಣವಾದ ಬಳಿಕ ಪುನಃಜನ್ಮ ಇರುವದಿಲ್ಲ. ಆದರೂ ಅಖಂಡ ಭೂಮಂಡಲದ ಸಾರ್ವಭೌಮತ್ವದ ಸೌಖ್ಯವನ್ನೂ ಅಧಿಕಾರವನ್ನೂ ಐಶ್ವರ್ಯವನ್ನೂ ಅನುಭವಿಸಲಿಕ್ಕಾಗಿ ಮತ್ತು ಗಂಗಾಸ್ನಾನದ ಫಲವನ್ನು ತೋರಿಸಲಿಕ್ಕಾಗಿ ಅವರಿಬ್ಬರನ್ನೂ ನಿನ್ನ ಮನೆತನದಲ್ಲಿ ಹುಟ್ಟಿಸಿದ್ದಾನೆ. ಅವರು ಈ ಲೋಕದಲ್ಲಿ ಬಹಳ ವರ್ಷಗಳವರೆಗೆ ಭೂಲೋಕದ ಸಾಮ್ರಾಜ್ಯಸಿರಿಯನ್ನು ಅನುಭವಿಸಿ ಸಂತಾನ, ಸಂಪತ್ತು ಸೌಭಾಗ್ಯಗಳನ್ನು ಹೊಂದಿ ಕೊನೆಯಲ್ಲಿ ಮರಣಾನಂತರ ಶ್ರೀಹರಿಯ ಸಾಯುಜ್ಯರೂಪವಾದ ಮೋಕ್ಷವನ್ನು ಹೊಂದುವರು. ಹೀಗೆ ಗಂಗಾಸ್ನಾನದ ಪುಣ್ಯದಿಂದ ನನ್ನ ತಾಯಿ ತಂದೆಗಳೇನೋ ಸದ್ಗತಿಯನ್ನು ಹೊಂದಿದರು. ಆದರೆ ನಮ್ಮನ್ನು ಯಾರು ಉದ್ಧರಿಸುತ್ತಾರೆ? ಈ ಜಗತ್ತಿನಲ್ಲಿ ಪಿತೃಭಕ್ತಿಯು ಮಾನವರಿಗೆ ತಾರಕ. ಪಿತೃದ್ವೇಷವು ಮಾರಕ. ಇದಕ್ಕೆ ನಾನೇ

ಜೀವಂತ ದೃಷ್ಟಾಂತ. ತಾಯಿ ತಂದೆಗಳಿಗೆ ಕೊಟ್ಟಿದ್ದೆಲ್ಲವೂ ಶ್ರೀಹರಿಗೆ ಸಲ್ಲುತ್ತದೆ. ಪಿತೃರೂಪಿಯಾಗಿ ಪರಮಾತ್ಮನೇ ಅದನ್ನು ಸ್ವೀಕರಿಸುತ್ತಾನೆ.

**ಪ್ರತ್ಯಕ್ಷ ದೇವೌ ಮಾತಾ ಪಿತಕೌ ಯೇ ಸೇವ್ಯಂತಹರ್ದಿಶಂ**
**ಸರ್ವಸಿದ್ಧಿರ್ಭವೇತ್ತಷಾಂ ಪ್ರಸಾದಾತ್ ಜಗತೀ ಪತೇ ॥**

ತಾಯಿ ತಂದೆಗಳು ಎಂದರೆ ಪ್ರತ್ಯಕ್ಷ ದೇವರೇ ಇದ್ದಂತೆ. ಹಗಲಿರುಳೂ ಅವರ ಸೇವೆಯನ್ನು ಮಾಡುವುದು ಪುತ್ರರ ಕರ್ತವ್ಯ. ಅದರಿಂದ ಹರಿಯು ಪ್ರೀತನಾಗುತ್ತಾನೆ. ಅವನ ಪ್ರಸಾದದಿಂದ ಸರ್ವಸಿದ್ಧಿಗಳೂ ಸಕಲ ಸಮೃದ್ಧಿಗಳೂ ಪ್ರಾಪ್ತವಾಗುತ್ತವೆ. ಆ ಪಿತೃಗಳ ಸೇವೆ ಮಾಡದ್ದರಿಂದ ನಾನು ಇಂದ್ರದಾರುಣ ದುಃಖವನ್ನು ಅನುಭವಿಸಬೇಕಾಗಿದೆ. ಇದರಿಂದ ನನಗೆ ಎಂದು ಉದ್ಧಾರವೊ? ನನ್ನ ಮಡದಿಗೆ ಎಂದು ಬಿಡುಗಡೆಯೋ?

**ಮನೋಭದ್ರ:-** ಗೃಧ್ರನೇ ನಿನ್ನ ಮಾತು ನನಗೆ ಅತ್ಯಾಶ್ಚರ್ಯಕರವಾಗಿದೆ. ನೀನು ಹೇಳಿದ ವೃತ್ತಾಂತವೆಲ್ಲವೂ ಕೌತುಕ ಪೂರ್ಣವಾಗಿದೆ. ಆದರೆ ಈ ವಿಷಯದಲ್ಲಿ ನನಗೆ ನಂಬಿಕೆ ಆಗುವದಿಲ್ಲ. ಈ ಎಲ್ಲ ಅದ್ಭುತ ಘಟನೆಗಳನ್ನು ಸತ್ಯ ಎಂದು ಹೇಗೆ ನಂಬುವುದು? ಆ ಕ್ಷಣದಲ್ಲಿ ಆಕಾಶದಲ್ಲಿ ಅಶರೀರವಾಣಿ ಆಯಿತು.

**ಸತ್ಯಂ ಸತ್ಯಂ ಸತ್ಯಮಿದಂ ಸಂದೇಹೋ ನಾತ್ರವಿದ್ಯತೇ ।**
**ಇದು ಸತ್ಯ ಇದು ಸತ್ಯ ಇದು ಸತ್ಯ ಈ ವಿಷಯದಲ್ಲಿ ಸಂಶಯವೇ ಇಲ್ಲ॥**

ಮುಂದೆ ಕೆಲವು ನಿಮಿಷಗಳಲ್ಲಿ ಆ ಹದ್ದು ತನ್ನ ಮಡದಿಯೊಂದಿಗೆ ಗಂಗೆಯ ಮಹಿಮೆಯನ್ನು ಹೇಳಿದ ಪುಣ್ಯದ ಪ್ರಭಾವದಿಂದ ಆ ಗೃಧ್ರಯೋನಿಯಿಂದ ಮುಕ್ತವಾಗಿ ತನ್ನ ಮೊದಲಿನ ಸರ್ವಗ ಎಂಬ ಬ್ರಾಹ್ಮಣನ ರೂಪವನ್ನು ತೆಗೆದುಕೊಂಡು ನಿಂತ. ಮನೋಭದ್ರರಾಜನ ಆಸ್ಥಾನದಲ್ಲಿ ಅವನ ಎದುರು ಗಂಗೆಯ ಗುಣಗಾನ ಮಾಡಿದ ಪುಣ್ಯ ಪ್ರಭಾವದಿಂದ ತನ್ನನ್ನು ಕರೆಯಲು ಬಂದ ವೈಕುಂಠ ವಿಮಾನವನ್ನು ಆರೋಹಣ ಮಾಡಿ ಹರಿ ಮಂದಿರಕ್ಕೆ ಪ್ರಯಾಣ ಮಾಡಿದ.

ಆ ಮನೋಭದ್ರರಾಜನಾದರೋ ಈ ಎಲ್ಲ ಗುಣ ಜಲಸ್ಪರ್ಶ ಹಾಗೂ ಗಂಗಾ ಮಹಿಮಾ ಪ್ರವಚನಗಳಿಂದ ಆದ ದಿವ್ಯ ಫಲವನ್ನು ನೋಡಿ ತಾನೂ ಕೂಡ ಹೆಂಡತಿಯೊಡನೆ ಗಂಗೆಯ ಸೇವೆ ಮಾಡತೊಡಗಿದ.

**ಭಾಗೀರಥ್ಯಾಸಮಂ ತೀರ್ಥಂ ನಾಸ್ತಿ ವೈ ಭುವನತ್ರಯೇ ।**
**ಯನ್ನಾಮೋಚ್ಚಾರಣಾ ದೇವ ಸರ್ವಗೋ ಮೋಕ್ಷಮಾಪವಾನ್ ॥**

ಸರ್ವಗ ಎಂಬ ಬ್ರಾಹ್ಮಣನು ಗಂಗೆಯ ನಾಮೋಚ್ಚಾರಣ ಹಾಗೂ ಮಹಾತ್ಮ ಕಥನ ಮಾತ್ರದಿಂದಲೇ ಮೋಕ್ಷವನ್ನು ಹೊಂದಿದ. ಆದ್ದರಿಂದ ಭಾಗೀರಥಿಗೆ ಸಮಾನವಾದ ತೀರ್ಥವು ಮೂರು ಲೋಕದಲ್ಲಿಯೇ ಇಲ್ಲ.

**ವೇದವ್ಯಾಸ:-** ವಿಪ್ರೋತ್ತಮನಾದ ಜೈಮಿನಿ, ಪಾಪ ವಿನಾಶಕವಾದ ಗಂಗಾದ್ವಾರದ ಮಹಿಮೆಯನ್ನು ನಿನಗೆ ನಾನು ಹೇಳಿದೆ. ಮತ್ತೆ ಏನನ್ನು ಕೇಳ ಬಯಸಿದೆ?

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ ಮನೋಭದ್ರರಾಜಪುತ್ರರ ಪೂರ್ವಜನ್ಮದ ಕಥೆ ಗೃಧ್ರ ದಂಪತಿಗಳಿಗೆ ಮುಕ್ತಿಎಂಬ ಮೂರನೇಯ ಅಧ್ಯಾಯ ಮುಗಿದುದು*

## ಪ್ರಯಾಗ ಮಹಾತ್ಮ್ಯ ಪ್ರಣಧಿ ವೈಶ್ಯನ ಕಥೆ

ಅಧ್ಯಾಯ - ೪

**ಜೈಮಿನಿ:-** ಗುರುಗಳಾದ ವೇದವ್ಯಾಸ ಪ್ರಭುಗಳೇ, ನಾನು ತಮ್ಮ ಬಾಯಿಂದ ಗಂಗಾದ್ವಾರ ಮಹಾತ್ಮೆಯನ್ನು ಕೇಳಿದೆ. ಈಗ ಪ್ರಯಾಗ ಕ್ಷೇತ್ರದ ಮಹಾ ಮಹಿಮೆಯನ್ನು ತಮ್ಮ ಮುಖಾರವಿಂದದಿಂದ ಕೇಳಬೇಕೆಂದು ನನ್ನ ಹೆಬ್ಬಯಕೆ. ಅದರ ಜೊತೆಗೆ ಗಂಗಾಸಾಗರ ಸಂಗಮದ-ಮಹಿಮೆಯನ್ನು ತಾವು ನನಗೆ ನಿರೂಪಿಸಬೇಕು ತಮ್ಮ ಹೊರತು ಇದನ್ನೆಲ್ಲ ಹೇಳಲು ಭೂಲೋಕದಲ್ಲಿ ಯಾರು ಇದ್ದಾರೆ.

**ವ್ಯಾಸ:-** ಪ್ರಯಾಗ ಹಾಗೂ ಗಂಗಾಸಾಗರ ಸಂಗಮಗಳ ಮಹಿಮೆಯನ್ನು ಸಂಕ್ಷೇಪವಾಗಿ ಹೇಳುತ್ತೇನೆ ಕೇಳು. ಬ್ರಹ್ಮಾಂಡದಲ್ಲಿ ಇರುವ ಎಲ್ಲ ತೀರ್ಥಗಳು ಕೂಡಿದರೂ ಒಂದು ಪ್ರಯಾಗ ತೀರ್ಥಕ್ಕೆ ಸರಿ ಆಗಲಾರವು. ಗಂಗಾ, ಯಮುನಾ ಸರಸ್ವತಿ ಮೂರೂ ನದಿಗಳೂ ಕೂಡಿದ ತ್ರಿವೇಣೀ ಸಂಗಮದಲ್ಲಿ ಸೂರ್ಯನು ಮಕರ ರಾಶಿಯಲ್ಲಿ ಇದ್ದಾಗ ಮಾಘ ಮಾಸದಲ್ಲಿ ಸ್ನಾನ ಮಾಡಿದವರು ವಿಷ್ಣು ಲೋಕಕ್ಕೆ ಹೋಗುತ್ತಾರೆ. ಇದು ನಿಶ್ಚಿತ. ಮಾಘ ಮಾಸದಲ್ಲಿ ಪ್ರಯಾಗ ತೀರ್ಥದಲ್ಲಿ ಸ್ನಾನ ಮಾಡಿದರೆ ಅಶ್ವಮೇಧಯಜ್ಞ ಮಾಡಿ, ಕೋಟಿ ಗೋವುಗಳನ್ನು ದಾನ ನೀಡಿ, ಬೆಟ್ಟದ ಎತ್ತರ ಬಂಗಾರವನ್ನು ದಾನ ಕೊಟ್ಟಷ್ಟು ಪುಣ್ಯಫಲವು ಪ್ರಾಪ್ತವಾಗುವುದು. ಮಾಘ ಮಾಸದಲ್ಲಿ ತ್ರಿವೇಣೀ ಸಂಗಮ ಸ್ನಾನದಿಂದ ಸೂರ್ಯನು ಸಿಂಹರಾಶಿಗೆ ಬಂದಾಗ ಗೋದಾವರಿಯಲ್ಲಿ ಸ್ನಾನ ಮಾಡಿದ ಪುಣ್ಯವೂ, ಫಾಲ್ಗುಣ ಕೃಷ್ಣ ಚತುರ್ದಶಿಯಂದು ಕಾಶೀಯಾತ್ರೆ ಮಾಡಿದ ಪುಣ್ಯವೂ, ಒಂದು ಕಲ್ಪ ಕಾಲ ವಿಷ್ಣು ಪೂಜೆ ಮಾಡಿದ ಪುಣ್ಯವೂ ಮಾನವರಿಗೆ ಪ್ರಾಪ್ತವಾಗುತ್ತದೆ. ಈ ಗಂಗಾಯಮುನಾ ಸಂಗಮದಲ್ಲಿ ಯಾವ ಅಪೇಕ್ಷೆಯನ್ನು ಮಾಡಿ ದೇಹವನ್ನು ತ್ಯಜಿಸುವರೋ ಅವರು ಆ ತಮ್ಮ ಕಾಮನೆಯನ್ನು ಹೊಂದುತ್ತಾರೆ. ಈ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಪ್ರಣಿಧಿ ಎಂಬ ಒಬ್ಬ ವೈಶ್ಯನು ಇದ್ದ. ಅವನು ಒಳ್ಳೆಯ ಶ್ರೀಮಂತ. ದೇವಬ್ರಾಹ್ಮಣ ಭಕ್ತ. ಬಂದ ಅತಿಥಿಗಳನ್ನು ಎಂದೂ ತಿರುಗಿ ಕಳಿಸುತ್ತಿದ್ದಿಲ್ಲ. ಅವನಿಗೆ ಪದ್ಮಾವತಿ ಎಂಬ ಧರ್ಮಪತ್ನಿ ಇದ್ದಳು. ಅವಳ ಚೆಲುವಿಕೆ ಅಸಾಧಾರಣ. ಶೀಲ ಸಜ್ಜನಿಕೆಗಳು ಸತೀಮಣಿಗಳಿಗೆ ಒಪ್ಪತಕ್ಕಂತಹವು. ಅವಳ ಬಾಯಿಂದ ಎಂದೂ ಬಿರುನುಡಿ ಬರುತ್ತಲೇ ಇರಲಿಲ್ಲ. ವಿನಯ, ಸೌಶೀಲ್ಯತೆ, ಪತಿನಿಷ್ಠೆ ಈ ಮೂರು ಗುಣಗಳು ಅವಳ ಸರ್ವ ಸದ್ಗುಣಗಳಿಗೆ ಮುಕುಟವಿಟ್ಟದ್ದವು. ಪತಿವ್ರತೆಯರಾದ ಸಾಧ್ವೀಮಣಿಗಳಲ್ಲಿ ಇರಬೇಕಾದ ಎಲ್ಲ ಗುಣಗಳನ್ನೂ ಬ್ರಹ್ಮ ಪರ್ಯಾಪ್ತವಾಗಿ ಇಟ್ಟಿದ್ದ ಆ ಪದ್ಮಾವತಿಯಲ್ಲಿ.

ಒಂದು ದಿನ ಆ ಪ್ರಣಿಧಿ ವೈಶ್ಯನು ಹೇರಳವಾಗಿ ಹಣವನ್ನು ಹಿಡಿದುಕೊಂಡು ವ್ಯಾಪಾರಕ್ಕೆ ಹೊರಟ. ಅಂದು ಒಳ್ಳೇ ಮೂಹೂರ್ತ ಇದ್ದಿತು. ಧನವನ್ನು ಗಳಿಸುವುದೇ ಅವನ ಮುಖ್ಯ ಉದ್ದೇಶ ಇತ್ತು. ಧನದಿಂದಲೇ ಎಲ್ಲ ಧರ್ಮಕಾರ್ಯಗಳನ್ನು ನೆರವೇರಿಸಲು ಅನುಕೂಲವಾಗುವುದು.

**ಧನಾದ್ಧರ್ಮ ಪ್ರಭವತಿ ಧನಾಚ್ಚ: ವಿಪುಲಂ ಯಶಃ ।**
**ಧನಾತ್ ಕುಲಮವಾಪ್ನೋತಿ ಭವೇತ್ ಕಿಂ ವಾ ಧನಾದೃತೇ ॥**

ದ್ರವ್ಯವಿದ್ದರೆ ಬೇಕಾದ ಧರ್ಮಕಾರ್ಯಗಳನ್ನು ಮಾಡಲು ಆಗುವುದು. ಧನದಿಂದ ವಿಪುಲವಾಗಿ ಕೀರ್ತಿಯನ್ನು ಗಳಿಸಬಹುದು. ಧನವಿದ್ದ ಮನುಷ್ಯನ ಕುಲ ತಾನೇ ದೊಡ್ಡದಾಗುವುದು. ಏನು ಆಗಲಿಕ್ಕಿಲ್ಲ ಈ ಧನದಿಂದ ! ಆ ಹಣವನ್ನು ಬಿಟ್ಟರೆ ಯಾವ ಕೆಲಸವು ಆದೀತು?

**ಧನಹೀನ ಜನಂ ದೃಷ್ಟ್ವಾ ಸಖಾಪಿ ಚ ಪಲಾಯತೇ ।**
**ಮೇಘ ಶರದ್ಯಂಬುಹೀನಃ ಖಂಡಂ ಖಂಡಂ ನಯೇನ್ಮಹತ್ ॥**

ದ್ರವ್ಯವಿಲ್ಲದ ನಿರ್ಧನ ಮನುಷ್ಯನನ್ನು ನೋಡಿ ಮಿತ್ರರೂ ಬಿಟ್ಟು ಓಡಿ ಹೋಗುತ್ತಾರೆ. ಶರತ್ಕಾಲದಲ್ಲಿ ನೀರಿಲ್ಲದ ಮೋಡವು ಆಶ್ರಯವಿಲ್ಲದೇ ಖಂಡು ತುಂಡಾಗಿ ಆಚೀಚೆ ಚದುರಿ ಹೋಗುವುದು.

**ಖಾದಿತುಂ ಪ್ರಾಪ್ತೇ ಯಾವತ್ ತಾವದೇವ ಹಿ ಬಾಂಧವಾಃ ।**
**ಧನಂ ಯಸಂ ಕುಲಂ ತಸ್ಯ ಬುದ್ಧಿಃ ತಸ್ಯ ಸ ಪಂಡಿತಃ ॥**

ಎಲ್ಲಿಯವರೆಗೆ ಉಂಡು ತಿಂದು ಮಜಾ ಮಾಡಲು ದೊರೆಯುವದೋ ಅಲ್ಲಿಯವರಿಗೆ ಎಲ್ಲರೂ ಭಾಂಧವರೇ. ಧನವೆಲ್ಲ ಹೋಗಿ ದರಿದ್ರನಾದರೆ ಅವನಿಗೆ ಯಾರೂ ಬಾಂಧವರು ಇರುವದಿಲ್ಲ. ಧನಯಾವನಲ್ಲಿ ಹೇರಳವಾಗಿ ಇರುವದೋ ಅವನೇ ದೊಡ್ಡ ಮನೆತನದಲ್ಲಿ ಹುಟ್ಟಿದ ಕುಲೀನ ಎನಿಸಿಕೊಳ್ಳುತ್ತಾನೆ. ಹಣವಿದ್ದವನೇ ಬುದ್ಧಿವಂತ. ಅವನೇ ಮಹಾ ಪಂಡಿತ.

**ಅರ್ಥೈರ್ವಿಹೀನಃ ಪುರುಷೋ ಜೀವನ್ನಪಿ ಮೃತೋಪಮಃ ।**

ದ್ರವ್ಯವಿಲ್ಲದ ಮನುಷ್ಯ ಬದುಕಿದ್ದರೂ ಮೃತನಾದಂತೆಯೇ ಸರಿ. ಧರ್ಮ, ಅರ್ಥ ವಿದ್ಯೆ ಇವುಗಳನ್ನು ಮನುಷ್ಯನು ಯಾವಾಗಲೂ ಗಳಿಸುತ್ತಲೇ ಇರಬೇಕು. ಎಷ್ಟು ಗಳಿಸಿದರೂ ಸಾಕು ಎನ್ನಬಾರದು.

**ಧರ್ಮಾರ್ಥ ವಿದ್ಯಾರ್ಜನತೋ ಮತಿರ್ಯಸ್ಯ ನಿವರ್ತತೆ ।**
**ಜ್ಞೇಯಸ್ಸ ಮೂರ್ಖಃ ಸುತರಾಮಧಿಕಸ್ಯಾಧಿಕಂ ಫಲಂ ॥**

ಧರ್ಮ, ದ್ರವ್ಯ ಮತ್ತು ಜ್ಞಾನ ಇವುಗಳನ್ನು ಗಳಿಸಿದೇ ಸಾಕು ಎಂದು ಯಾವನು ಮುಂದೆ ಹೆಚ್ಚಿಗೆ ಸಂಪಾದನೆ ಮಾಡುವುದಿಲ್ಲವೋ ಅವನು ಮೂರ್ಖನೇ ಸರಿ. ಇವುಗಳನ್ನು ಹೆಚ್ಚೆಚ್ಚು ಗಳಿಸಿದಷ್ಟು ಹೆಚ್ಚು ಹೆಚ್ಚು ಫಲವು ಪ್ರಾಪ್ತವಾಗುತ್ತದೆ. ಆದ್ದರಿಂದ -

**ಕರ್ತವ್ಯಃ ಸತತಂ ಧರ್ಮಶ್ಚಾರ್ಜಿತವ್ಯಂ ಸದಾ ಧನಂ ।**
**ಶಿಕ್ಷಿತವ್ಯಾ ಸದಾ ವಿದ್ಯಾ ಪುಂಭಿರೇವಂ ವಿಚಕ್ಷಣೈಃ ॥**

ಧರ್ಮವನ್ನು ಯಾವಾಗೂಲ ಆಚರಿಸಿಬೇಕು. ಹಣವನ್ನು ಯಾವಾಗಲೂ ಗಳಿಸಬೇಕು. ವಿದ್ಯೆಯನ್ನು ಯಾವಾಗಲೂ ಕಲಿಯಬೇಕು ಇದೇ ಜಾಣರ ಲಕ್ಷಣ.

**ದಾನಾಧನಂಚ ವಿದ್ಯಾಚ ವರ್ಧತೇ ಪ್ರತವಾಸರಂ ।**
**ಧರ್ಮಸ್ತು ವರ್ಧತೇ ದಾನಾತ್ ನ ಧನೇನ ವಿನಾನೃಣಾಂ ॥**

ದಾನ ನೀಡುವುದರಿಂದ ಧನವು ವರ್ಧಿಸುತ್ತದೆ. ಅಧ್ಯಯನ ಮಾಡುವುದರಿಂದ ವಿದ್ಯೆಯು ಪ್ರತಿದಿನವೂ ಅಭಿವೃದ್ಧಿ ಹೊಂದುತ್ತದೆ. ದಾನ ನೀಡುವುದರಿಂದ ಧರ್ಮವು ಬೆಳೆಯುತ್ತದೆ. ಆ ಧನದಾನ ಮಾಡುವುದರಿಂದ ವಿದ್ಯೆಯನ್ನು ಕಲಿಯಲು ಅನುಕೂಲವಾಗುತ್ತದೆ. ಇದೆಲ್ಲವೂ ಧನ ಇಲ್ಲದಿದ್ದರೆ ಆಗುವುದಿಲ್ಲ. ಧನವಿದ್ದರೆ ದಾನ. ಧನ ವಿದ್ದರೆ ಧರ್ಮ. ಧನವಿದ್ದರೆ ವಿದ್ಯೆ ಧನವಿದ್ದರೆ ಎಲ್ಲವೂ ಉಂಟು. ಧನವಿಲ್ಲದಿದ್ದರೆ ಯಾವುದೂ ಇಲ್ಲ.

**ಕಾಷ್ಠ ತೃಣಂ ತೃಷಾ ವಾಪಿ ಸಂಪ್ರಾಪ್ಯ ನ ಪರಿತ್ಯಜೇತ್ ।**
**ಪುಮಾನ್ ಸಂಚಯ ಶೀಲೋಭ ಕದಾಚಿನ್ನಾವ ಸೀದತಿ ॥**

ಆದ್ದರಿಂದ ಮನುಷ್ಯನು ಕಟ್ಟಿಗೆ, ಹುಲ್ಲು ಸ್ವಪ್ಪೆ ಯಾವುದನ್ನೂ ಸಿಕ್ಕಾಗ ಬಿಡಬಾರದು. ಸಂಗ್ರಹ ಮಾಡಬೇಕು. ತನಗೆ ದೊರತದ್ದನ್ನು ಕೂಡಿ ಇಟ್ಟುಕೊಂಡ ಮನುಷ್ಯನು ಎಂದೂ ಕೊರತೆಯನ್ನಾಗಲೀ ಕುತ್ತು ಆಪತ್ತುಗಳನ್ನಾಗಲೀ ಹೊಂದುವದಿಲ್ಲ.

ಹೀಗೆಲ್ಲ ವಿಚಾರಿಸಿ ಆ ಪ್ರಣಿಧಿ ವೈಶ್ಯನು ಹಣವನ್ನುಗಳಿಸಲಿಕ್ಕಾಗಿ ವ್ಯಾಪಾರಕ್ಕಾಗಿ ಹೊರಟ. ಹೋಗುವ ಮುಂದೆ ತನ್ನ ಮನೆಯ ವ್ಯವಹಾರವನ್ನು ನೋಡಿಕೊಳ್ಳಲು ಹೆಂಡತಿ ಪದ್ಮಾವತಿಯನ್ನು ನೇಮಿಸಿದ. ತಾನು ಮಾತ್ರ ವ್ಯಾಪಾರಕ್ಕಾಗಿ ಮನೆಯಿಂದ ತೆರಳಿದ.

ಒಂದು ದಿನ ಅವನ ಮಡದಿಯಾದ ಪದ್ಮಾವತಿಯು ಸ್ನಾನ ಮಾಡಲಿಕ್ಕಾಗಿ ಶೀಗೆಪುಡಿ ಮುಂತಾದ ಸ್ನಾನ ದ್ರವ್ಯಗಳನ್ನು ತೆಗೆದುಕೊಂಡು ನದಿಗೆ ಹೋದಳು. ನದಿಯ ದಂಡೆಯ ಮೇಲೆ ಬೇರೆ ಯಾವ ಗಂಡಸರೂ ಇಲ್ಲದ್ದರಿಂದ ಅವಳು ತನ್ನ ಗೆಳತಿಯರೊಂದಿಗೆ ಸ್ವಚ್ಛಂದವಾಗಿ ತನ್ನ ಅಂಗಾಂಗಗಳನ್ನು ತಿಕ್ಕಿ ತೊಳೆದು ಹಾಯಾಗಿ ಮೀಯುತ್ತಲಿದ್ದಳು. ಅದೇ ವೇಳೆಯಲ್ಲಿ ಅಲ್ಲಿಗೆ ಧರ್ನುಧ್ವಜ ಎಂಬ ಓರ್ವ ಪಾಪಿಯು ಆಗಮಿಸಿದ. ಮಹಾ ಕಾಮುಕನಾದ ಅವನು ಆ ತಿಳಿನೀರಿನ ಕೊಳದಲ್ಲಿ ತೆಳುವಾದ ಬಟ್ಟೆಯನ್ನು ಉಟ್ಟು ಸ್ನಾನ ಮಾಡುತ್ತಲಿರುವ ಆ ಪದ್ಮಾವತಿಯ ಸುಂದರತರವಾದ ಅಂಗಾಂಗಗಳನ್ನು ನೋಡಿ ಮುಗ್ಧನಾದ. ಆ ಶ್ವಪಚನು ಕಾಮಾತುರನಾಗಿ ಅವಳನ್ನು ಕುರಿತು ಮಾತನಾಡಿದ.

**ಧರ್ನುಧ್ವಜ:-** ಸುಂದರಿ, ನೀನು ಯಾರು? ನಿನ್ನ ಹರೆಯದ ಸಿರಿ ಸೂಸುವ ಚೆಲವು ನನ್ನನ್ನು ಚಮತ್ಕೃತನನ್ನು ಮಾಡಿದೆ. ನಾನು ನಿನ್ನ ರೂಪರಸದಿಂದ ನಿನ್ನಲ್ಲಿ ಅನುರಕ್ತನಾದ ನನ್ನನ್ನು ಸಂತೋಷಪಡಿಸು. ನೀನು ಗುಣವತಿ. ನಾನು ಗುಣವಂತ. ನಮ್ಮಿಬ್ಬರ ಮಿಲನವು ಪರಸ್ಪರ ಸುಖದಾಯಕ ಆಗುವದು. ಆದುದರಿಂದ ನನ್ನೊಡನೆ ರಮಿಸಿ ನೀನು ಕೂಡ ನಿನ್ನ ಯೌವನದ ಸುಖವನ್ನು ಅನುಭವಿಸು.

ಧರ್ನುಧ್ವಜನ ಈ ಮಾತುಗಳನ್ನು ಕೇಳಿ ಪದ್ಮಾವತಿಯ ಗೆಳತಿಯರು ಕ್ರುದ್ಧರಾಗಿ ಹಲ್ಲು ಕಡಿದು ಹೇಳಿದರು.

**ಗೆಳತಿಯರು:-** ನೀಚ ಕುಲದಲ್ಲಿ ಹುಟ್ಟಿದ ದುರಾಚಾರಿಯೇ, ನಮ್ಮ ಗೆಳತಿಯು ನಿನ್ನನ್ನು ಕಾಲಿನಿಂದ ಒದೆಯಲಿಕ್ಕೂ ಸಿದ್ಧಳಿಲ್ಲ.

ನಿನ್ನನ್ನು ನೋಡುವದು, ಪ್ರೇಮ ಮಾಡುವದು ಈ ಜನ್ಮದಲ್ಲಿಯೇ ಖಂಡಿತ

ಸಾಧ್ಯವಿಲ್ಲ. ಇವಳು ಪರಮ ಪತಿವ್ರತೆ. ಯಾವಾಗಲೂ ಧರ್ಮ ಕರ್ಮ ನಿರತಳು. ಅವಳಂತೂ ತನ್ನ ಪತಿಯ ಹೊರತು ಬೇರೆ ಯಾರನ್ನೂ ಕಣ್ಣೆತ್ತಿ ನೋಡಿಲ್ಲ. ನೋಡುವದಿಲ್ಲ. ಪರಸ್ತ್ರೀಯರ ಮುಖದ ಸೌಂದರ್ಯವನ್ನೂ ಪರದ್ರವ್ಯವನ್ನೂ ನೋಡಿ ಮೂರ್ಖರು ಮಾತ್ರ ಕಾಮಾತುರರು ಆಗುತ್ತಾರೆ. ಬೇಗ ಇಲ್ಲಿಂದ ಹೊರಟು ಹೋಗು. ಇಂಥ ಅಸಹ್ಯ ಮಾತುಗಳನ್ನು ಇಲ್ಲಿ ನುಡಿಯಬೇಡ. ಅವಳ ಗೆಳತಿಯರಾದ ನಾವೇ ನಿನ್ನನ್ನು ನಮ್ಮ ಕಾಲುಗಳಿಂದ ಕೂಡ ಮುಟ್ಟಲಾರೆವು. ನಮ್ಮ ಗೆಳತಿಯ ಮಾತಂತೂ ದೂರೇ ಉಳಿಯಿತು.

**ಧರ್ನುಧ್ವಜ:-** ಧಿಕ್ಕಾರವಿರಲಿ ಈ ಜಾತಿಯ ಶಬ್ದಕ್ಕೆ. ನಾನು ಸರ್ವ ಸದ್ಗುಣಗಳಿಂದ ಸಂಪನ್ನನಾಗಿದ್ದರೂ ನಾನೊಬ್ಬ ನಾಯಿಯ ಮಾಂಸ ತಿನ್ನುವ ಬೇಡರ ಕುಲದವ ಎಂದು ನನ್ನನ್ನು ನೀವು ಮನ್ನಿಸುವದಿಲ್ಲ. ಮಧ್ಯವನ್ನು ತುಂಬಿಟ್ಟಿದ್ದರೂ ಬಂಗಾರದ ಕಲಶವನ್ನು ಸಿಕ್ಕರೆ ಯಾರು ಬಿಡುತ್ತಾರೆ. ಆದುದರಿಂದ ಸಖಿಯರೇ, ನಾನು ನೀಚ ಜಾತಿಯವನಾದರೂ ಈ ವೈಶ್ಯ ವನಿತೆಯನ್ನು ಹೊಂದಲು ಆತುರನಾಗಿದ್ದೇನೆ. ಹೇಗಾದರೂ ಮಾಡಿ ನನಗೆ ಪದ್ಮಾವತಿಯೊಡನೆ ಮಿಲನ ಆಗುವಂತೆ ಮಾಡಿರಿ.

ಹೀಗೆ ಮತ್ತೆ ಮತ್ತೆ ಅಂಗಲಾಚಿ ದೈನ್ಯದಿಂದ ಬೇಡಿಕೊಳ್ಳುತ್ತಿರುವ ಶ್ವಪಚನನ್ನು ಕುರಿತು ಕೌತುಕಗೊಂಡ ಆ ಸಖಿಯರು ಮಾತನಾಡಿದರು.

**ಸಖಿಯರು:-** ದುರ್ಮತಿಯೇ, ನಿನಗೆ ನಮ್ಮ ಸಖಿಯಾದ ಚಾರು ಚೆಲ್ವಿಕೆಯಿಂದ ಒಪ್ಪುವ ಈ ಪದ್ಮಾವತಿಯನ್ನು ಪಡೆಯುವ ಅಪೇಕ್ಷೆ ಇದ್ದರೆ ಗಂಗಾಯಮುನೆಯ ಸಂಗಮದಲ್ಲಿ ಹೋಗಿ ಹಾರಿಕೋ. ಪ್ರಾಣ ನೀಗು.

ಎಂದು ನುಡಿದರು ತಮ್ಮ ತಮ್ಮಲ್ಲಿ ನಗ ತೊಡಗಿದರು. ಮತ್ತು ಪದ್ಮಾವತಿಯನ್ನು ಕರೆದುಕೊಂಡು ಮನೆಗೆ ಹೋದರು.

ಅನಂತರ ಆ ಶ್ವಪಚನು ಈಗಾಗಲೇ ಸಾವಿರಾರು ಬ್ರಹ್ಮಹತ್ಯೆಗಳನ್ನು ಮಾಡಿದ್ದ. ಆದರೂ ಅವನು ಆ ಪದ್ಮಾವತಿಯ ಸಂಗವಾಗಬೇಕು ಎಂದು ಬಯಸಿ ಗಂಗಾಯಮುನಾ ಸಂಗಮದಲ್ಲಿ ಮುಳುಗಿ ಪ್ರಾಣ ಬಿಟ್ಟ. ಅದರಿಂದ ಅವನಿಗೆ ಸಾಯುವಾಗ ಬಯಸಿದಂತೆ ಅವಳ ಗಂಡನಾದ ಪ್ರಣಿಧಿ ವೈಶ್ಯನಂತೆಯೇ ಆಕಾರ, ಬಣ್ಣ, ಮುಖಚರ್ಯೆ ಎಲ್ಲವೂ ಬಂದವು. ಅವನಲ್ಲಿ ಚಿನ್ಹೆಗಳೆಲ್ಲವೂ ಆ ಪ್ರಣಧಿಯಲ್ಲಿಯೂ ತೋರುತ್ತಲಿದ್ದವು. ಅದೇ ಬೇಡನು ತನ್ನ ಹಿಂದಿನ ಜನ್ಮದ ಶ್ವಪಚ ಸ್ವರೂಪವನ್ನು ನೆನೆದ.

ಇತ್ತ ಪ್ರಣಧಿ ವೈಶ್ಯನು ದೇಶ ದೇಶಾಂತರಗಳಲ್ಲಿ ವಾಣಿಜ್ಯ ವ್ಯಾಪಾರಗಳನ್ನು ಮಾಡಿ ತನ್ನ ಮನೆಗೆ ಉತ್ಸಾಹದಿಂದ ಬಂದ. ಆ ಶ್ವಪಚನೂ ಕೂಡ ಪ್ರಣಧಿಯದೇ ರೂಪ ಸೌಂದರ್ಯಗಳನ್ನು ಪಡೆದು ಅವರ ಮನೆಯಲ್ಲಿ ಪ್ರವೇಶಿಸಿದ. ಅವನದೇ ತದ್ರೂಪ. ಪ್ರಣಧಿಯದೇ ವೇಷ, ಭೂಷ, ನಿಲುವು, ಚೆಲುವು, ಬಣ್ಣ ಕಣ್ಣು, ಕಳೆ ಕಾಂತಿ, ರೂಪ ವಯಸ್ಸು, ಗುಣಗಾತ್ರವುಳ್ಳ ಒಂದೇ ಆಕಾರದ ಇಬ್ಬರು ಪುರುಷರು ಪ್ರಣಧಿ ಎಂದು ನಿಂತಿದ್ದನ್ನು ನೋಡಿ ಪದ್ಮಾವತಿಗೆ ದಿಗ್ಭ್ರಮೆಯಾಯಿತು. ಇವರಿಬ್ಬರಲ್ಲಿ ನನ್ನ ಗಂಡ ಯಾರು? ತಿಳಿಯದೇ ಅವಳ ದಯಮಯನಾದ ಮಾಧವನನ್ನು ಕೋಮಲವಾದ ಅಕ್ಷರಗಳಿಂದ ಸ್ತೋತ್ರ ಮಾಡಿದಳು.

## ಪದ್ಮಾವತಿ ಮಾಡಿದ ಶ್ರೀಹರಿಯ ಸ್ತೋತ್ರ

ನಮಾಮಿ ಗೋವಿಂದಮನಂತಮೂರ್ತಿಂ ಶಕ್ರಾದಿದೇವಾರ್ಚಿತ ಪಾದ ಪದ್ಮಂ।
ಯೋಗೇಶ್ವರಂ ಯೋಗವಿದಾಂ ಶರಣ್ಯಂ ಯೋಗಪ್ರದಂ ಯೋಗಿ ಭಿರರ್ಚನೀಯಂ ॥
ನಮೋಽಸ್ತು ತೇ ಕೈಟಭಮರ್ದನಾಯ ನಮೋ ಮಧುಧ್ವಂಸಕರಾಯ ತುಭ್ಯಂ ।
ನಮೋಽಸ್ತು ಕಂಸಾಸುರನಾಶನಾಯ ನಮೋಽಸ್ತು ಚಾಣೂರ ನಿಪಾತನಾಯ ।
ನಮೋಽಸ್ತು ವೇದೋದ್ಧರಣಾಯ ನಿತ್ಯಂ ನಮೋಽಸ್ತು ಭೂಮ್ಯುದ್ಧರಣಾಯ ತುಭ್ಯಂ।
ನಮೋಸ್ತು ಪೃಥ್ವೀಧರಣಕ್ಷಮಾಯ ನಮೋಽಸ್ತು ದೈತ್ಯಾಂತಕರಾಯ ತುಭ್ಯಂ ॥
ಗಂಗಾಂಬುಧೌತಾಂಘ್ರಿಯುಗಾಯ ತುಭ್ಯಂ ನಮೋಽಸ್ತು ರಾಜನ್ಯ ಕುಲಾಂತಕಾಯ ।
ನಮೋಽಸ್ತು ತೇ ರಾವಣ ವಂಶ ಹಂತ್ರೇ ನಮೋಽಸ್ತು ದೈತ್ಯಾಂತ ಕರಾಯ ತುಭ್ಯಂ ॥
ನಮೋಽಸ್ತು ತೇಪಾಽಸುರನಾಶಕಾಯ ನಮೋಽಸ್ತು ತೇ ಮ್ಲೇಚ್ಛಕುಲಾಂತಕಾಯ ।
ನಮೋಽಸ್ತು ತೇ ಹೃತ್ಕುಮಲಾಯ ನಮೋಽಸ್ತುತೇ ಸರ್ಪರಿಪುಧ್ವಜಾಯ ॥
ಪ್ರಸೀದ ಲಕ್ಷ್ಮೀ ಮುಖ ಪದ್ಮ ಬೃಂಗ । ಪ್ರಸೀದ ವಿಷ್ಣೋ । ಸತತಂ ನಮಸ್ತೆ ॥
ಪ್ರಸೀದ ಪದ್ಮೇ ಕ್ಷಣ ಚಕ್ರಪಾಣೇ । ಕೌಮೋದ ಕೀಹಸ್ತ ಗದಾಧರ ತ್ವಂ ।
ಪ್ರಸೀದ ವಿಷ್ಣೋ । ಧೃತಪಾಂಚಜನ್ಯ । ನಮೋಸ್ತು ತೇ ಪದ್ಮ ಧರಾಯ ನಿತ್ಯಂ ।
ಸಂಸಾರ ಕೌತೂಹಲ ಮಂದಿರೇ ತೇ ಮೋಹಾಂಧ ಕಾರೇ ಚ ವಿವೇಕ ದೀಪೇ ।
ಸಮ್ಮೋಹಿತಾ ಕೇಶವ ಮಾಯಯಾ ತ್ವದೀಯಯಾ ನಿತ್ಯಮಹಂ ಭ್ರಮಾಮಿ ॥
ವಿರಿಂಚಿಸೇಂದ್ರಾರ್ಕಮುಖಾಃ ಸುರೇಂದ್ರಾ ಮಾಯಾಂ ನ ಜಾನಂತಿ ತವಾಽಸುರಾರೇ ।
ಮಾನುಷ್ಯಹಂ ಕಿಂ ತವ ವೇದ್ಮಿ ಮಾಯಾಂ ಪುರೇ ಭ್ರಮಂ ಮೇ ಹರ ಸಾನಂಕಂಪಮ್॥

ಇಂದ್ರಾದಿ ದೇವತೆಗಳಿಂದ ಪೂಜಿಸಲ್ಪಟ್ಟ ಪಾದವುಳ್ಳ, ಯೋಗೀಶ್ವರನೂ ಯೋಗಿಗಳನ್ನು ರಕ್ಷಿಸುವವನೂ, ಯೋಗಿಗಳಿಂದ ಪೂಜ್ಯನೂ ಆದ ಅನಂತಮೂರ್ತಿಯಾದ ಗೋವಿಂದನನ್ನು ನಮಸ್ಕರಿಸುತ್ತೇನೆ. ಮಧುಕೈಟಭ ಎಂಬ ದೈತ್ಯರನ್ನು ಧ್ವಂಸ ಮಾಡಿದ, ಕಂಸ ಚಾಣೂರನ್ನು ಕೊಂದ ಕೃಷ್ಣನಿಗೆ ನಮಸ್ಕಾರ. ವೇದವನ್ನು ಉದ್ಧರಿಸಿದ ಮತ್ಸ್ಯಾವತಾರಿಯಾದ ಶ್ರೀಹರಿಗೆ ವಂದನೆ. ಬೆಟ್ಟವನ್ನೂ ಹೊತ್ತ ಕೂರ್ಮನಿಗೂ, ಭೂಮಿ ಮಂಡಲವನ್ನೆಲ್ಲ ಎತ್ತಿ ಹಿಡಿದ ವರಾಹನಿಗೂ, ಹಿರಣ್ಯಕಶಿಪುವನ್ನು ಕೊಂದ ನರಸಿಂಹನಿಗೂ, ಗಂಗೆಯ ನೀರಿನಿಂದ ತೊಳೆಯಲ್ಪಟ್ಟ ಕಾಲುಳ್ಳ ವಾಮನ ಮೂರ್ತಿಗೂ, ಕ್ಷತ್ರಿಯರನ್ನೆಲ್ಲ ವಧಿಸಿದ ಪರಶುರಾಮನಿಗೂ, ರಾವಣನ ಕುಲವನ್ನೇ ನಾಶಮಾಡಿದ ರಾಮನಿಗೂ, ಕ್ರೂರ ರಕ್ಕಸನನ್ನು ಸಂಹರಿಸಿದ ಬಲರಾಮನಿಗೂ ದಂತವಕ್ತ್ರಾದಿ ದುಷ್ಟರಾಜರನ್ನು ನಾಶಗೊಳಿಸಿದ ಶ್ರೀಕೃಷ್ಣನಿಗೂ ಮ್ಲೇಂಚರನ್ನು ವಿಂಧ್ವಸಗೊಳಿಸುವ ಕಲ್ಕಿಗೂ ನಮ್ಮ ನಮಸ್ಕಾರ. ಹೃತ್ಕಮಲದಲ್ಲಿ ಇರುವ ಗೋಪಿಯರ ಪ್ರೀತಿಯವಲ್ಲಭನಾದ ಭಗವಂತನಿಗೆ ನಮ್ಮ ನಮಸ್ಕಾರ. ಗೋವರ್ಧನ ಬೆಟ್ಟವನ್ನು ಒಂದೇ ಕೈಯಲ್ಲಿ ಎತ್ತಿದ ಲಕ್ಷ್ಮಿಯ ತಾವರೆ ಮೊಗಕ್ಕೆ ದುಂಬಿಯಂತಿರುವ ಮಹಾವಿಷ್ಣುವೇ ನಮ್ಮ ಮೇಲೆ ಪ್ರಸನ್ನನಾಗು. ನಿನಗೆ ನಮ್ಮ ನಮಸ್ಕಾರ. ಚಕ್ರ ಕಾಮೋದಕೀ ಗದೆ ಮುಂತಾದ ಆಯುಧಗಳನ್ನು ಧರಿಸಿದ ಪಾಂಚಜನ್ಯವನ್ನು ಹಿಡಿದ ಪದ್ಮವನ್ನು ಧರಿಸಿದ ತಾವರೆಗಣ್ಣನ ವಿಷ್ಣುವೇ ನಿನಗೆ ನಮ್ಮ ನಮಸ್ಕಾರ. ನಮ್ಮ ಮೇಲೆ

ಪ್ರಸನ್ನನಾಗು. ಈ ಪ್ರಪಂಚವೆಲ್ಲವೂ ಒಂದು ಕೌತುಕದ ಮಂದಿರ ಇದ್ದಂತೆ. ಇದರಲ್ಲಿ ಮೋಹವೆಂಬ ಕತ್ತಲು ತುಂಬಿದೆ. ವಿವೇಕವೆಂಬ ದೀಪವೂ ಬೆಳಗುತ್ತಲಿದೆ. ಆದರೂ ಕೇಶವ, ನಿನ್ನ ಮಾಯೆಯಿಂದ ಮೋಹಿತನಾಗಿ ತಿರುಗುತ್ತಲೇ ಇದ್ದೇನೆ. ಬ್ರಹ್ಮ, ಇಂದ್ರ, ಸೂರ್ಯ ಮೊದಲಾದ ಸುರ ಶ್ರೇಷ್ಠರೇ ತಿಳಿಯಲಾರರು, ನಿನ್ನ ಮಾಯೆಯನ್ನು. ಮನುಷ್ಯ ಮಹಿಳೆಯಾದ ನಾನು ಏನು ಬಲ್ಲೆ ನಿನ್ನ ಮಾಯೆಯನ್ನು. ನನ್ನ ಭ್ರಾಂತಿಯನ್ನು ದೂರ ಮಾಡು. ನನ್ನ ಮೇಲೆ ದಯೆ ತೋರು.

**ವ್ಯಾಸ:-** ಪದ್ಮಾವತಿ ಮಾಡಿದ ಈ ಸ್ತೋತ್ರವನ್ನು ಕೇಳಿ ಜಗನ್ನಾಥನಾದ ಮಾಧವನು ಅಲ್ಲಿಯೇ ಪ್ರಾದುರ್ಭೂತನಾದ. ಒಮ್ಮೆಲೇ ಉದಿಸಿಬಂದಂತೆ ಜಗ್ಗನೇ ಬೆಳಕುಬಿದ್ದಿತ್ತು. ಆಗ ಆ ಪದ್ಮಾವತಿಯು ನೆಲಕ್ಕೆ ತಲೆ ಹಚ್ಚಿ ಆ ಮಾಧವನ ಚರಣಗಳಿಗೆ ವಂದಿಸಿದಳು ಮತ್ತು ಕೈ ಮುಗಿದು ಬೇಡಿಕೊಂಡಳು.

**ಪದ್ಮಾವತಿ:-** ಕಮಲಾಪತಿಯಾದ ನಾರಾಯಣ, ಇಹದಲ್ಲಿ ಭಕ್ತಿಯನ್ನು ಪರದಲ್ಲಿ ಮುಕ್ತಿಯನ್ನು ಕರುಣಿಸುವ ನೀನು ಜ್ಞಾನರಹಿತಳಾದ ನನ್ನ ಬುದ್ಧಿಯ ಭ್ರಮೆಯನ್ನು ಹೋಗಲಾಡಿಸು. ಇಲ್ಲಿ ನನ್ನ ಪತಿಯಾದ ಪ್ರಣಧಿಯ ರೂಪತಳೆದು ಇಬ್ಬರು ನಿಂತುಕೊಂಡಿದ್ದಾರೆ. ಇವರಲ್ಲಿ ನನ್ನ ನಿಜವಾದ ಪತಿಯಾರು ಪರಪುರುಷರು ಯಾರು ಅದು ನನಗೆ ತಿಳಿಯುವಂತೆ ಮಾಡು.

**ಮಾಧವ:-** ಸುಂದರಿ, ನಿನ್ನ ಭ್ರಾಂತಿಯನ್ನು ಬಿಡು. ಇವರಿಬ್ಬರೂ ನಿನ್ನ ಪತಿಗಳು. ಇವರಿಬ್ಬರನ್ನೂ ಏಕೋ ಭಾವದಿಂದ ಸೇವೆ ಮಾಡು. ನನ್ನ ಭಕ್ತನಾದ ನಿನ್ನ ಗಂಡನಾದ ತರುಣನಾದ ಪ್ರಣಿಧಿಯು ತನ್ನ ಸುಖದ ಫಲವನ್ನು ಅನುಭವಿಸುವದಕ್ಕಾಗಿ ತಾನಾಗಿಯೇ ಎರಡು ರೂಪಗಳನ್ನು ಧರಿಸಿ ನಿಂತಿದ್ದಾನೆ. ನೀನು ಅವರಿಬ್ಬರಿಂದಲೂ ಸುಖವನ್ನು ನಿರಾಂತಕವಾಗಿ ಹೊಂದು.

**ಪದ್ಮಾವತಿ:-** ಒಬ್ಬ ಹೆಣ್ಣು ಮಗಳಿಗೆ ಇಬ್ಬರು ಪತಿಗಳಾಗುವದು ಮಾನವ ಲೋಕದಲ್ಲಿ ಪ್ರಶಂಸಾರ್ಹ ಅಲ್ಲ. ನಾಚಿಕೆಯ ಸಮುದ್ರದಲ್ಲಿಯೇ ನಾನು ಮುಳುಗಿ ಹೋಗಿದ್ದೇನೆ. ದಯಾಮಯನಾದ ನೀನು ನನ್ನನ್ನು ಉದ್ಧರಿಸು.

**ನಾರಾಯಣ:-** ನೀನು ಈ ಭೂಲೋಕದಲ್ಲಿ ಇರಲು ಭಯಪಡುತ್ತ ಇದ್ದರೆ ಆ ನಿನ್ನ ಇಬ್ಬರು ಪತಿಗಳನ್ನು ಕರೆದುಕೊಂಡು ವೈಕುಂಠಕ್ಕೆ ಬಾ.

ಪರಮಾತ್ಮನ ಅಪ್ಪಣೆಯಾದ ಕೂಡಲೇ ವಿಮಾನವು ಬಂದಿತು. ಆ ಇಬ್ಬರೂ ಪ್ರಣಿಧಿಗಳನ್ನು ಕರೆದುಕೊಂಡು ಆ ಪದ್ಮಾವತಿಯು ವೈಕುಂಠಕ್ಕೆ ವಿಮಾನರೂಢಳಾಗಿ ಹೊರಟಳು. ದಾರಿಯಲ್ಲಿ ರಥದಲ್ಲಿ ಓರ್ವ ಮಹಾತ್ಮನು ಕುಳಿತುಕೊಂಡಿದ್ದ. ಅವನ ಸುತ್ತಲೂ ಕಮಲದಂತೆ ಕಣ್ಣು, ಅಗಸೆಹೂವಿನಂತೆ ಮೈ ಬಣ್ಣ. ನಾಲ್ಕು ಕೈಗಳುಳ್ಳ ವಿಷ್ಣುಸ್ವರೂಪರಾದ ವಿಷ್ಣುದೂತರು ಗರುಡನ ಮೇಲೆ ಕುಳಿತು ಅವನ ರಥವನ್ನು ಹಗುರಾಗಿ ಹಿಡಿದುಕೊಂಡಿದ್ದರು. ಆಗ ಪದ್ಮಾವತಿಯು ಆ ವಿಷ್ಣುದೂತರನ್ನು ಕುರಿತು ''ಈ ರಥದಲ್ಲಿ ಕುಳಿತವನು ಯಾರು? ಮತ್ತು ನೀವು ಯಾರು? ನೋಡಲಿಕ್ಕೆ ನೀವೆಲ್ಲರೂ ವಿಷ್ಣುವಿನಂತೆಯೇ ತೋರುತ್ತಲಿರುವಿರಿ. ನಿಮ್ಮ ತಾವರೆದಳದಂತಿರುವ ಸುಂದರ ಕಣ್ಣುಗಳನ್ನು ನೋಡಿದರೆ ನೀವು ಮಹಾಪುರುಷರೆಂದು ತಿಳಿದು ಹೋಗುವದು.'' ಎಂದು ಕೇಳಿದಳು.

ಆಗ ಆ ವಿಷ್ಣುದೂತರು ಆನಂದ ಭರಿತರಾಗಿ ನಕ್ಕು ಮಾತನಾಡಿದರು.

**ವಿಷ್ಣುದೂತರು:-** ಸಾಧ್ವಿ, ನಾವು ವಿಷ್ಣುದೂತರು. ಪುಣ್ಯಾತ್ಮನಾದ ಈ ಪುರುಷನನ್ನು ಕರೆದುಕೊಂಡು ಉತ್ತಮ ಲೋಕಕ್ಕೆ ಹೋಗುತ್ತೇವೆ.

**ಪದ್ಮಾವತಿ:-** ಪೂಜ್ಯರಾದ ವಿಷ್ಣುದೂತರೆ, ಇವನು ತನ್ನ ಹಿಂದಿನ ಜನ್ಮದ ಯಾವ ಪುಣ್ಯ ಪ್ರಭಾವದಿಂದ ಇಂಥ ಗತಿಯನ್ನು ಹೊಂದಿರುತ್ತಾನೆ? ಅದನ್ನು ಹೇಳಿರಿ.

**ವಿಷ್ಣುದೂತರು:-** ಹಿಂದೆ ಬೃಹದ್ವಜ ಎಂಬ ರಾಕ್ಷಸನು ಇರುತ್ತಿದ್ದ. ಆ ಪಾಪಿರಾಕ್ಷಸನಲ್ಲಿ ಇರಲಾರದ ದುರ್ಗುಣವೇ ಇರಲಿಲ್ಲ. ಪರಸ್ತ್ರಿಯರೊಡನೆ ವ್ಯಭಿಚಾರ, ಪ್ರಾಣಿಹಿಂಸೆ, ಗೋಮಾಂಸ ಭಕ್ಷಣ, ನಿಷ್ಠುರ ಭಾಷಣ ದೇವನಿಂದೆ ಮುಂತಾದ ದುರ್ಗುಣಗಳೆಲ್ಲವೂ, ಅವನಲ್ಲಿದ್ದವು. ಅಪರಾಧಗಳೆಂದು ಎಷ್ಟು ಉಂಟೋ ಅಷ್ಟೆಲ್ಲವನ್ನೂ ಈ ಪಾಪಿ ಮಾಡಿಬಿಟ್ಟ. ಶುಭ ಕರ್ಮವನ್ನಂತೂ ಅವನ ಆಯುಷ್ಯದಲ್ಲಿಯೇ ಅಪ್ಪಿ ತಪ್ಪಿ ಕೂಡ ಮಾಡಲೇ ಇಲ್ಲ. ಇವನು ಮಹಾಕಾಮಿ. ಕಾಮನ ಹೂಬಾಣ ಇವನ ಎದೆಯಲ್ಲಿ ನಿರಂತರ ನೆಟ್ಟಿತ್ತು. ಆದುದರಿಂದ ಮಹಾಕಾಮಿಯಾದ ಇವನು ಪರಸ್ತ್ರೀಯರನ್ನು ಅಪಹರಿಸಲಿಕ್ಕಾಗಿಯೇ ಆಕಾಶದಲ್ಲಿ ಸಂಚರಿಸುತ್ತಾನೆ. ಎಲ್ಲಿ ಎಲ್ಲಿ ನವಯೌವನದಿಂದ ಹಾಗು ಹರೆಯಸಿರಿಯಿಂದ ಕಳಕಳಿಸುತ್ತಲಿರುವ ರೂಪವತಿಯರಾದ ರಮಣಿಯರನ್ನು ನೋಡುವನೋ ಅಲ್ಲಿಗೆ ಹೋಗಿ ಬಲತ್ಕಾರದಿಂದ ಇವನು ಆಲಿಂಗಿಸುತ್ತಾನೆ.

ಒಂದು ಸಲ ಭೀಮಕೇಶ ಎಂಬ ರಾಜನ ನವಯೌವನದಿಂದ ಪರಿಪೂರ್ಣಳಾದ ಅತ್ಯಂತ ಸುಂದರಿಯಾದ ಹೆಂಡತಿಯು ಅವನ ಕಣ್ಣಿಗೆ ಬಿದ್ದಳು. ಬಂಗಾರದ ಹೂವಿನಂತೆ ದೇದೀಪ್ಯಮಾನವಾಗಿ ಅವಳು ಬೆಳಗುವದನ್ನು ನೋಡಿ ಪ್ರೀತಿಯಿಂದ ಅವಳನ್ನು ಕುರಿತು ಪ್ರಶ್ನೆ ಮಾಡಿದ "ನೀನು ಯಾರು? ಇಲ್ಲಿ ಏನು ಮಾಡುತ್ತೀ?" ಆಗ ಆ ಭೀಮಕೇಶರಾಜನ ಮಡದಿಯು ಮಾತನಾಡಿದಳು.

**ಮಡದಿ:-** ನಾನು ಭೀಮಕೇಶ ರಾಜನ ಧರ್ಮಪತ್ನಿ. ಕೇಶಿನೀ ಎಂದು ನನ್ನ ಹೆಸರು. ರತಿ ಶಾಸ್ತ್ರ ನನಗೆ ಚೆನ್ನಾಗಿ ತಿಳಿದಿದ್ದೆ ಇದೆ. ಎಲ್ಲ ಗುಣಗಳನ್ನು ಅರಿತ ಪ್ರೇಮಪೂರ್ಣಳಾದ ನನ್ನನ್ನು ಮಹಾರಾಜನು ಕಣ್ಣೆತ್ತಿ ಕೂಡ ನೋಡುವದಿಲ್ಲ. ಆದುದರಿಂದ ನಾನು ಪತಿಯಿಂದ ಅವಮಾನಿತಳಾಗಿ, ಭಗ್ನ ಪ್ರೇಮಿಯಾಗಿ ಇಲ್ಲಿ ವಾಸಮಾಡಿದ್ದೇನೆ. ಆದರೆ ನೀನು ಯಾರು? ಈ ಉದ್ಯಾನಕ್ಕೆ ನೀನು ಹೇಗೆ ಬಂದೆ? ಇದನ್ನೆಲ್ಲ ಹೇಳು.

**ಬೃಹದ್ಧ್ವಜ:-** ಚಂದ್ರಮುಖೀ, ನಾನೊಬ್ಬ ಮಾಯಾವಿಯಾದ ರಾಕ್ಷಸ. ನಿನ್ನನ್ನು ನಾನು ಆಲಿಂಗಿಸಿಕೊಳ್ಳಬೇಕೆಂದು ಇಲ್ಲಿಗೆ ಬಂದಿದ್ದೇನೆ. ನಿನ್ನ ಮೇಲೆ ಸಿಟ್ಟಿಗೆದ್ದ ನಿನ್ನ ಗಂಡನನ್ನು ಬಿಟ್ಟು ಬಿಡು. ಹೆಂಡತಿಯಲ್ಲಿ ದೋಷ ಹುಡುಕುವದೇ ಅವನ ಕೆಲಸ. ನೀನು ನನ್ನ ಬಳಿಗೆ ಬಾ. ನಾನು ನಿನಗೆ ಎಲ್ಲ ವಿಧವಾದ ಸುಖವನ್ನು ನೀಡುತ್ತೇನೆ.

ಆ ಬೃಹದ್ಧ್ವಜನ ಮಾತನ್ನು ಕೇಳಿ ಆನಂದದಿಂದ ಆ ವನಿತೆಯು ಮಂದಹಾಸವನ್ನು ಮಾಡುತ್ತಾ ಅವನ ಬಿನ್ನಹಕ್ಕೆ ತನ್ನ ಸಮ್ಮತಿಯನ್ನು ತೋರಿದಳು. ತನ್ನ ಬಾಹುಗಳಿಂದ ಆಲಿಂಗಿಸಿದಳು. ಆಗ ಆ ಬೃಹದ್ಧ್ವಜನು ಉತ್ಸಾಹದಿಂದ ಅವಳನ್ನು ಆಲಿಂಗಿಸಿಕೊಂಡು ದಿವ್ಯವಾದ ರಥವನ್ನು ಆರೋಹಣ ಮಾಡಿದನು. ಇಬ್ಬರೂ ದಾಂಪತ್ಯ ಭಾವದಿಂದ

ಕೌತುಕ ಭರಿತರಾಗಿ ವಾಯು ವೇಗವುಳ್ಳ ರಥವನ್ನು ಆರೋಹಣ ಮಾಡಿ ಗಗನಗಾಮಿಗಳಾಗಿ ಸಂಚರಿಸಿದರು.

ಅನಂತರ ಅವನು ಆ ರಥದಲ್ಲಿ ಕುಳಿತಾಗ ಆ ಪ್ರೇಯಸಿಗೆ ಹೇಳಿದನು. ''ಸುಂದರಿ, ನಾವು ಈಗ ನಿನ್ನ ಗಂಡನ ದೇಶದಿಂದ ಗಂಗಾ ಸಾಗರ ಸಂಗಮಕ್ಕೆ ಬಂದಿದ್ದೇವೆ. ಇಕೋ ಇಲ್ಲಿ ನೋಡು. ಕೆಳಗೆ ಗಂಗೆಯು ಸಮುದ್ರನಾಥನೊಡನೆ ಸಂಗಮಿಸಿದ ಪರಮ ಮಂಗಳಕರವಾದ ಗಂಗಾ ಸಾಗರ ಸಂಗಮದ ಸ್ಥಾನವು ಕಾಣುತ್ತಲಿದೆ. ಹೀಗೆ ಹೇಳಿ ಆ ಬೃಹಧ್ವಜ ರಾಕ್ಷಸನು ತನ್ನ ರಥವನ್ನು ಆ ಗಂಗಾ ಸಾಗರ ಸಂಗಮದ ತೀರದಲ್ಲಿ ತಂದು ಇರಿಸಿದ. ಕೇಶಿನಿಯು ಆ ಸಂಗಮ ತೀರ್ಥದಲ್ಲಿ ಸ್ನಾನ ಮಾಡಲು ಜಲದಲ್ಲಿ ಪ್ರವೇಶಿಸಿದಳು. ಅವಳಿಗೆ ಸಮುದ್ರ ಹಾಗೂ ಗಂಗೆಯ ನೀರುಗಳು ಪರಸ್ಪರವಾಗಿ ಬೆರೆತು, ನೆರೆತು, ಘೂರ್ಮಿಸುವ ಸಂಗಮದ ರಂಗಸ್ಥಲದಲ್ಲಿಯೇ ಮರಣ ಒದಗಿ ಬಂದಿತು. ಜಲಮಧ್ಯದಲ್ಲಿಯೇ ಪ್ರಾಣ ಹೋಗಿ ನಿಶ್ಚೇಷ್ಟಳಾದ ತನ್ನ ಪ್ರೇಯಸಿಯನ್ನು ಕಂಡು ಆ ಬೃಹಧ್ವಜ ರಾಕ್ಷಸನು ಬಹಳಷ್ಟು ಶೋಕ ಮಾಡಿ ತಾನು ಕೂಡ ಆ ಸಂಗಮದಲ್ಲಿ ಬಿದ್ದು ದೇಹ ಪರಿತ್ಯಾಗ ಮಾಡಿದ. ಹೀಗೆ ಪರಮ ಪವಿತ್ರವಾದ ಆ ಜಾಹ್ನವೀ ಜಲನಿಧಿಗಳ ಸಂಗಮ ಜಲದಲ್ಲಿ ಜೀವಕೊಟ್ಟ ಅವರಿಬ್ಬರನ್ನೂ ಜಗನ್ನಾಥನಾದ ಆ ಜನಾರ್ದನನ ಆಜ್ಞೆಯಿಂದ ನಾವು ವೈಕುಂಠ ಲೋಕಕ್ಕೆ ಕರೆದುಕೊಂಡು ಹೊರಟಿದ್ದೇವೆ. ಗಂಗಾ ಸಾಗರ ಸಂಗಮದ ಜಲದಲ್ಲಿಯೇ ಆಗಲಿ ಅದರ ದಂಡೆಯ ಸ್ಥಳದಲ್ಲಿಯೇ ಆಗಲಿ ಅದರ ಮೇಲಿನ ಅಂತರಿಕ್ಷದಲ್ಲಿಯೇ ಆಗಲಿ ದೇಹತ್ಯಾಗ ಮಾಡಿದವರು ಎಂಥ ಪಾಪಿಗಳಾಗಿದ್ದರೂ ಸದ್ಗತಿ ಹೊಂದುತ್ತಾರೆ. ಗಂಗಾ ಸಮುದ್ರ ಸಂಗಮವು ಸರ್ವ ತೀರ್ಥಗಳಿಗಿಂತಲೂ ಸರ್ವಶ್ರೇಷ್ಠ.

ಹೀಗೆ ಹೇಳಿ ಆ ಎಲ್ಲ ವಿಷ್ಣುದೂತರೂ ಕೇಶಿನಿ ಹಾಗೂ ಬೃಹಧ್ವಜ ರಾಕ್ಷಸರಿಬ್ಬರನ್ನೂ ಕರೆದುಕೊಂಡು ವಿಷ್ಣುಮಂದಿರಕ್ಕೆ ಹೋದರು.

ಇದರಂತೆ ಸಾಧ್ವೀಶಿಖಾಮಣಿಯಾದ ಪದ್ಮಾವತಿಯು ಕೂಡ ಇಬ್ಬರು ತನ್ನ ಗಂಡಂದಿರನ್ನು ಕೂಡಿ ವಿಷ್ಣುವಿನ ಸಾನ್ನಿಧ್ಯವನ್ನು ಪಡೆದು ಎಲ್ಲ ದುರ್ಲಭವಾದ ಭೋಗ ಗಳನ್ನು ಹೊಂದಿ ಮತ್ತೆ ಹರಿಯ ಆರಾಧನೆ ಮಾಡಿ ದಿವ್ಯಜ್ಞಾನವನ್ನು ಪಡೆದು ಶ್ರೀಹರಿಯ ಸಾರೂಪ್ಯಮೋಕ್ಷವನ್ನು ಹೊಂದಿದಳು.

ಈ ಗಂಗಾ ಸಾಗರ ಸಂಗಮದಲ್ಲಿ ಮಾಧವ ಎಂಬ ರಾಜನು ಪೂರ್ವ ಕಾಲದಲ್ಲಿ ಮಹಾದೇವರನ್ನು ಕುರಿತು ತಪಸ್ಸು ಮಾಡಿ ಸಕುಟುಂಬವಾಗಿ ಮೋಕ್ಷವನ್ನು ಹೊಂದಿದ.

**ಜೈಮಿನಿ:-** ನೀವು ಹೇಳಿದ ಮಾಧವ ಯಾರು? ಅವನು ಏನು ಕಾರ್ಯವನ್ನು ಮಾಡಿದ? ಅದನ್ನೆಲ್ಲ ನನಗೆ ಹೇಳಿರಿ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಪ್ರಯಾಗ ಮಹಾತ್ಮ್ಯ ಪ್ರಣಿಧಿ ವೈಶ್ಯನ ಕಥೆ ಎಂಬ ನಾಲ್ಕನೇಯ ಅಧ್ಯಾಯ ಮುಗಿದುದು*

—೦—

ಮಾಧವನ ವೃತ್ತಾಂತ

ಅಧ್ಯಾಯ - ೫

**ವೇದವ್ಯಾಸ:-** ಕಾಲಧ್ವಜ ಎಂದು ಒಂದು ಪಟ್ಟಣ. ಅದಕ್ಕೆ ದೃಷ್ಟಾಂತ ಇಂದ್ರನ ಅಮರಾವತಿಯೇ. ಮೂರು ಲೋಕಗಳಲ್ಲಿ ತುಂಬಿತ್ತು ಅದರ ಕೀರ್ತಿ. ಆ ನಗರದಲ್ಲಿ ಇದ್ದವರೆಲ್ಲರೂ ಗುಣವಂತರೆ ಎಲ್ಲರೂ ಸಜ್ಜನ ಮುನಿಗಳೇ. ಆ ಊರಿನ ರಾಜ ವಿಕ್ರಮ ಎಂದು. ಅವನ ಹುಟ್ಟಿದ ಕುಲ ನಿರ್ದುಷ್ಟ. ಆಡುವ ಮಾತು ನಿಷ್ಕ್ರುಷ್ಟ. ಸತ್ಯ ಅವನ ಜೀವನದ ಉಸಿರು. ಪ್ರಜೆಗಳನ್ನು ತಂದೆ ತಾಯಿಗಳಂತೆ ಸಾಕುವದೇ ಅವನ ಜೀವನದ ಗುರಿ. ಅವನ ಹೆಂಡತಿ ಹಾರಾವತಿ. ಅವಳ ಮುಖದ ಕಾಂತಿಯ ಎದುರು ಹುಣ್ಣಿಮೆ ರಾತ್ರಿಯ ಚಂದ್ರ ಕೂಡ ಕಳಪೆ. ಆ ರಾಜನಿಗೆ ಅನೇಕ ಮಡದಿಯರಿದ್ದರೂ ಸಮುದ್ರರಾಜನಿಗೆ ಗಂಗೆಯೇ ಪ್ರಿಯತಮೆಯಾದಂತೆ ಹಾರಾವತಿಯೇ ಇಷ್ಟಪ್ರೇಷ್ಠಳು ಆಗಿದ್ದಳು. ಕೆಲವು ದಿನಗಳ ಬಳಿಕ ಅವನಿಗೆ ಮಾಧವ ಎಂಬ ಗಂಡು ಮಗ ಹುಟ್ಟಿದ. ಬುದ್ಧಿಯಲ್ಲಿ ಅವನೊಬ್ಬ ಭೂತಳದ ಬೃಹಸ್ಪತಿ. ಅವನ ಯೋಗ್ಯತೆಯನ್ನು ಚೆನ್ನಾಗಿ ಅರಿತುಕೊಂಡ ಮಹಾರಾಜ. ಆದುದರಿಂದಲೇ ಅವನನ್ನು ಯುವರಾಜ ಪಟ್ಟದಲ್ಲಿ ಅಭಿಷೇಕ ಮಾಡಿದ.

ಒಂದು ದಿನ ಆ ಮಾಧವನು ಮೃಗಯಾಕೌತುಕದಿಂದ ಕಾಡಿಗೆ ಬೇಟೆಯಾಡಲು ಚತುರಂಗ ಸೈನ್ಯದಿಂದ ಕೂಡಿ ನಡೆದ. ಕಣ್ಣಿಗೆ ಕಂಡ, ಕೈಗೆ ಸಿಕ್ಕ ಪ್ರಾಣಿಗಳನ್ನೆಲ್ಲ ತುಂಡರಿಸಿ ಹಾಕಿದ. ಮಧ್ಯಾಹ್ನದ ವೇಳೆಗೆ ಆ ಕಾಡಿನಲ್ಲಿಯ ಅಸಂಖ್ಯ ಕ್ರೂರ ಪ್ರಾಣಿಗಳನ್ನು ಅವನ ಸೈನಿಕರು ಮತ್ತು ಅವನು ಸೇರಿ ತಲೆ ಕತ್ತರಿಸಿ ಹಾಕಿದ್ದರು. ಅನಂತರ ಬೇಟೆಯಾಟವನ್ನು ಮುಗಿಸಿ ಅರಣ್ಯದಿಂದ ಮನೆಯ ಕಡೆಗೆ ತಿರುಗಿದ ಆ ರಾಜಕುಮಾರ.

ದಾರಿಯಲ್ಲಿ ಒಂದು ತಿಳಿನೀರಿನ ಕೊಳ. ಹದಿಹರೆಯದ ಒಂದು ಹುಡುಗಿ ಪಾರದರ್ಶಕ ಸ್ನಾನದ ಬಟ್ಟೆ ತೊಟ್ಟು ಆ ನೀರಿನಲ್ಲಿ ಮೀಯುತ್ತಲಿದ್ದಳು. ಅವಳ ಕಾಯದ ಕಮನೀಯತೆಯನ್ನು ಕಂಡು ರಾಜಕುಮಾರನಾದ ಮಾಧವನು ಮುಗ್ಧನಾದ. ಚೆಲುವೇ ಚೈತನ್ಯ ಪಡೆದಂತಿರುವ ಆ ಚಿಗರೆಗಂಗಳ ಚಾರ್ವಂಗಿಯನ್ನು ಕಂಡು ಆ ತರುಣ ಚಕ್ರವರ್ತಿ ಕುಮಾರ ತನ್ನ ಮನಸ್ಸಿನಲ್ಲಿಯೇ ಯೋಚಿಸಿದ.

''ನಾನು ಈ ಭೂಲೋಕದಲ್ಲಿ ಎಲ್ಲ ನಾಡುಗಳನ್ನೂ ನಾಡಿನಲ್ಲಿರುವ ನಾರಿರತ್ನಗಳನ್ನೂ ನೋಡಿದ್ದೇನೆ. ಆದರೆ ಇಂಥ ಸೌಂದರ್ಯದ ಕೇಂದ್ರವಾದ ರಮಣೀಮಣಿಯನ್ನು ಮಾತ್ರ ಎಲ್ಲಿಯೂ ನೋಡಲಿಲ್ಲ. ಇವಳ ಅಂಗಾಲಿಂಗನದ ಸಂಗಸೌಖ್ಯವನ್ನು ಹೊಂದಿದರೆ ಮಾತ್ರ ನನ್ನ ಜನ್ಮ ಸಫಲ. ಒಂದು ದೃಷ್ಟಿಯಿಂದ ನಾನು ಇವಳಿಗೆ ಎಲ್ಲ ದೃಷ್ಟಿಯಿಂದಲೂ ತಕ್ಕದಾ ವರ. ರೂಪ, ಗುಣ, ರಾಜ್ಯ, ಅಧಿಕಾರ, ದೊಡ್ಡವಂಶ, ಧೈರ್ಯ, ಚಾತುರ್ಯ, ಪರಾಕ್ರಮ ಮುಂತಾದ ಎಲ್ಲ ಗುಣಗಳೂ ನನ್ನಲ್ಲಿ ಮೇಳವಿಸಿವೆ. ಇವಳು ನನ್ನನ್ನು ಧಿಕ್ಕರಿಸಲಿಕ್ಕಿಲ್ಲ. ಪರಸ್ತ್ರೀಯನ್ನು ಅಪಹರಿಸಿದ ಪಾಪವು (ದೋಷವು) ಮಾತ್ರ ನನಗೆ ಮುಂದೆ ಯಮಲೋಕದಲ್ಲಿ ನರಕದುಃಖಕ್ಕೆ ಕಾರಣವಾಗುವದು. ಆ ವಿಚಾರ ಬಿಟ್ಟರೂ ಈಗಲೇ ಈ ಹೆರವರ ಹೆಣ್ಣನ್ನು ಏನಾದರೂ

ಹಂಚಿಕೆ ಮಾಡಿ ಹಾರಿಸಿಕೊಂಡು ಹೋದರೆ ಇದರಿಂದ ನನಗೆ ಯಾವ ಅಪಾಯ ಒದಗುವುದೋ ಅದನ್ನು ಹೇಳಲು ಶಕ್ಯವಿಲ್ಲ. ಏಕೆಂದರೆ ನನ್ನ ತಂದೆಯೇ ಚಕ್ರವರ್ತಿ. ಅವನು ಮಹಾನ್ಯಾಯನಿಷ್ಠುರ. ಅವನು ನನ್ನ ಅಪ್ಪನೇ ಆಗಿದ್ದರೂ ನಾನು ತಪ್ಪು ಮಾಡಿದರೆ ದಂಡ, ಶಿಕ್ಷೆ, ತಪ್ಪಿದ್ದೇ ಅಲ್ಲ. ಒಳ್ಳೇ ಉಪಾಯದಿಂದಲೇ ಈ ಕೆಲಸವನ್ನು ಸಾಧಿಸಬೇಕು.

ಹೀಗೆಲ್ಲ ವಿಚಾರಿಸಿ ಆ ಮಾಧವ ರಾಜಕುಮಾರನು ತನ್ನ ಸೈನ್ಯವನ್ನು ದೂರವಿರಿಸಿದ. ತಾನೊಬ್ಬನೇ ಮೆಲ್ಲನೇ ಹೆಜ್ಜೆ ಇಡುತ್ತ ಆ ಮಹಿಳಾಮಣಿಯು ಮೈ ತೊಳೆಯುವ ತಿಳಿನೀರಿನ ಬಳಿ ಸಾರಿದ.

**ಐಶ್ವರ್ಯಂ ಚ ಮದಶ್ಚೈವ ಕಾಮಶ್ಚೈವ ಮಹೀತಲೇ ।**
**ತ್ರಯಂ ಏತೇ ವಿವೇಕಸ್ಯ ತೇಜೋ ಘ್ನಂತಿ ಕಿಮದ್ಭುತಮ್ ॥**

ಸಂಪತ್ತು, ಮದ, ಮತ್ತು ಕಾಮ ಇವು ಮೂರು ಜಗತ್ತಿನಲ್ಲಿ ವಿವೇಕವನ್ನು ನಾಶಪಡಿಸಿ ಮಾನವನ ತೇಜೋಭಂಗವನ್ನು ಮಾಡಿದರೆ ಆಶ್ಚರ್ಯವೇನೂ ಇಲ್ಲ.

**ಪಿತಾಸ್ಯ ದುರಿತ ಧ್ವಂಸೀ ಧರ್ಮರಕ್ಷಾಕರೋ ನೃಣಾಮ್ ।**
**ಧಿಕ್ ಸ್ವಯಂ ಕಾಮದೇವೋಽಸೌ ಮೋಹಯತ್ಯಖಿಲಂ ಜಗತ್ ॥**

ಈ ಮಾಧವನ ತಂದೆ ಧರ್ಮರಕ್ಷಣೆಯನ್ನು ಮಾಡುವ ಸತ್ಯನಿಷ್ಠನಾದ ಮಹಾರಾಜ. ಅವನ ರಾಜ್ಯದಲ್ಲಿಯೇ ಯಾರೂ ಪಾಪಕೃತ್ಯವನ್ನು ಮಾಡುವುದಿಲ್ಲ. ಇಂಥ ಪಾಪಧ್ವಂಸಕನಾದ ಮಹಾರಾಜನ ಮಗನೇ ಈಗ ಕಾಮಾತುರನಾಗಿ ಅವ್ಯಾಹಾರಕ್ಕೆ ಇಳಿದಿದ್ದಾನೆ. ಜಗತ್ತನ್ನೇ ಮೋಹಮಾಡುವ ಕಾಮನ ಕುಚೋದ್ಯಕ್ಕೆ ಧಿಕ್ಕಾರವಿರಲಿ.

ತರುಣ ರಾಜಕುಮಾರನಾದ ಮಾಧವನು ತಾನು ಮೈತೊಳೆಯುವ ಸ್ಥಾನದ ಕಡೆಗೇ ಬರುತ್ತಿರುವುದನ್ನು ನೋಡಿ ನೀರಿಗೆ ಇಳಿದ ಆ ನಾರಿಯು ಚಿಂತಾಕ್ರಾಂತಳಾದಳು.

''ಇದಂತೂ ಅಟ್ಟಂಬಟ್ಟ ಅರಣ್ಯ. ಇಲ್ಲಿ ಬೇರೆ ಯಾವ ನರಪ್ರಾಣಿಯ ಸುಳಿವೂ ಇಲ್ಲ. ಇಲ್ಲಿ ನಾನು ಒಬ್ಬಳೇ. ನಾನು ತರುಣಿ. ಇವನಾವನೋ ಪರಪುರುಷ ನನ್ನೆಡೆಗೆ ಧಾವಿಸಿ ಬರುತ್ತಿದ್ದಾನೆ.

**ಜಲ್ಪಂತಿ ಮುನಯ ಸರ್ವೇ ಧರ್ಮೋ ರಕ್ಷತಿ ರಕ್ಷಿತಃ ।**
**ತತ್ತು ಜ್ಞಾತವ್ಯಮತ್ರೈವ ಕಿಮತ್ರ ಚ ಭವಿಷ್ಯತಿ ॥**

ನಾವು ಧರ್ಮವನ್ನು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ. ಎಂದು ಎಲ್ಲ ಮುನಿಗಳೂ ಹೇಳುತ್ತಾರೆ. ಅದರ ಪರೀಕ್ಷೆ ಈಗಲೇ ಇಲ್ಲಿ ಆಗಬೇಕಾಗಿದೆ. ಇಲ್ಲಿ ಈಗ ನಾನು ಏನು ಮಾಡಬೇಕು? ಮುಂದೆ ಏನು ಆಗಬಹುದು?

**ಸಕಾಯಹೀನಂ ಯತ್ಸ್ಥಾನಂ ಪುರೋಧಾವಂತಿ ಶತ್ರವಃ ।**
**ಶ್ಲಾಘ್ಯಂ ಪಲಾಯನಂ ತತ್ರ ನಿವಾಸಃ ಪ್ರಾಣನಾಶಕಃ ॥**

ಯಾರೂ ಸಹಾಯಕರಿಲ್ಲದ ಸ್ಥಾನದಲ್ಲಿ ಶತ್ರುಗಳು ಮುನ್ನುಗ್ಗಿ ಬಂದರೆ ಅಲ್ಲಿಂದ ಓಡಿ ಹೋಗುವುದೇ ಒಳಿತು. ಅಂಥಲ್ಲಿ ಇರುವದು ಎಂದರೆ ಜೀವಕ್ಕೆ ಎರವಾಗವುದು ಎಂದರ್ಥ.

ಹೀಗೆ ವಿಚಾರಿಸಿ ಆ ತೀರ್ಥೋದಕದಲ್ಲಿ ತನ್ನ ತೆಳುವಾದ ಮೈಯನ್ನು ತೊಳೆಯುತ್ತಲಿರುವ ಆ ತರಳೆಯು ನೀರು ಬಿಟ್ಟು ಮೇಲೆ ಬಂದು ಸೊಂಟದ ಮೇಲೆ ಕೊಡ ಇಟ್ಟುಕೊಂಡು ಅಲ್ಲಿಂದ ಓಡುವ ಎತ್ತುಗಡೆ ಮಾಡಿದಳು. ಅದನ್ನು ಗಮನಿಸಿದ ಮಾಧವ ವೇಗದಿಂದ ಓಡಿ ಅವಳ ಎದುರೇ ಹೋಗಿ ಕೈಯಿಂದ ಅಡ್ಡಗಟ್ಟಿ ನಿಂತುಕೊಂಡ ಮತ್ತು ಅವಳಿಗೆ ಹೇಳಿದ.

**ಮಾಧವ:-** ಚೆಲುವಿಕೆಗಾ ಪುತ್ಥಳಿಯೇ, ನೀನು ನಿನ್ನ ಅಂಗಾಂಗಳಲ್ಲಿ ಉಕ್ಕುವ ಹರೆಯದ ಸಿರಿಯಿಂದ ನನ್ನ ಮನವನ್ನು ಕದ್ದು ಈಗ ಎಲ್ಲಿಗೆ ಇಲ್ಲಿಂದ ಓಡುತ್ತಿರುವೆ? ಚಿಗರೆಗಣ್ಣಿನ ಚೆಲುವೆಯೇ, ನಿನ್ನ ಹೆಸರು ಏನು? ನಿನ್ನ ಕೈ ಹಿಡಿದ ಪತಿ ಯಾರು? ನೀನು ಸ್ವರ್ಗದಿಂದ ಇಳಿದುಬಂದ ಅಪ್ಸರೆಯೇ? ನಿನ್ನಂಥ ಸುಂದರಿಯರು ಭೂಲೋಕದಲ್ಲಿ ಎಲ್ಲಿಯೂ ಇಲ್ಲ. ಸೌಂದರ್ಯದ ಲಕ್ಷಣಗಳು ಎಲ್ಲವೂ ನಿನ್ನಲ್ಲಿ ಸಂಪನ್ನವಾಗಿವೆ. ದಾಸಿಯಂತೆ ನೀನೇಕೆ ನೀರನ್ನು ಹೊತ್ತು ಒಯುತ್ತಲಿರುವೆ. ನಿನ್ನ ಒಗಲಲ್ಲಿ ಒಂದು ಕಲಶವಿದ್ದರೆ, ಎದೆಯಮೇಲೆ ಎರಡು ಕಳಶಗಳು ಶೋಭಿಸುತ್ತಲಿವೆ. ಇದು ಆಶ್ಚರ್ಯ ಕರನೆಂದ ಮೇಲೆ ಸುಡುವ ಬಿಸಿಲಲ್ಲಿ ಇರಿಸಿದ ನಿನ್ನ ಹೆಜ್ಜೆಗಳು ಜಪಾ ಕುಸುಮದಂತೆ ಕೆಂಪಾಗಿ ಕಾಣುತ್ತಲಿವೆ. ಆ ಕೊಡಹಿಡಿದ ಕೈಯಿಂದ ನನ್ನ ಕೈ ಹಿಡಿ. ನೀನು ನನ್ನ ಪಾಣಿಗ್ರಹಣ ಮಾಡಿದರೆ ನಿನಗೆ ಎಲ್ಲ ವಿಧವಾದ ಸುಖ ಸೌಭಾಗ್ಯಗಳನ್ನು ನಾನು ನೀಡುವೆ. ನಾನು ವಿಕ್ರಮ ಚಕ್ರವರ್ತಿಯ ಮಗ. ಮಾಧವ ಎಂದು ಹೆಸರು. ರೂಪ, ಗುಣ, ಲಾವಣ್ಯ, ತಾರುಣ್ಯ ವಯಸ್ಸು, ವಿದ್ಯೆ ವಿತ್ತ ವಪುಸ್ಸು ಮುಂತಾದ ಎಲ್ಲ ಗುಣಗಳಿಂದ ನಾನು ನಿನಗೆ ಯೋಗ್ಯವಾದ ಪತಿಯಾಗುತ್ತೇನೆ. ನನಗೆ ಬೇರೆ ಸ್ತ್ರೀಯರಿದ್ದರೂ ಹೂಗಳಲ್ಲಿ ಮಾಲತಿ, ಪುಷ್ಪವು ದುಂಬಿಗೆ ಪ್ರಿಯವಾಗುವಂತೆ ನೀನು ನನ್ನ ಅಚ್ಚು ಮೆಚ್ಚಿನ ಪಟ್ಟದ ರಾಣಿ ಆಗುವೆ. ನೀನು ಗರ್ವದಿಂದ ನನ್ನ ಮಾತನ್ನು ಕೇಳದಿದ್ದರೆ ನಾನು ಮಾತ್ರ ನಿನ್ನನ್ನು ಬಿಡಲಾರೆ. ಏನಾದರೂ ನೀನು ನನ್ನಿಂದ ತಪ್ಪಿಸಿಕೊಂಡು ಹೋಗಲಾರೆ. ಏಕೆಂದರೆ ನಾನು ಸರ್ವತಂತ್ರ ಸ್ವತಂತ್ರ. ಸ್ವತಂತ್ರನಾದ ಆ ಸಾರ್ವಭೌಮನ ಮಗ. ನಾನು ನನಗೆ ಅಪೇಕ್ಷಿತವಾದುದನ್ನು ಹೇಗಾದರೂ ಮಾಡಿ ಸಾಧಿಸಿಕೊಳ್ಳುತ್ತೇನೆ.

ಮಾಧವನ ಈ ಮಾತುಗಳನ್ನು ಕೇಳಿ ಆ ಕೋಮಲೆಯು ಮುಖ ಕೆಳಗೆ ಹಾಕಿ ನಿಂತುಕೊಂಡಳು. ಮೆಲ್ಲಮೆಲ್ಲನೆ ಮಿದುವಾದ ದನಿಯಲ್ಲಿ ಮಧುರವಾದ ನುಡಿಯಲ್ಲಿ ಮಾತನಾಡಿದಳು.

**ತರುಣಿ:-** ತಲೆ ತಿರುಗಿದ ನಿನ್ನಂಥ ಹದಿಹರೆಯದ ಗಂಡು ನನ್ನಂಥ ಅಬಲೆಯರ ಮಾತನ್ನು ಕೇಳುವದಿಲ್ಲ. ಮತ್ತು ನಿಮ್ಮಂಥ ಪರಪುರುಷರ ಮುಂದೆ ನಿಂತು ಕುಲಸ್ತ್ರೀಯಾದ ನಾನು ಮಾತನಾಡುವದೂ ಸರಿಯಲ್ಲ. ಆದರೂ ಕೆಲವು ಮಾತನ್ನು ಹೇಳುತ್ತೇನೆ ಕೇಳು. ವೀರವರೇಣ್ಯ ನಾನು ಸುಬಾಹು ಕ್ಷತ್ರಿಯನ ಪ್ರೇಯಸಿ. ನನ್ನ ಹೆಸರು ಚಂದ್ರಕಲಾ. ದೇವರ ಪೂಜೆಗಾಗಿ ನಾನು ಈಗ ನೀರನ್ನು ಒಯ್ಯುತ್ತಲಿದ್ದೇನೆ. ಈಗ ನೀನು ಹೇಳಿದ ಮಾತು ನಿನ್ನ ಕುಲದ ಗೌರವ ಘನತೆಗೆ ತಕ್ಕದ್ದಲ್ಲ. ನಿಮ್ಮ ವಂಶದಲ್ಲಿ ಹುಟ್ಟಿದ ಎಲ್ಲ ಪುರುಷರೂ ಪರಸ್ತ್ರೀಯರ ವಿಷಯದಲ್ಲಿ ನಪುಂಸಕರು. ಆದರಂತೆ ನೀನು ಕೂಡ ಪರನಾರೀ ಸೋದರನಾಗಿರುವದು ನಿನ್ನ ಕರ್ತವ್ಯ. ಈ ಕಾಡಿನ ನಡುವೆ ನಾನು ಏಕಾಕಿನಿಯಾಗಿ ನಿನ್ನ

ಕೈಯಲ್ಲಿ ಸಿಕ್ಕಿರುತ್ತೇನೆ. ನೀನು ವೀರಾಗ್ರೇಸರ. ಇಂಥ ನೀನು ನನ್ನನ್ನು ಬಲಾತ್ಕಾರದಿಂದ ಆಲಿಂಗಿಸಿದರೆ ನಿನಗೆ ಎಂಥ ಅಪಕೀರ್ತಿ ಬರುವದು ವಿಚಾರಿಸಿ ನೋಡು.

**ಪರಸ್ತ್ರೀಯಂ ಸಮಾಲಿಂಗ್ಯ ಕ್ಷಣ ಮಾತ್ರ ಸುಖಂ ಭವೇತ್ ।**
**ಇಹಾಪಕೀರ್ತಿಃ ಶೇಷಂ ಚ ದುಃಖಂ ಕಲ್ಪಶತಾಧಿಕಂ ॥**

ಪರಸ್ತ್ರೀಯರನ್ನು ಆಲಿಂಗಿಸಿಕೊಂಡರೆ ಒಂದು ಕ್ಷಣಿಕ ಸುಖವು ದೊರಕಬಹುದು. ಆದರೆ ಮುಂದೆ ನರಕದುಃಖ ಮಾತ್ರ ಕಲ್ಪಾಂತ ಕಾಲದ ವರೆಗೆ ತಪ್ಪಿದ್ದಲ್ಲ. ನಾರಿಯ ಶೀಲ ಕೆಡಿಸಿದವ ಈ ಲೋಕದಲ್ಲಿಯೇ ಅಪಕೀರ್ತಿಗೆ ಗುರಿಯಾಗುತ್ತಾನೆ.

**ಕರ್ಮಭೂಮಿರಿಯಂ ಶೂರ ಪುಣ್ಯಮತ್ರ ವಿಧೀಯತಾಂ ।**
**ಪರಸ್ತ್ರೀ ಹರಣೇ ಚಿತ್ತಂ ಕದಾಚಿದಪಿ ಮಾ ಕುರು ॥**

ಶೂರ ವರೇಣ್ಯ, ಇದು ಕರ್ಮಭೂಮಿ, ಸಾಧನಭೂಮಿ. ಇಲ್ಲಿದ್ದು ಪುಣ್ಯಸಾಧನ ಮಾಡಿಕೊಳ್ಳುವದು ಪ್ರತಿಯೊಬ್ಬ ಮನುಷ್ಯನ ಕರ್ತವ್ಯ. ಆದ್ದರಿಂದ ಪುಣ್ಯ ಸಾಧನ ಮಾಡಿಕೊಳ್ಳದಿದ್ದರೂ ಪಾಪ ಸಾಧನೆ ಮಾಡಬಾರದು. ಪರಸ್ತ್ರೀಯಾದ ನನ್ನ ಮೇಲೆ ಕಣ್ಣು ಹಾಕಬೇಡ. ಮನಸ್ಸನ್ನು ಹರಿ ಬಿಡಬೇಡ.

**ಲೋಭಾತ್ ಪ್ರವರ್ತತೇ ಕಾಮಃ ಕಾಮಾತ್ ಪಾಪಂ ಪ್ರವರ್ತತೆ ।**
**ಪಾಪಾನ್ ಮೃತ್ಯುಃ ಮೃತೇऽಪಿ ಸ್ಯಾದ್ ದುಸ್ತರೇ ನರಕೇ ಸ್ಥಿತಿಃ ॥**

ಲೋಭದಿಂದ ಹುಟ್ಟುತ್ತದೆ ಕಾಮ. ಕಾಮದಿಂದ ಪಾಪದಲ್ಲಿ ಮನುಷ್ಯ ಪ್ರವರ್ತಿಸುತ್ತಾನೆ. ಪಾಪದಿಂದ ನರನು ಸಾವನ್ನು ಅಪ್ಪುತ್ತಾನೆ. ಸತ್ತ ಮೇಲೆ ಕೂಡ ಆ ಪಾಪಿಗೆ ನರಕಯಾತನೆಯ ದುಃಖ ದುಃಸ್ಥಿತಿಗಳು ತಪ್ಪಿದ್ದು ಅಲ್ಲ.

**ಸರ್ವೇಪಿ ತ್ವದ್ಗುಣಾ ವ್ಯರ್ಥಾಃ ತ್ವಜ್ಜನ್ಮಾಪಿ ಚ ನಿಷ್ಫಲಂ ।**
**ಕಾಮಸ್ಯ ವಶತಾಂ ಗತ್ವಾ ರಂತುಮಿಚ್ಛೇಃ ಪರಸ್ತ್ರೀಯಂ ॥**

ನಿನ್ನಲ್ಲಿ ಅಂಥ ಗುಣ ಇಂಥ ಗುಣ ಎಂದೆಲ್ಲ ನೀನು ನನ್ನ ಎದುರಿಗೆ ಇದೀಗ ಹೇಳಿಕೊಂಡೆ. ಇವೆಲ್ಲ ಇಷ್ಟು ಗುಣಗಳು ನಿನ್ನಲ್ಲಿ ಇದ್ದರೂ ಕೂಡ ಅವೆಲ್ಲವೂ ವ್ಯರ್ಥ. ನಿನ್ನ ಜನ್ಮವೇ ವ್ಯರ್ಥ. ನೀನು ಕಾಮಾತುರನಾಗಿ ಹೆರವರ ಹೆಣ್ಣಿನ ಜೊತೆಗೆ ಬಲತ್ಕಾರದಿಂದ ವಿಹರಿಸಬೇಕೆಂದು ಬಯಸುತ್ತಲಿರುವೆ.

**ಮಾಂಸ ಮೂತ್ರ ಪುರೀಷಾದಿನಿರ್ಮಿತಂ ಮೇ ಕಲೇವರಂ ।**
**ಏತದೇವ ಸಮಾಲೋಕ್ಯ ಸ್ಮರಸ್ಯ ವಶತಾಂ ಗತಃ ॥**

ನನ್ನ ಈ ತೊಗಲಿನ ಮೈ ಒಳಗೆ ಏನು ಇದೆ ಎಂದು ತಿಳಿದಿರುವೆ? ಈ ನನ್ನ ದೇಹ ಮಾಂಸ, ಮಲ, ಮೂತ್ರ, ಮೂಳೆ ಮುಂತಾದವುಗಳಿಂದ ನಿರ್ಮಿತವಾಗಿದೆ. ಇಂಥ ಅಸಹ್ಯವಾದ ವಸ್ತುಗಳಿಂದ ತುಂಬಿ ತುಳುಕುತ್ತಲಿರುವ ಈ ದೇಹದಲ್ಲಿ ನೀನು ನೋಡಿಯೇ ಹೇಗೆ ಕಾಮವಶನಾಗಿರುವೆ?

**ಭೂಪಾಲವಂಶೋತ್ಪನ್ನತ್ವಾತ್ ಪೌರೇಭ್ಯೋ ನ ಬಿಭೇಷಿ ಕಿಂ ।**
**ಮಸ್ತಕೋಪರಿ ಗರ್ಜಂತಂ ಸಮವರ್ತಿನಂ ॥**

ಸಾರ್ವಭೌಮ ರಾಜನ ಮನೆಯಲ್ಲಿ ಮಗನಾಗಿ ಹುಟ್ಟಿದ್ದರಿಂದ ನನಗೆ ಯಾರ ಭಯವೂ ಇಲ್ಲ ಎಂದು ನೀನು ಉಚ್ಛೃಂಖಲನಾದಂತೆ ತೋರುತ್ತದೆ. ಆದರೆ ಎಲ್ಲ ಪ್ರಾಣಿಗಳ ತಲೆಯ ಮೇಲೆ ವೃತ್ಯು ಕುಳಿತು ಗರ್ಜಿಸುತ್ತದೆ. ಜನರಿಗೆ ಹೆದರಿದಿದ್ದರೂ ಯಮನಿಗಾದರೂ ನೀನು ಹೆದರಲೇ ಬೇಕಷ್ಟೇ!

**ಗ್ರಸಂತೇ ಬಡಿಶಂ ಮಚ್ಛಾಃ ತೇ ಸರ್ವೇ ಜ್ಞಾನವರ್ಜಿತಾಃ ।**
**ಜ್ಞಾನೀ ಚೇತ್ ಪ್ರಾಪ್ಯಬಡಿಶಂ ಭವಾನ್ ಕಸ್ಮಾತ್ ಗ್ರಸಿಷ್ಯಸಿ ॥**

ದೊಡ್ಡ ದೊಡ್ಡ ಮೀನುಗುಳು ಬಲಿ ಹಿಡಿಯಲು ಹಾಕಿದ ಗಾಳವನ್ನು ತಿನ್ನಲು ಹೋಗಿ ಬಂಧನಕ್ಕೆ ಒಳಗಾಗುತ್ತವೆ. ನೀನು ಜ್ಞಾನವುಳ್ಳ ಮಾನವನಾಗಿಯೂ ಆ ಗಾಳವನ್ನು ನುಂಗುವ ದುಃಸ್ಸಾಹಸವನ್ನು ಮಾಡಲು ಹೊರಟಿರುವೆಯಲ್ಲ ! ಏಕೆ?

**ವಿವೇಕಃಸ್ತ್ರಿಷುಲೋಕೇಶಂ ಸಂಪದಾಂ ಪರಮಂ ಪದಂ ।**
**ಅವಿವೇಕೋಕ್ಷು ಲೋಕಾನಾಮಾಪದಾಂ ಪರಮಂ ಪದಂ ॥**

ವಿವೇಕ ಹಾಗೂ ಸಾರಾಸಾರ ವಿಚಾರವು ಸಂಪತ್ತು ಸೌಭಾಗ್ಯಗಳ ಮುಖ್ಯ ಸ್ಥಾನ. ಆದರೆ ಅವಿವೇಕ, ದುಡುಕು ಮುಂತಾದವುಗಳು ಅಪತ್ತಿಗೆ ಕಾರಣವಾಗುತ್ತವೆ.

ಅವಳ ಮಾತನ್ನು ಕೇಳಿ ಕಾಮಾಂಧನಾದ ಮಾಧವ ಮತ್ತೆ ಮಾತನಾಡಿದ.

**ಮಾಧವ:-** ಪ್ರಿಯೇ, ನಿನ್ನ ಕುಡಿನೋಟದ ಬಾಣದ ಹೊಡೆತದಿಂವ ನನ್ನ ಮನಸ್ಸು ಜರ್ಜರಿತವಾಗಿದೆ. ಅದರಿಂದ ನನ್ನನ್ನು ಕಾಪಾಡು. ರಕ್ಷಿಸು ಎಂದು ನಿನಗೆ ಶರಣು ಬಂದಿದ್ದೇನೆ.

**ತಾವತ್ ಪ್ರಿಯತಮಾ ನಾರೀ ಯಾವತ್ ತಿಷ್ಠತಿ ಯೌವನಂ ।**
**ಮಲಿನಾಂ ನಲಿನೀಂ ರಾಜನ್ ಜೀರ್ಣಚ್ಯುತಾಂಬುಜಂ ಶುಷ್ಕಂ**
**ಜಾತು ಭಂಗೋ ನ ಗಚ್ಛತಿ ॥**

ಸುಂದರಿ, ಇದೀಗ ನಿನಗೆ ನವಯೌವನ. ಈ ತಾರುಣ್ಯ ಇರುವವರೆಗ ಮಾತ್ರ ನಿನ್ನನ್ನು ನನ್ನಂಥ ಯುವಕರು ಬಯಸುತ್ತಾರೆ. ಮುಂದೆ ನಿನ್ನನ್ನು ಯಾರೂ ಕೇಳುವದಿಲ್ಲ. ಬಾಡಿ ಒಣಗಿ ನೆಲಕ್ಕೆ ಬಿದ್ದ ತಾವರೆಯ ಎಳಿಗೆ ದುಂಬಿ ಎಂದೂ ಸುಳಿಯುವದಿಲ್ಲ.

**ಪ್ರಸೀದ ಹರಿಣೀನೇತ್ರೇ ರಕ್ಷ ಮಾಂ ಸೇವಕಂ ಸ್ವಕಂ ।**
**ತ್ವದ್ವಾಚಂ ನೀರಸಾಂ ಶ್ರುತ್ವಾ ಭಿದ್ಯತೇ ಹೃದಯಂ ಮಮ ॥**

ಚಿಗರೆ ಗಣ್ಣಿನ ಚೆಲುವೆಯೇ ನನ್ನ ಮೇಲೆ ಪ್ರಸನ್ನಳಾಗು. ನಾನು ನಿನ್ನ ಅಡಿಯಾಳು. ನಿನ್ನ ಈ ರುಕ್ಷವಾದ ನೀರಸ ಮಾತನ್ನು ಕೇಳಿ ನನ್ನ ಹೃದಯವೇ ಒಡೆದು ಹೋಗುತ್ತಲಿದೆ.

**ಚಂದ್ರಕಲಾ:-** ವೀರಶ್ರೇಷ್ಠ, ಶೋಕಿಸಬೇಡ. ನನ್ನ ಈ ಹಿತ ನುಡಿಯನ್ನು ಕೇಳು. ಅದರಿಂದ ನಿನ್ನ ಮನಸ್ಸಿನ ದುಗುಡವೆಲ್ಲವೂ ಕಳೆದು ಹೋಗುವುದು. ಸಮುದ್ರದಂಡೆಯಲ್ಲಿ ಪುರಂದರ ಪುರ ಎಂಬ ಒಂದು ಪಟ್ಟಣ ಇದೆ. ಅದು ಇರುವುದು ನಾವು ಇರುವ ಈ ಜಂಬೂ ದ್ವೀಪದಲ್ಲಿ ಅಲ್ಲ. ಇದರ ಆಚೆಗೆ ಇರುವ ಪ್ರಕ್ಷದ್ವೀಪದಲ್ಲಿ, ಆ ಪುರಂದರ ಪಟ್ಟಣವು ಇದೆ. ಆ ಪಟ್ಟಣದಲ್ಲಿ ಗುಣಾಕರ ಎಂಬ ಹೆಸರಿನ ರಾಜಶ್ರೇಷ್ಠನು ಇರುತ್ತಾನೆ. ಅವನಲ್ಲಿ ಇಲ್ಲದ ಸದ್ಗುಣಗಳೇ ಇಲ್ಲ. ಬಲದಲ್ಲಿಯಂತೂ ಅವನು ಬೆಂಕಿ, ಪ್ರತಾಪದಲ್ಲಿ ಸೂರ್ಯ,

ದಾನದಲ್ಲಿ ಕರ್ಣ. ಅವನ ಹೆಂಡತಿಯ ಹೆಸರು ಸುಶೀಲಾ. ಆರಿಸಿ ಇಟ್ಟಂತೆ ಇದೆ ಈ ಹೆಸರು ಅವಳ ಸದ್ಗುಣಕೆ. ಒಳ್ಳೊಳ್ಳೆ ಹೆಣ್ಣುಗಳಲ್ಲಿ ಇರಬೇಕಾದ ಎಲ್ಲ ಗುಣಗಳೂ ಅವಳಲ್ಲಿ ಪರ್ಯಾಪ್ತವಾಗಿ ಇರುತ್ತವೆ. ಅವಳು ತನ್ನ ಗಂಡನನ್ನು ಬರೀ ಸೌಂದರ್ಯದಿಂದ ಮಾತ್ರವಲ್ಲ ಸರ್ವ ಸದ್ಗುಣಗಳಿಂದ ಒಲಿಸಿಕೊಂಡಿದ್ದಾಳೆ. ದಯಾಶೀಲಳಾದ ಆ ಸುಶೀಲೆಯಿಂದ ಗುಣಾಕಾರ ಮಹರಾಜನಿಗೆ ಸುಲೋಚನಾ ಎಂಬ ಒಬ್ಬ ಕನ್ಯಾಮಣಿಯು ಹುಟ್ಟಿದ್ದಾಳೆ. ಅವಳು ತನ್ನ ತ್ರಿಭುವನ ಲೋಭನೀಯವಾದ ಲಾವಣ್ಯದಿಂದ ಎಲ್ಲ ಸುಂದರಿಯರನ್ನು ಗೆದ್ದಿದ್ದಾಳೆ. ಅವಳ, ರೂಪ, ಗುಣ ಶೀಲ ಸಚ್ಚಾರಿತ್ರ್ಯಗಳನ್ನು ವರ್ಣಿಸಲು ಈ ಭೂಲೋಕದಲ್ಲಿ ಯಾರು ತಾನೇ ಸಮರ್ಥರು ! ಮುಂದೆ ಬ್ರಹ್ಮದೇವನು ಅವಳ ಸೌಂದರ್ಯವನ್ನೇ ಆದರ್ಶವಾಗಿಟ್ಟುಕೊಂಡು ಬೇರೆ ಬೇರೆ ಚೆಲುವೆಯರನ್ನು ನಿರ್ಮಿಸುತ್ತಾನೆ. ನಾನು ಅವಳ ದಾಸಿ. ದೈವಯೋಗದಿಂದ ನಾನು ನಿನ್ನ ರಾಜ್ಯಕ್ಕೆ ಬಂದಿದ್ದೇನೆ.

**ತತ್ಸಮಾ ನ ಸುಂದರೀ ನಾಸ್ತಿ ತ್ವತ್ಸಮೋ ನಾಸ್ತಿ ಸುಂದರಃ ।**
**ಗೃಹಾಣ ತಾಂ ವಿವಾಹೇನ ಸ್ವರ್ಗಭೋಗಂ ಯದೀಚ್ಛಸಿ ॥**

ಈ ಸುಲೋಚನೆಯಂಥ ಸುಂದರ ಹೆಣ್ಣು ಈ ಪ್ರಪಂಚದಲ್ಲಿ ಇಲ್ಲ. ನಿನ್ನಂಥ ಸುಂದರ ಗಂಡು ಬೇರೆ ಇಲ್ಲ. ನಿನಗೆ ಸ್ವರ್ಗದ ಭೋಗಗಳನ್ನು ಇಲ್ಲಿಯೇ ಭೂಲೋಕದಲ್ಲಿ ಅನುಭವಿಸಬೇಕು ಎಂಬ ಇಚ್ಛೆಯಿದ್ದರೆ ಅವಳನ್ನು ಮದುವೆಯಾಗಿ ಮಡದಿಯೆಂದು ಸ್ವೀಕರಿಸು.

**ಜಂಬುಕೀಂ ಬಲವಾನ್ ಸಿಂಹೋ ವಿಹಾರಾಂಕ ಗತಾಮಪಿ ।**
**ಹಸ್ತಿನೀಂ ನ ಹಿ ಕಿಂ ಧತ್ತೆ ಯತ್ನತಂ ಪ್ರತಿಪತ್ತಯೇ ॥**

ಬಲಿಷ್ಠನಾದ ಸಿಂಹವು ನರಿಯು ಪಕ್ಕದಲ್ಲಿಯೇ ಇದ್ದರೂ ಬಿಟ್ಟು ಪ್ರಯತ್ನಮಾಡಿ ಹುಡುಕಾಡಿ ಆನೆಯನ್ನೇ ಹಿಡಿದು ಹೊಡೆಯುವದಿಲ್ಲವೇ !

**ಉದ್ಯೋಗೀ ಪುರುಷೋ ಲೋಕೇ ಲಭತೇ ಪರಮಾಂ ಶ್ರಿಯಂ ।**
**ಉದ್ಯೋಗೇನ ವಿನಾ ಬ್ರೂಹಿ ಕಿಂ ಕಾರ್ಯಂ ಭುವಿ ವಿದ್ಯತೇ ॥**

ಉದ್ಯೋಗ, ಪ್ರಯೋಗ ಪ್ರಯತ್ನಗಳನ್ನು ಮಾಡುವ ಮನುಷ್ಯನು ಈ ಲೋಕದಲ್ಲಿ ಐಶ್ವರ್ಯ ಹೊಂದುತ್ತಾನೆ. ಉದ್ಯೋಗ ಇಲ್ಲದಿದ್ದರೆ ಈ ಜಗತ್ತಿನಲ್ಲಿ ಯಾವ ಕಾರ್ಯವನ್ನು ಸಾಧಿಸಲಿಕ್ಕೆ ಆದೀತು?

ಅವಳ ಆ ಮಾತನ್ನು ಕೇಳಿ ಮಾಧವ ಆ ಚಂದ್ರ ಕಲೆಯ ಮೇಲಿನ ಮನಸ್ಸನ್ನು ತೆಗೆದು ಕಾಮರಹಿತನಾಗಿ ಮಾತನಾಡಿದ.

**ಮಾಧವ:-** ಕಮಲಮುಖಿ, ನಾನು ಆ ಭೂತಲದ ಅಪ್ಸರೆಯನ್ನು ಗುರುತಿಸುವದು ಹೇಗೆ? ಆ ಚೆಲುವೆಯ ಚಾರಿಮೆಯ ಚಿನ್ಹೆಗಳು ಯಾವುವು? ಮತ್ತು ಈ ಜಂಬೂದ್ವೀಪ ಹಾಗೂ ಪ್ರಕ್ಷದ್ವೀಪಗಳ ನಡುವೆ ಅಪಾರವಾದ ವಿಸ್ತಾರದಿಂದ ಘೋರ ಸಾಗರವು ಘೂರ್ಮಿಸುತ್ತಿದೆ. ಕ್ರುದ್ಧ ಮುದ್ರೆಯ ಈ ಸಮುದ್ರವನ್ನು ದಾಟುವದು ಹೇಗೆ? ಪ್ರಕ್ಷದ್ವೀಪಕ್ಕೆ ಪಕ್ಷಿಯಂತೆ ನಾನು ಹಾರಿ ಹೋಗಬೇಕೆ? ನಾನು ಪಕ್ಷಿಯೂ ಅಲ್ಲ. ಮಾಯಾವಿಯಾದ ಯಕ್ಷ ರಾಕ್ಷಸನೂ ಅಲ್ಲ. ಕಾಮಗಾಮಿಯಾದ ಸುರ ವೈಮಾನಿಕನೂ ಅಲ್ಲ. ಅಂದ ಬಳಿಕ ನನಗೆ

ದ್ವೀಪಾಂತರದಲ್ಲಿ ಇರುವ ಆ ಸುಂದರಿಯ ಸಂದರ್ಶನ ಆಗುವದು ಎಂದು? ಎಂತು? ಯಾವ ಚಿನ್ಹ ಲಕ್ಷಣಗಳಿಂದ ನಾನು ಅವಳನ್ನು ಗುರುತಿಸಲಿ?

**ಚಂದ್ರಕಲಾ:-** ಆ ತರಳೆಯ ಎಡ ನಡುವಿನ ಮೇಲೆ ಎಳ್ಳಿನಂಥ ಒಂದು ತಿಲಕ ಇದೆ. ಅದರಿಂದ ನೀನು ಆ ಸುಲೋಚನೆಯನ್ನು ಗುರ್ತಿಸಬಲ್ಲೆ. ರಾಜಕುಮಾರ. ನಿನ್ನ ಅರಮನೆಯ ಕುದುರೆ ಕಟ್ಟುವ ಲಾಯದಲ್ಲಿ ಒಂದು ವಿಲಕ್ಷಣ ವೇಗಗತಿಯ ತರುಣ ತುರಗ ಇದೆ. ಅದು ದೇವಲೋಕದ ಉಚ್ಚೈಶ್ರವ ಎಂಬ ಶ್ರೇಷ್ಠ ಕುದುರೆಯ ಖಾಸ ತಳಿ. ಅದು ಸರ್ವಗಾಮಿ. ಬೇಕಾದಲ್ಲಿ ಹೋಗಬಲ್ಲದು. ಅದರ ವೇಗ ಗರುಡನಿಗಿಂತ ಮಿಗಿಲಾದುದು. ಗಾಳಿವೇಗಕ್ಕೆ ಸಮಾನಾದದ್ದು. ಅದನ್ನು ನೀನು ಏರು. ಸಮುದ್ರವನ್ನು ಹಾರು. ಪ್ರಕ್ಷ ದ್ವೀಪಕ್ಕೆ ಸಾರು. ಹಿಡಿದ ಕಾರ್ಯದಲ್ಲಿ ಯಶಸ್ಸು ನಿನ್ನನ್ನು ಬಿಡದೇ ಬೆನ್ನುಹತ್ತಿ ಬರಲಿ. ನಿನ್ನ ಮುಂದಿನ ಮಾರ್ಗದ ತುಂಬ ಹೂವುಗಳನ್ನೇ ಹಾಸಿರಲಿ.

ಚಂದ್ರಕಲೆಯ ಮಾತುಗಳನ್ನು ಕೇಳಿದ ಮಾಧವ ಮನೋರಥದ ಸವಾರಿಯಾಗಿ ಮನೆಗೆ ಮರಳಿದ. ಅತ್ತ ಚಂದ್ರಕಲೆಯು ಆನಂದದಿಂದ ಮನೆಗೆ ತೆರಳಿದಳು. ಮಾಧವನ ತಲೆಯಲ್ಲಿ ಚಂದ್ರಕಲೆಯ ಮಾತುಗಳು ವಿಚಾರದ ಚಕ್ರಕ್ಕೆ ಚಾಲನೆಕೊಟ್ಟು ತಿರುಗುತ್ತಿದ್ದವು. ಕಿವಿಯಲ್ಲಿ ಆ ಸಾಧ್ವೀಮಣಿಯ ಮಧುರ ಕಂಠದ ನುಡಿಗಳು ಗುಣಗುಣಿಸುತ್ತಿದ್ದವು. ಅವನು ನೇರವಾಗಿ ಅರಮನೆಯ ಕುದುರೆಯ ಲಾಯಕ್ಕೆ ಬಂದು. ಅಲ್ಲಿ ನಿಲ್ಲಿಸಿದ ತನ್ನ ಎಲ್ಲ ತೇಜಿ ವಾಜಿಗಳಿಗೆ ಕೈ ಮುಗಿದು ಕುದುರೆಯ ಭಾಷೆಯಲ್ಲಿಯೇ ಕೇಳಿದ.

**ಮಾಧವ:-** ಅಶ್ವವಿಶ್ವದ ರತ್ನಗಳೇ, ನೀವೆಲ್ಲರೂ ಕುದುರೆ ಕುಲದ ಕಿರೀಟಗಳು. ನನಗೆ ಈಗ ಜಂಬೂದ್ವೀಪದಿಂದ ಪ್ಲಕ್ಷದ್ವೀಪಕ್ಕೆ ಹಾರಿ ಹೋಗಬೇಕಾಗಿದೆ. ನನ್ನನ್ನು ದ್ವೀಪಾಂತರಕ್ಕೆ ತಲುಪಿಸಬಲ್ಲ ತೇಜದ ತುರಂಗಪುಂಗವರು ನಿಮ್ಮಲ್ಲಿ ಯಾರಾದರೂ ಇರುವರೇ?

ರಾಜಕುಮಾರನ ಈ ಮಾತಿನ ಸವಾಲಿಗೆ ಉತ್ತರ ಕೊಡುವ ಶಕ್ತಿ ಯಾವ ಕುದುರೆಗಳಿಗೂ ಇರಲಿಲ್ಲ. ಅವೆಲ್ಲವೂ ಮುಖ ಕೆಳಗೆ ಹಾಕಿ ತಮ್ಮ ಅಸಮರ್ಥತೆಯನ್ನು ಸೂಚಿದವು.

ಆಗ ಎಲ್ಲ ಲಕ್ಷಣಗಳಿಂದ ಲಕ್ಷಿತವಾದ ಒಂದು ವಿಲಕ್ಷಣ ತರುಣ ಕುದುರೆ ಮಾಧವನ ಮುಂದೆ ಕೆನೆಯುತ್ತ ಬಂದು ನಿಂತಿತು. ಮತ್ತು ಅಶ್ವಭಾಷೆಯಲ್ಲಿಯೇ ಆ ಅರಸುಕುವರನಿಗೆ ಹೇಳಿತು. ''ರಾಜಪುತ್ರ ನಾನು ನಿನ್ನನ್ನು ಬೇಕಾದಲ್ಲಿಗೆ ಹೊತ್ತು ಹಾರಬಲ್ಲೆ. ದ್ವೀಪಾಂತರಕ್ಕೂ ಒಯ್ಯಬಲ್ಲೆ. ಆದರೆ ನನ್ನದೇ ಆದ ಕೆಲವು ದುಃಖಗಳು ನಿಯಮ ನಿಬಂಧನೆಗಳು ಇರುತ್ತವೆ. ಅದನ್ನು ಕೇಳು. ಈಗ ನನಗೆ ನಿಮ್ಮ ತಂದೆಯ ಈ ಅಶ್ವಶಾಲೆಯಲ್ಲಿ ಬೇರೆ ಕುದುರೆಗಳು ತಿಂದು ಬಿಟ್ಟ ಉಚ್ಛಿಷ್ಟ ಹುಲ್ಲಿನ ಎಸಳುಗಳನ್ನು ನನ್ನ ಮುಂದೆ ಎಸೆಯುತ್ತಾರೆ. ಕಗ್ಗಂಟಿನ ಸರಮಾಲೆಯಂತಿದ್ದ ಮುಗ್ಗ ಹಗ್ಗದಿಂದ ನನ್ನನು ಇಲ್ಲಿಯ ಗೂಟಕ್ಕೆ ಬಿಗಿದಿದ್ದಾರೆ. ಈ ನಿಮ್ಮ ಲಾಯಕ್ಕೆ ಬಂದ ಎಳೆಲಿನ ರಸಕವಳಗಳನ್ನು ಕನಸಿನಲ್ಲಿಯೂ ನಾನು ಕಂಡಿಲ್ಲ. ಅಂದಬಳಿಕ ಉಳಿದ ಭೋಗ ಅನುಭೋಗಗಳ ಸಮಾಚಾರವೆಲ್ಲಿ? ಹೀಗೆ ನನಗೆ ಹೊಟ್ಟೆಗಿಲ್ಲ, ಗೌರವವಿಲ್ಲ. ಆದರವಿಲ್ಲ. ಅಂದ ಬಳಿಕ ನಾನು ಈ ದೂರದ ಹಾರಾಟವನ್ನು ಹೇಗೆ ನಡೆಸಬೇಕು. ಕಟ್ಟಿಗೆಯಿಲ್ಲದೇ ಬರೀ ಎಣ್ಣೆ ತುಪ್ಪದಿಂದ ಬೆಂಕಿ ಎಷ್ಟು ಹೊತ್ತು ತಾನೆ ಉರಿದೀತು? ಇಲ್ಲಿರುವ ಎಲ್ಲ ಕುದುರೆಗಳ

ಮೇಲೆ ನಿಮ್ಮ ತಂದೆ ಬೇಕಾದಷ್ಟು ವಸ್ತ್ರ ಆಭರಣಗಳನ್ನು ಹೇರಿದ್ದಾರೆ. ಆದರೆ ಇವುಗಳಲ್ಲಿಯ ಯಾವ ಒಂದು ಕುದುರೆಯೂ ನನ್ನ ಎದುರು ನಿಲ್ಲುವ ಅಥವಾ ಹಿಂದೆ ಬರುವ ಇಲ್ಲವೇ ಮುಂದೆ ಹೋಗುವ ಶಕ್ತಿಯುಳ್ಳದ್ದಲ್ಲ. ನಾಯಿಗೆ ಎಷ್ಟು ಅಲಂಕಾರ ಮಾಡಿದರೆ ತಾನೇ ಸಿಂಹಕ್ಕೆ ಸಮನಾದೀತು? ನಾನು ಮಾತ್ರ ಎಲ್ಲ ಬೆಟ್ಟ, ನಡುಗಡ್ಡೆ, ಸಮುದ್ರ, ಆಕಾಶ, ನೆಲ, ಮುಗಿಲು ಎಲ್ಲಿ ಬೇಕಲ್ಲಿ ಕ್ಷಣ ಮಾತ್ರದಲ್ಲಿ ಹೋಗಬಲ್ಲೆ. ಬೇಕೆಂದರೆ ಭೂಪ್ರದಕ್ಷಿಣೆಯನ್ನೂ ಮಾಡಬಲ್ಲೆ.

**ಮಾಧವ:-** ''ಹಯೋತ್ತಮ, ನನ್ನ ತಂದೆ ಮಾಡಿದ ತಪ್ಪಿಗಾಗಿ ಕ್ಷಮೆ ಕೇಳುತ್ತೇನೆ. ಇಂದಿನಿಂದ ನಮ್ಮ ತಂದೆಯ ತುರಗದ ತಂಡಕ್ಕೆಲ್ಲ ನೀನೇ ಮುಖಂಡ. ಭೂಮಂಡಲದ ಅಶ್ವಮಂಡಲಕ್ಕೆ ನೀನೇ ಶಿಖಂಡ. ಉತ್ತಮ ಪುರುಷರು ಹೆರವರು ನೀಡಿದ ನೋವನ್ನು ನೆನೆಯುವದಿಲ್ಲ. ಅಪಕಾರವನ್ನು ಸ್ಮರಿಸುವದಿಲ್ಲ. ಮತ್ತೊಬ್ಬರು ಮಾಡಿದ ಅಪಕಾರ ಅಪರಾಧಗಳನ್ನು ಕ್ಷಮಿಸುವವರೇ ಉತ್ತಮ ಪುರುಷರು. ನೀರಿಗೆ ಬೆಂಕಿ ಹಚ್ಚಿ ತಾಪಕೊಟ್ಟು ಕುದಿಸಿದರೂ ಮರುಗಳಿಗೆಯಲ್ಲಿ ಅದು ಆರಿ ಹೋಗಿ ಶಾಂತವಾಗುವದು. ಕಬ್ಬು ತನ್ನನ್ನು ಕಚ್ಚಿ ಕಡಿದು ನುಚ್ಚುನೂರು ಮಾಡಿ ನುರಿಸುವವನಿಗೂ ಸಿಹಿಯನ್ನು ನೀಡಿ ಸಂತೋಷವುಂಟು ಮಾಡಿ ತೃಪ್ತಿಯ್ನೇ ಕೊಡುವದು''. ಹೀಗೆ ಹೇಳಿ ಮಾಧವ ಎಂಬ ಹೆಸರಿನ ರಾಜಕುಮಾರ ಆ ವಾಜಿವರೇಣ್ಯಕ್ಕೆ ವಂದಿಸಿದ. ಅದರ ದೈವೀಶಕ್ತಿ, ವಾಯುವೇಗ, ಗರುಡಗಮನಗಳನ್ನು ಅಭಿನಂದಿಸಿದ.

ಮುಂದೆ ಒಂದು ಶುಭಮುಹೂರ್ತದಲ್ಲಿ ಆ ತುರುಗೋತ್ತಮವನ್ನು ಮಾಧವ ತವಕದಿಂದ ಹೊರತಂದ ಆ ಕುದುರೆಯ ಬೆನ್ನ ಮೇಲೆ ಸವಾರಿಯಾದ. ಪ್ರಚೇಷ್ಟ ಎಂಬ ಆ ಮಾಧವನ ನಂಬಿಗೆಯ ಸೇವಕ ಒಡೆಯನನ್ನು ಹಿಂಬಾಲಿಸಿದ. ಅವರಿಬ್ಬರನ್ನು ಹೊತ್ತು ಅಶ್ವರತ್ನ ಗಕ್ಕನೇ ಗಗನಕ್ಕೆ ಹಾರಿತು. ಆ ಇಬ್ಬರೂ ಸವಾರರನ್ನು ಬೆನ್ನಮೇಲೆ ಹೊತ್ತು ಹಾಯಾಗಿ ಆಗಸದ ಅಂಗಳದಲ್ಲಿ ಈಸತೊಡಗಿತು. ಅಪಾರವಾದ ಪ್ರಕ್ಷುಬ್ಧ ಸಾಗರವನ್ನು ಲೀಲಾಜಾಲವಾಗಿ ಈಸಿದಂತೆ ಗಾಳಿ ಸೂಸಿದಂತೆ, ಮನಸ್ಸು ಹರಿದಂತೆ ಅಲ್ಲಿ ಬೀದಿಯಲ್ಲಿ ಹಾರಿ ದಾಟಿ ಪ್ರಕ್ಷದ್ವೀಪದಲ್ಲಿರುವ ಪುರಿ ಎಂಬ ಹೆಸರಿನ ನಗರಕ್ಕೆ ಬಂದು ಇಳಿಯಿತು.

ಅಲ್ಲಿ ಬೀದಿಯ ಎರಡೂ ಬದಿಗಳಲ್ಲಿ ಅರಮನೆ, ಸಿರಿಮನೆ, ಮಠ, ಮಂದಿರ, ಗೃಹ, ಗೋಪುರಗಳು ಸಾಲು ಸಾಲಾಗಿ ಒಂದಕ್ಕಿಂತ ಒಂದು ಮಿಗಿಲು ಮೇಲಾಗಿ ಮುಗಿಲಿಗೆ ಮುತ್ತಿಡುತ್ತ ನಿಂತುಕೊಂಡಿದ್ದವು. ಅಲ್ಲಿಯೇ ಗಂಧ ಚಂದನಗಳನ್ನು ಅರಮನೆಗೆ ಪ್ರತಿನಿತ್ಯವೂ ಸಲ್ಲಿಸಿ ಸೇವೆಗೈಯುವ ಗಂಧಿನೀ ಎಂಬುವ ದಾಸಿಯ ಮನೆ. ಅದರ ಬಾಗಿಲ ಬಳಿಯಲ್ಲಿಯೇ ಸುಗಂಧದ ಸರಬರಾಜು ಮಾಡುವ ಗಂಧಿನಿ ಎಂಬುವ ವೃದ್ಧ ವನಿತೆ ನಿಂತುಕೊಂಡಿದ್ದಳು. ಮಾಧವ ಅವಳ ಬಳಿ ಸಾರಿದ. ''ತಾಯಿ!'' ಎಂದ. ಅಷ್ಟಕ್ಕೆ ಆ ಹೆಣ್ಣು ಜೀವ ಕಣ್ಣರಳಿಸಿ ಇವನೆಡೆಗೆ ವಾತ್ಸಲ್ಯದಿಂದ ನೋಡಿತು. ಅದರಿಂದ ಉತ್ಸಾಹಿತನಾದ ಮಾಧವ ಹೇಳಿದ. ''ಅಮ್ಮ, ನಾನೊಬ್ಬ ದಾರಿ ತಪ್ಪಿ ಬಂದ ದಾರಿಕಾರ. ಬಹುದೂರದಿಂದ ಬಂದಿದ್ದೇನೆ. ನಾನು ಧನಿಕನಾದರೂ ಈ ಅಪರಿಚಿತ ನಗರದಲ್ಲಿ ಯಾವದು ಏನು ಎಲ್ಲಿ ಇದೆ ಎನ್ನುವದನ್ನು ತಿಳಿಯದೆ ತಬ್ಬಲಿಯಂತೆ ತಬ್ಬಿಬ್ಬಾಗಿದ್ದೇನೆ. ಇಂದು ಒಂದು ದಿನ ನನಗೆ ಆಶ್ರಯಕೊಡು. ನಿನ್ನ ಮನೆಯಲ್ಲಿಯೇ ಉಳಿದುಕೊಳ್ಳುತ್ತೇನೆ.'' ಎಂದು ಕೇಳಿಕೊಂಡ ವಿನಯದಿಂದ.

ಗಂಧಿನೀ ಸುಸ್ವಭಾವದವಳು, ಧಾರ್ಮಿಕ ವನಿತೆ, ಅಕಸ್ಮಿಕವಾಗಿ ಅತಿಥಿ ದೊರೆತದ್ದು ಅವಳ ಹೃದಯಕ್ಕೆ ಹರುಷ ತಂದಿತು. ಆನಂದದಿಂದ ಆ ಮಾಧವನನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ಸಮೀಚಿನವಾದ ಆದರ, ಉಪಚರ, ಊಟ ಅತಿಥ್ಯ, ನೀಡಿ ತೃಪ್ತಿ ಪಡಿಸಿದಳು. ಅಂದು ರಾತ್ರಿ ಮಾಧವ ತನ್ನ ಮುಂದಿನ ಕಾರ್ಯದ ಬಗ್ಗೆ ಚಿಂತೆ ಮಾಡುತ್ತಲೇ ಹೊತ್ತು ಕಳೆದ. ಬೆಳಗಾದ ಬಳಿಕ ಆ ಗಂಧಿನಿಯ ಎದುರು ತನ್ನ ಕಾರ್ಯವನ್ನು ಬೆಸಗೊಂಡ. ದ್ವೀಪಾಂತರದಿಂದ ತಾನು ಆ ದೇಶದ ರಾಜಕುಮಾರಿ ಸುಲೋಚನೆಗಾಗಿ ಹಾರಿ ಹಂಬಲಿಸಿ ಬಂದುದನ್ನು ಅವಳಿಗೆ ಬಿಂಬಿಸಿದ.

ಆದರೆ ಕಾಲ ಮಿಂಚಿತ್ತು. ರಾಜಕುಮಾರಿ ಸುಲೋಚನೆಯ ಮದುವೆ ಮರುದಿನವೇ ನಿಶ್ಚಿತವಾಗಿತ್ತು. ಇಂದು ಆ ಆರಸು ಕುವರಿಯಾದ ಸುಲೋಚನೆಗೆ ಸುಗಂದ ಸ್ನಾನ, ಗಂಧ ಚಂದನದ ವಿಲೇಪನ ಮುಂತಾದ ಪರಿಮಳ ಪೂಸುವ ಕಾರ್ಯವನ್ನು ಗಂಧಿನಿಯೇ ಪೂರೈಯಿಸುವವಳು ಇದ್ದಳು. ಈ ಸಮಾಚಾರ ಕೇಳಿ ಅಪಾರ ಸಾಗರವನ್ನು ದಾಟಿ ಬಂದ ಮಾಧವ ಅಗಾಧ ದುಃಖ ಸಾಗರದಲ್ಲಿಯೇ ಮುಳುಗಿದ ''ಈ ನನ್ನ ಕನಸಿನ ಕನ್ಯೆಗಾಗಿ ನಾನು ಮನೆ ಮಾರು ತೊರೆದು. ರಾಜ್ಯಕೋಶಗಳನ್ನು ಪರಿತ್ಯಜಿಸಿದೆ. ತಂದೆ, ತಾಯಿ ಬಂಧು, ಬಳಗ ಎಲ್ಲರನ್ನು ಬಿಟ್ಟು ಬಂದೆ. ದುರ್ಲಂಘ್ಯವಾದ ಘೋರಕಡಲನ್ನು ಧಾಟಿ ಧಾವಿಸಿ ಬಂದೆ. ಆದರೆ ಎಲ್ಲವೂ ವ್ಯರ್ಥ. ಇಂದೇ ಅವಳಿಗೆ ಅಧಿವಾಸನದ ಕಾರ್ಯಕ್ರಮ. ಈ ಗಂಧಿನಿಯು ಅವಳ ಸುಗಂಧದ ಅಭ್ಯಂಜನಕ್ಕಾಗಿ ಹೊರಟಿದ್ದಾಳೆ'' ಎಂದು ಹತಾಶನಾದ ಅವನು ಒಂದು ಪತ್ರದಲ್ಲಿ ತನ್ನ ಎದೆಯ ಅಳಲನ್ನು ತೋಡಿಕೊಂಡು'' ವಿಕ್ರಮ ರಾಜಕುಮಾರನಾದ ನಾನು ದ್ವೀಪಾಂತರದಿಂದ ಇಲ್ಲಿಗೆ ಬಂದಿದ್ದೆನೆ'' ಸಮಾಚಾರವನ್ನು ಬರೆದು ಒಂದು ಕಾಗದವನ್ನು ರಾಜಕುಮಾರಿಗೆ ಬರೆದು, ಮಡಚಿ ಇಟ್ಟ.

ಅದರಲ್ಲಿ ''ರಾಜಕನ್ಯೆ. ನಾನು ತಾಲಧ್ವಜದ ಮಹಾರಾಜನಾದ ವಿಕ್ರಮ ಭೂಪಾಲನ ಮಗ. ಮಾಧವ ಎಂದು ನನ್ನ ಹೆಸರು. ನಿನ್ನ ದಾಸಿಯಾದ ಚಂದ್ರಕಲೆ ನನಗೆ ನಿನ್ನ ರೂಪ ಗುಣಗಳ ಪರಿಚಯ ಮಾಡಿಕೊಟ್ಟಳು. ಅಂದಿನಿಂದ ನನ್ನ ಚಿತ್ತ ನಿನ್ನಲ್ಲಿ ನೆಟ್ಟಿದೆ. ದ್ವೀಪಾಂತರದಲ್ಲಿದ್ದರೂ ಹೃದಯಾಂತರದಲ್ಲಿ ನಿನ್ನ ಮೂರ್ತಿ ನನ್ನ ಆರಾಧ್ಯವಾದ ಪ್ರೇಮದ ಪುತ್ಥಳಿಯಾಗಿ ನಿರಂತರ ನೆಲಸಿ ನಿಂತಿದೆ. ನಿನ್ನನ್ನು ಪಡೆಯಬೇಕು, ನಿನ್ನ ಕೈಹಿಡಿಯಬೇಕು ಎಂಬ ಹಂಬಲವನ್ನು ಹೊತ್ತು ಇಲ್ಲಿಗೆ ಬಂದಿದ್ದೇನೆ. ನಿನ್ನ ಮೇಲಿನ ನನ್ನ ಪ್ರೇಮವೇ ನನ್ನನ್ನು ಸಪ್ತಸಾಗರಗಳನ್ನು ದಾಟಿಸಿ ಇಲ್ಲಿಗೆ ಸೆಳೆದು ತಂದಿದೆ. ಈಗಾದರೂ ನನ್ನನ್ನು ನೀನು ವರಿಸು. ನಿನ್ನನ್ನು ದೂರಿಂದ ಅರಸಿ ಬಂದವರನ್ನು ವರಿಸುವದೇ ಅರಸು ಕುವರಿಯಾದ ನಿನಗೆ ಉಚಿತ. ನಾನು ಮಾತ್ರ ನಿನ್ನ ಗುಣಗುಣಗಳನ್ನು ಚೆನ್ನಾಗಿ ಬಲ್ಲೆ. ನನ್ನಷ್ಟು ನಿನ್ನ ಶೀಲ ಸದ್ಗುಣಗಳನ್ನು ಅರಿತು ಗುರುತಿಸಿ ಗೌರವ ಭಾವ ತಳೆದು ಹಾಗು ನಿನ್ನ ಯೋಗ್ಯತೆಯನ್ನು ಚೆನ್ನಾಗಿ ತಿಳಿದ ವ್ಯಕ್ತಿ ಬೇರೆ ಯಾರೂ ಇಲ್ಲ. ತಾವರೆ ಬಳ್ಳಿಯ ಒಳ್ಳೆ ಗಂಧ ಗುಣಗಳನ್ನು ದುಂಬಿ ಮಾತ್ರ ತಿಳಿಯಬಲ್ಲದು. ಆ ತಾವರೆಯ ತಳದಲ್ಲಿಯೇ ಇರುವ ಕಪ್ಪೆಗೆ ಏನು ಗೊತ್ತು, ಆ ಸರೋಜನಿಯ ಗಂಧಾಢ್ಯತೆ? ಅಂತರಿಕ್ಷದ ಪಕ್ಷಸ್ಥಳದಲ್ಲಿ ಲಕ್ಷ ಲಕ್ಷ ನಕ್ಷತ್ರಗಳು ನೀಹಾರಿಕೆಗಳು ತೊಳೆದು ಬೆಳಗುತ್ತಿದ್ದರೂ ಕನ್ನೈದಿಲೆ ಬಿರಿಯುವದು ಚಂದ್ರನ ಉದಯವಾದಾಗ ಮಾತ್ರ.''

ಹೀಗೆ ಒಂದು ಪತ್ರ ಬರೆದು ತನ್ನ ಬಂಗಾರದ ಉಂಗುರವನ್ನು ಕೂಡ ಅದರ ಜತೆಗೆ ಇರಿಸಿ ಎರಡನ್ನು ಹೂವಿನ ಮಾಲೆಯಲ್ಲಿ ಹುದುಗಿಸಿ ಗಂಧಿನಿಯ ಕೈಯಲ್ಲಿ ಕೊಟ್ಟ. ರಾಜಕುಮಾರಿಗೆ ಇದನ್ನು ಒಯ್ದು ಕೊಡಲು ತಿಳಿಸಿದ. ಅವನ ಸೂಚನೆಯಂತೆ ಗಂಧಿನಿಯು ಗಂಧದ ಕರಂಡಕ, ಹೂವಿನಮಾಲೆ, ಹಾಗು ಉಳಿದ ಪರಿಮಳ ದ್ರವ್ಯಗಳನ್ನು ಹಿಡಿದುಕೊಂಡು ಅಂತಃಪುರಕ್ಕೆ ತೆರಳಿದಳು. ನೃಪನಂದಿನಿಯಾದ ಸುಲೋಚನೆಗೆ ಆ ಪರಿಮಳ ದ್ರವ್ಯವನ್ನು ಹೂವಿನ ಮಾಲೆಯನ್ನು ಇತ್ತು, ಆ ಗಂಧಿನಿಯು ಅಲ್ಲಿಯೇ ತುಸು ದೂರ ನಿಂತುಕೊಂಡಳು ತಲೆ ತಗ್ಗಿಸಿ. ಸುಲೋಚನೆ ಸುಗಂಧಿ ಹೂವಿನ ಪಕಳೆಗಳ ನಡುವೆ ಹೊನ್ನಿನ ಉಂಗುರ ಹಾಗು ಪತ್ರವನ್ನು ನೋಡಿ ಕೌತುಕ ಬರಿತಳಾಗಿ ಬಿಚ್ಚಿ ನೋಡಿದಳು. ಮೊದಲಿನಿಂದ ಕೊನೆಯವರೆಗೆ ರಸಿಕತೆ, ಕವಿತ್ವ ಪಾಂಡಿತ್ಯ ಇವುಗಳನ್ನು ಸೂಸುವ ಆ ಪತ್ರವನ್ನು ಒಮ್ಮೆ ಓದಿದಳು. ಹೃದಯ ಹೂವಿನಂತೆ ಹಿಗ್ಗಿತು. ಪತ್ರದಲ್ಲಿಯ ಪ್ರತಿಯೊಂದು ಅಕ್ಷರದಿಂದಲೂ ನಲುಮೆಯ ನಸುಕಂಪು ಎದ್ದು ಬರುತ್ತಿತ್ತು. ಮತ್ತೊಮ್ಮೆ ಅಚೂಲ ಮೂಲವಾಗಿ ಆ ಕಾಗದವನ್ನು ಓದಿದಳು. ವಿದುಷಿ ಮಣಿಯಾದ ಆ ರಾಜನಂದಿನಿಯು ಅದೇ ಪತ್ರದ ಹಿಂಬದಿಯಲ್ಲಿ ಆ ಮೂಲ ಪತ್ರದಲ್ಲಿ ಉಕ್ಕುವ ಅಕ್ಕರತೆಗೆ ತಕ್ಕುದಾದ ಉತ್ತರವನ್ನು ಬರೆದಳು.

''ವೀರವರೇಣ್ಯನಾದ ರಾಜಪುತ್ರ ! ನಿನ್ನ ಪತ್ರದಲ್ಲಿ ಒಕ್ಕಣಿಸಿದ ಅಭಿಪ್ರಾಯವನ್ನು ಓದಿ ಚೆನ್ನಾಗಿ ತಿಳಿದುಕೊಂಡೆ. ಆದರೆ ಈಗ ನಿನ್ನದು ಸಮಯ ಮೀರಿದ ಸಾಹಸ. ಇದು ನನ್ನ ತಂದೆಯ ಸಂಕಲ್ಪ. ಅದನ್ನು ನಾನು ಮೀರಲಾರೆ. ಇಷ್ಟೆಲ್ಲ ಸಿದ್ಧತೆಯಾದ ಬಳಿಕ ನೀನು ನನ್ನನ್ನು ವಿವಾಹವಾಗುವದು ಕಷ್ಟಸಾಧ್ಯ.

**ಕಾರ್ಯೇತಿ ದುಃಖ ಸಾಧ್ಯೇತು ಕಾರ್ಯೋ ನಾತಿಶ್ರಮೋ ಜನೈಃ ।**
**ಕಾರ್ಯೇ ಸಿದ್ಧೇಶ್ರಮೋ ನಸ್ಯಾದಸಿದ್ಧೇ ಶ್ರಮ ಏವಹಿ ॥**

ಅತೀದುಃಖದಿಂದ ಮಾತ್ರ ಸಾಧಿಸಬಹುದಾದ ಕಾರ್ಯದ ವಿಷಯದಲ್ಲಿ ಜನರು ಅತೀ ಶ್ರಮವನ್ನು ಮಾಡಬಾರದು. ಕಾರ್ಯ ಸಿದ್ಧಿಸಿದರೆ ಅದಕ್ಕೆಲ್ಲ ಮಾಡಿದ ಶ್ರಮವು ಪರಿಹಾರವಾಗುವದು. ಆದರೆ ಕಾರ್ಯವು ಸಿದ್ಧಿಸದಿದ್ದರೆ ಅದಕ್ಕಾಗಿ ಮಾಡಿದ ಶ್ರಮವೆಲ್ಲವೂ ವ್ಯರ್ಥ. ಶ್ರಮಪಟ್ಟಷ್ಟೇ ಆಗುವದು.

ಆದರೂ ನಿನಗೆ ಈ ವಿಷಯದಲ್ಲಿ ಒಂದು ಉಪಾಯವನ್ನು ಸೂಚಿಸುತ್ತೇನೆ. ಮಹಾ ಸಾಹಸ ಮಾಡಿದರೆ ಮಾತ್ರ ನನ್ನನ್ನು ಪಡೆಯಬಹುದು. ತೀರಪಾರಗಳಿಲ್ಲದ ಘೋರ ಸಮುದ್ರವನ್ನೇ ದಾಟಿ ಬಂದ ನಿನಗೆ ನನಗಾಗಿ ಮಹಾಸಾಹಸವನ್ನು ಮಾಡುವ ಅದೆಷ್ಟು, ಜಾಣ್ಮೆ, ಶಕ್ತಿ ಇದೆ ಎಂದು ನನ್ನ ನಂಬಿಕೆ. ನಾಳೆ ನನ್ನ ಮದುವೆಯ ಮುನ್ನ ನಾನು ಮದುವೆಯಾಗಲಿರುವ ವಿದ್ಯಾಧರನಿಗೆ ಪ್ರದಕ್ಷಿಣೆ ಹಾಕುತ್ತೇನೆ. ಅದಕ್ಕಾಗಿ ಬೆಲೆ ಬಾಳುವ ಬಟ್ಟೆ, ಬಂಗಾರ ಮತ್ತು ರತ್ನದ ಆಭರಣಗಳನ್ನು ತೊಟ್ಟುಕೊಂಡು ನಾನು ಆ ವಿದ್ಯಾಧರನ ಮುಂದೆ ಹೋಗುತ್ತೇನೆ. ನನ್ನ ಸ್ವಯಂವರದ ವಿಧಿಯನ್ನು ಹೇಳುತ್ತೇನೆ ಕೇಳು. ಮನೆಯಿಂದ ಸಾಲಂಕಾರ ಶೃಂಗಾರಿತಳಾದ ನಾನು ವೈಭವದಿಂದ ಹೊರಬಿದ್ದು ವಿವಾಹ ಮಂಟಪದ ಮುಂಭಾಗದಲ್ಲಿ ಬರುತ್ತೇನೆ. ಅಲ್ಲಿ ನನ್ನನ್ನು ಮದುವೆಯಾಗಬಯಸುವ ಅನೇಕ ವರ ಪ್ರವರರು ನಿಂತಿರುತ್ತಾರೆ. ಅವರಲ್ಲಿಯೇ ನನ್ನ ತಂದೆ ತನ್ನ ಮನಸ್ಸಿನಲ್ಲಿಯೇ ನನ್ನನ್ನು

ಕೊಡಬೇಕೆಂದುಕೊಂಡ ವಿದ್ಯಾಧರ ವರನೂ ಉಪಸ್ಥಿತನಿರುತ್ತಾನೆ. ಅವರೆಲ್ಲರ ಎದುರು ಸ್ವಯಂವರ ವೇಷದಲ್ಲಿ ಶೃಂಗಾರಿತಳಾದ ನಾನು ಹೋಗಿ ನಿಂತು ನನ್ನ ಎಡಗೈ ಮೇಲೆ ಮಾಡಿ ನಿಲ್ಲುತ್ತೇನೆ. ಆಗ ನನ್ನನ್ನು ಧೈರ್ಯದಿಂದ ಯಾವನು ಎತ್ತಿಕೊಂಡು ಹೋಗುತ್ತಾನೋ ಅವನು ನನ್ನ ಪತಿಯಾಗುತ್ತಾನೆ. ಇದು ಸತ್ಯ. ಇದಕ್ಕೆ ಯಾವ ಕಾಲಕ್ಕೂಯಾವದೇ ವ್ಯತ್ಯಯವಾಗುವದಿಲ್ಲ.' ಹೀಗೆ ಭೂಪತಿ ತನುಜೆಯಾದ ಸುಲೋಚನೆಯ ಪತ್ರ ಬರೆದು ಗಂಧಿನಿಯ ಕೈಯಲ್ಲಿ 'ರಾಜಕುಮಾರನಿಗೆ ಕೊಡು' ಎಂದು ಹೇಳಿ ಆ ಪತ್ರವನ್ನು ಇಟ್ಟಳು.

ರಾಜಕುಮಾರಿಯ ಆ ಪ್ರೇಮಪತ್ರವನ್ನು ಆ ಗಂಧನಿಯು ಮಾಧವನಿಗೆ ತಲುಪಿಸಿದಳು. ಅದರಿಂದ ಅವನಿಗೆ ನೆಮ್ಮದಿ ಉಂಟಾಯಿತು. ಅತ್ಯಂತ ಕುತೂಹಲದಿಂದ ಅವಳಿಗೆ ಮರಳಿ ಉತ್ತರ ಬರೆದ. ''ದೊಡ್ಡ ಕುಲದಲ್ಲಿ ಹುಟ್ಟಿ ಧನ್ಯಳಾದ ಕನ್ಯಾಮಣಿಯೇ ನೀನು ಪತ್ರದಲ್ಲಿ ಬರೆದದ್ದು ನಿಮ್ಮಂಥ ಪರಾಕ್ರಮಶಾಲಿಗಳಾದ ರಾಜಕುಲ ಕ್ಷಾತ್ರ ಕನ್ಯೆಯರಿಗೆ ಉಚಿತವಾಗಿದೆ. ನನಗೂ ಕೂಡ ಇದು ಅತ್ಯಂತ ಸಮ್ಮತಿ.''

ಗಂಧಿನಿಯು ಮತ್ತೆ ಆ ರಾಜಕುಮಾರನ ಪತ್ರವನ್ನು ಸುಲೋಚನಿಗೆ ಒಯ್ದು ಕೊಟ್ಟಳು. ಅವನ ಆ ಪ್ರತ್ಯುತ್ತರವನ್ನು ಓದಿ ಮಾಧವನ ಮನದ ಇಂಗಿತವನ್ನು ಅದರಿಂದ ತಿಳಿದು ಆನಂದ ತುಂಬಿದವಳಾದಳು ರಾಜಕುಮಾರಿ. ಅವನ ಸಮ್ಮತಿ ಪತ್ರವನ್ನು ಪಡೆದ ಬಳಿಕ ಹೊಸ ಚಿಂತೆಯು ಶುರುವಾಯಿತು ಸುಲೋಚನೆಗೆ. ''ದೇಶಾಂತರದಿಂದ ಬಂದು ನಾಳೆ ಸ್ವಯಂ ವರದಲ್ಲಿ ಮಿಳಿತರಾದ ವೀರ ರಾಜಕುಮಾರರ ಮಧ್ಯದಿಂದ ನನ್ನನ್ನು ಧೈರ್ಯದಿಂದ ಎತ್ತಿ ಕೊಂಡು ಹೋಗುವಂಥ ಸಾಹಸ ಮಾಡಬೇಕಾದರೆ ಮಾಧವ ಸಾಕ್ಷಾತ್ ರಮಾ ಮಾಧವನಾದ ಮಾಧವನೇ ಇರಬೇಕು. ದೇವೇಂದ್ರನಾದರೂ ಇರಬೇಕು. ಏನೇ ಆಗಲಿ ಇದೊಂದು ನನ್ನ ಹುಚ್ಚು ಸಾಹಸ. ವರನನ್ನು ನೋಡದೆ, ಅವನ ಶೀಲ, ಸ್ವಭಾವ, ರೂಪ, ಗುಣಗಳನ್ನು ತಿಳಿಯದೇ ನಾನು ಈಗ ಅವನನ್ನು ವರಿಸಲು ಹೊರಟಿದ್ದೇನೆ. ಒಮ್ಮೆ ಒಬ್ಬನನ್ನು ಪತಿಯನ್ನಾಗಿ ಮಾಡಿಕೊಂಡ ಬಳಿಕ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಅವನೊಡನೆ ನಾನು ಬಾಳಬೇಕು. ಆದುದರಿಂದ ನಾನು ಈ ವಿವಾಹಕ್ಕಿಂತ ಮೊದಲು ದ್ವೀಪಾಂತರದಿಂದ ಆಗಮಿಸಿದ ಆ ವೀರ ವಿಕ್ರಮ ಪುತ್ರನನ್ನು ಒಮ್ಮೆ ಕಣ್ಣಿನಿಂದ ನೋಡಬೇಕು.''

ಹೀಗೆ ವಿಚಾರಿಸಿ ಸುಲೋಚನೆಯು ಸುಗಂಧಿಸಲಿಲಸ್ನಾನದ ನೆಪದಿಂದ ಗೆಳತಿಯರಿಂದ ಒಡಗೂಡಿ ಗಂಧಿನಿಯ ಮನೆಗೆ ಹೋದಳು. ಅರಸುಪುತ್ರಿಯ ಹೃದ್ಗತವನ್ನು ತಿಳಿದು ಗಂಧಿಸಿಯು ಕೈ ಹಿಡಿದು ತಮ್ಮ ಮನೆಯ ಮಂಚದ ಮೇಲೆ ಮಲಗಿದ ಮಾಧವನನ್ನು ತೋರಿಸಿದಳು. ರಾಜಕುಮಾರಿ ನಿದ್ದೆ ಹತ್ತಿ ಮಲಗಿದ ಆ ಮುದ್ದು ಮೊಗದ ರಾಜಪುತ್ರನನ್ನು ನೋಡಿದಳು.

ರೂಪದಲ್ಲಿ ರಾಮ, ಕಾಂತಿಯಲ್ಲಿ ಕಾಮ, ಅಡಿಯಿಂದ ಮುಡಿಯವರಿಗೆ ಸರ್ವಾಂಗ ಸುಂದರ, ಆ ರಾಜಕುಮಾರನನ್ನು ಕಂಡು ರೋಮಾಂಚಿತಳಾದಳು ಸುಲೋಚನೆ. ಅವನನ್ನು ನಿರುಕಿಸಿ ನೋಡಿದ ಬಳಿಕ ಅವಳಿಗೆ ಅಲ್ಲಿಂದ ತನ್ನ ಕಣ್ಣನ್ನು ಕೀಳಲಿಕ್ಕೇ ಆಗಲಿಲ್ಲ. ''ಇವನೇನು ರತಿಪತಿಯೋ. ರುಕ್ಮಿಣೀ ಪತಿಯೋ ಪಾರ್ವತೀ ಪತಿಯೋ ಯಾವನಿರಬಹುದು? ಇಂಥ ಚಲುವು ಈ ಮಣ್ಣಿನಲ್ಲಿ ಹುಟ್ಟಿದ ಮನುಷ್ಯ ಪಿಂಡದಲ್ಲಿ ಇರಲಿಕ್ಕೆ ಶಕ್ಯವಿಲ್ಲ. ಇವನು ನನಗೆ ಪತಿಯಾಗಿ ದೊರೆತರೆ ನನ್ನ ಜೀವಿತ ಸಫಲ. ನನ್ನ ಜನ್ಮ

ಧನ್ಯ. ನನ್ನನ್ನು ಹುಟ್ಟಿಸುವ ಮೊದಲು ಬ್ರಹ್ಮನು ನನಗಾಗಿ ಈ ಚೆಲುವಿನ ಚಂದ್ರಾಮನನ್ನು ನಿರ್ಮಿಸಿರ ಬಹುದೇ! ಆ ವಿಧಾತನು ತನ್ನ ಮಾನವ ನಿರ್ಮಿತಿಯ ನೈಪುಣ್ಯ ಸರ್ವಸ್ವವನ್ನು ಎರಕ ಹಾಕಿ ಇಂಥ ಈ ಮಾಧವ ರೂಪದ ಮುದ್ದು ಮೊಗದ ಮೋಹನಾಂಗನನ್ನು ತಿದ್ದಿ ತೀಡಿ ಮಾಡಿ ಇಟ್ಟಂತೆ ಇದೆ. ಇವನೇ ನನ್ನ ನಿಜವಾದ ನಾಥ. ಇನ್ನು ಮೇಲೆ ನಾನು ಯಾವ ವರನನ್ನೂ ಅರಿಸುವದೂ ಇಲ್ಲ. ವರಿಸುವದೂ ಇಲ್ಲ.''

ಆ ಸುಲೋಚನೆಯು ಹೀಗೆ ತನ್ನ ಮನಸ್ಸಿನಲ್ಲಿ ನಿರ್ಧರಿಸಿ ಆ ಗಂಧಿನಿಯ ಮನೆಯಿಂದ ಹೊರಬಿದ್ದು ತನ್ನ ಮನೆಗೆ ಹೊರಡುವಾಗ, ಗಂಧಿನಿಯು ಅವಳನ್ನು ಉದ್ದೇಶಿಸಿ ಮಾತನಾಡಿದಳು.

**ಗಂಧಿನಿ:-** ಶುಭಾಂಗಿ, ನಿನ್ನ ಮನೋನಿರ್ಧಾರವು ಉಚಿತವೂ ಯೋಗ್ಯವೂ ಆಗಿದೆ. ನೀನು ಮನ ಮೆಚ್ಚಿ ವರಿಸಿದ ವಿಕ್ರಮ ಭೂಪಾಲನ ಪುತ್ರನಾದ ಈ ಮಾಧವನು ಸಾಕ್ಷಾತ್ ಪುರುಷೋತ್ತಮನ ಪ್ರತಿ ಪ್ರತಿಮೆಯಂತೆ ಕಂಗೊಳಿಸುತ್ತಾನೆ. ಇವನ ಮುಖದಲ್ಲಿನ ಉಲ್ಲಾಸ, ತುಂಟಾದ ಮಂದಹಾಸ, ಗಂಭೀರ ನಡಿಗೆ ವಿಶಿಷ್ಟವಾದ ಅಂಗಚೇಷ್ಟೆ. ಧೈರ್ಯ, ಗಾಂಭೀರ್ಯ, ವಿಲಕ್ಷಣವಾದ ವರ್ಚಸ್ಸು ದೇದೀಪ್ಯಮಾನವಾದ ದೇಹದ ದಿವ್ಯ ತೇಜಸ್ಸು, ಚಾರಿಮಾತಿಶಯದ ಚಲುವು ಎಲ್ಲವೂ ನಿದ್ರಾಭಂಗಿಯಲ್ಲಿಯೂ ಅತಿ ಮನೋಹರವಾಗಿ ಕಂಗೊಳಿಸುತ್ತಿವೆ. ರಾಜಕನ್ಯೆಯಾದ ನಿನ್ನನ್ನು ನೋಡಲಿಕ್ಕಾಗಿ ಅವನು ಕೈಕೊಂಡ ಸಾಹಸ ಯಾತ್ರೆಯ ಕೌತುಕದ ಕಥೆಯನ್ನು ಹೇಳುತ್ತೇನೆ ಕೇಳು.

ಗಂಧಿನಿಯು ಹೀಗೆ ರಾಜಕುಮಾರಿಗೆ ನುಡಿಯುತ್ತಿರುವಷ್ಟರಲ್ಲಿಯೇ ನಿದ್ದೆ ತಿಳಿದು ಎದ್ದು ಕುಳಿತ ಆ ರಾಜಕುಮಾರ. ನಿದ್ದೆಯ ಭರದಲ್ಲಿದ್ದಾಗ ಅವನಿಗೆ ಕನಸಿನಲ್ಲಿ ಕಾಣಿಸಿಕೊಂಡ ಕನ್ಯಾಮಣಿ ಈಗ ಎದುರಿನಲ್ಲಿಯೇ ಪ್ರತ್ಯಕ್ಷ. ಕಣ್ಣಗಲಿಸಿ ನೋಡಿದ. ಅದೇ ತನ್ನ ಸ್ವಪ್ನ ಸುಂದರಿ ಸಾಕಾರಳಾಗಿ ಕಣ್ಣೆದುರು ಕಾಣಿಸುತ್ತಿದ್ದಾಳೆ. ವಿನಯದಿಂದ ಅವನ ತಲೆ ತಾನಾಗಿ ಬಾಗಿತು. ನೆಟ್ಟ ದೃಷ್ಟಿಯಿಂದ ನೇರವಾಗಿ ಆ ಕನ್ಯೆಯನ್ನೇ ನಿಟ್ಟಿಸಿ ನೋಡುತ್ತಿರುವ ತನ್ನ ಕಣ್ಣಿನ ಚಾಪಲ್ಯಕ್ಕಾಗಿ ಅವನಿಗೇ ನಾಚಿಕೆಯಾಯಿತು. ಹೃದಯದಲ್ಲಿದ್ದ ಪ್ರೇಮದ ಒತ್ತಡಗಳನ್ನೆಲ್ಲ ತನ್ನ ಶಬ್ದದಲ್ಲಿ ಒತ್ತಿಕ್ಕಿ ಮೆಲು ನುಡಿಯಿಂದ ಮಾತನಾಡಿದ.

**ಮಾಧವ:-** ಕನ್ಯಾಮಣಿಯೇ, ಇದೀಗ ಸಾರ್ಥಕ ನನ್ನ ಸಾಗರಲಂಘನದ ಸಾಹಸ. ಸಫಲ ನನ್ನ ಬದುಕು. ಚಲುವು ಒಲವುಗಳನ್ನು ಸೂಸುವ ನಿನ್ನ ಮುಖ ಕಮಲವನ್ನು ನಾನು ಕಣ್ಣಾರೆ ಕಂಡೆ. ಕನ್ಯೆಯೇ, ನೀನು ನನ್ನನ್ನು 'ವರ' ಎಂದು ವರಿಸು. ಇದರಿಂದ ನನ್ನ ಯೌವನ ಸಫಲ. ಈ ಲೋಕದಲ್ಲಿ ನನ್ನ ಹೊರತು ನಿನಗೆ ಯೋಗ್ಯನಾದ ಪತಿ ಬೇರೊಬ್ಬನಿಲ್ಲ ಎಂದು ನಾನು ತಿಳಿದಿದ್ದೇನೆ.

**ಸುಲೋಚನಾ:-** ಬುದ್ಧಿಶಾಲಿಯಾದ ರಾಜಕುಮಾರ, ನನ್ನ ಅದೃಷ್ಟವಿದ್ದರೆ ಮಾತ್ರ ನೀನು ನನಗೆ ಪತಿಯಾಗಿ ದೊರಕುವೆ. ನಿನ್ನಂತಹ ವರ ದೊರಕಬೇಕಾದರೆ ಮಹತ್ತರವಾದ ಸೌಭಾಗ್ಯ ಒದಗಿ ಬಂದಿರಬೇಕು. ನಾನಂತೂ ನಿನ್ನನ್ನೇ ವರಿಸಬೇಕೆಂದು ಮನಸಾ ನಿರ್ಧರಿಸಿದ್ದೇನೆ. ಭಗವಂತ ನನ್ನ ಈ ಬಯಕೆಯನ್ನು ಪೂರ್ಣಮಾಡಿಸಲಿ. ಈಗಂತೂ ಮನೆಗೆ ಹೋಗುತ್ತೇನೆ.

**ಮಾಧವ:-** "ಹೋಗಬೇಡ ನಿಲ್ಲು" ಎಂದು ನಾನು ಹೇಳಿದರೆ ಗರ್ವದ ನುಡಿಯಾದೀತು. ಈಗಲೇ ನಿನ್ನನ್ನು ತಡೆಯಲು ನನಗೇನು ಅಧಿಕಾರ ಎಂದು ನಿನಗೆ ಎನಿಸಬಹುದು. "ಹೋಗು" ಎಂದು ಹೇಳಲಿಕ್ಕೆ ನಾಲಿಗೆ ಎತ್ತುವದಿಲ್ಲ. ಮನಸ್ಸು ಒಪ್ಪುವದಿಲ್ಲ. ಆದುದರಿಂದ ನಿನಗೆ ಸರಿ ದೋರಿದಂತೆ ಮಾಡು."

ಮಾಧವನ ಮಾತು ಕೇಳಿ ಹರುಷದಿಂದ ಪುಳಕಗೊಂಡಳು ಆ ರಾಜಕುಮಾರಿ ಮತ್ತು ಮಂದಹಾಸಗೈಯುತ್ತ ನುಡಿದಳು. "ನಾನು ಪತ್ರದಲ್ಲಿ ಬರೆದು ತಿಳಿಸಿದ್ದೇನಷ್ಟೇ ! ಅದರಂತೆ ಜಾಗರೂಕನಾಗಿ ಸಾಹಸಗೈಯಲು ಸಿದ್ಧನಾಗು". ಹೀಗೆ ಹೇಳಿ ಆ ಸುಲೋಚನೆಯು ತನ್ನ ಅಂತಃಪುರಕ್ಕೆ ತೆರಳಿದಳು.

ಇತ್ತ ಆ ರಾಜಕುಮಾರಿಯನ್ನು ಮದುವೆಯಾಗಬೇಕೆಂದು ಬಂದ ವಿದ್ಯಾಧರನು ಅಲಂಕೃತನಾಗಿ ನಿಂತುಕೊಂಡಿದ್ದ. ಅವನ ಪರಿವಾರದವರು ಪಟ್ಟೆ ಪೀತಾಂಬರಗಳನ್ನುಟ್ಟು ಗಂಧ ಹೂವು, ಅಲಂಕಾರಗಳಿಂದ ಅಲಂಕೃತರಾಗಿ ಎಲ್ಲರೂ ಉತ್ಸಾಹದಿಂದ ಹಾಡು ಕುಣಿತ, ವಿನೋದ, ಸಂತಸ ಸಂಭ್ರಮದಿಂದ ಕೋಲಾಹಲಗೈಯುತ್ತಲಿದ್ದರು. ಆ ವಿದ್ಯಾಧರನ ಮನೆಯ ಮುಂದೆ ಆನೆಗಳ ಜೂಲಾಟ, ಕುದುರೆಗಳ ಕೆನೆತ, ಮಿತ್ರರ ಹರ್ಷೋದ್ಗಾರ, ವಿಜಯ ಪತಾಕೆಗಳ ಹಾರಾಟ, ಮಂಗಳ ವಾದ್ಯಗಳ ಭೋರ್ಗರೆತ, ಮಿಂಚಿನ ಮೂರ್ತಿಗಳಂತಿದ್ದ ಚಂಚಲಾಕ್ಷಿಯರ ಅತ್ತಿತ್ತ ಸಂಚಲನ, ಮಧುರ ಸಂಗೀತ ಎಲ್ಲವೂ ವೈಭವದಿಂದ ನೆರವೇರುತ್ತಲಿದ್ದವು.

ಆಗ ಸುಲೋಚನೆಯು ತನ್ನ ಪರಿವಾರದಿಂದ ಕೂಡಿಕೊಂಡು ವಿವಾಹ ಸಮಾರಂಭಕ್ಕಾಗಿ ರಚಿಸಿದ ವೇದಿಕೆಯನ್ನು, ಸರ್ವಾಭರಣಭೂಷಿತಳಾಗಿ, ಶೃಂಗಾರರಸದ ಸಾಕ್ಷಾತ್ ಮೂರ್ತಿಯಂತೆ ಕಂಗೊಳಿಸುತ್ತ ಏರಿದಳು. ಇತ್ತ ವಿಕ್ರಮ ರಾಜಕುಮಾರನ ಮಗನಾದ ರಾಜುಕಮಾರನು ಅದೇ ನಿದ್ದೆ ತಿಳಿದು ಮೇಲೆ ಎದ್ದು ಕುಳಿತಿದ್ದ. ಅವನಿಗೆ ಅಂದೇ ರಾಜಕುಮಾರಿಯ ವಿವಾಹ ಎಂಬುದು ಮರೆತೇ ಹೋಗಿತ್ತು. ಸುಲೋಚನೆಯು ಮನೆಗೆ ಬಂದು ಎಚ್ಚರಿಕೆ ಕೊಟ್ಟು ಹೋಗಿದ್ದರೂ ಅವನು ಇನ್ನೂ ವಿಸ್ಮೃತಿಯ ಆಳದಲ್ಲಿಯೇ ಮುಳುಗಿ ಹೋಗಿದ್ದ. ರಾಜಕುಮಾರಿಯು ಹೇಳಿದ್ದ ಸಂಕೇತ ಸೂಚನೆಗಳನ್ನು ಮರೆತು ಮತ್ತೆ ಮತ್ತೆ ಸುಖ ನಿದ್ರೆಯಲ್ಲಿ ಅವನು ಮೈಮರೆಯುತ್ತಿದ್ದ. ಎದ್ದು ಕುಳಿತು ಮತ್ತೆ ಮಲಗಿ ಬಿಟ್ಟ ಆ ರಾಜಕುಮಾರ.

**"ನ ವೇದ ದೈವೇನ ವಿವಾಹ ಕಾರ್ಯಂ ಸುಲೋಚನಾಯಾಶ್ಚ ಸುಲೋಚನಾಯಾಃ ।**
**ವಿಧಾತೃಮಾಯಾ ಶತಮೋಹಿತಾನಾಂ ಕದಾಪಿ ನ ಸ್ಯಾತ್ ಭುವನೇ ಸುಖಾಪ್ತಿಃ ॥**

ಸುಂದರ ಕಣ್ಣಿನ ಆ ಸುಲೋಚನೆಯ ವಿವಾಹಕ್ಕಾಗಿ ಮಾಡಬೇಕಾದ ಕೃತ್ಯವೆಲ್ಲವೂ ಮಾಧವನಿಗೆ ದುರ್ದೈವದಿಂದ ಮರೆತು ಹೋಯಿತು. ಬ್ರಹ್ಮದೇವರ ಮಾಯೆಯಿಂದ ಮೋಹಿತರಾದವರಿಗೆ ಈ ಲೋಕಬಲ್ಲಿ ಸುಖವಾಗಿ ಕಾರ್ಯಗಳು ಕೈಗೂಡುವದಿಲ್ಲ.

"ತಸ್ಮಾಸ್ತು ಸಂಕೇತ ವಿಧಿಂ ಜನೋಯಂವಿಸ್ಮೃತ್ಯ ನಿದ್ರಾಮಭಜತ್ ಸುಖೇನ ಆ ರಾಜಕುಮಾರನು ದೈವೀಮಾಯಾಮೋಹಿತನಾಗಿ ಸಂಕೇತವನ್ನು ಮರೆತು ಎಚ್ಚರವಾದರೂ ಕೂಡ ಮತ್ತೆ ಮತ್ತೆ ಗಾಢ ನಿದ್ರಾಮೋಹಿತನಾಗಿ ತನ್ನ ಶಯ್ಯೆಯಲ್ಲಿಯೇ ನಿದ್ರೆ ಮಾಡುತ್ತಾ ಇದ್ದುಕೊಂಡ.

**ವನಂ ಪರಿತ್ಯಜ್ಯ ಕೃಶಾನುಭೀತ್ಯಾ ಜಲಂ ಪ್ರವಿಷ್ಟಾ ನಲಿನೀ ಸುಖಾರ್ಥಂ ।**
**ದಂದಹ್ಯತೇ ತತ್ರ ಹಿಮಾನಲೇನ ಯದ್ದಸ್ಯ ಕರ್ಮ ನ ತದನ್ಯಥಾ ಸ್ಯಾತ್ ॥**

ದಳ್ಳುರಿಯ ಹೆದರಿಕೆಯಿಂದ್ಮ ಕಾಡನ್ನು ಬಿಟ್ಟು ಕಮಲದ ಬಳ್ಳಿಯು ಸುಖವಾಗಿ ಇರಬಹುದು ಎಂದು ನೀರಿನಲ್ಲಿ ನೆಲಿಸಿದರೆ ದುರ್ದೈವವು ದಾವಾಗ್ನಿಯಂತೆಯೇ ಭೀಕರವಾದ ಮಂಜಿನ ಸೋನೆಯ ರೂಪದಿಂದ ಆ ಎಳೆ ಬಳ್ಳಿಯನ್ನು ನಾಶ ಮಾಡುತ್ತದೆ. ಬ್ರಹ್ಮ ಹಣೆಯಲ್ಲಿ ಬರೆದದ್ದು ಎಂದೂ ಬದಲಾಗಲಾರದು. ದುಷ್ಕರ್ಮವು ಭೋಗಿಸದೇ ಸವೆಯಲಾರದು.

''ವೇದಾದಿ ಶಾಸ್ತ್ರಮಖಿಲಂ ಪ್ರಪಠಂತು ಲೋಕಾಃ ಕುರ್ವಂತು ನಾಮ ಸತತಂ ಕ್ಷಿತಿಪಾಲಸೇವಾಮ್ ಉಗ್ರಂತಪಃ ಪ್ರತಿದಿನಂ ಪ್ರತಿಸಾಧಯಂತು ನಶ್ರೀಃ ತಥಾಪಿಚ ಭಜತ್ಯತಿಭಾಗ್ಯಹೀನಂ ।

ಜನರು ವೇದಗಳನ್ನು ಪಠಿಸಲಿ, ಶಾಸ್ತ್ರಗಳನ್ನು ಅಧ್ಯಯನ ಮಾಡಲಿ ಬೇಕಾದಷ್ಟು ಅಧ್ಯಯನ ಮಾಡಲಿ, ರಾಜಮಹಾರಾಜರ ಸೇವೆಯನ್ನು ಗೈಯುತ್ತಿರಲಿ. ಪ್ರತಿದಿನವೂ ಉಗ್ರತಪೋನುಷ್ಠಾನಗಳನ್ನು ಆಚರಿಸುತ್ತಿರಲಿ, ಭಾಗ್ಯ ಹೀನನಾಗಿದ್ದರೆ ಸಿರಿಯಾಗಲಿ ಸೌಭಾಗ್ಯವಾಗಲಿ ಅವನ ಸಮೀಪಕ್ಕೂ ಸುಳಿಯುವದಿಲ್ಲ.

**ಮಸ್ತಕೋ ಪರಿತಿಷ್ಠಂತಿ ದುಃಖಾನಿ ಚ ಸುಖಾನಿ ಚ ।**
**ಅನ್ಯಕಾಲೇ ಸಮಾಯಾಂತಿ ಹಠಾದನ್ಯಾನಿ ಸತ್ತಮ ॥**

ಸುಖದುಃಖ ಮಾನವನ ಮಸ್ತಕದ ಮೇಲೆ ಬ್ರಹ್ಮಹಣೆಯಲ್ಲಿ ಬರೆದಂತೆ ಸನ್ನಿಹಿತವಾಗಿರುತ್ತವೆ. ಬೇರೆ ಬೇರೆ ಕಾಲದಲ್ಲಿ ಅವನ ಕರ್ಮಾನುಸಾರವಾಗಿ ಅವು ಒದಗಿ ಬರುತ್ತವೆ. ಸುಖದ ಕಾಲದಲ್ಲಿ ಸುಖವೂ ದುಃಖದ ಕಾಲದಲ್ಲಿ ದುಃಖವೂ ಅವರವರ ಸಮಯಾನುಸಾರ ಒದಗಿ ಬರುತ್ತವೆ.

ತನ್ನ ಮೆಚ್ಚಿನ ಮನದನ್ನೆ ನೀಡಿದ ಅತ್ಯಂತ ಮಹತ್ವದ ತನ್ನ ಭವಿಷ್ಯದ ಬದುಕನ್ನೆ ಭಾಗ್ಯವಂತವನ್ನಾಗಿ ಮಾಡುವ ಸಂಕೇತವನ್ನು ಸಂಪೂರ್ಣವಾಗಿ ಮರೆತು ಗಾಢನಿದ್ರೆಯ ಗಾಢಾಲಿಂಗನದಲ್ಲಿ ಎಚ್ಚರವಿಲ್ಲದೆ ಮಲಗಿಬಿಟ್ಟ ಮಾಧವನನ್ನು ಕಂಡು ಅವನ ನಂಬಿಗೆ ಸೇವಕನಾದ ಪ್ರಚೇಷ್ಟನು ಚಿಂತಾಕ್ರಾಂತನಾದನು. ಅವನಿಗೆ ಈ ನೂತನ ಪ್ರಣಯಿಗಳ ಗುಪ್ತ ಸಂಕೇತದ ಅರಿವು ಪೂರ್ಣವಾಗಿತ್ತು. ಅವನು ತನ್ನ ಮನಸ್ಸಿನಲ್ಲಿಯೇ ಗಂಭೀರವಾಗಿ ವಿಚಾರಿಸತೊಡಗಿದ.

ಕರ್ತವ್ಯ ಕಾರ್ಯದಿಂದ ವಿಮುಖನಾದ ಈ ರಾಜಪುತ್ರನಿಗೆ ಧಿಕ್ಕಾರ. ರಾಜಕುಮಾರಿ ಹೇಳಿದ ಸಂಕೇತವನ್ನೆಲ್ಲ ಮರೆತು ನಿದ್ರಾಲೋಲನಾಗಿದ್ದಾನೆ ಇವನನ್ನು ನಂಬಿದ ರಾಜಪುತ್ರಿ ಎಷ್ಟು ಕಷ್ಟ ಪಡುವಳೋ ! ಅಲ್ಲಿ ಇವನು ದಾರಿಕಾದು ಆ ಕನ್ಯೆ ಎಷ್ಟು ಕಷ್ಟ ಕಾರ್ಪಣ್ಯಗಳನ್ನು ಅನುಭವಿಸುವಳೊ ! ಪಾಪಿಯೇ, ನೀನು ಹೀಗೆ ಇಲ್ಲಿ ನಿದ್ದೆಯಲ್ಲಿ ಬಿದ್ದುಕೊಂಡಿರು'' ನಾನು ಕುದುರೆಯನ್ನು ಹತ್ತಿಕೊಂಡು ನಿನಗೆ ಸಂಕೇತಮಾಡಿದ ಕನ್ಯಾಮಣಿಯನ್ನು ಎತ್ತಿಕೊಂಡು ಹೋಗುತ್ತೇನೆ. ಈ ಜಗತ್ತಿನಲ್ಲಿ ರತ್ನ ಮತ್ತು ಕನ್ಯಾರತ್ನ ಎರಡು ಅಪರೂಪ ಅವರೆಡೂ ದೊರಕುವದಾದರೆ ಯಾರಿಗೆ ಬೇಡ ! ನನಗೆ ಇಂಥ ಕನ್ಯಾರತ್ನ ಅಪಾರ ಅಶ್ವದೊಂದಿಗೆ ದೊರಕುವದಾದರೆ ಈ ನಿದ್ದೆ ಬಡಕ ಬುದ್ಧಿಗೇಡಿಯಾದ ಮಾಧವನನ್ನು ಪಡಕೊಂಡು ಏನು ಮಾಡುವದು? ಪುರುಷರು ರಾಜರ ಸೇವೆ ಮಾಡುವದು

ಏತಕ್ಕಾಗಿ? ಹಣಕ್ಕಾಗಿ ಅಲ್ಲವೆ ! ಆ ಹಣ ತಾನಾಗಿಯೇ ಬಂದರೆ ಈ ಕಠಿಣವಾದ ರಾಜ ಸೇವೆಯನ್ನು ಏಕೆ ಮಾಡಬೇಕು? ನಾನೇಕೆ ಈ ಮಾಧವನ ದುಃಖದಾಯಕವಾದ ಸೇವಾ ವೃತ್ತಿಯನ್ನು ಮಾಡಿ ಕೊರಗಬೇಕು?

ಪ್ರಚೇಷ್ಟನು ಹೀಗೆ ಆಲೋಚನೆಗೈಯ್ದು ವಿಕ್ರಮರಾಜಕುಮಾರನ ಶ್ರೇಷ್ಠವಾದ ಆ ಉಚ್ಚೈಶ್ರವಸ್ಸಿನ ಮರಿಯಾದ ತುರಂಗವನ್ನು ಆತುರದಿಂದ ಏರಿದ. ಅರೆ ನಿಮಿಷದಲ್ಲಿ ಆ ಅಶ್ವ ಆಗಸದ ಅಂಗಳಕ್ಕೆ ನೆಗೆಯಿತು. ಮುಗಿಲು ಮಾರ್ಗದಿಂದ ಕಣ್ಣಿನ ಎವೆ ಪಿಳುಕಿಸುವಷ್ಟರಲ್ಲಿ ರಾಜಕನ್ಯೆಯ ಮೆರವಣಿಗೆ ನಡೆದಲ್ಲಿಗೆ ಬಂದ. ಇವನು ಬಂದ ಸಮಯದಲ್ಲಿ ಸುಲೋಚನೆಯು ವಸ್ತ್ರಾಲಂಕಾರ ಭೂಷಣಗಳಿಂದ ಭೂಷಿತಳಾಗಿ ವರನನ್ನು ಪ್ರದಕ್ಷಿಣೆ ಮಾಡುತ್ತಿದ್ದಳು.

ಮಾಧವನಿಗೆ ಅವಳು ತಿಳಿಸಿದ ಸಂಕೇತವು ಪ್ರಚೇಷ್ಟನಿಗೆ ಚೆನ್ನಾಗಿ ನೆನಪಿದ್ದಿತು. ಅವಳು ಪ್ರದಕ್ಷಿಣೆ ಮುಗಿಸ ವರನಾದ ವಿಧ್ಯಾಧರನ ಎದುರು ತನ್ನ ಎಡತೋಳನ್ನು ಎತ್ತಿ ಅಚೀಚೆ ನೋಡುತ್ತಾ ನಿಂತುಕೊಂಡಳು. ತಕ್ಷಣದಲ್ಲಿ ಅಲ್ಲಿಗೆ ಮನೋಜವವಾದ ಆ ತುರಂಗಮನನ್ನು ಸವಾರಿಯಾಗಿ ಬಂದ ಪ್ರಚೇಷ್ಟನು ಕೈಯತ್ತಿ ನಿಂತ ಆ ಕನ್ಯಾಮಣಿಯನ್ನು ತನ್ನ ಕುದುರೆಯ ಮೇಲೆ ಕೂಡಿಸಿಕೊಂಡು ಅಲ್ಲಿಂದ ಒಮ್ಮೆಲೇ ಹಾರಿದ ನಭೋಮಾರ್ಗದಿಂದ. ನಿಮಿಷಾರ್ಧದಲ್ಲಿ ನಭೋಮಂಡಲಕ್ಕೆ ಏರಿ ವ್ಯೋಮ ಪಥದಿಂದ ಹಾರುತ್ತಾ ಕಾಂಚೀಪುರದಲ್ಲಿ ಬಂದು ಇಳಿದ.

ಅಲ್ಲಿಗೆ ಬಂದ ಬಳಿಕ ಅವನ ಭೀತಿ ದೂರವಾಗಿ ಮನಸ್ಸಿಗೆ ನೆಮ್ಮದಿ ತೋರಿ ಸಮಾಧಾನದ ನಿಟ್ಟುಸುರನ್ನು ಬಿಟ್ಟು ಅವನು ಮುಗುಳನಗೆ ನಗುತ್ತ ಸುಲೋಚನೆಯ ಕಮಲ ಕೋಮಲವಾದ ಹಸ್ತವನ್ನು ಹಿಡಿದು ಉಲ್ಲಾಸದಿಂದ ಹೇಳಿದ.

**ಪ್ರಚೇಷ್ಟ :** ''ರಾಜಕುಮಾರಿ, ಸಮುದ್ರದ ಅಂತರ ತೀರದಲ್ಲಿರುವ ಈ ನಗರ ಕಾಂಚೀ ಪುರ ಎಂದು ಎಲ್ಲೆಡೆಗೂ ಪ್ರಸಿದ್ಧವಾಗಿದೆ. ಎಲ್ಲ ಜನರಿಗೂ ಆನಂದದಾಯಕವಾದ ಈ ಪ್ರಖ್ಯಾತಪುರದ ಸೊಬಗನ್ನು ನೋಡು. ಇಲ್ಲಿ ನಿನಗೆ ಆ ವಿದ್ಯಾಧರನ ಅಥವಾ ಮಾಧವ ರಾಜಕುಮಾರನ ಭೀತಿಯೇ ಇಲ್ಲ. ಚಂದ್ರಮುಖೀ, ನನ್ನ ಹೃದಯದಲ್ಲಿ ಹೊತ್ತಿದ ಈ ಕಾಮಜ್ವಾಲೆಯನ್ನು ನಿನ್ನ ಆಲಿಂಗನದ ಅಮೃತ ಸಿಂಚನದಿಂದ ಶಮನಗೊಳಿಸು. ನಿನ್ನ ಮುಖ ಪುಂಡರೀಕದ ಬಂಡನ್ನು ಉಣ್ಣಲು ದುಂಬಿಯಂತೆ ನನ್ನ ಮನಸ್ಸು ಉತ್ಕಂಠಿತವಾಗಿದೆ. ಮದನನ ತೀಕ್ಷ್ಣ ಬಾಣಗಳ ಪ್ರಹಾರವನ್ನು ಪ್ರೇಯಸೀ ನಾನು ತಾಳಲಾರೆ.''

ಆ ಮೂರ್ಖ ಪ್ರಚೇಷ್ಟನ ಈ ಉನ್ಮತ್ತ ಪ್ರಲಾಪನ್ನು ಕೇಳಿ ಮೈಯೆಲ್ಲ ಉರಿದು ಹೋಯಿತು ಆ ಸುಲೋಚನೆಗೆ. ಆ ಉಚ್ಚೈಶ್ರವದಂತಹ ಕುದುರೆಯ ಮೇಲೆ ಕುಳಿತು ಬಂದವನು ಮಾಧವನೇ ಇರಬೇಕೆಂದು ಗಡಿಬಿಡಿಯಿಂದ ಅವನ ಮುಖವನ್ನೂ ನೋಡದೆ ಕುದುರೆಯ ಮೇಲೆ ಕುಳಿತಿದ್ದಳು. ಅವನೊಡನೆ ಆಗಸದ ಅಂತರಾಳದಲ್ಲಿ ಉಡ್ಡಾಣಗೈಯ್ದು ಈ ಕಂಚೀಪುರದವರೆಗೆ ಬಂದಿದ್ದಳು. ಇಲ್ಲಿ ಬಂದ ಬಳಿಕ ಅವಳಿಗೆ ಇಲ್ಲಿಗೆ ತನ್ನನ್ನು ಕರೆ ತಂದವ ವಿಕ್ರಮ ಅಲ್ಲ. ಅವನ ದುಷ್ಟ ಹಾಗು ವಿಶ್ವಾಸ ಘಾತಕನಾದ ಸೇವಕ ಪ್ರಚೇಷ್ಟ ಎಂದು ತಿಳಿದು ಸಂಕಟವಾಯಿತು. ಅವಳು ತನ್ನ ಮನಸ್ಸಿನಲ್ಲಿಯೇ ಪಶ್ಚಾತ್ತಾಪದಿಂದ ಬೇಯತೊಡಗಿದಳು.

''ಈ ಪ್ರಚೇಷ್ಟ ನಿಜವಾಗಿಯೂ ದುಷ್ಟಚೇಷ್ಟ. ದುರ್ದೈವದಿಂದ ನಾನು ಈ ಪಾಪಿಷ್ಟನ ಕೈಯಲ್ಲಿ ಸಿಕ್ಕಿಬಿದ್ದೆ. ನನ್ನ ಹಣೆಯಲ್ಲಿ ಏನೇನು ಬರೆದಿದೆಯೋ ಯಾರಿಗೆ ಗೊತ್ತು! ತಂದೆಯೆಲ್ಲಿ? ತಾಯಿಯೆಲ್ಲಿಯೊ! ವರನಾದ ವಿದ್ಯಾಧರನೆಲ್ಲಿಯೂ! ಎಲ್ಲ ಬಂಧು ಬಳಗ ಇಷ್ಟ ಮಿತ್ರ ಹಿತಚಿಂತಕರನ್ನು ಬಿಟ್ಟು ನಾನು ಈ ಪಾಪಿಷ್ಠನಾದ ಪ್ರಚೇಷ್ಟನಿಂದ ಬಲಾತ್ಕಾರದಿಂದ ಇಲ್ಲಿಗೆ ಎಳೆದು ತರಲ್ಪಟ್ಟೆ. ಧಿಃಕ್ಕಾರವಿರಲಿ ಇಂಥ ದುರಂತ ಘಟನೆಯನ್ನು ಸಂಭವಿಸುವಂತೆ ಮಾಡಿದ ವಿಧಿಯ ವಕ್ರತೆಗೆ.

**ಅಲಂ ಲೋಕಾಃ ಪ್ರಕುರ್ವಂತಿ ಗರ್ವಂ ಜಗತಿ ಸರ್ವದಾ ।**
**ವೇತ್ತಿ ಛೇತ್ತುಂ ಗರ್ವವೃಕ್ಷಂ ವಿಧಾತಾ ಘಟಿನಾಸಿನಾ**

ಈ ಜಗತ್ತಿನಲ್ಲಿ ಜನರು ಯಾವಾಗಲೂ ಗರ್ವದಿಂದ ಉಬ್ಬಿ ಕೊಬ್ಬಿ ಮೆರೆಯುತ್ತಾರೆ. ಆದರೆ ದೈವಕ್ಕೆ ಮಾತ್ರ ಚೆನ್ನಾಗಿ ಗೊತ್ತು ಈ ಗರ್ವದ ಗಿಡವನ್ನು ಬುಡಸಹಿತವಾಗಿ ಹೇಗೆ ಕಡಿಯಬೇಕು ಎಂಬುದು.

**ತಥಾಪಿ ವಿದೇಧ್ಯೈರ್ಯಂ ನಿರ್ದಯತ್ವಂ ಚ ತ-ತ್ಕ್ರಿಯಾ ।**
**ಉಪಾಯಾಶ್ಚೇತಿ ಚತ್ವಾರಃ ಪ್ರಶಸ್ತಾ ದೀದರ್ಘರ್ಶಿಭಿಃ ॥**

ಮನುಷ್ಯನಿಗೆ ಆಕಸ್ಮಿಕವಾಗಿ ಆಪತ್ತು ಒದಗಿದರೆ ಧೈರ್ಯ ಇರಬೇಕು. ಭೀತಿಯನ್ನೂ ತೊರೆಯಬೇಕು. ಹಿಡಿದ ಕಾರ್ಯಕ್ಕಾಗಿ ನಿರಂತರ ಪ್ರಯತ್ನವನ್ನು ಮಾಡಬೇಕು. ಮತ್ತು ಅದಕ್ಕಾಗಿ ಹೊಸ ಹೊಸ ಹಂಚಿಕೆಗಳನ್ನು ಹುಡುಕಿ ದೂರ ದೃಷ್ಟಿಯಿಂದ ವಿಚಾರ ಮಾಡಿ ಅದಕ್ಕೆ ಉಪಾಯಗಳನ್ನು ಚಿಂತಿಸಬೇಕು. ಹೀಗೆ ನಾಲ್ಕು ಬಗೆಯಿಂದ ಪ್ರಯತ್ನವನ್ನು ಮಾಡಿದರೆ ಎಂಥ ಕಾರ್ಯವಾದರೂ ಕೈಗೂಡುವದು.

ಆ ಸುಲೋಚನೆಯು ಹೀಗೆ ಮನಸ್ಸಿನಲ್ಲಿ ಆಲೋಚಿಸಿ ತನ್ನ ಮನದ ಇಂಗಿತವನ್ನು ಆ ಪ್ರಚೇಷ್ಟನಿಗೆ ತೋರಗೊಡದೆ ಮೃದು ಧ್ವನಿಯಿಂದ ಮಾತನಾಡಿದಳು. ಆ ಸುಲೋಚನೆಯು ಬರೀ ಸುಂದರಿ ಮಾತ್ರ ಆಗಿರಲಿಲ್ಲ. ಅಷ್ಟೇ ಚತುರಳೂ, ಚಾಣಾಕ್ಷಳೂ ಆಗಿದ್ದಳು. ತಾನು ಈಗ ಏಕಾಕಿನಿಯಾಗಿ ಆ ಕಾಮಿಯಾದ ಪ್ರಚೇಷ್ಟನ ಕೈಯಲ್ಲಿ ಸಿಕ್ಕು ಬಿದ್ದದ್ದರಿಂದ ಈಗ ಒಮ್ಮೆಲೆ ಅವನನ್ನು ಧಿಕ್ಕರಿಸಿ ಹಳಿದು ನುಡಿದರೆ ಅವನು ಈಗಲೇ ತನ್ನನ್ನು ಬಲಾತ್ಕರಿಸಿ ಭೋಗಿಸಬಹುದು. ಆದುದರಿಂದ ಯುಕ್ತಿಯಿಂದಲೇ ತನ್ನ ರೂಪ ಸಿರಿಗೆ ಮರುಳಾದ ಈ ಕ್ರೂರ ಈ ದುರುಳನ ಕೈಯಿಂದ ಪಾರಾಗಬೇಕೆಂದು ನಿರ್ಧರಿಸಿ , ಸೌಮ್ಯ, ಶಾಂತ ಸರಸಾಲಾಪದ ಜಾಡಿನಲ್ಲಿಯೇ ನುಡಿದಳು.

**ಸುಲೋಚನೆ:-** ವೀರಶ್ರೇಷ್ಠ ! ತುಸು ತಾಳು. ಸೈರಣೆ ಸರ್ವ ಕಾರ್ಯ ಸಾಧನೆಗೆ ಕಾರಣವೂ ಆಗಬಹುದು. ನಾನು ಇನ್ನೂ ಕನ್ಯೆ. ವಿವಾಹಿತಳಾಗದ ನನ್ನನ್ನು ಮೋಸದಿಂದ ಆಲಿಂಗಿಸಿ ನೀನು ಇಹ ಪರಗಳಲ್ಲಿ ದುರ್ಗತಿಯನ್ನು ಏಕೆ ಹೊಂದುವೆ? ನಿನಗೆ ನನ್ನ ಮೇಲೆ ನಿಜವಾದ ಪ್ರೀತಿಯಿದ್ದರೆ ನನ್ನನ್ನು ಶಾಸ್ತ್ರೋಕ್ತ ವಿಧಿಯಂದ ಮದುವೆ ಮಾಡಿಕೋ. ಅನಂತರ ನಾನು ದಾಸಿಯಂತೆ ನಿನ್ನ ಸೇವೆ ಮಾಡುವೆ. ನೀನೇ ನನಗೆ ಪಂಚಪ್ರಾಣ, ಜೀವ ಮಿತ್ರ. ನೀನೇ ನನಗೆ ಭೂಷಣ ಸರ್ವಸ್ವ, ನೀನೇ ಎನಗೆ ಬಂಧು ಬಳಗ. ಆಪ್ತ ಇಷ್ಟ ಪ್ರೇಷ್ಠ. ವಿವಾಹಿತನಾದ ಪತಿಯೇ ಸತೀಮಣಿಗೆ ಅನನ್ಯ ಗತಿ, ಏಕೈಕಾಧಾರ, ಎನ್ನುವದನ್ನು ನೀನು ಅರಿಯೆಯಾ ! ನಿನಗೆ ಅಷ್ಟು ಆತುರವಿದ್ದರೆ ಈಗಲೇ ಮದುವೆಯ ಎಲ್ಲಾ ಸೀದ

ಸಾಹಿತ್ಯ ಸಲಕರಣೆಗಳನ್ನು ತೆಗೆದುಕೊಂಡು ಬಾ. ನಾನು ನಿನ್ನ ಪ್ರಾಣಿಗ್ರಹಣವನ್ನು ಮಾಡಲು ಸಿದ್ಧಳಾಗಿ ನಿಂತಿದ್ದೇನೆ. ಬೇಗೆ ಸಿದ್ಧತೆ ಮಾಡು. ಆಲಸ್ಯ ಮಾಡಬೇಡ.

ಸುಲೋಚನೆಯ ಈ ಮಾತು ಬೋರೆ ಹಣ್ಣಿನತೆ ಒಳಗೆ ಬಿರುಸಾಗಿದ್ದರೂ ಮೇಲೆ ಮೇಲೆ ಮೃದು ಮಧುರವಾಗಿತ್ತು. ಅವಳ ಮಾತಿಗೆ ಮೋಹಿತನಾದ ಪ್ರಚೇಷ್ಟನು ತಲೆದೂಗಿ ಪರಮಾನಂದ ಭರಿತನಾದನು. ಆ ಶ್ರೇಷ್ಠವಾದ ಕುದುರೆಯನ್ನು ಮತ್ತು ಆ ಕನ್ಯೆಯನ್ನು ಒಂದೆಡೆಲ್ಲಿ ಕೂಡಿಸಿ ಅವಳ ಕೈಯಲ್ಲಿಯ ಬಂಗಾರದ ಕಂಕಣವನ್ನು ತೆಗೆದುಕೊಂಡು ನಗರಕ್ಕೆ ಭರದಿಂದ ತೆರಳಿದ. ಪ್ರಚೇಷ್ಟನು ಅಲ್ಲಿಂದ ಮದುವೆಯ ಸಾಮಗ್ರಿ ಸಲಕರಣೆಗಳನ್ನು ತರಲಿಕ್ಕಾಗಿ ಉತ್ಸಾಹದಿಂದ ಹೊರಟು ಹೋದ. ಬಳಿಕ ಏಕಾಕಿನಿಯಾಗಿ ಅಲ್ಲಿ ಕುಳಿತ ಸುಲೋಚನೆಯು ತನ್ನ ಮನಸ್ಸಿನಲ್ಲಿಯೇ ತನ್ನ ಸೌಭಾಗ್ಯವನ್ನು ಪ್ರಶಂಶಿಸಿದಳು. ಯಾಕೆಂದರೆ ಈ ಮೂರ್ಖನಾದ ಪ್ರಚೇಷ್ಠನು ತನ್ನ ಆ ಕುದುರೆಯನ್ನು ಬಿಟ್ಟು ಹೋದದು ಅವಳಿಗೆ ನಿಜವಾಯೂ ಹಿಗ್ಗನ್ನುಂಟು ಮಾಡಿತ್ತು. ಆದರೆ ಅವಳಿಗೆ ಮುಂದೆ ಏನು ಮಾಡಬೇಕು. ಎಲ್ಲಿ ಇರಬೇಕು. ಈ ಸಂಕಟದಿಂದ ತಾನು ಹೇಗೆ ಪಾರಾಗಬೇಕು ಎಂದು ಮುಂತಾಗಿ ಯಾವದೂ ಅವಳಿಗೆ ತಿಳಿಯದಂತಾಗಿತ್ತು. ತನ್ನ ಮನಸ್ಸಿನಲ್ಲಿ ಈಗ ತನಗೆ ಒದಗಿದ ದುರ್ಧರವಾದ ಸಂಕಟದಿಂದ ಹೇಗೆ ಪಾರಾಗಬೇಕು ಎಂದು ಯೋಚಿಸತೊಡಗಿದಳು.

''ಈ ಕುತ್ತಿನಿಂದ ಪಾರಾಗಲು ನಾನು ಏನಾದರೂ ಉಪಾಯವನ್ನು ಮಾಡಲೇಬೇಕು. ಇಲ್ಲದಿದ್ದರೆ ನಾನು ಈ ಆಪತ್ತಿನಿಂದ ಪಾರಾಗಿ ಬದುಕಿ ಉಳಿಯಲಾರೆ. ಇದರಿಂದ ಬದುಕಿ ಉಳಿಯಲು ಯಾವ ಹಂಚಿಕೆಯೂ ಹೊಳೆಯಲೊಲ್ಲದು. ಇದರಿಂದ ನಾನು ಸಾವಿನ ಬಾಯಲ್ಲಿ ಬೀಳುವದು ನಿಶ್ಚಿತ. ಸಾಯುವದೇ ಆದರೆ ಯಾವದಾದರೂ ಪುಣ್ಯ ತೀರ್ಥಕ್ಕೆ ಹೋಗಿ ಅಲ್ಲಿ ದೇಹ ತ್ಯಾಗ ಮಾಡಿದರೆ ಮುಂದಿನ ಜನ್ಮದಲ್ಲಿಯಾದರೂ ನನಗೆ ಶ್ರೇಯಸ್ಸು ಉಂಟಾಗುವದು. ನಾನು ಮರಣ ಹೊಂದಿದರೆ ನನ್ನ ವಿರಹದ ಕೊರಗಿನಿಂದ ನನ್ನನ್ನು ಕಾಮಿಸುವ ಪ್ರಚೇಷ್ಟ. ಪ್ರೇಮಿಸುವ ಮಾಧವ, ಪ್ರೀತಿಸುವ ವಿದ್ಯಾಧರ ಈ ಮೂವರೂ ಮರಣಹೊಂದುವರು. ಇದರಲ್ಲಿ ಸಂದೇಹವಿಲ್ಲ. ನಾನು ಬದುಕಿ ಉಳಿದರೆ ಈ ಮೂವರೂ ಬದುಕಿ ಉಳಿಯುವರು. ನಾನು ಮರಣಹೊಂದಿದರೆ ಈ ಮೂವರು ಸತ್ತು ಆ ಮೂವರ ಮೃತ್ಯುವಿಗೆ ನಾನು ಕಾರಣಳಾಗಿ ಮನುಷ್ಯವಧೆ ಮಾಡಿದ ಪಾಪಕ್ಕೆ ಗುರಿಯಾಗುವೆನು. ಆದ್ದರಿಂದ ನಾನು ಸಾಯದೇ ಬದುಕಿ ಉಳಿಯಬೇಕು. ಯಾವದಾದರೂ ಪುಣ್ಯತೀರ್ಥಕ್ಕೆ ಹೋಗಿ ಶ್ರೀಹರಿಯನ್ನು ಉದ್ದೇಶಿಸಿ ತಪಸ್ಸನ್ನು ಮಾಡಬೇಕು. ನನ್ನ ಪೂಜೆ, ಆರಾಧನೆಗಳಿಗೆ ಪ್ರಸನ್ನನಾದರೆ ನನಗೂ ಎಲ್ಲ ರೀತಿಯಿಂದ ಕಲ್ಯಾಣ ಉಂಟಾಗುವದು. ಹಾಗೆ ಮಾಡದೆ ನಾನು ನನಗೆ ಈಗ ಒದಗಿದ ಸಂಕಟ ಜಾಲಗಳಿಗೆ ಹೆದರಿ ಆತ್ಮಹತ್ಯೆ ಮಾಡಿಕೊಂಡರೆ ನಾನೂ ಹಾಳಾಗುವೆ. ಇವರೆಲ್ಲರನ್ನೂ ಸಂಹಾರ ಮಾಡಿದ ಪಾಪವನ್ನು ಪದರಿನಲ್ಲಿ ಕಟ್ಟಿಕೊಳ್ಳುವೆ. ಆತ್ಮಹತ್ಯೆಯ ಪಾಪದಿಂದಲೂ ಮುಂದೆ ಅನೇಕ ವರ್ಷ ನರಕದಲ್ಲಿ ನರಳುವೆ. ಆದುದರಿಂದ ನಾನು ಸಾಯಬಾರದು. ಬದುಕಿ ಉಳಿದು ಭಗವಂತನ ಆರಾಧನೆಯನ್ನು ಬಿಡಬಾರದು. ವ್ಯರ್ಥವಾಗಿ ಸತ್ತರೆ ಏನು ಬಂದಂತಾಯಿತು.

**ಪ್ರಾಣೇಷುಚ ವಿನಷ್ಟೇಷು ಸರ್ವಮೇವ ವಿನಶ್ಯತಿ ।**
**ತೇಷು ಸ್ಥಿತೇಷು ಸಕಲಂ ಸ್ತೋಕಸ್ತೋಕೇನ ಸಿದ್ಧ್ಯತಿ ॥**

ಪ್ರಾಣ ಹೋದರೆ ಎಲ್ಲವೂ ಹೋದಂತೆ. ಬದುಕಿ ಇದ್ದರೆ ಕ್ರಮವಾಗಿ ಎಲ್ಲವೂ ತಾನಾಗಿ ಸಿದ್ಧಿಸುವದು.

**ನಿಶಾವಶೇಷೇ ನಲಿನೀ ಹಿಮಾಕರೇ ದೂರೀಕೃತೇ ಚಂಡಕರೇಣ ಭಾಸ್ವತಾ।**
**ಸುಗಂಧ ಪುಷ್ಪ ಪ್ರಕರಾತಿಸುಂದರೀ ನಾಪ್ನೋತಿ ಕಿಂಭೃಂಗವರಸ್ಯ ಸಂಗಮಂ॥**

ರಾತ್ರಿಯ ಕೊನೆಯಲ್ಲಿ ಚಂದ್ರನು ಅಸ್ತನಾದ ಬಳಿಕ ಸೂರ್ಯನ ಪ್ರಚಂಡ ಕಿರಗಣಗಳಿಂದ ಹಿಮವೆಲ್ಲವೂ ನಷ್ಟವಾದನಂತರ ಸುಗಂಧವಾದ ಪುಷ್ಪ ಸಂದೋಹದಿಂದ ಸುಂದರವಾಗಿ ಕಂಗೊಳಿಸುವ ಕಮಲಿನಿಯು ಭೃಂಗಶ್ರೇಷ್ಠನ ಹೃದಯಂಗಮವಾದ ಸಂಗಮವನ್ನು ಹೊಂದುವದಿಲ್ಲವೇ?''

ಹೀಗೆ ಮನಸ್ಸಿನಲ್ಲಿ ವಿಚಾರಿಸಿ ಆ ಸುಲೋಚನೆಯು ಅಲ್ಲಿಯೇ ಪ್ರಚೇಷ್ಟನು ಬಿಟ್ಟು ಹೋದ ಆ ಶ್ರೇಷ್ಠ ಕುದುರೆಯನ್ನು ಆರೋಹಣ ಮಾಡಿದಳು. ತಾನು ಹಿಂದೆ ಹೋಗಿ ನೋಡಿ ಬಂದ ಗಂಗಾಸಾಗರ ಸಂಗಮ ತೀರ್ಥದ ಕಡೆಗೆ ಆ ತುರಗವನ್ನು ಹೋಗಲು ಪ್ರೇರೇಪಿಸಿದಳು. ಆ ಕುದುರೆಯ ವೇಗ ಮನೋವೇಗ. ಕ್ಷಣಾರ್ಧದಲ್ಲಿ ಆ ದಿವ್ಯವಾದ ಅಶ್ವ ಜಾಹ್ನವೀ ಹಾಗು ಜಲನಿಧಿಗಳ ಸಂಗಮದ ರಂಗಸ್ಥಳಕ್ಕೆ ಆ ರಾಜಕುಮಾರಿಯನ್ನು ತಂದಿಳಿಸಿತು. ಆ ಪುಣ್ಯಸ್ಥಳದಲ್ಲಿ ತಪಸ್ಸನ್ನು ಕೈಕೊಳ್ಳಬೇಕೆಂದು ಧೃಢ ನಿರ್ಧಾರ ಗೈದಿದ್ದಳು. ಕಾಮಿನೀ ಕುಲಕೇತುವಾದ ಆ ಸುಲೋಚನೆ. ಅಲ್ಲಿಗೆ ಹೋದ ಬಳಿಕ ಅವಳಿಗೆ ಆ ದೇಶದ ದೊರೆಯ ರಾಜಸಭೆಗೆ ಹೋಗಬೇಕು ಎಂಬ ಆಲೋಚನೆ ಬಂದಿತು.

ಆ ಕಾಲದಲ್ಲಿ ಆ ದೇಶದಲ್ಲಿ ಸುಷೇಣ ಎಂಬ ಮಹೀಪತಿಯು ರಾಜ್ಯವನ್ನು ಆಳುತ್ತಿದ್ದನು. ಅವನ ಆಸ್ಥಾನಕ್ಕೆ ತಾನು ಹೋಗುವ ಬಗೆ ಎಂತು ಎಂದು ತನ್ನಲ್ಲಿಯೇ ಆಲೋಚಿಸತೊಡಗಿದಳು.

''ಸುಷೇಣಮಹಾರಾಜ ಚಂದ್ರವಂಶದಲ್ಲಿ ಹುಟ್ಟಿದ ವಿಶ್ವವಿಖ್ಯಾತನಾದ ಭೂಪಾಲ, ನಾನಂತೂ ಇನ್ನೂ ಕನ್ಯೆ, ತರುಣಿ, ನನ್ನ ಹೆಗಲ ಮೇಲೆ ಇನ್ನೂ ಕರಕಿ ಪತ್ರಿ ಸಹಿತವಾದ ಅಧಿವಾಸನದ ಸೂತ್ರಗಳು ಇರುತ್ತವೆ. ನನಗೆ ಯಾರೂ ಜೊತೆಗಾರರೂ ಇಲ್ಲ. ಒಬ್ಬಂಟಿಗಳಾದ ನಾನು ಕುದುರೆಯನ್ನು ಏರಿಕೊಂಡು ಅರಸನ ಆಸ್ಥಾನಕ್ಕೆ ಹೋಗುವದೆಂತು! ನನ್ನ ಚರಿತ್ರವು ಅತ್ಯಾಶ್ಚರ್ಯಕರವಿದೆ. ನನ್ನಲ್ಲಿರುವ ಇಂದ್ರಜಾಲದ ವಿದ್ಯೆಯಿಂದ ನನ್ನ ದೇಹವನ್ನು ಮರೆಮಾಡಿಕೊಂಡು ಪುರುಷ ವೇಷದಿಂದಲೇ ರಾಜಾಂಗಣ ಪ್ರವೇಶಿಸುವೆ.''

ಹೀಗೆ ಆಲೋಚನೆಗೈದು ಆ ಸುಲೋಚನೆಯು ಅರೆನಿಮಿಷದಲ್ಲಿ ಪುರುಷವೇಷವನ್ನು ತಳೆದಳು. ತರುಣರಾಜಕುಮಾರನಾಗಿ ದೇವತೆಗಳ ಸುಧರ್ಮ ಸಭೆಯಂತಿರುವ ಆ ರಾಜನ ದರ್ಬಾರವನ್ನು ಪ್ರವೇಶ ಮಾಡಿದಳು. ಸುಷೇಣ ದೂರದಿಂದಲೇ ನೋಡಿದ. ಕುದುರೆಯ ಮೇಲೆ ಕುಳಿತು ಕೈಯಲ್ಲಿ ಶಕ್ತ್ಯಾಯುಧವನ್ನು ಹಿಡಿದು ಮದತುಂಬಿದ ಆನೆಯಂತೆ ಆಢ್ಯತೆಯಿಂದ ಮುಂದೆ ಬರುತ್ತಿರುವ ಈ ತೇಜಸ್ವಿ ರಾಜಕುಮಾರನನ್ನು ನೋಡಿ ಸ್ವಯಂ ಸುಷೇಣ ಅಲ್ಲಿಂದ ಎದ್ದು ಬಂದು ಕೇಳಿದ.

''ಕುಮಾರ, ನೀನು ಯಾರು? ಎಲ್ಲಿಂದ ಬಂದೆ? ಏತಕ್ಕೆ ಬಂದೆ?''

ಮಹಾರಾಜನ ಪ್ರಶ್ನಾವಳಿಯನ್ನು ಕೇಳಿ ಅರಸುಕುಮರನ ವೇಷದಲ್ಲಿದ್ದ ಸುಲೋಚನೆಯು ರಾಜನಿಗೆ ನಮಸ್ಕರಿಸಿ ಮಾತನಾಡಿದಳು.

**ಸುಲೋಚನೆ:-** ರಾಜೇಶ್ವರ, ನಾನೊಬ್ಬ ವೀರವರ ಎಂಬ ರಾಜಕುಮಾರ. ನಿನ್ನ ರಾಜ್ಯದಲ್ಲಿಯೇ ನೆಲೆಸಲಿಕ್ಕಾಗಿ ಬಂದಿದ್ದೇನೆ. ನೀನು ಹೇಳಿದ ಯಾವದೇ ಕಾರ್ಯವನ್ನು ನಾನು ಮಾಡುತ್ತೇನೆ. ಅಶಕ್ಯವಾದ ಮತ್ತು ಅತ್ಯಂತ ಕಠಿಣಕರವಾದ ಕಾರ್ಯಗಳನ್ನು ಸಾಧಿಸುವಲ್ಲಿ ನನಗೆ ಹೆಚ್ಚು ಆಸಕ್ತಿ, ಸಾಧಿಸುವ ಶಕ್ತಿ ಎರಡೂ ಇರುತ್ತವೆ. ನಾನು ಇಲ್ಲಿ ಇರುವಾಗ ನನ್ನ ಒಡೆಯನಿಗೆ ಎಂದೂ ಯಾವ ಸಂದರ್ಭದಲ್ಲಿಯೂ ಸೋಲು, ಸಾವು, ನೋವು ಎಂದೂ ಉಂಟಾಗಲಾರವು. ನನ್ನನ್ನು ನಿಮ್ಮ ಇಷ್ಟಬಂದಂತೆ ಉಪಯೋಗಿಸಿಕೊಳ್ಳಬಹುದು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಮಾಧವನ ವೃತ್ತಾಂತ ಎಂಬ ಐದನೇಯ ಅಧ್ಯಾಯ ಮುಗಿದುದು*

—o—

## ಸುಲೋಚನಳಿಂದ ಭೀಮನಾದನ ಸಂಹಾರ ಪ್ರಚೇಷ್ಟನ ಬಂಧನ. ಮಾಧವ ಸುಲೋಚನೆಯರ ಮಧುರ ಮಿಲನ ಮತ್ತು ಮದುವೆ

**ಅಧ್ಯಾಯ - ೬**

**ಸುಷೇಣ ರಾಜ:-** ವೀರಪುರುಷ ನೀನು ನನ್ನ ರಾಜ್ಯದಲ್ಲಿಯೇ ಇದ್ದು ಬಿಡು. ಈ ನನ್ನ ಸಾಮ್ರಾಜ್ಯ ಸುಸಂಪನ್ನ. ಮತ್ತು ಸುಸಮೃದ್ಧ. ನಾನು ನಿನಗೆ ಗೌರವ, ಸ್ಥಾನ ಮಾನಗಳನ್ನು ನೀಡುತ್ತೇನೆ. ಈ ವಿಷಯದಲ್ಲಿ ನಿನಗೆ ಸಂದೇಹಬೇಡ.

ಅನಂತರ ರಾಜಾಜ್ಞೆಯಂತೆ ವೀರವರ ಎಂಬ ಹೊಸ ಹೆಸರನ್ನೂ ಪುರುಷವೇಷವನ್ನೂ ಹೊತ್ತ ಆ ಸುಲೋಚನೆಯು ಆ ಸುಷೇಣರಾಜನ ಸೇವಾವೃತ್ತಿಯಲ್ಲಿ ನಿಂತುಕೊಂಡಳು. ಅವನು ಹೇಳಿದ ಕೆಲಸಗಳನ್ನು ಮಾಡುತ್ತಿದ್ದಳು.

ಮುಂದೆ ಕೆಲವು ದಿನಗಳ ಬಳಿಕ ಸುಷೇಣನ ರಾಜ್ಯದಲ್ಲಿ ಕಾಡಿನಲ್ಲಿದ್ದ ಭೀಮನಾದ' ಎಂಬ ಖಡ್ಗಪ್ರಾಣಿಯು ರಾಜಧಾನಿಯಲ್ಲಿ ಒಮ್ಮೆಲೆ ಹೊಕ್ಕಿತು. ಕಣ್ಣಿಗೆ ಕಂಡವರನ್ನು ಇರಿಯಿತು. ಕೈಗೆ ಸಿಲುಕಿದವರನ್ನೆಲ್ಲ ಕೊಂದಿತು, ಸಮೀಪಕ್ಕೆ ಬಂದವರನ್ನೆಲ್ಲ ಕಾಲಿನಿಂದ ತುಳಿಯಿತು. ಘೋರಾತಿಘೋರಾಕಾರದ ಆ ಗಂಡಕಮೃಗವನ್ನು ಮರ್ದಿಸಲಿಕ್ಕಾಗಿ ರಾಜನು ತನ್ನ ವಿಶ್ವಾಸಿಕ ಅನುಚರನಾದ ವೀರವರನನ್ನು ನಿಯಮಿಸಿದ.

ರಾಜನ ಅಣತಿಯಂತೆ ವೀರವರ (ಸುಲೋಚನೆ) ಆ ಖಡ್ಗಮೃಗ ಇದ್ದಲ್ಲಿಗೆ ಬಂದ. ಅದನ್ನು ನೋಡಿದ. ಪುಟ್ಟ ಬೆಟ್ಟವೆ ಭೀಮನಾದ ಖಡ್ಗವಾಗಿ ಬಂದಂತೆ ಕಂಡಿತು. ಕೋರೆದಾಡೆಯಿಂದ ಕರಾಳ ಮುಖದ ಆ ಹಿಂಸ್ರ ಪ್ರಾಣಿಯನ್ನು ಎದುರಿಸಲಿಕ್ಕಾಗಿ ವೀರವರನು ತನ್ನ ಕುದುರೆಯನ್ನು ಮುಗಿಲಿಗೆ ಹಾರಿಸಿದ. ಅಂತರಿಕ್ಷದಲ್ಲಿ ಚಕ್ರಾಕಾರವಾಗಿ ತನ್ನ ವಾಹನವನ್ನು ತಿರುಗಿಸುತ್ತಾ ಆ ಖಡ್ಗಮೃಗಕ್ಕೆ ಅದರ ಭಾಷೆಯಲ್ಲಿಯೇ ನುಡಿದನು.

**ವೀರವರ:-** ದುಷ್ಟ ಪಶುವೇ, ನೀನು ಇಷ್ಟುದಿನ ಮಾಡಿದ ಪಾಪಗಳೆಲ್ಲವು ಈಗ ಹೆಮ್ಮರವಾಗಿ ನಿಂತಿದೆ. ಅವೆಲ್ಲವು ಈಗ ಹಣ್ಣುಗೊಂಡು ನಿನಗೆ ಮೃತ್ಯು ದರ್ಶನವನ್ನು ಮಾಡಿಸಲಿವೆ. ಇಷ್ಟುದಿನ ನೀನು ನಿನ್ನ ಕ್ರೌರ್ಯದಿಂದ ಕೊಂದು ತಿಂದ ಎಲ್ಲ ಪ್ರಾಣಿಗಳನ್ನು ನೀನು ಯಮಲೋಕದಲ್ಲಿ ಸಂಧಿಸುವೆ. ನೀನು ಇನ್ನು ನಿನ್ನ ಶಾಶ್ವತ ನಿದ್ರಾ ಮುದ್ರೆ ಧರಿಸು. ನೀನು ದೀರ್ಘ ನಿದ್ರೆ ಮಾಡುವಂತೆ ಮಾಡುತ್ತೇನೆ. ನಾನು ನಿನ್ನ ಪಾಲಿನ ಯಮ ಎಂದು ತಿಳಿ.

**ಖಡ್ಗ ಮೃಗ:-** ಬುದ್ಧಿಗೇಡಿಯಾದ ರಾಜಕುಮಾರ, ಗರ್ವಾಂಧನಾಗಿ ಉಬ್ಬಬೇಡ. ಮುಗಿದು ಹೋಗಿದೆ ನಿನ್ನ ಆಯುಷ್ಯ. ನನ್ನ ಕಣ್ಣಿಗೆ ಬಿದ್ದೆಯಲ್ಲ, ಆಯಿತು ನಿನ್ನ ಅವಸ್ಥೆ. ಉರಿಯುವ ಬೆಂಕಿಯ ಜ್ವಾಲೆಯಲ್ಲಿ ದೀಪಹುಳ ಪ್ರವೇಶಿಸುವದಿಲ್ಲವೆ ! ಅದೇ ಗತಿ ನಿನಗೆ ಈಗ. ನನ್ನ ಸಿಟ್ಟಿನ ಸುಡುವ ಉರಿಯಲ್ಲಿ ನೀನು ಬಿದ್ದು ಬೂದಿ ಆಗುವುದು ತಡವಿಲ್ಲ.

ಹೀಗೆ ಮದದಿಂದ ಕೊಬ್ಬಿ ಬಡಬಡಿಸುವ ಆ ಖಡ್ಗಮೃಗದ ಕಿಡಿ ನುಡಿಯನ್ನು ಕೇಳಿ ಆ ವೀರವರ ಕೃದ್ಧನಾಗಿ ಹುಂಕಾರ ನಾದ ಮಾಡಿದನು. ಮತ್ತು ತನ್ನ ತೀಕ್ಷ್ಣವಾದ ಶಕ್ತಿ ಆಯುಧದಿಂದ ಆ ದೈತ್ಯ ಮೃಗವನ್ನು ಗಟ್ಟಿಯಾಗಿ ಕುಟ್ಟಿದನು. ಕೂಡಲೆ ನೆತ್ತರಿನ ಕಾಲುವೆ ಹರೆಯಿಸಿ ಆ ಮೃಗ ಮಡಿದು ನೆಲದ ಮೇಲೆ ಬಿದ್ದಿತು. ಅದು ಬೀಳುವುದರಿಂದ ಇಡೀ ಭೂಮಿಯೇ ನಡುಗಿತು.

ಹೀಗೆ ಆ ಗಂಡಕ ಮೃಗವನ್ನು ತುಂಡರಿಸಿ ದಂಡಿಸಿ ಗಂಗಾಸಾಗರ ಸಂಗಮದ ತೀರ್ಥದ ತಡಿಯಲ್ಲಿ ಆ ಪ್ರಾಣಿಯ ಶವವನ್ನು ಕಡಿದು ಎಲ್ಲೆಡೆಯು ಈಡಾಡಿ ರಾಜನ ಸಮೀಪಕ್ಕೆ ಹೋಗಬೇಕೆಂದು ಹೊರಟ ಆ ವೀರವರ. ದಾರಿಯಲ್ಲಿಯೇ ಒಂದು ದಿವ್ಯ ರಥದಲ್ಲಿ ಒಬ್ಬ ತೇಜಃಪುಂಜನಾದ ವ್ಯಕ್ತಿ ಮರಿಸೂರ್ಯನಂತೆ ವ್ಯಕ್ತನಾಗಿ ನಿಂತಿದ್ದ. ಪೀತಾಂಬರವನ್ನು ಉಟ್ಟು ಕೊರಳಲ್ಲಿ ತುಳಸಿ ಮಾಲೆ ಹಾಕಿಕೊಂಡು ಮಂದಹಾಸ ಯುಕ್ತನಾಗಿ ರಥದ ಮಧ್ಯದಲ್ಲಿ ಆ ಮಹಾಪುರುಷ ಕುಳಿತಿದ್ದ. ಅವನ ಸುತ್ತಲೂ ವಿಷ್ಣುದೂತರು ನಿಂತು ಓಲೈಸುತ್ತಿದ್ದರು. ಅವನನ್ನು ಕಂಡು ವೀರವರನು ಕೌತುಕಾಕ್ರಾಂತನಾಗಿ ಕೇಳಿದ.

**ವೀರವರ:-** ಅಯ್ಯಾ ನೀನು ಯಾರು? ನೀನು ಎಲ್ಲಿಂದ ಬಂದಿ? ಮುಂದೆ ಎಲ್ಲಿಗೆ ತೆರಳಲಿರುವಿ? ಇದೆಲ್ಲವನ್ನು ನನಗೆ ಹೇಳು.

**ಮಹಾಪುರುಷ:-** ಗಂಡು ವೇಷದ ಹೆಣ್ಣಾದ ಕನ್ಯಾಮಣಿಯೇ! ಸಂಕ್ಷೇಪದಲ್ಲಿ ನನ್ನ ಕಥೆಯನ್ನು ಹೇಳುತ್ತೇನೆ ಕೇಳು. ಹಿಂದೆ ನಾನೊಬ್ಬರಾಜ. ಧರ್ಮಬುದ್ಧಿ ಎಂದು ನನ್ನ ಹೆಸರು. ಧರ್ಮ ಕರ್ಮಗಳಲ್ಲಿಯೇ ನನಗೆ ಆಸಕ್ತಿ. ವ್ರತೋಪವಾಸದಲ್ಲಿ ಅನುರಕ್ತಿ. ಭಗವಂತನ ಪಾದದಲ್ಲಿ ವಿಚಿತ್ರಭಕ್ತಿ. ಕುಲವೈರಿಗಳಿಗೆ ನಾನು ಸಿಂಹ ಸ್ವಪ್ನ. ಯಜ್ಞ ಎಂಬ ಹೆಸರಿದ್ದ ಎಲ್ಲ ಯಾಗಗಳನ್ನು ನಾನು ಮುಗಿಸಿದ್ದೇನೆ. ಸಕಲ ದಾನವನ್ನು ಮಾಡಿದೆ. ಈ ಭೂಮಿಯನ್ನು ನಾಲ್ಕು ಸಾವಿರ ವರುಷ ಆಳಿದೆ.

ಹಿಂದೊಮ್ಮೆ ನಾನು ಒಂದು ಭೂಮಿಯನ್ನು ದಾನಕೊಟ್ಟಿದ್ದೆ ಓರ್ವ ಶಿಷ್ಟ ವಿಶಿಷ್ಟ ಬ್ರಾಹ್ಮಣನಿಗೆ. ಒಬ್ಬ ಪಾಖಂಡಿ ಬಂದು ನನ್ನ ಕಿವಿ ಊದಿದ. ಅವನ ಮಾತಿಗೆ ಕಟ್ಟುಬಿದ್ದು ನಾನು ಅವನಿಂದ ಭೂಮಿ ಕಿತ್ತುಕೊಂಡೆ. ಅವನ ಮೇಲೆ ನನಗೆ ಬಹಳ ಸಿಟ್ಟು ಬಂದಿತ್ತು. ಅದಕ್ಕೆ ಪ್ರತಿಯಾಗಿ ಏನನ್ನು ಕೊಡಲಿಲ್ಲ, ಆ ಬ್ರಾಹ್ಮಣನಿಗೆ. ಈ ನನ್ನ ಕ್ರೂರ ಕೃತ್ಯ ಘೋರ ವಿಧಿಗೂ ಕೋಪ ತರಿಸಿತು. ವಿಧಿಯ ವಿಕಟ ಅಟ್ಟಹಾಸದಿಂದ ನನ್ನ ಅಧಿಕಾರವೆಲ್ಲ ಅಳಿಯಿತು. ರಾಜ್ಯ ನಷ್ಟವಾಯಿತು. ಸರ್ವಸಂಪತ್ತು ಇದ್ದದ್ದು ಕರಗಿತು. ಈ ಆಕಸ್ಮಿಕ ಆಘಾತದಿಂದ ನಾನು ಎದೆ ಒಡೆದುಕೊಂಡು ಪ್ರಾಣ ಕಳೆದುಕೊಂಡು ಯಮಪುರಿಗೆ ಸಾಗಿದೆ. ನನ್ನನ್ನು ನೋಡಿದ ಕೂಡಲೇ ಚಿತ್ರಗುಪ್ತ ನಾನು ಮಾಡಿದ ಕರ್ಮಗಳನ್ನು ಒಪ್ಪಿಸಿದ ಯಮನಿಗೆ. ನಗುತ್ತ ಧರ್ಮರಾಜನನ್ನು ಕುರಿತು ನುಡಿದ -

''ಪ್ರಭು, ಇವನು ಧರ್ಮಬುದ್ಧಿ ಎಂಬ ರಾಜ. ಇವನು ಜನ್ಮಾವದಿ ಧರ್ಮ ಕರ್ಮಗಳನ್ನೆ ಮಾಡುತ್ತಲಿದ್ದ. ಇವನೊಬ್ಬ ಪುಣ್ಯಾತ್ಮನಾದ ಧರ್ಮಿಷ್ಟ ದೊರೆ. ಆದರೆ ಒಂದು ಮಾತ್ರ ಇವನು ಪಾಪಕೃತ್ಯ ಮಾಡಿದ. ಓರ್ವ ಬ್ರಾಹ್ಮಣನಿಗೆ ಭೂಮಿಕೊಟ್ಟ. ಅನಂತರ ಒಬ್ಬ ಪಾಖಂಡಿಯ ಮಾತಿಗೆ ಕಿವಿಯನ್ನು ಕೊಟ್ಟ. ಅವನು ಇವನಿಗೆ ಬುದ್ಧಿಭೇದ ಮಾಡಿದ. ಬ್ರಾಹ್ಮಣನಿತ್ತ ಭೂಮಿಯನ್ನು ಕಿತ್ತುಕೊಂಡ. ಆದ್ದರಿಂದ ಇವನಿಗೆ ಘೋರ ನರಕದಲ್ಲಿ ನಿಪಾತ ಅನಿವಾರ್ಯ

**ವೃತ್ತಿ ಚ್ಛೇದಃ ಸೂರ್ಯ ಪುತ್ರ ಯಸ್ಯ ಯೇನ ವಿಧೀಯತೆ ।**
**ಸಪ್ಪಿತೇನ ವಧಮಾಪ್ನೋತಿ ಶಾಸ್ತ್ರೇ ಷತಿ ಸುನಿಶ್ಚಿತಂ ॥**

ಯಾರು ಯಾವನ ಉಪಜೀವನ ಸಾಧನವಾದ ವೃತ್ತಿ ದತ್ತಿಗಳನ್ನು ಕಸಿದುಕೊಳ್ಳುವನೋ ಅವನು ಅದರಿಂದಲೇ ನಾಶ ಹೊಂದುತ್ತಾನೆ. ಇದು ಶಾಸ್ತ್ರಗಳಲ್ಲಿ ನಿಶ್ಚಿತವಾದ ವಿಷಯ. ಆದುದರಿಂದ ಬ್ರಹ್ಮಸ್ವವನ್ನು ಅಪಹರಿಸಿದ ಈ ರಾಜನು ಮಹಾಪಾಪಿ. ದತ್ತಾಪಹಾರ ರೂಪವಾದ ಘೋರ ಪಾಪದ ಪರಿಣಾಮವಾಗಿ ಇವನು ಒಂದು ಕೋಟಿ ಕಲ್ಪ ಕಾಲದವರೆಗೆ ನರಕಯಾತನೆಯನ್ನು ಅನುಭವಿಸಲಿ.

**ಆತ್ಮ ದತ್ತಾಂ ಹರೇದ್ಯಸ್ತು ಪರದತ್ತಾಂಚ ಮೇದಿನೀ**
**ಸ ಕೋಟಿ ಕುಲ ಸಂಯುಕ್ತಃ ಪ್ರಯಾತಿ ನರಕಂ ವಿಭೋ ॥**

ತಾನೇ ಕೊಟ್ಟ ಅಥವಾ ಹೆರವರು ಕೊಟ್ಟ ಉಪಜೀವನ ಸಾಧನವಾದ ಒಬ್ಬರ ಭೂಮಿಯನ್ನು ಕಸಿದುಕೊಂಡವನು ತನ್ನ ಕುಲಕೋಟಿಯಿಂದ ಕೂಡಿಕೊಂಡು ನರಕಕ್ಕೆ ಹೋಗುತ್ತಾನೆ.

**ಯೋ ಹರೇಚ್ಚ ಮಹೀಂತಾವದ್ದೇವಸ್ಯ ಬ್ರಾಹ್ಮಣಸ್ಯಚ ।**
**ನ ತಸ್ಯ ನಿಷ್ಕ ತಿರ್ಗ್ಯಷ್ಪಾ ಕಲ್ಪ ಕೋಟಿ ಶತಾವಧಿ ॥**

ದೇವರಿಗೂ ಹಾಗೂ ಜ್ಞಾನಿಗಳಿಗೂ ಕೊಟ್ಟ ಭೂಮಿಯನ್ನು ಅಥವಾ ಅವರ ಸ್ವಂತ ಭೂಮಿಯನ್ನು ಯಾರು ಅಪಹರಿಸುವರೋ ಆ ಘೋರ ಪಾಪಕ್ಕೆ ಕಲ್ಪಾಂತವರೆಗೆ ಪರಿಹಾರವೇ ಕಂಡು ಬರುವದಿಲ್ಲ.

**ಪರದತ್ತಾಂ ಕ್ಷಿತಿಂಯಸ್ತು ಧರಾನಾಥೋಽಭಿರಕ್ಷತಿ ।**
**ಸ ಕೋಟಿ ಗುಣ ಮಾಪ್ನೋತಿ ಪುಣ್ಯಂ ದಾತುಸ್ತ್ರೆ ಯುದ್ಧ ವೇತ್ ॥**

ಬೇರೆಯವರು ಕೊಟ್ಟ ಭೂಮಿಯನ್ನು ಅವರಿಗೇ ಉಳಿಯುವಂತೆ ಯಾವ ರಾಜನು ರಕ್ಷಿಸುವನೋ ಅವನು ಭೂಮಿಯನ್ನು ದಾನ ಮಾಡಿದವನಿಗಿಂತ ಕೋಟಿ ಪಟ್ಟು ಹೆಚ್ಚು ಪುಣ್ಯವನ್ನು ಪಡೆಯುತ್ತಾನೆ.

ಅನಂತರ ಯಮಧರ್ಮನ ಆದೇಶದಂತೆ ನಾನು ಅನೇಕ ವರ್ಷ ನರಕದಲ್ಲಿ ದುಃಖವನ್ನು ಅನುಭವಿಸಿದ ಒಳಿಕ. ಬಗೆ ಬಗೆಯ ಕ್ರೂರ ಜನ್ಮಗಳ್ನು ಹೊಂದಿ ಪ್ರಾಣಿಹಿಂಸೆಯನ್ನು ಮಾಡಿದೆ. ಬ್ರಾಹ್ಮಣರನ್ನು ಕೊಂದೆ. ಹಸುಗಳನ್ನು ಹಿಂಸಿಸಿದೆ. ಬೇರೆ ಬೇರೆ ಅಸಂಖ್ಯ ಪ್ರಾಣಿಗಳನ್ನು ವಧಿಸಿದೆ. ಈಗ ನಾನು ಎಲ್ಲ ಪ್ರಾಣಿಗಳನ್ನು ಹಿಂಸಿಸುವ ಖಡ್ಗಮೃಗವಾಗಿ ಹುಟ್ಟಿದ್ದೇನೆ. ಈ ಜನ್ಮದಲ್ಲಿ ನೀನು ನನ್ನನ್ನು ಪ್ರಹರಿಸಿದೆ. ಇದು ಪರಮ

ಪವಿತ್ರವಾದ ಗಂಗಾಸಾಗರ ಸಂಗಮದ ಪುಣ್ಯ ತೀರ್ಥ. ದೇವತೆಗಳಿಗೂ ಕೂಡ ದುರ್ಲಭ. ಇಲ್ಲಿಯ ನೀರಿನಲ್ಲಿ ಆಗಲಿ ಅಥವಾ ತೀರದಲ್ಲಿ ಆಗಲಿ ಮೃತ್ಯುವನ್ನು ಹೊಂದಿದವರಿಗೆ ಸದ್ಗತಿ ಆಗುವದು ನಿಶ್ಚಿತ. ಈ ಸಂಗಮ ಸ್ಥಳದಲ್ಲಿಯೇ ನಾನು ಮರಣ ಹೊಂದಿದ್ದರಿಂದ ನನಗೆ ಇಂಥ ಸದ್ಗತಿ ಉಂಟಾಗಿದೆ. ಶುಭಾಂಗಿ ನಿನ್ನಿಂದ ನನಗೆ ಪರಮೋಪಕಾರವಾಯಿತು. ನಿನಗೆ ಮುಂದೆ ಒಳ್ಳೆಯದಾಗಲಿ ನಿನಗೆ ಮುಂದೆ ಬೇಗನೇ ನಿನ್ನ ಪತಿಯ ದರ್ಶನ ಉಂಟಾಗುವುದು.

**ವೇದವ್ಯಾಸ:-** ಅವನ ಈ ಮಾತನ್ನು ಕೇಳಿ ರಾಜಕುಮಾರಿ ಸುಲೋಚನೆಯು ಅವನ ಪಾದಗಳಿಗೆ ಭಕ್ತಿಯಿಂದ ನಮಸ್ಕಾರ ಮಾಡಿದಳು. ಆ ಧರ್ಮಬುದ್ಧಿ ಮಹಾರಾಜನು ದಿವ್ಯ ರಥವನ್ನು ಏರಿ ಸ್ವರ್ಗಕ್ಕೆ ನಡೆದ.

ಸ್ತ್ರೀವೇಷವನ್ನು ಮರೆಮಾಡಿ ಪುರುಷವೇಷವನ್ನು ಧರಿಸಿದ ಆ ವೀರವರನು ತನಗೆ ಆಶ್ರಯವನ್ನು ನೀಡಿದ ಮಹಾರಾಜನ ಆಸ್ಥಾನ ಮಂಟಪಕ್ಕೆ ಆಗಮಿಸಿದ. ಈ ವೀರವರ ರಾಜಕುಮಾರನಿಂದ ಮಹಾಬಲಿಷ್ಠವಾದ ಆ ಖಡ್ಗಮೃಗವು ಸಂಹರಿಸಲ್ಪಟ್ಟದ್ದನ್ನು ಕೇಳಿ ಪರಮ ಸಂತುಷ್ಟನಾದ ಆ ಮಹಾರಾಜ. ಎಲ್ಲ ರೀತಿಯಿಂದಲೂ ಈ ರಾಜಕುಮಾರ ತನ್ನ ಮಗಳಿಗೆ ಯೋಗ್ಯನಾದ ವರ ಎಂದು ಭಾವಿಸಿದ. ತನ್ನ ಏಕಮಾತ್ರ ಪುತ್ರಿಯಾದ ಜಯಂತಿ ಎಂಬ ಕನ್ಯೆಯನ್ನು ಆ ವೀರವರ ರಾಜನಿಗೆ ವೈಭವದಿಂದ ವಿವಾಹ ಮಾಡಿಕೊಟ್ಟ. ಜಯಂತಿಯನ್ನು ಮದುವೆ ಮಾಡಿಕೊಂಡ ವೀರವರ ಎಂಬ ಹೆಸರಿನ ರಾಜಕುಮಾರಿ ಸುಲೋಚನೆಯು ತನ್ನ ನವವಧುವಾದ ಜಯಂತಿಯನ್ನು ಕರೆದುಕೊಂಡು ಪರಮಪವಿತ್ರವಾದ ಗಂಗಾಸಾಗರ ಸಂಗಮ ತೀರ್ಥಕ್ಕೆ ಆಗಮಿಸಿದ. ಆ ಸಂಗಮ ತೀರ್ಥದಲ್ಲಿ ತಪಶ್ಚರ್ಯವನ್ನು ಕೈಕೊಳ್ಳುವ ಸಂಕಲ್ಪಮಾಡಿ ಆ ಪುಣ್ಯಸಲಿಲದಲ್ಲಿ ಅರುಣೋದಯದಲ್ಲಿ ಸಮಯಕ್ಕೆ ಸರಿಯಾಗಿ ಸ್ನಾನ ಮಾಡಿದ. ಶ್ರೀಹರಿಯನ್ನು ಗಂಧ, ತುಳಸಿ, ಧೂಪ, ದೀಪ, ಮಂಗಳಾರತಿ ಮುಂತಾದವುಗಳಿಂದ ಪೂಜೆ ಮಾಡಿದ. ಅನಂತರ ಹರ್ಷದಿಂದ ತಾನಾಗಿಯೇ ಆ ಭಗವಂತನಿಗೆ ಸಂಗೀತ ಸೇವೆಯನ್ನು, ನೃತ್ಯ ಸೇವೆಯನ್ನು, ವಾದ್ಯ ಸೇವೆಯನ್ನು ಸಲ್ಲಿಸಿದನು. ಕಂದ ಮೂಲ ಫಲಗಳನ್ನು ತಿಂದು ಒಂದೊಂದು ದಿನ ಪೂರ್ಣ ಉಪವಾಸ ಗೈದು ಶ್ರೀಹರಿಯನ್ನು ಕುರಿತು ಉಗ್ರ ತಪಸ್ಸನ್ನು ಆಚರಿಸಿದನು. ''ಇಲ್ಲಿ ನಾನು ಏಕಾಕಿನಿಯಾಗಿ ತಪಸ್ಸು ಮಾಡುವಾಗ ನನ್ನ ಸ್ತ್ರೀರೂಪವು ಯಾರಿಗಾದರೂ ಗೋಚರವಾದರೆ ಪಾಪಿಗಳು ನನ್ನ ಮೇಲೆ ಬಲಾತ್ಕಾರವನ್ನು ಮಾಡಬಹುದು. ಮತ್ತು ನನ್ನ ಗುರುತು ಆಗಬಾರದು ಎಂದು ಪಾಣಿ ಗ್ರಹಣ ಮಾಡಿದ ಜಯಂತಿಯನ್ನು ದೂರದ ಪರ್ಣಕುಟೀರದಲ್ಲಿ ಕೂಡಿಸಿ ಬಂದು ಆ ಪರ್ಣ ಕುಟೀರದಿಂದ ಸುಮಾರು ದೂರದ ತೀರದಲ್ಲಿ ನಿಂತು ನಾನು ತಪಸ್ಸು ಮಾಡುತ್ತಿದ್ದರೂ ಯಾವಾಗಲಾದರೂ ಅವಳಿಗೆ ನನ್ನ ಮಹಿಳಾರೂಪವು ಗೋಚರವಾಗಬಹುದು.'' ಹೀಗೆ ಯೋಚಿಸಿ ಅವಳು ಇಲ್ಲಿಂದ ಆ ಜಯಂತಿಯನ್ನು ಕರೆದುಕೊಂಡು ತನ್ನ ನಿಜರಾಜ್ಯಕ್ಕೆ ವೀರವರ ವೇಷದಿಂದ ತೆರಳಿದಳು.

ಇತ್ತ ಪ್ರಚೇಷ್ಟನು ವಿವಾಹದ ಸಾಮಗ್ರಿ ಸಂಭಾರಗಳನ್ನೆಲ್ಲ ತೆಗೆದುಕೊಂಡು ಕುದುರೆ ಮತ್ತು ಸುಲೋಚನಾ ಇಬ್ಬರನ್ನು ಇರಿಸಿಹೋದ ಸ್ಥಾನಕ್ಕೆ ಬಂದ. ಅಲ್ಲಿ ಇಬ್ಬರೂ ಇರಲಿಲ್ಲ. ಕುದುರೆಯು ಮಾಯವಾಗಿತ್ತು. ಸುಲೋಚನೆಯೂ ಅಲ್ಲಿ ಇರಲೇ ಇಲ್ಲ.

ಅದರಿಂದ ಪ್ರಚೇಷ್ಟನು ದುಃಖಾಕ್ರಾಂತನಾಗಿ ಬಹಳ ಶೋಕ ಮಾಡಿದ. ಅವನು ತನ್ನ ಮನಸ್ಸಿನಲ್ಲಿಯೇ ಹೀಗೆ ವಿಚಾರ ಮಾಡಿದ:- ''ಆ ರಾಜಕುಮಾರಿಯನ್ನು ನಾನು ಮೋಸ ಮಾಡಿ ಇಲ್ಲಿಗೆ ಕರೆದುಕೊಂಡು ಬಂದಷ್ಟೇ ಆಯಿತು. ಅವಳಿಗೆ ನನ್ನ ಮೇಲೆ ಮನಸ್ಸೇ ಇರಲಿಲ್ಲ. ನಾನು ಜುಲುಮೆಯಿಂದ ಅವಳನ್ನು ಇಲ್ಲಿಗೆ ಹೊತ್ತುಕೊಂಡು ಬಂದದ್ದರಿಂದ ಅವಳು ವಿದ್ಯಾಧರನನ್ನಾಗಲೀ ಮಾಧವನನ್ನಾಗಲೀ ನೆನೆದು ಮರಣ ಹೊಂದಿರಬಹುದು. ಆ ಸುಲೋಚನೆಯಂಥ ಹೆಣ್ಣು ನನ್ನ ಕೈಗೆ ದೊರೆತರೂ ಅವಳನ್ನು ನನಗೆ ದಕ್ಕಿಸಿಕೊಳ್ಳಲು ಆಗಲಿಲ್ಲ. ಅವಳಿಲ್ಲದ ನನ್ನ ಬಾಳು ಹಾಳು. ಜೀವನ ವ್ಯರ್ಥ. ಅದಕ್ಕಾಗಿ ನಾನು ಗಂಗಾಸಾಗರ ಸಂಗಮ ತೀರ್ಥಕ್ಕೆ ಹೋಗಿ ಅಲ್ಲಿಯೇ ಮರಣವನ್ನು ಹೊಂದಬೇಕು'' ಎಂದು ನಿರ್ಧರಿಸಿದ. ಧಾವಿಸಿ ಆ ಸಂಗಮದ ತಾಣಕ್ಕೆ ಬಂದ. ಆ ತೀರ್ಥೋದಕದಲ್ಲಿ ಮಿಂದ. ತುಳಸಿಯ ಮೃತ್ತಿಕೆಯನ್ನು ಧರಿಸಿದ. ಎರಡೂ ಕೈ ಮುಗಿದು ದಂಡೆಯ ಮೇಲೆ ನಿಂತು ಗಂಗೆಯನ್ನು ಬೇಡಿಕೊಂಡ.

**ಸುಲೋಚನಾ ಮೇ ಕಾಂತಾ ಸ್ಯಾದ್ಯಥಾ ತತ್ವಂ ಕರಿಷ್ಯಸಿ**

''ಸುಲೋಚನೆಯೇ ನನಗೆ ಹೆಂಡತಿಯಾಗಿ ದೊರಕುವಂತೆ ಮಾಡು, ಸುಲೋಚನೆಯು ಹಂಡತಿಯಾಗುವಂತೆ ಮಾಡು. ಸುಲೋಚನೆ ದೊರಕಲಿ ಸುಲೋಚನೆ ಲಭಿಸಲಿ. ಸುಲೋಚನೆ ನನ್ನ ಭಾರ್ಯೆಯಾಗಲಿ'' ಎಂದು ಮತ್ತೆ ಮತ್ತೆ ಕೂಗಿ ಗಂಗೆಯ ದಂಡೆಯ ಮೇಲೆ ಅಕ್ರೋಶ ಮಾಡುತ್ತ ನಿಂತುಕೊಂಡ. ಆಗ ಅಲ್ಲಿಯೇ ಇದ್ದ ವೀರವರನ ಕಿಂಕರರು ಅವನನ್ನು ಸೆರೆಹಿಡಿದು ಪಾಶದಿಂದ ಬಂಧಿಸಿ ವೀರವರನ ರಾಜಸಭೆಗೆ ಕರೆದುಕೊಂಡು ಹೋದರು. ಮತ್ತು ರಾಜಕುಮಾರನ ಅಪ್ಪಣೆಯಂತೆ ಆ ಆ ಪ್ರಚೇಷ್ಟನನ್ನು ಕಾರಾಗೃಹದಲ್ಲಿ ಕತ್ತಲೆಯ ಕೋಣೆಯಲ್ಲಿ ಕೂಡಿಸಿದರು.

ಇತ್ತ ಪ್ರಕ್ಷದ್ವೀಪದಲ್ಲಿ ಇರುವ ಪುರೀ ಪಟ್ಟಣದ ಮಹಾರಾಜನಾದ ಗುಣಾಕಾರ ದೊರೆಯು ತನ್ನ ಮಗಳಾದ ಸುಲೋಚನೆಯು ಸ್ವಯಂವರ ಮಂಟಪದಲ್ಲಿಯೇ ಯಾವನೋ ಒಬ್ಬ ತರುಣನಿಂದ ಅಪಹರಿಸಲ್ಪಟ್ಟು ಕುದುರೆಯ ಮೇಲೆ ಒಯ್ಯಲ್ಪಟ್ಟದ್ದನ್ನು ನೋಡಿ ಹೌಹಾರಿದ. ಮಿಂಚಿನಂತೆ ನಡೆದುಹೋದ ಅದ್ಭುತವಾದ ಈ ಕನ್ಯಾಪಹರಣದ ಘಟನೆಯಿಂದ ಆ ಸ್ತ್ರೀಸ್ವಯಂವರ ವೇದಿಕೆಯಲ್ಲಿ ಹಾಹಾಕಾರವೆದ್ದಿತು. ಮಿಂಚಿನ ವೇಗದಿಂದ ಕೈಯೆತ್ತಿಕೊಂಡು ಮಾಧವನ ನಿರೀಕ್ಷೆಯಲ್ಲಿ ನಿಂತುಕೊಂಡ ಸುಲೋಚನೆಯನ್ನು ಪ್ರಚೇಷ್ಟನು ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಕುದುರೆಯ ಮೇಲೆ ಕೂಡಿಸಿಕೊಂಡು ಹಾರಿ ಹೋದದ್ದನ್ನು ಕಂಡು, ಜನರೆಲ್ಲರೂ ಹಿಡಿಯಿರಿ, ಹೊಡೆಯಿರಿ, ತಡೆಯಿರಿ, ಬಡೆಯಿರಿ, ಕಡಿಯಿರಿ, ಕೊಲ್ಲಿರಿ ಎಂದು ಕೂಗಿಕೊಳ್ಳತೊಡಗಿದರು. ಆದರೆ ಇವರ ಕೂಗಾಟ ಕಿರುಚಾಟದಲ್ಲಿಯೇ ಕುದುರೆ ವರಕನ್ಯೆಯನ್ನು ಅರೆನಿಮಿಷದಲ್ಲಿ ಅಲ್ಲಿಂದ ಹಾರಿಸಿಕೊಂಡು ಎಲ್ಲಿಯೋ ಹೋಗಿ ಬಿಟ್ಟಿತು. ಮಹಾರಾಜನಿಗಂತೂ ಏನು ನಡೆಯಿತು ಏನ್ನುವದು ಗೊತ್ತೇ ಆಗಲಿಲ್ಲ. ಮಗಳನ್ನು ಕಳೆದುಕೊಂಡ ಅವನು ಭಗ್ನೋದ್ವಿಗ್ನನಾಗಿ ಸಿಟ್ಟಿಗೆದ್ದು ತನ್ನ ಪಟ್ಟಣದ ಎಲ್ಲ ಕಡೆಗೆ ಶಸ್ತ್ರಾಸ್ತ್ರ ಸನ್ನದ್ಧರಾದ ಸೈನಿಕರನ್ನು ಯಾರೂ ಹೊರಗೆ ಹೋಗದಂತೆ ತಡೆಯಲು ಅಲ್ಲಲ್ಲಿ ನಿಲ್ಲಿಸಿದ. ಗುಪ್ತಚಾರರಿಂದ ಅಲ್ಲಲ್ಲಿ ಹುಡುಕಿಸಿದ. ಹಾಡು, ಕುಣಿತ, ವಾದ್ಯ, ವೈಭವ, ವಿವಾಹ ಮುಂತಾದ ಶುಭಕಾರ್ಯಗಳನ್ನು

ನಿಷೇಧಿಸಿದ. ಅವಸರದಿಂದ ಮಂತ್ರಿಗಳ ಸಭೆಯನ್ನು ಕರೆದ. ಚಿಂತಾಕ್ರಾಂತನಾಗಿ "ಇದು ಏನು? ಹೀಗೆ ಹೇಗೆ ಆಯಿತು? ನನ್ನ ಕನ್ಯೆಯನ್ನು ಕದ್ದವರು ಯಾರು? ಅಷ್ಟು ಜಾಗರೂಕರಾದ ನನ್ನ ವೀರಭಟರನ್ನು ಮೋಸ ಮಾಡಿ ಕನ್ಯಾಪಹಾರವನ್ನು ಯಶಸ್ವಿಯಾಗಿ ಮಾಡಿದ ಚೋರವೀರ ಯಾರು?" ಎಂದು ಮುಂತಾಗಿ ಶೋಕ ವಿಹ್ವಲನಾಗಿ ನುಡಿದ. ಆಗ ಆ ಮಂತ್ರಿಗಳು ಅವನಿಗೆ ಹೇಳಿದರು.

**ಮಂತ್ರಿಗಳು:-** ಗುಣಾಕರ ಮಹಾರಾಜರೇ, ಇಂಥ ಅದ್ಭುತ ಘಟನೆ ನಮ್ಮ ಜೀವನದಲ್ಲಿಯೇ ನಡೆದದ್ದು ಇಲ್ಲ. ಇಂಥ ಆಶ್ಚರ್ಯವನ್ನು ನಾವು ಕೇಳಿಯೂ ಇಲ್ಲ. ಇಷ್ಟು ಜನ ರಾಜ ಪರಿವಾರವೂ ಸೈನಿಕರೂ ಬೇರೆ ಬೇರೆ ದೇಶದ ರಾಜಕುಮಾರರೂ ಜಾಗರೂಕರಾಗಿ ಇದ್ದರೂ ಆ ರಾಜಕುಮಾರಿಯು ಹೋದದ್ದೆಲ್ಲಿ? ಅವಳನ್ನು ಒಯ್ದದ್ದು ಯಾರು? "ಅವಳು ಸಾಕ್ಷಾತ್ ಮಹಾಲಕ್ಷ್ಮಿಯೇ. ಯಾರದೋ ಶಾಪದಿಂದ ಭೂಲೋಕಕ್ಕೆ ಬಂದಿದ್ದಳು. ನಿನ್ನ ಅರಮನೆಯಲ್ಲಿ ಕೆಲದಿನ ತಂಗಿದ್ದಳು. ಈಗ ತಾನಾಗಿಯೇ ಅವಳು ಸ್ವಯಂಪ್ರೇರಣೆಯಿಂದ ಅದೃಶ್ಯಳಾಗಿದ್ದಾಳೆ" ಎಂದು ಕೆಲವರು ನಿಮ್ಮ ಕನ್ಯಾಮಣಿಯ ಆಕಸ್ಮಿಕ ಅದೃಶ್ಯತ್ವದ ಬಗೆಗೆ ಮಾತನಾಡುತ್ತಾರೆ. ಮತ್ತೆ ಬೇರೆ ಕೆಲವರು "ನಿಮ್ಮ ಸುಲೋಚನೆಯು ವಾಸ್ತವಿಕವಾಗಿ ಓರ್ವ ಮಾಯಾಂಗನೆ. ತನ್ನ ಮಾಯೆಯಿಂದ ಕೆಲವು ದಿನ ನಿಮ್ಮ ಮನೆಯಲ್ಲಿ ಇದ್ದು ನಿಮಗೆಲ್ಲ ಮಗಳು ಎಂದು ಮಮತೆ ಮೋಹವನ್ನು ಹುಟ್ಟಿಸಿ ಈಗ ಒಮ್ಮೆಲೇ ತಾನೇ ಮಾಯವಾಗಿ ಬಿಟ್ಟಳು" ಎಂದು ಕೂಡ ಹೇಳುತ್ತಾರೆ. "ಸರ್ವಲಕ್ಷಣ ಸಂಪನ್ನಳಾದ ಆ ರಾಜಕುಮಾರಿಯು ಎಲ್ಲಿ ಹೋಗುತ್ತಾಳೆ? ಇನ್ನು ಕೆಲವೇ ದಿನಗಳಲ್ಲಿ ತನ್ನ ಅಪಹರಣಕಾರರನ್ನು ಭಂಗಿಸಿ ಭಗ್ನಗೊಳಿಸಿ ತಾನು ಮಾತ್ರ ಸುರಕ್ಷಿತವಾಗಿ ತಂದೆಯ ಮನೆಗೆ ಹಿಂದಿರುಗುತ್ತಾಳೆ." ಇದು ಹಲವರ ಅಭಿಪ್ರಾಯ. ಇನ್ನು ಕೆಲವರು "ಈ ಸುಲೋಚನೆಯ ಮುಖವು ಚಂದ್ರನಂತೆ ಇದ್ದುದರಿಂದ ಚಂದ್ರನೇ ಚಂದ್ರಲೋಕಕ್ಕೆ ಕರೆದುಕೊಂಡು ಹೋಗಿದ್ದಾನೆ" ಎಂದು ಪ್ರತಿಪಾದಿಸುವರು. ಮತ್ತೆ ಹಲವರು ದಿಗ್ಗಜಗಳು ತಾವರೆಯಂತಿರುವ ಅವಳ ತುಂಬುಮೊಗದ ಚೆಲುವನ್ನು ಕಂಡು ಇದೊಂದು "ಕಮಲದ ಬಳ್ಳಿ ಎಂದು ಬಗೆದು ತಮ್ಮ ಶುಂಡಾದಂಡದಿಂದ ತೆಗೆದುಕೊಂಡು ಹೋಗಿವೆ" ಎಂದು, ವಿಚಿತ್ರವಾದ ತರ್ಕವನ್ನು ಮಾಡುತ್ತಾರೆ. ಇನ್ನು ಹಲವರಂತೂ "ಬ್ರಹ್ಮ ದೇವರಿಗೆ ಇವಳಂತಹದೇ ಮತ್ತೊಂದು ಹೆಣ್ಣಿನ ಸೃಷ್ಟಿಯನ್ನು ಮಾಡಬೇಕಾಗಿದೆ. ಅದಕ್ಕಾಗಿ ಇವಳನ್ನೇ ಎದುರು ಇಟ್ಟು ಇಂಥದೇ ಪ್ರತಿರೂಪವನ್ನು ತಯಾರಿಸಲಿಕ್ಕಾಗಿ ಇವಳನ್ನು ಆ ಚತುರ್ಮುಖ ಬ್ರಹ್ಮನೇ ಸತ್ಯ ಲೋಕಕ್ಕೆ ಕರೆದು ಕೊಂಡು ಹೋಗಿದ್ದಾನೆ" ಎಂದು ಸಾಧಿಸುತ್ತಿದ್ದಾರೆ, ಮತ್ತೆ ಕೆಲವರು "ಮಹಾರಾಜ, ನಿನ್ನ ಮಗಳು ತನ್ನ ರೂಪಶ್ರೀಯಿಂದ ಭೂಲೋಕದ ಸ್ತ್ರೀಯರನ್ನೆಲ್ಲ ಎಂದೋ ಗೆದ್ದಿದ್ದಾಳೆ. ಸುರುಪರದ ಸುಂದರಿಯರನ್ನು ಕೂಡ ತನ್ನ ಸೌಂದರ್ಯದಿಂದ ಜಯಿಸಲು ಅವಳು ನಾಕಲೋಕಕ್ಕೆ ನಡೆದಿದ್ದಾಳೆ". ಎಂದು ನುಡಿಯುತ್ತಾರೆ. ಗುಣಾಕರಪ್ರಭುವೇ, ನಮಗಂತೂ ಯಾವದೂ ತಿಳಿಯದಂತಾಗಿದೆ. ಏನು ಮಾಡಲಿಕ್ಕೂ ತೋಚದಂತಾಗಿದೆ. ಈ ವಿಷಯದಲ್ಲಿ ಎಲ್ಲ ಕಡೆಗೂ ಹುಡುಕಾಡಿ ರಾಜಕುಮಾರಿಯ ಸುದ್ದಿ ಸುಳಿವು ತಿಳಿಯದೇ ನಾವು ಸೋತು ಸುಣ್ಣಾಗಿದ್ದೇವೆ. ನೀರಾಶರೂ ನಿರುತ್ಸಾಹರೂ ಆಗಿ ಹತಾಶರಾಗಿ ಕಿಂಕರ್ತವ್ಯ ವಿಮುಖರಾಗಿ ಕುಳಿತುಕೊಂಡಿದ್ದೇವೆ."

ಮಂತ್ರಿಗಳ ಈ ಮಾತನ್ನು ಕೇಳಿ ಮಹಾರಾಜನು ಮತ್ತಿಷ್ಟು ಚಿಂತೋದ್ಭ್ರಾಂತನಾಗಿ ''ಅಯ್ಯೋ ಮಗಳೇ ನನ್ನನ್ನು ಬಿಟ್ಟು ನೀನೊಬ್ಬಳೇ ಎಲ್ಲಿಗೆ ಹೋದೆ? ಎಂದು ನೆಲದ ಮೇಲೆ ಬಿದ್ದ. ಮೂರ್ಚೆಯಿಂದ ಅರಿವು ಗೆಟ್ಟ. ರಾಜನು ಮೂರ್ಛಿತನಾಗಿ ಬಿದ್ದುದನ್ನು ನೋಡಿ ಎಲ್ಲೆಡೆಗೂ ಹಾಹಾಕಾರ. ದುಃಖದ ಚೀತ್ಕಾರ. ನಾಲ್ಕೂ ದಿಕ್ಕುಗಳಲ್ಲಿಯೂ ರೋದನದ ಧ್ವನಿ. ದಶ ದಿಕ್ಕುಗಳಲ್ಲಿಯೂ ಅವರೆಲ್ಲರ ರೋದಂತಿಯ ಪ್ರತಿಧ್ವನಿ. ದಶ ದಿಕ್ಕುಗಳೇ ದುಃಖಿಸುತ್ತಿವೆ ಏನೋ ಎನ್ನುವಂತೆ ಎಲ್ಲೆಡೆಗೂ ದುಮಿ ದುಮಿಸುತ್ತಿತ್ತು ಆ ಧ್ವನಿ, ಪ್ರತಿಧ್ವನಿ. ನೆಲದ ಮೇಲೆ ಮೂರ್ಚೆ ಹೋಗಿ ಉರಳಿದ ಗುಣಾಕರ ರಾಜನ ಮೈ ತುಂಬ ಮಣ್ಣು. ತಲೆ ತುಂಬ ಧೂಳಿ, ಕೆದರಿದ ಮುಡಿ ತುಂಬ ನೆಲದ ಹುಡಿ ಅಡರಿದಂತೆಯೇ ಮಂತ್ರಿಗಳು ಅವನನ್ನು ಎತ್ತಿಕೊಂಡು ಅರಮನೆಗೆ ಬಂದರು. ಅಲ್ಲಿ ಸುಲೋಚನೆಯನ್ನು ಮದುವೆಯಾಗಬೇಕು ಎಂದು ವರನಾಗಿ ಬಂದ ವಿಕ್ರಮರಾಜನ ಮಗನಾದ ವಿದ್ಯಾಧರ ಸುಲೋಚನೆಯು ಕುಳಿತ ಆಸನವನ್ನೇ ಅಪ್ಪಿಕೊಂಡು ಎದೆ ಎದೆ ಬಡಿದುಕೊಂಡು ಅಳುತ್ತಲಿದ್ದ.

**ಹಾ ಪ್ರಿಯೇ ಚಂಚಲಾಪಾಂಗಿ ಸುವರ್ಣ ಕುಸುಮಪ್ರಭೇ ।**
**ಶೋಕಾಬ್ಧೌ ಪಾತಯಿತ್ವಾ ಮಾಂ ಕ್ವ ಗತಾಸಿ ವರಾನನೇ ॥**

ಚಂಚಲನ ನೇತ್ರದ ಚೆಲುವಿಯೇ. ನನ್ನನ್ನು ದುಃಖಸಾಗರದಲ್ಲಿ ಮುಳುಗಿಸಿ ಬಂಗಾರ ಬಣ್ಣದ ನೀನು ಎಲ್ಲಿಗೆ ಹೊರಟು ಹೋದೆ? ನನ್ನಲ್ಲಿ ನಿನಗೆ ಏನು ತಪ್ಪು ಕಂಡಿತು? ನನಗೆ ಏಕೆ ನೀನು ದರ್ಶನವನ್ನು ನೀಡಲೊಲ್ಲೆ? ನಾನು ನಿನ್ನಿಂದ ಅಗಲಿ ಕ್ಷಣ ಮಾತ್ರವೂ ಜೀವಿಸಲಾರೆ. ಆದ್ದರಿಂದ ನೀನು ನನಗೆ ದರ್ಶನವನ್ನು ನೀಡಿ ನನ್ನ ಪ್ರಾಣ ರಕ್ಷಣೆ ಮಾಡು. ನಾನು ನಿನ್ನನ್ನು ಹೊಂದದಿದ್ದರೆ ನನ್ನ ಧನದಿಂದ ಅಥವಾ ನನ್ನ ಜನರಿಂದ, ಮಿತ್ರರಿಂದ, ಮನೆಗಳಿಂದ ನನಗೆ ಏನು ಆಗಬೇಕಾಗಿದೆ? ನೀನಿದ್ದರೆ ನನಗೆ ಇವೆಲ್ಲವೂ ಬೇಕು. ನೀನು ಇಲ್ಲದಿದ್ದರೆ ನನಗೆ ಇವಾವುದೂ ಬೇಡ. ಜೀವನವೇ ಬೇಡ. ನೀನಿಲ್ಲದೇ ನಾನು ಬಾಳಲಾರೆ. ಬದುಕಲಾರೆ. ಮರಣವೇ ನನಗೆ ಶರಣು.

ಹೀಗೆಲ್ಲ ಶೋಕ ಮಾಡಿ ಆ ವಿದ್ಯಾಧರನು ತನ್ನ ದೇಹ ಪರಿತ್ಯಾಗ ಮಾಡಬೇಕು ಎಂದು ಗಂಗಾಸಾಗರ ಸಂಗಮಕ್ಕೆ ಬಂದ. ಅಲ್ಲಿಯ ತೀರ್ಥೋದಕದಲ್ಲಿ ಸ್ನಾನ ಮಾಡಿದ. ಸೂರ್ಯನಿಗೆ ಅರ್ಘ್ಯ ನೀಡಿದ. ಮತ್ತು ಗಂಗೆಗೆ ಕೈ ಜೋಡಿಸಿ ಉಚ್ಚ ಕಂಠದಿಂದ ಬೇಡಿಕೊಂಡ.

**ಗಂಗಾದೇವಿ ಜಗನ್ಮಾತಃ ತ್ವಜ್ಜಲೇ ವಿಮಲೇ ತನುಂ**
**ತ್ಯಜಾಮಿ ತಾಂ ಯಥಾ ಭೂಯಃ ಪ್ರಾಪ್ನೋಮಿ ತತ್‌ಕರಿಷ್ಯಸಿ**

ಜಗನ್ಮಾತೆಯಾದ ಗಂಗೆಯೇ ನಿನ್ನ ನಿರ್ಮಲವಾದ ನೀರಿನಲ್ಲಿಯೇ ನಾನು ನನ್ನ ದೇಹ ತ್ಯಾಗ ಮಾಡುತ್ತೇನೆ. ಆ ದೇಹವು ನನಗೆ ಮರಳಿ ಪ್ರಾಪ್ತವಾಗುವಂತೆ ಮಾಡುವದು ಮತ್ತು ಸುಲೋಚನೆಯು ನನಗೇ ದೊರಕುವಂತೆ ಮಾಡುವದೂ ನಿನಗೇ ಸೇರಿದ್ದು.

ಹೀಗೆ ನುಡಿಯುತ್ತಲಿದ್ದ ಆ ವಿದ್ಯಾಧರನನ್ನು, ವೀರವರರಾಜ ಕುಮಾರನಿಂದ ಅಲ್ಲಲ್ಲಿ ನಿಯಮಿತರಾದ ರಾಜದೂತರು, ಹಿಡಿದುಕೊಂಡು ವೀರವರ ರಾಜಕುಮಾರನ ಬಳಿಗೆ ಕರೆದೊಯ್ದರು. ಆಗ ವೀರವರನು ಆ ವಿದ್ಯಾಧರನನ್ನು ಗದರಿಸಿ ಕೇಳಿದ. ''ನೀನು

ಯಾರು ? ಎಲ್ಲಿಂದ ಬಂದೆ? ದೇಹತ್ಯಾಗವನ್ನು ಏಕೆ ಮಾಡುತ್ತಲಿರುವೆ? ಇದೆಲ್ಲವನ್ನೂ ಹೇಳು'' ಎಂದು.

ಆಗ ಆ ವಿದ್ಯಾಧರನು ತನ್ನ ಎಲ್ಲ ವಿವಾಹದ ಸಮಾಚಾರವನ್ನು ಆ ವೀರವರ ವೇಷವನ್ನು ತಳೆದು ನಿಂತ ಸುಲೋಚನೆಯ ಎದುರು ಆದಿಯಿಂದ ಇಲ್ಲಿಯವರೆಗೆ ನಡೆದ್ದನ್ನು ತಿಳಿಸಿ ಹೇಳಿದ.

ಅದನ್ನು ಕೇಳಿ ವೀರವರನು ನಗುತ್ತ ಆ ವಿದ್ಯಾಧರನನ್ನು ಕುರಿತು ನುಡಿದ.

ವೀರವರ:-

**ಅಥ ತ್ವಂಮೂರ್ಖಲೋಕಾನಾಂ ಪ್ರವರೋಸಿ ನ ಸಂಶಯಃ ।**
**ಗಾಂಧರ್ವೀ ರಾಕ್ಷಸೀ ವಾಪಿ ಪನ್ನಗೀ ವಾಪಿ ಕಿನ್ನರೀ ।**
**ಶಾಪಾಗತೇವ ಸಾ ಕನ್ಯಾ ತಸ್ಮಾದಂತರ್ಹಿತಾ ಸ್ವಯಂ ॥**

ಯುವಕನೇ ನೀನು ಮೂರ್ಖ ಮನುಷ್ಯರಿಗೆಲ್ಲ ಮುಂದಾಳು ಆಗಿರುವೆ. ಇದರಲ್ಲಿ ಸಂಶಯವಿಲ್ಲ. ನೀನು ಬಯಸಿದ ಆ ಸುಲೋಚನಾ ಎಂಬ ಕನ್ಯೆಯು ಗಂಧರ್ವ ಕನ್ಯೆಯೋ ರಾಕ್ಷಸ ರಮಣಿಯೋ ಪನ್ನಗ ಪ್ರಮದೆಯೋ ಕಿನ್ನರ ಕಾಮಿನಿಯೋ ಆಗಿರಬಹುದು. ಅವಳು ಶಾಪದಿಂದ ಇಲ್ಲಿ ಗುಣಾಕಾರ ರಾಜನ ಕನ್ಯೆಯಾಗಿ ಹುಟ್ಟಿದ್ದಳು. ಹೇಗೆ ಹುಟ್ಟಿದ್ದಳೋ ಹಾಗೆಯೇ ಅದೃಶ್ಯಳೂ ಆದಳು.

ದೇವ ರೂಪಿಣಿಯಾದ ಆ ಕನ್ಯೆಯು ತನ್ನ ದೇವತಾನಿಲಯಕ್ಕೆ ಹೊರಟು ಹೋಗಿದ್ದಾಳೆ. ಅವಳ ದರ್ಶನವು ಮರಳಿ ನಿನಗೆ ಹೇಗೆ ಆಗುವದು?

**ಚಕೋರ ಪೇಯಂ ಪೀಯೂಷಂ ಗಗನೇ ರೋಹಿಣೀಪತೇಃ ।**
**ಕಿಂ ಶಕ್ನುವಂತಿ ತಂ ಪಾಪಾ ವಾಯಸಾ ಬಲಿನೋಪಿ ಚ ॥**

ಮುಗಿಲಿನಲ್ಲಿರುವ ಚಂದ್ರನ ಅಮೃತವನ್ನು ಚಕೋರ ಪಕ್ಷಿಯು ಮಾತ್ರ ಕುಡಿಯ ಬಲ್ಲದು. ಕಾಗೆಗಳು ಅಥವಾ ಬೇರೆ ಹಕ್ಕಿಗಳು ಈ ಚಂದ್ರಿಕಾ ಪಾನವನ್ನು ಮಾಡಬಲ್ಲವೇ?

**ಯದಪ್ರಾಪ್ಯಂ ನ ತತ್ ಪ್ರಾಪ್ಯಂ**
**ಪ್ರಾಪ್ಯಂ ಯತ್ತಚ್ಚಲಭ್ಯತೇ**
**ಜಾನನ್ನೇ ತಜ್ಞನಃ ಕಶ್ಚಿತ್**
**ಮೋಹಂ ಪ್ರತಿ ನ ಗಚ್ಛತಿ**

ಮಾನವರಿಗೆ ಪ್ರಾಪ್ಯವಾದದ್ದು ಮಾತ್ರ ದೊರಕುತ್ತದೆ. ಅಪ್ರಾಪ್ಯವಾದದ್ದು ಎಂದಿಗೂ ದೊರಕುವದಿಲ್ಲ. ಇದನ್ನೆಲ್ಲ ತಿಳಿದ ಯಾವ ಮನುಷ್ಯನೂ ಎಂದೂ ಅದಕ್ಕಾಗಿ ಶೋಕವನ್ನು ಹೊಂದುವದಿಲ್ಲ.

**ಕೇನಾಪಿ ದೀಯತೇ ಕನ್ಯಾ ಕನ್ಯಾ ಕೇನಾಪಿ ಗೃಹ್ಯತೇ**
**ಪೂರ್ವ ಜನ್ಮನಿ ಯಾ ಕನ್ಯಾ ತಾಂ ಕನ್ಯಾಂ ಲಭತೇ ಪತಿಃ**

ಯಾರೋ ಕನ್ಯೆಯನ್ನು ಕೊಡುತ್ತಾರೆ ಯಾರೋ ಬಂದು ಮದುವೆಯಾಗುತ್ತಾರೆ. ಹೀಗೆ ನಮ್ಮ ಕಣ್ಣಿಗೆ ಕಂಡರೂ ಪೂರ್ವ ಜನ್ಮದಲ್ಲಿ ಯಾವಳು ಯಾವನನ್ನು ಕೈಹಿಡಿದಿರುವಳೋ ಅವನೇ ಮತ್ತೆ ಈ ಜನ್ಮದಲ್ಲಿ ಅವನನ್ನೇ ಮದುವೆಯಾಗುತ್ತಾಳೆ.

**ಪುತ್ರಪ್ರಯೋಜನಾಃ ಭಾರ್ಯಾಃ ಪುತ್ರಾಃ ಪಿಂಡ ಪ್ರಯೋಜನಾಃ**
**ಕುರ್ವಂತಿ ದಾರ ಗ್ರಹಣ ಮೇತದೇವ ಮನೀಷಿಣಃ**

ಹೆಂಡತಿಯ ಮುಖ್ಯ ಪ್ರಯೋಜನ ಮಕ್ಕಳು. ಮಕ್ಕಳನ್ನು ಪಡೆಯುವದು ಮರಣಾನಂತರ ಪಿಂಡದಾನಕ್ಕಾಗಿ. ಇದನ್ನೆಲ್ಲ ವಿಚಾರ ಮಾಡಿಯೇ ತಿಳುವಳಿಕೆಯುಳ್ಳವರು ಮದುವೆ ಮಾಡಿಕೊಳ್ಳುತ್ತಾರೆ.

**ನಾರೀಷು ಸತತಂ ಚಿತ್ತಂ ವಿಷ್ಣುಂ ಭಕ್ತಾವನಾದರಃ**
**ಶೋಕೈಃಶ್ಚಿತ್ತನುತ್ಯಾಗಃ ತಿಸ್ರಃ ಪುಂಸಾಂ ವಿಂಡಬನಾಃ**

ಯಾವಾಗಲೂ ಹೆಣ್ಣಿನಲ್ಲಿಯೇ ಮನಸ್ಸು. ವಿಷ್ಣು ಭಕ್ತಿಯಲ್ಲಿ ಅನಾದರ ಹಲ ಕೆಲವು ಶೋಕಕ್ಕಾಗಿ ದೇಹತ್ಯಾಗ. ಇವು ಮೂರು ಮನುಷ್ಯರನ್ನು ನಗೆಗೆ ಈಡು ಮಾಡುವ ದುರ್ಘಟನೆಗಳು.

**ದಾರಾಃಪುತ್ರಾಸ್ತಥಾ ಭ್ರಾತಾ ದೇಶಾಶ್ಚಬಾಂಧವಾಸ್ತಥಾ ।**
**ಪುನರ್ಲಭ್ಯಾ ಇಮೇ ಸರ್ವೇ ಪುನರ್ಲಭ್ಯಾ ನ ಚಾಸವಃ ॥**

ಮಡದಿ ಮಕ್ಕಳು, ಅಣ್ಣ ತಮ್ಮಂದಿರು, ರಾಜ್ಯ ಕೋಶ. ಬಂಧು ಮಿತ್ರ ಮುಂತಾದವರು ಕಳೆದು ಹೋಗಿದ್ದರೂ ಮತ್ತೆ ದೊರಕಿಸಬಹುದು. ಆದರೆ ಜೀವವನ್ನು ಮಾತ್ರ ಒಮ್ಮೆ ಕಳೆದುಕೊಂಡರೆ ಮತ್ತೆ ಎಂದೂ ಯಾರೂ ತಿರುಗಿ ಸಂಪಾದಿಸಲಾರರು.

**''ನ ಮುಕ್ತೋ ವಿಷಯೋ ಧರ್ಮೋ ನಚ ಕರ್ಮ ಕೃತಂ ತ್ವಯಾ**
**ವರ್ತಮಾನೇ ಗತೇ ಮೂಢ ಭವಿಷ್ಯಂ ಜನ್ಮ ದುರ್ಲಭಂ**

ಮೂಢ ಮಾನವನೇ. ನೀನು ವಿಷಯದ ಆಶೆಯನ್ನು ಬಿಡಲಿಲ್ಲ. ಧರ್ಮವನ್ನು ಆಚರಿಸಲಿಲ್ಲ. ಪುಣ್ಯ ಕರ್ಮವನ್ನು ಮಾಡಲಿಲ್ಲ. ಆದುದರಿಂದ ಈಗ ಇದ್ದ ಈ ನರ ದೇಹವನ್ನು ನೀನು ಆತ್ಮಹತ್ಯೆಯಿಂದ ಕಳೆದುಕೊಂಡರೆ ಭವಿಷ್ಯಕಾಲದಲ್ಲಿ ನಿನಗೆ ಇಂಥ ಮಾನವ ಜನ್ಮವು ಅತ್ಯಂತ ದುರ್ಲಭ.

**ಮಮ ಮಾತಾ ಮಮ ಪಿತಾ ಭಾರ್ಯಾ ಭ್ರಾತಾನಧನಂ ಮಮ**
**ನಿಷ್ಪಲಂ ಯಾತಿ ವೈ ಜನ್ಮ ನೃಣಾಂ ಮಮತಯಾತಯಾ**

ಇವಳು ನನ್ನ ತಾಯಿ. ಅವನು ನನ್ನ ತಂದೆ. ಈಕೆ ನನ್ನ ಮಡದಿ. ಆತ ನನ್ನ ತಮ್ಮ. ಇದು ನನ್ನ ದ್ರವ್ಯ. ಹೀಗೆ ಮಮತೆಯ ಸುಳಿಯಲ್ಲಿ ಸಿಕ್ಕು ಮಾನವರ ಜನ್ಮವು ವ್ಯರ್ಥವಾಗಿ ಕಳೆದುಹೋಗುತ್ತದೆ.

ಹೀಗೆ ಆ ವೀರವರ ಎಂಬ ಪುರುಷವೇಷದ ರಾಜಕುಮಾರಿಯಿಂದ ನೀತಿ ಪರವಾದ ಹಿತೋಪದೇಶವನ್ನು ಕೇಳಿ ವಿಕ್ರಮರಾಜನ ಮಗನಾದ ವಿದ್ಯಾಧರನು ತನ್ನ ದುಗುಡ ದುಮ್ಮಾನವನ್ನೆಲ್ಲ ಮರೆತು ದೇಹತ್ಯಾಗದ ವಿಚಾರವನ್ನು ಬಿಟ್ಟುಕೊಟ್ಟ. ಅಲ್ಲಿಯೇ ನಿಂತುಕೊಂಡ.

ಇತ್ತ ಗಂಧಿನಿ ಎಂಬ ಅರಮನೆಯ ಸುಗಂಧ ವಾಹಿನಿಯಾದ ಸೇವಕಿಯ ಮನೆಯಲ್ಲಿ ಆಶ್ರಯಪಡೆದು, ರಾಜಕುಮಾರಿಯ ಸ್ವಯಂವರ ಸಂಕೇತವನ್ನು ಕೂಡಾ ಮರೆತು ಮರಗಟ್ಟು,

ಅರಿವುಗೆಟ್ಟು, ತನ್ನ ಹಿತದ ಪರಿವೆಯಿಲ್ಲದೇ ಹಾಸಿಗೆಯಲ್ಲಿಯೇ ಬಿದ್ದು ಕೊಂಡಿರುವ ಮಾಧವನನ್ನು ಗಂಧಿನಿಯು ಗಡಸುದನಿಯಲ್ಲಿ ಗಟ್ಟಿಯಾಗಿ ಕೂಗಿ ಎಬ್ಬಿಸಿ ಹೇಳಿದಳು.

**ಗಂಧಿನಿ:-**

**ಉತ್ತಿಷ್ಠೋತಿಷ್ಠ ದುರ್ಬುದ್ಧೇ ಶ್ರಮಸ್ತೇಽವಿಫಲೋಽಭವತ್**
**ವಿವಾಹಕಾಲೇ ಸಾಕನ್ಯಾ ಬಭೂವಾಂರ್ತರ್ಹಿತಾ ಸ್ವಯಂ ॥**

ಬುದ್ಧಿಗೇಡಿಯಾದ ರಾಜಕುಮಾರ, ಏಳು ಏಳು. ನಿದ್ದೆ ತಿಳಿದು ಎದ್ದು ಕೂಡು. ಈ ನಿದ್ದೆಯ ನಾದದಿಂದ ಸಮುದ್ರವನ್ನು ಉಲ್ಲಂಘಿಸಿ ಬಂದ ನಿನ್ನ ಶ್ರಮವೆಲ್ಲವೂ ವ್ಯರ್ಥವಾಯಿತು. ರಾಜಕುಮಾರಿ ಹೇಳಿದಂತೆ ಮದುವೆಯ ವೇಳೆಯಲ್ಲಿ ನೀನು ಆ ಸಂಕೇತ ಸ್ಥಾನಕ್ಕೆ ಹೋಗಲಿಲ್ಲ. ಆ ರಾಜಕನ್ಯೆಯು ಸ್ವಯಂವರ ಮಂಟಪದಲ್ಲಿಯೇ ಅದೃಶ್ಯಳಾಗಿ ಎಲ್ಲಿಯೋ ಹೋಗಿ ಬಿಟ್ಟಿದ್ದಾಳೆ.

ಗಂಧಿನಿಯ ಈ ಮಾತನ್ನು ಕೇಳಿದ ಕೂಡಲೇ ಚಟ್ಟನೆ ಎದ್ದು ಕುಳಿತ ಮಾಧವ. ನಿದ್ದೆಯ ಗುಂಗಿನಲ್ಲಿ ರಾಜಕುಮಾರಿಯು ಹೇಳಿದ ಸಮಯ ಸಂಕೇತವನ್ನು ಮರೆತ ತಾನು ಹಾಸಿಗೆಯಲ್ಲಿಯೇ ಹೊರಳಾಡಿದ್ದರ ಫಲವಾಗಿ ಕನ್ಯೆಯನ್ನು ಕಳೆದುಕೊಂಡಂತಾಯಿತು ಎಂದು ಭಯಂಕರ ಶೋಕದಿಂದ ವಿಹ್ವಲವಾದ ಆ ಮಾಧವ ದುಃಖೋದ್ರೇಕದಿಂದ ನೆಲದ ಮೇಲೆ ಬಿದ್ದು ಉರುಳಾಡಿ ಹೊರಳಾಡಿ ಅಳತೊಡಗಿದ.

**ಕನ್ಯಾಯಾ ದೂಷಣಂ ನಾಸ್ತಿ ನಾಸ್ತಿ ವಿದ್ಯಾಧರಸ್ಯ ವಾ ।**
**ಮಮೈವ ದೂಷಣಂ ಸರ್ವಂ ಯತೋ ಹೀನಸ್ಯ ಸಂಗಭಾಕ್ ॥**

ಇದರಲ್ಲಿ ರಾಜಕುಮಾರಿಯಾದ ಸುಲೋಚನೆಯದು ಏನೂ ತಪ್ಪು ಇಲ್ಲ. ವರನಾದ ವಿದ್ಯಾಧರನದೂ ಏನೂ ತಪ್ಪು ಇಲ್ಲ. ಪ್ರಚೇಷ್ಟನಂಥ ದುಷ್ಟನ ಸ್ನೇಹ ಮಾಡಿದ್ದು ನನ್ನದೇ ದೊಡ್ಡ ತಪ್ಪು ಹೀನರ ಸಂಗ ಮಾಡುವದು ದೊಡ್ಡ ದೋಷ.

**ನೀಚಸಂಗೇ ಕೃತೇ ಪುಂಸಾಂ ಸುಖಂ ಯಚ್ಛತಿ ನೋ ವಿಧಿಃ**
**ಏತದೇವ ಮಯಾ ಜ್ಞಾತಂ ಯತೋ ಗತಿರಿಯಂ ಗತಿ ಮಮ**

ನೀಚರ ಸಹವಾಸವನ್ನು ಮಾಡಿದರೆ ವಿಧಿಯು ಎಂದೂ ಸುಖವನ್ನು ನೀಡುವದಿಲ್ಲ. ಪ್ರಚೇಷ್ಟನಂಥ ದುಷ್ಟನ ಸಂಗ ಮಾಡಿದ ನನಗೆ ಇಂದು ಈ ವಿಷಯವು ಮನದಟ್ಟಾಯಿತು.

**ನ ಪ್ರಾಪ್ನೋತಿ ಸುಖಂ ಕಿಂಚಿತ್ ನೀಚ ಸಂಗಾನ್ ಮಹಾನಪಿ ।**
**ಪ್ರೇತ ಸಂಗಾನ್ ಮಹಾದೇವೋ ನಗ್ನೋ ಭಗ್ನ ವಿಭೂಷಣಃ ॥**

ನೀಚ ಜನರ ಸಹವಾಸವನ್ನು ಮಾಡಿದರೆ ಎಂಥ ದೊಡ್ಡ ಮನುಷ್ಯನು ಕೂಡ ಸುಖವನ್ನು ಹೊಂದಲಾರ. ಪ್ರೇತಗಳ ಸಹವಾಸ ಮಾಡಿದ್ದರಿಂದ ಮಹಾದೇವರು ತನ್ನ ಆಭರಣ ಅಲಂಕಾರಗಳನ್ನೆಲ್ಲ ಕಳೆದುಕೊಂಡು ಬಟ್ಟೆಯಿಲ್ಲದೇ ದಿಗಂಬರನಾಗಿ ತಿರುಗುತ್ತಿದ್ದಾನೆ.

**ಪ್ರವಿಶ್ಯ ನಿಲಯಂ ನೀಚಃ ಸ್ತ್ರೀಧನಾಧಿಕ ಮಿಚ್ಛತಿ ।**
**ಕಿಂಚಿತ್ ಪ್ರಸಂಗಮಾಸಾದ್ಯ ಷಡ್ವಕ್ತ್ರಃ ಸಗಜಾನನಃ ॥**

ದುಷ್ಟ ಮನುಷ್ಯನು ಆಶ್ರಯಕೊಟ್ಟ ಮನುಷ್ಯರ ಮನೆಯಲ್ಲಿ ಹೊಕ್ಕು ಅವರ ಮನೆಯ ಹೊನ್ನು, ಹೆಣ್ಣು, ಹಣ ಎಲ್ಲದರ ಮೇಲೆ ಕಣ್ಣು ಇಡುತ್ತಾನೆ. ಪ್ರಸಂಗ ಬಂದಾಗ ನಾಕಾರು ಮುಖಗಳಿಂದ ಲಂಬೋದರನಾಗಿ ಎಲ್ಲವನ್ನೂ ನುಂಗಿ ನೀರು ಕುಡಿಯುತ್ತಾನೆ.

**ಪಾದಮೇಕಮಪಿ ಪ್ರಾಜ್ಞೋ ನಿಚೈಃ ಸಹ ನ ಗಚ್ಛತಿ ।**
**ವಿಶ್ವಾಸ ವಚನ ಭ್ರಷ್ಟಃ ಸದ್ಯ ಏವ ವಿಷೀದತಿ ॥**

ಪ್ರಾಜ್ಞನಾದ ಮನುಷ್ಯನು ನೀಚ ಜನರ ಜೊತೆಗೆ ಒಂದು ಹೆಜ್ಜೆ ಕೂಡ ಮುಂದೆ ನಡೆಯಬಾರದು. ವಿಶ್ವಾಸದ್ರೋಹ ಮಾಡಿ ವಚನಭ್ರಷ್ಟನಾಗಿ ನೀಚ ಮನುಷ್ಯನು ಕೂಡಲೇ ಅದರ ಫಲವಾಗಿ ದುಃಖವನ್ನು ಹೊಂದುತ್ತಾನೆ.

**ಮನಸ್ಯೇಕಂ ವಚಸ್ಯೇಕಂ ಕಮರ್ಣ್ಯೇಕಂ ಯತಾತ್ಮನಾಂ ।**
**ಮನಸ್ಯ ದ್ವಚಮಚನ್ಯತ್ ಕರ್ಮಣ್ಯನ್ಯದ್ದು ದುರಾತ್ಮನಃ ॥**

ತಮ್ಮ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟು ಕೊಂಡ ಸಜ್ಜನರ ಮನಸ್ಸಿನಲ್ಲಿದ್ದದ್ದೇ ಮಾತಿನಲ್ಲಿರುತ್ತದೆ. ಮಾತಿನಲ್ಲಿರುವುದೇ ಕೃತಿಯಲ್ಲಿರುತ್ತದೆ. ಹೀಗೆ ಮಾತು, ಮನಸ್ಸು, ಕೃತಿ ಮೂರರಲ್ಲಿಯೂ ಒಂದೇ ರೀತಿಯಾಗಿರುವುದು. ಸಜ್ಜನರ ಸ್ವಭಾವ. ಆದರೆ ದುರ್ಜನರ ಮನಸ್ಸಿನಲ್ಲಿರುವದೇ ಬೇರೆ, ಮಾತಿನಲ್ಲಿರುವುದು ಆದಕ್ಕಿಂತ ಬೇರೆ. ಅವರು ಮಾಡುವುದು ಅವೆರಡರಕ್ಕಿಂತ ಬೇರೆಯಾದುದನ್ನೇ.

**ಯಾಥಾಕರಿಷ್ಯತ್ ಸಾ ಕನ್ಯಾ ವಿವಾಹಂ ಸಾ ನೃಪಾತ್ಮಜಾ ।**
**ನಾಭವಿಷ್ಯತ್ ತದಾ ಶೋಕಃ ಸ್ವಲ್ಪೋಽಪಿ ಹೃದಯೇ ಮಮ ॥**

ಒಂದು ವೇಳೆ ರಾಜಕುಮಾರಿಯಾದ ಆ ಕನ್ಯೆಯು ಯಾರನ್ನಾದರೂ ಮದುವೆಯಾಗಿ ಸುಖದಿಂದ ಇದ್ದರೆ ನನ್ನ ಹೃದಯದಲ್ಲಿ ಸ್ವಲ್ಪವೂ ದುಃಖವುಂಟಾಗುತ್ತಿರಲಿಲ್ಲ.

**ಸ್ವರ್ಗಂ ಗತಾಚ್ಚೇತ್ ಸಾ ಕನ್ಯಾ ಸರ್ವ ಲಕ್ಷಣ ಸಂಯತಾ ।**
**ನೀತಾ ನೀಚೇನ ಶೋಕೋಽಯಂ ಹೃದಯೇ ದುಸ್ಸಹೋಽ ಭವತ್॥**

ಪರಮ ದುಷ್ಟನಾದ ನನ್ನ ಸೇವಕ ಪ್ರಚೇಷ್ಟನಿಂದ ಅಪಹರಿಸಲ್ಪಟ್ಟು ಆ ರಾಜಕುಮಾರಿಯು ಮರಣ ಹೊಂದಿ ಸ್ವರ್ಗಕ್ಕೆ ಹೋಗಿದ್ದರೆ ಮಾತ್ರ ನನ್ನ ದುಃಖವು ಅಸಹ್ಯವಾಗಿ ತಾಳಲಾರದಂತಾಗುವದು.

**ಲಿಖಿತಾಮಿವ ಸರ್ವತ್ರ ತಾಂ ಪಶ್ಯಾಮಿ ವರಾನನಾಂ ।**
**ವಿಸ್ಮರ್ತುಂ ನಹಿ ಶಕ್ನೋಮಿ ಜೀವತಾನೇನ ಚಾತ್ಮನಾ ॥**

ಸುಂದರಿಯಾದ ಆ ಸುಲೋಚನೆಯೇ ನನ್ನ ಕಣ್ಣೆದುರು ಎಲ್ಲ ಕಡೆಗೂ ಬರೆದಂತೆ ಎಲ್ಲೆಡೆಗೂ ಕೊರೆದಂತೆ ಕಣ್ಣಿಗೆ ಕಾಣುತ್ತಿರುವಳು. ಕಣ್ಣು ತೆರೆದಲ್ಲೆಲ್ಲ ನನಗೆ ಅವಳೇ ಗೋಚರವಾಗುವಳು. ನಾನು ಈ ದೇಹದಿಂದ ಬದುಕಿ ಇರುವವರೆಗೂ ನಾನು ಅವಳನ್ನು ಎಂದಿಗೂ ಮರೆಯಲಾರೆ.

**ನೀಚಕ್ರೋಡ ಗತಾ ಸಾಧ್ವೀ ನಹಿ ಜೀವತಿ ಸಾ ಕ್ಷಣಂ ।**
**ವಿದ್ಯಾಧರೋಪಿ ತಚ್ಚೋರ್ಕೈ ರ್ನಜೀವಿಷ್ಯತಿ ದಾರುಣ್ಯೈಃ ॥**

ಪ್ರಚೇಷ್ಟನಂತಹ ಯಾರಾದರೂ ದುಷ್ಟರು ಅವಳನ್ನು ಅಪಹರಿಸಿಕೊಂಡು ಹೋದರೆ ಪರಮ ಪತಿವ್ರತೆಯಾದ ಆ ರಾಜಕುಮಾರಿಯು ಎಂದೂ ಬದುಕಿ ಉಳಿಯಲಾರಳು. ಅವಳ ವಿರಹದ ದುಃಸ್ಸಹವಾದ ಶೋಕದಿಂದ ವಿದ್ಯಾಧರನು ಕೂಡ ಬದುಕಲಾರ.

**ಯಥಾ ಮಾತಾ ಪಿತಾ ತ್ಯಕ್ತೋ ದೇಶಸ್ತತ್ ಪ್ರಾಪ್ತಯೇ ಮಯಾ ।**
**ತಥೈವ ಸಂಪ್ರತಿ ಪ್ರಾಣಾಃ ತ್ಯಕ್ತವ್ಯಾ ನಾತ್ರ ಸಂಶಯಃ ॥**

ಆ ಸುಲೋಚನೆಯನ್ನು ಪಡೆಯಲಿಕ್ಕಾಗಿ ನಾನು ತಾಯಿಯನ್ನು ಬಿಟ್ಟೆ-ತಂದೆಯನ್ನು ತೊರೆದೆ. ದೇಶವನ್ನು ಬಿಟ್ಟು ಬಂದೆ. ಅದರಂತೆ ಈಗ ಅವಳಿಗಾಗಿ ನಾನು ನನ್ನ ಪಂಚಪ್ರಾಣಗಳನ್ನೇ ಪರಿತ್ಯಜಿಸತಕ್ಕದ್ದು. ಅದರಲ್ಲಿ ಸಂದೇಹವೇ ಇಲ್ಲ. ಗಂಗಾ ಸಾಗರ ಸಂಗಮದಲ್ಲಿ ಅವಳ ಪುನಃ ಪ್ರಾಪ್ತಿಯ ಉದ್ದೇಶದಿಂದ ದೇಹತ್ಯಾಗ ಮಾಡಿದರೆ ಮುಂದೆ ನನಗೆ ಆ ಸುಲೋಚನೆಯೊಂದಿಗೆ ಮುಂದಿನ ಜನ್ಮದಲ್ಲಿಯಾದರೂ ಮಧುರ ಮಿಲನವಾಗುವದು. ಆದುದರಿಂದ ಈಗ ಆ ಪರಮ ಪವಿತ್ರವಾದ ಗಂಗಾಸಾಗರ ಸಂಗಮದಲ್ಲಿ ಈ ಶರೀರವನ್ನು ವಿಸರ್ಜಿಸುತ್ತೇನೆ.

ಹೀಗೆ ನಿರ್ಧಾರ ಮಾಡಿ ಆ ಮಾಧವನು ಗಂಗಾಸಾಗರ ಸಂಗಮ ತೀರ್ಥಕ್ಕೆ ಹೊರಟು ನಿಂತ. ಅಷ್ಟರಲ್ಲಿ ಅಲ್ಲಿಗೆ ಮುನಿ ಮಂಡಲದ ಮುಕುಟದಂತಿರುವ ನಾರದ ಮುನಿಗಳು ಆಗಮಿಸಿದರು. ಭಕ್ತಿಯಿಂದ ಅವರಿಗೆ ವಂದನೆಗೈದು ಸ್ತೋತ್ರ ಮಾಡಿದ. ಅದರಿಂದ ಪ್ರಸನ್ನರಾದ ನಾರದರು ಆ ಮಾಧವನಿಗೆ ಪಾದಲೇಪ ಎಂಬ ರಸವನ್ನು ಕೊಟ್ಟರು. ಆ ಲೇಪರಸವನ್ನು ಪಾದಗಳಿಗೆ ಹಚ್ಚಿಕೊಂಡ ಕೂಡಲೆ ಆ ಮಾಧವನಿಗೆ ಕ್ಷಣಾರ್ಧದಲ್ಲಿ ಇಚ್ಛಿತ ಸ್ಥಾನಕ್ಕೆ ಹೋಗುವ ಶಕ್ತಿ ಬಂದಿತು. ಅದರ ಪ್ರಭಾವದಿಂದ ಅವನು ಕೆಲವೇ ದಿನಗಳಲ್ಲಿ ಸಾಗರ ಸಂಗಮ ತೀರ್ಥಕ್ಕೆ ಬಂದ. ಅಲ್ಲಿನ ಪವಿತ್ರ ಸಲಿಲದಲ್ಲಿ ಸ್ನಾನ ಮಾಡಿದ. ಭಕ್ತಿಯಿಂದ ಶ್ರೀಹರಿಯನ್ನು ತುಳಸಿ ಹೂ, ಪುಷ್ಪ ಮಾಲೆಗಳನ್ನು ಏರಿಸಿ ಅರ್ಚಿಸಿದ. ಶ್ರೀಹರಿಯ ಆ ನಿರ್ಮಾಲ್ಯವನ್ನು ಅನಂತರ ತನ್ನ ಕೊರಳಲ್ಲಿ ಹಾಕಿಕೊಂಡು ಕೈ ಜೋಡಿಸಿ ಪ್ರಾರ್ಥಿಸಿದ ಲೋಕಪಾವನೆಯಾದ ಭಾಗೀರಥಿಯನ್ನು.

**ಮಾಧವ:-**

**ದೇವಿ, ತ್ವತ್ಸಲಿಲೇ ದೇಹಂ ಪ್ರಾಸ್ಯ ಶೋಕಂತ್ಯ ಜಾಮ್ಯಹಂ ।**
**ಬಾವಿ ಜನ್ಮನಿ ತಾಂ ಕನ್ಯಾಂ ಮಹ್ಯಂ ದಾಸ್ಯಸಿ ಶೋಭನಾಂ ॥**

ಗಂಗಾದೇವಿಯೇ ಪ್ರೇಯಸಿಯ ವಿಯೋಗದಿಂದ ಘೋರದುಃಖವನ್ನು ಹೊಂದಿದ ನಾನು ನಿನ್ನ ನೀರಿನಲ್ಲಿ ಈ ನನ್ನ ದೇಹ ತ್ಯಾಗವನ್ನು ಮಾಡುತ್ತಿದ್ದೇನೆ. ಮುಂದಿನ ಜನ್ಮದಲ್ಲಿಯಾದರೂ ನನಗೆ ಸುಂದರಿಯಾದ ರಾಜಕುಮಾರಿ ಸುಲೋಚನೆ ಎಂಬ ಕನ್ಯೆಯನ್ನು ನೀನು ದಯಮಾಡಿ ನೀಡು.

ಹೀಗೆ ನುಡಿದು ಮೂರು ಲೋಕದ ತಾಯಿಯಾದ ಆ ಮಂದಾಕಿನಿಯನ್ನು ಭಕ್ತಿಯಿಂದ ವಂದಿಸಿ ಆ ಮಾಧವನು ಸಂಗಮದ ನೀರಿನಲ್ಲಿ ಮುಳುಗಲು ಹೊರಟನು.

ಇದನ್ನೆಲ್ಲ ಇಷ್ಟು ಹೊತ್ತಿನವರೆಗೆ ನೋಡುತ್ತ ಮಾಧವನ ದುಃಖೋದ್ರೇಕ ವಿಲಾಪವನ್ನು ಕೇಳುತ್ತ ಅಲ್ಲಿಯೇ ದಂಡೆಯ ಮೇಲೆ ವೀರವರ ಎಂಬ ರಾಜಕುಮಾರ ವೇಷದ ಸುಲೋಚನೆಯು ನಿಂತುಕೊಂಡಿದ್ದಳು. ತನಗಾಗಿ ಪ್ರಾಣಾರ್ಪಣೆ ಮಾಡ ಹೊರಟ ಆ ಮಾಧವನನ್ನು ತಡೆದು ಕೈ ಹಿಡಿದು ನುಡಿದ ಆ ವೀರವರ ರಾಜಕುಮಾರ.

**ವೀರವರ:-** ರಾಜಕುಮಾರ, ನೀನು ಯಾರು? ಈ ಸಂಗಮದ ತೀರ್ಥ ಜಲದಲ್ಲಿ ನೀನೇಕೆ ದೇಹ ತ್ಯಾಗವನ್ನು ಮಾಡಲು ಹೊರಟಿರುವೆ? ಇದೆಲ್ಲವನ್ನೂ ಹೇಳು.

ಪುರುಷ ವೇಷದಲ್ಲಿದ್ದ ವೀರವರನ ಈ ಮಾತನ್ನು ಕೇಳಿ ಅವನಿಂದ ಅಲ್ಲಿಯೇ ದಂಡೆಯ ಮೇಲೆ ನೆರೆದ ರಾಜಪರಿವಾರ ಹಾಗೂ ಸೇವಕರ ಹಾಗೂ ಯಾತ್ರಿಕರ ಸಭೆಗೆ ಕೈಹಿಡಿದು ಎಳೆದು ತರಲ್ಪಟ್ಟ ರಾಜಕುಮಾರ ಮಾಧವನು ಮಾತನಾಡಿದ.

**ಮಾಧವ:-** ನಾನು ವಿಕ್ರಮ ರಾಜನ ಮಗ. ಮಾಧವ ಎಂದು ನನ್ನ ಹೆಸರು. ಒಂದು ದಿನ ನಾನು ಬೇಟೆಯಾಡಲು ಒಂದು ಘೋರವಾದ ಬೆಂಗಾಡಿಗೆ ಹೋಗಿದ್ದೆ. ಆ ಅರಣ್ಯದಲ್ಲಿ ತುಸು ದೂರ ಮುಂದೆ ತೆರಳಿದ ಬಳಿಕ ಅಲ್ಲಿ ಒಂದು ಪಟ್ಟಣ ಇದ್ದಿತು. ಆ ನಗರದ ಸಮೀಪದಲ್ಲಿಯೇ ಒಂದು ತಿಳಿ ನೀರಿನ ಕೊಳ. ಆ ಪುಷ್ಕರಣಿಯಲ್ಲಿ ಏಕಾಕಿನಿಯಾದ ಓರ್ವ ಬಳ್ಳಿಮೈ ಬಾಲೆ ಮೈ ತೊಳೆದುಕೊಳ್ಳುತ್ತಿರುವದನ್ನು ನಾನು ನೋಡಿದೆ. ಅವಳ ರೂಪ ಸಿರಿಗೆ ನಾನು ಮುಗ್ಧನಾದೆ. ಅವಳ ಶಾರೀರಿಕ ಸೌಂದರ್ಯದಿಂದ ಆಕೃಷ್ಟನಾಗಿ ನಾನು ಅವಳನ್ನು ಸಮೀಪಿಸಿದೆ. ರೂಪರಾಣಿಯಾದ ರಮಣೀಮಣಿಯ ಹೆಸರು ಚಂದ್ರಕಲಾ. ಕಾಮಾತುರನಾದ ನನ್ನನ್ನು ಕುರಿತು ಆ ತಿಳುವಳಿಕೆಯುಳ್ಳ ತರಳೆ, ತ್ರಿಲೋಕ ಸುಂದರಿಯಾದ ಸುಲೋಚನೆಯ ಸೌಂದರ್ಯದ ಬಗೆಗೆ ಹೇಳಿದಳು. ಮಾನವ ಲೋಕಕ್ಕೆ ದುರ್ಲಭವಾದ ಅವಳ ಚೆಲುವು ಶೀಲ ಸೌಂದರ್ಯಗಳ ಬಗ್ಗೆ ನನ್ನ ಮನಸ್ಸಿನಲ್ಲಿ ಪ್ರೇಮಾದರಗಳು ಹುಟ್ಟುವಂತೆ ಮಾಡಿದಳು. ಚಂದ್ರಕಲೆಯ ಮುಖದಿಂದ ಅನಿಂದ್ಯ ಸುಂದರಿಯಾದ ಸುಲೋಚನೆಯ ಸೌಂದರ್ಯದ ಬಣ್ಣನೆಯನ್ನು ಕೇಳಿ ನಾನು ಹೇಗಾದರೂ ಮಾಡಿ ಅವಳನ್ನು ಪಡೆಯಬೇಕು ಎಂದು ನಿರ್ಧಾರಮಾಡಿದೆ. ನಮ್ಮ ಅರಮನೆಯ ಕುದುರೆಯ ಲಾಯದಲ್ಲಿದ್ದ ಉಚ್ಚೈಶ್ರವದ ತಳಿಯ ಉತ್ತಮ ಕುದುರೆಯನ್ನು ನನ್ನ ಪ್ರಚೇಷ್ಟ ಎಂಬ ಭೃತ್ಯನೊಂದಿಗೆ ಏರಿದೆ. ಆಕಾಶಕ್ಕೆ ಹಾರಿದೆ. ಗಗನ ಪಥದಲ್ಲಿ ಸಾಗುತ್ತ ಸಮುದ್ರವನ್ನೂ ದಾಟಿದೆ. ಪ್ಲಕ್ಷ ದ್ವೀಪದಲ್ಲಿ ಇರುವ ಪುರಿ ಎಂಬ ನಗರಕ್ಕೆ ಅಶ್ವಾರೂಢನಾಗಿ ತೆರಳಿದೆ.

ಅದೇ ದಿನದಂದು ಆ ದೇಶದ ರಾಜಕುಮಾರಿಯ ವಿವಾಹ ಪೂರ್ವದ ಸುಗಂಧಿ ಸ್ನಾನದ ಸಮಾರಂಭ ಇದ್ದಿತು. ಅದನ್ನು ಕೇಳಿ ನಾನು ರಾಜಕುಮಾರಿಗೆ ಒಂದು ಪತ್ರ ಬರೆದು ನನ್ನ ಬೆರಳಿನ ಉಂಗುರವನ್ನು ಅದರ ಜೊತೆಗೆ ಹೂವಿನ ಹಾರದ ನಡುವೆ ಇಟ್ಟು ರಾಜಕುಮಾರಿಯ ಬಳಿಗೆ ಕಳಿಸಿದೆ. ಆ ನನ್ನ ಪತ್ರಕ್ಕೆ ರಾಜಕುಮಾರಿಯು ಒಂದು ಉತ್ತರವನ್ನು ಬರೆದು ಕಳಿಸಿದಳು. ಅದನ್ನು ಬರೆದದ್ದು ಹೀಗೆ ''ತ್ರಿವಿಕ್ರಮ ದೇವನ ಮಗನಾದ ವಿದ್ಯಾಧರ ಎಂಬ ವರನಿಗೆ ನನ್ನ ತಂದೆಯು ನನ್ನನ್ನು ಮದುವೆ ಮಾಡಲು ಹೊರಟಿದ್ದಾನೆ. ಆದರೆ ನಾನು ಕ್ಷತ್ರಿಯ ರಾಜಕುಮಾರಿ. ನನ್ನ ಸ್ವಯಂವರದ ಒಂದು ಪಣವನ್ನು ನಾನು ನಿರ್ಧರಿಸಿಕೊಂಡಿದ್ದೇನೆ. ಇಂದು ಸುಗಂಧಿ ಸಲಿಲದಿಂದ ನನ್ನ ಅಧಿವಾಸನಾ ಎಂಬ ಅಭ್ಯಂಗ ಸಮಾರಂಭ ಇರುತ್ತದೆ. ನಾಳೆ ನನ್ನ ಮದುವೆ. ನೀನು ನನ್ನನ್ನು ಪಡೆಯಲು ಒಂದು ಉಪಾಯವನ್ನು ಹೇಳುತ್ತೇನೆ. ಅದನ್ನು ಲಕ್ಷವಿಟ್ಟು ಕೇಳು. ಪ್ರಯತ್ನ ಮಾಡು. ಅದರಲ್ಲಿ ಯಶಸ್ವಿಯಾದರೆ ನಾನು ನಿನ್ನವಳೇ ವರನಿಗೆ ಅಭಿಮುಖಳಾಗಿ ನನ್ನ ಎಡತೋಳನ್ನು ಮೇಲಕ್ಕೆ ಎತ್ತಿ ನಿಂತುಕೊಳ್ಳುತ್ತೇನೆ. ಆ ಕಾಲದಲ್ಲಿ ನನ್ನನ್ನು ಯಾರು ಅಲ್ಲಿಂದ ಎತ್ತಿಕೊಂಡು ಹೋಗಲು ಸಮರ್ಥರಾಗುವರೋ ಅವನೇ ನನಗೆ ಪತಿಯಾಗುವನು. ನೀನು ಈ ಕಾರ್ಯವನ್ನು ಮಾಡಿದರೆ ನಾನು ನಿನ್ನ ಪಾಣಿಗ್ರಹಣವನ್ನು ಮಾಡಿ ಪತ್ನಿಯಾಗುತ್ತೇನೆ.''

ಹೀಗೆ ಪತ್ರ ಬರೆದು ಆ ರಾಜಕುಮಾರಿಯು ನನಗೆ ಮುಟ್ಟಿಸಲು ಹೇಳಿ ಆ ಪತ್ರವನ್ನು ಗಂಧಿನಿಯ ಕೈಯಲ್ಲಿ ಕೊಟ್ಟಳು. ಗಂಧಿನಿಯು ನನಗೆ ಆ ರಾಜಕುಮಾರಿಯ ಪ್ರಣಯ ಪತ್ರವನ್ನು ತಲುಪಿಸಿದಳು. ದುರ್ದೈವದಿಂದ ನನಗೆ ಅಂದು ಘೋರತರವಾದ ಗಾಢ ನಿದ್ರೆ ಆವರಿಸಿತು. ಎಚ್ಚರವಿಲ್ಲದಂತೆ ನಿದ್ರೆಯ ಭರದಲ್ಲಿಯೇ ಮೈ ಮರೆತು ಮಲಗಿದೆ. ಆಗ ಈ ರಾಜಕುಮಾರಿಯ ಸಂಕೇತವನ್ನು ತಿಳಿದ ನಮ್ಮ ಸೇವಕನಾದ ಪ್ರಚೇಷ್ಟನು ನನ್ನದೇ ಆದ ಕುದುರೆಯನ್ನು ಏರಿ ಸಂಕೇತ ಸ್ಥಾನಕ್ಕೆ ಧಾವಿಸಿದ. ನನ್ನ ನಿದ್ದೆಯಿಂದ ನಾನು ಎಲ್ಲವನ್ನೂ ಕಳೆದುಕೊಂಡೆ. ಆ ದುಃಖದಿಂದ ಈಗ ನಾನು ಈ ಗಂಗಾಸಾಗರ ಸಂಗಮ ತೀರ್ಥಕ್ಕೆ ಬಂದಿದ್ದೇನೆ. ಆ ರಾಜಕುಮಾರಿಯನ್ನು ಮರಳಿ ಪಡೆಯಲಿಕ್ಕಾಗಿ ಈ ಪುಣ್ಯೋದಕದಲ್ಲಿ ಆತ್ಮಾರ್ಪಣೆಗೆ ಸಿದ್ಧನಾಗಿ ನಿಂತಿದ್ದೇನೆ.

ಮಾಧವನ ಈ ಎಲ್ಲ ಆತ್ಮ ನಿವೇದನೆಯನ್ನೂ ಅವನ ಹೃದಯದ ವೇದನೆಯನ್ನು ಕೇಳಿ ಆ ವೀರವರ ರಾಜಕುಮಾರನ ವೇಷ ತಳೆದ ಸುಲೋಚನೆಗೆ ಹೃದಯದಲ್ಲಿ ಹಿಗ್ಗಾಯಿತು. ಮುಖದಲ್ಲಿ ಮಂದಹಾಸ ಅರಳಿತು. ಕೂಡಲೇ ಆ ವೀರವರನು ನಕ್ಕು ಆ ಮಾಧವನ ರಕ್ಷಣೆಗಾಗಿ ತನ್ನ ಸೇವಕನನ್ನು ನಿಯಮಿಸಿ ತನ್ನ ಅಂತಃಪುರಕ್ಕೆ ಹೊರಟು ಹೋದ. ಕಾರ್ಯಸಾಧನೆಗಾಗಿ ತಾನು ಧರಿಸಿದ ಪುರುಷ ವೇಷವನ್ನು ಕಳಚಿದ. ಬಗೆ ಬಗೆಯ ಬಂಗಾರ ಮುತ್ತು ರತ್ನ ಆಭರಣಗಳನ್ನೆಲ್ಲ ಇಟ್ಟುಕೊಂಡು, ಬೆಲೆಬಾಳುವ ಪಟ್ಟೆ ಪೀತಾಂಬರವನ್ನು ಉಟ್ಟುಕೊಂಡು ತನ್ನ ನಿಜರೂಪವಾದ ಸ್ತ್ರೀ ರೂಪದಿಂದ ಅಲಂಕೃತಳಾಗಿ ಮಾಧವನನ್ನು ಕರೆತರಲು ತನ್ನ ದಾಸಿಯನ್ನು ಕರೆಕಳಿಸಿದಳು. ಮಾಧವನು ಅರಮನೆಗೆ ಬಂದ. ಸುಲೋಚನೆಯ ದಾಸಿಯು ಅವನನ್ನು ಅಂತಃಪುರಕ್ಕೆ ಕರೆದುಕೊಂಡು ಹೋದಳು, ಅಲ್ಲಿ ಸಾಕ್ಷಾತ್ ಮೂರ್ತಿಮಂತ ಲಕ್ಷ್ಮೀದೇವಿಯಂತೆ ಇದ್ದ ರಾಜಕುಮಾರಿಯನ್ನು ಕಣ್ತುಂಬ ನೋಡಿದ ಆ ರಾಜಕುಮಾರ ಸುವರ್ಣಪೀಠದಿಂದ ಇಳಿದು ಬಂದು ರೋಮಾಂಚಿತಳಾದ ಆ ಕನ್ಯಾಮಣಿ ಪಾದಮುಟ್ಟಿ ಮಾಧವನಿಗೆ ನಮಸ್ಕಾರ ಮಾಡಿದಳು. ಇಬ್ಬರ ದೃಷ್ಟಿ ಒಂದಾದವು. ಹೃದಯಗಳಂತೂ ಎಂದೋ ಒಂದಾಗಿದ್ದವು. ವಿವೇಕಶಾಲಿಯಾದ ರಾಜಕುಮಾರ ಮಾಧವನು ಗಾಂಧರ್ವರೀತಿಯಿಂದ ಆ ಸುಲೋಚನೆಯನ್ನು ವಿವಾಹ ಮಾಡಿಕೊಂಡ. ಅವಳ ಪ್ರೇಮರಸದ ಧಾರೆಯಲ್ಲಿ ಮಿಂದು ಆನಂದಭರಿತನಾದ ರಾಜಕುಮಾರ ಮಾಧವ ಆ ರಾತ್ರಿಯ ರಸನಿಮಿಷಗಳನ್ನು ಅವಳ ಅಂತಃಪುರದಲ್ಲಿ ಕಳೆದ.

ಬೆಳಗಾಯಿತು. ವಂದಿಗಳು ಸುಪ್ರಭಾತ ಹೇಳಿದರು. ಅನಂತರ ಸುಲೋಚನೆಯು ತಾನು ಪುರಷ ವೇಷದಲ್ಲಿದ್ದಾಗ ಕೈ ಹಿಡಿದ ಜಯಂತೀ ಎಂಬ ರಾಜಕುಮಾರಿಯನ್ನೂ ಮಾಧವನನ್ನೂ ಕೂಡಿಕೊಂಡು ಸುಷೇಣ ರಾಜನ ಸಭೆಗೆ ನಡೆದರು. ದಾರಿಯಲ್ಲಿ ಸುಲೋಚನೆಯು ಮಾಧವನಿಗೆ ತಾನು ತನ್ನ ಪ್ರೀಯಕರನಾದ ಮಾಧವನನ್ನು ಹುಡುಕಲು ಪಟ್ಟ ಶ್ರಮ, ಹೂಡಿದ ಹಂಚಿಕೆ, ಮಾಡಿದ ಉಪಾಯ, ಪುರುಷವೇಷದ ಕಥೆ, ಜಯಂತಿಯೊಡನೆ ತನಗಾದ ವಿವಾಹ ಎಲ್ಲ ಸಮಾಚಾರವನ್ನು ತಿಳಿಸಿದಳು. ಸುಷೇಣ ರಾಜನ ಆಸ್ಥಾನಕ್ಕೆ ಹೋದ ಬಳಿಕ ಮಹಾರಾಜನಿಗೆ ವೀರವರ ಎಂಬ ರಾಜಕುಮಾರನ ವೇಷ ತಳೆದ ತನ್ನ ಸ್ತ್ರೀರೂಪದ ವೃತ್ತಾಂತವನ್ನೆಲ್ಲ ಹೇಳಿದಳು. ಅದನ್ನು ಕೇಳಿ ಸುಷೇಣರಾಜನಿಗೆ ಆತ್ಯಾಶ್ಚರ್ಯವೂ ಆನಂದವೂ ಆದವು.

ಆಗ ಆ ಸುಷೇಣ ರಾಜನು ಮಾಧವನಿಗೆ ರಾಜಕುಮಾರಿ ಸುಲೋಚನಾದೇವಿಯನ್ನೂ ಜಯಂತಿಯನ್ನೂ ವಿವಾಹ ವಿಧಿಯಿಂದ ಧಾರೆ ಎರೆದು ಮದುವೆ ಮಾಡಿಕೊಟ್ಟು ವರದಕ್ಷಿಣೆಯಾಗಿ ತನ್ನ ಅರ್ಧ ರಾಜ್ಯವನ್ನೇ ನೀಡಿದ. ಸಾವಿರತೊಲೆ ಬಂಗಾರ ಆಭರಣಗಳನ್ನು ವಧೂವರರಿಗೆ ಆನಂದದಿಂದ ಕೊಡಮಾಡಿದ.

ಮದುವೆಯಾದ ಬಳಿಕ ರಾಜಕುಮಾರನಾದ ಮಾಧವನು ಗಂಗಾಸಾಗರ ಸಂಗಮ ತೀರ್ಥದ ತಡಿಯಲ್ಲಿಯೇ ದಿವ್ಯ ಭವ್ಯವಾದ ಒಂದು ಪ್ರಸಾದವನ್ನು ಕಟ್ಟಿಸಿ ತನ್ನ ಇಬ್ಬರು ಪತ್ನಿಯರೊಂದಿಗೆ ಆನಂದದಿಂದ ವಾಸ ಮಾಡಿದ. ಇದೇ ವೇಳೆಯಲ್ಲಿ ತನಗೆ ಮೋಸ ಮಾಡಿ ಕುದುರೆ ಹಾಗೂ ಕನ್ಯೆಯನ್ನು ಕದ್ದೊಯ್ದ ಪ್ರಚೇಷ್ಟನಿಗೆ ಸ್ವಾಮಿದ್ರೋಹ ಹಾಗೂ ವಿಶ್ವಾಸಘಾತ ಮಾಡಿದ್ದರ ಅಪರಾಧಕ್ಕಾಗಿ ಶಿಕ್ಷೆಯನ್ನು ವಿಧಿಸಿದ. ಪಾಪಿಗಳಿಗೆ ಸರಿಯಾದ ಶಿಕ್ಷೆಯನ್ನು ವಿಧಿಸಿದಾಗಲೇ ದೇಶದಲ್ಲಿ ನ್ಯಾಯ ನೀತಿಗಳ ಪ್ರತಿಷ್ಠೆ ಆಗುವುದು. ಅಪರಾಧ ಮಾಡಿದ ದುಷ್ಟರನ್ನು ಶಿಕ್ಷಿಸದೇ ಅನ್ನ ಪಾನಗಳನ್ನಿತ್ತು ಪಾಲಿಸಿದರೆ ಅವರು ಮತ್ತೆ ಹೊತ್ತು ಸಾಧಿಸಿ ಘಾತಪಾತಗಳನ್ನು ನಿಶ್ಚಿತವಾಗಿಯೂ ಮಾಡುತ್ತಾರೆ.

**ಪಾಲಿತೋऽಪಿ ಮುಹುರ್ನಿತ್ಯಂ ಪ್ರಸಾದ ಧನಭೋಜನೈಃ ।**
**ಶತ್ರುಕರ್ಮ ಕರೋತ್ಯೇವ ಸಮಯಂ ಪ್ರಾಪ್ಯ ನಿರ್ದಯಃ ॥**

ದುಷ್ಟ ಮನುಷ್ಯನಿಗೆ ಹಣ ಭೋಜನ ಮುಂತಾದವುಗಳನ್ನ ಕೊಟ್ಟು ಎಷ್ಟೇ ಪ್ರೀತಿಯಿಂದ ಪಾಲನೆ ಮಾಡಿದರೂ ಸಮಯ ಬಂದಾಗ ವಿಶ್ವಾಸ ಘಾತ ಮಾಡಿ ನಿರ್ದಯನಾದ ಆ ಮನುಷ್ಯನು ವೈರವನ್ನು ಸಾಧಿಸಿ ಆಶ್ರಯ ಕೊಟ್ಟವನನ್ನು ನಾಶ ಮಾಡಿಯೇ ಮಾಡುತ್ತಾರೆ.

**ವಿಪತ್ಕಾಂ ಯೇನ ಹಸ್ತೇನ ನಯೇತ್ಪಾದರಜಃ ಖಲು ।**
**ಶಿರಃ ಕೃಂತತಿ ತೇನೈವ ಸ್ವಾಮಿನಂ ಪ್ರಾಪ್ಯ ಸಂಪದಂ ॥**

ಆಪತ್ತಿನಲ್ಲಿ ಇದ್ದಾಗ ದುಷ್ಟನು ಯಾವ ಕೈಯಿಂದ ಯಾರ ಅಡಿದಾವರೆಯ ಹುಡಿಯನ್ನು ತೆಗೆದುಕೊಂಡು ತಲೆಯ ಮೇಲೆ ಇಟ್ಟುಕೊಳ್ಳುವನೋ ಪ್ರಸಂಗ ಬಂದಾಗ ಅದೇ ಕೈಯಿಂದ ಆ ಒಡೆಯನ ಸಂಪತ್ತನ್ನೆಲ್ಲ ಅಪಹರಿಸಿ ಅವನ ತಲೆಯನ್ನು ಹೊಡೆದು ಒಡೆಯುತ್ತಾನೆ.

**ನೂನಮೇವಂ ಪ್ರಭುಂ ಘ್ನಂತಿ ವಶಗಾ ನೃಪಕಿಂಕರಾಃ**
**ತಪ್ತಮಪ್ಯುದಕಂ ವಹ್ನಿಂ ಸದ್ಯೋ ನಿರ್ವಾಣತಾಂ ನಯೇತ್ ॥**

ಹೀಗೆ ರಾಜನ ಊಳಿಗದ ಆಳುಗಳು ಕೂಡ ಆ ರಾಜರನ್ನು ಪ್ರಸಂಗ ಬಂದಾಗ ಕೊಂದುಬಿಡುತ್ತಾರೆ. ಬೆಂಕಿಯಿಂದಲೇ ಕಾಯಿಸಲ್ಪಟ್ಟ ನೀರು ಆ ಬೆಂಕಿಯ ಬಲದಿಂದಲೇ ಉಕ್ಕಿ ಕ್ಷಣಾರ್ಧದಲ್ಲಿ ಅದನ್ನೇ ಆರಿಸಿ ಬಿಡುತ್ತದೆ.

ಹೀಗೆ ಆಲೋಚನೆ ಮಾಡಿ ಮಾಧವನು ತನಗೆ ವಿಶ್ವಾಸಘಾತ ಮಾಡಿದ ಪ್ರಚೇಷ್ಟನನ್ನು ದಂಡಿಸಿ ದೇಶ ಬಿಟ್ಟು ಹೊರಗೆ ಹಾಕಿದ.

ಅನಂತರ ಮಾಧವನು ತನ್ನ ಮೆಚ್ಚಿನ ಮಡದಿಯಾದ ಸುಲೋಚನೆ ಹಾಗೂ ನೆಚ್ಚಿನ ನಲ್ಲೆಯಾದ ಜಯಂತಿ ಇಬ್ಬರೂ ಅರಸಿಯರೊಂದಿಗೆ ಸರಸ ಶೃಂಗಾರ ಕೌತುಕದಿಂದ ಕಾಲಕ್ಷೇಪ ಮಾಡುತ್ತ ಆ ಪವಿತ್ರ ತೀರ್ಥದ ತಡಿಯಲ್ಲಿಯೇ ನಿರ್ಮಿಸಿದ ಭವ್ಯ

ಪ್ರಾಸಾದದಲ್ಲಿ ಬಹುಕಾಲ ವಾಸಮಾಡಿದ ಆನಂದದಿಂದ. ಅವನಿಗೆ ಸುಲೋಚನೆಯಲ್ಲಿ ನೂರು ಜನ ಮಕ್ಕಳು ಜನಿಸಿದರು. ಜಯಂತಿಯಲ್ಲಿ ಎರಡು ನೂರು ಜನ ಮಕ್ಕಳು. ಅವರೆಲ್ಲರೂ ವೇದಶಾಸ್ತ್ರ ಪಾರಂಗತರು. ಶಸ್ತ್ರಾಸ್ತ್ರವಿದ್ಯೆಗಳಲ್ಲಿಯೂ ಪರಿಣಿತ ಪ್ರಜ್ಞರು. ಮೇಲೆ ಸದಾಚಾರ ಸಂಪನ್ನರು. ಪ್ರಜಾರಕ್ಷಣೆಯ ಕಾರ್ಯದಲ್ಲಿ ದಕ್ಷರು.

ಹೀಗೆ ವಿಧೇಯರಾದ ಪತ್ನಿಯರು ವಿನೀತರಾದ ಮಕ್ಕಳು, ಅನುಕೂಲರಾದ ಮಂತ್ರಿಗಳು, ಇಚ್ಛಾನುವರ್ತಿಗಳಾದ ಪರಿವಾರ, ಹಾಗೂ ನಿರಂಕುಶವಾದ ರಾಜಸತ್ತೆ, ಅಪಾರ ಐಶ್ವರ್ಯ, ಯಥೇಷ್ಟ ಸುಖೋಪಭೋಗ ಮುಂತಾದವುಗಳಿಂದ ಭೂಲೋಕದಲ್ಲಿಯೇ ಇಂದ್ರಲೋಕದ ಸುಖ ಸೌಭಾಗ್ಯವನ್ನೆಲ್ಲ ಹೊಂದಿ ಆನಂದದಿಂದ ಬಹುಕಾಲ ಸಾಂಸಾರಿಕ ಸರ್ವ ಸೌಖ್ಯಗಳನ್ನು ಅನುಭವಿಸಿದ ಬಳಿಕ ಆ ಮಾಧವನಿಗೆ ಒಂದು ದಿನ ವಿಷಯ ಸುಖದಲ್ಲಿ ವೈರಾಗ್ಯ ಹುಟ್ಟಿತು. ತನ್ನಲ್ಲಿಯೇ ತಾನು ಅವನು ಒಂದು ದಿನ ಹೀಗೆ ವಿಚಾರ ಮಾಡಿದ.

**ಕೋಽಹಂ ಕಸ್ಮಾತ್ ಕ್ಷಮಾನಾಥ; ಕಸ್ಯ ವಾ ಕೇನ ನಿರ್ಮಿತಃ ।**
**ಭೂಯಃ ಕ್ವ ಚ ಗಮಿಷ್ಯಾಮಿ ಕುತ್ರ ವಾ ಸ್ಥಾಸ್ಯತೇ ಮಯಾ ॥**

ನಾನು ಯಾರು? ಎಲ್ಲಿಂದ ಬಂದೆ? ನನ್ನನ್ನು ರಾಜನನ್ನಾಗಿ ಮಾಡಿದವರು ಯಾರು? ಹಿಂದೆ ಏನು ಇದ್ದೆ? ನನ್ನನ್ನು ಹುಟ್ಟಿಸಿದವರು ಯಾರು? ನಾನು ಮುಂದೆ ಹೋಗುವದು ಎಲ್ಲಿ? ಇರುವದಾದರೂ ಎಲ್ಲಿ?

**ವಿಷಯಾನ್ ಭುಂಜತೋ ಜನ್ಮ ವಿನಾ ಪುಣ್ಯೇನ ಮೇ ಗತಂ ।**
**ತಸ್ಮಾದ್ ವಿಷಾರ್ಣವೇ ಮಗ್ನಂ ಕೋಽತ್ರ ಮಾಮುದ್ಧರಿಷ್ಯತಿ ॥**

ಇಷ್ಟು ದಿನ ವಿಷಯ ಸುಖವನ್ನು ಅನುಭವಿಸುವದರಲ್ಲಿಯೇ ನನ್ನ ಜನ್ಮ ವ್ಯರ್ಥವಾಗಿ ಹೋಯಿತು. ವಿಷಯ ಸುಖದ ಸಮುದ್ರದಲ್ಲಿಯೇ ನಾನು ಮುಳುಗಿ ಬಿಟ್ಟಿದ್ದೆ. ಈ ಘೋರ ಸಂಸಾರದಿಂದ ನನ್ನನ್ನು ಉದ್ಧಾರ ಮಾಡುವವರು ಯಾರು?

**ಸಂಸಾರೇಽ ಸ್ಮಿನ್ ಜನಿಂ ಪ್ರಾಪ್ಯ ಯೇನ ನಾರಾಧಿತೋ ಹರಿಃ ।**
**ಆತ್ಮಘಾತೀ ಸ ವಿಜ್ಞೇಯ, ಸರ್ವಧರ್ಮ ಬಹಿಷ್ಕೃತಃ ॥**

ಈ ಸಂಸಾರದಲ್ಲಿ ಹುಟ್ಟಿ ಯಾರು ಶ್ರೀಹರಿಯನ್ನು ಆರಾಧಿಸುವದಿಲ್ಲವೋ ಅವನು ಸರ್ವ ಧರ್ಮಗಳಲ್ಲಿಯೂ ಬಹಿಷ್ಕೃತನಾದಂತೆಯೇ ಸರಿ. ನಿಜವಾಗಿಯೂ ಅವನೊಬ್ಬ ಆತ್ಮ ಘಾತಕ.

**ಭೂಯೋ ಭೂಯೋ ಭವೇಜ್ಜನ್ಮ ಭೂಯೋ ಭೂಯೋಽಪಿ ಪಂಚತಾ**
**ಸಂಸಾರೋಯ ಮತಸ್ಸರ್ವಃ ಕ್ಲೇಶದೋ ಭೈರವೊ ಮಹಾನ್ ॥**

ಈ ಸಂಸಾರದಲ್ಲಿ ಮತ್ತೆ ಮತ್ತೆ ಹುಟ್ಟು. ಮತ್ತೆ ಮತ್ತೆ ಸಾವು. ಸುಖ ದೊರಕುವದಿಲ್ಲ. ದುಃಖ ತಪ್ಪಿದ್ದಲ್ಲ. ಆದುದರಿಂದಲೇ ಈ ಬಾಳು ಬಹಳ ದುಃಖದಾಯಕ ಅಷ್ಟೇ ಭೀಕರ.

**ವಿಷ್ಣು ಭಕ್ತಿಂ ವಿನಾ ನ ಸ್ಯಾತ್ ಜನ್ಮ ಮೃತ್ಯು ನಿವಾರಣಂ ।**
**ಅತೋಽದ್ಯ ಸಕಲಂ ತ್ಯಕ್ತ್ವಾ ಕರಿಷ್ಯಾಮ್ಯರ್ಚನಂ ಹರೇ; ॥**

ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡದೇ ಮಾನವನ ಜನನ ಮರಣಗಳ ಜಾಲವು ದೂರಾಗಲು ಸಾಧ್ಯವಿಲ್ಲ. ಆದುದರಿಂದ ನಾನು ಈಗ ಎಲ್ಲವನ್ನೂ ತೊರೆದು ಸರ್ವಸಂಗ ಪರಿತ್ಯಾಗ ಮಾಡಿ ಶ್ರೀಹರಿಯ ಪೂಜೆಯನ್ನು ಮಾಡುತ್ತೇನೆ.''

ಹೀಗೆ ಆಲೋಚನೆಗೈದು ವಿಶ್ವಕರ್ಮ ಶಿಲ್ಪಿಯನ್ನು ಕರೆಸಿದ ಆ ಮಾಧವ ಮಹಾರಾಜ. ಅವನಿಗೆ ಹೇಳಿದ.

**ಮಾಧವ:-** ಶಿಲ್ಪಿಸಾರ್ವಭೌಮನಾದ ವಿಶ್ವಕರ್ಮ. ನೀನು ನನಗೆ ವಿಷ್ಣುವಿನ ಸುಂದರವಾದ ಮತ್ತು ಸರ್ವಾಭೀಷ್ಟ ಪ್ರದಾಯಕವಾದ ಒಂದು ಕಲ್ಲಿನ ಮೂರ್ತಿಯನ್ನು ನಿರ್ಮಾಣ ಮಾಡಿಕೊಡು.

ಮಹಾರಾಜನ ಅಪ್ಪಣೆಯಂತೆ ಮೂರ್ತಿ ನಿರ್ಮಾಣ ಕರ್ಮಗಳಲ್ಲಿಯೇ ಪಳಗಿದ ವಿಶ್ವಕರ್ಮನು ಒಂದು ದಿವ್ಯವಾದ ಶ್ರೀಹರಿಯ ಮೂರ್ತಿಯನ್ನು ರಚಿಸಿದ.

**ನವೀನ ನೀರದ ಶ್ಯಾಮ ಪುಂಡರೀಕ ನಿಭೇಕ್ಷಣಾ**
**ಶಂಖ ಚಕ್ರ ಗದಾಪದ್ಮ ಧಾರಿಣೀ ಚ ಚತುರ್ಭುಜಾ ॥**

**ಲಕ್ಷ್ಮೀ ಸರಸ್ವತೀ ಯುಕ್ತಾ ವನಮಾಲಾ ವಿಭೂಷಿತಾ**
**ಸಮಸ್ತ ಲಕ್ಷಣೈರ್ಯುಕ್ತಾ ಭೂಷಿತಾ ಸರ್ವ ಭೂಷಣೈ:**
**ರಾಜಾದೇಶಾ ತ್ತತಃಶಿಲ್ಪಿ ಶ್ರೇಷ್ಠಿನಾ ವಿಶ್ವಕರ್ಮಣಾ**
**ಪ್ರತಿಮಾ ರಚಿತಾ ತೇನ ಮಹಾವಿಷ್ಣೋ ಶಿಲಾಮಯೀ ॥**

ನೀರು ತುಂಬಿದ ಮೋಡದಂತೆ ಕಪ್ಪು ಬಣ್ಣದಿಂದ ಒಪ್ಪುವ, ತಾವರೆ ದಳದಂತೆ ವಿಶಾಲನೇತ್ರವುಳ್ಳ, ನಾಕು ಕೈಗಳಲ್ಲಿ ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿದ. ಲಕ್ಷ್ಮಿ ಸರಸ್ವತಿಯರಿಂದ ಒಡಗೂಡಿದ, ವೈಜಯಂತಿ ವನಮಾಲೆಗಳಿಂದ ವಿಭೂಷಿತನಾದ, ಎಲ್ಲ ಲಕ್ಷಣಗಳಿಂದ ಯುಕ್ತವಾದ, ಆ ಎಲ್ಲ ಆಭರಣಗಳಿಂದ ಅಲಂಕೃತವಾದ, ಮನೋಹರವಾದ ಮಹಾವಿಷ್ಣುವಿನ ಮೂರ್ತಿಯನ್ನು ರಾಜನ ಅಪ್ಪಣೆಯ ಮೇರೆಗೆ ಕಟಿದು ವಿಶ್ವಕರ್ಮನು ಮಾಧವನಿಗೆ ಒಪ್ಪಿಸಿದ ಆ ಶ್ರೀಹರಿಯ ಪ್ರತಿಮೆಯನ್ನು ಮಾಧವ ಮಹೀಪಾಲನು ಸುಂದರವಾದ ಶಿಲಾಮಂಟಪದಲ್ಲಿ ಪ್ರತಿಷ್ಠೆ ಮಾಡಿ ಸಂಸ್ಥಾಪಿಸಿ ಪೂಜೆ ಮಾಡಲು ಮೊದಲು ಮಾಡಿದ.

ಮಾಧವನು ಪ್ರತಿಷ್ಠೆಗೈದ ವಿಶ್ವಕರ್ಮ ನಿರ್ಮಿತವಾದ ಮಹಾವಿಷ್ಣುವಿನ ಈ ಶಿಲಾಮಯ ಮೂರ್ತಿಯು ನಿಜವಾಗಿಯೂ ಅಭೀಷ್ಟಗಳನ್ನೆಲ್ಲ ವೃಷ್ಟಿಗೈಯುವ ಸರ್ವಭಕ್ತರ ಇಷ್ಟ ದೈವತ ಎನಿಸಿದೆ. ಈ ವಿಷ್ಣು ಮಂದಿರದಲ್ಲಿ ಪ್ರತಿದಿನವೂ ತುಪ್ಪದ ನಂದಾದೀಪವನ್ನು ಹಚ್ಚಿ ಇಟ್ಟು ಅದು ಮುಕ್ಕು ಬಂದಾಗ ಆರದಂತೆ ಕುಡಿ ಚಾಚುತ್ತ ಇರಬೇಕು. ಪ್ರಾತಃಕಾಲದಲ್ಲಿ ಸ್ನಾನಮಾಡಿ ವಿಷ್ಣುದೇವಾಲಯದ ಸಾರಣೆ ಕಾರಣೆ ದೇವಾಲಯಕ್ಕೆ ಬರುವ ದಾರಿಯ ಕಸಗುಡಿಸುವದು, ರಂಗವಲ್ಲಿ ಮೊದಲಾದವುಗಳನ್ನು ದೇವಾಲಯದ ಮುಂದೆ ಹಾಕುವದು ಮತ್ತು ಸಂಗಮ ತೀರ್ಥದಲ್ಲಿ ಸ್ನಾನಮಾಡುವದು ಮತ್ತು ಈ ವಿಷ್ಣುಪ್ರತಿಮೆಗೆ ಗಂಧ, ಧೂಪ, ದೀಪ, ನೈವೇದ್ಯ, ತಾಂಬೂಲ, ಗೀತ, ವಾದ್ಯ, ಸ್ತೋತ್ರ, ಪ್ರದಕ್ಷಿಣೆ, ನಮಸ್ಕಾರ, ಯಜ್ಞ ಯಾಗ ಮುಂತಾದವುಗಳಿಂದ ಸೇವೆಯನ್ನು ಭಕ್ತಿಯಿಂದ ಸಲ್ಲಿಸಿದವರು ವಿಷ್ಣುಲೋಕವನ್ನು ಹೊಂದುತ್ತಾರೆ.

ಹೀಗೆ ಮಾಧವನು ಪ್ರತಿದಿನವೂ ಭಕ್ತಿಯಿಂದ ಷೋಡಶೋಪಚಾರ ಪೂಜೆಯಿಂದ ಅರ್ಚನೆಗೈದು ಅನಂತರ ಆ ಭಗವಂತನ ಎದುರು ಕುಳಿತು, 'ಓಂ ನಮೊ ನಾರಾಯಣಾಯ'

ಎಂಬ ಸಕಲ ಕಾಮನಾಪೂರಕವಾದ ಅಷ್ಟಾಕ್ಷರ ಮಂತ್ರವನ್ನು ಸಹಸ್ರ ಸಂಖ್ಯೆಯಲ್ಲಿ ಜಪ ಮಾಡುತ್ತಲಿದ್ದ.

ಹೀಗೆ ಮಾಧವನ ಈ ಎಲ್ಲ ಸರ್ವವಿಧವಾದ ಸಕುಟುಂಬ ಸೇವೆಯಿಂದ ಸಂತುಷ್ಟನಾಗಿ ಸರ್ವದೇವ ಶಿಖಾಮಣಿಯಾದ ಶ್ರೀಹರಿಯು ಒಂದು ದಿನ ಕೊರಳಲ್ಲಿ ತುಳಸೀಮಾಲೆ ಹಾಕಿಕೊಂಡು ಮಾಧವನ ಎದುರು ಅವಿರ್ಭೂತನ್ನಾಗಿ ತನ್ನ ಪ್ರತ್ಯಕ್ಷ ದರ್ಶನವನ್ನು ಕರುಣಿಸಿದ. ಆಗ ಭಕ್ತಿಭಾವಭರಿತನಾದ ಮಾಧವ ಬಾಷ್ಪಗದ್ಗದಿತನಾಗಿ ಭಗವಂತನ ಅಡಿದಾವರೆಯಲ್ಲಿ ದಂಡ ಪ್ರಣಾಮದಿಂದ ತನ್ನ ದೇಹವನ್ನು ಈಡಾಡಿ ಅನಂತರ ಕೈ ಜೋಡಿಸಿ ಭಕ್ತಿಯುಕ್ತವಾದ ಸ್ತೋತ್ರವನ್ನು ಮಾಡಿದ.

**ಮಾಧವ:-**

**ನಮಸ್ತೇ ದೇವದೇವಾಯ ನಮಸ್ತೇ ಪರಮಾತ್ಮನೇ**
**ಪರೇಶಾಯ ಸುರೇಶಾಯ ನಮಸ್ತೇ ಜ್ಞಾನದಾಯಿನೇ ॥**

ದೇವತೆಗಳಿಗೂ ದೇವನಾದ ಶ್ರೀಹರಿಯೇ, ನಿನಗೆ ನನ್ನ ನಮಸ್ಕಾರ. ನೀನೇ ಪರಮಾತ್ಮ. ಶ್ರೇಷ್ಠರಾದ ರುದ್ರ ಬ್ರಹ್ಮರಿಗೂ ಕೂಡ ನೀನೇ ನಿಯಾಮಕ. ಇಂದ್ರಾದಿ ದೇವತೆಗಳಿಗೆಲ್ಲ ನೀನೇ ಒಡೆಯ. ಹೀಗೆ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೊಟ್ಟು ಕರುಣೆಯಿಂದ ಕಾಪಾಡುವ ತಂದೆ ಶ್ರೀಹರಿಗೆ ನನ್ನ ನಮಸ್ಕಾರ.

**ನಮಸ್ತೇ ಪರಮಾನಂದ ಪುರುಷೋತ್ತಮ ಕೇಶವ ।**
**ನಮಸ್ತೇ ಪದ್ಮನೇತ್ರಾಯ ಕಮಲಾಪತಯೇ ನಮಃ ॥**

ಪರಮಾನಂದ ಸ್ವರೂಪನಾದ, ಕ್ಷರಾಕ್ಷರ ಪುರುಷರಿಗಿಂತ ಉತ್ತಮನಾದ ಕೇಶವನೇ ನಿನಗೆ ನನ್ನ ನಮಸ್ಕಾರ. ಕಮಲದಂತೆ ಕಣ್ಣುಗಳುಳ್ಳ ಕಮಲಾಪತಿಗೆ ನನ್ನ ನಮಸ್ಕಾರ.

**ನಮಸ್ತೇ ಬಹುರೂಪಾಯ ನಿರೂಪಾಯ ನಮೋ ನಮಃ**
**ವಿಚಿಂತ್ಯಾಯಾऽ ವಿಚಿಂತ್ಯಾಯ ದೃಶ್ಯಾದೃಶ್ಯಾಯ ವೈ ನಮಃ ॥**

ಪ್ರಾಕೃತ ರೂಪ ಇಲ್ಲದಿದ್ದರೂ ಅನಂತ ರೂಪವುಳ್ಳ ಸಂಪೂರ್ಣವಾಗಿ ತಿಳಿಯಲು ಶಕ್ಯವಿಲ್ಲದಿದ್ದರೂ ಯಥಾ ಶಕ್ತಿ ಜ್ಞಾನಿಗಳಿಂದ ತಿಳಿಯಲ್ಪಟ್ಟು ಉಪಾಸಿಸಲ್ಪಡುವ, ಭಕ್ತರಿಗೆ ಗೋಚರನೂ ನಾಸ್ತಿಕರಿಗೆ ಅಗೋಚರನೂ ಆದ ಭಗವಂತನೇ ನಿನಗೆ ನನ್ನ ನಮಸ್ಕಾರ.

**ನಮಃಸ್ತ್ರೈಲೋಕ್ಯನಾಥಾಯ ಲೋಕ ಪಿತ್ರೇ ನಮೋ ನಮಃ**
**ನಮಸ್ತೇ ಜ್ಞಾನಗಮ್ಯಾಯ ನಮಸ್ತೇ ಸರ್ವಶಾಖಿನೇ ॥**

ಮೂರು ಲೋಕಕ್ಕೆ ಒಡೆಯನೂ, ಎಲ್ಲ ಜಗತ್ತಿನ ತಂದೆಯೂ ವೇದವೇದಾಂತ ಜನ್ಯವಾದ ಜ್ಞಾನದಿಂದ ಮಾತ್ರ ತಿಳಿಯಲ್ಪಡತಕ್ಕಂಥವನೂ ಈ ಎಲ್ಲ ಜಗತ್ ವೃಕ್ಷಕ್ಕೆ ಮೂಲಭೂತನೂ ಎಲ್ಲ ವೇದ ಶಾಖೆಗಳಿಂದಲೂ ಮುಖ್ಯವಾಗಿ ಪ್ರತಿಪಾದಿತನೂ ಆದ ಶ್ರೀಹರಿಗೆ ನಮಸ್ಕಾರ.

**ಕಂಸಾರಯೇ ನಮಸ್ತುಭ್ಯಂ ನಮಸ್ತೇ ಕೈಟಭಾರಯೇ ।**
**ಮಧುಹಂತ್ರೇ ನಮಸ್ತುಭ್ಯಂ, ವಿಧಾತ್ರೇ ಚ ನಮೋನಮಃ ॥**

ಕಂಸ ಕೈಟಭ, ಮತ್ತು ಮಧು ಎಂಬ ದೈತ್ಯರನ್ನು ಸಂಹರಿಸಿದ ಮತ್ತು ಜಗತ್ತಿನ ಸೃಷ್ಟಾರನಾದ ಶ್ರೀಹರಿಗೆ ನಮಸ್ಕಾರ.

**ಯೇನತ್ತಯೋದ್ಧೃತಾ ವೇದಾ ಮೀನರೂಪಧರೇಣ ವೈ ।**
**ಗಂಭೀರಾಂಭೋನಿಧೇರಂಭೋಽಭ್ಯಂತರಾತ್ತಮಹಂ ಭಜೆ ॥**

ಮೀನು ರೂಪವನ್ನು ಧರಿಸಿ ಆಳವಾದ ಸಮುದ್ರದ ನೀರ ಜಲರಾಶಿಯ ಒಳಗಡೆಯಿಂದ ವೇದಗಳನ್ನು ಉದ್ಧಾರ ಮಾಡಿದ ಶ್ರೀಹರಿಯನ್ನು ನಮಸ್ಕಾರ ಮಾಡುತ್ತೇನೆ.

**ಯೇನ ತ್ವಯೋದ್ಧೃತಾ ಪೃಥ್ವೀ ಸಶೈಲ ವನಕಾನನಾ ।**
**ಕೂರ್ಮರೂಪಧರೇಣೇಯಂ ತಸ್ಮೈ ತುಭ್ಯಂ ನಮೋ ನಮಃ ॥**

ಬೆಟ್ಟ, ಬಯಲು, ಬಾನು, ಕಾನನ ಸಹಿತವಾದ ಸಮಗ್ರ ಪೃಥ್ವೀ ಮಂಡಲವನ್ನು ಕೂರ್ಮರೂಪ ಧರಿಸಿ ಪಾತಾಳದಿಂದ ಎತ್ತಿ ತಂದ ಪರಮಾತ್ಮನೇ ನಿನಗೆ ನನ್ನ ನಮೋ ನಮಃ

**ವರಾಹಮೂರ್ತಿನಾ ಯೇನ ಧರಣೀ ಧರಣೀಪತೆ ।**
**ಉದ್ಧೃತಾ ನಿಜ ದಂತೇನ ತಸ್ಮೈ ತುಭ್ಯಂ ನಮೋ ನಮಃ ॥**

ಭೂಮಿಪತಿಯಾದ ಭಗವಂತನೇ ನೀನು ವರಾಹ ರೂಪದಿಂದ ನಿನ್ನ ಕೋರೆದಾಡಿಯ ಮೇಲೆ ಭೂಮಿಯನ್ನು ಎತ್ತಿ ತಂದೆ. ಇಂಥ ನಿನಗೆ ನನ್ನ ನಮಸ್ಕಾರ.

**ನೃಸಿಂಹ ಮೂರ್ತಿನಾ ಯೇನ ತ್ವಯಾ ದೈತ್ಯೋವಿದಾರಿತಃ ।**
**ಹಿರಣ್ಯಕಶಿಪುಃ ಕ್ರುದ್ಧಃ ತಸ್ಮೈ ತುಭ್ಯಂ ನಮೋ ನಮಃ ॥**

ಅರ್ಧ ಮನುಷ್ಯ ಅರ್ಧ ಸಿಂಹದ ಆಕಾರದ ನೃಸಿಂಹ ರೂಪವನ್ನು ತಾಳಿ ಕುಪಿತನಾದ ಹಿರಣ್ಯ ಕಶಿಪು ಎಂಬ ದೈತ್ಯನನ್ನು ಸೀಳಿ ಹಾಕಿದ ನೃಸಿಂಹ ದೇವರಿಗೆ ನಮೋ ನಮಃ ॥

**ಬಲಿಯಜ್ಞಸ್ತಥಾ ಧ್ವಸ್ತೋ ಯೇನ ವಾಮನ ರೂಪಿಣಾ ।**
**ತಸ್ಮೈ ತುಭ್ಯಂ ನಮೋ ದೇವ ಕಾಶಪ್ಯಾದಾನ ಕಾರಿಣೆ ॥**

ವಾಮನ ರೂಪದಿಂದ ಬಲಿಯ ಯಜ್ಞವನ್ನು ಹಾಳುಗೆಡಿವಿ ಅವನಿಂದ ಭೂಮಿದಾನವನ್ನು ಪಡೆದ ತ್ರಿವಿಕ್ರಮ ರೂಪಿಯಾದ ನಿನಗೆ ನನ್ನ ನಮಸ್ಕಾರ.

**ಪಿತರಸ್ತರ್ಪಿತಾ ಯೇನ ತ್ವಯಾ ಕ್ಷತ್ರಿಯ ಶೋಣಿತೈಃ ।**
**ಕಾರ್ತವೀರ್ಯೋ ಹತೋ ಯೇನ ತಸ್ಮೈ ರಾಮಾಯ ತೇ ನಮಃ ॥**

ಕ್ಷತ್ರಿಯರ ನೆತ್ತರದಿಂದ ಪಿತೃಗಳಿಗೆ ತರ್ಪಣವನ್ನು ನೀಡಿದ ಮತ್ತು ಕಾರ್ತಿವೀರ್ಯಾರ್ಜುನನನ್ನು ಸಂಹರಿಸಿದ ಪರಶುರಾಮನಿಗೆ ನಮಸ್ಕಾರ.

**ರಾವಣೋ ನಿಹತೋ ಯೇನ ಕೌಸಲ್ಯಾ ಸೂನುನಾ ತ್ವಯಾ ।**
**ಮಾರೀಚ; ಕಂಭಕರ್ಣಶ್ಚ ತಸ್ಮೈ ರಾಮಾಯ ತೇ ನಮಃ ॥**

ಕೌಸಲ್ಯೆಯ ಮಗನಾಗಿ ಹುಟ್ಟಿ ಮಾರೀಚ ಕುಂಭಕರ್ಣ ಮೊದಲಾದ ರಾಕ್ಷಸರನ್ನು ಸಂಹರಿಸಿದ ರಾಮಚಂದ್ರನಿಗೆ ನಮಸ್ಕಾರ.

**ಪ್ರಲಂಬೋ ನಿಹತೋ ಯೇನ ರೇವತೀ ಪತಿನಾ ತ್ವಯಾ ।**
**ಕಾಲಿಂದೀ ಭೇದಿನೇ ತುಭ್ಯಂ ತಸ್ಮೈ ರಾಮಾಯ ತೇ ನಮಃ ॥**

ಪ್ರಲಂಬನನ್ನು ಸಂಹರಿಸಿದ. ಯಮುನಾ ನದಿಯನ್ನು ನೇಗಿಲು ಹಾಕಿ ಎಳೆದು ಬೇರೆಡೆಗೆ ಹರಿಸಿದ ರೇವತಿಯ ಪತಿಯಾದ ಬಲರಾಮನಿಗೆ ನಮಸ್ಕಾರ.

**ವೇದಾ ವಿನಿಂದಿತಾ ಯೇನ ವಿಲೋಕ್ಯ ಪಶುಹಿಂಸನಂ ।**
**ಸಕೃಪೇಣ ತ್ವಯಾ ಯೇನ ತಸ್ಮೈ ಬುದ್ಧಾಯ ತೇ ನಮಃ ॥**

ವೇದದ ಹೆಸರಿನಿಂದ ನಡೆಯುವ ಪಶುಹಿಂಸೆಯನ್ನು ಕಂಡು ರೋಸಿ ಪಶುಗಳ ಮೇಲಿನ ಕೃಪೆಯಿಂದ ವೇದಗಳನ್ನೇ ನಿಂದೆ ಮಾಡಿದ ಬುದ್ಧ ರೂಪಿ ಭಗವಂತನಿಗೆ ನಮಸ್ಕಾರ.

**ಮ್ಲೇಚ್ಛಾಶ್ಚ ನಿಹತಾ ಯೇನ ಯುಗಾಂತೇ ಕಲ್ಕಿ ಮೂರ್ತಿನಾ ।**
**ಸರ್ವಲೋಕ ಹಿತಾರ್ಥಾಯ ತಸ್ಮೈ ತುಭ್ಯಂ ನಮೋ ನಮಃ ॥**

ಯುಗದ ಕೊನೆಯಲ್ಲಿ ಕಲ್ಕಿ ರೂಪದಿಂದ ಎಲ್ಲ ಜನರ ಹಿತಕ್ಕಾಗಿ ಮ್ಲೇಂಛರನ್ನು ಸಂಹರಿಸಿದ ಮಹಾವಿಷ್ಣುವೇ, ನಿನಗೆ ನನ್ನ ನಮಸ್ಕಾರ.

**ಹರೇ ವಿಷ್ಣೋ ದೈತ್ಯ ಜಿಷ್ಣೋ ನಾರಾಯಣ ಕೃಪಾಮಯ ।**
**ಸಂಸಾರ ಸಾಗರೇ ಘೋರೇ ಪತಿತಂ ಮಾಂ ಸಮುದ್ಧರ ॥**

ದೈತ್ಯರನ್ನು ಗೆದ್ದು ಸಜ್ಜನರ ಮೇಲೆ ಕೃಪೆ ಮಾಡುವ ಗುಣಪರಿಪೂರ್ಣನಾದ ಮಹಾವಿಷ್ಣು ಸ್ವರೂಪಿಯಾದ ಶ್ರೀಹರಿಯೇ ಘೋರವಾದ ಈ ಸಂಸಾರ ಸಮುದ್ರದಲ್ಲಿ ಬಿದ್ದು ಒದ್ದಾಡುತ್ತಿರುವ ನನ್ನನ್ನು ಉದ್ಧಾರ ಮಾಡು.

ಹೀಗೆ ಮಾಧವನು ದಶಾವತಾರ ವೈಭವದ ವರ್ಣನ ಪುರಸ್ಸರವಾಗಿ ವಿಷ್ಣುವಿನ ಸ್ತೋತ್ರ ಮಾಡಿ ಅನಂತರ ಆನಂದದಿಂದ ಆ ಭಗವಂತನ ಎರಡೂ ಕಾಲುಗಳನ್ನು ಭಕ್ತಿಯಿಂದ ತೊಳೆದ. ಅವನ ಅಡಿದಾವರೆಯ ಹುಡಿಯಲ್ಲಿ ತನ್ನ ಇಡೀ ದೇಹವನ್ನೆಲ್ಲ ಈಡಾಡಿ ಭಕ್ತಿಯಿಂದ ನುಡಿದ ಮಾಧವ -

**ಗೋವಿಂದ ಪರಮಾನಂದ ಮುಕುಂದ ಮಧುಸೂದನ ।**
**ತ್ರಾಹಿ ಮಾಮ್ ಪಾಪಿನಂ ಕೃಷ್ಣ ಯತಸ್ತ್ವಂ ಸರ್ವ ಪಾಪಹಃ ॥**

ಆನಂದ ಸ್ವರೂಪಿಯೂ ಮೋಕ್ಷಪ್ರದನೂ ಮಧುನಾಮಕ ದೈತ್ಯನನ್ನು ನಾಶಪಡಿಸಿದವನೂ ಗೋವುಗಳನ್ನು ಕಾಯ್ದವನೂ ವೇದಗಳನ್ನು ರಕ್ಷಿಸಿದವನೂ ವೇದ ಪ್ರತಿಪಾದ್ಯನೂ ಆದ ಕೃಷ್ಣ, ಪಾಪಿಯಾದ ನನ್ನನ್ನು ಕಾಪಾಡು. ಸರ್ವಪಾಪ ಪರಿಹಾರಕನಲ್ಲವೇ ನೀನು?

ಮಾಧವನ ಈ ಮಾತುಗಳನ್ನು ಕೇಳಿ ಸಂತುಷ್ಟನಾದ ಆ ಶ್ರೀಕಾಂತ. ಮಾಧವನ ಮೇಲೆ ಪ್ರೀತಿಯ ಮಳೆಗರೆಯುತ್ತ ಮಾತನಾಡಿದ.

**ಶ್ರೀಹರಿ:-** ವತ್ಸ ಮಾಧವ, ನಿನಗೆ ಬೇಕಾದ ವರ ಬೇಡು. ಅಪೇಕ್ಷಿಸಿದ್ದನ್ನು ನೀಡುತ್ತೇನೆ. ಏನು ಬೇಕು ಕೇಳು. ಬ್ರಹ್ಮತ್ವಬೇಕೆ? ಶಿವ ಪದವಿಯನ್ನು ಬಯಸುವೆಯಾ? ಇಂದ್ರನ ಸ್ಥಾನವನ್ನು ಅಪೇಕ್ಷಿಸುವೆಯಾ?

**ಮಾಧವ:-** ಸ್ವಾಮಿ, ನಿನ್ನ ದಯೆಯಿಂದ ಬ್ರಹ್ಮ, ಇಂದ್ರ, ಶಿವ, ಮೊದಲಾದವರ ಸೌಭಾಗ್ಯವನ್ನೆಲ್ಲ ನಾನು ಪಡೆದಿದ್ದೇನೆ. ಯಾಕೆಂದರೆ ದೇವಾಧಿದೇವತೆಗಳಿಗೂ ಗೋಚರ ನಾಗದ ನಿನ್ನನ್ನು ನಾನು ಇಂದು ನೋಡುತ್ತಲಿದ್ದೇನೆ. ಇದೇನು ಸಾಮಾನ್ಯ ಸೌಭಾಗ್ಯವೆ?

ಪ್ರಭು, ನೀನೇನೋ ಪರದಲ್ಲಿ ಮುಕ್ತಿ ಇಹದಲ್ಲಿ ಭುಕ್ತಿ? ಅಧಿಕಾರ ಎಲ್ಲವನ್ನೂ ಕೊಡಲು ಸಮರ್ಥನು, ಆದರೆ ಸ್ವಾಮಿ, ನಾನು ನಿನ್ನ ಮುಖ್ಯ ಭಕ್ತ. ನನಗೆ ಉಳಿದುದು ಯಾವುದೂ ಬೇಡ. ನಿನ್ನ ಭಕ್ತಿಯನ್ನು ಮಾತ್ರ ಅವಿಚ್ಛಿನ್ನವಾಗಿ ನನಗೆ ಕರುಣಿಸು.

**ಶ್ರೀಹರಿ:-** ಮಗು, ನಾನು ನಿನ್ನ ಈ ಭಕ್ತಿಯಿಂದ ಪರಮ ಪ್ರೀತನಾಗಿದ್ದೇನೆ. ಬೇಕಾದ ವರವನ್ನು ಕೇಳಿಕೊ. ನಿನಗೆ ಅಪೇಕ್ಷಿತವಾದದ್ದು ಏನು? ನಿನಗೆ ಬೇಕಾದ ಯಾವ ವರವನ್ನು ಕೊಟ್ಟು ನಾನು ನಿನ್ನ ಭಕ್ತಿಯ ಋಣವನ್ನು ತೀರಿಸಲಿ?

ಹೀಗೆ ನುಡಿದು ಅತ್ಯಂತ ಪ್ರೀತ ಪ್ರಸನ್ನನಾದ ಆ ಪರಮಾತ್ಮನು ತನ್ನ ನಾಕೂ ಕೈಗಳನ್ನು ಮುಂದೆ ಚಾಚಿ ತಂದೆಯು ಮಗನನ್ನು ಬಿಗಿದಪ್ಪುವಂತೆ ಗಟ್ಟಿಯಾಗಿ ಆಲಿಂಗಿಸಿಕೊಂಡ. ಮತ್ತು ಅಂತಃಕರಣದಿಂದ ನುಡಿದ. ''ಮಾಧವ ನಿನ್ನನ್ನು ನಾನು ಆಲಿಂಗನ ಮಾಡಿದ್ದರಿಂದ ಇಂದು ನೀನು ಋಣ ಮುಕ್ತನಾದೆ. ನಿನಗೆ ಇನ್ನು ಮೇಲೆ ಮುಂದೆ ಜೀವನದಲ್ಲಿ ಆಗುವದು ಶುಭವು ಮಾತ್ರ. ನೀನು ಲೌಕಿಕ ಸುಖದ ಕಾಮನೆಯನ್ನು ಮನಸ್ಸಿನಲ್ಲಿಟ್ಟುಕೊಂಡು ನನ್ನ ಪ್ರತಿಮೆಯನ್ನು ಉದ್ದೇಶಿಸಿ ನಿರಂತರ ನನ್ನ ಪೂಜೆ ಮಾಡಿದೆ. ನಿನ್ನ ಅರ್ಚನೆ ಸಕಾಮವಾಗಿತ್ತು. ಆದುದರಿಂದ ನಾನು ನಿನಗೆ ಇನ್ನೊಂದು ಜನ್ಮವನ್ನು ಕೊಟ್ಟು ಅನಂತರ ನನ್ನ ಲೋಕಕ್ಕೆ ಕರೆದುಕೊಳ್ಳುತ್ತೇನೆ.''

**ವ್ಯಾಸ:-** ಹೀಗೆ ಆ ಶ್ರೀ ಹರಿಯು ವರವನ್ನು ಕೊಟ್ಟು ನಾಲ್ಕು ಕೈಗಳಿಂದ ಅವನನ್ನು ಆಲಿಂಗಿಸಿ ಅಲ್ಲಿಯೇ ಅಂತರ್ಧಾನ ಹೊಂದಿದ.

ನಂತರ ಮಾಧವನು ತನ್ನ ಇಬ್ಬರೂ ಮಡದಿಯರಿಂದ ಕೂಡಿಕೊಂಡು ಆ ಭಗವಂತನನ್ನು ಸಂತತ ಕ್ರಿಯಾಯೋಗದಿಂದ ಭಕ್ತಿ ಪೂರ್ವಕವಾಗಿ ಆರಾಧನೆಗೈದ. ಅದರಿಂದ ಇಹಲೋಕದಲ್ಲಿ ಸಕಲ ಭೋಗಭಾಗ್ಯಗಳನ್ನು ಪಡೆದ. ಕೊನೆಗೆ ಗಂಗೆಯ ಜಲದಲ್ಲಿಯೇ ಮರಣ ಹೊಂದಿ ಮಡದಿ ಸಹಿತನಾಗಿಯೇ ಮೋಕ್ಷವನ್ನು ಐದಿದ. ಶ್ರೀಹರಿಯ ಈ ದಿವ್ಯಚರಿತ್ರವನ್ನು ಕೇಳಿದವರು ಇಹಲೋಕದಲ್ಲಿ ಸುಖವನ್ನೂ ಪರದಲ್ಲಿ ಸದ್ಗತಿಯನ್ನೂ ವಾಸುದೇವನ ಪ್ರಸಾದದಿಂದ ಹೊಂದುವರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ ಸುಲೋಚನಳಿಂದ ಭೀಮನಾದನ ಸಂಹಾರ ಪ್ರಚೇಷ್ಟನ ಬಂಧನ. ಮಾಧವ ಸುಲೋಚನೆಯರ ಮಧುರ ಮಿಲನ ಮತ್ತು ಮದುವೆ ಎಂಬ ಆರನೇಯ ಅಧ್ಯಾಯ ಮುಗಿದುದು*

—o—

ಅಧ್ಯಾಯ - ೭

## ಗಂಗೆಯ ಮಾಹಾತ್ಮ್ಯ

**ವೇದವ್ಯಾಸ:-** ಯಾವ ಮನುಷ್ಯನು ಲೋಕಮಾತೆಯಾದ ಗಂಗೆಯಲ್ಲಿ ಸ್ನಾನ ಮಾಡಿಲ್ಲವೋ ಅವನ ಮುಖವನ್ನು ನೋಡತಕ್ಕದ್ದಲ್ಲ. ನೋಡಿದರೆ ಪಾಪಿಯ ಮುಖದರ್ಶನ ಮಾಡಿದ ಪಾಪ ಪರಿಹಾರಕ್ಕಾಗಿ ಸೂರ್ಯನನ್ನೂ ನೋಡಬೇಕು.

**ಪ್ರಭಾತೇ ಯಃಪಠೇದ್ ಭಕ್ತ್ಯಾ ಗಂಗಾ ಇತ್ಯಕ್ಷರದ್ವಯಂ**
**ತಸ್ಯ ನಶ್ಯಂತಿ ಪಾಪಾನಿ ತಮೋವದರುಣೋದಯೇ**

ಬೆಳಿಗ್ಗೆ ಎದ್ದ ಕೂಡಲೇ ಯಾರು ಗಂಗಾ ಎಂದು ಎರಡಕ್ಷರವನ್ನು ಉಚ್ಚರಿಸುವನೋ ಅವರ ಪಾಪಗಳೆಲ್ಲವೂ ಅರುಣೋದಯವಾದ ಕೂಡಲೇ ಕತ್ತಲೆಯು ಕಳೆದು ಹೋಗುವಂತೆ ನಾಶವಾಗುವುದು.

ಗಂಗಾಸ್ನಾನ ಮಾಡದ ಮನುಷ್ಯನ ಅನ್ನೋದಕವನ್ನು ಸ್ವೀಕರಿಸಬಾರದು. ಗಂಗಾಸ್ನಾನ ಮಾಡಿದವರ ಪಾಪಗಳೆಲ್ಲವೂ ಅವರ ದೇಹವನ್ನು ಬಿಟ್ಟು ಗಂಗಾಸ್ನಾನವನ್ನು ಮಾಡದಿರುವವರ ದೇಹವನ್ನು ಅಂಟಿಕೊಳ್ಳುತ್ತವೆ.

**ಅಹೋಚಿತ್ರ ಮಹೋಚಿತ್ರ ಮಹೋಚಿತ್ರಮಿದಂ ಪುನಃ ।**
**ಪತಂತಿ ನರಕೇ ಮೂಢಾಃ ಗಂಗಾನಾಮ್ನಿ ಸ್ಥಿತೇ ಸತಿ ॥**

ಗಂಗಾ ಎಂಬ ಹೆಸರು ಇರಲಿಕ್ಕಾಗಿ ಜನರು ನರಕದಲ್ಲಿ ಬೀಳುತ್ತಾರೆ. ಇದು ಅತ್ಯಾಶ್ಚರ್ಯ. ಅತೀವ ಕೌತುಕಕಾರಿ.

ಗಂಗೆಯ ನೀರಿನ ಒಂದು ಕಣವನ್ನಾದರೂ ತಲೆಯಲ್ಲಿ ಹೊತ್ತವನು ಬ್ರಹ್ಮಹತ್ಯಾದಿ ಪಾಪಗಳಿಂದ ಕೂಡ ಮುಕ್ತನಾಗುತ್ತಾನೆ. ಗಂಗೆಯ ತೀರದ ಮಳಲಿನ ಕಣವನ್ನು ಹಣೆಯ ಮೇಲಿಟ್ಟುಕೊಂಡವನು ಎಲ್ಲ ಜಗತ್ತನ್ನು ಪವಿತ್ರಗೊಳಿಸುತ್ತಾನೆ. ಗಂಗೆಯಲ್ಲಿ ಮಿಂದು ಬಂದವನನ್ನು ನೋಡಿದರೆ ಸಾವಿರ ಅಶ್ವಮೇಧ ಯಜ್ಞ ಮಾಡಿದಷ್ಟು ಪುಣ್ಯ ಬರುತ್ತದೆ. ''ನಾನು ಗಂಗಾಸ್ನಾನಕ್ಕೆ ಹೋಗುತ್ತೇನೆ. ನೀನೂ ಬಾ'' ಎಂದು ಹೇಳಿದವನ ಮೇಲೆ ಶ್ರೀಹರಿಯು ಪ್ರಸನ್ನನಾಗಿ ಅವನ ಎಲ್ಲ ಇಷ್ಟಾರ್ಥಗಳನ್ನು ಪೂರೈಸುತ್ತಾನೆ.

**ಗಂಗೈತಿ ನಾಮ ಸಂಸ್ಮೃತ್ಯ ಯಸ್ತು ಕೂಪಜಲೇಽಪಿ ಚ ।**
**ಕರೋತಿ ಮಾನವಃ ಸ್ನಾನಂ ಗಂಗಾಸ್ನಾನ ಫಲಂ ಲಭೇತ್ ॥**

ಗಂಗಾ ಎಂಬ ನಾಮವನ್ನು ಉಚ್ಚರಿಸುತ್ತ ಗಂಗೆಯನ್ನು ಸ್ಮರಿಸುತ್ತ ಬಾವಿಯ ನೀರಿನ ಸ್ನಾನಮಾಡಿದರೂ ಗಂಗಾಸ್ನಾನ ಮಾಡಿದ ಪುಣ್ಯವು ಬರುತ್ತದೆ. ಮರಣಕಾಲದಲ್ಲಿ ಒಂದು ಸಾಸಿವೆಕಾಳಿನಷ್ಟಾದರೂ ಗಂಗಾಜಲ ಬಾಯಲ್ಲಿ ಹೋದರೆ ಅವನ ಪಾಪಗಳೆಲ್ಲವೂ ಪರಿಹಾರವಾಗಿ ಅವನು ಪರಮ ಪದವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು.

ತ್ರೇತಾಯುಗದಲ್ಲಿ ಧರ್ಮಸ್ವ ಎಂಬ ಧಾರ್ಮಿಕ ಭಗವದ್ಭಕ್ತನು ಇದ್ದ. ವೇದ

ವೇದಾಂತ ಪಾರಂಗತನಾದ ಆ ಬ್ರಾಹ್ಮಣ ಪರಮ ಶಾಂತ. ನಿತಾಂತದಾಂತ. ದಯಾಪೂರ್ಣ. ಸತ್ಯ ಅವನ ಜೀವನದ ಉಸಿರು. ಎಲ್ಲ ಪ್ರಾಣಿಗಳಿಗೂ ಹಿತ ಬಯಸುವದೇ ಅವನ ಸ್ವಭಾವ. ಯೋಗಾಭ್ಯಾಸ ಅವನೇ ಬೆಳೆಸಿಕೊಂಡ ವ್ಯಸನ. ಅವನ ಸಮೀಪವೂ ಸುಳಿಯುತ್ತಿರಲಿಲ್ಲ ಕೋಪ. ಕಾಮನಿಗಂತೂ ಅವನಿದ್ದ ತಾಣವೇ ತಿಳಿದಿರಲಿಲ್ಲ. ಇಂದ್ರಿಯಗಳನ್ನೆಲ್ಲ ಅವನು ತನ್ನ ಹದ್ದುಬಸ್ತಿನಲ್ಲಿಟ್ಟುಕೊಂಡಿದ್ದ. ಹಿಂಸೆಯ ಹೆಸರನ್ನೇ ಕೇಳಿ ಅರಿಯ. ಎಲ್ಲ ಪ್ರಾಣಿಗಳಿಗೂ ಒಳ್ಳೆಯದನ್ನೇ ಬಯಸುವದು ಅವನ ನಿತ್ಯಾಹ್ನಿಕದಲ್ಲಿಯೇ ಸೇರಿದ್ದಿತು.

ಈ ಸಂಸಾರ ಸಾಗರವನ್ನು ದಾಟಲಿಕ್ಕಾಗಿ ಆ ವಿಷ್ಣು ಭಕ್ತನು ಕ್ರಿಯಾಯೋಗದಿಂದ ಕೇಶವನನ್ನು ಪೂಜಿಸಿದ.

ಒಂದು ದಿನ ಒಂದು ಪುಣ್ಯಕಾಲದಲ್ಲಿ ಗಂಗೋದಕದಿಂದ ಸ್ನಾನ ಮಾಡಬೇಕು ಎಂಬ ಉದ್ದೇಶದಿಂದ ಅವನು ಗಂಗಾ ತೀರಕ್ಕೆ ತೆರಳಿದೆ. ಅಲ್ಲಿ ಗಂಗೆಯ ಪುಣ್ಯೋದಕದಲ್ಲಿ ಮಿಂದು ದೇವರ ಪೂಜೆ ಮಾಡಿ ಪಿತೃಗಳನ್ನು ಉದ್ದೇಶಿಸಿ ತರ್ಪಣ ಕೊಟ್ಟು ಗಂಗೆಯ ನೀರನ್ನು ಒಂದು ಸಣ್ಣ ತೂತು ಇರುವ ಸೋರುವ ಕೊಡದಲ್ಲಿ ತುಂಬಿಕೊಂಡು ಮನೆಗೆ ಹೊರಟ ನಿಂತ.

ಅಷ್ಟರಲ್ಲಿ ರತ್ನಾಕರ ಎಂಬ ಒಬ್ಬ ವಣಿಜನು ತನ್ನ ಎಲ್ಲ ಸೇವಕರಿಂದ ಕೂಡಿಕೊಂಡು ಅಲ್ಲಿಗೆ ಬಂದ. ಅವನ ಒಬ್ಬ ಸೇವಕನಾದ ಕಾಲಕಲ್ಪ ಎಂಬ ಬ್ರಾಹ್ಮಣ ಕೈಯಲ್ಲಿ ಬಡಿಗೆ ಹಿಡಿದುಕೊಂಡು ಅಲ್ಲಿಗೆ ಬಂದ. ಅವನು ಜಗತ್ತಿನಲ್ಲಿ ಪಾಪ ಎಂದು ಹೆಸರುಳ್ಳ ಎಲ್ಲ ಪಾತಕಗಳನ್ನೂ ಮಾಡಿ ಮುಗಿಸಿದ್ದ. ಮಾರ್ಗಾಯಾಸದಿಂದ ಬಳಲಿ ಆ ಕಾಲಕಲ್ಪನು ಬರುವಾ ದಾರಿಯಲ್ಲಿ ಒಂದು ಎತ್ತು ಮಲಗಿಕೊಂಡಿತ್ತು. ದಾರಿಯಲ್ಲಿ ಅಡ್ಡ ಮಲಗಿದ ಆ ಎತ್ತನ್ನು ಕಾಲಕಲ್ಪನು ಸಿಟ್ಟಿಗೆದ್ದು ಬಡಿಗೆಯಿಂದ ಮನಬಂದಂತೆ ಬಡಿದು ಹೊಡೆದು ಗಾಯಗೊಳಿಸಿದ. ಅದರಿಂದ ಆ ಮೂಕಪ್ರಾಣಿಗೆ ಬಹಳ ಸಿಟ್ಟು ಬಂದಿತು. ಅದು ಕಣ್ಣು ಕೆಂಪಗೆ ಮಾಡಿತು. ತನ್ನ ಚೂಪಾದ ಎರಡೂ ಕೋಡುಗಳಿಂದ ಕಾಲಕಲ್ಪನ ಹೊಟ್ಟೆಗೆ ಇರಿದು, ಕರುಳು ಹರಿದು, ಕಣ್ಣು ಕಿತ್ತಿ, ಎದೆ ತುಳಿದು ಪ್ರಾಣಾಂತಿಕ ಗಾಯಗಳನ್ನು ಉಂಟು ಮಾಡಿತು. ಆಗ ಕಾಲಕಲ್ಪನು ಮರಣನಾಗಿ ಸಾವಿನ ಉಡಿಯಲ್ಲಿ ಬಿದ್ದವರಂತೆ ಮರಣ ಸಂಕಟದಿಂದ ಬಳಲತೊಡಗಿದ. ಅದನ್ನು ನೋಡಿ ಅಲ್ಲಿಯೇ ಇದ್ದ ದಯಾಳುವಾದ ಧರ್ಮಸ್ವನು ಓಡಿ ಆ ಕಾಲಕಲ್ಪನು ಇದ್ದಲ್ಲಿಗೆ ಬಂದ. ತನ್ನ ಕಿವಿಯಲ್ಲಿ ಇರುವ ತುಳಸೀಪತ್ರವನ್ನು ತೆಗೆದು ಗಂಗೆಯ ನೀರಿನಲ್ಲಿ ಅದನ್ನು ಅದ್ದಿ ಆ ಗಂಗೋದಕದಿಂದ ಪ್ರೋಕ್ಷಣೆ ಮಾಡಿದ. ಮರು ಚಣದಲ್ಲಿಯೇ ಆ ಕಾಲಕಲ್ಪ ಮರಣ ಹೊಂದಿದ. ಅನಂತರ ಆ ಧರ್ಮಸ್ವನು ತನ್ನ ಊರಿಗೆ ಹೊರಟ. ದಾರಿಯುದ್ದಕ್ಕೂ ಗಂಗೆಯ ಮಂಗಳಕರವಾದ ಮಹಿಮೆಯನ್ನು ಹೇಳುತ್ತ ಹಾಡುತ್ತಲೇ ನಡೆದ. ಅವನ ಎದುರು ಸಾವಿರಾರು ವಿಕೃತ ಮುಖದ ಯಮದೂತರು ಬರುತ್ತಲಿದ್ದರು. ಅವರ ಆಕಾರ, ವಿಕಾರ ವಿಚಿತ್ರವಾಗಿದ್ದಿತು. ಒಬ್ಬನ ಕೈ ಒಡೆದರೆ ಮತ್ತೊಬ್ಬನ ಕಾಲು ಸಿಡಿದಿದೆ. ಒಬ್ಬನ ಕಿವಿ ಹರಿದರೆ ಮತ್ತೊಬ್ಬನ ಒಂದು ಕಣ್ಣು ಗುಡ್ಡೆ ಕಿತ್ತಿದೆ. ಅವರಲ್ಲಿ ಕೆಲವರು ಮುರಿದ ಮೂಗಿನವರು, ನಾಲಿಗೆ ಕತ್ತರಿಸಿದವರು, ಹಲ್ಲು ಮುರಿದವರು, ನೆತ್ತರು ಮೆತ್ತಿದ ದೇಹವುಳ್ಳವರು, ಕೆಲವರಿಗಂತೂ ತಲೆಯೇ ಇರಲಿಲ್ಲ. ಬರೇ ಮುಂಡವಿಲ್ಲದ ದಂಡಗಳು ಓಡಾಡುತ್ತಿದ್ದವು. ಸೀಳಿದ ಎದೆ

ಕೆಲವರೆಗೆ. ಬೆತ್ತಲೆ ಮೈಯಿಂದ ಓಡುವವರು ಹಲವರು. ಎಷ್ಟೋ ಯಮದೂತರ ಮೈಯಲ್ಲಿ ಚೂಪಾದ ಬಾಣಗಳು ನೆಟ್ಟು ರಕ್ತ ಬಸಿಯುತ್ತಲಿತ್ತು. ಕೆಲವರ ಕೈ ಕಾಲು ಕಟ್ಟಿದ್ದರಿಂದ ಅಳುತ್ತ ಓಡಲು ಪ್ರಯತ್ನಿಸುತ್ತಿದ್ದರು.

ಈ ಎಲ್ಲ ಯಮದೂತರನ್ನು ಆ ಧರ್ಮಸ್ವ ಬ್ರಾಹ್ಮಣ ಕಂಡು ಹೆದರಿ ನಡುಗ ತೊಡಗಿದ. ಆದರೂ ಅವನಿಗೆ ತಾನು ಹರಿಭಕ್ತ ಎಂಬುದು ನೆನಪಾಗಿ ಧೈರ್ಯ ಬಂದಿತು. ಆ ಯಮಕಿಂಕರರನ್ನು ಕೇಳಿದ.

**ಧರ್ಮಸ್ವ:-** ಅಯ್ಯಾ, ಇಂಥ ವಿಕಾರವಾದ ಆಕಾರವುಳ್ಳ ಕರಾಳಮುಖದ ನೀವು ಯಾರು? ನಿಮ್ಮ ಮೈಯೆಲ್ಲ ಇದ್ದಲಿನಂತೆ ಕಪ್ಪು. ದೇಹವೋ ದಪ್ಪ ದಪ್ಪ. ಕಣ್ಣುಗಳು ಬೆಂಕಿಯ ಉಂಡೆ. ಮಹಾವೀರರಾದ ನಿಮಗೆ ಇಂಥ ದುರ್ಗತಿಯು ಏಕೆ ಬಂದಿತು?

**ಯಮದೂತರು:-** ನಾವೆಲ್ಲರೂ ಯಮನ ಅಪ್ಪಣೆಯನ್ನು ಪಾಲಿಸುವ ಮೃತ್ಯು. ದೂತರು ಇಲ್ಲಿ ನಮಗೆ ಮಹಾನ್ ಯುದ್ಧವಾದದ್ದರಿಂದ ಇಂಥ ದಂಡವನ್ನು ಅನುಭವಿಸಬೇಕಾಯಿತು.

**ಧರ್ಮಸ್ವ:-** ನೀವು ಇಲ್ಲಿಗೆ ಆಕಸ್ಮಿಕವಾಗಿ ಹೇಗೆ ಬಂದಿರಿ? ನಿಮಗೆ ಇಂಥ ದುರವಸ್ಥೆಯನ್ನು ತಂದವರು ಯಾರು?

**ಯಮದೂತರು:-** ವಿಪ್ರೋತ್ತಮ, ಹೆದರಬೇಡ. ನಮ್ಮ ಪೂರ್ಣ ವೃತ್ತಾಂತವನ್ನು ಕೇಳು. ನಮಗೆ ಸಹಿಸಲು ಅಸಾಧ್ಯವಾದ ಇಂಥ ದುಃಖವು ಬರಲು ಕಾರಣವನ್ನು ಹೇಳುತ್ತೇನೆ ಕೇಳು. ಇದೀಗ ಸಿಟ್ಟಿಗೆದ್ದ ಎತ್ತು ತನ್ನ ಎರಡೂ ಕೋಡುಗಳಿಂದ ಇರಿದು ಕಾಲಕಲ್ಪನನ್ನು ಸೀಳಿ ಹಾಕಿರುವದಷ್ಟೆ. ಅವನನ್ನು ನರಕಕ್ಕೆ ಸೆಳೆದುಕೊಂಡು ಹೋಗಲು ಯಮಧರ್ಮನ ಅಪ್ಪಣೆಯ ಮೇರೆಗೆ ನಾವು ಆಯುಧ ಧಾರಿಗಳಾಗಿ ಇಲ್ಲಿಗೆ ಬಂದಿದ್ದೇವೆ. ನಾವು ಇಲ್ಲಿ ಬಂದಾಗ ಆಯುಷ್ಯ ತೀರಿದ ದುಷ್ಟನಾದ ಕಾಯಕಲ್ಪನು ಎತ್ತಿನ ಕೋಡಿನಿಂದ ತಿವಿದು ಚುಚ್ಚಲ್ಪಟ್ಟು ಹೊಟ್ಟೆ ಹರಿದು ಸಾಯುತ್ತಲಿದ್ದ. ಆಗ ದಯಾಳುವಾದ ನೀನು ಗಂಗೆಯ ನಾಮಗಳನ್ನು ಉಚ್ಚರಿಸುತ್ತ ಗಂಗೆಯ ನೀರಿನ ತುಂತುರು ಹನಿಗಳಿಂದ ಅವನಿಗೆ ಪ್ರೋಕ್ಷಣ ಮಾಡಿದೆ. ಗಂಗಾಜಲದ ಹನಿಗಳ ಸಿಂಚನದಿಂದ ಆ ಪಾಪಿಯ ಪಾಪಗಳೆಲ್ಲವೂ ತೊಳೆದು ಹೋಗಿದ್ದರೂ, ಅವನು ಮಹಾ ಪಾಪಿಷ್ಠನಾದುದರಿಂದ ಅವನನ್ನು ನಮ್ಮ ಪಾಶಗಳಿಂದ ಬಿಗಿದು ಎಳೆದುಕೊಂಡು ಹೋಗಲು ನಾವು ಉದ್ಯುಕ್ತರಾದೆವು. ಅಷ್ಟರಲ್ಲಿ ಶರಣಾಗತರನ್ನು ರಕ್ಷಣ ಮಾಡುವ ಶ್ರೀಹರಿಯು ಆ ಕಾಲಕಲ್ಪನನ್ನು ತನ್ನ ಲೋಕಕ್ಕೆ ಕರೆದು ತರಲು ಮಹಾ ಬಲಿಷ್ಠರಾದ ತನ್ನ ದೂತರನ್ನು ಕಳಿಸಿಕೊಟ್ಟ. ನಾರಾಯಣನ ಆಜ್ಞೆಯಿಂದ ಬಂದ ಆ ವಿಷ್ಣುದೂತರು ಸಿಟ್ಟಿಗೆದ್ದು ದಾರಿಯಲ್ಲಿಯೇ ತಡೆದು ನಮ್ಮನ್ನು ಕೇಳಿದರು.

**ವಿಷ್ಣುದೂತರು:-** ಮಹಾತ್ಮರೇ, ನೀವು ಯಾರು? ಇಲ್ಲಿ ಸತ್ತು ಬಿದ್ದ ಮಹಾಶಯ ನನ್ನು ಪಾಶದಿಂದ ಬಿಗಿದು ಏಕೆ ಒಯ್ಯುತ್ತೀರಿ? ನೀವು ಯಾರ ಕಿಂಕರರು? ಇಲ್ಲಿ ಮಡಿದು ಬಿದ್ದ ಕಾಲಕಲ್ಪ ಮಹಾತ್ಮ. ಅವನನ್ನು ಇಲ್ಲಿಯೇ ಬಿಟ್ಟು ನೀವು ಓಡಿ ಹೋಗಿರಿ. ಇಲ್ಲದಿದ್ದರೆ ಈ ನಮ್ಮ ಕೈಯಲ್ಲಿದ್ದ ಚಕ್ರಾಯುಧದಿಂದ ನಿಮ್ಮ ತಲೆಯನ್ನೇ ಕಡಿದು ಹಾಕುತ್ತೇವೆ.

ವಿಷ್ಣುದೂತರ ಈ ಗರ್ವಾಂಧ ವಚನವನ್ನು ಕೇಳಿ ನಾವು ಅವರನ್ನು ಕುರಿತು ನುಡಿದೆವು.

**ಯಮದೂತರು:-** ಮಹಾತ್ಮರೇ, ನಾವೆಲ್ಲರೂ ಪ್ರಾಣಾಧಿಪನಾದ ಯಮನದೂತರು. ಇಲ್ಲಿ ಸತ್ತು ಬಿದ್ದ ಕಾಲಕಲ್ಪ ಪಾಪಿಗಳಲ್ಲಿಯೇ ಮಹಾಪಾಪಿ. ಇವನನ್ನು ಸೆಳೆದುಕೊಂಡು ಯಮಪಟ್ಟಣಕ್ಕೆ ಒಯ್ಯುತ್ತೇವೆ. ಆದರೆ ನೀವು ಯಾರು? ನೀವೆಲ್ಲರೂ ಮಹಾತ್ಮರಂತೆ ಕಾಣುವರಿ. ಕೊರಳಲ್ಲಿ ತುಳಸೀ ಮಾಲೆ ಶೋಭಿಸುತ್ತದೆ. ದಿವ್ಯ ವಸ್ತ್ರಗಳನ್ನುಟ್ಟಿದ್ದೀರಿ. ನಾಲ್ಕು ತೋಳುಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ್ದೀರಿ. ಇಷ್ಟೆಲ್ಲ ಒಳ್ಳೆ ಲಕ್ಷಣಗಳಿಂದೊಡಗೂಡಿದ ನೀವು ಯಾರು? ಮಹಾಪಾತಕಿಯಾದ ಇವನನ್ನು ನೀವೇಕೆ ಕರೆದುಕೊಂಡು ಹೋಗಲು ಬಯಸುವಿರಿ?

**ವಿಷ್ಣುದೂತರು:-** ನಾವೆಲ್ಲರೂ ವಿಷ್ಣುವಿನ ದೂತರು. ನಮಗೆ ಈಗ ಈ ಪುಣ್ಯಾತ್ಮನಾದ ಈ ಮೃತ ಮಹಾತ್ಮನನ್ನು ವೈಕುಂಠಕ್ಕೆ ಒಯ್ದುಬೇಕಾಗಿದೆ. ಅದಕ್ಕಾಗಿ ನಾವು ಇಲ್ಲಿಗೆ ಬಂದಿದ್ದೇವೆ. ಇವನು ಪರಮ ಭಗವದ್ಭಕ್ತ. ಇವನ ಪಾಪಗಳೆಲ್ಲ ತೊಳೆದು ಹೋಗಿದೆ. ಇವನೀಗ ವಿಷ್ಣುಭಕ್ತರಾದ ನಮ್ಮ ಮನುಷ್ಯ. ನಿಮಗೆ ಬದುಕಬೇಕೆಂಬ ಇಚ್ಛೆ ಇದ್ದರೆ ಇವನನ್ನು ಕೂಡಲೇ ಬಿಡುಗಡೆ ಮಾಡಿರಿ.

ವಿಷ್ಣುದೂತರ ಈ ಮಾತನ್ನು ಕೇಳಿ ಸಿಟ್ಟಿನಿಂದ ನಾವು ಅವರಿಗೆ ಹೇಳಿದೆವು.

**ಅಯಂ ಪಾಪೀ ದುರಾಚಾರೋ ಬ್ರಹ್ಮಹತ್ಯಾ ಸಹಸ್ರಕೃತ್ ।**
**ಕೃತಘ್ನಶ್ಚೈವ ಗೋಘ್ನಶ್ಚ ಮಿತ್ರಘ್ನಶ್ಚ ದುರಾಶಯಃ ॥**

ಈಗ ಇಲ್ಲಿ ಮರಣ ಹೊಂದಿದ ಪಾಪಿಯು ಮಹಾದುರಾಚಾರಿ. ಸಾವಿರಾರು ಬ್ರಹ್ಮಹತ್ಯೆಗಳನ್ನು ಈತ ಮಾಡಿದ್ದಾನೆ. ಮೇಲಾಗಿ ಇವನು ಮಹಾ ಕೃತಘ್ನ. ಅನೇಕ ಗೋವುಗಳನ್ನು ಕೊಂದಿದ್ದಾನೆ. ಮಿತ್ರನಿಗೆ ವಿಶ್ವಾಸ ಘಾತ ಮಾಡಿದ್ದಾನೆ. ಇವನು ಕದ್ದ ಬಂಗಾರಕ್ಕೆ ಲೆಕ್ಕವೇ ಇಲ್ಲ. ಈ ಪಾಪಿಯು ಪ್ರತಿದಿನವೂ ಒಬ್ಬೊಬ್ಬ ಪರಸ್ತ್ರೀಯನ್ನು ಕೆಡಿಸುತ್ತಿದ್ದ. ಸಹಸ್ರಾರು ಪ್ರಾಣಿಗಳನ್ನು ಕಡಿದು ಹಾಕಿದ. ಸ್ತ್ರೀ ಹತ್ಯೆ ಬಾಲ್ಯಹತ್ಯೆಗಳಂತೂ ಬಹಳ ಸಲ ದೊಡ್ಡ ಪ್ರಮಾಣದಲ್ಲಿ, ಸ್ತ್ರೀ ಬಾಲರ ಸಾಮೂಹಿಕ ಸಂಹಾರವು ಇವನಿಂದ ಮಾಡಲ್ಪಟ್ಟಿದೆ. ಅಡವು ಇಟ್ಟಿದ್ದನ್ನು ಅಪಹರಿಸುವನು. ಮಾತೃಗಮನ, ಗೋಮಾಂಸಭಕ್ಷಣ, ಪರಹಿಂಸೆ, ಇನ್ನೊಬ್ಬರ ಮನೆಗೆ ಬೆಂಕಿ ಹಚ್ಚುವದು. ಸಭೆಯಲ್ಲಿ ಪರನಿಂದೆ ಮಾಡುವದು, ವಿಧವೆಯರಿಗೆ ಗರ್ಭಪಾತ ಮಾಡಿಸುವದು. ಮನೆಗೆ ಬಂದ ಅತಿಥಿಗಳನ್ನು ಹಣದ ಲೋಭದಿಂದ ರಾತ್ರಿಯ ವೇಳೆಯಲ್ಲಿ ಕೊಂದು ಹಾಕುವದು. ಇಂಥ ಅಸಂಖ್ಯ ಪಾಪಗಳನ್ನು ಈ ಮೂಢನು ಮಾಡಿದ್ದಾನೆ. ಆದರೆ ಪುಣ್ಯ ಕಾರ್ಯವನ್ನು ಮಾತ್ರ ತಿಲ ಮಾತ್ರವೂ ತನ್ನ ಜನ್ಮದಲ್ಲಿ ಈತ ಮಾಡಲಿಲ್ಲ. ತನ್ನ ಮನೆಗೆ ಬಂದ ಅತಿಥಿಗಳನ್ನು ದ್ರವ್ಯದ ಲೋಭದಿಂದ ರಾತ್ರಿ ಕಾಲದಲ್ಲಿ ನಿಶ್ಚಿತವಾದ ಖಡ್ಗದಿಂದ ಹೊಡೆದು ಕೊಂದು ಹಾಕುತ್ತಿದ್ದ. ಇದಲ್ಲದೇ ಇನ್ನೂ ಅನೇಕ ಪಾಪಗಳನ್ನು ಅಗಣಿತವಾಗಿ ಈ ನೀಚನು ಮಾಡಿದ. ಆದರೆ ಈ ಮೂಢನು ಒಂದೂ ಪುಣ್ಯ ಕಾರ್ಯವನ್ನು ಮಾಡಲಿಲ್ಲ. ಅದಕ್ಕಾಗಿ ನಾವು ಈ ಪಾಪಿಯನ್ನು ಧರ್ಮರಾಜನ ಆಜ್ಞೆಯಂತೆ ನರಕಯಾತನೆಯನ್ನು ಅನುಭವಿಸಲು ಕರೆದೊಯ್ಯುತ್ತೇವೆ. ಈ ಪಾಪಿಯು ಬದುಕಿ ಇರುವವರೆಗೆ ಒಂದೂ ಪುಣ್ಯ ಕರ್ಮವನ್ನು ಮಾಡಲಿಲ್ಲ. ಆದುದರಿಂದ ಇವನು ಮಹಾಪಾಪಿ. ಇವನನ್ನು ನಾವು ಈಗ ನರಕದ ಯಾತನಾ ಗೃಹಕ್ಕೆ ಸೆಳೆದು ಒಯ್ಯುತ್ತೇವೆ.

ಧರ್ಮರಾಜನು ಪಾಪಿಗಳನ್ನೆಲ್ಲ ದುಂಡಿಸಲಿಕ್ಕಾಗಿಯೇ ಆ ಸ್ಥಾನದಲ್ಲಿ ಇರುತ್ತಾನೆ. ನೀವು ದೇವ ದೇವೋತ್ತಮನಾದ ನಾರಾಯಣನ ದೂತರಿರುವದೇ ನಿಜವಾದರೆ ಇಂಥ ಮಹಾಪಾಪಿಯನ್ನು ನಿಮ್ಮ ಪುಣ್ಯಲೋಕಕ್ಕೆ ಒಯ್ಯಲು ಹೇಗೆ ಇಚ್ಛಿಸುವಿರಿ?

**ವಿಷ್ಣುದೂತರು:-** ನೀವು ಹೇಳಿದ ಮಾತು ಸತ್ಯವೇ. ಪಾಪಿಗಳನ್ನೆಲ್ಲ ದಂಡಿಸುವ ಅಧಿಕಾರ ಯಮಧರ್ಮನಿಗೆ ಇರುತ್ತದೆ. ಆದರೆ ಈ ಕಾಲಕಲ್ಪನು ಗಂಗಾಜಲ ಬಿಂದುಗಳ ಸಿಂಚನದಿಂದ ಎಲ್ಲ ಪಾಪಗಳಿಂದ ಮುಕ್ತನಾಗಿದ್ದಾನೆ. ಆದುದರಿಂದ ನಾವು ಇವನನ್ನು ಹರಿಮಂದಿರಕ್ಕೆ ಕರೆದು ಒಯ್ಯುತ್ತೇವೆ.

**ತಾವತ್ ತಿಷ್ಠಂತಿ ದೇಹೇ ಶ್ವ ಪಾತಕಾನಿ ಶರೀರಾನ್**
**ಗಂಗಾಂಭಶೀಕರಾ ಯಾವನ್ನ ಪ್ರಶಂತಿ ದುರ್ಲಭಾ**

ಪಾತಕಿಗಳ ಶರೀರದಲ್ಲಿ ಗಂಗೆಯನೀರಿನ ಹನಿಗಳ ಸ್ಪರ್ಶ ಆಗುವವರೆಗೆ ಮಾತ್ರ ಪಾಪಗಳು ನಿಲ್ಲುತ್ತವೆ.

**ಚಂದ್ರೈಕ ಕಲಯಾ ಸರ್ವಂ ತಿಮಿರಂ ಹನ್ಯತೇ ಯಥಾ**
**ಗಂಗಾಂಬಶೀಕರೇಣಾಪಿ ಪಾತಕಂ ಹನ್ಯತೇ ತಥಾ**

ಚಂದ್ರನ ಒಂದು ಕಲೆಯಿಂದಲೇ ಎಲ್ಲ ಕತ್ತಲೆಯು ಹೊಡೆದಟ್ಟಲ್ಪಡುವದಿಲ್ಲವೇ? ಆದರಂತೆ ಗಂಗೆಯ ನೀರಿನ ಕಣವು ಕೂಡ ಸರ್ವ ಪಾಪಗಳನ್ನು ನಾಶ ಮಾಡುತ್ತದೆ.

**ಗಂಗಾ ನಾಮಾನಿ ಸಂಸ್ಮೃತ್ಯ ಪಾಪೀ ಮುಚ್ಯೇತಪಾತಕಾತ್ ।**
**ಸಾಕ್ಷಾತ್ ತತ್ಸಲಿಲಂ ಸ್ಪೃಷ್ಟ್ವಾ ಮುಚ್ಯತೇಽ ತ್ರಕಿಮದ್ಭುತಂ ॥**

ಗಂಗೆಯ ನಾಮಗಳನ್ನು ಸ್ಮರಣ ಮಾಡಿದ ಮಾತ್ರಕ್ಕೆ ಪಾಪಿಯು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ. ಸಾಕ್ಷಾತ್ ಆಗಿ ಗಂಗೆಯ ನೀರನ್ನು ಮುಟ್ಟಿ ಸ್ನಾನ ಮಾಡಿದರೆ ಅವನು ಮುಕ್ತನಾಗುತ್ತಾನೆ. ಇದರಲ್ಲಿ ಆಶ್ಚರ್ಯವೇನು?

**ಶೀತಮಪ್ಯುದಕಂ ಗಂಗಾ ವಹ್ನಿವತ್ ಪಾಪಕಾನನೇ ।**
**ಯಥಾಗ್ನಿವತ್ ಪದ್ಮವನೇ ಶೀತಂ ತೋಯಂ ಚದಾಹಕೃತ್ ॥**

ಗಂಗೆಯ ನೀರು ತಣ್ಣಗಿದ್ದರೂ ಪಾಪದ ಕಾಡನ್ನು ಸುಡಲು ದಳ್ಳುರಿಯಂತೆ ಜಾಜ್ವಲ್ಯಮಾನವಾಗುತ್ತದೆ. ಕಮಲವನದಲ್ಲಿ ಬೆಂಕಿ ಬಿದ್ದಂತೆ ಗಂಗೆಯ ತಣ್ಣಗಿನ ನೀರು ಪಾಪಗಳನ್ನೆಲ್ಲ ಸುಟ್ಟು ಹಾಕುತ್ತದೆ.

ಆದುದರಿಂದ ಮರಣಕಾಲದಲ್ಲಿ ಗಂಗೋದಕದಿಂದ ಪೋಷಿತನಾದ ಈ ಮಹಾತ್ಮನು ಇನ್ನೊಬ್ಬ ಕೇಶವನೇ ಇದ್ದಂತೆ. ಆದುದರಿಂದ ನಿಮಗೆ ಒಳ್ಳೆಯದಾಗಬೇಕು ಎಂಬ ಇಚ್ಛೆ ಇದ್ದರೆ ಯಮದೂತರಾದ ನೀವೆಲ್ಲರೂ ಇಲ್ಲಿಂದ ಹೊರಟು ಹೋಗಿರಿ.

ವಿಷ್ಣುದೂತರ ಈ ಮಾತುಗಳನ್ನು ಕೇಳಿ ನಾವು ಗಟ್ಟಿಯಾಗಿ ಅಟ್ಟ ಹಾಸಗೈದು ನಕ್ಕೆವು. ಮತ್ತು ಹೇಳಿದೆವು - ''ಪಾಪಗಳ ತೌರುಮನೆಯಂತಿದ್ದಾನೆ ಈ ಮಹಾಪಾಪಿ. ಕೇವಲ ಗಂಗೆಯ ನೀರಿನ ಸಿಂಚನ ಮಾತ್ರದಿಂದಲೇ ತಾನು ಮಾಡಿದ ಶುಭಾಶುಭ ಕರ್ಮಗಳ ಫಲವನ್ನು ಉಣ್ಣದೇ ಮಾನವನು ಮುಕ್ತನು ಆಗುವಂತೆಯೇ ಇಲ್ಲ. ನಾವು ಯಮನ

ಆಜ್ಞೆಯಿಂದ ಇವನನ್ನು ಒಯ್ಯಲು ಇಲ್ಲಿಗೆ ಬಂದಿದ್ದೇವೆ. ನಾವು ಯಾರ ಮಾತಿನಿಂದಲೂ ಈ ಪಾಪಿಯನ್ನು ಬಿಟ್ಟು ಕೊಡಲಾರೆವು.

**ವಿಷ್ಣುದೂತ:-** ನಿಮಗೆ ಧರ್ಮಾ ಧರ್ಮ ಜ್ಞಾನವು ಇರುವುದಿಲ್ಲ. ನೀವೇ ಪಾಪಬುದ್ಧಿಯವರು. ಯಾಕೆಂದರೆ ನಿಮಗೆ ಗಂಗೆಯ ಗುಣಗಳೇ ಗೊತ್ತಿಲ್ಲ. ಅವಳ ಪಾವಿತ್ರ್ಯದ ಅರಿವು ನಿಮಗೆ ಚೆನಾಗಿ ಆಗಿಲ್ಲ.

**ಕಾರ್ಯಂ ವೇದೇ ನಿಷಿದ್ಧಂ ಯತ್ ।**
**ತತ್ ಪಾತಕಮಿತಿ ಸ್ಮೃತಂ ॥**
**ಯದ್ ವೇದ ಸಮ್ಮತಂ ಕಾರ್ಯಂ ।**
**ತದೇವ ಧರ್ಮಮುಚ್ಯತೆ ॥**

ವೇದಶಾಸ್ತ್ರಗಳಲ್ಲಿ ನಿಷಿದ್ಧವಾದ ಕಾರ್ಯವು ಪಾತಕ ಎಂದು ಎನಿಸಲ್ಪಡುತ್ತದೆ. ವೇದ ಸಮ್ಮತವಾದ ಕಾರ್ಯವು ಧರ್ಮ, ಪುಣ್ಯ ಸಾಧನ ಎನಿಸುತ್ತದೆ.

**ದೇವೋ ನಾರಾಯಣಃ ಸಾಕ್ಷಾತ್ ಸ್ವಯಂಭುಃ ಇತಿ ಸುಶ್ರುಮ ।**
**ಯಥಾ ವಿಷ್ಣುಃ ತಥಾ ಗಂಗಾ ಗಂಗೈವ ಸರ್ವ ಪಾಪಃ ॥**

ಸಾಕ್ಷಾತ್ ನಾರಾಯಣನೇ ಪರಬ್ರಹ್ಮನಾದ ಪರದೇವತೆ ಎಂದು ವೇದಶಾಸ್ತ್ರಗಳಲ್ಲಿ ಹೇಳಿದ್ದನ್ನು ಕೇಳಿದ್ದೇವೆ. ಸರ್ವಪಾಪಗಳನ್ನು ಪರಿಹಾರ ಮಾಡುವದರಲ್ಲಿ ಈ ಗಂಗೆಯು ವಿಷ್ಣುವಿನಂತೆಯೇ ಅವನ ಸನ್ನಿಧಾನದಿಂದ ಸಮರ್ಥಳು.

ವಿಷ್ಣು ಸ್ವರೂಪಿಣಿಯಾದ ಆ ಗಂಗೆಯ ನಾಮೋಚ್ಚಾರಣೆಯನ್ನು ಮಾಡಿ ತುಳಸೀ ಪತ್ರದಿಂದ ಗಂಗೆಯ ನೀರನ್ನು ಪ್ರೋಕ್ಷಣ ಮಾಡಿದ ಬಳಿಕ ಮಾನವರ ದೇಹದಲ್ಲಿ ಪಾಪಗಳು ಎಲ್ಲಿ ಉಳಿಯುತ್ತವೆ? ಗಂಗೆಯ ನಿಂದೆಯನ್ನು ಮಾಡುವ ನೀವು ವಿಷ್ಣು ನಿಂದಕರೇ ಆಗಿರುವಿರಿ. ವಿಷ್ಣು ನಿಂದಕರಾದ ನಿಮ್ಮನ್ನು ನಾವು ನಮ್ಮ ಕೈಯಲ್ಲಿಯ ಚಕ್ರದಿಂದ ಶಿಕ್ಷಿಸುತ್ತೇವೆ.

ಹೀಗೆ ಹೇಳಿ ಆ ವಿಷ್ಣು ದೂತರು ಕಣ್ಣು ಕೆಂಪಗೆ ಮಾಡಿಕೊಂಡು ಕೋಪಾಟೋಪದಿಂದ ನಮ್ಮೊಡನೆ ಸಮರವನ್ನೇ ಶುರು ಮಾಡಿದರು. ''ಹೊಡೆಯಿರಿ ಈ ಯಮದೂತರನ್ನು, ಕಡಿಯಿರಿ ಗಂಗೆಯ ನಿಂದಕರನ್ನು, ಬಡೆಯಿರಿ ಈ ವಿಷ್ಣುದ್ವೇಷಿಗಳನ್ನು ಎಂದು ನಮ್ಮನ್ನು ಧಿಕ್ಕರಿಸಿ ನುಡಿಯುತ್ತ ಶಂಖಧ್ವನಿಯನ್ನು ಮಾಡಿ ನಮ್ಮನ್ನು ಪ್ರಹರಿಸತೊಡಗಿದರು. ಆಗ ನಾವು ಕೂಡ ಸಿಂಹನಾದವನ್ನು ಮಾಡಿ ಆ ವಿಷ್ಣು ದೂತರನ್ನು ಕಲ್ಲು, ಕಟ್ಟಿಗೆ, ಬಿಲ್ಲು, ಬಾಣ, ಮರ, ಖಡ್ಗ, ಕುಠಾರ, ಪರಿಘ, ಗದೆ, ಚಕ್ರ ಮುಂತಾದವುಗಳಿಂದ ಅವರಿಗೆ ಪ್ರತಿ ಪ್ರಹಾರ ಮಾಡಿದೆವು. ಆದರೆ ಪ್ರಬಲ ಪರಾಕ್ರಮಶಾಲಿಗಳಾದ ಆ ವಿಷ್ಣುದೂತರ ಶಕ್ತಿಸಂಪನ್ನವಾದ ಆಯುಧಗಳ ಭೀಕರಪ್ರಹಾರವನ್ನು ತಾಳಲಾರದೆ ಜರ್ಜರಿತ ದೇಹರಾಗಿ ಬಹು ಮಂದಿ ಯಮಕಿಂಕರರು ಅಲ್ಲಿಯೇ ಯುದ್ಧಭೂಮಿಯಲ್ಲಿ ಮಡಿದುಬಿದ್ದರು. ನಾವು ಕೆಲವರು ಮಾತ್ರ ಅಲ್ಲಿಂದ ಕಾಲು ಕಿತ್ತಿ ಓಡಿ ಬಂದೆವು.

ಅನಂತರ ಅಳಿದುಳಿದ ನಾವೆಲ್ಲ ಅಲ್ಲಿಂದ ಪಲಾಯನ ಮಾಡಿದ ಬಳಿಕ ವಿಜಯಶಾಲಿಗಳಾದ ವಿಷ್ಣು ದೂತರು ಶಂಖನಾದ ಮಾಡಿ ಆನಂದದಿಂದ ಆ ಕಾಲಕಲ್ಪನಿಗೆ

ನಾವು ಬಿಗಿದ ಪಾಶಗಳನ್ನೆಲ್ಲ ಹರಿದರು. ಬಂಧಮುಕ್ತನ್ನಾಗಿ ಮಾಡಿದರು. ವೈಕುಂಠ ಲೋಕದಲ್ಲಿ ತಾವು ದಿವ್ಯವಾದ ವಿಮಾನದಲ್ಲಿ ಹಿಂದೆ ಮಹಾಪಾಪಗೈದ ಆ ಕಾಲಕಲ್ಪನನ್ನು ಕುಳ್ಳಿರಿಸಿಕೊಂಡು ವೈಕುಂಠ ಲೋಕಕ್ಕೆ ತೆರಳಿದರು. ಹಿಂದೆ ದುಷ್ಟನೂ, ಭ್ರಷ್ಟನೂ, ಪಾಪಿಷ್ಟನೂ ಆದ ಆ ಕಾಲಕಲ್ಪನು ಒಂದು ಹನಿ ಗಂಗಾ ನೀರಿನ ಪ್ರಭಾವದಿಂದ ಎಲ್ಲ ಪಾಪಗಳಿಂದ ಮುಕ್ತನಾಗಿ ಹರಿಮಂದಿರಕ್ಕೆ ಪ್ರಯಾಣ ಮಾಡಿದ. ಅದಕ್ಕೆ ವಿರೋಧ ಮಾಡಿದ ನಾವು ಹರಿದೂತರಿಂದ ತಾಡಿತ ಪೀಡಿತರಾಗಿ ಇಂಥ ದುಃಖ ದುರವಸ್ಥೆಗಳನ್ನು ಹೊಂದಿದ್ದೇವೆ. ''ಬ್ರಾಹ್ಮಣ, ನಿನಗೆ ಒಳ್ಳೆಯದಾಗಲಿ. ಸಂತೋಷದಿಂದ ನಿನ್ನ ಮನೆಗೆ ಹೋಗು.''

ಹೀಗೆ ಹೇಳಿ ಆ ಯಮದೂತರು ಯಮಪಟ್ಟಣಕ್ಕೆ ಹೋದರು. ಅನಂತರ ಆ ಧರ್ಮಸ್ವನು ಗಂಗಾ ತೀರಕ್ಕೆ ಬಂದ. ಆ ಪುಣ್ಯೋದಕದಲ್ಲಿ ಸ್ನಾನ ಮಾಡಿದ. ಲೋಕ ಮಾತೆಯಾದ ಆ ಜಾಹ್ನವಿಯನ್ನು ಭಕ್ತಿ ಬಾವ ಭರಿತನಾಗಿ ಗದ್ಗದ ಕಂಠದಿಂದ ಸ್ತೋತ್ರ ಮಾಡಿದ.

**ಧರ್ಮಸ್ವ:-**

**ಗಂಗೇ ಸಮಸ್ತ ಜಗದಂಬ ಚಲತ್ತರಂಗೇಽನಂಗಾದಿ ಚಾರುತಂ ಮಸ್ತಕ ಪುಷ್ಪಮಾಲೆ ।**
**ಕಂಸಾರಿ ಚಾರು ಚರುಣದ್ವಯ ರೇಣುಹಂತ್ರಿ ಭಕ್ತ್ಯಾನಮಾಮಿ ದುರಿತಕ್ಷಯ ಕಾರಣೇಂ ತ್ವಾಂ ॥**

ಎಲ್ಲ ಜಗತ್ತಿಗೂ ತಾಯಿಯಾದ ಗಂಗಾದೇವಿಯೇ, ಪಾಪಗಳನ್ನೆಲ್ಲ ನಾಶಪಡಿಸುವ ಶ್ರೀಹರಿಯ ಸುಂದರವಾದ ಚರಣ ಧೂಳಿಯನ್ನು ತೊಳೆಯುವ ಕಾಮ ವೈರಿಯಾದ ಮಹಾದೇವನ ತಲೆಯ ಮೇಲೆ ಜಟಾಜೂಟದಂತೆ ಕಂಗೊಳಿಸುವ ಚಂಚಲವಾದ ತಲೆಗಳುಳ್ಳ ನಿನ್ನನ್ನು ನಾನು ನಮಸ್ಕರಿಸುತ್ತೇನೆ.

**ಮಾತಃ ಸಮಸ್ತ ಸುಖದೇ ಪ್ರವರೇನದೀನಾಂ ವ್ಯಾಸಾದಿವಿಪ್ರಚಯ ಗೀತ ಗಣೇ ಗುಣಾಢ್ಯೇ**
**ಸಂಸಾರ ಭೈರವ ಮಹಾರ್ಣವ ಮಧ್ಯನೌಕೇ ವಂದೇ ತ ವಾಂಘ್ರಿಯುಗಲಂ ದುರಿತಾಪಹಾರಿ ॥**

ಎಲ್ಲರಿಗೂ ಸುಖವನ್ನು ನೀಡುವ ನದಿಶ್ರೇಷ್ಠಳಾದ ಗಂಗಾ ತಾಯಿಯೇ, ವ್ಯಾಸನೇ ಮೊದಲಾದ ಜ್ಞಾನ ಶ್ರೇಷ್ಠರು ನಿನ್ನ ಗುಣಗಳನ್ನು ಹಾಡಿ ಹೊಗಳುತ್ತಾರೆ. ಸಂಸಾರವೆಂಬ ಸಮುದ್ರದ ಮಧ್ಯದಲ್ಲಿ ಮುಳುಗುವವರಿಗೆ ನೀನೊಂದು ನೌಕೆ. ಪಾಪಗಳನ್ನು ಕಳೆಯುವ ನಿನ್ನ ಅಡಿದಾವರೆಗಳಿಗೆ ವಂದಿಸುತ್ತೇನೆ.

**ಯಸ್ಯಾಸ್ತವಾಂಬುಕಣಿಕಾಮಪಿ ಜನ್ಹುಕನ್ಯೆ ಸೌದಾಸನಾಮ ನೃಪರ್ತಿದ್ವಿಜ ಕೋಟಿ ಹಂತಾ ।**
**ಸಂಪ್ರಾಪ್ಯ ಮುಕ್ತಿಮಗ ಮತ್ರಿದಶೈರಲಭ್ಯಾಂ ತಾಂ ತ್ವಾಂ ನಮಾಮಿ ಶಿರಸಾ ವರದೇ ಪ್ರಸೀದ ॥**

ವರಗಳನ್ನು ನೀಡುವ ಜಾನ್ಹವೀ ನದಿಯೇ, ಸೌದಾಸ ಎಂಬ ರಾಜನು ಅಸಂಖ್ಯ ಬ್ರಾಹ್ಮಣರನ್ನು ಕೊಂದಿದ್ದರೂ ನಿನ್ನ ನೀರಿನ ಹನಿಯ ಪುಣ್ಯದಿಂದ

ದೇವತೆಗಳಿಗೂ ದೊರಕದಿರುವ ದಿವ್ಯವಾದ ಮುಕ್ತಿಸ್ಥಾನವನ್ನು ಹೊಂದಿದ. ಇಂಥ ನಿನ್ನನ್ನು ತಲೆ ಬಾಗಿ ವಂದಿಸುತ್ತೇನೆ.

**ನಾರಾಯಣಾಚ್ಯುತ ಜನಾರ್ಧನ ಕೃಷ್ಣ ರಾಮ ಗಂಗಾದಿನಾಮ ಗದತೋ ಮಮ ದೇವಿ ಮಾತಃ।**
**ಸಂಸಾರ ಪಾಕ ನಿವಾರಿಣಿ ದೇಹ ಪಾತಸ್ತ್ವ ದ್ವಾರಿಣೀಹ ಭವತುತ್ವದನುಗ್ರಹೇಣ॥**

ನಾರಾಯಣ, ಅಚ್ಯುತ, ಜನಾರ್ಧನ, ಕೃಷ್ಣ, ರಾಮ, ಗಂಗಾ ಮುಂತಾದ ನಾಮಗಳನ್ನು ಉಚ್ಚಾರ ಮಾಡುತ್ತ ಇರುವಾಗಲೇ ನಿನ್ನ ಅನುಗ್ರಹದಿಂದ ನಿನ್ನ ನೀರಿನಲ್ಲಿ ನನ್ನ ದೇಹಪಾತವು ಆಗಲಿ. ಏಕೆಂದರೆ ನೀನು ಸಂಸಾರದ ಮಹಾ ಪಾಪಗಳನ್ನು ಪರಿಹರಿಸುವ ಮಹಾತಾಯಿ.

**ಕಿಂ ವಾ ತಪೋಭಿರಖಿಲೇಶ್ವರಿ ಕಿಂ ಜಪೈರ್ವಾ**
**ದಾನೈಶ್ಚ ಕಿಂ ತುರಗ ಮೇಧ ಮುಖ್ಯೈ ರ್ಮಖೈರ್ವಾ ॥**
**ತ್ವನೀರಶೀಕರಮವಾಪ್ಯ ಸುರೈರಲಭ್ಯಾಂ ಮುಕ್ತಿಂ**
**ವ್ರಜಂತಿ ಮನುಜಾ ಅತಿಪಾಪಿನೋಽಪಿ ॥**

ಜಗಕ್ಕೆಲ್ಲ ಈಶ್ವರಿಯಾದ ಗಂಗೆ, ಜಪ, ದಾನ, ಅಶ್ವಮೇಧವೆ ಮೊದಲಾದ ಯಜ್ಞಗಳನ್ನು ತೆಗೆದುಕೊಂಡು ಏನು ಮಡುವದು? ನಿನ್ನ ನೀರಿನ ಕಣ ದೊರಕಿದರೂ ಸಾಕು. ಅತ್ಯಂತ ಪಾಪಿಗಳೂ ಕೂಡ ನಿನ್ನ ಜಲಕಣದಿಂದ ಮುಕ್ತಿಯನ್ನು ಹೊಂದುತ್ತಾರೆ.

**''ಧತ್ತೇಲಲಾಟ ಫಲಕೇ ತವ ಸೈಕತಂ ಯಃ**
**ಪುಂಡ್ರಂ ಚ ದೇವಿ ತವ ತೀರ ಮೃದಾ ಸದೈವ ।**
**ತ್ವನ್ನಾಮ ಸರ್ವರಸಧಾಮ ವದೇಚ್ಚ ಭಕ್ತ್ಯಾ**
**ತತ್ಪಾದರೇಣುರಖಿಲೋಽಸ್ತು ಮಮೈವ ಮೂರ್ಧ್ನಿ ॥**

ಯಾರು ಹಣೆಯ ಮೇಲೆ ನಿನ್ನ ತಡಿಯ ಮಳಲನ್ನು ಧರಿಸುವರೋ, ನಿನ್ನ ತೀರದ ಮಣ್ಣಿನಿಂದ ಯಾರು ಊರ್ಧ್ವ ಪುಂಡ್ರ ನಾಮಾದಿಗಳನ್ನು ಹಚ್ಚಿಕೊಳ್ಳುವರೋ, ಮತ್ತು ಎಲ್ಲ ವಿಧವಾದ ರಸಗಳಿಗೂ ನೆಲೆಯಾದ ನಿನ್ನ ನಾಮಗಳನ್ನು ಯಾವಾಗಲೂ ಯಾರು ನೆನೆಯುತ್ತ ಇರುವರೋ ಅಂಥ ಗಂಗಾಭಕ್ತರ ಪಾದಧೂಳಿಯ ಕಣಗಳೆಲ್ಲವೂ ನನ್ನ ತಲೆಯ ಮೇಲೆ ಇರಲಿ.

**ತ್ವದ್ರೋಧಸಿ ತ್ರಿಪಥಗೆ ವಸತಿಂ ವಿಧಾಯ**
**ಪೀತ್ವಾಚವಾರಿ ತವ ಪಾತಕನಾಶಕಾರಿ ।**
**ಸ್ಮೃತ್ವಾಚ ನಾಮ ತವ ವೀಚಿರಸ್ವಂ ಚ ದೃಷ್ಟ್ವಾ**
**ಸಂಸಾರ ಬಂಧನ ಹರೇ ಮಮಯಾತು ಜನ್ಮ ॥**

ತಾಯಿ, ನಿನ್ನ ತೀರದಲ್ಲಿಯೇ ವಾಸಗೈದು ಮತ್ತು ಪಾಪಗಳನ್ನು ನಾಶ ಪಡಿಸುವ ನಿನ್ನ ನೀರನ್ನು ಕುಡಿದು, ನಿನ್ನ ನಾಮಗಳನ್ನು ನೆನೆದು ಹಾಗೂ ನಿನ್ನ ತೊರೆ ತೆರೆಗಳ ರಸದ ಸವಿಯನ್ನು ಉಣ್ಣುತ್ತ ಸಂಸಾರ ಬಂಧನವನ್ನು ನಾಶಗೊಳಿಸುವ ದೇವನದಿಯಾದ ನಿನ್ನ ದಂಡೆಯಲ್ಲಿಯೇ ನನ್ನ ಆಯುಷ್ಯವೆಲ್ಲವೂ ಕಳೆಯಲಿ.

"ಪಾಪಾನಿ ರೋಗನಿಕರಾಶ್ಚ ಮನುಷ್ಯ ದೇಹೇ
ತಿಷ್ಠಂತಿ ತಾವದಖಿಲೇಶ್ವರಿ ಮುಕ್ತಿದಾತ್ರಿ ।
ಕುರ್ವಂತಿ ಯಾವದಮಲೇಷು ತವೋದಕೇಷು
ಸ್ನಾನಂ ನಹಿ ತ್ರಿಪಥಗೇ ಸರಿತಾಪ್ರಧಾನ ॥

ಸರ್ವೇಶ್ವರಿಯಾದ ಗಂಗೆ ಮುಕ್ತಿದಾಯಕವಾದ ನಿರ್ಮಲವಾದ ನಿನ್ನ ನೀರಿನಲ್ಲಿ ಜನರು ಎಲ್ಲಿಯವರೆಗೆ ಸ್ನಾನ ಮಾಡುವದಿಲ್ಲವೋ ಅಲ್ಲಿಯವರೆಗೆ ಮಾನವರ ದೇಹಗಳಲ್ಲಿ ಪಾಪಗಳು ರೋಗಗಳು ಮನೆ ಮಾಡಿಕೊಂಡು ಇರುತ್ತವೆ. ಎಲ್ಲ ನದಿಗಳಲ್ಲಿ ಶ್ರೇಷ್ಠಳಾದ ನಿನ್ನ ನೀರಿನಲ್ಲಿ ಮಿಂದ ಬಳಿಕ ಯಾವ ಪಾಪವೂ ಉಳಿಯುವದಿಲ್ಲ.

"ಗಂಗೇ ಸಮಸ್ತಸುಖದಾಯಿನಿ ಕಿಂಚಿದೇವ ಜಾನಾತಿ ತೇ
ಪಶುಪತಿರ್ಭಗವಾನ್ ಮಹತ್ವಮ್ ।
ಯಸ್ಮಾದಸೌಸುಮನಸಾಂಪ್ರವರೋಽತಿ
ಭಕ್ತ್ಯಾ ಧತ್ತೇ ಸದೈವ ಶಿರಸಾಜಗದೀಶ್ವರೀಂ ತ್ವಾಮ್ ॥

ಎಲ್ಲರಿಗೂ ಸುಖವನ್ನು ಉಂಟು ಮಾಡುವ ಗಂಗೆಯೇ ನಿನ್ನ ನಿಜವಾದ ಮಹತ್ವವನ್ನು ಮಹಾದೇವನು ಒಬ್ಬನು ಮಾತ್ರ ಅಲ್ಪ ಸ್ವಲ್ಪ ತಿಳಿದಿದ್ದಾನೆ. ಏಕೆಂದರೆ ದೇವತೆಗಳಲ್ಲಿ ಶ್ರೇಷ್ಠನಾದ ಆ ಪರಮೇಶ್ವರನೊಬ್ಬನೆ ತನ್ನ ತಲೆಯ ಮೇಲೆ ಸದಾ ಸರ್ವದಾ ನಿನ್ನನ್ನು ಭಕ್ತಿಯಿಂದ ಧರಿಸುತ್ತಾನೆ.

"ಗಂಗೆ ದೇವಿ ಜಗನ್ಮಾತಃ ಪ್ರಸೀದ ಪರಮೇಶ್ವರಿ ।
ಪರಿಪಾಹಿ ನಮಸ್ತುಭ್ಯಂ ರಕ್ಷಮಾಂ ಸೇವಕಂ ಸದಾ ॥

ಜಗನ್ಮಾತೆಯಾದ ಗಂಗಾ ದೇವಿಯೇ, ನೀನು ನನ್ನ ಮೇಲೆ ಪ್ರಸನ್ನಳಾಗು. ಪರಮೇಶ್ವರಿಯಾದ ನಿನಗೆ ನನ್ನ ನಮಸ್ಕಾರ. ನಾನು ನಿನ್ನ ಸೇವಕ. ನನ್ನನ್ನು ನೀನು ರಕ್ಷಿಸು.

ಹೀಗೆ ಆ ಧರ್ಮಸ್ವ ವಿಪ್ರನು ಸ್ತೋತ್ರ ಮಾಡಿದ ಬಳಿಕ ಗಂಗಾದೇವಿಯು ಸಾಕ್ಷಾತ್ ಮೂರ್ತಿಮಂತಳಾಗಿ ಅವನ ಎದುರು ಪ್ರತ್ಯಕ್ಷಳಾದಳು. ಮಕರದ ಆಸನದ ಮೇಲೆ ಸರ್ವಾಲಂಕಾರದಿಂದ ಭೂಷಿತಳಾಗಿ ಕುಳಿತುಕೊಂಡ ಕುಂದಕುಸುಮ, ಚಂದ್ರ ಶಂಖಗಳಂತೆ ಅಚ್ಚ ಬಿಳಿ ಬಣ್ಣದ ಎರಡು ಕೈಗಳುಳ್ಳ ಗಂಗಾದೇವಿಯನ್ನು ನೋಡಿ ಆ ಧರ್ಮಸ್ವನು ಗಂಗಾ ಗಂಗಾ, ಗಂಗಾ ಎಂದು ಅವಳ ನಾಮವನ್ನು ಉಚ್ಚರಿಸುತ್ತ ನೆಲಕ್ಕೆ ತಲೆ ಹಚ್ಚಿ ಅವಳ ಪಾದಗಳಿಗೆ ದಂಡಪ್ರಣಾಮ ಮಾಡಿದ. ಮಂದಹಾಸದ ಕಾಂತಿಯಿಂದ ಎಲ್ಲರನ್ನೂ ಮುಗ್ಧರನ್ನಾಗಿ ಮಾಡುತ್ತ, ಗಂಗೆ ಸುಪ್ರೀತಳಾಗಿ ಆ ಧರ್ಮಸ್ವ ಬ್ರಾಹ್ಮಣನಿಗೆ ಬಯಸಿದ ವರವನ್ನು ಕೇಳು ಎಂದು ಹೇಳಿದಳು.

**ಧರ್ಮಸ್ವ:-** ತಾಯಿ, ನಿನ್ನ ನೀರನ್ನು ಮುಟ್ಟಿದರೆ ಬ್ರಹ್ಮಹತ್ಯೆಯನ್ನು ಮಾಡಿದವನು ಕೂಡ ಶುದ್ಧನಾಗಿ ಮೋಕ್ಷವನ್ನು ಹೊಂದುತ್ತಾನೆ. ಅಂದಬಳಿಕ ನಿನ್ನನ್ನು ಪ್ರತ್ಯಕ್ಷವಾಗಿ ಈಗ ಇಲ್ಲಿ ನೋಡಿದ ನಾನು ವರ ಬೇಡಿ ಮತ್ತೆ ಏನನ್ನು ಸಾಧಿಸಬೇಕಾಗಿದೆ? ಆದರೂ ನಿನ್ನ ಅಪ್ಪಣೆಯನ್ನು ಪಾಲಿಸಲಿಕ್ಕಾಗಿ ಕೇಳಿಕೊಳ್ಳುವೆ ಎರಡು ವರಗಳನ್ನು. "ನಿನ್ನ ನೀರಿನ ನಟ್ಟನಡುವೆ ನಿನ್ನ ನಾಮಸ್ಮರಣವನ್ನು ಮಾಡುತ್ತಲಿರುವಾಗಲೇ ನನ್ನ ಪ್ರಾಣ

ಹೋಗಬೇಕು, ಮತ್ತು ಈಗ ನಾನು ಹೇಳಿದ ಈ ಗಂಗಾ ಸ್ತೋತ್ರದಿಂದ ನಿನ್ನನ್ನು ಸ್ತುತಿಸುವವರು ಇಹದಲ್ಲಿ ಭುಕ್ತಿಯನ್ನೂ ಪರದಲ್ಲಿ ಮುಕ್ತಿಯನ್ನೂ ಹೊಂದಬೇಕು.

**ಗಂಗಾ:-** ದ್ವಿಜೋತ್ತಮ, ನಿನ್ನ ಭಕ್ತಿಯುಕ್ತವಾದ ಈ ಸ್ತೋತ್ರದಿಂದ ನಾನು ಸಂತುಷ್ಟಳಾಗಿದ್ದೇನೆ. ನಿನಗೆ ಮುಂದೆ ಜೀವನದಲ್ಲಿ ಯಾವಾಗಲೂ ಕಲ್ಯಾಣ ಪರಂಪರೆಯು ಪ್ರಾಪ್ತವಾಗಲಿ ನೀನು ಹೇಳಿದ ಈ ಗಂಗಾಸ್ತೋತ್ರವನ್ನು ತ್ರಿಕಾಲದಲ್ಲಿ ಪಠಿಸುವವನಿಗೆ ನಾನು ಶ್ರೇಷ್ಠವಾದ ಮೋಕ್ಷವನ್ನು ಕರುಣಿಸುತ್ತೇನೆ.

**ವ್ಯಾಸ:-** ಭಕ್ತವತ್ಸಲಳಾದ ಆ ಗಂಗಾದೇವಿಯು ಧರ್ಮಸ್ವ ಎಂಬ ಹೆಸರಿನ ಬ್ರಾಹ್ಮಣನಿಗೆ ಅವನು ಬಯಸಿದ ವರವನ್ನು ಕೊಟ್ಟು ಅಲ್ಲಿಯೇ ಅದೃಶ್ಯಳಾದಳು ಬಳಿಕ ಆ ಧರ್ಮಸ್ವನು ಅಲ್ಲಿಯೇ ಗಂಗಾತೀರದಲ್ಲಿ ನಿರಂತರವಾಗಿ ನೆಲೆಸಿದ. ಬಹುಕಾಲ ಉರುಳಿತು. ಕೊನೆಗೆ ಮುಪ್ಪಿನ ಕಾಲದಲ್ಲಿ ಆ ಧರ್ಮಸ್ವ ಬ್ರಾಹ್ಮಣನು ನಿರ್ಮಲವಾದ ಗಂಗೆಯ ನೀರಿನಲ್ಲಿಯೇ ಸುಖದಿಂದ ಮರಣ ಹೊಂದಿ ಶ್ರೀಹರಿಯ ದಿವ್ಯ ಸ್ಥಾನವನ್ನು ಹೊಂದಿದ.

ಗಂಗಾ ನೀರಿನ ಕೆಲವೊಂದು ಕಣಗಳನ್ನು ಮಾತ್ರ ಸಿಂಪಡಿಸಿದ್ದರ ಪ್ರಭಾವದಿಂದ ಕಾಲಕಲ್ಪನಂಥ ಅತಿ ಪಾಪಿಷ್ಠನೂ ಕೂಡ ಶ್ರೇಷ್ಠವಾದ ಮೋಕ್ಷವನ್ನು ಹೊಂದಿದ. ಉಳಿದವರ ವಿಷಯದಲ್ಲಿ ಹೇಳುವದು ಹೇಗೆ?

**"ಅನಿಚ್ಛಯಾಗಿ ಗಾಂಗೇಯಂ ಜಲಂ ಸ್ಪೃಷ್ಟ್ವಾಫಲಂ ಲಭೇತ್ ।**
**ಸ್ಪೃಶತಾಂ ಭಕ್ತಿಭಾವೇನ ಕಿಂ ಭವೇನ್ನ ಹಿ ವೇದ್ಮಿತತ್ ॥**

ಇಚ್ಛೆಯಿಲ್ಲದಿದ್ದರೂ ಗಂಗೆಯ ನೀರನ್ನು ಸ್ಪರ್ಶಮಾಡಿದವರು ಪುಣ್ಯ ಫಲ ಹೊಂದುತ್ತಾರೆ. ಅಂದ ಬಳಿಕ ಭಕ್ತಿಯಿಂದ ಗಂಗೆಯ ಸ್ಪರ್ಶನ ದರ್ಶನ ಮಾಡಿಕೊಂಡವರಿಗೆ ಆ ನೀರಿನಲ್ಲಿ ಅವಗಾಹನ ಮಾಡಿ ಪಾನ ಮಾಡಿದವರಿಗೆ ಎಂಥ ಫಲವು ಲಭಿಸೀತು? ಇದನ್ನು ನಾನಂತೂ ತಿಳಿಯಲಾರೆ.

**ಗಂಗಾಸಮಂನಾಸ್ತಿ ತೀರ್ಥಂ ಭೂಯೋ ಭೂಯೋ ಮಯೋಚ್ಯತೇ ।**
**ಯದಂಬುಕಣಿಕಾಂ ಸ್ಪೃಷ್ಟ್ವಾ ಪರಂಧಾಮಹಿಲಭ್ಯತೇ ॥**

ಗಂಗೆಗೆ ಸಮಾನವಾದ ತೀರ್ಥವು ಜಗತ್ತಿನಲ್ಲಿ ಬೇರೆ ಇಲ್ಲ ಎಂದು ನಾನು ಮತ್ತೆ ಮತ್ತೆ ಸಾರಿ ಹೇಳುತ್ತೇನೆ. ಈ ಗಂಗೆಯ ಒಂದು ನೀರಿನ ಕಣವನ್ನು ಸ್ಪರ್ಶ ಮಾಡಿದರೂ ಸಾಕು. ಅವರಿಗೆ ಮೋಕ್ಷವು ಸುಲಭವಾಗಿ ದೊರಕುವೇದು. ಯಾರು ಭಕ್ತಿಯಿಂದ ನದೀ ಶ್ರೇಷ್ಠಳಾದ ಗಂಗೆಯ ಸಲಿಲ ಶೀಕರವನ್ನು ಮುಟ್ಟುತ್ತಾರೋ ಅವರು ಸರ್ವಪಾಪಗಳಿಂದ ಮುಕ್ತರಾಗಿ ಶ್ರೀಹರಿಯ ಪಾದಕಮಲಗಳನ್ನು ಮುಟ್ಟುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಗಂಗೆಯ ಮಾಹಾತ್ಮ್ಯ ಎಂಬ ಏಳನೇಯ ಅಧ್ಯಾಯ ಮುಗಿದುದು*

—o—

## ಅಧ್ಯಾಯ - ೮

**ವ್ಯಾಸ:-** ಬ್ರಾಹ್ಮಣೋತ್ತಮ ನಿನಗೆ ನಾನು ಮಹತ್ತರವಾದ ಹಾಗೂ ಉತ್ತಮವಾದ ಗಂಗೆಯ ಮಹಿಮೆಯನ್ನು ಮತ್ತು ಮಹಾತ್ಮ್ಯವನ್ನು ಈಗ ಹೆಚ್ಚು ಹೆಚ್ಚಾಗಿ ಹೇಳುತ್ತೇನೆ. ನಿನಗೆ ಮೋಕ್ಷಬೇಕಾಗಿದ್ದರೆ ಭಕ್ತಿಯಿಂದ ಕೇಳು. ಗಂಗೆಯನ್ನು ಪೂಜಿಸಿದವನಿಗೆ ಎಲ್ಲ ದಾನಗಳನ್ನು ನೀಡಿದ, ಎಲ್ಲ ಯಜ್ಞಗಳನ್ನು ಮಾಡಿದ ಪುಣ್ಯವು ಗಂಗೆಯಲ್ಲಿ ಸ್ನಾನ ಮಾಡುವುದರಿಂದಲೇ ಲಭಿಸುತ್ತವೆ. ಯಾರು ಗಂಗಾತೀರದಲ್ಲಿ ಅಲ್ಪ ಸ್ವಲ್ಪ ಧರ್ಮ ಕಾರ್ಯಗಳನ್ನು ಮಾಡುವರೋ ಅವೆಲ್ಲವೂ ಅಕ್ಷಯವಾಗುತ್ತವೆ. ಗಂಗಾಜಲವನ್ನು ಹೊತ್ತುಕೊಂಡು ತಲೆ ಅಥವಾ ಹೆಗಲ ಮೇಲೆ ಇಟ್ಟುಕೊಂಡು ನಡೆಯುವವರನ್ನು ನೋಡಿದ ಕೂಡಲೇ ಭಕ್ತಿಯಿಂದ ಎದ್ದು ಸ್ವಾಗತ ಮಾಡಿ ಅದರೋಪಚಾರವನ್ನು ಅವನಿಗೆ ಸಲ್ಲಿಸಿದವನಿಗೆ ಸಾವಿರ ಅಶ್ವಮೇಧವನ್ನು ಮಾಡಿದಷ್ಟು ಪುಣ್ಯವು ಬರುತ್ತದೆ. ಗಂಗೆಯ ತೀರಕ್ಕೆ ಬಂದು ಗಂಗೆಯ ನೀರನ್ನು ಭಕ್ತಿಯಿಂದ ಯಾರು ಪ್ರಾಶನ ಮಾಡುವುದಿಲ್ಲವೋ, ಸ್ನಾನ ಮಾಡುವುದಿಲ್ಲವೋ ಅವನು ಕೋಟಿ ಜನ್ಮದಲ್ಲಿ ಮಾಡಿದ ಪುಣ್ಯವೆಲ್ಲವೂ ಕ್ಷಣಾರ್ಧದಲ್ಲಿ ನಾಶವಾಗಿ ಹೋಗುತ್ತದೆ. ಯಾತ್ರೆಗಾಗಿ ಗಂಗಾ ತೀರಕ್ಕೆ ಹೋಗುತ್ತೇನೆ ಎಂದು ಹೊರಟು ನಿಂತ ಮನುಷ್ಯನನ್ನು ಯಾರು ತಡೆದು ಆ ಯಾತ್ರೆಯನ್ನು ಬಿಡಿಸುವರೋ ಅವನು ತನ್ನ ಹಿಂದು ಮುಂದಿನ ಕಾಲಕೋಟಿ ಸಹಿತನಾಗಿ ರೌರವ ನರಕಕ್ಕೆ ಹೋಗುತ್ತಾನೆ.

**ಮೂತ್ರಂವಾಥ ಪುರೀಷಂವಾ ಗಂಗಾ ತೀರೇ ಕರೋತಿ ಯಃ ।**
**ನದೃಷ್ಟಾ ನಿಷ್ಕೃತಿಸ್ತಸ್ಯ ಕಲ್ಪಕೋಟಿ ಶತೈರಪಿ ॥**

ಯಾರು ಗಂಗೆಯ ದಂಡೆಯ ಮೇಲೆಯೇ ಮಲ ಮೂತ್ರ ವಿಸರ್ಜನ ಮಾಡುವರೋ ಅವನಿಗೆ ಕಲ್ಪಾಂತಕಾಲದವರೆಗೆ ಪರಿಹಾರವಾಗಲಿ, ಪ್ರಾಯಶ್ಚಿತ್ತವಾಗಲೀ ಇರುವುದಿಲ್ಲ.

**ಶ್ಲೇಷ್ಮಾಣಂ ವಾಪಿ ನಿಷ್ಠೀಮಂ ದೂಷಿಕಾಂವಾಶ್ರುವಾಮಲಂ ।**
**ಗಂಗಾತೀರೇತ್ಯಜೇದ್ಯಸ್ತು ಸನೂನಂ ನಾರಕೀ ಭವೇತ್ ॥**

ಗಂಗೆಯ ತೀರದಲ್ಲಿ ಆಗಲಿ ನೀರಿನಲ್ಲಿ ಆಗಲಿ ಉಗುಳು, ಕಫ, ಸಿಂಬಳ ಮೊದಲಾದುವನ್ನು ಕಳೆದು ನಿರ್ಮಲವಾದ ಗಂಗೆಯ ನೀರಿನಲ್ಲಿ ಬಿಡುವನೋ ಅವನು ನಿಜವಾಗಿಯೂ ನರಕಕ್ಕೆ ಹೋಗುತ್ತಾನೆ. ಗಂಗೆಯ ಮಧ್ಯದಲ್ಲಿ ಉಗುಳುವುದನ್ನು ಮಾಡಿ ಕಫವನ್ನು ಹಾಕಿ, ಎಂಜಲು ಅನ್ನ ಪಾತ್ರೆಗಳನ್ನು ಬಿಡುವವರು ಭಯಂಕರವಾದ ನರಕವನ್ನು ಹೊಂದುತ್ತಾರೆ. ಮತ್ತು ಬ್ರಹ್ಮಹತ್ಯಾ ಪಾಪವು ಅವರಿಗೆ ಅಂಟಿಕೊಂಡು ಬಹುಕಾಲ ನರಕದಲ್ಲಿ ಬೀಳುವರು. ಯಾವ ಮೂರ್ಖನು ಗಂಗೆಯ ತೀರದಲ್ಲಿ ಪಾಪ ಕೃತ್ಯಗಳನ್ನು ಮಾಡುತ್ತಾನೋ ಅದೆಲ್ಲವೂ ಅಕ್ಷಯವಾಗುತ್ತದೆ. ಮತ್ತು ಅವನಿಗೆ ಬ್ರಹ್ಮಹತ್ಯೆಯನ್ನು ಮಾಡಿದ ಪಾಪವು ಬರುವದು.

**ಅನ್ಯ ತೀರ್ಥೇ ಕೃತಂ ಪಾಪಂ ಗಂಗಾಯಾಂಚ ವಿನಶ್ಯತಿ ।**
**ಗಂಗಾಯಾಂ ಯತ್ಕೃತಂ ಪಾಪಂ ತತುತ್ರಾಪಿ ನ ಶಾಮ್ಯತಿ ॥**

ಬೇರೆ ತೀರ್ಥಕ್ಷೇತ್ರಗಳಲ್ಲಿ ಮಾಡಿದ ಪಾಪವು ಗಂಗೆಯಲ್ಲಿ ಸ್ನಾನ ಮಾಡುವದರಿಂದ ನಷ್ಟವಾಗುವದು. ಆದರೆ ಗಂಗೆಯಲ್ಲಿಯೇ ಪಾಪ ಮಾಡಿದರೆ ಮಾತ್ರ ಅದು ಎಲ್ಲಿ ಹೋದರೂ ಶಾಂತವಾಗಲಾರದು. ಆದುದರಿಂದ ವಿವೇಕಿಗಳಾದವರು ಗಂಗಾತೀರದಲ್ಲಿ ಪಾಪಕೃತ್ಯವನ್ನು ಮಾಡಬಾರದು. ಸಾಧ್ಯವಾದಷ್ಟು ಪುಣ್ಯ ಕಾರ್ಯವನ್ನೇ ಮಾಡಬೇಕು. ಗಂಗಾತೀರವನ್ನು ಬಿಟ್ಟು ಬೇರೆ ಕಡೆ ನೂರು ಕೆಲಸ ಬಂದರೂ ಹೋಗಬಾರದು. ಭಿಕ್ಷೆಯನ್ನು ಬೇಡಿದರೂ ಚಿಂತೆಯಿಲ್ಲ. ಗಂಗೆಯ ದಂಡೆಯಲ್ಲಿಯೇ ನೆಲೆಸಬೇಕು. ಬೇರೆ ಕಡೆ ರಾಜ್ಯ ಸಿಕ್ಕರೂ ಹೋಗಬಾರದು. ಮರಣಕಾಲದಲ್ಲಿ 'ಗಂಗಾ ಗಂಗಾ' ಎಂದು ಗಂಗೆಯ ನಾಮವನ್ನು ಉಚ್ಚರಿಸಿದವನು ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ. ಮರಣಾನಂತರ ಯಾರ ಮೂಳೆಗಳು ಗಂಗೆಯಲ್ಲಿ ಬೀಳುವವೋ ಅವನು ಅಷ್ಟಸಾವಿರ ವರ್ಷ ವಿಷ್ಣುಲೋಕದಲ್ಲಿ ಗೌರವದಿಂದ ನೆಲೆಸುತ್ತಾನೆ. ಯಾವನ ಬೂದಿ, ಮೂಳೆ, ಉಗುರು, ಕೂದಲುಗಳು ಗಂಗೆಯಲ್ಲಿ ಬೀಳುವವೋ ಅವನು ವೈಕುಂಠ ಭವನದಲ್ಲಿಯೇ ವಾಸಮಾಡುತ್ತಾನೆ. ಗಂಗೆಯಲ್ಲಿ ಮೂಳೆಗಳು ಬಿದ್ದರೆ ಮನುಷ್ಯನಿಗೆ ಎಂಥ ಫಲವು ಲಭಿಸುವದು ಎನ್ನುವ ವಿಷಯದಲ್ಲಿ ಒಂದು ಪ್ರಸಂಗವನ್ನು ಹೇಳುತ್ತೇನೆ ಕೇಳು.

ಒಂದು ದಿನ ದೇವೇಂದ್ರನು ಬಗೆಬಗೆಯ ವಸ್ತ್ರಾಲಂಕಾರಗಳಿಂದ ಭೂಷಿತನಾಗಿ ಪದ್ಮಗಂಧಾ ಎಂಬ ಯುವತಿಯೊಡನೆ ಕ್ರೀಡಾಗೃಹಕ್ಕೆ ಹೋದ. ಆ ಪದ್ಮಗಂಧೆಯು ಒಳ್ಳೆ ರಸಿಕಳು. ಅಸಾಧಾರಣವಾದ ಚೆಲುವು ಅವಳ ಅಂಗಾಂಗಗಳಲ್ಲಿ ಉಕ್ಕುತ್ತಿತ್ತು. ತಾರುಣ್ಯದ ತೇಜದಿಂದ ಅವಳ ನಖಶಿಖಾಂತವಾಗಿ ಲಾವಣ್ಯವು ತುಂಬಿ ಸೂಸುತ್ತಿತ್ತು. ಚೆಲುವೆಯಾದ ಆ ಪದ್ಮಗಂಧೆಯು ಚತುರಳೂ ಆಗಿ ಇದ್ದುದರಿಂದ ಬಗೆ ಬಗೆಯ ರತಿರಸಗಳ ರುಚಿಯನ್ನು ಆ ಸುರನಾಥನಿಗೆ ತೋರಿಸಿ ಅವನನ್ನು ವಶೀಕರಿಸಿ ಕೊಂಡಿದ್ದಳು. ಅವಳ ಹಾವಭಾವ ಹಾಗೂ ಮಧುರ ಮಾತಿನ ಮೋಡಿಗೆ ಮುಗ್ಧನಾದ ಇಂದ್ರ ಶಚೀದೇವಿಯ ಬಂಗಾರದ ಮಂಚದ ಮೇಲೆ ಅವಳನ್ನು ಕೂಡಿಸಿದ. ಪ್ರೀತಿಯಿಂದ ತಾನು ಅವಳ ಕಾಲಕೆಳಗೆ ಕುಳಿತುಕೊಂಡು ತಾನಾಗಿಯೇ ಒಲುಮೆಯಿಂದ ತಾಂಬೂಲವನ್ನು ಮಡಿಚಿ ಕೊಡುತ್ತಲಿದ್ದ. ಅದೇ ವೇಳೆಯಲ್ಲಿ ಪರಮಸುಂದರಿಯಾದ ಶಚೀದೇವಿಯು ಸರ್ವಾಲಂಕಾರ ಭೂಷಿತಳಾಗಿ ತನ್ನ ಆ ಶಯ್ಯಾಗೃಹಕ್ಕೆ ಬಂದಳು. ತನ್ನ ನಲ್ಲನಾದ ದೇವೇಂದ್ರ ಮಂಚದ ಕೆಳಗೆ ಬೇರೊಬ್ಬ ಬಾಲೆಯ ಕಾಲಕೆಳಗೆ ಕುಳಿತು ಅವಳಿಗೆ ತಾಂಬೂಲವನ್ನು ಕೊಡುತ್ತಲಿರುವುದನ್ನು ಕಂಡು ಅವಳಿಗೆ ಸಿಟ್ಟು ಬಂದಿತು. ಕ್ರೋಧಾಂಧಳಾಗಿ ಆ ಶಚೀದೇವಿಯು ನುಡಿದಳು.

**ಶಚೀ:-** ಎಲ್ಲ ದೇವತೆಗಳಿಗೆ ಒಡೆಯನಾದ ನಾಥ, ನೀನು ನನ್ನ ದಾಸಿಯಂತಿರುವ ಆ ಪದ್ಮಗಂಧೆಗೆ ಪ್ರೀತಿಯ ವಿಳ್ಯ ನೀಡುವುದೆ? ಎಲ್ಲ ದೇವತೆಗಳೂ ನಿನ್ನ ಪಾದಗಳನ್ನು ತಲೆಯಿಂದ ಮುಟ್ಟುತ್ತಾರೆ. ಇಂಥ ನೀನು ಈ ನನ್ನ ದಾಸಿಯ ಕಾಲ ಕೆಳಗೆ ಕುಳಿತು ಇಂಥ ಕೀಳು ಕೆಲಸವನ್ನು ಹೇಗೆ ಮಾಡುವೆ? ಈ ಸ್ವರ್ಗ ಲೋಕದಲ್ಲಿ ನಿನಗೆ ಬೇರೆ ಯಾವ ಸುಂದರಿಯೂ ದೊರಕಲಿಲ್ಲವೇ? ನಿರ್ಗುಣಳಾದ ಪದ್ಮಗಂಧಿಯೇ ನೀನು ಎಷ್ಟೆಂದರೂ ನನ್ನ ದಾಸಿ. ನೀನು ಮಂಚದ ಮೇಲೆ ಕುಳಿತು ನನ್ನ ಒಡೆಯನನ್ನು ನಿನ್ನ ಕಾಲಕೆಳಗೆ ಕುಳ್ಳಿರಿಸಿಕೊಂಡಿರುವಿಯಾ?

ಹೀಗೆ ಶಚೀ ಚೆನ್ನಾಗಿ ಹಳಿದು ಹೀಗಳೆದ ಬಳಿಕ ಪದ್ಮಗಂಧಿಗೂ ಕೋಪ ಬಂದಿತು. ಅವಳು ಶಚೀಯನ್ನು ಕುರಿತು ಮಾತನಾಡಿದಳು.

**ಪದ್ಮಗಂಧಿ:-** ನನ್ನ ಗುಣವನ್ನುದೋಷವನ್ನು ಈ ನನ್ನ ಸ್ವಾಮಿಯೇ ಚೆನ್ನಾಗಿ ತಿಳಿದಿದ್ದಾನೆ. ನನ್ನನ್ನು ಬಯ್ಯಲು ನಿನಗೇನು ಅಧಿಕಾರ? ನಾನು ನನ್ನ ಪ್ರಿಯಕರನೊಡನೆ ಏಕಾಂತದಲ್ಲಿದ್ದಾಗ ನೀನು ಇಲ್ಲಿಗೆ ಬಂದೆಯೇಕೆ? ನನ್ನಲ್ಲಿ ಏನಾದರೂ ದೋಷವಿದ್ದರೆ ಈ ಸಾವಿರ ಕಣ್ಣಿನ ಇಂದ್ರ ನೋಡಲಾರನೇ? ಎರಡು ಕಣ್ಣುಳ್ಳವರಿಗೆ ಕಾಣತಕ್ಕ ಗುಣದೋಷಗಳನ್ನು ಸಾವಿರ ಕಣ್ಣು ಕಾಣಲಾರದೆ?

**"ಯಥಾ ದೋಷೋ ಲೋಕಾನಾಂ ಪ್ರಚರೇನ್ನ ಗುಣಂ ತಥಾ ।**
**ಅದೌ ಕಲಂಕಶ್ಚಂದ್ರಸ್ಯ ದೃಶ್ಯತೇ ಗುಣವಜ್ಜನೈಃ ॥**

"ಜನರ ಕಣ್ಣಿಗೆ ದೋಷಗಳು ಕಾಣವಂತೆ ಗುಣಗಳು ಕಾಣುವುದಿಲ್ಲ. ಎಂಥ ಸದ್ಗುಣಿಯಾದ ಮನುಷ್ಯನು ಕೂಡ ಚಂದ್ರನಲ್ಲಿ ಮೊದಲು ಕಾಣುವುದು ಕಲಂಕವನ್ನೇ. ನಾನು ಕ್ರೂರಳೂ, ಕುರುಪಿಯೂ, ಅನರ್ಥ ಭಾಷಿಣಿಯೂ, ಗುಣರಹಿತಳೂ ಎಂದು ಆಗುವೆನೋ ಆಗ ನನ್ನನ್ನು ಬಿಟ್ಟು ಇಂದ್ರನು ನಿನ್ನ ಬಳಿಗೆ ಹೋಗಲಿ."

ಹೀಗೆ ಹೇಳಿ ಆ ಪದ್ಮಗಂಧಿಯು ಸಿಟ್ಟಿನಿಂದ ಕೆಂಪಡರಿದ ಕಣ್ಣುಳ್ಳವಳಾಗಿ ತನ್ನ, ಸುವರ್ಣಪರ್ಯಂಕದಿಂದ ಸದ್ದು ಮಾಡುತ್ತ ಎದ್ದು ನಿಂತಳು. ಆಗ ದೇವೇಂದ್ರನು ಅವಳ ಬಳಿಗೆ ಬಂದು ಅನುನಯದ ದಾಟಿಯಲ್ಲಿ ನುಡಿದ. "ಪ್ರಾಣೇಶ್ವರಿ ನೀನು ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವೆ? ನಾನು ಏನು ತಪ್ಪು ಮಾಡಿರುವೆ? ಹೇಳು ಸುಂದರಿ, ನಾನು ನಿನ್ನ ದಾಸ, ದಾಸರು ಮಾಡುವ ತಾಂಬೂಲ ಸಮರ್ಪಣಾದಿ ನಿನ್ನ ಕಾರ್ಯವನ್ನು ನಾನು ಮಾಡುತ್ತೇನೆ. ನಾನು ದಾಸನಾದುದರಿಂದ ನೀನು ನನ್ನ ಪತ್ನಿಯಾದುದರಿಂದ ನೀನು ನನ್ನ ದಾಸಿ. ದಾಸಿ ಆದ ಬಳಿಕ ಈ ದಾಸನ ಮಾತನು ಕೇಳುವದು ನಿನ್ನ ಕರ್ತವ್ಯ. ನೀನು ಇಲ್ಲಿ ಬಾ. ನಿನಗೆ ಆ ಸುವರ್ಣ ಪರ್ಯಂಕ ಬೇಡಾಗಿದ್ದರೆ ನನ್ನ ಉತ್ಸಂಗಪರ್ಯಂಕದ ಮೇಲೆ ಕುಳಿತುಕೊಳ್ಳು ಬಾ.

ಹೀಗೆ ಹೇಳಿ ದೇವೇಂದ್ರನು ಅವಳನ್ನು ತನ್ನ ತೊಡೆಯ ಮೇಲೆಯೇ ಕುಳ್ಳಿರಿಸಿ ಕೊಂಡ, ಶಚಿಯ ಎದುರೇ.

**ಶಚೀ:-** ಕ್ರೌಂಚಿಯೇ, ನಿನ್ನ ಜೀವನವು ಧನ್ಯ. ನನ್ನ ಜೀವನ ವ್ಯರ್ಥ. ನೀನು ನನ್ನ ಸ್ವಾಮಿಗೆ ಯಾವಾಗಲೂ ಅಚ್ಚುಮೆಚ್ಚಿನ ಮಹಿಷಿಯಾಗಿರುವೆ. ಆದರೆ ನನ್ನಪತಿಯು ನನ್ನನ್ನು ಎಂದಿಗೂ ಮೆಚ್ಚಿ ಮಾತನಾಡಿಸುವುದಿಲ್ಲ. ನಿನ್ನ ಪುಣ್ಯದ ಭಾಂಡವಲು ತೀರುವವರೆಗೆ ನನಗೆ ನನ್ನ ಪತಿಯಿಂದ ಈ ತರಹದ ಅವಮಾನವು ತಪ್ಪಿದ್ದಲ್ಲ. ನಿನ್ನ ಪುಣ್ಯವೆಲ್ಲವೂ ಕ್ಷೀಣವಾದ ಬಳಿಕ ನೀನು ಕ್ರೌಂಚ ಪಕ್ಷಿಯ ವಂಶದಲ್ಲಿ ಹುಟ್ಟಿ. ಮತ್ತೆ ದಾರುಣವಾದ ದುಃಖವನ್ನು ಅನುಭವಿಸುವೆ. ಗುಣಶೂನ್ಯಳಾದ ಪದ್ಮಗಂಧೆ. ಇನ್ನು ಕೆಲವು ದಿನ ನಿನ್ನ ಪುಣ್ಯವೆಲ್ಲವೂ ಸವೆಯುವವರೆಗೆ ನನ್ನ ಪತಿಯೊಡನೆ ಬೇಕಾದಷ್ಟು ಸ್ವಚ್ಛಂದ ವಿಹಾರವನ್ನು ಮಾಡು. ಇನ್ನು ಕೆಲವೇ ದಿನಗಳಲ್ಲಿ ನಿನ್ನ ಪುಣ್ಯವೆಲ್ಲವೂ ಹ್ರಾಸವಾಗಿ ಮತ್ತೆ ನೀನು ಹೆಣ್ಣು ಹಕ್ಕಿಯಾಗಿ ದುಃಖಪಡುವೆ.

ಶಚೀದೇವಿಯ ಕುಪಿತ ವಚನಗಳನ್ನು ಕೇಳಿ ಪದ್ಮಗಂಧೆಯು ಭಯಾಕ್ರಾಂತಳಾದಳು. ನಿಜಸ್ಥಿತಿಯ ಅರಿವು ಅವಳಲ್ಲಿ ಮೂಡಿತು. ಕೂಡಲೇ ಅವಳು ಶಚೀದೇವಿಯ ಮೇಲಿನ ವೈರ, ಕುರುಡು ಅಸೂಯೆ ಮುಂತಾದ ದುರ್ಗಣಗಳನ್ನೆಲ್ಲ ಬಿಟ್ಟು ಅವಳಿಗೆ ನಮಸ್ಕಾರ ಮಾಡಿ ಮಾತನಾಡಿದಳು.

**ಪದ್ಮಗಂಧಾ:-** ಪೂಜ್ಯಳಾದ ಇಂದ್ರಾಣಿ, ಇದೇನು ನೀನು ವಿಚಿತ್ರವಾಗಿ ಮಾತನಾಡಿದೆ? ನಾನು ಕ್ರೌಂಚ ಹಕ್ಕಿ ಹೇಗೆ? ನಾನು ಯಾರು? ಎಲ್ಲಿ ಇದ್ದೆ? ಇಲ್ಲಿಗೆ ಏಕೆ ಬಂದೆ? ಇನ್ನು ಕೆಲವೇ ಕಾಲದಲ್ಲಿ ನನ್ನ ಪುಣ್ಯವೆಲ್ಲವೂ ಕ್ಷೀಣವಾಗುವದು ಎಂದು ಹೇಳಿದೆ. ಆ ಕೆಲವೇ ಕಾಲ ಎಂದರೆ ಯಾವುದು?

**ಶಚಿ:-** ಪದ್ಮಗಂಧೆ, ನೀನು ಹಿಂದೆ ಹೆಣ್ಣು ಕ್ರೌಂಚ ಪಕ್ಷಿಯಾಗಿದ್ದೆ. ನೆಲದ ಮೇಲೆ ಹರಿದಾಡುವ ಕ್ರಿಮಿ ಕೀಟಗಳನ್ನು, ಹೊಲಸನ್ನು, ಮಾಂಸವನ್ನು ತಿನ್ನುತ್ತ ತಿರುಗಾಡುತ್ತಲಿದ್ದೆ. ಮನೋಹರವಾದ ಗಂಗಾತೀರದಲ್ಲಿ ಒಂದು ದೊಡ್ಡದಾದ ಆಲದ ಮರದಲ್ಲಿ ಗೂಡು ಕಟ್ಟಿಕೊಂಡು ನೀನು ವಾಸಮಾಡಿದ್ದೆ. ಒಂದು ದಿನ ಒಂದು ಕರೀ ಹಾವು ಬಂದು ಆ ಅರಳೆಯ ಮರವನ್ನು ಏರಿ ಗೂಡಿನಲ್ಲಿ ಹೊಕ್ಕು ನಿನ್ನನ್ನು ಕಚ್ಚಿತು ಆದರಿಂದ ಕೂಡಲೇ ನೀನು ಮರಣ ಹೊಂದಿದೆ. ನಿನ್ನ ಮೈಯಲ್ಲಿಯ ಮೂಳುಗಳು ಅಲ್ಲಿಯೇ ಬಿದ್ದಿದ್ದವು. ಹಾವು ಮಾಂಸವನ್ನೆಲ್ಲ ತಿಂದ ಬಳಿಕ ಕ್ರೌಂಚಿಯ ಮೂಳೆಗಳು ಮಾತ್ರ ಗಿಡದ ಗೂಡಿನಲ್ಲಿಯೇ ಉಳಿದಿದ್ದವು.

ಮುಂದೆ ಕೆಲವು ದಿನಗಳ ಬಳಿಕ ಒದು ದಿನ ಭೀಕರ ಬಿರುಗಾಳಿ ಬೀಸಿ ಆ ಹೆಮ್ಮರವು ಬೇರು ಸಹಿತವಾಗಿ ಉರುಳಿ ಬಿದ್ದಿತು. ಆದರೆ ಸುದೈವದಿಂದ ಆ ಮರವು ಗಂಗೆಯ ತೀರದಲ್ಲಿ ಇದ್ದುದರಿಂದ ಗಂಗೆಯ ನೀರಿನಲ್ಲಿ ಬಿದ್ದಿತು. ಅದರ ಎಲ್ಲ ರೆಂಬೆ ಕೊಂಬೆಗಳು ನೀರಿನಲ್ಲಿ ಮುಳುಗಿದವು. ಗಂಗೆ ತನ್ನ ತರಂಗಗಳಿಂದ ಆ ಸಮಗ್ರವೃಕ್ಷದ ಬೊಡ್ಡೆ ರೆಂಬೆ ಕೊಂಬೆ ಹಣ್ಣು ಹೂ ಕಾಯಿಗಳನ್ನೆಲ್ಲ ನೀರಿನಿಂದ ತೋಯಿಸಿ ಬಿಟ್ಟಳು ಅವುಗಳ ಜೊತೆಗೆ ಗೂಡಿನಲ್ಲಿ ಬಿದ್ದ ನಿನ್ನ ಮೂಳೆಗಳೂ ಗಂಗೆಯಲ್ಲಿ ಬಿದ್ದು ನಿನ್ನ ಅಸ್ಥಿಗಳೆಲ್ಲವೂ ಗಂಗೆಯ ಪ್ರವಾಹ ಜಲದಿಂದ ಪಾವಿತ್ರವೂ ಆದವು. ಈಗಲೂ ನಿನ್ನ ಆ ಜನ್ಮಾಂತರದ ಅಸ್ಥಿಗಳು ಗಂಗೆಯ ಮಡಿಲಲ್ಲಿ ಉಳಿದಿರುತ್ತವೆ. ಆ ಪುಣ್ಯದಿಂದಲೇ ನೀನು ಈಗ ನನ್ನ ಪತಿಯಾದ ದೇವೇಂದ್ರನ ಪರಮಪ್ರೀತಿ ಪಾತ್ರಳು ಆಗಿರುತ್ತಿ. ಗಂಗೆಯ ಗರ್ಭದಲ್ಲಿ ನಿನ್ನ ಎಲುವುಗಳು ಇರುವವರೆಗೂ ನೀನು ಇಲ್ಲಿ ಸುರಸಾರ್ವಭೌಮನ ಪರಮ ಪ್ರೀತಿಯ ಭಾಗ್ಯವನ್ನು, ಸ್ವರ್ಗ ಸಾಮ್ರಾಜ್ಞಿಯ ಸೌಭಾಗ್ಯವನ್ನು ನಿರಾತಂಕವಾಗಿ ಅನುಭವಿಸುವೆ.

ಪದ್ಮಗಂಧೆ, ನಿನಗೆ ನಾನು ನಿನ್ನ ಇಂದ್ರವಶೀಕರಣದ ಗುಟ್ಟನ್ನು ತಿಳಿಸಿ ಹೇಳಿದ್ದೇನೆ.

**ಧನ್ಯಾತು ಜಾಹ್ನವೀ ದೇವಿ ಕ್ರೌಂಚೀಯಸ್ಯಾಃ ಪ್ರಸಾದತಃ ।**
**ತ್ವಮಸ್ಪೃಶ್ಯಾऽಪಿ ಚಂಡಾಲ್ಯೈಂಕೇ ಸ್ವಪಿಷಿವೆಜ್ರಿಣಃ ॥**

''ಈ ಜಗತ್ತಿನಲ್ಲಿ ದೇವ ನದಿಯಾದ ಗಂಗೆ ಧನ್ಯಳು. ಅವಳ ಪ್ರಸಾದದಿಂದ ಚಂಡಾಲರು ಕೂಡ ಮುಟ್ಟದಿರುವ ಅಸ್ಪೃಶ್ಯವಾದ ಹೆಣ್ಣು ಕ್ರೌಂಚಿಯಾಗಿದ್ದ ನೀನು ಇಂದು ದೇವೇಂದ್ರನ ಅಂಕಗತಳಾಗಿ ಅವನ ಆಲಿಂಗನದ ರತಿ ಸುಖವನ್ನು ಅನುಭವಿಸುವೆ.''

ಹೀಗೆ ಹೇಳಿ ಆ ಶಚೀದೇವಿಯು ದೇವೇಂದ್ರನ ಕಡೆಗೆ ಆಸೆಗಣ್ಣಿನಿಂದ ನೋಡಿದಳು. ಆದರೆ ಪದ್ಮಗಂಧೆಯ ರೂಪ ಸೌಂದರ್ಯದಿಂದ ಮುಗ್ದನಾದ ದೇವೇಂದ್ರ ಆ ಇಂದ್ರಾಣಿಯ ಕಡೆಗೆ ಕಣ್ಣೆತ್ತಿ ಕೂಡ ನೋಡಲಿಲ್ಲ. ಆದರಿಂದ ಆ ಶಚೀದೇವಿಗೆ ಬಹಳ ಅವಮಾನ ಆಯಿತು. ಅವಳ ಮುಖವು ಒಣಗಿ ಹೋಯಿತು. ದೀನದೂನಳಾದ ಅವಳು ಅಲ್ಲಿಂದ ಹೊರಟು ಹೋದಳು.

ಶಚೀದೇವಿಯು ಹೋದ ಬಳಿಕ ಪದ್ಮಗಂಧೆಯು ಅತ್ಯಧಿಕ ಆನಂದದಿಂದ ಆ ದೇವರಾಜನ ಅಂಕಪರ್ಯಂಕವನ್ನು ಅಲಂಕರಿಸಿ ಆನಂದದಿಂದ ಮೆರೆದಳು. ಅವನ ಪೌರುಷಸುಧೆಯನ್ನು ಸವಿದಳು.

ಹೀಗೆ ಪದ್ಮಗಂಧೆಯು ಸುರಪತಿಯ ಉತ್ಸಂಗ ರಂಗಸ್ಥಳದ ಮಂಗಳಮೂರ್ತಿಯಾಗಿ ಹೆಮ್ಮೆ ಹಾಗೂ ಹರ್ಷಗಳಿಂದ ಮೆರೆದಳು.

ಪದ್ಮಗಂಧೆಯ ರೂಪ, ರಸ, ಗುಣ, ಶೀಲ, ವಿನಯಗಳಿಂದ ಸುಪ್ರೀತನಾಗಿ ನಿನಗೆ ಬೇಕಾದ ವರವನ್ನು ಕೇಳು ಎಂದು ಹೇಳಿದ ದೇವೇಂದ್ರ.

**"ತ್ವಂಸರ್ವ ದೇವತಾಧಿಶೋ ನಾರೀ ಕೋಟಿ ಪತಿಸ್ತಥಾ ॥**
**ತಥಾಪ್ಯಸಿ ಮಮಾಧೀನಃ ಸ್ವಾಮಿನ್**

ಪ್ರಭು, ನೀನು ಮೂವತ್ಮೂರು ಕೋಟಿ ದೇವತೆಗಳಿಗೆಲ್ಲ ಅಧಿಪತಿ. ನಿನ್ನ ಪ್ರೀತಿಯನ್ನು ಬಯಸುವ ಅನೇಕ ನಾರೀ ಕುಲಕ್ಕೆಲ್ಲ ರತಿಪತಿ. ಇಷ್ಟಾದರೂ ನೀನು ಈಗ ನನ್ನ ಅಧೀನನಾಗಿ ಇರುವೆ. ಇದಕ್ಕಿಂತ ಬೇರೆ ವರ ಏಕೆ ಬೇಕು? ಏನು ಬೇಕು? ಆದರೂ ನೀನು ನನಗೆ ವರವನ್ನು ಕೊಡಬೇಕು ಎಂದು ಉತ್ಸುಕತೆಯುಳ್ಳವನು ಆಗಿದ್ದರೆ ನನ್ನ ಎದುರು ಕಾಯಾ ವಾಚಾ ಮನಸಾ ಒಂದು ಪ್ರತಿಜ್ಞೆಯನ್ನು ಮಾಡು.

**ಇಂದ್ರ:-** ಸುಂದರಿ, ನಿನಗೆ ಏನು ಬೇಕು? ನನ್ನ ಜೀವನ, ಐಶ್ವರ್ಯ, ರಾಜ್ಯ, ಪರಿವಾರ, ಇದೆಲ್ಲವೂ ನನ್ನ ಅಧೀನದಲ್ಲಿರುತ್ತದೆ. ಈ ನಾಲ್ಕು ವಸ್ತುಗಳಲ್ಲಿ ನಿನಗೆ ಯಾವುದು ಬೇಕು ಹೇಳು. ಕೊಟ್ಟುಬಿಡುತ್ತೇನೆ.

**ಪದ್ಮಗಂಧಾ:-** ಪ್ರಭು, ದೇವೇಶ್ವರ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನನಗೆ ಮತ್ತೆ ಆನೆಯ ಜನ್ಮ ಬರುವಂತೆ ವರವನ್ನು ನೀಡು.

**ಇಂದ್ರ:-** "ನಿನಗೆ ವಚನ ಕೊಟ್ಟದ್ದರಿಂದ ನಾನು ಈಗ ನಿನಗೆ ಕೇಳಿದ ವರವನ್ನು ನೀಡುತ್ತೇನೆ. ಆದರೆ ನನ್ನ ಹೃದಯದಲ್ಲಿ ಬಹಳಷ್ಟು ದುಃಖವು ಉಕ್ಕುತ್ತಲಿದೆ. ನಿನ್ನನ್ನು ಒಂದು ಕ್ಷಣಹೊತ್ತು ನೋಡದಿದ್ದರೂ ನನ್ನ ಜೀವ ತುಡಿಯುತ್ತದೆ. ಅಂಥ ನಿನ್ನ ಚಿರವಿರಹವನ್ನು ನಾನು ಹೇಗೆ ತಡೆಯುವೆ. ಹೇಗೆ ತಾಳಲಿ? ಸುಂದರಿ, ನಿನಗೆ ನನ್ನ ಮೇಲೆ ಪ್ರೀತಿ ಅಭಿಮಾನ ಇದ್ದರೆ ಕೆಲವು ದಿನ ನನ್ನ ಜೊತೆಗೆ ನೀನು ಇರು." ದೇವರಾಜನಾದ ಮಹೇಂದ್ರನ ಈ ಮಾತನ್ನು ಕೇಳಿ ಅವಳು ಸಂತುಷ್ಟಳಾಗಿ ಹತ್ತು ಸಾವಿರ ವರ್ಷ ಅಲ್ಲಿಯೇ ಇಂದ್ರನ ಅರಮನೆಯಲ್ಲಿ ಶಚಿಯ ಅಂತಃಪುರದಲ್ಲಿ ದೇವೇಂದ್ರನನ್ನು ತನ್ನ ಹಾವ-ಭಾವ ವಿಲಾಸ ವಿಭ್ರಮಗಳಿಂದ ಸಂತೋಷ ಪಡಿಸುತ್ತ ದೇವೇಂದ್ರನ ಅಂತಃಪುರದ ಅಧಿರಾಣಿಯಾಗಿ ವಾಸ ಮಾಡಿದಳು.

**ಪದ್ಮಗಂಧಾ:-** ಸುರಸಾರ್ವಭೌಮ, ನನ್ನ ಮನೋರಥವನ್ನು ಈಡೇರಿಸಿ ಕೊಳ್ಳಲಿಕ್ಕಾಗಿ ನಾನು ನನ್ನ ಕರ್ಮಭೂಮಿಯಾದ ಭೂಲೋಕಕ್ಕೆ ಹೊರಟ್ಟಿದ್ದೇನೆ. ನಿನ್ನ ಎರಡೂ ಪಾದಗಳಿಗೆ ನಮಸ್ಕರಿಸುತ್ತೇನೆ. ಅಪ್ಪಣೆಯನ್ನು ನೀಡು.

**ಇಂದ್ರ:-** ಚಂದ್ರಮುಖಿ, ನಿನ್ನ ಪ್ರೇಮಸಾಗರದಲ್ಲಿ ತೇಲಾಡುವ ನನ್ನೊಡನೆ ನೀನು ಇನ್ನೂ ಕೆಲದಿನ ಈ ಸ್ವರ್ಗದಲ್ಲಿ ಇರು. ಅನಂತರ ಇಲ್ಲಿಯ ಸುಖೋಪಭೋಗ ಸೌಭಾಗ್ಯ ಸರ್ವಸ್ವವನ್ನೂ ಅನುಭವಿಸಿ ನಿನ್ನ ಮನಬಂದತ್ತ ಹೋಗುವೆಯಂತೆ.

ಅನಂತರ ಪದ್ಮಗಂಧೆಯು ಹತ್ತುಸಾವಿರವರ್ಷ ಹಗಲಿರುಳು ದೇವೇಂದ್ರನೊಡನೆ ತನ್ನ ಕೌತುಕಾದರದಲ್ಲಿ ಸ್ವಚ್ಛಂದ ಕ್ರೀಡಾಲೋಲಳಾಗಿ ವಾಸ ಮಾಡಿದಳು. ಆ ಬಳಿಕ ಒಂದು ದಿನ ಅವಳು ಸಂತೋಷದಿಂದ ''ಪ್ರಭು, ನಾನು ಭೂಲೋಕಕ್ಕೆ ಇಳಿದು ಹೋಗುತ್ತಲಿರುವೆ. ತಾವು ಅಪ್ಪಣೆಯನ್ನು ನೀಡಿರಿ'' ಎಂದಳು.

**ಇಂದ್ರ:-** ಸುಂದರಿ, ನೀನು ಮತಿಮಾಂದ್ಯವನ್ನು ಮನಸ್ಸಿನ ಜಾಡ್ಯವನ್ನು ಪೂರ್ಣ ತೊರೆದು ಬಿಡು. ನನ್ನೊಡನೆ ಇಲ್ಲಿಯೇ ಇದ್ದು ಬಿಡು. ನನ್ನ ಪ್ರಾಣಕ್ಕಿಂತ ಮಿಗಿಲಾಗಿ ಪ್ರೀತಿಗೆ ಪಾತ್ರಳಾದ ನಿನ್ನನ್ನು ನಾನು ಬಿಟ್ಟು ಇರಲು ಶಕ್ಯವೇ ಇಲ್ಲ.

**ಪದ್ಮಗಂಧಾ:-** ಇಂದ್ರದೇವ, ನನ್ನ ಪುಣ್ಯವೆಲ್ಲ ಕ್ಷಯವಾದ ಬಳಿಕ ನಾನು ಭೂಲೋಕಕ್ಕೆ ಹೋಗಲೇಬೇಕಷ್ಟೇ ! ಆಗ ನಿನ್ನೊಂದಿಗೆ ವಿಯೋಗ ನನಗೆ ಅನಿವಾರ್ಯ ಆಗುವದು. ಆದ್ದರಿಂದ ನಾನು ಈಗಲೇ ಕರ್ಮಭೂಮಿಯಾದ ಆ ಭರತಖಂಡಕ್ಕೆ ಹೋಗಿ ಪುಣ್ಯವನ್ನು ಸಂಪಾದಿಸುತ್ತೇನೆ. ಇನ್ನು ಮುಂದೆ ಎಂದಿಗೂ ನಿನ್ನ ನನ್ನ ಸಂಬಂಧ ವಿಚ್ಛೇದವಾಗದಂತೆ ಶಾಶ್ವತವಾದ ಪುಣ್ಯವನ್ನು ಭೂಲೋಕದಲ್ಲಿದ್ದುಕೊಂಡು ಸಾಧನ ಮಾಡಿಕೊಂಡೇ ಬರುತ್ತೇನೆ. ಏನು ಮಾಡಿದರೆ ಅಂಥ ಪುಣ್ಯ ಸಾಧನವಾಗುವುದು? ಸ್ವರ್ಗದಿಂದ ಎಂದೂ ಚ್ಯುತಿಯಾಗದಂಥ, ನಿರಂತರ ನಾಕ ಲೋಕದಲ್ಲಿಯೇ ಸುಖವಾಗಿ ಈ ತರಹದ ಸಂತಸದ ಶಿಖರದಲ್ಲಿ ನಲಿಯುವಂತಹ ಪುಣ್ಯವು ಅಥವಾ ಪುಣ್ಯಕಾರ್ಯವು ಯಾವುದು ಇರುತ್ತದೆ? ಅದನ್ನು ಹೇಳು.

**ಇಂದ್ರ:-** ನೀನು ಈ ಉದ್ದೇಶದಿಂದ ಭೂಲೋಕಕ್ಕೆ ಹೋಗುವುದಾದರೆ ಹೋಗು ಮುಂದೆ ಬೇಗ ಈ ನಾಕಲೋಕಕ್ಕೆ ಬಂದು ಬಿಡು.

ಹೀಗೆ ಹೇಳಿ ದೇವೇಂದ್ರ ಅವಳನ್ನು ತನ್ನ ಎರಡೂ ತೋಳುಗಳಿಂದ ತಬ್ಬಿಕೊಂಡು ಹೋಗಿ ಬಾ ಎಂದು ಬೀಳ್ಕೊಟ್ಟ. ಅವನ ಸಾವಿರ ಕಣ್ಣುಗಳಿಂದಲೂ ದುಃಖಾಶ್ರು ಉದುರುತ್ತಿತ್ತು.

ಹೀಗೆ ಇಂದ್ರನಿಂದ ಬೀಳ್ಕೊಡಲ್ಪಟ್ಟ ಆ ಪದ್ಮಗಂಧೆಯು ಕರ್ಮಭೂಮಿಯಾದ ಈ ಭಾರತದೇಶಕ್ಕೆ ಬಂದಳು. ಅಲ್ಲಿ ಒಂದು ಹೆಣ್ಣಾನೆಯಾಗಿ ಹುಟ್ಟಿದಳು. ಇಂದ್ರನ ಅನುಗ್ರಹದಿಂದ ಅವಳಿಗೆ ಜನ್ಮಾಂತರದ ಸ್ಮರಣೆಯು ಅಚ್ಚಳಿಯದೇ ಉಳಿದಿತ್ತು. ಆದ್ದರಿಂದ ಅವಳು ತನ್ನ ಜನ್ಮಾಂತರದ ವೃತ್ತಾಂತವನ್ನು ನೆನೆದುಕೊಂಡಳು. ನೇರವಾಗಿ ಗಂಗಾತೀರಕ್ಕೆ ನಡೆದಳು. ಗಂಗೆಯಲ್ಲಿ ಸ್ನಾನ ಮಾಡಿದಳು. ಮೈತುಂಬ ಗಂಗೆಯ ಕೆಸರನ್ನು ಲೇಪಿಸಿಕೊಂಡಳು. ಗಂಗಾ ಗಂಗಾ ಎಂದು ಕೂಗುತ್ತ ಚೀರುತ್ತ ನಾಮೋಚ್ಚಾರಣ ಮಾಡುತ್ತಲೇ ಮರಣ ಹೊಂದಿದಳು.

ಅದನ್ನು ನೋಡಿ ಎಲ್ಲ ದೇವತೆಗಳು ಆ ಗಂಗೆಯಲ್ಲಿ ಮುಳುಗಿ ಮರಣಹೊಂದಿದ ಆ ಹೆಣ್ಣಾನೆಯ ಮೇಲೆ ಪುಷ್ಪವೃಷ್ಟಿ ಮಾಡಿದರು.

ಆಗ ಅವಳನ್ನು ಕರೆದುಕೊಂಡು ಹೋಗಲು ಎಲ್ಲ ದೇವತೆಗಳಿಂದ ಒಡಗೂಡಿ ದೇವೇಂದ್ರನು ತಾನಾಗಿಯೇ ಆಗಮಿಸಿದ. ಗಂಗೆಯಲ್ಲಿ ಮರಣ ಹೊಂದಿದ್ದರ ಪುಣ್ಯದಿಂದ ಆ ಹೆಣ್ಣಾನೆಯು ಮೊದಲಿನ ತನ್ನ ಪುಷ್ಪಗಂಧಾ ಶರೀರವನ್ನು ಪಡೆದು ದೇವೇಂದ್ರನ ವಿಮಾನವನ್ನು ಆರೋಹಣ ಮಾಡಿ ಸ್ವರ್ಗಕ್ಕೆ ತೆರಳಿತು. ಆಗ ದೇವೇಂದ್ರನು ಅವಳೊಂದಿಗೆ ತನ್ನ ಅಂತಃಪುರಕ್ಕೆ ಆಗಮಿಸಿದ. ಪದ್ಮಗಂಧೆಯು ಬಂದ ಕೂಡಲೇ ಶಚೀ, ರಂಭಾ,

ಪ್ರಮ್ಲೋಚಾ, ಊರ್ವಶೀ, ಮೊದಲಾದ ಇಂದ್ರನ ಪ್ರೀತಿಯ ಸುಂದರಿಯರೆಲ್ಲರೂ ಆ ಅಂತಃಪುರದಲ್ಲಿ ಪದ್ಮಗಂಧೆಯೊಬ್ಬಳನ್ನೇ ದೇವೇಂದ್ರನೊಡನೆ ವಿಹಾರಕ್ಕೆ ಬಿಟ್ಟು ತಾವೆಲ್ಲರೂ ಹೋದರು. ಇಂದ್ರನ ಕಣ್ಣುಗಳಂತೆ ಹೃದಯವೂ ಆನಂದದಿಂದ ಅರಳಿತು. ಪದ್ಮಗಂಧೆಯೂ ದೇವೇಂದ್ರನ ಹೃದಯದ ಹಿಗ್ಗನ್ನು ಹಿಗ್ಗಿಸುತ್ತ ಅವನೊಂದಿಗೆ ಆ ಇಂದ್ರ ಭವನದಲ್ಲಿ ಚಿರಂತರ ವಾಸಮಾಡಿದಳು.

**ಯಸ್ಯತಿಷ್ಠಂತಿ ಗಂಗಾಯಾಂ ಯಾವದಸೀನಿ ಜೈಮಿನೀ ।**
**ಕುಲಕೋಟಿ ಶತಂ ತಾವತ್ ತಸ್ಯಾವಾಸಸ್ಸುರಾಲಯೇ ॥**

ಅಸ್ಥಿಗಳು ಗಂಗೆಯಲ್ಲಿ ಇರುವವರೆಗೆ ಅವರ ಕುಲದ ಕೋಟ್ಯಾವಧಿ ಮಂದಿ ಪಾಪ ಮಾಡಿದವರಿಗೂ ಕೂಡ ಸ್ವರ್ಗದಲ್ಲಿ ಚಿರಂತರ ನಿವಾಸವು ಲಭಿಸುವದು. ಕೇವಲ ಗಂಗೆಯ ಮೂಳೆ ಬಿದ್ದ ಮಾತ್ರಕ್ಕೆ ಇಷ್ಟು ಫಲವಾದರೆ ದೇಹತ್ಯಾಗವನ್ನು ಮಾಡಿದವರಿಗೆ ಎಷ್ಟು ಫಲ? ಎಂದು ಹೇಳಲು ಶಕ್ಯವಿಲ್ಲ.

ಮೃತವಾದ ಶರೀರವು ಗಂಗೆಯ ತೆರೆಗಳ ಮಧ್ಯದಲ್ಲಿ ಎಲ್ಲಿ ಅಡಗಿರುವುದೋ ಅಲ್ಲಿಯವರೆಗೆ ಆ ಮನುಷ್ಯನು ಒಂದು ಕಲ್ಪಕಾಲದವರೆಗೆ ಸ್ವರ್ಗದಲ್ಲಿ ವಾಸಮಾಡುತ್ತಾನೆ.

ಮೃತವಾದ ಶರೀರವನ್ನು ಗಂಗೆಯ ತರಂಗಗಳು ಆಚೀಚೆ ತೇಲಾಡಿಸಿದಾಗ ಅಥವಾ ಶವ ಕೆಳಗೆ ಮುಳುಗಿ ಹೋದಾಗ ಎಂಥ ಫಲ ಇದೆ ಎಂಬುದನ್ನು ಹೇಳುತ್ತೇನೆ ಕೇಳಿರಿ. ಎಂಥ ಪಾಪಿಯಾದ ನರನ ಶವವು ಕೂಡ ಗಂಗೆಯ ವೀಚಿ ತರುಗಮಾಲೆಗಳಿಂದ ಚಾಲಿತವೂ ಲೋಲಿತವೂ ಆದರೆ ಸಾಕು. ಕೂಡಲೇ ಆ ಸತ್ತ ಮನುಷ್ಯನ ಆತ್ಮಜೀವವನ್ನು ಇದ್ದಲ್ಲಿಂದ ಕರೆತಂದು ದಿವ್ಯದೇಹಕೊಟ್ಟು ದೇವೇಂದ್ರನ ದೂತರು ಅವನನ್ನು ವಿಮಾನದಲ್ಲಿ ಕುಳ್ಳಿರಿಸಿ ಸ್ವರ್ಗಕ್ಕೆ ಕರೆದೊಯ್ದು ಸುವರ್ಣ ಮಂದಿರದಲ್ಲಿ ರತ್ನ ಪರ್ಯಂಕದಲ್ಲಿ ಒರಗಿಸುವರು. ಅಪ್ಸರೆಯರು ಬಂಗಾರದ ಹಿಡಿಕೆಯ ಚಾಮರದಿಂದ ಅವನಿಗೆ ಗಾಳಿ ಬೀಸುವರು. ಗಂಗೆಯ ತಡಿಯಲ್ಲಿಯ ಹುಡಿ ಪುಡಿಯಲ್ಲಿ ಬಿದ್ದು ಯಾರು ಸಾವನ್ನು ಅಪ್ಪಿರುವರೋ ಮತ್ತು ಯಾರ ದೇಹ ಗಂಗೆಯ ದಂಡೆಯಲ್ಲಿ ಸೂರ್ಯನ ಕಿರಣಗಳಿಂದ ಕಾವು ಗೊಂಡು ತಪ್ತಶವ ಎನಿಸುವದೋ ಅಂಥ ಮನುಷ್ಯನು ದೈವಿಕವಾದ ದೇಹವನ್ನು ಹೊಂದಿ ಸ್ವರ್ಗಲೋಕದಲ್ಲಿ ಸುರ ಸುಂದರಿಯರೊಂದಿಗೆ ನಂದನವನದಲ್ಲಿ ಆನಂದದಿಂದ ವಿಹರಿಸುತ್ತಾನೆ. ಗಂಗೆಯ ತೀರದಲ್ಲಿ ಯಾರ ಶವವು ಬಿದ್ದು ಕಾಗೆ ಕುಕ್ಕಿ, ಹದ್ದು ಹರಿದು, ನಾಯಿ ಎಳೆದು, ಛಿನ್ನ ವಿಛಿನ್ನವಾಗಿ ಗಂಗೆಯ ತೀರ ಅಥವಾ ನೀರಿನಲ್ಲಿ ಬಿದ್ದಿರುವದೋ ಅವನಿಗೆ ಅಮರಾವತಿಯಲ್ಲಿ ಅಪ್ಸರೆಯರ ಆಲಿಂಗನದ ಸುಖ ದೊರೆಯುವದು. ಈ ದೇವ ನದಿಯ ದಂಡೆಯಲ್ಲಿ ಬಿದ್ದ ಮೂಳೆಗಳಿಗೆ ಎಷ್ಟೇ ಇರುವೆ ಹತ್ತಿದ್ದರೂ ನೊಣ ಮುಕುರಿದ್ದರೂ ಅವನ ಪಾಪಗಳೆಲ್ಲವೂ ತೊಳೆದು ಹೋಗಿ ಅವನಿಗೆ ಸುರಲೋಕದಲ್ಲಿ ಶಚೀಪತಿಯ ಗೌರವ ದೊರಕುತ್ತದೆ. ಗಂಗೆಯಲ್ಲಿ ಆತ್ಮ ವಿಸರ್ಜನೆ ಮಾಡಿದವನ ಪುಣ್ಯ ಹ್ರಾಸವು ಎಂದೂ ಆಗುವದಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಗಂಗೆಯ ಮಹಾತ್ಮ್ಯ ಎಂಬ ಎಂಟನೆಯ ಅಧ್ಯಾಯ ಮುಗಿದುದು*

—೦—

**ಜೈಮಿನಿ:-** ಗುರುಗಳಾದ ವೇದವ್ಯಾಸರೇ. ನನಗೆ ಗಂಗೆಯ ವಿಷಯವಾಗಿ ಇನ್ನೂ ಹೆಚ್ಚಿನ ಮಹಿಮೆಯನ್ನು ತಿಳಿಸಿರಿ. ಗಂಗೆಯ ಈ ಚರಿತ್ರೆ ಹಾಗೂ ಮಹಿಮೆಯ ಮಾತು ಅವಳ ನೀರನಷ್ಟೇ ಮಧುರ. ಆ ದೇವನದಿಯಷ್ಟೇ ಪಾವನ. ಅದರ ಸ್ವಾದವನ್ನು ಸವಿದಷ್ಟು ಮೋದ ಉಂಟಾಗುದು.

**ವೇದವ್ಯಾಸ:-** ಶಿಷ್ಯೋತ್ತಮನಾದ ಜೈಮಿನಿ, ನೀನು ನಿಜವಾದ ಗಂಗಾಭಕ್ತ. ಆದುದರಿಂದ ನಿನಗೆ ನಾನು ಆ ದೇವ ತರಂಗಿಣಿಯ ಮಹಿಮೆಯನ್ನು ಕೇಳಿಸುತ್ತೇನೆ ಲಕ್ಷವಿಟ್ಟು ಆಲಿಸು.

ಗಂಗೆಯ ತೀರದವರೆಗೆ ಪಾದಯಾತ್ರೆ ಬೆಳೆಸಿದ ಕಾಲುಗಳು ನಿಜವಾಗಿಯೂ ಸಫಲ. ಗಂಗೆಯ ತರಂಗ ಮಾಲೆಗಳ ಕುಲ್‌ಕುಲ್ ಧ್ವನಿ ಕೇಳಿದ ಕಿವಿ ಧನ್ಯ. ಗಂಗೋದಕದ ಸವಿಯ ಸೊಬಗನ್ನು ಆಸ್ವಾದಿಸಿದ ನಾಲಿಗೆಯೇ ನಿಜವಾದ ನಾಲಿಗೆ. ಅವಳನ್ನು ನೋಡಿದ ಕಣ್ಣು ಸುಲೋಚನ. ಗಂಗೆಯ ತಡಿಯ ಮಣ್ಣನ್ನು ಹಣೆಯ ಮೇಲೆ ಧರಿಸಿದ ಲಲಾಟ ಮನುಷ್ಯನ ದೇಹದ ಭಾಗಗಳಲ್ಲಿಯೇ ಲಲಾಮ.

ಗಂಗೆಯ ಯಾತ್ರೆಗೆ ಹೊರಟ ಮನುಷ್ಯನನ್ನು ನೋಡಿ ಅವನ ಪಿತೃಗಳೆಲ್ಲ ತಮ್ಮ ತಮ್ಮಲ್ಲಿ ಮಾತನಾಡುತ್ತಾರಂತೆ. ''ನಮ್ಮ ಸಂತತಿಯವನು ಗಂಗಾ ಸ್ನಾನಕ್ಕೆ ಹೊರಟಿದ್ದಾನೆ. ಗಂಗೆಯಲ್ಲಿ ಮಿಂದು ನಮಗೆ ಗಂಗೋದಕದಿಂದ ತರ್ಪಣವನ್ನು ನೀಡುತ್ತಾನೆ. ಆದರಿಂದ ನಾವು ಹೇಗಾದರೂ ದುರ್ಲಭವಾದ ವಿಷ್ಣುಲೋಕವನ್ನು ಹೊಂದುತ್ತೇವೆ.'' ಎಂದು ಮುಂತಾಗಿ.

**''ಆಮಿಷಂ ಮೈಥುನಂ ಚೈವ ದೋಂಲಾಮಶಂ ಗಜಂ ತಥಾ ।**
**ಉಪಾನಹಂ ಚಾತಪತ್ರಂ ಗಂಗಾಯಾತ್ರಾಸು ವರ್ಜಯೇತ'' ॥**

ಈ ಗಂಗೆಯ ಯಾತ್ರೆ ಮಾಡುವವರು ಮಾಂಸ, ಸ್ತ್ರೀ ಸಂಗ, ಮೇಣೆ, ಪಲ್ಲಕ್ಕಿ, ಕುದುರೆ, ಆನೆ, ಪಾದರಕ್ಷೆ, ಕೊಡೆ ಇಷ್ಟ ಪದಾರ್ಥಗಳನ್ನು ಗಂಗಾಯಾತ್ರೆ ಮಾಡುವವರು ವರ್ಜ್ಯಮಾಡಬೇಕು.

**''ಅಧ್ವಶ್ರಮೋದ್ಭವಂ ದುಃಖಂ ದುಷ್ಕರಂ ನಹಿಮನ್ಯತೇ ।**
**ಗೃಹೇ ಪದ್ಮಸುಖಂ ತತ್ರ ಗಂಗಾಸ್ನಾನೇ ಸ್ಮರೇನ್ನಚ ॥**

ಯಾತ್ರೆ ಮಾಡುವಾಗ ಅನಿವಾರ್ಯವಾಗಿ ಒದಗಿದ ದುಃಖವನ್ನೇ ದೊಡ್ಡದು ಮಾಡಿ ಹೇಳುತ್ತ ಬೇಜಾರು ಮಾಡಿಕೊಳ್ಳಬಾರದು. ಮನೆಯಲ್ಲಿಯ ಊಟ, ವಸತಿ, ವಿಲಾಸ, ಭೋಗ ಮುಂತಾದ ಸುಖಗಳನ್ನು ನೆನೆಸುತ್ತ ಕೂಡಬಾರದು.

**''ಅಸತ್ಯಭಾಷಣಂಚೈವ ಪಾಖಂಡೈಸ್ಸಂಗಮೇವ ಚ ।**
**ದ್ವಿರ್ಭೋಜನಂ ಚ ಕಲಹಂ ಗಂಗಾಯಾತ್ರಾಸು ವರ್ಜಯೇತ್'' ॥**

ಸುಳ್ಳು ಮಾತು ವೇದನಿಂದಕರಾದ ನಾಸ್ತಿಕರ ಸಹವಾಸ ಎರಡು ಹೊತ್ತು ಊಟ ಮತ್ತು ಬಡಿದಾಟ ಇವುಗಳನ್ನು ಗಂಗಾಯಾತ್ರೆಯಲ್ಲಿ ವರ್ಜ್ಯ ಮಾಡಬೇಕು.

**"ಪರನಿಂದಾಂಚ ಲೋಭಂ ಚ ದ್ರೋಹಂ ಚ ಕ್ರೋಧ ಮತ್ಸರಾ ।**
**ಅತ್ಯಂತ ಹಾಸ್ಯಂ ಶೋಕಂ ಚ ಗಂಗಾಯಾತ್ರಾಸು ವರ್ಜಯೇತ್ ॥**

ಹೆರವರ ನಿಂದೆ, ದುಡ್ಡಿನ ಲೋಭ, ಗರ್ವ, ಸಿಟ್ಟು, ಅಸೂಯೆ, ಗಹಗಹಿಸಿ ನಗುವದು, ಶೋಕ ಮುಂತಾದವುಗಳನ್ನು ಗಂಗಾಯಾತ್ರೆ ಮಾಡುವಾಗ ಬಿಟ್ಟು ಬಿಡಬೇಕು. ನೆಲದ ಮೇಲೆ ಮಲಗಿದ್ದರೂ ಮಂಚದ ಮೇಲೆ ಮಲಗಿರುವೆನೆಂದು ಭಾವಿಸಬೇಕು. ದಾರಿ ನಡೆಯುವಾಗ ಗಂಗೆಯ ಪವಿತ್ರವಾದ ಮಹಿಮೆಯನ್ನೂ ಕಥೆಯನ್ನು ಹೇಳುತ್ತ ಹೋಗಬೇಕು.

**"ಗಂಗೇದೇವಿ ಜಗನ್ಮಾತಃ ದೇಹಿ ಸಂದರ್ಶನಂ ಮಮ ।**

"ಗಂಗಾತಾಯಿಯೇ, ನಿನ್ನ ದರ್ಶನದ ಲಾಭವನ್ನುಕರುಣಿಸು" ಎಂದು ಅನ್ನುತ್ತ ದಾರಿಯ ಶ್ರಮವನ್ನು ನಿವಾರಿಸಿಕೊಳ್ಳಬೇಕು. ಮನೆ ಮಾರು ಬಿಟ್ಟು ಬಂದು ಯಾತ್ರೆಯಲ್ಲಿ ನಾನು ಇಷ್ಟು ಬವಣೆ ಬಡಬೇಕಾಯಿತು. ನಾನು ಯಾತ್ರೆಗೇ ಬರಬಾರದಿತ್ತು" ಎಂದು ಮುಂತಾಗಿ ಪಶ್ಚಾತ್ತಾಪದ ನುಡಿಯನ್ನು ಯಾತ್ರೆಯಲ್ಲಿ ಎಷ್ಟೇ ಶ್ರಮವಾಗಿದ್ದರೂ ಯಾತ್ರಿಕರು ನುಡಿಯಬಾರದು. ಮನಸ್ಸಿನಲ್ಲಿಯೂ ಆ ವಿಚಾರವನ್ನು ತರಬಾರದು.

**"ಕ್ವಪರ್ಯಂಕಃ ಕ್ವಮೇ ಪತ್ನೀಕ್ವಚ ಮೇವ ಸುಹೃದ್ ಗೃಹಂ ।**
**ಸ್ವಡಿಮಿಪ್ರಾಂತರೇ ಭೂಮೌ ಕತಂ ವಾಹಂ ಸಮಾಗತಃ ॥**

"ಇಲ್ಲಿ ನನಗೆ ಮಲಗಲು ಮಂಚ ಎಲ್ಲಿದೆ? ಹೆಂಡತಿ ಎಲ್ಲಿದ್ದಾಳೆ. ನನಗೆ ಗೆಳೆಯಂದಿರ ಮನೆಯಲ್ಲಿದೆ ಇಲ್ಲಿ? ತಗ್ಗುದಿನ್ನೆಯಾದ ಈ ನೆಲದಲ್ಲಿ ನಾನು ಮಲಗುವದಾದರೂ ಹೇಗೆ ? ನಾನು ಏಕಾದರೂ ಇಲ್ಲಿಗೆ ಬಂದೆನೋ" ಎಂದು ಮುಂತಾಗಿ ಪಶ್ಚಾತ್ತಾಪದ ನುಡಿಗಳನ್ನು ಎಂದೂ ಆಡಬಾರದು. "ನಾನು ಬಿಟ್ಟು ಬಂದ ಮನೆಯಲ್ಲಿ ಧನ ಧಾನ್ಯಾದಿ ವಸ್ತುಗಳ ಗತಿ ಏನು ಆದೀತು? ನಾನು ಎಂದು ಹೋಗಿ ನಮ್ಮ ಮನೆಯನ್ನು ಮುಟ್ಟೇನು? ಹೀಗೆಲ್ಲ ಮನೆಯ ಕಡೆಗೇ ಲಕ್ಷವಿಟ್ಟು ಚಿಂತೆ ಮಾಡುತ್ತ ಕುಳಿತುಕೊಳ್ಳಬಾರದು. ಅಂಥವರಿಗೆ ಗಂಗಾಯಾತ್ರೆ ಮಾಡಿದ ಪುಣ್ಯವು ಬರುವುದಿಲ್ಲ. ಪಾದಯಾತ್ರಿಯಾಗಿ ಗಂಗಾಯಾತ್ರೆ ಮಾಡುವವರು ಅವಸರದಿಂದ ಓಡಬಾರದು. ಅತ್ಯಂತ ಸಾವಕಾಶವಾಗಿಯೂ ಅತಿ ಮಂದಗತಿಯಿಂದಲೂ ನಡೆಯಬಾರದು. ಪ್ರಯಾಗವೇ ಮೊದಲಾದ ಗಂಗಾ ತೀರಕ್ಷೇತ್ರಗಳಿಗೆ ಹೋಗಿ ವ್ಯಾಪಾರ ಉದ್ಯೋಗಾದಿಗಳನ್ನು ಮಾಡಬಾರದು. ಮಾಡಿದರೆ ಯಾತ್ರೆಯ ಅರ್ಧಪುಣ್ಯವು ನಾಶವಾಗುವುದು.

ಯಾತ್ರಿಕರು ಗಂಗಾತೀರಕ್ಕೆ ಹೋಗಿ ಗಂಗಾಪ್ರವಾಹದ ದರ್ಶನವನ್ನು ಮಾಡಿಕೊಂಡ ಕೂಡಲೇ ಕೈ ಮುಗಿದು ಮೊದಲು

**"ಅದ್ಯಮೇ ಸಫಲಂ ಜನ್ಮ ಜೀವಿತಂಚ ಸುಜೀವಿತಂ ।**
**ಸಾಕ್ಷಾತ್ ಬ್ರಹ್ಮ ಸ್ವರೂಪಾಂ ತ್ವಾಂಮಪಶ್ಯಮಿತಿಚಕ್ಷುಕ್ಷಾ ॥**
**ದೇವಿ ತ್ವದ್ದರ್ಶನಾದೇವ ಮಹಾಪಾತಕಿನೋ ಮಮ ।**
**ವಿನಷ್ಟ ಮಭವತ್ ಪಾಪಂ ಜನ್ಮ ಕೋಟಿ ಸಮುದ್ಭವಮ ॥**

ಇಂದು ನನ್ನ ಜನ್ಮ ಸಫಲ. ನನ್ನ ಜೀವನವೇ ಧನ್ಯ. ಸಾಕ್ಷಾತ್ ಪರಬ್ರಹ್ಮನ ಸನ್ನಿಧಾನದಿಂದ ಒಡಗೂಡಿದ ನಿನ್ನನ್ನು ಕಣ್ಣಿನಿಂದ ನೋಡುತ್ತಿದ್ದೇನೆ. ದೇವಿ ಮಹಾಪಾಪಿಯಾದ ನನ್ನ ಜನ್ಮ ಜನ್ಮಾಂತರದ ಪಾಪಗಳೆಲ್ಲವೂ ನಿನ್ನ ದರ್ಶನ ಮಾತ್ರದಿಂದಲೇ ಇಂದು ನಷ್ಟವಾಗಿ ಹೋದವು.

ಹೀಗೆ ನುಡಿದು ದೀರ್ಘದಂಡಾಕಾರವಾಗಿ ದೇಹವನ್ನು ನೆಲದ ಮೇಲೆ ಒರಗಿಸಿ ನಮಸ್ಕಾರವನ್ನು ಮಾಡಬೇಕು. ಮತ್ತು ಪ್ರವಾಹದ ಸಮೀಪದಲ್ಲಿಯೇ ಕೈ ಮುಗಿದುಕೊಂಡು ನಿಂತು ನೀರಿನಲ್ಲಿ ಇಳಿಯುವದಕ್ಕಿಂತ ಮೊದಲು ಹೀಗೆ ನುಡಿಯಬೇಕು.

**ಗಂಗಾದೇವಿ ಜಗದ್ಧಾತ್ರಿ ಪಾದಾಭ್ಯಾಂ ಸಲಿಲಂ ತವ ।**
**ಸ್ಪೃಶಾಮೀ ತ್ಯಪರಾಧಂ ತ್ವಂಪ್ರಸನ್ನಾಕ್ಷಮ್ಯತಾಂ ಮಮ ॥**

ಜಗತ್ತಿನ ತಾಯಿಯಾದ ಗಂಗಾದೇವಿಯೇ ನನ್ನ ಕಾಲುಗಳಿಂದ ನಿನ್ನ ನೀರನ್ನು ಮುಟ್ಟುತ್ತೇನೆ. ನನ್ನ ಈ ಅಪರಾಧವನ್ನು ನೀನು ಪ್ರಸನ್ನಳಾಗಿ ಕ್ಷಮಿಸು.

**"ಸ್ವರ್ಗಾರೋಹಣ ಸೋಪಾನಂ ತ್ವದೀಯಮುದಕಂ ಶುಭೇ ।**
**ಅತಃಸ್ಪೃಶಾಮೀ ಪಾದಾಭ್ಯಾಂ ಗಂಗಾದೇವಿ ನಮೋ ನಮಃ" ॥**

"ಮಂಗಳಪ್ರದವಾದ ಗಂಗಾದೇವಿಯೇ ನಿನ್ನ ನೀರು ಸ್ವರ್ಗವನ್ನು ಏರಲು ಶ್ರೇಷ್ಠವಾದ ಮೆಟ್ಟಲುಗಳಂತಿದೆ. ಆದುದರಿಂದ ಅನಿವಾರ್ಯವಾಗಿ ನನ್ನ ಕಾಲುಗಳಿಂದ ನಿನ್ನ ನೀರನ್ನು ಸ್ಪರ್ಶ ಮಾಡುತ್ತೇನೆ. ನಿನಗೆ ನನ್ನ ಅನಂತ ವಂದನೆಗಳು."

ಹೀಗೆ ಸ್ತೋತ್ರಮಾಡಿ ಅಪ್ಪಣೆಯನ್ನು ಕೇಳಿಕೊಂಡು ತುಸು ನೀರನ್ನು ಕೈಯಿಂದ ತಲೆಯ ಮೇಲೆ ಪ್ರೋಕ್ಷಣ ಮಾಡಿಕೊಂಡು ಸ್ನಾನಕ್ಕೆ ಇಳಿಯಬೇಕು. ಮುಳುಗುಹಾಕಿ ಆಚಮನ ಮಾಡಿ ಸಂಕಲ್ಪ ಮಾಡಿ ಮೃತ್ತಿಕಾ ಸ್ನಾನ ಮಾಡಬೇಕು.

**ತ್ವತ್‌ಕರ್ದಮ್ಯರತಿಸಿದ್ಧ್ಯೈಃ ಸರ್ವಪಾಪ ಪ್ರಣಾಶನ್ಯೈಃ ।**
**ಮಯಾಸಂಲಿಪ್ಯತೇ ಗಾತ್ರಂ ಮಾತರ್ಮೇಹರ ಪಾತಕಂ ॥**

"ತಾಯಿ ನನ್ನಲ್ಲಿರುವ ಎಲ್ಲ ಪಾಪಗಳನ್ನು ಕಳೆಯುವ ಮೃದು ಮಧುರವಾದ ಗಂಗೆಯ ಮಣ್ಣನ್ನು ಮೈಗೆ ಹಚ್ಚಿಕೊಂಡು ಸ್ನಾನ ಮಾಡುತ್ತಲಿದ್ದೇನೆ. ನನ್ನ ಪಾಪವನ್ನು ಪರಿಹರಿಸು." ಎಂದು ಹೇಳಿ ಗಂಗಾ ಗಂಗಾ ಗಂಗಾ ಎಂದು ಬಾಯಿಂದ ಉಚ್ಚರಿಸುತ್ತಲೇ ಮೃತ್ತಿಕಾ ಸ್ನಾನವನ್ನು ಮಾಡಬೇಕು. ಹೀಗೆ ಎರಡು ಸಲ ಮೃತ್ತಿಕಾ ಸ್ನಾನ ಮಾಡಿ ಸ್ನಾನಾ ನಂತರ ಬಟ್ಟೆಯಿಂದ ಮೈಯನ್ನು ಒರೆಸಿಕೊಳ್ಳಬೇಕು. ಗಂಗೆಯ ನೀರಿನಲ್ಲಿ ಹಲ್ಲು ಉಜ್ಜುವದನ್ನು ಮಾಡಬಾರದು. ಬೇರೆ ಕಡೆಯಲ್ಲಿ ಹಲ್ಲು ತಿಕ್ಕಿಕೊಂಡು ಗಂಗೆಯಲ್ಲಿ ಸ್ನಾನವನ್ನು ಮಾತ್ರ ಮಾಡಬೇಕು. ಸ್ನಾನಾನಂತರ ಗಂಗೆಯ ಮಣ್ಣಿನಿಂದಲೇ ನಾಮಧಾರಣ ಮಾಡಿಕೊಂಡು ಪೂಜೆ ತರ್ಪಣ ಮುಂತಾದವುಗಳನ್ನು ಆಚರಿಸಬೇಕು. ಗಂಗಾ ತೀರದಲ್ಲಿ ಪಿತೃಶ್ರಾದ್ಧ ಮಾಡಿದರೆ ಪಿತೃಗಳು ಸಂತುಷ್ಟರಾಗುತ್ತಾರೆ. ಗಂಗಾತೀರದಲ್ಲಿ ಮಾಡಿದ ಸ್ನಾನ, ದಾನ, ಪೂಜೆ, ಮುಂತಾದ ಧರ್ಮಕಾರ್ಯಗಳಿಂದ ಅಕ್ಷಯ ಪುಣ್ಯಪ್ರಾಪ್ತಿ.

ಗಂಗೆಯಲ್ಲಿ ಸ್ನಾನ ಮಾಡಿ ಯಾತ್ರಿಕರು ದೇವರಪೂಜೆ ಪಂಚಮಹಾಯಜ್ಞಗಳನ್ನು ಮಾಡಿ ಶ್ರೀವಿಷ್ಣುವಿನ ಹಾಗೂ ಗಂಗೆಯ ಬೆಳ್ಳಿ, ಬಂಗಾರ ಅಥವಾ ತಾಮ್ರದ ಪ್ರತಿಮೆಗಳನ್ನು

ಮಾಡಿಸಿ ಪೂಜೆ ಮಾಡಬೇಕು. ತೆಂಗಿನ ನೀರಿನಿಂದ ಸ್ನಾನ ಮಾಡಿಸಬೇಕು. ಅನಂತರ ಗಂಗೋದಕದಿಂದ ಸ್ನಾನ ಮಾಡಿಸಿ ಧೂಪ ದೀಪ ನೈವೇದ್ಯಾದಿಗಳಿಂದ ಪೂಜೆ ಮಾಡಿ ವಿಷ್ಣು ಹಾಗೂ ಗಂಗಾದೇವಿಯರಿಗೆ ಮಂಗಳಾರತಿ ಗೈದು ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಬೇಕು. ಅಂದು ಉಪವಾಸವಿದ್ದು ರಾತ್ರಿ ಜಾಗರ ಮಾಡಿ ಧ್ಯಾನ ಗಾನಗಳಿಂದ ಶ್ರೀಹರಿಯ ಆರಾಧನೆ ಮಾಡಬೇಕು. ಪೂರ್ಣ ಉಪವಾಸ ತಡೆಯದಿದ್ದರೆ ಅನ್ನ ಬಿಟ್ಟು ಉಪಹಾರ, ಫಲಾಹಾರಗಳನ್ನು ಮಾಡಬೇಕು. ಮರುದಿನ ಮುಂಜಾನೆ ಮತ್ತೆ ವಿಷ್ಣು ಹಾಗೂ ಗಂಗೆಯರ ಪೂಜೆಗೈದು ಬ್ರಾಹ್ಮಣರ ಭೋಜನ ಮಾಡಿಸಿ ಯಥಾ ಶಕ್ತಿ ದಕ್ಷಿಣೆ ನೀಡಬೇಕು. ಅನಂತರ ತಾನು ಮಾಡಿದ ಈ ಎಲ್ಲ ಪುಣ್ಯಕರ್ಮಗಳ ಫಲವನ್ನು ಪರಮಾತ್ಮನಿಗೆ ಸಮರ್ಪಿಸಬೇಕು.

ಹೀಗೆ ತೀರ್ಥೋಪವಾಸವನ್ನೂ ಪಾರಣೆಯನ್ನು ಮಾಡಿದ ಮನುಷ್ಯನು ಸರ್ವ ಪಾಪಗಳಿಂದಲೂ ಮುಕ್ತನಾಗಿ ವಿಷ್ಣುವಿನ ಮಂದಿರದಲ್ಲಿ ವಿಷ್ಣುವಿನೊಂದಿಗೆ ಆನಂದವನ್ನು ಪಡೆಯುತ್ತಾನೆ. ಗಂಗೆಯ ಯಾತ್ರೆ ಮಾಡುವಾಗಲೇ ಯಾರಿಗಾದರೂ ಮರಣವು ಒದಗಿ ಬಂದರೆ ಅವನಿಗೆ ಮುಂದೆ ಮೋಕ್ಷವು ದೊರಕುವದು.

ಪೂರ್ವಕಾಲದಲ್ಲಿ, ತ್ರೇತಾಯುಗ ಹಾಗೂ ದ್ವಾಪರಯುಗಗಳ ಸಂಧಿಕಾಲದಲ್ಲಿ ಸತ್ಯಧರ್ಮ ಎಂಬ ರಾಜನು ವಿಜಯಾ ಎಂಬ ಹೆಸರಿನ ಅವನ ಪಟ್ಟದರಾಣಿಯು ಒಳ್ಳೇರೂಪವತಿ, ಶ್ರೇಷ್ಠಗುಣವತಿಯೂ ಆಗಿದ್ದಳು. ಯಾವಾಗಲೂ ಪತಿಯ ಸೇವೆಯನ್ನು ಒಂದು ವ್ರತ ಎಂದು ತಿಳಿದು ಆಚರಿಸುತ್ತಿದ್ದಳು. ಹೀಗೆ ಏಳು ಸಾವಿರ ವರ್ಷ ರಾಜ್ಯವಾಳಿ ಆ ರಾಜನು ಮರಣವನ್ನು ಹೊಂದಿದ. ಯಮದೂತರು ಅವರಿಬ್ಬರನ್ನು ಯಮನ ರಾಜಧಾನಿಗೆ ಕರೆದೊಯ್ದರು. ''ಇವರ ಪುಣ್ಯಪಾಪದ ವರದಿಯನ್ನು ಒಪ್ಪಿಸು'' ಎಂದು ಯಮಧರ್ಮ ಚಿತ್ರಗುಪ್ತನಿಗೆ ಆದೇಶಿಸಿದ.

**ಚಿತ್ರಗುಪ್ತ:-** ಪ್ರಭು, ಈ ರಾಜನು ಎಷ್ಟೋ ಪುಣ್ಯಕರ್ಮಗಳನ್ನು ಮಾಡಿದ್ದರೂ ಒಂದು ಘೋರ ಪಾಪವನ್ನು ಮಾಡಿದ್ದಾನೆ. ಕಾಡಿನಲ್ಲಿಯ ಮೃಗವು, ಹುಲಿ, ಸಿಂಹ ಮುಂತಾದ ಕ್ರೂರಪ್ರಾಣಿಗಳಿಂದ ಪೀಡಿತವಾಗಿ ಹೆದರಿ ರಾಜಧಾನಿಗೆ ಶರಣು ಹೋಗಬೇಕೆಂದು ರಾಜಸಭೆಗೆ ಬಂದಿತು. ವಿಶ್ವಾಸದಿಂದ ರಾಜಭವನಕ್ಕೆ ಬಂದ ಆ ಚಿಗರೆಯನ್ನು ಕಂಡ ಕೂಡಲೇ ರಾಜನು ಖಡ್ಗ ಹಿರಿದ. ದಯೆಯಿಲ್ಲದೇ ಶರಣಾಗತವಾದ ಆ ಪ್ರಾಣಿಯನ್ನು ಕೊಂದುಹಾಕಿದ. ನಿರಪರಾಧಿಯಾದ ಮತ್ತು ತನಗೆ ಶರಣು ಬಂದ, ನಿರುಪದ್ರವಿಯಾದ ಆ ಸಾತ್ವಿಕ ಚಿಗರೆಯನ್ನು ಕೊಂದದ್ದು ಘೋರ ಅಪರಾಧ. ಆದುದರಿಂದ ಮಡದಿಯೊಂದಿಗೆ ಈ ರಾಜನಿಗೆ ಘೋರವಾದ ದಂಡ ಶಿಕ್ಷೆ ಆಗಲೇಬೇಕು. ಇವನು ಹತ್ಯೆಗೈದ ಆ ಕಾಡುಮಿಕದ ಮೈಯಲ್ಲಿ ಎಷ್ಟು ಕೂದಲುಗಳು ಇದ್ದವೋ ಅಷ್ಟು ಸಾವಿರ ವರ್ಷ ಇವನು ನರಕದಲ್ಲಿ ಯಮಯಾತನೆಯನ್ನು ಅನುಭವಿಸಲಿ.

ಚಿತ್ರಗುಪ್ತನ ಮಾತಿನಂತೆ ಯಮದೇವರು ಅವನಿಗೆ ಆ ಶಿಕ್ಷೆಯನ್ನು ವಿಧಿಸಿದ. ಯಮದೂತರು ಆ ಸತ್ಯಧರ್ಮರಾಜನನ್ನು ಅವನ ಹೆಂಡತಿಯನ್ನು ಅಸಿಪತ್ರವನ ಎಂಬ ನರಕದಲ್ಲಿ ಹಾಕಿದರು. ಹೀಗೆ ಸಾವಿರಾರು ವರ್ಷ ನರಕದಲ್ಲಿ ನೋವನ್ನು ಉಂಡು ವ್ಯಾಘ್ರ ಭಕ್ಷ ಎಂಬ ಮತ್ತೊಂದು ನರಕಕ್ಕೆ ಹೋದ. ಅಲ್ಲಿ ಹುಲಿಯಿಂದ ಹೊಡೆದು ಹಿಂಸಿಸಲ್ಪಟ್ಟು ಪುನಃ

ಭೂಲೋಕದಲ್ಲಿ ಕಪ್ಪೆಯಾಗಿ ಇಬ್ಬರೂ ಜನಿಸಿದರು. ಹುಳ ಹುಪ್ಪಟೆ ತಿಂದು ಬದುಕಿದರು. ಪೂರ್ವಜನ್ಮದಲ್ಲಿ ಮಾಡಿದ ಪುಣ್ಯದಿಂದ ಅವರಿಗೆ ಜನ್ಮಾಂತರದ ಸ್ಮರಣ ಇದ್ದಿತು.

ಅವೆರಡೂ ಕಪ್ಪೆಗಳೂ ಯಾವುದೋ ಒಂದು ಹೊಂಡದ ದಂಡೆಯ ಮೇಲೆ ಬಿದ್ದಾಗ ಅಲ್ಲಿಗೆ ಕೆಲವು ಯಾತ್ರಿಕರು ಬಂದರು. ಅವರು ಅಲ್ಲಿ ತುಸುವಿಶ್ರಮಿಸಿ ಗಂಗೆಯ ಯಾತ್ರೆಗೆ ಹೊರಟರು. ಅದನ್ನು ನೋಡಿ ಆ ಗಂಡು ಕಪ್ಪೆಯು ವರ್ಷಾಬ್ಧಿ ಎಂಬ ಹೆಸರಿನ ಹೆಂಡತಿಯಾದ ಕಪ್ಪೆಗೆ ಹೇಳಿದ.

''ಪ್ರಿಯೆ, ಎಂಥ ಪಾಪಿಗಳಾದರೂ ಗಂಗೆಯಲ್ಲಿ ದೇಹತ್ಯಾಗ ಮಾಡಿದರೆ ಮುಕ್ತರಾಗುತ್ತಾರೆ. ನಾವಿಬ್ಬರೂ ಈಗ ಈ ಕಪ್ಪೆಯ ಯೋನಿಯಲ್ಲಿ ಪರಿಪರಿಯ ದುಃಖಗಳನ್ನು ಅನುಭವಿಸುತ್ತಲಿದ್ದೇವೆ. ಆದುದರಿಂದ ಗಂಗಾತೀರಕ್ಕೆ ಹೋಗಿ ಆ ಪುಣ್ಯ ತೀರ್ಥದಲ್ಲಿ ಈ ದೇಹ ಪರಿತ್ಯಾಗವನ್ನು ಮಾಡೋಣ.''

ಪತಿಯ ಮಾತು ಸತಿಯಾದ ವರ್ಷಾಬ್ಧಿಗೆ ಸಮುಚಿತ ಹಾಗೂ ಸಮಂಜಸ ಎನಿಸಿತು. ಅವಳೂ ಅದಕ್ಕೆ ಒಪ್ಪಿದಳು. ಇಬ್ಬರೂ ಕೂಡಿ ಗಂಗಾಯಾತ್ರೆಗೆ ಹೊರಟರು. ಅವೆರಡೂ ಗಂಗೆಯ ತೀರದೆಡೆಗೆ ಹೋಗುವ ದಾರಿಯನ್ನು ಕ್ರಮಿಸುತ್ತಲಿದ್ದಾಗ ಯಾವ ಆಹಾರವೂ ಸಿಕ್ಕದೇ ಹಸಿವೆ ಬಾಯಾರಿಕೆಗಳಿಂದ ಬಳಲಿ ಬೆಂಡಾಗಿ ನಡೆಯಲಾರದೇ ನಡೆದವು.

ಅಷ್ಟರಲ್ಲಿ ಅವುಗಳ ಎದುರು ಭಯಂಕರವಾದ ಒಂದು ಕಾಲ ಸರ್ಪವು ಬಂದಿತು. ಅವರನ್ನು ಕಂಡು ಆ ಕಾಲ ಸರ್ಪವು ಗರ್ವದಿಂದ ಹೇಳಿತು.

**ಕಾಲಸರ್ಪ:-** ಪಾಪಿಗಳೇ, ನೀವು ಒಳ್ಳೇ ಸಕಾಲಕ್ಕೆ ನನ್ನ ಎದುರು ಬಂದಿರಿ. ನನಗೆ ಬಹಳ ಹಸಿವೆಯಾಗಿದೆ. ಈಗಲೇ ನಿಮ್ಮನ್ನು ತಿಂದು ಮುಗಿಸಿ ಬಿಡುತ್ತೇನೆ.

**ಕಪ್ಪೆಗಳು:-** ಸರ್ಪವೇ, ನಮಗೆ ಸಾವಿನ ಹೆದರಿಕೆ ತಿಲಮಾತ್ರವೂ ಇಲ್ಲ. ಹಿಂದೆ ನಾನು ಸತ್ಯಧರ್ಮ ಎಂಬ ಹೆಸರಿನ ರಾಜನು ಆಗಿದ್ದೆ. ಇವಳು ನನ್ನ ಪಟ್ಟದ ರಾಣಿ ವಿಜಯಾ. ನಾವಿಬ್ಬರೂ ನಮ್ಮ ರಾಜಧಾನಿಯಲ್ಲಿ ಸುಖದಿಂದ ಇದ್ದಾಗ ದುರ್ಬುದ್ಧಿಯಿಂದ ನಾನು ಮನೆಯವರೆಗೆ ನನಗೆ ಶರಣು ಬಂದ ಚಿಗರೆಯನ್ನು ಮೋಹದಿಂದ ಕೊಂದು ಹಾಕಿದೆ. ಆ ಪಾಪದಿಂದ ಬಹುಕಾಲ ನರಕದಲ್ಲಿ ದುಃಖವನ್ನು ಅನುಭವಿಸಿ ವ್ಯಾಘ್ರಭಕ್ಷ್ಯ ನರಕದಲ್ಲಿ ಹುಲಿಯಿಂದ ಹೊಡೆತ ಹಿಂಸೆ ಹೊಂದಿ ಅನಂತರ ನನ್ನ ಕರ್ಮ ಶೇಷವನ್ನು ಅನುಭವಿಸಲಿಕ್ಕಾಗಿ ಈಗ ಕಪ್ಪೆಯಾಗಿ ನನ್ನ ಮಡದಿಯೊಂದಿಗೆ ಇಲ್ಲಿ ಹುಟ್ಟಿದ್ದೇನೆ. ನಾವು ಗಂಗೆಯಲ್ಲಿ ಶರೀರವನ್ನು ತ್ಯಾಗ ಮಾಡಲಿಕ್ಕಾಗಿ ಗಂಗಾ ನದಿಗೆ ಹೊರಟಿದ್ದೇವೆ. ಆದುದರಿಂದ ಈಗ ನಮ್ಮನ್ನು ಇಲ್ಲಿ ತಿನ್ನಬೇಡ. ನಮ್ಮ ಹೃದಯದಲ್ಲಿ ವಿಷ್ಣು ಇರುತ್ತಾನೆ. ನಿನ್ನ ಹೃದಯದಲ್ಲಿ ಹರಿ ಇರುತ್ತಾನೆ. ಆದುದರಿಂದ ನೀನು ನಮ್ಮ ವೈರಿಯಲ್ಲ. ವಿವೇಕಿಗಳಾದವರು ಎಂದೂ ಪ್ರಾಣಹಿಂಸೆಯನ್ನು ಸರ್ವಥಾ ಮಾಡಕೂಡದು.

**ಪ್ರಾಣಿಹಿಂಸಾ ನ ಕರ್ತವ್ಯ ಕದಾಚಿದಪಿ ವಿಚಕ್ಷಣೈಃ ।**
**ಕ್ರಿಯತೇ ಯದಿ ತದ್‌ಹಿಂಸಾಂ ವಿಧಧಾತಿ ಸ್ವಯಂವಿಧಿಃ ॥**

ಬುದ್ಧಿವಂತರು ಪ್ರಾಣಹಿಂಸೆಯನ್ನು ಮಾಡಿದರೆ ವಿಧಿಯು ಅವರ ಹಿಂಸೆಯನ್ನು ಮಾಡುತ್ತದೆ.

**"ಆಯುಃ ಪುತ್ರಾಶ್ಚ ದಾರಾಶ್ಚ ಸಂತಶದಶ್ಚ ಯಶಾಂಸಿ ಚ ।**
**ಹಿಂಸಾಂ ದತ್ವಾ ಮನುಷ್ಯಾಣಾಂ ಹರೇದ್ದುಷ್ಟೋ ವಿಧಿ ಸ್ವಯಂಮ್॥**

ದೈವವು ಹಿಂಸೆ ಮಾಡಿದವನ ಆಯುಷ್ಯವನ್ನು, ಸಂತಾನವನ್ನು, ಪತ್ನಿಯನ್ನು, ಸಂಪತ್ತನ್ನು, ಸಂಪತ್ತನ್ನು, ಕೀರ್ತಿಯನ್ನು ಅಪಹರಿಸಿ ಅವರಿಗೆ ಪಾಠ ಕಲಿಸುತ್ತದೆ.

**ಕಿಂಜಪೈಃ ಕಿಂತಪೋಭಿರ್ವಾ ಕಿಂದಾನೈಃ ಕಿಮು ಚಾಧ್ವರೈಃ ।**
**ಹಂಸೇತಿ ವರ್ಣದ್ವಿತಯಂ ಯಸ್ಯಾಸ್ತಿ ಹೃದಯೇ ಸದಾ ॥**

ಹಿಂಸಾ ಎಂಬ ಎರಡು ಅಕ್ಷರಗಳು ಯಾರ ಹೃದಯದಲ್ಲಿರುತ್ತವೆಯೋ ಅಂಥ ಮನುಷ್ಯನು ಎಷ್ಟು ಜಪ ಮಾಡಿದರೇನೂ! ಯಾವ ತಪೋನುಷ್ಠಾನವನ್ನು ಆಚರಿಸಿದರೇನು? ಅವನ ದಾನ ಅಥವಾ ಯಜ್ಞಗಳಿಂದ ಏನು ಫಲ ಬರಬೇಕಾಗಿದೆ?

**ಯಃ ಪ್ರಾಣಿ ಹಿಂಸಕೋ ಮರ್ತ್ಯಃ ಸ ಏವ ಹರಿಹಿಂಸಕಃ ।**
**ಸರ್ವಪ್ರಾಣಿ ಶರೀರಸ್ಥೋ ಭಗವಾನ್ ಕಮಲಾ ಪತಿಃ ॥**

ಲಕ್ಷ್ಮೀಪತಿಯಾದ ಶ್ರೀಹರಿಯು ಎಲ್ಲ ಪ್ರಾಣಿಗಳ ಶರೀರದಲ್ಲಿಯೂ ಇರುತ್ತಾನೆ. ಪ್ರಾಣಿ ಹಿಂಸೆ ಮಾಡಿದ ಮನುಷ್ಯನು ಶ್ರೀಹರಿಯ ಹಿಂಸೆಯನ್ನೇ ಮಾಡಿದಂತೆ. ಪ್ರಾಣಿಹಿಂಸಕ ಪರಮಾತ್ಮ ಹಿಂಸಕನೇ ಸರಿ.

**ಆತ್ಮಾನಾಂ ಬಹುಧಾ ಸೃಷ್ಟ್ವಾ ಭಗವಾನ್ ಭೂತ ಭಾವನಃ**
**ಸಂಸಾರಕೌತುಕಾಗಾರೇ ಕ್ರೀಡೇಚ್ಛಿಷುರಿವ ಸ್ವಯಂ ॥**

ಎಲ್ಲ ಪ್ರಾಣಿಗಳನ್ನು ಸೃಷ್ಟಿ ಮಾಡಿ ಬೇರೆ ಬೇರೆ ಜೀವರಿಗೆ ಬೇರೆ ಬೇರೆ ದೇಹಗಳನ್ನು ಕೊಟ್ಟು ಈ ಸಂಸಾರವೆಂಬ ಕೌತುಕದ ಮನೆಯಲ್ಲಿ ಪರಮಾತ್ಮನು ಜೀವಿಗಳೊಂದಿಗೆ ಆಟವಾಡುತ್ತ ಇರುತ್ತಾನೆ.

**ಶರೀರಿಣಃ ಶರೀರಂ ಹಿ ನಿಲಯಃ ಪರಮಾತ್ಮನಃ**
**ಪರಮಾತ್ಮಾ ಸ್ವಯಂ ವಿಷ್ಣುರತೋಹಿಂಸಾಂ ವಿಸರ್ಜಯೇತ್**

ಪ್ರಾಣಿಗಳ ಶರೀರವು ಪರಮಾತ್ಮನಿಗೆ ಮನೆಯಿದ್ದಂತೆ, ಸ್ವಯಂ ವಿಷ್ಣುವೇ ಪರಮಾತ್ಮ. ಆದುದರಿಂದ ಮಾನವನು ಯಾವ ಪ್ರಾಣಿಯನ್ನು ಹಿಂಸೆ ಮಾಡಬಾರದು.

**"ಪರಪ್ರಾಣ ವಿನಾಸೇನ ಚಾತ್ಮತುಷ್ಟಿರ್ವಿಧೀಯತೆ**
**ಕ್ಷಣಂಸ್ಯಾದಾತ್ಮನಸ್ತುಷ್ಟಿರನ್ಯಸ್ಯ ಪ್ರಾಣ ಸಂಶಯಃ ॥**

ಇನ್ನೊಬ್ಬರ ಪ್ರಾಣವನ್ನು ಕೊಂದು ಅದರ ಮಾಂಸದಿಂದ ಮನುಷ್ಯನಿಗೆ ಸಂತೋಷವಾದರೂ ಅದು ಕೇವಲ ಕ್ಷಣಿಕ. ಆದರೆ ಇವನ ಹಿಂಸೆಗೆ ಗುರಿಯಾದ ಪ್ರಾಣಿಗೆ ಮಾತ್ರ ಅದೊಂದು ಘೋರ ಮರಣ.

**ಪರದುಃಖೇನ ಯೋ ದುಃಖೀ ಸುಖೀಯಶ್ಚ ಪರಶ್ರಿಯಾ ।**
**ಸಂಸಾರೇಸ್ಮಿನ್ ಸವಿಜ್ಞೇಯಃ ಸೌಖ್ಯಾದೇವ ಹರಿಃ ಸ್ವಯಂ ॥**

ಇನ್ನೊಬ್ಬರ ಜೀವ ಹಿಂಸೆಯಿಂದ ಮೂಢ ಪ್ರಾಣಿಗಳಿಗೆ ಬರುವ ಸುಖಕ್ಕೆ ಧಿಕ್ಕಾರವಿರಲಿ.

**ಸುಖಾನಿ ವಾऽಪಿ ದುಃಖಾನಿ ದೀಯಂತೇ ಯಾನಿ ಜಂತವೇ**
**ಅಚಿರೇಣೈವ ತಾನಿಸ್ಮ ಲಭಂತೇ ಭವಿಮಾನವಾಃ ॥**

ಪರರಿಗೆ ಸುಖವನ್ನಾಗಲೀ ದುಃಖವನ್ನಾಗಲೀ ಕೊಟ್ಟರೆ ಆ ಸುಖ ದುಃಖಗಳನ್ನೇ ವಿಧಿಯು ಮಾನವರಿಗೆ ತಂದು ಒದಗಿಸುವುದು.

ಆದುದರಿಂದ ಸರ್ಪಶ್ರೇಷ್ಠವೇ, ನೀನು ನಮ್ಮನ್ನು ಹಿಂಸೆ ಮಾಡಬೇಡ. ಇದರಿಂದ ನಿನಗೆ ಮುಂದೆ ಸುಖವಾಗುವುದು. ನಾವು ಕೂಡ ಈ ದುಃಖ ಸಾಗರದಿಂದ ಪಾರಾಗುವೆವು.

**ಕಾಳಸರ್ಪ:-**ಹೆರವರ ಹಿಂಸೆಯನ್ನು ಮಾಡಬಾರದು ಎಂದು ನೀನು ಹೇಳಿದ್ದೇನೋ ಸರಿ. ಆದರೆ ಪ್ರಾಣಿಗಳಲ್ಲಿ ಆ ಪರಮಾತ್ಮನೇ ಇದ್ದು ಇದು ಭಕ್ಷ್ಯ ಇದು ಭಕ್ಷಕ ಎಂದು ಮಾಡಿರುವಷ್ಟೆ ! ಯಾರೂ ಯಾವ ಪ್ರಾಣಿಯನ್ನು ಹಿಂಸಿಸಬಾರದು ಎಂದು ಇದ್ದರೆ ದೇವರು ಪ್ರಾಣಿಗಳಲ್ಲಿ ''ಇದು ಭಕ್ಷ್ಯ ಇದು ಭಕ್ಷಕ'' ಎಂದು ವಿಭಾಗ ಮಾಡಲೇಬಾರದಿತ್ತು. ಎಲ್ಲ ಪ್ರಾಣಿಗಳಿಗೂ ಹಿಂಸೆಯಿಲ್ಲದ ಭಕ್ಷ್ಯವನ್ನೇ ಗೊತ್ತು ಪಡಿಸಬಹುದಿತ್ತು. ಅದನ್ನು ಬಿಟ್ಟು ಈ ಪ್ರಪಂಚದಲ್ಲಿ ಭಕ್ಷ್ಯ ಭಕ್ಷ್ಯಕ ರೂಪವಾಗಿ ಪ್ರಾಣಿಗಳನ್ನು ನಿರ್ಮಾಣ ಮಾಡಿದ್ದರಿಂದ ''ಜೀವೋ ಜೀವಸ್ಯ ಜೀವನಂ ಎಂಬಂತೆ ಒಂದು ಪ್ರಾಣಿಯ ಜೀವ ಇನ್ನೊಂದು ಪ್ರಾಣಿಯ ಆಹಾರ ಎಂಬುವದೇ ಆ ವಿಧಾತನಿಗೆ ಸಮ್ಮತ ಎಂದು ಅನಿಸುತ್ತದೆ. ಈ ಜಗತ್ತನ್ನೆಲ್ಲ ಸೃಷ್ಟಿಸುವವನೂ ಪಾಲಿಸುವವನೂ ಸಂಹರಿಸುವವನೂ ಅದೇ ಶ್ರೀಹರಿ. ನಿಮ್ಮನ್ನು ಕೊಲ್ಲಲು ನಾನು ಎಷ್ಟರವನು? ಕಾಲರೂಪಿಯಾದ ವಿಧಿಯೇ ಅರ್ಥಾತ್ ಶ್ರೀಹರಿಯೇ ನಿಮ್ಮನ್ನು ಕೊಲ್ಲಲು ನನ್ನನ್ನು ಕಳಿಸಿದೆ. ನಾನು ನಿಮಿತ್ತ ಮಾತ್ರ.''

ಹೀಗೆ ಹೇಳಿ ಆ ಘೋರಾಕಾರದ ಕ್ರೂರ ಹಾವು ಆ ಕಪ್ಪೆ ದಂಪತಿಗಳನ್ನು ದಯೆ ಯಿಲ್ಲದೇ ಕೊಂದಿತು. ಮತ್ತು ಆನಂದದಿಂದ ತಿಂದಿತು. ಆ ಎರಡೂ ಕಪ್ಪೆಗಳು ಹಾವು ತಮ್ಮನ್ನು ಕಚ್ಚುವಾಗ ಕೊಲ್ಲುವಾಗ ತಿನ್ನುವಾಗ ''ಗಂಗಾ ಗಂಗಾ ಗಂಗಾ'' ಎಂದು ಗಂಗೆಯ ನಾಮೋಚ್ಚಾರಣವನ್ನು ಮಾಡುತ್ತಲೇ ಇದ್ದವು. ಆದುದರಿಂದ ಆ ಕಪ್ಪೆ ದಂಪತಿಗಳಿಗೆ ಅಸಂಖ್ಯ ಅಶ್ವಮೇಧ ಯಜ್ಞಗಳನ್ನು ಮಾಡಿದ ಪುಣ್ಯ ಅನಾಯಾಸವಾಗಿ ಪ್ರಾಪ್ತವಾಯಿತು. ದೇವೇಂದ್ರನು ಬರೀ ನೂರು ಅಶ್ವಮೇಧ ಯಜ್ಞಗಳನ್ನು ಮಾಡಿ ಶತಕೃತು ಎಂದು ಪ್ರಸಿದ್ಧನಾಗಿದ್ದ. ಆದರೆ ಗಂಗೆಯನ್ನು ನೆನೆಯುತ್ತ ಗಂಗಾತೀರ್ಥದ ದಾರಿಯಲ್ಲಿಯೇ ಮಡಿದು ಬಿದ್ದ ದಂಪತಿಗಳಿಗೆ ಅಗಣಿತ ಅಶ್ವಮೇಧ ಯಜ್ಞಗಳನ್ನು ಮಾಡಿದ ಪುಣ್ಯವು ಲಭ್ಯವಾಯಿತು. ಕೂಡಲೇ ಸ್ವಯಂ ಆ ದೇವೇಂದ್ರನು ಕೂಡ ಪಾದಚಾರಿಯಾಗಿ ತಮ್ಮ ಮೊದಲಿನ ರೂಪವನ್ನು ಪಡೆದು ನಿಂತ ಆ ಎರಡೂ ಕಪ್ಪೆ ದಂಪತಿಗಳ ಕಡೆಗೆ ಹೊರಟು ನಿಂತ.

ಅಪ್ಸರಲ್ಲಿ ರಂಭಾ, ಊರ್ವಶಿ ಮೊದಲಾದ ಸ್ವರ್ಗಲೋಕದ ಸುರಸುಂದರಿಯರು ''ಇವನನ್ನು ನಾನು ವರಿಸುತ್ತೇನೆ'' ''ನಾನು ಮದುಯಾಗುತ್ತೇನೆ'' ಎಂದು ಸ್ಪರ್ಧೆಯಿಂದ ತಮ್ಮ ತಮ್ಮಲ್ಲಿ ಕಲಹವಾಡತೊಡಗಿದರು.

ಇವರ ಈ ಕಾಮಿನೀ ಕೇಲಿ ಕಲಹ ನಡೆದಾಗಲೇ ಅಲ್ಲಿ ದೇವೇಂದ್ರ ಬಂದ. ಸತ್ಯಧರ್ಮ ಹಾಗೂ ವಿಜಯಾ ಎಂಬ ಹೆಸರಿನ ಕಪ್ಪೆಯ ಜನ್ಮದಿಂದ ಮುಕ್ತರಾಗಿ ಬಂದ ರಾಜದಂಪತಿಗಳನ್ನು ಅರ್ಘ್ಯಪಾದ್ಯಾದಿಗಳಿಂದ ಸ್ವಯಂ ದೇವೇಂದ್ರನು ಪೂಜೆ ಮಾಡಿದ.

ತನ್ನ ಪುಷ್ಪಕ ರಥದಲ್ಲಿ ಮಡದಿಯೊಂದಿಗೆ ಕೂಡಿಸಿದ. ಜಯಘೋಷ ಮಂಗಳವಾದ್ಯಗಳನ್ನು ಮೊಳಗಿಸುತ್ತ ಅಪ್ಸರೆಯರಿಂದ ಚಾಮರ ಸೇವೆಯನ್ನು ಸಲ್ಲಿಸುತ್ತ ಸ್ವರ್ಗಲೋಕಕ್ಕೆ ಕರೆದುಕೊಂಡು ಹೋದ. ಅಲ್ಲಿ ಶಚೀನಾಥನು ಈ ಸತ್ಯಧರ್ಮ ಮಹಾರಾಜನಿಗೆ ತನ್ನ ಆಸನದಲ್ಲಿಯ ಅರ್ಧ ಆಸನವನ್ನು ಕೊಟ್ಟು ಕೂಡಿಸಿಕೊಂಡು ಅವನೊಡನೆ ಸ್ವರ್ಗ ಸಾಮ್ರಾಜ್ಯವನ್ನು ಆಳಿದ. ಅಲ್ಲಿ ಅನೇಕ ಯುಗಗಳವರೆಗೆ ಇದ್ದು ಸ್ವರ್ಗ ಸುಖ ಸಾಮ್ರಾಜ್ಯವನ್ನೆಲ್ಲ ಸೂರೆಗೊಂಡು ಕೊನೆಗೆ ತನ್ನ ಪಟ್ಟಮಹಿಷಿಯಾದ ವಿಜಯಯೊಂದಿಗೆ ವೈಕುಂಠ ಲೋಕಕ್ಕೆ ಪ್ರಯಾಣ ಮಾಡಿದ.

ಹೀಗೆ ಗಂಗಾ ತೀರ ಯಾತ್ರೆ ಕೈಕೊಂಡವರು ದಾರಿಯಲ್ಲಿಯೇ ದೇಹಪಾತನಾಗಿ ಮರಣ ಹೊಂದಿದರೆ ಎಂಥ ಫಲ ಬರಬಹುದು ಎಂಬುದನ್ನು ನಾನು ನಿಮಗೆ ದೃಷ್ಟಾಂತಪೂರ್ವವಾಗಿ ಹೇಳಿದೆ. ಗಂಗಾತೀರಕ್ಕೆ ಹೋಗಲಿಕ್ಕೆ ಯಾವ ಕಾಲದ ನಿಯಮವೂ ಇಲ್ಲ. ಬೇಕಾದಾಗ ಹೋಗಿ ಗಂಗೆಯಲ್ಲಿ ಸ್ನಾನ ಮಾಡಿದರೆ ಮಾನವರು ಅಕ್ಷಯವಾದ ಪುಣ್ಯವನ್ನು ಹೊಂದುತ್ತಾರೆ.

**ವಿಚಾರ್ಯ ಸರ್ವಶಾಸ್ತ್ರಾಣಿ ತ್ವದೀಯಾನಿ ಮಯೋಚ್ಯತೇ**
**ಗಂಗಾಂಭಸಿ ಸಕೃತ್‌ಸ್ನಾತ್ವಾ ಮೋಕ್ಷಮಾಪ್ನೋತಿ ಮಾನವಃ ॥**

ನಿನ್ನ ಎಲ್ಲ ಶಾಸ್ತ್ರಗಳನ್ನು ವಿಚಾರ ಮಾಡಿಯೇ ನಾನು ಹೇಳುತ್ತಿದ್ದೇನೆ. ಗಂಗೆಯ ನೀರಿನಲ್ಲಿ ಒಮ್ಮೆ ಸ್ನಾನ ಮಾಡಿದರೆ ಮನುಷ್ಯ ಮುಕ್ತಿಯನ್ನೇ ಹೊಂದುತ್ತಾನೆ. ಅಷ್ಟೇ ಅಲ್ಲ ಗಂಗೆಯ ನಾಮವನ್ನು ನೆನೆಯುತ್ತ ಬಾವಿಯ ಮೇಲಾಗಲೀ ಬಚ್ಚಲ ಮನೆಯಲ್ಲಾಗಲೀ ಎಲ್ಲಿಯಾದರೂ ಸ್ನಾನ ಮಾಡಿದರೆ ಮಾನವನು ಗೋಹತ್ಯೆ ವಿಪ್ರಹತ್ಯೆ ಮೊದಲಾದ ಸರ್ವಪಾಪಗಳಿಂದ ಮುಕ್ತನಾಗಿ ಎಲ್ಲರ ದುಃಖ ಹಾಗೂ ಸಂಕಟಗಳನ್ನು ಪರಿಹರಿಸುವ ಗಂಗೆಯ ಪ್ರಭಾವದಿಂದ ಗಂಗೆಯ ಪ್ರಸಾದದಿಂದ ಸರ್ವವಿಧವಾದ ಸುಖವನ್ನು ನೀಡುವ ವಿಷ್ಣುವಿನ ಪಟ್ಟಣವಾದ ವೈಕುಂಠಕ್ಕೆ ಹೋಗುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಗಂಗಾ ಮಹಾತ್ಮ್ಯ ಎಂಬ ಒಂಬತ್ತನೇಯ ಅಧ್ಯಾಯ ಮುಗಿದುದು*



## ಮಾಘಾದಿ ಮಾಸಗಳಲ್ಲಿ ವಿಷ್ಣುಪೂಜೆಯ ವಿಧಾನ ಮತ್ತು ಅದರ ಫಲ

ಅಧ್ಯಾಯ - ೧೦

**ಜೈಮಿನಿ:-** ಗುರುಗಳೇ, ತಾವು ನನಗೆ ಗಂಗೆಯ ಮಹಿಮೆಯನ್ನು ಹೇಳಿದಿರಿ. ಅದನ್ನು ನಿಮ್ಮ ಅನುಗ್ರಹದಿಂದ ನಾನು ಚೆನ್ನಾಗಿ ತಿಳಿದುಕೊಂಡೆ. ಆದರೆ ಈಗ ನಾನು ತಮ್ಮ ಮುಖದಿಂದ ವಿಷ್ಣುಪೂಜೆಯ ವಿಧಾನವನ್ನೂ ಫಲವನ್ನೂ ಕೇಳಬೇಕು. ಎಂದು ಬಯಸುತ್ತಿದ್ದೇನೆ.

**ವ್ಯಾಸ:-** ಮಾಘವೇ ಮೊದಲಾದ ಹನ್ನೆರಡು ತಿಂಗಳಲ್ಲಿಯೂ ವಿಧಿಪೂರ್ವಕವಾಗಿ ವಿಷ್ಣುವಿನ ಪೂಜೆಯನ್ನು ಮಾಡತಕ್ಕದ್ದು. ಅದರ ವಿಧಾನವನ್ನು ಹೇಳುತ್ತೇನೆ ಕೇಳು. ಮಾಘಮಾಸ ಬಂದಾಗ ಮಾನವರು ಮಾಂಸ ಹಾಗೂ ಮೈಥುನವನ್ನು ತ್ಯಜಿಸಬೇಕು. ಎಳ್ಳು, ಎರಡು ಹೊತ್ತು ಊಟ ಹೆರವರ ಅನ್ನ ಹಾಗೂ ಎಣ್ಣೆ ಇವಿಷ್ಟನ್ನು ಮಾಘಮಾಸದಲ್ಲಿ ತಿನ್ನಬಾರದು. ಬೆಳಿಗ್ಗೆ ಎದ್ದಕೂಡಲೇ ಸ್ನಾನವನ್ನು ಮಾಡಬೇಕು. ಶುಭ್ರವಸ್ತ್ರವನ್ನು ಉಟ್ಟು ಪಂಚಮಹಾಯಜ್ಞಗಳನ್ನು ಮಾಡಿ ವಿಷ್ಣುವಿನ ಪೂಜೆಯನ್ನು ಪ್ರಾರಂಭಿಸಬೇಕು.

ಬೆಚ್ಚಗಿನನೀರು, ಚಂದನ, ಮುಂತಾದವುಗಳಿಂದ ವೇದೋಕ್ತ ಮಂತ್ರಗಳನ್ನು ಹೇಳುತ್ತ ವಿಷ್ಣುವಿಗೆ ಸ್ನಾನ ಮಾಡಿಸಬೇಕು. ಅನಂತರ ಶುಭ್ರವಾದ ವಸ್ತ್ರದಿಂದ ಒರಸಬೇಕು. ಮಾಘಮಾಸದಲ್ಲಿ ದೇವರಿಗೆ ಹಾಲಿನಿಂದ, ತೆಂಗಿನಕಾಯಿಯ ಎಳೆ ನೀರಿನಿಂದ ಪೂಜೆ ಮಾಡಿದರೆ ವಿಶೇಷ ಪುಣ್ಯ. ಮಾಘ ಶುಕ್ಲ ಪಂಚಮಿ, ಏಕಾದಶಿ ದಿನಗಳಲ್ಲಿ ವಿಶೇಷ ಪೂಜೆ ಮಾಡಬೇಕು. ಪ್ರತಿದಿನವೂ ಪಾಯಸ ನೈವೇದ್ಯ ಇಡಬೇಕು. ಚಂಪಕ ಪುಷ್ಪ (ಸಂಪಿಗೆ ಹೂ)ಗಳಿಂದ ಹರಿಪೂಜೆ ಮಾಘದಲ್ಲಿ ವಿಶೇಷ ಪುಣ್ಯಪ್ರದ. ಯೋಗ್ಯತೆಯಿದ್ದವರು ಸಂಪಗಿಯ ಬಂಗಾರದ ಹೂಗಳನ್ನು ಮಾಡಿಸಿ ದೇವರಿಗೆ ಏರಿಸಬೇಕು. ಒಂದು ಬಂಗಾರದ ಸಂಪಿಗೆ ಹೂವನ್ನು ಹರಿಗೆ ಏರಿಸಿ ಪೂಜೆ ಮಾಡಿದರೆ ಮೇರು ಪರ್ವತದಷ್ಟು ಬಂಗಾರವನ್ನು ದಾನ ಮಾಡಿದ ಪುಣ್ಯವು ಬರುವದು. ಅದರಂತೆ ಕೇವಲ ಸಂಪಿಗೆ ಹೂವಿನಿಂದ ಮಾಡಿದ ಹರಿಯ ಪೂಜೆಯಿಂದಲೂ ವಿಶೇಷ ಪುಣ್ಯವುಂಟು. ಈ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಆರ್ಯಾವರ್ತದಲ್ಲಿ ಸುವರ್ಣ ಎಂಬ ಒಬ್ಬ ಬಲಿಷ್ಠನಾದ ರಾಜ ಇರುತ್ತಿದ್ದ. ಅವನಿಗೆ ಶಾಸ್ತ್ರಗಳಲ್ಲಿ ನಿರತಿಶಯವಾದ ನೈಪುಣ್ಯ ಇದ್ದಿತು. ಆದರೆ ಅಷ್ಟೇ ಗರ್ವವೂ ತುಂಬಿತ್ತು. ವಿದ್ಯೆ, ವಯಸ್ಸು, ವೈಭವ, ರಾಜ್ಯದ ಅಧಿಕಾರ ಇವು ನಾಲ್ಕೂ ಕೂಡಿ ಆ ಮಹಾರಾಜನ ಬುದ್ಧಿಯನ್ನು ಕೆಡಿಸಿಬಿಟ್ಟವು. ಗರ್ವಾಂಧನಾದ ಅವನು ಯಾವಾಗಲೂ ಪಾಪಕಾರ್ಯಗಳಲ್ಲಿಯೇ ಆಸಕ್ತ ಆದ. ಹಣದ ಆಶೆ ಅವನನ್ನು ಹಾದಿ ತಪ್ಪಿಸಿತು. ಸಜ್ಜನರ ಸುಲಿಗೆ ಅನ್ಯಾಯದ ಗಳಿಕೆಯಿಂದ ಶೇಖರಿತವಾದ ಹಣವನ್ನೆಲ್ಲ ಹಾಡು, ಕುಣಿತ, ಕುಡಿತ, ಮೊದಲಾದವುಗಳಲ್ಲಿ ಪೋಲು ಮಾಡಿದ ಆ ಸುವರ್ಣದೊರೆ. ಒಂದು ಯಜ್ಞವನ್ನೂ ಮಾಡಲಿಲ್ಲ. ದಾನವನ್ನು ನೀಡಲಿಲ್ಲ. ಬಂಧು ಬಳಗವನ್ನು ಪೋಷಿಸಲಿಲ್ಲ. ದೇವಬ್ರಾಹ್ಮಣರನ್ನು ಸಂತೋಷಿಸಲಿಲ್ಲ. ಯಾಚಕರಿಗೆ ಒಂದು ಕಾಸನ್ನೂ ಕೊಡಲಿಲ್ಲ. ಅತಿಥಿಗಳನ್ನು ಪೂಜಿಸಲಿಲ್ಲ.

ಅವನ ಮನಸ್ಸು ಕಡಿವಾಣ ಇಲ್ಲದ ಕುದುರೆಯಂತೆ ಎತ್ತೆತ್ತಲೋ ಹರಿದಾಡಿತು. ಕಾಮ ಕುಣಿಸಿದಂತೆ ಹೆಜ್ಜೆ ಹಾಕಿತು. ಕಂಡ ಹೆಣ್ಣಿನ ಕಣ್ಣು ಸನ್ನೆಗೆ ತಕ್ಕಂತೆ ಕುಣಿಯ ತೊಡಗಿದ ಆ ಸುವರ್ಣ ಸಮ್ರಾಟ. ಹಾದಿತಪ್ಪಿದ ಹೃದಯ, ವೇಶ್ಯೆಯರ ಮನೆಗಳಿಗೂ ಎಳೆಸಿತು.

ಒಂದು ದಿನ ಕಾಮಾಂಧನಾದ ಆ ರಾಜ, ರಾತ್ರಿ ಕಾಲದಲ್ಲಿ ಎಜ್ಜಲಾ ಎಂಬ ವೇಶ್ಯೆಯ ಮನೆಗೆ ಹೋದ. ರಾಜ್ಯದ ಅರಸನೇ ತನ್ನನ್ನು ಅರಸಿಕೊಂಡು ಬಂದುದು ನೋಡಿ ಹೆಮ್ಮೆಯೆನಿಸಿತು, ಆ ಹಾದಿಯ ಹೆಣ್ಣಿಗೆ. ಮಂಚದಿಂದ ಎದ್ದು ಮಿಂಚಿನ ಮಾರುತಿಯಂತಿದ್ದ ಆ ಮಹಿಳೆ ಮಹಾರಾಜನ ಪಾದ ಮುಟ್ಟಿ ವಂದನೆ ಮಾಡಿದಳು. ಬಂಗಾರದ ಸೊಂಡಿ ಮಿಳ್ಳಿಯಲ್ಲಿ ನೀರನ್ನು ತಂದು ದೊರೆಯ ಅಡಿದಾವರೆಗಳನ್ನು ತನ್ನ ತಾವರೆಗೈಯಿಂದಲೇ ತೊಳೆದಳು. ತೋಳುಗಳಿಂದ ತಬ್ಬಿಕೊಂಡು ಮಂಚದ ಮೇಲೆ ಕೂಡಿಸಿದಳು. ಅವಳ ಪ್ರೇಮ ರಸಧಾರೆಯಿಂದ ಎಳೆಯಲ್ಪಟ್ಟ ರಾಜನು ಅವಳ ಪರ್ಯಂಕದಲ್ಲಿಯೇ ಪವಡಿಸಿದ. ಹರೆಯದ ಸಿರಿಯಿಂದ ಸೌಂದರ್ಯವನ್ನು ಸೂಸುವ ಆ ತರಳೆಯು ಮುಗುಳುನಗೆ ಬೀರುತ್ತ ಆ ಮಹರಾಜನಿಗೆ ತನ ಕೈಯಿಂದಲೇ ಕೆಲವು ಸಂಪಿಗೆ ಹೂಗಳನ್ನೂ ಒಂದು ಚಂಪಕ ಮಾಲೆಯನ್ನೂ ಕೊಟ್ಟಳು. ಅವಳು ಕೊಟ್ಟ ಸಂಪಿಗೆ ಮಾಲೆಯಲ್ಲಿಯ ಒಂದು ಹೂ ಉದುರಿ ಬಿದ್ದಿತು. ನೆಲದ ಮೇಲೆ ಬಿದ್ದ ಕುಸುಮದ ಸುಗಂಧ ದಶದಿಕ್ಕುಗಳನ್ನೇ ವ್ಯಾಪಿಸಿತು. ಉರುಳಿ ಬಿದ್ದ ಆ ಹೂವನ್ನು ನೋಡಿ ಅವಸರದಿಂದ ಮಹರಾಜನು 'ಓಂ ನಮೋ ನಾರಾಯಣಾಯ' ಎಂದು ಗಡಿಬಿಡಿಯಿಂದ ನುಡಿದ. ಮಾಲೆಯಿಂದ ಕಳಚಿ ಬೀಳುವ ಆ ಚಂಪಕ ಪುಷ್ಪಕವನ್ನು ನಾರಾಯಣನಿಗೆ ಸಮರ್ಪಿಸಿದ.

ಬಂಗಾರದ ಪುಷ್ಪದ ಪ್ರದಾನದಿಂದ ಆ ರಾಜನ ಪಾಪಗಳೆಲ್ಲವೂ ಕೂಡಲೆ ನಷ್ಟವಾದವು. ಮಹಾರಾಜನ ಈ ವೇಶ್ಯಾಗಮನದ ದುರ್ವ್ಯಸನವನ್ನು ಕಂಡು ಕೇರಳಿ ಹೋಗಿದ್ದರು ಅವನ ರಾಜ್ಯದ ಹಳ್ಳಿಯ ಜನರು. ''ತಮ್ಮ ರಾಜ್ಯದ ಸಿಂಹಾಸನದ ಮೇಲೆ ನೀತಿ ಭ್ರಷ್ಟನಾದ ಓರ್ವ ವೇಶ್ಯಾಲಂಪಟ ರಾಜ ಕುಳಿತು ತಮ್ಮನ್ನು ಅಧಿಕಾರದ ದರ್ಪದಿಂದ ಸುಲಿಗೆ ಮಾಡುತ್ತಿದ್ದಾನೆ'' ಎಂದು ತಿಳಿದು ಆ ಜನರೆಲ್ಲರೂ ರೊಚ್ಚಿಗೆದ್ದು ಆ ವೇಶ್ಯೆಯ ಮನೆಗೇ ಬಂದರು. ಆ ಬೆಲೆವೆಣ್ಣಿನ ಮನೆಯ ಮಂಚದ ಮೇಲೆ ಕಾಮಕೀಟವಾಗಿ ಹೊರಳಾಡುತ್ತಿರುವ ಆ ಕಾಮಿ ಲಂಪಟ ರಾಜನನ್ನು ಹೊರಗೆ ಎಳೆದು ಹೊಡೆದು ಸಂಹರಿಸಿಬಿಟ್ಟರು.

ಕೂಡಲೇ ಆ ಪಾಪಿ ಅರಸನನ್ನು ಕರೆದುಕೊಂಡು ಬರಲು ಕುಪಿತನಾದ ಯಮ ದೂತರನ್ನು ಕಳಿಸಿದ. ಕೈಯಲ್ಲಿ ಮೃತ್ಯುಪಾಶ ಹಾಗೂ ಮೃತ್ಯುದಂಡ ಹಿಡಿದು ಬಂದ ಯಮದೂತರು ಆ ರಾಜನನ್ನು ತಮ್ಮ ಯಮಲೋಕಕ್ಕೆ ಒಯ್ಯಲು ಪ್ರಯತ್ನ ಮಾಡಿದರು. ಅಷ್ಟರಲ್ಲಿ ಶಂಖ, ಚಕ್ರ, ಗದಾ, ಪದ್ಮ ಮೊದಲಾದ ಹರಿಯ ಲಾಂಛನಗಳನ್ನು ಧರಿಸಿದ ವಿಷ್ಣುವಿನ ಕಿಂಕರರು ಗರುಡಾರೂಢರಾಗಿ ಬಂದರು, ಆ ರಾಜನನ್ನು ವೈಕುಂಠಕ್ಕೆ ಒಯ್ಯಲು. ಅವರು ಬರುವದರೊಳಗಾಗಿ ಯಮದೂತರು ಮೃತ್ಯುಪಾಶಗಳಿಂದ ಬಿಗಿದು ಬಿಟ್ಟಿದ್ದರು, ಸುವರ್ಣ ರಾಜನನ್ನು. ಅದನ್ನು ಕಂಡು ವಿಷ್ಣುದೂತರಿಗೆ ಕೋಪ ಬಂದಿತು. ಅವರು ತಮ್ಮ ಚಕ್ರಗದೆಗಳಿಂದ ಯಮದೂತರಿಗೆ ಹೊಡೆದು ಅಟ್ಟಿ, ಆ ಸುವರ್ಣ ರಾಜನನ್ನು ಬಿಡಿಸಿ ತಮ್ಮ ದಿವ್ಯವಾದ ರಥದಲ್ಲಿ ಕೂಡಿಸಿ ಕೊಂಡರು. ಆ ರಾಜ ತುಳಸಿ ಮಾಲೆ. ಪೀತಾಂಬರ,

ಬೇರೆ ಬೇರೆ ಬಂಗಾರದ ಅಲಂಕಾರಗಳಿಂದ ಅಲಂಕೃತನಾಗಿ ಎಲ್ಲ ವೇದ ವೇದಾಂತ ಪಾರಂಗತ ಮುನಿಗಳು ಸ್ತೋತ್ರ ಮಾಡುತ್ತಿರುವಂತೆಯೇ ವೈಕುಂಠಲೋಕಕ್ಕೆ ತೆರಳಿದ.

ಆ ವೈಕುಂಠದಲ್ಲಿ ಶ್ರೀಹರಿಯು ತನ್ನ ನೀಳದೋಳುಗಳಿಂದ ಆಲಿಂಗಿಸಿಕೊಂಡು ಪ್ರೀತಿಯಿಂದ ನುಡಿದ.

**ಮಹಾವಿಷ್ಣು:-** "ಓಂ ನಮೋ ನಾರಾಯಣಾಯ" ಎಂಬ ಮಂತ್ರವನ್ನು ಒಂದು ಸಲವಾದರೂ ಭಕ್ತಿಯಿಂದ ನುಡಿದ ಹಾಗೂ ನಾರಾಯಣ ನಾಮವನ್ನು ನೆನೆದ ನನ್ನ ಭಕ್ತನನ್ನು ನಾನು ಸರ್ವ ರೀತಿಯಿಂದಲೂ ಲಾಲಿಸಿ ಪಾಲಿಸಿ ಪೋಷಣೆಗೈಯುತ್ತೇನೆ. ಅವನು ನನ್ನ ಪುತ್ರನಿದ್ದಂತೆ. ನಾರಾಯಣನ ನಾಮಸ್ಮರಣೆಗೈಯ್ದು ಆ ಮೂಲ ಮಂತ್ರದಿಂದ ಪುಷ್ಪಾರ್ಚನೆ ಮಾಡಿದ ನೀನೂ ನನ್ನ ಅವಿಚ್ಛಿನ್ನಭಕ್ತ. ನಿನ್ನ ಮನೋರಥ ಏನಿದೆ. ಹೇಳು ಅದೆಲ್ಲವನ್ನೂ ಪೂರ್ಣಮಾಡುತ್ತೇನೆ.

**ಮಹಾರಾಜ:-** ಭಗವನ್, ನೀನು ದಯಾ ಸಮುದ್ರನು, ನನಗೆ ಎಲ್ಲವನ್ನು ಕೊಟ್ಟಿರುವೆ. ನಾನು ಮಹಾಪಾಪಿಯಾಗಿದ್ದರೂ ದಿವ್ಯ ಸ್ಥಾನವನ್ನು ನನಗೆ ಕರುಣಿಸಿರುವೆ. ಇನ್ನು ಮೇಲೆ ನನಗೆ ನಿನ್ನಲ್ಲಿ ಭಕ್ತಿ ಹೊರತು ಇನ್ನೇನೂ ಬೇಡ.

ಮಹಾರಾಜನ ಈ ಭಕ್ತಿಯುಕ್ತವಾದ ಮಾತಿನಿಂದ ಸಂತುಷ್ಟನಾದ ಕಮಲಾಪತಿಯು ಅವನನ್ನು ಅಮುಕ್ತ ಸ್ಥಾನದಲ್ಲಿರಿಸಿ ಮೌಕ್ತಿಕ ಆನಂದದ ಸವಿಯನ್ನು ತುಸು ತೋರಿಸಿ ಕೆಲವು ಕಾಲದ ನಂತರ ಅವನನ್ನು ಭೂಲೋಕದಲ್ಲಿ ಚಕ್ರವರ್ತಿಯನ್ನಾಗಿ ಹುಟ್ಟಿಸಿದ. ಆದರೂ ಧರ್ಮಾತ್ಮನಾದ ಆ ರಾಜನು ಸುಂದರವಾದ ಸಂಪಿಗೆ ಹೂಗಳಿಂದ ಭಗವಂತನನ್ನು ಪೂಜಿಸಿ, ಅವಸಾನಕಾಲದಲ್ಲಿ ಗಂಗೆ ನೀರಿನಲ್ಲಿ ಮರಣ ಹೊಂದಿದ. ಆದರಿಂದ ನಿಜವಾದ ಮೋಕ್ಷವನ್ನು ಸುಖವನ್ನು ಚಕ್ರಪಾಣಿಯ ಪ್ರಸಾದದಿಂದ ಪಡೆದು ಧನ್ಯನಾದ.

**ವ್ಯಾಸ:-** ಜೈಮಿನಿಯೆ, ನಿನಗೆ ನಾನು ಸಂಪಿಗೆಯ ಪುಷ್ಪದಿಂದ ಶ್ರೀಹರಿಯ ಪೂಜೆ ಮಾಡುವದರ ಫಲವನ್ನು ಹೇಳಿದ್ದೇನೆ. ಎಂಥ ಪಾಪಿ ಮನುಷ್ಯನಾಗಿದ್ದರೂ ಚಂಪಕ ಪುಷ್ಪದಿಂದ ಶ್ರೀಹರಿಯನ್ನು ಪೂಜಿಸಿದರೆ ಮುಕ್ತಿಯೋಗ್ಯನು ಆಗುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಮಾಘಾದಿ ಮಾಸಗಳಲ್ಲಿ ವಿಷ್ಣು ಪೂಜೆಯ ವಿಧಾನ ಮತ್ತು ಅದರ ಫಲ*
*ಎಂಬ ಹತ್ತನೇಯ ಅಧ್ಯಾಯ ಮುಗಿದುದು*



**ವೇದವ್ಯಾಸ:-** ಜೈಮಿನಿ ಮುನಿಯೇ ಯಾವ ವಿಧಿಯಿಂದ ಶ್ರೀಹರಿಯನ್ನು ಪೂಜಿಸಬೇಕು. ಹೇಳುತ್ತೇನೆ ಕೇಳು ! ಪ್ರಾತಃಕಾಲಲ್ಲಿ ಹಾಸಿಗೆಯಿಂದ ಎದ್ದು ಮಾನವನು ತಂಬಿಗೆ ಅಥವಾ ಜಲಪಾತ್ರೆ ಹಿಡಿದು ಊರಬಿಟ್ಟು ಹೊರಗೆ ದೂರ ಹೋಗಬೇಕು. ಬಟ್ಟೆಯನ್ನು ತಲೆಗೆ ಸುತ್ತಿರಬೇಕು. ಉತ್ತರದಿಕ್ಕಿನಲ್ಲಿಯಜ್ಞೋಪವೀತವನ್ನು ಕಿವಿಗೆ ಸುತ್ತಿ ಕುಳಿತು ಮೌನದಿಂದ ಮಲವಿಸರ್ಜನೆ ಮಾಡಬೇಕು. ದೇವರ ಗುಡಿಯ ಪರಿಸರ ಬೀದಿ, ದನದಕೊಟ್ಟಿಗೆ, ಹರಗಿದ ಹೊಲ ಕಟ್ಟಡಗಳ ಅಂಗಳ, ನದಿಯ ದಂಡೆಯ ಮೇಲಿನ ಮಳಲು, ಕೆರೆ, ಹೊಂಡ, ಬಾವಿಗಳಿಗೆ ನೀರು ಹರಿದು ಬರುವ ಮುಂತಾದ ಸ್ಥಳಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡಬಾರದು. ಮೃತ್ತಿಕಾಶೌಚವನ್ನು ಮಾಡಿಕೊಳ್ಳಲಿಕ್ಕೆ ಇಲಿಗಳು ಅಗಿದ ಮಣ್ಣನ್ನಾಗಲೀ ಹುತ್ತಿನಲ್ಲಿಯ ಮಣ್ಣಾನ್ನಾಗಲಿ ನೇಗಿಲ ಹೊಡೆದ ಮಣ್ಣನ್ನಾಗಲೀ ತೆಗೆದುಕೊಳ್ಳಬಾರದು. ರಾತ್ರಿ ವೇಳೆಯಲ್ಲಿ ದಕ್ಷಿಣಕ್ಕೆ ಮುಖ ಮಾಡಿ, ತಲೆಗೆ ವಸ್ತ್ರವನ್ನು ಸುತ್ತಿಕೊಂಡು ಶೌಚವನ್ನು ಮಾಡಬೇಕು. ಅನಂತರ ನೀರಿನಿಂದ ಗುದಪ್ರಕ್ಷಾಲನವನ್ನು ಮಾಡಿಕೊಳ್ಳಬೇಕು ಮೂರು ಸಲ ಗುದದ್ವಾರಕ್ಕೂ, ಒಂದು ಸಲ ಲಿಂಗಕ್ಕೂ ಮತ್ತೆ ಮತ್ತೆ ನೀರಿನಿಂದ ತೊಳೆದುಕೊಳ್ಳಬೇಕು. ಎಡಗೈಗೆ ಏಳು ಸಲ ಅನಂತರ ಎರಡೂ ಕೈಗಳಿಗೆ ಹತ್ತು ಹತ್ತು ಸಲ ಮಣ್ಣು ಹಚ್ಚಿ ನೀರಿನಿಂದ ತೊಳೆಯಬೇಕು. ಎರಡೂ ಕಾಲುಗಳಿಗೆ ಆರು ಆರು ಸಲ ಮಣ್ಣು ಹಚ್ಚಿ ನೀರಿನಿಂದ ತೊಳೆಯಬೇಕು.

ಅನಂತರ ನಡುವಿನ ಬೆರಳು ಹಾಗು ಅನಾಮಿಕೆಗಳಿಂದ ಹಲ್ಲು ತಿಕ್ಕಿಕೊಳ್ಳಬೇಕು. ನಾಲಿಗೆಯನ್ನು ತೊಳೆದುಕೊಳ್ಳಬೇಕು. ದಕ್ಷಿಣಕ್ಕೆ ಮುಖ ಮಾಡಿ ಹಲ್ಲನ್ನು ತಿಕ್ಕಬಾರದು. ತೋರು ಬೆರಳು (ತರ್ಜನಿ)ಯಿಂದ ಹಲ್ಲನ್ನು ತಿಕ್ಕಬಾರದು. ಆಲ, ಅರಳೆ, ನೆಲ್ಲಿ, ಚೀಲದ ಮರದ ಕಡ್ಡಿಯಿಂದ ಹಲ್ಲನ್ನು ತಿಕ್ಕಬಾರದು. ಸ್ನಾನ ಮಾಡುವ ಕಾಲದಲ್ಲಿಯಾಗಲೀ, ಮಧ್ಯಾಹ್ನ, ಸಾಯಂಕಾಲದಲ್ಲಿಯಾಗಲೀ ನಡುನೀರಿನಲ್ಲಿಯಾಗಲೀ ಹಲ್ಲು ಉಜ್ಜಬಾರದು. ಪ್ರಾತಃಕಾಲದಲ್ಲಿಯೇ ಉಜ್ಜಬೇಕು. ಉಪವಾಸದದಿನ ಹಾಗು ಶ್ರಾದ್ಧದ ದಿನ ಬಟ್ಟೆಯ ತುಂಡಿನಿಂದ ದಾವನವನ್ನು ಮಾಡಬೇಕು.

ಹೀಗೆ ಶೌಚ ಹಾಗು ದಂತ ಧಾವನಗಳನ್ನು ಮನೆಯ ಹೊರೆಗೆ ಮುಗಿಸಿಕೊಂಡು ಮನೆಗೆ ಬಂದು ರಾತ್ರಿಕಾಲದಲ್ಲಿ ಉಟ್ಟ ಬಟ್ಟೆಯನ್ನು ಬಿಟ್ಟುಬಿಡಬೇಕು. ಅನಂತರ ದೇವರ ಕೋಣೆಯ ಬಾಗಿಲ ಬಳಿಯಲ್ಲಿ ಕುಳಿತು ನಾರಾಯಣನ ನಾಮಸ್ಮರಣೆ ಮಾಡಬೇಕು.

**ರಾಮಶ್ಯಾಮತನೋ ವಿಷ್ಣು ನಾರಾಯಣ ದಯಾಮಯ ।**
**ಜನಾರ್ದನ ಜಗದ್ಧಾಮ ಪಾಪಂಮೇ ಹರಕೇಶವ ॥**

**ಪೀತಾಂಬರ ಧರಾನಂತ ಪದ್ಮನಾಭ ಜಗನ್ಮಯ ।**
**ವಾಮನ ಪ್ರಣತಸ್ಯೇಶ ವಿಭೋ ತ್ವಂ ಶರಣಂ ಮಮ ॥**

**ದಾಮೋದರ ಯದುಶ್ರೇಷ್ಠ ಶ್ರೀಕೃಷ್ಣ ಕರುಣಾರ್ಣವ್ ।**
**ಕಮಲೇಕ್ಷಣ ದೇವೇಂದ್ರ ವಾಸುದೇವ ಕೃಪಾಂ ಕುರು ॥**

**ಗರುಡಧ್ವಜ ಗೋವಿಂದ ವಿಶ್ವಂಭರ ಗದಾಧರ ।**
**ಶಂಖಪಾಣೆ ಚಕ್ರಪಾಣೇ ಪದ್ಮಹಸ್ತ ಹರಾಽಪದಃ ॥**

**ಲಕ್ಷ್ಮೀವಿಲಾಸ ವೈಕುಂಠ ಹೃಷಿಕೇಶ ಸುರೋತ್ತಮ ।**
**ಪುರುಷೋತ್ತಮ ಕಂಸಾರೇ ಕೈಟಭಾರೇ ಭಯಂ ಹರ ॥**

**ಶ್ರೀಪತೇ ಶ್ರೀಧರ ವಿಭೋ ಶ್ರೀದ ಶ್ರೀಕರ ಮಾಧವ ।**
**ಪರಂಬ್ರಹ್ಮ ಪರಂಧಾಮ ಶರಣಂ ಮೇ ಭವಾವ್ಯಯ ॥**

**ಈಶ್ವರ ಶ್ರೀಪತೇ ಕೃಷ್ಣ ದೇವಕೀ ನಂದನ ಪ್ರಭೋ ।**
**ನಿದ್ರಾಂ ಮುಂಚ ಜಗನ್ನಾಥ ಪ್ರಭಾತ ಸಮಯೋಽಭವತ್ ॥**

ಹೀಗೆ ಕೈ ಜೋಡಿಸಿ ಭಗವನ್ನಾಮಸ್ಮರಣೆಗೈದು "ಬೆಳಗಾಯಿತು. ಜಗನ್ನಾಥನೇ ನಿದ್ದೆ ಬಿಟ್ಟು ಏಳು" ಎಂದು ಪ್ರಾರ್ಥಿಸಬೇಕು. ಅನಂತರ ತಾನು ವಿಧಿಪೂರ್ವಕವಾಗಿ ಸ್ನಾನ ಮಾಡಿ ಬಂದು ಮುನ್ನಿನ ದಿನದ ನಿರ್ಮಾಲ್ಯ ಗಂಧವನ್ನೂ, ತುಳಸಿಯನ್ನು ವಸ್ತ್ರವನ್ನು ತೆಗೆಯಬೇಕು. ಅನಂತರ ದೇವಾಲಯದ, ಅಥವಾ ಮನೆಯ ದೇವರ ಕೋಣೆಯನ್ನು ತಾನೇ ಮೆಲ್ಲ ಮೆಲ್ಲನೆ ಪೊರಕೆಯಿಂದ ಗುಡಿಸಬೇಕು. ದೇವರ ಕೋಣೆಯ ಕಸ ಗುಡಿಸಿದವನು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತನಾಗುತ್ತಾನೆ. ಬಳಿಕ ಗೋಮಯದಿಂದ ಗುಡಿಯ ಗರ್ಭಗೃಹವನ್ನು ಹಾಗು ಮುಂದಿನ ಸಭಾಗೃಹವನ್ನು ಸಾರಿಸಬೇಕು. ದೇವರ ಪೂಜೆಯ ವಸ್ತುಗಳನ್ನು ಏಳು ಅಥವಾ ಮೂರು ಸಲ ತಾನೇ ತೊಳೆಯಬೇಕು.

**ಅಮ್ಲೇನ ತಾಮ್ರಪಾತ್ರಾಣಿ ಕಾಂಸ್ಯಪಾತ್ರಾಣಿ ಭಸ್ಮನಾ ।**
**ವಹ್ನಿನಾ ಲೋಹಪಾತ್ರಾಣಿ ಶುದ್ಧ್ಯಂತಿ ನಾತ್ರ ಸಂಶಯಃ ॥**

ತಾಮ್ರದ ಪಾತ್ರೆಗಳನ್ನು ಹುಣಿಸೇ ಹಣ್ಣಿನ ಹುಳಿಯಿಂದ ಶುದ್ಧೀಕರಿಸಬೇಕು. ಕಂಚಿನ ಪಾತ್ರೆಗಳನ್ನು ಬೂದಿಯಿಂದ ಶುದ್ಧೀಕರಿಸಬೇಕು. ಕಬ್ಬಿಣದ ಪಾತ್ರೆಗಳನ್ನು ಬೆಂಕಿಯಲ್ಲಿ ಹಾಕಿದಾಗ ಅವು ಎಷ್ಟು ಅಶುದ್ಧವಿದ್ದರೂ ಶುದ್ಧವಾಗುತ್ತವೆ. ಹೀಗೆ ಪೂಜಾದ್ರವ್ಯಗಳನ್ನೆಲ್ಲ ಪ್ರಯತ್ನದಿಂದ ತಿಕ್ಕಿ ತೊಳೆದು, ಸ್ನಾನದ ಸಲಕರಣೆಗಳನ್ನು ಹಿಡಿದು ಸ್ನಾನಕ್ಕಾಗಿ ನದಿ, ಬಾವಿ, ಸರೋವರಕ್ಕೆ ಹೋಗಬೇಕು. ಅಲ್ಲಿ ವಿಧಿಪೂರ್ವಕವಾಗಿ ಶಾಸ್ತ್ರೋಕ್ತ ಪದ್ಧತಿಯಿಂದ ತರ್ಪಣಾದಿಗಳನ್ನು ಕೊಟ್ಟು ನಾರಾಯಣನನ್ನು ಸ್ಮರಿಸುತ್ತಾ ಮನೆಗೆ ಬರಬೇಕು. ಮನೆಗೆ ಬಂದ ಬಳಿಕ ಮತ್ತೊಮ್ಮೆ ಕಾಲು ತೊಳೆದು ದೇವರ ಕೊಣೆಗೆ ಕಾಲು ಇಡಬೇಕು. ತನ್ನ ಎಡಗೈಯಿಂದ ಎರಡೂ ಕಾಲುಗಳನ್ನು ತೊಳೆದುಕೊಂಡು, ಹಾಗು ಎರಡೂ ಕೈಗಳನ್ನು ತೊಳೆದುಕೊಂಡು ದೇವರಕೋಣೆಯಲ್ಲಿ ಪ್ರವೇಶ ಮಾಡಬೇಕು. ಶುದ್ಧವಾದ ಮೃಗಚರ್ಮ, ವ್ಯಾಘ್ರಚರ್ಮ, ಬಟ್ಟೆಯ ಆಸನ, ದರ್ಭಾಸನ, ಅಥವಾ ಪುಷ್ಪಾಸನಗಳಲ್ಲಿ ಕುಳಿತು ದೇವರ ಪೂಜೆಯನ್ನು ಪ್ರಾರಂಭಿಸಬೇಕು. ಕಟ್ಟಿಗೆಯ ಆಸನದ ಮೇಲೆ ಕುಳಿತು ಪೂಜೆಯನ್ನು ಮಾಡಬಾರದು. ದೇವರ ಪೂಜೆಗೆ ಎಂದೂ ದಕ್ಷಿಣ ದಿಕ್ಕಿಗೆ ಮುಖ ಮಾಡಿಕೊಂಡು ಕುಳಿತುಕೊಳ್ಳಬಾರದು. ಅನಂತರ ಶಂಖದಲ್ಲಿ ನೀರು ಹಾಕಿಕೊಂಡು

ಶ್ರೀಪತಿಯಾದ ನಾರಾಯಣನನ್ನು ಪುರುಷಸೂಕ್ತದಿಂದ ಅಭಿಷೇಕ ಮಾಡಬೇಕು. ಶಂಖ ಇಲ್ಲದಿದ್ದರೆ ಗಿಂಡೆ, ಥಾಲಿ, ಮುಂತಾದವುಗಳಲ್ಲಿ ಸುಗಂಧೀ ನೀರು ತುಳಸೀಪತ್ರಗಳನ್ನು ಹಾಕಿ ದೇವರಿಗೆ ಅಭಿಷೇಕವನ್ನು ಮಾಡಿ ಆಸನದ ಮೇಲೆ ಭಗವಂತನನ್ನು ಕೂಡಿಸಿ ಸುಗಂಧಿ ಚಂದನದಿಂದ ಸರ್ವಾಂಗ ಲೇಪವನ್ನು ಮಾಡಬೇಕು. ತುಳಸೀಕಾಷ್ಠದಿಂದ ತೊಯ್ದು ತೆಗೆದ ಸ್ವಾದೋದಕದಿಂದಲೂ ಅಭಿಷೇಕ ಮಾಡಬೇಕು. ಅಭಿಷೇಕ ಅನಂತರ ಶುದ್ಧವಾದ ವಸ್ತ್ರದಿಂದ ವರಸಿ ಆಸನದ ಮೇಲೆ ಕೂಡಿಸಿ ಅರ್ಘ್ಯ ಪಾದ್ಯಾದಿಗಳನ್ನಿತ್ತು ಆವಾಹನೆಗೈದು ಶ್ರೀಗಂಧ ಚಂದನ ತುಳಸೀಕಾಷ್ಠಾದಿಗಳನ್ನು ತಿಕ್ಕಿ ತೆಗೆದ ಗಂಧವನ್ನು ದೇವರಿಗೆ ಲೇಪಿಸಬೇಕು. ತುಳಸಿಯ ಮಾಲೆಯನ್ನು ದೇವರ ಕೊರಳಲ್ಲಿ ಹಾಕಬೇಕು. ಪೌರಾಣಿಕ ಮಂತ್ರಗಳಿಂದ ದಿಗ್ಬಂಧನ ಮಾಡಬೇಕು.

**ಕೃಷ್ಣೋ ರಕ್ಷತು ಪೂರ್ವಸ್ಯಾಮಾಗ್ನೇಯ್ಯಾಂ ದೇವಕೀಸುತಃ ।**
**ಯಾಮ್ಯಾಂ ರಕ್ಷತು ದೈತ್ಯಾರಿರ್ನೈರ್ಋತ್ಯಾಂ ಮಧುಸೂದನಃ ॥**

**ವಿದಿಕ್ಷು ರಕ್ಷತು ಶ್ರೀಮಾನ್ ಊರ್ಧ್ವಂ ಚ ಶ್ರೀಧರಃ ಪ್ರಭುಃ ।**
**ಅಧೋ ರಕ್ಷತು ವಿಶ್ವಾತ್ಮಾ ಕೂರ್ಮಮೂರ್ತಿಃ ಕೃಪಾಮಯಃ ॥**

**ಯೇ ವಿಘ್ನಕಾರಕಾಃ ಸರ್ವೇ ಪೂಜಾಕಾಲೇ ಭವಂತಿ ಹಿ ।**
**ದೂರಂ ಗಚ್ಛಂತು ತೇ ಸರ್ವೇ ಹರಿನಾಮಾಸ್ತ್ರತಾಡಿತಃ ॥**

ಈ ಮಂತ್ರದಿಂದ ದಿಗ್ಬಂಧನವನ್ನೂ ಮಾಡಿ ಅನಂತರ ಕೈ ಮುಗಿದು

**ಮಯಾರಭ್ಯಾಂ ಇಮಾಂಪೂಜಾಂ ದೇವ ದೇವ ಜನಾರ್ದನ ।**
**ಸಿದ್ಧಿ ಪ್ರಾಪಯ ನಿರ್ವಿಘ್ನಂ ಪ್ರಸೀದ ಪರಮೇಶ್ವರ ॥**

ಎಂದು ಮಂತ್ರ ಹೇಳಿದ ಕೂಡಲೇ ಸಂಕಲ್ಪ ಮಾಡಬೇಕು. ಅನಂತರ ಅಂಗನ್ಯಾಸಾದಿಗಳನ್ನು ಮಾಡಿ ನಾರಾಯಣನನ್ನು ಮನಸ್ಸಿನಿಂದ ಧ್ಯಾನ ಮಾಡಬೇಕು.

**ನವೀನ ಮೇಘ ಸಂಕಾಶಂ ಪುಂಡಲೀಕ ನಿಭೇಕ್ಷಣಂ ।**
**ಪೀತಾಂಬರ ಧರಂ ದೇವಂ ಸ್ಮಿತಚಾರು ತರಾನನಂ ॥**

**ಕದಂಬ ಪುಷ್ಪ ಮಾಲಾಭಿಭೂಷಿತಂ ಸುಮಹಾಭುಜಂ ।**
**ಬರ್ಹಿ ಬರ್ಹ ಶ್ರೇಣಿಬದ್ಧ ಶಿಖಂಡಿಧೃತ ಕುಂಡಲಂ ॥**

**ವಂಶೀ ಮಧುರ ನಾ ದೇವ ಮೋಹಯಂತಂ ದಿಶೋದಶ ।**
**ಆವೃತಂ ಗೋಪನಾರೀಭಿಶ್ಚಾರುವೃಂದಾವನೇ ಸ್ಥಿತಂ ॥**

**ಏವಂ ಸಂಚಿಂತ್ಯ ಮನಸಾ ಗೋವಿಂದಂ ಸರ್ವಕಾಮದಂ ।**
**ತತಶ್ಚಾವಾಹನಂ ಕುರ್ಯಾತ್ ಭಕ್ತಿಭಾವೇನ ವೈಷ್ಣವಃ ॥**

ನೀರು ತುಂಬಿದ ಮೋಡದಂತೆ ನೀಲವರ್ಣದ ಪೀತಾಂಬರವನ್ನುಟ್ಟ, ತಾವರೆಗಣ್ಣಿನ ಮುಗುಳು ನಗೆ ಬೀರುವ, ಕದಂಬ ಹೂವಿನ ಮಾಲೆಯಿಂದ ಭೂಷಿತನಾದ ನವಿಲುಗರಿಯಿಂದ ಅಲಂಕೃತವಾದ ಶಿರೋಭರಣವುಳ್ಳ ಮಧುರ ಮುರಲೀನಾದದಿಂದ

ದಶದಿಕ್ಕುಗಳನ್ನೇ ಮೋಹಗೊಳಿಸುವ, ಸುಂದರವಾದ ವೃಂದಾವನದಲ್ಲಿ ಗೋಪಿಕಾ ಸ್ತ್ರೀಯರಿಂದ ಒಡಗೂಡಿಕೊಂಡು ಇರುವ ಭಕ್ತರ ಸರ್ವಾಭೀಷ್ಟಗಳನ್ನು ಪೂರ್ಣಮಾಡುವ ದೇವತೆಗಳಿಗೆ ಒಡೆಯನಾದ ಗೋವಿಂದನನ್ನು ಧ್ಯಾನ ಮಾಡಿ ಭಕ್ತಿಯಿಂದ ಅಲ್ಲಿ ಆವಾಹನೆಯನ್ನು ಮಾಡಬೇಕು. ಆವಾಹಿತನಾದ ಕೃಷ್ಣನಿಗೆ ಅರ್ಘ್ಯ ಪಾದ್ಯ ಆಚಮನ ಮುಂತಾದವುಗಳನ್ನು ನೀಡಬೇಕು. ಅನಂತರ ಎಳೆ ತುಳಸಿಯಿಂದ ಸುಗಂಧಿ ಪುಷ್ಪಗಳಿಂದಾಗಲೀ ದೇವಕೀ ಸುತನಾದ ಕೃಷ್ಣನನ್ನು ಪೂಜಿಸಬೇಕು. ಈ ಗಂಧಪುಷ್ಪ ತುಳಸಿದಳಗಳನ್ನು ದೇವರಿಗೆ ಏರಿಸುವಾಗ ಕೇಶವ ನಾರಾಯಣಾದಿ ಇಪ್ಪತ್ನಾಲ್ಕು ಭಗವನ್ನಾಮಗಳನ್ನು ಉಚ್ಚರಿಸಿ ಪುಷ್ಪ ಸಮರ್ಪಣೆ ಮಾಡಬೇಕು ಅನಂತರ

**ಮತ್ಸ್ಯಾಯ ನಮಃ**
**ಕೂರ್ಮಾಯ ನಮಃ**
**ವರಾಹಾಯ ನಮಃ**
**ನಾರಸಿಂಹಾಯ ನಮಃ**
**ವಾಮನಾಯ ನಮಃ**
**ಪರಶುರಾಮಾಯ ನಮಃ**
**ರಾಮಾಯ ನಮಃ**
**ಕೃಷ್ಣಾಯ ನಮಃ**
**ಬಲರಾಮಾಯ ನಮಃ**
**ಬುದ್ಧಾಯ ನಮಃ**
**ಕಲ್ಕಿನೇ ನಮಃ**

ಎಂದು ಭಗವಂತನ ನಾಮೋಚ್ಚಾರಣಪೂರ್ವಕವಾಗಿ ತುಳಸಿ ಪುಷ್ಪಾರ್ಚನೆಯನ್ನು ಮಾಡಬೇಕು. ಶ್ರೀಹರಿಯನ್ನು ಪೂಜೆ ಮಾಡಿದ ಬಳಿಕ ಅವನ ವಾಹನ ಹಾಗೂ ಲಾಂಚನಗಳನ್ನು ಕೂಡ ಪೂಜಿಸಬೇಕು.

ಓಂ ನಮೋ ಗರುಡಾಯ ಎಂದು ಮಂತ್ರವನ್ನು ಜಪಿಸಿ

**ನಮೋ ಭಗವತೇ ತುಭ್ಯಂ**
**ಗರುಡಾಖ್ಯಾಚ್ಯುತ ವಾಹನ**

ಎಂದು ಗರುಡನನ್ನು ಪೂಜಿಸಬೇಕು.

**ನಮಃ ಶಂಖಾಯ ಚಕ್ರಾಯ ಗದಾಯೈ ಚ ನಮೋ ನಮಃ**
**ನಮಃ ಪದ್ಮಾಯ ಖಡ್ಗಾಯ ನಂದಕಾಯ ನಮೋ ನಮಃ**

ಹೀಗೆ ಭಗವಂತನ ವಾಹನವಾದ ಗರುಡನನ್ನು ಮತ್ತು ವಿಷ್ಣುವಿನ ಆಯುಧ ಚಿಹ್ನಗಳಾದ ಶಂಖ ಚಕ್ರ ಗದಾ ಪದ್ಮ ನಂದಕಗಳನ್ನು ಪೂಜೆಗೈದು. ಅನಂತರ ಅಷ್ಟಾಕ್ಷರ ಮಂತ್ರವನ್ನು ಭಕ್ತಿಯಿಂದ ಜಪ ಮಾಡಿ ಬಗೆಬಗೆಯ ಅನ್ನವನ್ನು ಭಕ್ಷ್ಯಭೋಜ್ಯಗಳನ್ನು ಮಾಡಿ ಗೋವಿಂದನಿಗೆ ನೈವೇದ್ಯವನ್ನು ತೋರಿಸಬೇಕು. ಧೂಪ, ದೀಪ, ಮಂಗಳಾರತಿ ಮುಂತಾದವುಗಳನ್ನು ಭಕ್ತಿಯಿಂದ ಮಾಡಬೇಕು. ಬಳಿಕ ಪಚ್ಚಕರ್ಪೂರ ಹಾಕಿದ ತಾಂಬೂಲವನ್ನು ಬಗೆಬಗೆಯ ಸುಗಂಧಿ ಮಸಾಲೆ ದ್ರವ್ಯಗಳನ್ನು ಸೇರಿಸಿ ಭಗವಂತನಿಗೆ ಸಮರ್ಪಣ ಮಾಡಬೇಕು. ಬಳಿಕ ಶಂಖದಲ್ಲಿ ನೀರು ತುಂಬಿ ವಿಷ್ಣುವಿಗೆ ಪ್ರದಕ್ಷಿಣಾಕಾರವಾಗಿ ಹಾಕಬೇಕು. ಶ್ರೀಹರಿಗೆ ಪ್ರದಕ್ಷಿಣಾಕಾರವಾಗಿ ಶಂಖವನ್ನು ತಿರುಗಿಸುವಾಗ

**ಜನಾರ್ದನ ಜಗದ್ಬಂಧೋ ಶರಣಾಗತ ಪಾಲಕ ।**
**ತ್ವದ್ದಾ ಸದಾಸ ದಾಸತ್ವಂ ದಾಸಸ್ಯ ದೇಹಿ ಮೇ ಪ್ರಭೋ ॥**

ಶರಣಾಗತ ರಕ್ಷಕನೂ ಲೋಕ ಬಂಧುವೂ ಆದ ಜನಾರ್ದನನೇ ನಿನ್ನ ದಾಸನಾದ ನನಗೆ ನಿನ್ನ ದಾಸರ ದಾಸರ ದಾಸತ್ವವನ್ನು ನೀಡು.

ಈ ಮಂತ್ರದಿಂದ ಶಂಖದಲ್ಲಿ ನೀರು ಹಾಕಿ ಮೂರು ಬಾರಿ ನೀರಿನಿಂದ ಆರತಿಯನ್ನು ಬೆಳಗಿ ಬಳಿಕ ತಾನು ಸ್ವಯಂ ವಿಷ್ಣುವಿನ ಪ್ರದಕ್ಷಿಣೆಯನ್ನು ಹಾಕಬೇಕು. ಈ ಮಂತ್ರದಿಂದ ವಿಷ್ಣುವಿನ ಪ್ರದಕ್ಷಿಣೆಯನ್ನು ಮಾಡಿದರೆ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ ನಷ್ಟವಾಗುತ್ತವೆ.

ಅನಂತರ ತುಳಸಿಯ ಮಾಲೆಯನ್ನು ಮಾಡಿ

**ಅಲಂಕೃತೋ ಮಹಾವಿಷ್ಣುಃ ಪ್ರಸನ್ನೋ ನ ದದಾತಿ ಕಿಂಃ ।**
**ತತಸ್ತು ವೈದಿಕೈರ್ಮಂತ್ರೈಃ ಕರ್ತವ್ಯಂ ಸ್ವಸ್ತಿವಾಚನಂ ॥**

ಹೀಗೆ ಮನೆಯಲ್ಲಿ ವಿಧಿಪೂರ್ವಕವಾಗಿ ಶ್ರೀಹರಿಗೆ ಅಭಿಷೇಕ ಆವಾಹನ, ಅರ್ಘ್ಯ ಪಾದ್ಯ, ಪುಷ್ಪಾರ್ಚನ ಧೂಪ, ದೀಪ, ನೈವೇದ್ಯ, ಸಮರ್ಪಣಾದಿಗಳನ್ನು ಗೈದು, ಶಂಖ ಭ್ರಮಣವನ್ನು ಮಾಡಿ ಪೂಜೆಯನ್ನು ಮುಗಿಸಬೇಕು. ಬಳಿಕ ದೇವಾಲಯಕ್ಕೆ ಹೋಗಿ ದೇವರ ಎದುರು ಕೇಶವನ ಮುಂದೆ ದಂಡ ಪ್ರಣಾಮವನ್ನು ಹಾಕಿ ಕೊನೆಗೆ ಪ್ರಾರ್ಥನೆಯನ್ನು ಸಲ್ಲಿಸಬೇಕು. ಹೀಗೆ ಏಳು ಸಲ ಪ್ರದಕ್ಷಿಣ ನಮಸ್ಕಾರ ಹಾಕಿದರೆ ಅವನ ದೇಹದೊಳಗಿನ ಪಾಪಗಳೆಲ್ಲವೂ ಸುಟ್ಟು ಬೂದಿಯಾಗುವವು. ತಲೆಯ ಮೇಲೆ ಕೈ ಜೋಡಿಸಿ ಅನಂತರ ಪಾದಕ್ಕೆ ಬಾಗಿ ನಮಸ್ಕಾರ ಮಾಡಿದರೆ ಅಥವಾ ನೆಲದ ಮೇಲೆಯೇ ಶ್ರೀಹರಿಯನ್ನು ಸಾಷ್ಟಾಂಗ ನಮಸ್ಕಾರ ಮಾಡಿದರೆ ಮಾನವನು ಕಲ್ಪಪರ್ಯಂತರ ಹರಿಯ ಸನ್ನಿಧಾನದಲ್ಲಿ ಇರುತ್ತಾನೆ.

ದೇವರಿಗೆ ಏರಿಸಿದ ಹೂ ತುಳಸಿ ಮುಂತಾದ ನಿರ್ಮಾಲ್ಯವನ್ನು ವಿಷ್ಣುಭಕ್ತರಿಗೆ ಕೊಡಬೇಕು. ಶ್ರೀಹರಿಯ ನಿರ್ಮಾಲ್ಯ ಹಾಗೂ ವಿಷ್ಣು ನೈವೇದ್ಯವನ್ನು ದೇವತೆಗಳೂ ಕೂಡ ಸ್ವೀಕರಿಸುತ್ತಾರೆ. ಮನುಷ್ಯರ ಪಾಡೇನು?

**ನಾರಾಯಣ ಜಗದ್ರೂಪ ಗಚ್ಛ ಧಾಮ ಜಗತ್ಪತೇ ।**
**ಯಚ್ಛ ದೇವ ನಿಜಸ್ಥಾನಂ ಪ್ರಸನ್ನೋಭವ ಸರ್ವದಾ ॥**

ಎಂದು ಮಂತ್ರ ಹೇಳಿ ಪ್ರಾರ್ಥನೆಯನ್ನು ಸಲ್ಲಿಸಬೇಕು. ಕೊನೆಯಲ್ಲಿ

**ಯೇಯಂ ಶಕ್ತ್ಯಾಚ ದೇವೇಂದ್ರ ತಪಃಪೂಜಾ ಕೃತಾಮಯಾ**
**ಅಚ್ಛಿದ್ರಾಽಸ್ತು ಜಗನ್ನಾಥ ತ್ವತ್ಪ್ರಸಾದಾಜ್ಜಗನ್ಮಯ**

ಜಗದ್ರೂಪಿಯಾದ ನಾರಾಯಣನೇ, ನೀನು ನಿನ್ನ ವೈಕುಂಠಧಾಮಕ್ಕೆ ತೆರಳಬಹುದು. ದಿವ್ಯ ಸ್ಥಾನವನ್ನು ಕುರಿತು ನೀನು ಪ್ರಯಾಣ ಮಾಡು. ನಮ್ಮ ಮೇಲೆ ಪ್ರಸನ್ನನಾಗು. ನಾನು ಯಥಾಶಕ್ತಿ ನನ್ನ ಯೋಗ್ಯತೆಗೆ ತಕ್ಕಂತೆ ಪೂಜೆ ಮಾಡಿದ್ದೇನೆ. ಜಗದ್ರೂಪಿಯಾದ ನಾರಾಯಣನೇ, ನಾನು ಈ ನಿನ್ನ ಪೂಜೆಯನ್ನು ಮಾಡಿದ್ದು ನನ್ನ ಶಕ್ತಿಯಿಂದಲ್ಲ. ನಿನ್ನ ಶಕ್ತಿಯಿಂದಲೇ ನಾನು ಮಾಡಿದ ನಿನ್ನ ಈ ಪೂಜೆಯು ಅಚ್ಛಿದ್ರವಾಗಲಿ.

ಹೀಗೆ ಮತ್ತೊಮ್ಮೆ ಬೇಡಿಕೊಂಡು ತೀರ್ಥವನ್ನು ಸ್ವೀಕರಿಸಬೇಕು.

**ತತಃ ಪಾದೋದಕಂ ಪ್ರಾಜ್ಞೋ ಮಹದ್‌ವಿಷ್ಣೋಃ ಪರಾತ್ಮನಃ ।**
**ಸಮಸ್ತ ಪಾತಕ ಧ್ವಂಸಿ ಗೃಹ್ಣೀಯಾತ್ ಭಕ್ತಿ ಭಾವತಃ ॥**

ಅನಂತರ ಶ್ರೀವಿಷ್ಣುವಿನ ಪಾದ ತೊಳೆದು ಪವಿತ್ರವಾದ, ಸರ್ವಪಾಪಗಳನ್ನು ಧ್ವಂಸ ಮಾಡುವ ತೀರ್ಥವನ್ನು ಭಕ್ತಿಯಿಂದ ತೆಗೆದುಕೊಳ್ಳಬೇಕು. ಒಂದು ಹನಿಯಷ್ಟಾದರೂ ವಿಷ್ಣುವಿನ ಪಾದೋದಕವನ್ನು ಪ್ರಾಶನ ಮಾಡಿದವ ಎಲ್ಲ ತೀರ್ಥಗಳಲ್ಲಿಯೂ ಸ್ನಾನ ಮಾಡಿದಂತೆಯೇ ಸರಿ. ವಿಷ್ಣುವಿನ ಪಾದತೀರ್ಥ ಸ್ವೀಕರಿಸಿದವರಿಗೆ ಅಕಾಲ ಮರಣ ಇಲ್ಲ. ಮತ್ತು ಅಧಿವ್ಯಾಧಿಗಳ ಭಯವಿಲ್ಲ.

**ಪಾಪವ್ಯಾಧಿ ವಿನಾಶಾರ್ಥಂ ವಿಷ್ಣುಪಾದೋದಕೌಷಧಂ**
**ಪಾಪಿನೋಽಪಿ ನರಾಸ್ತೇ ಚ ಪಿಬಂತು ಪ್ರತಿವಾಸರಂ ॥**

ಪಾಪ ಹಾಗೂ ರೋಗಗಳ ವಿನಾಶಕ್ಕಾಗಿ ವಿಷ್ಣು ಪಾದೋದಕವು ಒಂದು ಶ್ರೇಷ್ಠವಾದ ಔಷಧವಿದ್ದಂತೆ. ಆದುದರಿಂದ ಅದನ್ನು ಪಾಪಿಗಳೂ ಕೂಡ ಪ್ರತಿದಿನವು ಪಾನ ಮಾಡಬೇಕು. ಇದರಂತೆ ಶ್ರೀಹರಿಯ ನೈವೇದ್ಯವನ್ನು ಮನುಷ್ಯರು ಸ್ವೀಕರಿಸಲೇಬೇಕು.

**ಭುಂಜತೋ ಹರಿನೈವೇದ್ಯಂ ದಾಸೀವದ್ವಶಗಾ ಭವೇತ್**
**ಮುಕ್ತಿಭೂಮಿಃ ಸುರಶ್ರೇಷ್ಠ ದೈವತೈರಪಿ ದುರ್ಲಭಾ ॥**

ಹರಿಯ ನೈವೇದ್ಯವನ್ನು ಊಟಮಾಡುವ ಭಕ್ತನಿಗೆ ಮುಕ್ತಿಯು ದಾಸಿಯಂತೆ ವಶವಾಗುವದು. ಈ ಮುಕ್ತಿ ದೇವತೆಗಳಿಗೂ ಕೂಡ ದುರ್ಲಭ.

ಹೀಗೆ ಮೇಲೆ ಹೇಳಿದ ವಿಧಿ ವಿಧಾನಗಳಿಂದ ಪ್ರತಿ ತಿಂಗಳೂ ಶ್ರೀಹರಿಯನ್ನು ಪೂಜೆ ಮಾಡಬೇಕು. ಈ ಎಲ್ಲ ವಿಧಾನಗಳಿಂದ ದೇವರನ್ನು, ಪೂಜೆ ಮಾಡಿದರೂ ಭಕ್ತಿ ಒಂದು ಇಲ್ಲದಿದ್ದರೆ ಎಲ್ಲವೂ ವ್ಯರ್ಥ. ಆದುದರಿಂದ ಭಕ್ತಿಯುಕ್ತವಾದ ಮನಸ್ಸಿನಿಂದಲೇ ಪೂಜೆಯನ್ನು ಮಾಡಬೇಕು. ಜ್ಞಾನಕ್ಕೆ ಹರಿಯ ಭಕ್ತಿಯೇ ಮೂಲ. ಆ ಭಕ್ತಿಗೆ ಭಗವಂತನ ಪೂಜೆಯೇ ಮೂಲ ಆದುದರಿಂದ ಭಕ್ತಿಯಿರಲಿ ಇಲ್ಲದೇ ಇರಲಿ. ಈ ಪೂಜೆಯನ್ನಂತೂ ಮಾಡಬೇಕು. ಪೂಜೆಯನ್ನು ಮಾಡುತ್ತ ಹೋದಂತೆ ಮುಂದೆ ತಾನಾಗಿ ಪೂಜೆ ಮಾಡುವ ಕಾಲಕ್ಕೆ ಭಕ್ತಿಯು ಹುಟ್ಟುತ್ತದೆ. ಮೋಕ್ಷವೆಂಬ ಮರವು ಹುಟ್ಟಿ ಬೆಳೆಯಬೇಕಾದರೆ ಪೂಜಾರೂಪವಾದ ಹರಿಯ ಆರಾಧನೆಯೇ ಮೂಲ ಆಗಿರುತ್ತದೆ.

ಭಕ್ತಿಯಿಂದ ಭಗವಂತನ ಪೂಜೆಯನ್ನು ಅತ್ಯಲ್ಪವಾಗಿ ಮಾಡಿದರೂ ಅದು ಅಕ್ಷಯವಾಗುತ್ತದೆ. ಪೂಜೆಯ ಸಾಮಗ್ರಿ ಎಲ್ಲವೂ ಇಲ್ಲದಿದ್ದರೂ ಇದ್ದಷ್ಟು ಪದಾರ್ಥಗಳನ್ನೇ ಸ್ವೀಕರಿಸಿ ಪೂಜೆ ಮಾಡಬೇಕು. ಯಾವ ಸಾಮಗ್ರಿಯೂ ಇಲ್ಲದಿದ್ದರೆ ಕೊನೆಗೆ ಬರೇ ನೀರಿನಿಂದಾದರೂ ಅಭಿಷೇಕ, ಅರ್ಘ್ಯ, ಪಾದ್ಯ, ಆಸನ, ಧೂಪ, ದೀಪ, ನೈವೇದ್ಯ ಎಲ್ಲವನ್ನೂ ಮಾಡಬೇಕು. ಒಟ್ಟಾರೆ ಲಭ್ಯವಿದ್ದ ಸಾಮಗ್ರಿಯಿಂದ ಶ್ರದ್ಧೆಯಿಂದ ತಪ್ಪದೇ ಎಷ್ಟಾದರೂ ಶ್ರೀಹರಿಯ ಪೂಜಾರೂಪವಾದ ಆರಾಧನೆಯನ್ನು ಮಾನವರು ನಿಯಮಿತವಾಗಿ ಮಾಡಲೇಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಹರಿಯ ಪೂಜೆಯ ವಿಧಾನ ಎಂಬ ಹನ್ನೊಂದನೇಯ ಅಧ್ಯಾಯ ಮುಗಿದುದು*

—o—

**ವೇದವ್ಯಾಸ:-** ಫಾಲ್ಗುಣ ಮಾಸದಲ್ಲಿ ಶ್ರೀಕೃಷ್ಣನಿಗೆ ತುಪ್ಪದಿಂದ ಅಭಿಷೇಕ ಮಾಡಬೇಕು. ಚಳಿಗಾಲದಲ್ಲಿ ಎಳ್ಳಿನ ಉಂಡೆ, ಹಾಲಿನ ವಡೆ, ಶ್ರೀಖಂಡ, ಹಣ್ಣು, ಸಕ್ಕರೆ, ಬೋರೆ ಹಣ್ಣು, ದಾಳಿಂಬೆ ಹಣ್ಣು ಮುಂತಾದವುಗಳನ್ನು ನೈವೇದ್ಯ ಮಾಡಬೇಕು.

ಚೈತ್ರಮಾಸದಲ್ಲಿ ದೇವರಿಗೆ ಜೇನುತುಪ್ಪದಿಂದ ಸ್ನಾನ ಮಾಡಿಸಬೇಕು. ಕಿಂಶುಕ ತಿಲಕ, ನೆಲ್ಲಿಯ ಎಲೆ, ಮಾವಿನ ಚಿಗುರು, ವಾಸಂತಿಕುಸುಮ, ಬಕುಲಪುಷ್ಪ ಮುಂತಾದ ಹೂಗಳನ್ನು ಏರಿಸಿ ಪೂಜೆ ಮಾಡಬೇಕು. ಬಾಳೆಹಣ್ಣಿನ ನೈವೇದ್ಯ ಚೈತ್ರಮಾಸದಲ್ಲಿ ವಿಶೇಷ ಹರಿಪ್ರೀತಿಕರ. ಗೋಧಿಹಿಟ್ಟಿನ ಉಂಡೆಯನ್ನು ಮಾಡಿ ಗೋಪಾಲನಿಗೆ ನೈವೇದ್ಯವನ್ನು ಮಾಡಬೇಕು.

ವೈಶಾಖಮಾಸದಲ್ಲಿ ವಿಷ್ಣುಭಕ್ತನು, ಎಣ್ಣೆ, ಮೈಥುನ, ಪರಾನ್ನ, ಎರಡುಹೊತ್ತು ಊಟ ಮುಂತಾದವುಗಳನ್ನು ವರ್ಜಿಸಬೇಕು. ಪ್ರಾತಃಕಾಲದಲ್ಲಿ ಸ್ನಾನಮಾಡಿ ಶಾಸ್ತ್ರೋಕ್ತ ವಿಧಿಯಿಂದ ವಿಷ್ಣುವನ್ನು, ಪೂಜಿಸಬೇಕು. ಹೂವಿನಿಂದ ಸುಗಂಧಿತವಾದ ತಣ್ಣೀರಿನಿಂದ ತ್ರಿಕಾಲದಲ್ಲಿಯೂ ದೇವರ ಪೂಜೆ ಮಾಡಿ ಬಗೆಬಗೆಯ ನೈವೇದ್ಯಗಳನ್ನು ಸಮರ್ಪಿಸಬೇಕು. ದವನದ ಮಾಲೆ ಮಾಡಿ ಭಗವಂತನಿಗೆ ಏರಿಸಬೇಕು. ಅಕ್ಕಿ ಪಾಯಸ ನೈವೇದ್ಯಕ್ಕೆ ಇಡಬೇಕು. ಅಲ್ಲಲ್ಲಿ ವೈಶಾಖಮಾಸದಲ್ಲಿ ನೀರಿನ ಅರವಟ್ಟಿಗೆಯನ್ನು ಇರಿಸಬೇಕು.

ವೈಶಾಖಮಾಸವು ಅತ್ಯಂತ ಶ್ರೇಷ್ಠಮಾಸ. ಈ ಮಾಸದಲ್ಲಿ ಒಂದು ದಿನ ಹರಿಪೂಜೆ ಮಾಡಿದರೆ ಆರುವರ್ಷ ಪೂಜೆ ಮಾಡಿದಷ್ಟು ಪುಣ್ಯಬರುವದು. ವೈಶಾಖಮಾಸದಲ್ಲಿ ಅಶ್ವತ್ಥರೂಪಿಯಾದ ವಿಷ್ಣುವನ್ನು ಭಕ್ತಿಯಿಂದ ಪೂಜಿಸಿದರೆ ಹರಿಪ್ರೀತಿಯಾಗುವದು. ಅರಳೆಯ ಮರಕ್ಕೆ ಒಂದು ಮುಕ್ಕು ನೀರುಹಾಕಿದರೂ ಮನುಷ್ಯನ ಪಾಪಗಳೆಲ್ಲವೂ ಪರಿಹಾರವಾಗುತ್ತವೆ. ಅಶ್ವತ್ಥಗಿಡದ ಕೆಳಗೆ ಕಲ್ಲಿನಿಂದ ಕಟ್ಟೆಕಟ್ಟಿದರೆ ಶ್ರೀಹರಿಯು ಪ್ರಸನ್ನನಾಗುತ್ತಾನೆ. ಆ ಮರದ ಅಡಿಯಲ್ಲಿ ಯಾವದೇ ಧರ್ಮಕರ್ಮ ಮಾಡಿದಾಗ ನ್ಯೂನಾತಿರೇಕಗಳಾದರೂ ಪೂರ್ಣಫಲ ದೊರಕುತ್ತದೆ. ಅಶ್ವತ್ಥ ಮರವನ್ನು ಪೂಜಿಸಿದರೆ ವಿಷ್ಣುವನ್ನೇ ಪೂಜಿಸಿದಂತೆ.

**ಅಶ್ವತ್ಥಂ ಪೂಜಯೇದ್ಯಸ್ತು ಸ ಯೇವ ವಿಷ್ಣು ಪೂಜಕಃ**
**ಅಶ್ವತ್ಥ ಮೂರ್ತಿಭಗವಾನ್ ಸ್ವಯಮೇವದಯತೋ ದ್ವಿಜ ॥**

ಶ್ರೀ ಹರಿಯು ಸ್ವಯಂ ಅಶ್ವತ್ಥ ಮೂರ್ತಿಯೇ ಆಗಿದ್ದಾನೆ. ಆದುದರಿಂದ ಅಶ್ವತ್ಥ ಪೂಜಕ ವಿಷ್ಣುಪೂಜಕ. ಅಶ್ವತ್ಥಮರವನ್ನು ನಾಶಮಾಡಿದವನು ಘೋರ ನರಕಕ್ಕೆ ಹೋಗುತ್ತಾನೆ. ಬ್ರಹ್ಮಹತ್ಯಾ, ಗುರುತಲ್ಪಗಮನ, ಸುರಾಪಾನ, ಸುವರ್ಣ ಚೌರ್ಯ, ಗೋಹತ್ಯೆ, ಸ್ತ್ರೀಹತ್ಯೆ, ಶರಣಾಗತಹತ್ಯೆ ಮೊದಲಾದ ಘೋರಕೃತ್ಯಗಳಿಂದ ಬರುವ ಪಾಪವು ಅಶ್ವತ್ಥಮರವನ್ನು ಕಡಿಯುವದರಿಂದ ಪ್ರಾಪ್ತವಾಗುವದು. ಈ ವಿಷಯದಲ್ಲಿ ಒಂದು ಆಖ್ಯಾನವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಧನಂಜಯ ಎಂಬ ಓರ್ವ ಹರಿಭಕ್ತ ತ್ರೇತಾಯುಗದಲ್ಲಿ ಇದ್ದ. ಅವನಿಗೆ ಸುಳ್ಳು ಮಾತನಾಡಿ ಗೊತ್ತಿಲ್ಲ. ಸಿಟ್ಟುಮಾಡಿ ಅಭ್ಯಾಸವಿಲ್ಲ. ಹಿಂಸೆ ದಂಭ ಮದ ಮುಂತಾದ ದುರ್ಗುಣಗಳು ಅವನ ಸಮೀಪದಲ್ಲಿಯೂ ಸುಳಿಯುತ್ತಿರಲಿಲ್ಲ. ಅವನು ಪರಮಭಕ್ತಿಯಿಂದ ಯಾವಾಗಲೂ ನಾರಾಯಣನನ್ನು ಪೂಜಿಸುತ್ತಿದ್ದ. ಅವನ ಭಕ್ತಿಯ ಪರೀಕ್ಷೆ ಮಾಡಲಿಕ್ಕಾಗಿಯೋ ಏನೋ ಶ್ರೀಹರಿಯು ಅವನ ದ್ರವ್ಯವೆಲ್ಲ ನಾಶವಾಗುವಂತೆ ಮಾಡಿದ. ಆದರೆ ಹರಿಭಕ್ತನಾದ ಆ ಧನಂಜಯ ಬ್ರಾಹ್ಮಣ ತನ್ನ ಪೂಜೆ ಜಪ ನಿತ್ಯಕರ್ಮಾನುಷ್ಠಾನದಲ್ಲಿ ಯಾವುದನ್ನೂ ಕಡಿಮೆ ಮಾಡಲಿಲ್ಲ. ಅವನು ಕಷ್ಟಪಟ್ಟು ಗಳಿಸಿದ ದ್ರವ್ಯವೆಲ್ಲ ನಷ್ಟವಾಗಿ ಹೋದರೂ ಅವನಿಗೆ ದುಃಖವಾಗಲಿಲ್ಲ. ಅಚಲವಾದ ಭಕ್ತಿಯಿಂದ ಶ್ರೀಹರಿಯನ್ನು ಸಶ್ರದ್ಧನಾಗಿ ಆರಾಧಿಸುತ್ತಲೇ ಇದ್ದ.

ದಾರಿದ್ರ್ಯದಿಂದ ಅವನ ಭಕ್ತಿ ಕಡಿಮೆಯಾಗದೇ ವರ್ಧಿಸುತ್ತಿರುವುದನ್ನು ನೋಡಿ, ಶ್ರೀಹರಿ ಅವನಿಗೆ ಬಂಧು ಬಳಗದವರಿಂದ ವಿರೋಧ ವೈಮನಸ್ಸನ್ನು ಉಂಟುಮಾಡಿದ. ಆ ಎಲ್ಲ ಬಾಂಧವರೂ ಅವನನ್ನು ಹಿಂಸಿಸತೊಡಗಿದರು. ಆದರೂ ಆ ಧನಂಜಯ ಖಿನ್ನ ವಿಷಣ್ಣನಾಗದೇ ಏಕಾಕಿಯಾಗಿದ್ದರೂ ಹರಿಪೂಜೆಯನ್ನು ಅಧಿಕ ಭಕ್ತಿಯಿಂದ ಮಾಡತೊಡಗಿದ್ದ. ಭಗವಂತನ ಧ್ಯಾನ, ಆವಾಹನ, ಆರಾಧನೆಗಳಲ್ಲಿ ತನ್ನ ಬಾಂಧವರೆಲ್ಲರ ನಿಂದಾ ಹಾಗೂ ದ್ವೇಷದಿಂದ ಉಂಟಾದ ದುಃಖವನ್ನೆಲ್ಲ ಮರೆತು ಹರಿಭಕ್ತಿಯಲ್ಲಿಯೇ ಮನಸ್ಸನ್ನು ಕೇಂದ್ರೀಕರಿಸಿದ.

ಅನಂತರ ಅವನನ್ನು ಪರೀಕ್ಷಿಸಲೆಂದು ಪರಮಾತ್ಮ ಅವನ ಮಕ್ಕಳನ್ನೂ ಆ ಧನಂಜಯನಿಂದ ದೂರ ಮಾಡಿದ. ಅವನ ಮಕ್ಕಳೆಲ್ಲ ಈ ತಂದೆಯನ್ನು ಬಿಟ್ಟು ಬೇರೆ ಬೇರೆ ಕಡೆ ಹೋಗಿ ನೆಲಿಸಿದರು. ಆದರೂ ಧನಂಜಯನ ದೇವತಾರ್ಚನೆಯಲ್ಲಿ ಯಾಗಲೀ ಹರಿಭಕ್ತಿಯಲ್ಲಿಯಾಗಲೀ ಉದಾಸೀನತೆ ತಾತ್ಸಾರಭಾವನೆ ಕಂಡು ಬರಲಿಲ್ಲ. ಮತ್ತಿಷ್ಟು ಉತ್ಸಾಹದಿಂದ ಅವನು ಶ್ರೀಹರಿಯ ಭಕ್ತಿಯುಕ್ತವಾದ ಅರ್ಚನೆಯನ್ನು ಮಾಡುತ್ತಲೇ ಇದ್ದ.

ಮುಂದೆ ಒಂದು ದಿನ ಪರಮ ಪತಿವ್ರತೆಯಾದ ಅವನ ಮಡದಿಯೂ ಕೂಡ ಅತ್ಯಂತ ದುಃಖಿತಳಾಗಿ ಇವನನ್ನು ಬಿಟ್ಟು ತಂದೆಯ ಮನೆಗೆ ಹೋಗಿ ಬಿಟ್ಟಳು. ಈಗ ಧನಂಜಯ ಮನೆಯಲ್ಲಿ ಏಕಾಕಿ. ಆದರೂ ಅವನು ತನ್ನ ಆಚಾರ, ವಿಚಾರ, ಹರಿ ಪೂಜೆ ಅತಿಥಿ ಸತ್ಕಾರ ಮಂತಾದ ಧರ್ಮಕೃತ್ಯಗಳನ್ನು ಮಾಡುತ್ತಲೇ ಇದ್ದ. ತನಗೆ ಬಂದ ಆಪತ್ತಿನ ಬಗ್ಗೆ ವಿಚಾರವನ್ನೇ ಮಾಡುತ್ತಿರಲಿಲ್ಲ.

ಒಂದು ದಿನ ಆ ಧನಂಜಯನು ಕಟ್ಟಿಗೆಯನ್ನು ತರಲಿಕ್ಕಾಗಿ ಕೊಡಲಿ ಹಿಡಿದುಕೊಂಡು ಅರಣ್ಯಕ್ಕೆ ಹೋದ. ಅವನಿಗೆ ಹೊದೆಯಲು ಸಾಕಷ್ಟು ಬಟ್ಟೆ ಇರಲಿಲ್ಲ. ಆದರಿಂದ ಅವನು ಪ್ರತಿದಿನವೂ ಅಡವಿಗೆ ಹೋಗಿ ಕಟ್ಟಿಗೆ ತಂದು ಮನೆಯಲ್ಲಿ ಉರಿಹೊತ್ತಿಸಿ ಚಳಿಯನ್ನು ನಿವಾರಣ ಮಾಡಿಕೊಳ್ಳುತ್ತಿದ್ದ. ಒಂದು ದಿನ ಅವನಿಗೆ ಬಹಳ ಆಶಕ್ತಿ ಉಂಟಾಯಿತು ದೇಹದಲ್ಲಿ. ಆದರಿಂದ ಅವನಿಗೆ ಕಾಡಿಗೆ ಹೋಗಲಿಕ್ಕೆ ಆಗಲಿಲ್ಲ. ಆದರಿಂದ ತನ್ನ ಮನೆಯಲ್ಲಿಯೇ ಇರುವ ಅಶ್ವತ್ಥವೃಕ್ಷದ ಒಂದು ಟೊಂಗೆಯನ್ನು ಕಡಿದ ಕೂಡಲೇ ಆ ಅಶ್ವತ್ಥಮರದಲ್ಲಿ ನೆಲಿಸಿದ ಮಹಾವಿಷ್ಣುವು ಅಲ್ಲಿಂದ ಹೋಗಲು ಹೊರಬಿದ್ದುದನ್ನು ಕಂಡ ಧನಂಜಯ. ಕಮಲದಂತೆ ವಿಶಾಲವಾದ ನೇತ್ರವುಳ್ಳ ಚತುರ್ಭುಜನಾದ ವಿಷ್ಣುವು

ಪೀತಾಂಬರಧಾರಿಯಾಗಿ ತನ್ನ ಶಂಖಚಕ್ರಾದಿ ಆಯುಧಗಳನ್ನು ಧರಿಸಿ ಆ ಅಶ್ವತ್ಥ ಮರದಲ್ಲಿ ಸಾಕ್ಷಾತ್ ಮೂರ್ತಿಮಂತನಾಗಿ ಹೊರಡುವ ಸನ್ನಾಹದಲ್ಲಿ ನಿಂತುಕೊಂಡಿದ್ದ. ಆ ಸ್ವಾಮಿಯನ್ನು ಕಂಡ ಕೂಡಲೇ ಧನಂಜಯನ ಕಣ್ಣುಗಳಿಂದ ಆನಂದಬಾಷ್ಪಗಳು ಉದುರತೊಡಗಿದವು. ಭಕ್ತಿ ಮೃದುಲವಾದ ಮಾತುಗಳಿಂದ ಧನಂಜಯನು ಶ್ರೀಹರಿಯನ್ನು ಸ್ತೋತ್ರಮಾಡಿದ.

ಧನಂಜಯ:-

**ಹರೇ ಮುರಾರೇ ಜಗದೇಕನಾಥ ಗೋವಿಂದ ದಾಮೋದರ ಮಾಧವೇತಿ ।**
**ಲಕ್ಷ್ಮೀಪತೇ ಕೇಶವ ಕೇಶಿಶತ್ರೋ ನಾರಾಯಣಾನಂತ ವಿಭೋ ಪ್ರಸೀದ ॥**

ಹರಿ, ಮುರಾರಿ, ಗೋವಿಂದ, ದಾಮೋದರ, ಮಾಧವ, ಕೇಶವ, ನಾರಾಯಣ, ಅನಂತ, ಜಗನ್ನಾಥ, ಕೇಶಿ ಶತ್ರು, ಮೊದಲಾದ ಹಲವು ನಾಮಗಳಿಂದ ಕರೆಯಲ್ಪಡುವ ಲಕ್ಷ್ಮೀಪತಿಯಾದ ಪ್ರಭುವೇ, ನನ್ನ ಮೇಲೆ ಪ್ರಸನ್ನನಾಗು.

**ದತ್ವಾ ಸ್ವೀಯಾಂ ಕಸ್ಯಚಿದೀಶ ವಿಷ್ಣೋ**
**ಭಕ್ತಿಂ ಹರಸ್ಯಚ್ಯುತ ದೇಹ ಸಂಸ್ಥಾಂ ॥**
**ಶ್ರಿಯಂ ಸಮೂದಾಯ ಮುಧಂ ಪ್ರದಾಸ್ಯೆ ।**
**ಭಕ್ತಿಃ ಪ್ರದತ್ತಾ ಮಹತಃ ಸುಧನ್ಯಾ ॥**

ಸ್ವಾಮಿ, ನೀನು ನಿನ್ನಲ್ಲಿರುವ ಐಶ್ವರ್ಯವನ್ನು ಕೊಟ್ಟು ಕೆಲವರ ಭಕ್ತಿಯನ್ನು ಅಪಹರಿಸುವೆ. ಕೆಲವರಿಗೆ ಭಕ್ತಿಯನ್ನು ಕೊಟ್ಟು ಐಶ್ವರ್ಯವನ್ನು ಅಪಹರಿಸುವೆ. ಆದರೆ ನನಗೆ ಮಾತ್ರ ನನ್ನ ಐಶ್ವರ್ಯವನ್ನು ಕಿತ್ತಿಕೊಂಡು ಅಚಲವಾದ ಭಕ್ತಿಯನ್ನು ಮಾತ್ರ ಕೊಟ್ಟಿರುವೆ. ಇದರಿಂದ ನನಗೆ ಬಹಳ ಸಂತೋಷವಾಗಿದೆ. ನೀನು ಕೊಟ್ಟ ನಿಶ್ಚಲವಾದ ಭಕ್ತಿಯಿಂದ ನಾನು ಧನ್ಯನಾಗಿದ್ದೇನೆ.

**ಯದ್ಯಪ್ಯಹಂ ದುಃಖವತಾಂ ವರಿಷ್ಠೋ ಮನ್ಯೇತಥಾಪೀಂದ್ರ ವಿವಾದ್ಯ ವಿಷ್ಣೋ ।**
**ಆತ್ಮಾನಮಾತ್ಮಾ ಜಗತಾಂ ಭವಂತಂ ಸಾಕ್ಷಾತ್ ಸಮೀಕ್ಷೆsದ್ಯ ಮಮೇಕ್ಷಣಾಭ್ಯಾಂ॥**

ನಾನೇನೋ ಈಗ ಅತ್ಯಂತ ದುಃಖಿ. ಆದರೂ ದೇವೇಂದ್ರನಂತೆ ಮಹಾಭಾಗ್ಯಶಾಲಿ ಎಂದೇ ನನ್ನನ್ನು ತಿಳಿದಿದ್ದೇನೆ. ಯಾಕೆಂದರೆ ಜಗತ್ತಿನ ಸ್ವಾಮಿಯಾದ ನಿನ್ನನ್ನು ನಾನು ಇಂದು ನನ್ನ ಇದೇ ಈ ಕಣ್ಣುಗಳಿಂದ ಸಾಕ್ಷಾತ್ ಆಗಿ ನೋಡುತ್ತಲಿದ್ದೇನೆ.

**ಪೂಜಾಂ ತವಾಲ್ಪಾಮಪಿವೇದ್ಮಿನಾಹಂ ದ್ರವ್ಯಂ ಕದಾಪಿ ನ ದದಾಮಿ ತುಭ್ಯಂ**
**ತಥಾಪಿ ಚಾಗ್ರೇ ಮಮ ಮೂರ್ತಿಮಾಸಿಸ್ತ್ವಂ ದೃಷ್ಟೋsಂ ಮೇ ಕೇಶವ ಏಕ ಪೂಜ್ಯಃ ॥**

ಸ್ವಾಮಿ, ಕೇಶವ ನಿನ್ನ ಅತ್ಯಲ್ಪವಾದ ಪೂಜೆಯನ್ನು ಹೇಗೆ ಮಾಡಬೇಕು, ಎಂಬುದನ್ನು ಕೂಡ ನಾನು ತಿಳಿಯೆನು. ನಿನ್ನ ಪ್ರೀತಿಗಾಗಿ ದರಿದ್ರನಾದ ನಾನು ದ್ರವ್ಯವನ್ನು ಕೂಡ ದಾನ ಮಾಡಲಿಲ್ಲ. ಆದರೂ ಕೂಡ ನೀನು ನನ್ನ ಕಣ್ಣೆದುರು ಈಗ ಪ್ರತ್ಯಕ್ಷ ಗೋಚರನಾಗಿರುವೆ. ನನಗೆ ಈಗ ಜಗತ್ತಿನಲ್ಲಿ ಪರಮ ಪೂಜನೀಯವಾದ ವ್ಯಕ್ತಿ ಎಂದರೆ ಕೇಶವನು ಒಬ್ಬನೇ.

**ದತ್ತಸ್ತ್ವಯಾಯಂ ಮಮ ಭಕ್ತಿ ವೃಷೋಧರ್ಮಾರ್ಥಕಾಮತ್ರಯಯೇವ ಸೋಽಯಮ್ ।**
**ತ್ವದ್ದರ್ಶನಾಂಭೋಮಯ ವೃಷ್ಟಿಸಿಕ್ತಃ ಪ್ರಭೋಽದ್ಯ ಕೈವಲ್ಯಫಲಂ ದಧಾರ ॥**

ಪ್ರಭು, ನೀನು ನನಗೆ ಕೊಟ್ಟ ಧರ್ಮಾರ್ಥಕಾಮಗಳ ನೆಲದಲ್ಲಿ ಬೆಳೆದ ಈ ಭಕ್ತಿಯ ವೃಕ್ಷವು ನಿನ್ನ ದರ್ಶನ ರೂಪವಾದ ಅನುಗ್ರಹದ ನೀರಿನಿಂದ ಅಭಿವೃದ್ಧಿಯಾಗಿ ಇಂದು ನನಗೆ ಮೋಕ್ಷರೂಪ ಫಲವನ್ನೇ ನೀಡುತ್ತಲಿದೆ.

**ವ್ಯಾಸ:-** ಹೀಗೆ ಧನಂಜಯ ಬ್ರಾಹ್ಮಣನು ಜಗನ್ನಾಥನನ್ನು ಸ್ತೋತ್ರಮಾಡಿ ಕೈ ಓಡಿದು ಮತ್ತೆ ಕೇಳಿದ.

**ಧನಂಜಯ:-** ಜಗದೊಡೆಯ ಲೋಕಕ್ಕೆಲ್ಲ ಅನುಗ್ರಹ ಮಾಡುವ ನಿನ್ನ ಅಂಗಾಂಗಳಿಗೆಲ್ಲವೂ ಭಯಂಕರ ಗಾಯಗಳಾಗಿ ನೆತ್ತರ ಬಸಿಯುತ್ತಿದೆ. ನಿನಗೆ ಹೀಗೆ ಭಯಂಕರವಾಗಿ ಚಾವಟಿಯಿಂದ ಹೊಡೆದವರು ಯಾರು? ದುಷ್ಟರೂ ಪಾಪಿಷ್ಠರೂ ಆದ ದುರುಳ ದೈತ್ಯರನ್ನು ಹೊಡೆದು ಹನನ ಮಾಡಿದ ನಿನ್ನನ್ನು ಹೊಡೆಯಲು ಈ ಭೂಮಿಯಲ್ಲಿ ಯಾರು ಸಮರ್ಥರು? ಪ್ರಭು ನನಗಂತೂ ಇದು ಅತ್ಯಾಶ್ಚರ್ಯ ಎನಿಸುತ್ತದೆ.

**ಶ್ರೀಹರಿ:-** ವತ್ಸಾ, ನೀನು ನುಡಿದದ್ದು ನಿಜ. ಯಾವ ದಾನವನಾಗಲಿ ರಾಕ್ಷಸನಾಗಲೀ ನನ್ನನ್ನು ಹೊಡೆಯಲಿಲ್ಲ. ನೀನೇ ಇದೀಗ ಕೋಡಲಿಯಿಂದ ಹೊಡೆದೆ. ನೀನು ಇದೀಗ ನಿನ್ನ ಕೈಯಲ್ಲಿಯ ಕುಠಾರದಿಂದ ನಿನ್ನ ಮನೆಯ ಅಂಗಳದಲ್ಲಿ ಇರುವ ಅಶ್ವತ್ಥವೃಕ್ಷದ ಟೊಂಗೆಯನ್ನು ಕಡಿದೆಯಷ್ಟೇ ! ಅಶ್ವತ್ಥಮೂರ್ತಿಯೇ ನಾನು. ನೀನು ಕುಠಾರದಿಂದ ಅರಳೆಯ ಮರಕ್ಕೆ ಹೊಡೆದಪೆಟ್ಟು ನನ್ನ ಮೈಗೆ ತಗಲಿ ನೆತ್ತರ ಸುರಿಯುತ್ತಲಿದೆ.

**ವ್ಯಾಸ:-** ನಾರಾಯಣನ ಈ ಮಾತನ್ನು ಕೇಳಿ ಆ ಧನಂಜಯ ಹೆದರಿ ನಡುಗತೊಡಗಿದ. ತನ್ನನ್ನೇ ತಾನು ಹಳಿದುಕೊಂಡ.

**ಧನಂಜಯ:-** ದಿಕ್ಕಾರವಿರಲಿ ಬ್ರಾಹ್ಮಣಾಧಮನಾದ ನನಗೆ. ನಾನು ಮಹಾಪಾಪಿಷ್ಠ. ಮೂರು ಲೋಕದ ಒಡೆಯನಾದ ಶ್ರೀಹರಿಯ ಹೃದಯಕ್ಕೆ ಎಂಥ ಆಘಾತವನ್ನುಂಟು ಮಾಡಿದೆ? ಎಲ್ಲ ದುಃಖವನ್ನು ಪರಿಹರಿಸುವ ಶ್ರೀಹರಿಯ ಮನಸ್ಸಿಗೆ ನಾನು ದುಃಖವನ್ನುಂಟುಮಾಡಿದೆ. ನಾನು ಇದ್ದರೂ ಸತ್ತಂತೆಯೇ. ನಾನು ಎಷ್ಟು ಜಪ ಮಾಡಿದರೇನು? ಭಗವಂತ ನನ್ನಿಂದ ಸಂಕಟಪಡುವಂತಾಯಿತು. ನಾನು ಬದುಕಿಯೂ ಸತ್ತಂತೆಯೇ. ಪರಮಾತ್ಮನ ಮೇಲೆ ಕುಠಾರಪ್ರಹಾರ ಮಾಡಿದ ನಾನು ಅಕ್ಷಮ ಅಪರಾಧ ಮಾಡಿದ್ದೇನೆ. ಅದರ ಪ್ರಾಯಶ್ಚಿತ್ತವಾಗಿ ಈಗ ಅದೇ ಕುಠಾರದಿಂದ ನನ್ನ ಮೇಲೆಯೇ ಪ್ರಹರಿಸಿಕೊಳ್ಳುತ್ತೇನೆ. ಆ ಹರಿಪ್ರಹಾರಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ.

ಹೀಗೆ ನಿರ್ಧರಿಸಿ ನಿಶಿತವಾದ ಆ ಕುಠಾರದಿಂದ ತನ್ನ ಕತ್ತನ್ನು ಕತ್ತರಿಸಲು ಹೊರಟ ಆ ಧನಂಜಯ. ಕೂಡಲೇ ಅಲ್ಲಿಯೇ ನಿಂತ ಆ ಲಕ್ಷ್ಮೀಕಾಂತನು ಅವನ ಕೈಯಿಂದ ಕಿತ್ತಿಕೊಂಡ ಆ ಕುಠಾರವನ್ನು ಮತ್ತು ಹೇಳಿದ.

**ಶ್ರೀಹರಿ:-** ವತ್ಸ, ಇಂಥ ಘೋರ ಕೃತ್ಯವನ್ನು ಏಕೆ ಮಾಡುವೆ? ಆತ್ಮಹತ್ಯೆ ಮಾಡಿಕೊಳ್ಳುವವರನ್ನು ನಾನು ಎಂದೂ ಮೆಚ್ಚುವುದಿಲ್ಲ. ನಿನ್ನ ಭಕ್ತಿಯಿಂದ ನಾನು ಪ್ರೀತನಾಗಿದ್ದೇನೆ. ನಿನ್ನ ಮನಸ್ಸಿನಲ್ಲಿ ಏನನ್ನು ಪಡೆಯಬೇಕೆಂದು ಅಪೇಕ್ಷೆ ಇದೇ? ಬೇಡಿಕೋ. ವರ ಕೊಡುತ್ತೇನೆ.

**ಧನಂಜಯ:-** ಪ್ರಭು, ಅಶ್ವತ್ಥರೂಪಿಯಾದ ನಿನಗೆ ನಾನು ಕ್ರೂರನಾಗಿ ಘೋರ ಕುಠಾರದಿಂದ ಏಟು ಹಾಕಿದೆ. ಅದರಿಂದ ನಿನಗೆ ಈಗ ಮೈತುಂಬ ಗಾಯಗಳಾಗಿವೆ. ನಿನ್ನ ವರದಿಂದ ಈಗ ನನ್ನ ಪ್ರಹಾರದ ಒಂದೂ ಗಾಯವೂ ನಿನ್ನ ಮೈ ಮೇಲೆ ಉಳಿಯಬಾರದು. ಮತ್ತು ನಿನ್ನ ಅನುಗ್ರಹವು ನನ್ನ ಮೇಲೆ ಪೂರ್ಣವಾಗಿರಬೇಕು.

**ಶ್ರೀಹರಿ:-** ಮಗು, ನೀನು ತಿಳಿಯದೇ ಈ ಕಾರ್ಯವನ್ನು ಮಾಡಿರುವೆ. ಆದುದರಿಂದ ಅಜ್ಞಾತಕೃತವಾದ ಈ ನಿನ್ನ ತಪ್ಪನ್ನು ನಾನು ಮನ್ನಿಸಿದ್ದೇನೆ. ಭಕ್ತ ಶ್ರೇಷ್ಠನಾದ ನಿನ್ನನ್ನು ನಾನು ಯಾವಾಗಲೂ ಕರುಣೆಯಿಂದ ಕಾಪಾಡುತ್ತೇನೆ. ನನ್ನಲ್ಲಿ ನಿನ್ನ ಭಕ್ತಿಯು ದಿನೇ ದಿನೇ ಅಭಿವೃದ್ಧಿ ಹೊಂದುವದು. ಈಗ ಮತ್ತೆ ಬೇರೆ ಏನಾದರೂ ಬೇಕಾದರೆ ಕೇಳು.

**ಧನಂಜಯ:-** ಭಗವನ್, ಈ ಜನ್ಮದಲ್ಲಿ ಇದ್ದಂತೆ ನನಗೆ ಮುಂದಿನ ಎಲ್ಲ ಜನ್ಮಗಳಲ್ಲಿಯೂ ನಿನ್ನ ವಿಷಯಗಳಲ್ಲಿ ಅವಿಚ್ಛಿನ್ನ ಭಕ್ತಿಯು ಉಳಿಯಲಿ. ಮತ್ತು ಬೆಳೆಯಲಿ. ಇದಕ್ಕಿಂತ ಬೇರೆ ವರ ಬೇಡ.

**ವ್ಯಾಸ:-** ಧನಂಜಯನ ಈ ಭಕ್ತಿರಸದಿಂದ ಸಿಕ್ತವಾದ ಮುಕ್ತಾಫಲದಂಥ ಮಾತುಗಳನ್ನು ಕೇಳಿ ಪರಮಪ್ರೀತನಾಗಿ ಆ ಕೇಶವನು ತನ್ನ ಕೊರಳೊಳಗಿನ ಮಾಲೆಯನ್ನು ತೆಗೆದು ಧನಂಜಯನ ಕೊರಳಲ್ಲಿ ಹಾಕಿದ ಮತ್ತು ನಾಲ್ಕೂ ಕೈಗಳಿಂದ ಅವನನ್ನು ತಬ್ಬಿಕೊಂಡು ತಂದೆ ಮಗನನ್ನು ತಕ್ಕೈಸುವಂತೆ ಆ ಧನಂಜಯನನ್ನು ಸಂತೈಸಿ ಸಂತೋಷ ಪಡಿಸಿ ಮಾತನಾಡಿದ.

**ಶ್ರೀಹರಿ:-** ಬ್ರಾಹ್ಮಣ, ನೀನು ನನ್ನ ನಿಜವಾದ ಭಕ್ತ. ನನ್ನ ಪ್ರಸಾದದಿಂದ ನಿನಗೆ ಬೇಗನೆ ಎಲ್ಲ ವಿಧವಾದ ಸುಖಸೌಭಾಗ್ಯಗಳು ದೊರಕುತ್ತವೆ. ನೀನು ಅಶ್ವತ್ಥ ರೂಪಿಯಾದ ನನ್ನನ್ನು ನಿರಂತರವೂ ಬಿಟ್ಟೂಬಿಡದೇ ಆರಾಧನೆ ಮಾಡು. ನಾನು ನಿನ್ನ ಮನೋಭೀಷ್ಟಗಳನ್ನೆಲ್ಲ ಪೂರೈಸುತ್ತೇನೆ.

ಹೀಗೆ ಹೇಳಿ ಶ್ರೀಹರಿಯು ಆ ಬ್ರಾಹ್ಮಣನನ್ನು ಮತ್ತೊಮ್ಮೆ ಆಲಿಂಗಿಸಿಕೊಂಡು ಒಮ್ಮೆಲೇ ಅಲ್ಲಿಂದ ಅದೃಶ್ಯನಾದ. ವಿಷ್ಣುವಿನ ಕೊರಳಲ್ಲಿಯ ಕಂಠಮಾಲೆಯನ್ನು ಸಾಕ್ಷಾತ್ ಅವನ ಕರಕಮಲದಿಂದಲೇ ಪಡೆದ ಆ ಬ್ರಾಹ್ಮಣ ತಾನು ಕೃತಕೃತ್ಯನಾದೆ ಎಂದು ಭಾವಿಸಿದ. ಭಗವಂತನ ಆಜ್ಞೆಯಂತೆ ಅವನ ಸೇವೆ ಮಾಡಲು ಕುಬೇರ ವಿಶ್ವಕರ್ಮ ಮೊದಲಾದವರೆಲ್ಲರೂ ಆಗಮಿಸಿದರು. ಕುಬೇರ ಅವನ ಮನೆಯಲ್ಲಿ ಹಾಗೂ ಕೋಶಾಗಾರದಲ್ಲಿ ಅಪಾರ ಐಶ್ವರ್ಯವನ್ನು ತಂದು ಒಟ್ಟಿದ. ವಿಶ್ವಕರ್ಮ ಬಂದು ಧನಂಜಯನಿಗಾಗಿ ದಿವ್ಯ ಭವ್ಯವಾದ ಒಂದು ಪ್ರಸಾದವನ್ನು ಕಟ್ಟಿದ. ಅದರಲ್ಲಿ ವಸ್ತ್ರಾಭರಣಗಳಿಂದ ಅಲಂಕೃತರಾದ ಅಸಂಖ್ಯ ದಾಸ ದಾಸಿಯರು ಧನಂಜಯನ ಸೇವೆಗಾಗಿ ನಿಂತುಕೊಂಡರು. ಹೊರಗೆ ಅವನ ಅರಮನೆಯ ಅಂಗಳದಲ್ಲಿ ಐರಾವತದಂಥ ಅನೇಕ ಆನೆಗಳು ಝೂಲಾಡುತ್ತಿದ್ದವು. ಅವನ ಸೌಧದ ಹಿಂಬದಿಯ ಲಾಯದಲ್ಲಿ ಶ್ರೇಷ್ಠ ಕುದುರೆಗಳು ಕೆನೆಯುತ್ತಿದ್ದವು. ಹಿಂದೆ ದಟ್ಟದರಿದ್ರ ಎಂದು ಇವನ್ನು ಬಿಟ್ಟು ಹೋದ ಎಲ್ಲ ಬಂಧು ಬಾಂಧವರೂ ಈಗ ಅವನ ಬಳಿಗೆ ಬಂದು ಸೇರಿಕೊಂಡರು. ಗಂಡನನ್ನು ದರಿದ್ರ ಎಂದು ಧಿಕ್ಕರಿಸಿ ತವರುಮನೆ ಸೇರಿಕೊಂಡ ಮಡದಿ ''ತನ್ನ ಪತಿ ಕುಬೇರನಂತೆ ಕೋಟ್ಯಾಧೀಶನಾಗಿದ್ದಾನೆ'' ಎಂದು ಕೇಳಿ ಧಾವಿಸಿ ಬಂದಳು. ಇದು ನನ್ನ ಮನೆ. ನಾನೇ

ಮನೆಯ ಒಡತಿ. ಎಂದು ಹೇಳಿ ಎಲ್ಲ ಅಧಿಕಾರ ಸೂತ್ರವನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು. ಮನೆಬಿಟ್ಟು ಮನ ಬಂದ ಕಡೆ ಚದುರಿ ಹೋಗಿ ನೆಲಿಸಿದ್ದ ಮಕ್ಕಳೆಲ್ಲರೂ ತಂದೆಯ ಇಂದ್ರ ಸದೃಶವಾದ ಭೋಗ ಭಾಗ್ಯಗಳಿಗೆಲ್ಲ ನಾವೇ ಭಾಗೀದಾರರು ಎಂದು ಮನೆಯಲ್ಲಿ ಬಂದು ನಿಂತುಕೊಂಡರು. ಎಲ್ಲರೂ ಧನಂಜಯನ ಮೇಲೆ ಪ್ರೀತಿಯನ್ನು ಸುರಿಸುವವರೇ. ಅಂತಃಕರಣವನ್ನು ಬೀರುವವರೇ. ಇಷ್ಟು ದಿನ ಮಡದಿ ಮಕ್ಕಳು ಬಂಧು ಬಾಂಧವರು ತೊರೆದು ಹೋಗಿದ್ದರಿಂದ ಶೂನ್ಯ ಸ್ಮಶಾನದಂತೆ ಆಗಿರುವ ಆ ಮನೆ ನಂದಗೋಕುಲದಂತೆ ಬಂಧು ಬಾಂಧವರಿಂದ ತುಂಬಿ ಆನಂದಮಂದಿರವಾಯಿತು. ಧನಂಜಯನು ಹಿಂದಿನದೆಲ್ಲವನ್ನೂ ಮರೆತು ಪ್ರೀತಿಯಿಂದ ಮಡದಿ ಮಕ್ಕಳನ್ನೂ ಬಂಧು ಬಳಗದವರನ್ನೂ ಆದರಿಸಿ ಅವರೆಲ್ಲರೊಡನೆ ಚಿಕ್ಕಂದದಿಂದ ನಗುತ್ತ ನಲಿಯುತ್ತ ಸಂಸಾರದ ಸುಖವನ್ನು ಶ್ರೀಹರಿಯ ದಯದಿಂದ ಬದುಕಿ ಇರುವವರೆಗೂ ಅನುಭವಿಸಿದ. ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳಿಂದ ಸಕಲ ವಿಧವಾದ ಭೋಗಭಾಗ್ಯಗಳಿಂದ ಆ ಮನೆ ಇಂದ್ರಭವನದಂತೆ ಆನಂದಪೂರ್ಣವಾಗಿ ತುಂಬಿ ತುಳುಕುತ್ತಿತ್ತು. ಹರ್ಷರಸದ ಹೊನಲು ಎಲ್ಲರ ಪ್ರೀತಿ ವಿಶ್ವಾಸದ ಹಾಲು ಜೇನಿನೊಂದಿಗೆ ಬೆರತು ಆನಂದ ಮಂದಾಕಿನಿಯಾಗಿ ಹರಿಯುತ್ತಿತ್ತು. ಹೀಗೆ ಬಹುಕಾಲ ಭಾಗ್ಯೈಶ್ವರ್ಯಗಳಿಂದ ಭೋಗಜೀವನವನ್ನು ಬದುಕಿ, ಇರುವವರೆಗೂ ಇಹಲೋಕದ ಸುಖವನ್ನೆಲ್ಲ ಅನುಭವಿಸಿ ಕೊನೆಗೆ ಭಗವದನುಗ್ರಹದಿಂದ ಸಕುಟುಂಬವಾಗಿ ಮೋಕ್ಷವನ್ನು ಹೊಂದಿದ ಆ ಧನಂಜಯ.

**ವೇದವ್ಯಾಸ:-** ಅಶ್ವತ್ಥವೃಕ್ಷವು ಸಾಕ್ಷಾತ್ ಮಹಾವಿಷ್ಣುನ ಸ್ವರೂಪವೇ ಇದ್ದಂತೆ. ಆದರಲ್ಲಿ ಭಕ್ತಿ ಇಡುವವರಿಗೆ ಎಂದೂ ಅಶುಭವು ಉಂಟಾಗುವುದಿಲ್ಲ. ಅಶ್ವತ್ಥ ವೃಕ್ಷದ ಸೇವೆಯನ್ನು ವಿಷ್ಣುವಿನ ಧ್ಯಾನ ಪೂರ್ವಕವಾಗಿ ಮಾಡುವನರೋತ್ತಮನಿಗೆ ಸುಪ್ರಸನ್ನನಾಗಿ ಆ ಅಶ್ವತ್ಥನಾರಾಯಣನು ತನ್ನ ಪರಮಪದವನ್ನು ಪ್ರದಾನ ಮಾಡುತ್ತಾನೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಧನಂಜಯ ಬ್ರಾಹ್ಮಣನ ಆಖ್ಯಾನ ಎಂಬ ಹನ್ನೆರಡನೇಯ ಅಧ್ಯಾಯ ಮುಗಿದುದು*



## ಪ್ರಜಾ ಬ್ರಾಹ್ಮಣನ ಬೇಡರ ಕುಲದಲ್ಲಿ ಉತ್ಪತ್ತಿ ಮತ್ತು ಮುಕ್ತಿ

ಅಧ್ಯಾಯ - ೧೩

**ವೇದವ್ಯಾಸ:-** ಜ್ಯೇಷ್ಠ ಮಾಸದಲ್ಲಿ ಶ್ರೀಹರಿಯನ್ನು ತಣ್ಣಗಿನ ನೀರಿನಿಂದ ಅಭಿಷೇಕ ಮಾಡಬೇಕು. ಸುಗಂಧವಾದ ನೆಲ್ಲೀಕಾಯಿಯ ಚೂರ್ಣದಿಂದ ದೇವರ ವಿಗ್ರಹವನ್ನು ತಿಕ್ಕಿ ಮೊದಲು ಮೈಗೆ ಪೂಸಿದ ಎಣ್ಣೆ ಹೋಗುವಂತೆ ಚೆನ್ನಾಗಿ ತಣ್ಣೀರಿನಿಂದ ಅಭಿಷೇಕ ಮಾಡಬೇಕು. ಬಿಳಿಯ ಚಾಮರಗಳನ್ನು ಬೀಸಬೇಕು. ನವಿಲು ಗರಿಯ ಬೀಸಣಿಕೆಯಿಂದ ಗಾಳಿ ಹಾಕಬೇಕು. ತಾಳೆ ಮರದ ಎಲೆಯಿಂದ ಮಾಡಿದ ಬೀಸಣಿಕೆಯಿಂದಲೂ ಬೀಸಬೇಕು. ಸುಗಂಧಿಯಾದ ಗಂಧದಿಂದಲೂ ಚಂದನದಿಂದಲೂ ವಿಗ್ರಹದ ಗಾತ್ರಕ್ಕೆ ಲೇಪನವನ್ನು ಮಾಡಬೇಕು. ಅರಳಿದ ಹೂಗಳುಳ್ಳ ಉದ್ಯಾನದಲ್ಲಿ ಆಗಲಿ, ತುಳಸಿಯ ಬನದಲ್ಲಿ ಆಗಲಿ. ಸಂಧ್ಯಾಕಾಲದಲ್ಲಿ ತಂಗಾಳಿ ತೀಡುವ ತಾಣದಲ್ಲಿ ಒಂದು ಲತಾಮಂಟಪವನ್ನು ನಿರ್ಮಿಸಿ

ಅದರಲ್ಲಿ ಭಗವನ್ಮೂರ್ತಿಯನ್ನು ಸ್ಥಾಪಿಸಿ, ಹಸುರು ಪಾದರಿ ಹೂವಿನ ಮಾಲೆಯಿಂದ ಅಲಂಕರಿಸಬೇಕು. ಅದರಿಂದ ಒಂದು ಅಶ್ವಮೇಧ ಯಜ್ಞ ಮಾಡಿದಷ್ಟು ಪುಣ್ಯ ಬರುತ್ತದೆ. ಗ್ರೀಷ್ಮಕಾಲದಲ್ಲಿ ಮುತ್ತಿನ ಮಾಲೆಯನ್ನು ದೇವರಿಗೆ ಏರಿಸಿದವನು ಮರುಜನ್ಮದಲ್ಲಿ ಮಹಾರಾಜನಾಗಿ ಮೆರೆಯುತ್ತಾನೆ. ಇದರಂತೆ ರತ್ನದ ಮಾಲೆಯನ್ನು ಶ್ರೀಪತಿಯ ಕೊರಳಲ್ಲಿ ಹಾಕಿ ಅಲಂಕಾರ ಮಾಡಿದವನೂ ಭಗವಂತನಿಗೆ ಬೆಳ್ಳಿ ಬಂಗಾರದ ಆಭರಣಗಳನ್ನು ಇರಿಸಿ ಶೃಂಗರಿಸಿದವನೂ ಮುಂದೆ ಹರಿಮಂದಿರದಲ್ಲಿ ಮಣಿ ಮೌಕ್ತಿಕಮಾಲೆಗಳನ್ನು ಹಾಕಿಕೊಂಡು ಆನಂದದಿಂದ ನಲಿಯುತ್ತಾರೆ. ಬೇಸಿಗೆಕಾಲದಲ್ಲಿ ದೇವರಿಗೆ ದಪ್ಪ ಬಟ್ಟೆಯನ್ನು ಹೊದಿಸಬಾರದು. ತೆಳ್ಳಗಿನ ಬಟ್ಟೆಯನ್ನು ಮಾತ್ರ ಉಡಿಸಿ ಹೊದಿಸಬೇಕು. ಬೇಸಿಗೆಯಲ್ಲಿ ಅಕ್ಕಿಯ ಗಂಜಿಯನ್ನು ಮಾಡಿ ಅದರಲ್ಲಿ ಬಗೆಬಗೆಯ ವ್ಯಂಜನಗಳನ್ನು ಹಾಕಿ ದೇವರಿಗೆ ನೈವೇದ್ಯ ತೋರಿಸಬೇಕು.

ಆಷಾಢ ಮಾಸದಲ್ಲಿ ದೇವರಿಗೆ ಗಟ್ಟಿಯಾದ ಕೆನೆ ಮೊಸರಿನಿಂದ ಸ್ನಾನ ಮಾಡಿಸಿ ಅನಂತರ ಶುದ್ಧೋದಕದಿಂದ ತೊಳೆದು, ಕದಂಬಕುಸುಮಗಳಿಂದ ಹಾಗೂ ಕಡಹದ ಹೂವಿನ ಮಾಲೆಗಳಿಂದ ಹರಿಯನ್ನೂ ಮಂಟಪವನ್ನೂ ಅಲಂಕರಿಸಬೇಕು. ಜ್ಯೇಷ್ಠಮಾಸದಲ್ಲಿ ಕೇದಿಗೆಯ ಹೂಗಳನ್ನು ಅರ್ಪಿಸಬೇಕು. ಆಷಾಢಮಾಸದಲ್ಲಿ ಭಗವಂತನಿಗೆ ಹಲಸಿನ ಕಾಯಿಯ ತೊಳೆಗಳನ್ನು ತುಪ್ಪದಲ್ಲಿ ಕರಿದು ನೈವೇದ್ಯ ನೀಡಬೇಕು. ಮತ್ತು ಮೊಸರನ್ನ, ಬೆಣ್ಣೆ ನೈವೇದ್ಯವು ಹರಿ ಪ್ರೀತಿಕಾರಕ. ಮಲ್ಲಿಗೆ, ಮಾಲತಿ, ಶೇಫಾಲಿಕಾ ಬಕುಲ, ಕುರಬಕ, ಕದಂಬ, ಗುಲಾಬಿ ಮುಂತಾದ ಹೂಗಳಿಂದ ಹರಿಯ ಪೂಜೆಯನ್ನು ಈ ತಿಂಗಳಲ್ಲಿ ಮಾಡಬೇಕು.

ಶ್ರಾವಣ ಮಾಸದಲ್ಲಿ ತುಪ್ಪದಿಂದ ಸಂಸ್ಕಾರ ಮಾಡಿದ ಭಕ್ತ್ತರಳನ್ನು ದೇವರಿಗೆ ನಿವೇದಿಸಬೇಕು.

ಭಾದ್ರಪದ ಮಾಸದಲ್ಲಿ ದೇವರನ್ನು ನೊಣ ಸೊಳ್ಳೆಗಳು ಇದ್ದ ಹಳೆ ಮನೆಯಿಂದ ಹೊಸ ಮಂದಿರಕ್ಕೆ ಕರೆದುಕೊಂಡು ಹೋಗಿ ಪ್ರತಿಷ್ಠೆಗೈಯಬೇಕು. ಮುರುಕುಬಾಗಿಲು, ಸರಿದ ಜಂತಿ, ಕುಸಿಯುವ ಚಪ್ಪರ, ಬೀಳಲಿಕ್ಕಾದ ಗೋಡೆಗಳುಳ್ಳ ಸೋರುವ ಜೀರ್ಣವಾದ ಗುಡಿಯಲ್ಲಿ, ಮಳೆನೀರಿನಿಂದ ಕೆಸರಾದ ಪರಿಸರದಲ್ಲಿ ದೇವರನ್ನು ಮಳೆಗಾಲದಲ್ಲಿ ಕೂಡಿಸಬಾರದು. ಹೊಸಮನೆ ಹೊಸ ಮಂದಿರದಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿ ಬೆಳಕಿನಕಿಂಡಿಗಳಿಂದ ಗಾಳಿ, ಬೆಳಕು, ಬೆಳದಿಂಗಳು ಹರಿದು ಬರುವಂತೆ ಮಾಡಬೇಕು. ರಾತ್ರಿಕಾಲದಲ್ಲಿ ಗುಗ್ಗುಳ, ದಶಾಂಗ, ಮುಂತಾದ ಧೂಪಗಳನ್ನು ಹಾಕಿ ಮಂದಿರದಲ್ಲಿ ನೊಣ, ಗುಂಗಾಡು, ನುಶಿ, ಸೊಳ್ಳೆ, ಮುಂತಾದ ಕೀಟಗಳ ಕಾಟ ಆಗದಂತೆ ನೋಡಿಕೊಳ್ಳಬೇಕು. ಮಳೆಗಾಲದಲ್ಲಿ ಸೊಳ್ಳೆ ಪರದೆ ಕಟ್ಟಿ, ಮಂಚದ ಮೇಲೆ ರಾತ್ರಿ ಭಗವಂತನ ವಿಗ್ರಹವನ್ನು ಮಲಗಿಸಿ ಶಯನೋತ್ಸವವನ್ನು ಮಾಡಿಸಬೇಕು. ಕಲ್ಹಾರಪುಷ್ಪದಿಂದ ಪ್ರತಿದಿನ ದೇವರ ಪೂಜೆಯನ್ನು ಮಾಡಬೇಕು. ಭಾದ್ರಪದದಲ್ಲಿ ಕೇದಿಗೆ ಹೂಗಳನ್ನು ಮಾತ್ರ ದೇವರಿಗೆ ಏರಿಸಬಾರದು. ಪಕ್ವವಾದ ತಾಳೆಯ ಹಣ್ಣನ್ನು ಹಾಲುತುಪ್ಪದಲ್ಲಿ ಬೆರಿಸಿ ತಾಳೆಯ ಕಾಯಿಗಳನ್ನು ಒಣಗಿಸಿ ಬೀಸಿ ಮಾಡಿದ ಹಿಟ್ಟನ್ನು ತುಪ್ಪದಲ್ಲಿ ಕೂಡಿಸಿ ಮುದ್ದೆ ಅಥವಾ ಉಂಡೆಯನ್ನು ಮಾಡಿ ದೇವರಿಗೆ ಸಮರ್ಪಿಸಬೇಕು. ಭಾದ್ರಪದ ಮಾಸದಲ್ಲಿ ತರಕಾರಿ ತಿನ್ನಬಾರದು. ರಾತ್ರಿ ಊಟಮಾಡಬಾರದು.

ಅಶ್ವೀನ ಮಾಸದಲ್ಲಿ ಸುಗಂಧಿಯಾದ ಸಿಹಿನೀರನ್ನು ಪ್ರಾತಃಕಾಲದಲ್ಲಿ ಸಮರ್ಪಣ ಮಾಡಬೇಕು.

**ಏಕವಸ್ತ್ರೇಣ ರಾಜೇಂದ್ರ ನ ಕುರ್ಯಾತ್ ಪೂಜನಂ ಹರೇಃ ।**
**ಕುರ್ಯಾದ್ವಾಪಿ ತಥಾ ಪೂಜಾಂ ನ ಗೃಹ್ನಾತಿ ಚ ಕೇಶವಃ ॥**

ಒಂಟಿ ವಸ್ತ್ರದಿಂದ ಅಥವಾ ಒಗೆದು ಶುದ್ಧ ಮಾಡದ ವಸ್ತ್ರದಿಂದ ದೇವರ ಪೂಜೆಯನ್ನು ಮಾಡಬಾರದು. ಚಂಡಿಕೆ ಕಟ್ಟಿಕೊಳ್ಳದೇ ಪೂಜೆ ಮಾಡಬಾರದು. ಕಸ ಬಳಿದು ಸಾರಿಸಿ ರಂಗವಲ್ಲಿ ಹಾಕದೇ ಇರುವ ಅಸಂಸ್ಕೃತಗೃಹದಲ್ಲಿ ದೇವರ ಪೂಜೆ ಮಾಡಬಾರದು. ಯಾವದೇ ಪುಣ್ಯಕಾರ್ಯವನ್ನು ಮಾಡುವಾಗ ತಿಲಕಹಚ್ಚಿಕೊಳ್ಳದೇ ಹಸಿರು ಹಣೆಯಿಂದ ಮಾಡಬಾರದು. ಸ್ನಾನ ಮಾಡುವಾಗಲೂ ಕೂಡ ತುಳಸಿಯ ಮೃತ್ತಿಕೆಯನ್ನು ಹಚ್ಚಿಕೊಂಡೇ ಸ್ನಾನಮಾಡಬೇಕು. ಸ್ನಾನನಂತರ ಗೋಪೀಚಂದನದಿಂದ ಊರ್ಧ್ವಪುಂಡ್ರ ಧಾರಣ, ಶಂಖ ಚಕ್ರಾದಿ ಧಾರಣವು ವಿಷ್ಣು ಭಕ್ತರಿಗೆ ಅತ್ಯವಶ್ಯ.

**ಸ್ನಾನಂ ದೇವಾರ್ಚನಂ ಚೈವ ದಾನಂ ಚ ಪಿತೃಪೂಜನಂ ।**
**ತಿಲಕೇನ ವಿನಾ ವಿಪ್ರ ಕುರುತೇ ನ ವಿಚಕ್ಷಣಃ ॥**

ಸ್ನಾನ, ದೇವರ ಪೂಜೆ, ದಾನ, ಪಿತೃಕಾರ್ಯಗಳನ್ನು ವಿವೇಕಿಗಳಾದವರು ತಿಲಕವಿಲ್ಲದೇ ಮಾಡಬಾರದು. ಕೃಷ್ಣನ ಆಯುಧವಾದ ಶಂಖ ಚಕ್ರಾದಿ ಆಯುಧಗಳಿಂದ ತನ್ನ ದೇಹವನ್ನು ಅಂಕಿತವನ್ನಾಗಿ ಮಾಡಿಕೊಂಡು ಕೃಷ್ಣನ ಪೂಜೆ ಮಾಡುವವರ ಎಲ್ಲ ಕರ್ಮಗಳೂ ಅಕ್ಷಯ ಫಲಪ್ರದವಾಗುತ್ತವೆ. ಈ ವಿಷ್ಣುವಿನ ಲಾಂಛನಗಳನ್ನು ಧರಿಸಿದ ಮಾನವರನ್ನು ನೋಡಿ ಭೂತ, ಪ್ರೇತ, ರಾಕ್ಷಸ, ದುಷ್ಟಗ್ರಹ ಮುಂತಾದವುಗಳು ಓಡಿ ಹೋಗುತ್ತವೆ. ಕಾಮಣಿ ಮೊದಲಾದ ರೋಗಗಳು ಕೂಡ ವಾಸಿಯಾಗುತ್ತವೆ.

ಆಶ್ವೀನ ಮಾಸದಲ್ಲಿ ಕರಕಿ ಪತ್ರವನ್ನು ಏರಿಸಿ ಪೂಜೆ ಮಾಡಿದವರ ಸಂತತಿಯು ಕರಕಿಯಂತೆ ಬೆಳೆಯುತ್ತಲೇ ಹೋಗುತ್ತದೆ.

ಕಾರ್ತೀಕಮಾಸದಲ್ಲಿ ಮನುಷ್ಯನು ದಾಮೋದರನನ್ನು ಭಕ್ತಿಯಿಂದ ಪೂಜಿಸಬೇಕು. ಮತ್ತು ಮಾಂಸ ಮೈಥುನಗಳನ್ನು ಕಾರ್ತೀಕ ಮಾಸದಲ್ಲಿ ಪೂರ್ತಿ ಬಿಟ್ಟು ಬಿಡಬೇಕು. ಕಾರ್ತೀಕದಲ್ಲಿ ಪ್ರಾತಃಸ್ನಾನ, ಹರಿಷ್ಯಾನ್ನಭೋಜನ ಮತ್ತು ಬ್ರಹ್ಮಚರ್ಯ ಇವು ಮೂರನ್ನು ಪ್ರಯತ್ನಪೂರ್ವಕವಾಗಿ ಸಾಧಿಸಬೇಕು. ಎರಡು ಹೊತ್ತು ಊಟ, ಪರಾನ್ನ, ಎಣ್ಣೆ ಮೂರನ್ನು ವರ್ಜಿಸಬೇಕು. ದಾಮೋದರನ ಪ್ರೀತಿಗಾಗಿ ಕಾರ್ತೀಕ ಮಾಸದಲ್ಲಿ ಆಕಾಶದೀಪ ಹಚ್ಚಬೇಕು. ಆದರಿಂದ ಇವನೊಬ್ಬ ಪುಣ್ಯಾತ್ಮ ಎಂದು ದೇವತೆಗಳು ಹೊಗಳಿ ಅವನನ್ನು ಆಶೀರ್ವದಿಸುವರು. ಕಾರ್ತೀಕ ಮಾಸದಲ್ಲಿ ದೇವರ ಗುಡಿಯಲ್ಲಿ ನಂದಾದೀಪವನ್ನು ಇಟ್ಟರೆ ಅಶ್ವಮೇಧ ಯಜ್ಞ ಮಾಡಿದಷ್ಟು ಪುಣ್ಯ ಬರುತ್ತದೆ.

ಕಾರ್ತೀಕ ಮಾಸದಲ್ಲಿ ಲಕ್ಷ ತುಳಿಸಿ ಏರಿಸಿ ಪೂಜೆ ಮಾಡಿದವರು ಒಂದು ಲಕ್ಷ ಅಶ್ವಮೇಧ ಮಾಡಿದ್ದ ಪುಣ್ಯವನ್ನು ಪಡೆಯುತ್ತಾರೆ. ಒಂದು ಲಕ್ಷ ಬಿಲ್ವಪತ್ರಗಳನ್ನು ಹಾಗೂ ಲಕ್ಷಕಮಲದ ಹೂಗಳನ್ನು ಕಾರ್ತೀಕದಲ್ಲಿ ದೇವರಿಗೆ ಸಮರ್ಪಿಸುವುದರಿಂದ ಶ್ರೀಹರಿಯ ಪೂರ್ಣ ಅನುಗ್ರಹ ಪ್ರಾಪ್ತವಾಗುವದು. ಕಾರ್ತೀಕದಲ್ಲಿ ಕಮಲ ಪುಷ್ಪದಿಂದ ಕಮಲನಾಭನ

ಪೂಜೆಯನ್ನು ಮಾಡದವನ ಮನೆಯಲ್ಲಿ ಕಮಲಾದೇವಿಯೆನಿಸಿದ ಲಕ್ಷ್ಮಿಯು ನಿಲ್ಲಲಾರಳು. ಕಮಲದ ಬೀಜಗಳನ್ನು ಕೇಶವನಿಗೆ ಸಮರ್ಪಣೆ ಮಾಡಿದರೆ ಚತುರ್ವೇದ ಪಾರಂಗತರಾದ ಬ್ರಾಹ್ಮಣಕುಲದಲ್ಲಿ ಜನ್ಮಪಡೆಯುತ್ತಾರೆ. ಕಮಲದಂಥ ಹೂ ಜಗತ್ತಿನೊಳಗೇ ಬೇರೆ ಇಲ್ಲ. ಈ ಪದ್ಮಪುಷ್ಪವನ್ನು ಗೋವಿಂದನಿಗೆ ಏರಿಸಿ ಪೂಜೆ ಮಾಡಿದವನು ಮೋಕ್ಷವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಪ್ರಜಾ ಎಂಬ ಹೆಸರಿನ ವೇದಶಾಸ್ತ್ರಪಾರಂಗತನಾದ ಒಬ್ಬ ಬ್ರಾಹ್ಮಣನು ಇದ್ದ. ಅವನು ವಿಶೇಷವಾಗಿ ದೇವ ಬ್ರಾಹ್ಮಣರ ಸೇವೆಯನ್ನೂ ಗುರುಹಿರಿಯರ ಆರಾಧನೆಯನ್ನೂ ವಿಷ್ಣುವಿನ ಪೂಜೆಯನ್ನೂ ಭಕ್ತಿಯಿಂದ ನೂರು ಕಾರ್ಯಗಳಿದ್ದರೂ ಬಿಡದೇ ಪ್ರತಿದಿನ ಮಾಡುತ್ತಲಿದ್ದ. ಹೆರವರ ಹಣ ಅವನ ಪಾಲಿಗೆ ವಿಷ. ಪರಸ್ತ್ರೀಯೆಂದರೆ ತನ್ನ ತಾಯಿಯ ಸ್ವರೂಪ. ಅತಿಥಿಗಳನ್ನು ಕಂಡರೆ ಪರಮಾನಂದ. ಅವನು ಮಾಡದ ಯಜ್ಞ, ವ್ರತ, ಉಪವಾಸ, ಜಪ, ತಪ, ಪೂಜೆ ಒಂದೂ ಉಳಿಯಲಿಲ್ಲ. ಹರಿಯ ಪಾದವೆಂಬ ತಾವರೆಯಲ್ಲಿ ದುಂಬಿಯಂತೆ ಅವನ ಮನಸ್ಸು ಸದಾ ಆಸಕ್ತವಾಗಿತ್ತು. ಶತ್ರುಗಳಲ್ಲಿಯೂ ಮಿತ್ರರಲ್ಲಿಯೂ ಅವನು ಉದಾಸೀನ. ಹರಿಧ್ಯಾನದಲ್ಲಿಯೇ ಸರ್ವದಾ ಲೀನ.

ಒಂದು ದಿನ ಅವನ ಮನಸ್ಸಿನಲ್ಲಿ ಹೀಗೆ ವಿಚಾರ ಬಂದಿತು. ''ನಾನು ಪೂರ್ವ ಜನ್ಮದಲ್ಲಿ ಏನು ಆಗಿದ್ದೆ? ಯಾವ ಕಾರ್ಯ ಮಾಡಿದೆ? ನನಗೆ ಹಿಂದಿನ ಜನ್ಮದಲ್ಲಿ ಸಾವು ಹೇಗೆ ಬಂದಿತು? ನಾನು ಯಾವ ಜಾತಿಯವನಾಗಿದ್ದೆ? ಈಗ ಇಂದು ಇಂಥ ಶ್ರೇಷ್ಠ ಬ್ರಾಹ್ಮಣ ಜನ್ಮ ಬರಲು ನಾನು ಯಾವ ಪುಣ್ಯ ವಿಶೇಷವನ್ನು ಮಾಡಿದ್ದೆ?''

ಹೀಗೆಲ್ಲ ಪ್ರಶ್ನೆಗಳು ಅವನ ಮುಂದೆ ಬಂದು ನಿಂತವು. ಕುಳಿತಾಗ ನಿಂತಾಗಲೆಲ್ಲ ಈ ಪ್ರಶ್ನೆ ಅವನ ತಲೆ ತಿನ್ನತೊಡಗಿತು. ಆ ಪ್ರಶ್ನೆಗೆ ಉತ್ತರ ಎಲ್ಲಿಯೂ ದೊರಕದೇ ಮನಸ್ಸಿನಲ್ಲಿ ತೊಳಲಿದ. ತಿಳಿಯದೇ ನಿಟ್ಟಿಸುರು ಬಿಟ್ಟ. ಕೊನೆಗೆ ಅವನು ತನ್ನ ಜನ್ಮಾಂತರದ ವೃತ್ತಾಂತವನ್ನು ಅರಿಯಬೇಕೆಂದು ಒಂದು ಶಿವಕ್ಷೇತ್ರಕ್ಕೆ ಹೋದ. ಅಲ್ಲಿ ಇರುವ ಮಹಾದೇವರನ್ನು ಭಕ್ತಿಯಿಂದ ಪ್ರಾರ್ಥನೆ ಮಾಡಿದ.

ಪ್ರಜಾಬ್ರಾಹ್ಮಣ:-

ನಮಸ್ತುಭ್ಯಂ ಮಹಾದೇವ ನಮಸ್ತೇ ಪರಮೇಶ್ವರ ।
ನಮಸ್ತೇ ಶಂಕರೇಶಾನ ನಮಸ್ತೇ ವರದ ಪ್ರಭೋ ॥

ನಮಸ್ತೇ ಜ್ಞಾನರೂಪಾಯ ನಮಸ್ತೇ ಜ್ಞಾನದಾಯಿನೇ ।
ನಮಸ್ತೇ ಸರ್ವಭೂತಾನಾಂ ಹೃದಂಬುಜ ನಿವಾಸಿನೇ ॥

ಜ್ಞಾನರೂಪಿಯೂ ಜ್ಞಾನದಾಯಕನೂ ಎಲ್ಲ ಪ್ರಾಣಿಗಳ ಹೃದಯ ಕಮಲದಿ ವಾಸಿಸುವವನೂ ಆದ ನಿನಗೆ ನನ್ನ ನಮಸ್ಕಾರ.

ಜಗತ್ಸ್ರಷ್ಟ್ರೇ ನಮಸ್ತುಭ್ಯಂ ಜಗತ್ಪಿತ್ರೇ ನಮೋ ನಮಃ ।
ನಮಃ ಸಂಹಾರ ಕರ್ತ್ರೇ ಚ ಪಶೂನಾಂ ಪತಯೇ ನಮಃ ॥

ಜಗತ್ತಿನ ಸೃಷ್ಟಿ ರಕ್ಷಣೆ ಸಂಹಾರ ಮಾಡುವ ಪಶುಪತಿಗೆ ನಮಸ್ಕಾರ.

**ನಮಸ್ತೇಽಸ್ತು ತ್ರಿನೇತ್ರಾಯ ನಮಸ್ತೇ ವಹ್ನಿ ಚಕ್ಷುಷೇ**
**ನಮಸ್ತೇ ಚಂದ್ರನೇತ್ರಾಯ ಸೂರ್ಯನೇತ್ರಾಯ ವೈ ನಮಃ**

ಚಂದ್ರಸೂರ್ಯ ಅಗ್ನಿ ಎಂಬ ಮೂರು ಕಣ್ಣುಗಳುಳ್ಳ ಮುಕ್ಕಣ್ಣನಿಗೆ ನಮಸ್ಕಾರ.

**''ನಮಸ್ತೇ ಭಸ್ಮಭೂಷಾಯ ನಮಸ್ತೇ ಕೃತಿವಾಸಸೇ**
**ನಮೋಽಸ್ಥಿ ಮಾಲಿನೇ ತುಭ್ಯಂ ನೀಲಕಂಠಾಯ ಮೈ ನಮಃ ॥**

ಆನೆಯ ತೊಗಲನ್ನು ಹೊದ್ದು ಮೂಳೆಗಳ ಮಾಲೆಯನ್ನೇ ಧರಿಸಿದ, ಭಸ್ಮಭೂಷಿತನಾದ ಕಪ್ಪು ಕೊರಳಿನ ನೀಲಕಂಠನಿಗೆ ವಂದನೆ.

**ನಮಸ್ತೇ ಪಂಚವಕ್ತ್ರಾಯ ನಮಸ್ತೇ ಶೂಲಪಾಣಯೇ**
**ಕಂದರ್ಪದರ್ಪ ವಿಧ್ವಂಸ ಕಾರಿಣೇ ಭೀಮಮೂರ್ತಯೇ ॥**

ಕಾಮನ ಗರ್ವವನ್ನು ನಾಶ ಪಡಿಸಿದ ಐದು ಮುಖದ ಶೂಲಪಾಣಿಗೆ ನಮಸ್ಕಾರ.

**ನಮಸ್ತೇ ದೇವ ದೇವಾಯ ನಮಸ್ತೇ ತ್ರಿಪುರಾರಯೇ**
**ಪಾರ್ವತೀಪತಯೇ ತುಭ್ಯಂ ನಮಸ್ತೇ ಭೀಮಮೂರ್ತಯೇ ॥**

ದೇವತೆಗಳ ದೇವತೆಯೂ, ಭೀಷಣವಾದ ಆಕಾರವುಳ್ಳವನೂ, ತ್ರಿಪುರಾಸುರನನ್ನು ಸಂಹರಿಸಿದವನೂ ಆದ ಪಾರ್ವತಿ ಪತಿಯೇ, ನಿನಗೆ ನಮಸ್ಕಾರ.

**ಗಂಗಾಧರಾಯ ವೈ ತುಭ್ಯಂ ದಕ್ಷಯಜ್ಞ ವಿನಾಶಿನೇ**
**ಪ್ರೇತಾನಾಂ ಪತಯೇ ತುಭ್ಯಂ ನಮಸ್ತುಭ್ಯಂ ಪಿನಾಕಿನೇ ॥**

ಪಿನಾಕ ಎಂಬ ಧನುಸ್ಸನ್ನು ಕೈಯಲ್ಲಿ ಹಿಡಿದಂಥ, ಭೂತಪ್ರೇತಗಳಿಗೆಲ್ಲ ಒಡೆಯನಾದ, ದಕ್ಷ ಪ್ರಜಾಪತಿಯ ಯಜ್ಞವನ್ನು ವಿಧ್ವಂಸಗೊಳಿಸಿದ, ಗಂಗೆಯನ್ನು ತಲೆಯ ಮೇಲೆ ಧರಿಸಿದ ಪರಮೇಶ್ವರನಿಗೆ ನಮಸ್ಕಾರ.

ಪ್ರಜಾ ಬ್ರಾಹ್ಮಣನು ಭಕ್ತಿ ಪುರಸ್ಸರವಾಗಿ ಮಾಡಿದ ಈ ಸ್ತೋತ್ರದಿಂದ ಪ್ರಸನ್ನನಾಗಿ ಮಹಾದೇವ ಅವನಿಗೆ ತನ್ನ ಪ್ರತ್ಯಕ್ಷ ದರ್ಶನವನ್ನು ಇತ್ತ. ಆ ಪ್ರಜಾಬ್ರಾಹ್ಮಣನು ಒಮ್ಮೆಲೇ ಮಹೇಶ್ವರನು ತನ್ನ ಕಣ್ಣೆದುರು ಪ್ರಾದುರ್ಭೂತನಾದದ್ದನ್ನು ನೋಡಿ ಶ್ರದ್ಧೆಯಿಂದ ವಂದಿಸಿದ ಅವನ ಅಡಿದಾವರೆಗಳಿಗೆ ಮತ್ತು ಕೈ ಜೋಡಿಸಿ,

**ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಕೃತಾರ್ಥೋಽಸ್ಮಿ ಚ ಭಾಗ್ಯವಾನ್**
**ನಮಸ್ತುಭ್ಯಂ ನಮಸ್ತುಭ್ಯಂ ಪ್ರಸೀದ ಪರಮೇಶ್ವರ**

ಪರಮೇಶ್ವರ, ನಾನು ಇಂದು ಕೃತಾರ್ಥನು ಆದೆ. ಕೃತಕೃತ್ಯನಾದೆ, ಧನ್ಯನಾದೆ. ಭಾಗ್ಯವಂತನಾದೆ. ನಿನಗೆ ನನ್ನ ನಮಸ್ಕಾರ. ನಮೋ ನಮಃ

**ಯನ್ನಾಮ ಸ್ಮರಣಾದೇವ ಮಹಾಪಾತಕಿನೋಪಿ ಚ**
**ಗಚ್ಛಂತಿ ಪರಮಂ ಸ್ಥಾನಂ ಸಮೀಕ್ಷೇ ತಮಹಂ ಪ್ರಭುಂ ॥**

ಯಾವನ ನಾಮಸ್ಮರಣ ಮಾತ್ರದಿಂದಲೇ ಮಹಾಪಾಪಿಗಳೂ ಕೂಡ ದಿವ್ಯ ಸ್ಥಾನವನ್ನು ಹೊಂದುವರೋ ಅಂಥ ಮಹಾಪ್ರಭು ಪರಮೇಶ್ವರನನ್ನು ನಾನು ಈಗ ಸಾಕ್ಷಾತ್ ಆಗಿ ನೋಡುತ್ತಲಿದ್ದೇನೆ.

**ಧ್ಯಾನಾವಸ್ಥಿತ ಚಿತ್ತೇನ ಯೋ ದೃಶ್ಯಃ ಪರಮೇಶ್ವರಃ**
**ಪಶ್ಯಾಮಿ ತಮಹಂ ಸಾಕ್ಷಾತ್ ಸಾಧ್ಯಂ ಕಿಮಪರಂ ಮಮ ॥**

ಯಾವ ಪರಮೇಶ್ವರನು ಧ್ಯಾನ ಸಮಾಧಿಯಲ್ಲಿ ಲೀನವಾದ ಚಿತ್ತದಲ್ಲಿ ಮಾತ್ರ ಯೋಗಿಗಳಿಂದ ಕಾಣಲ್ಪಡುವನೋ ಅಂಥ ಮಹಾದೇವನಾದ ನಿನ್ನನ್ನು ನಾನು ಇಂದು ಸಾಕ್ಷಾತ್ ಆಗಿ ಈ ನನ್ನ ಕಣ್ಣಿನಿಂದಲೇ ನೋಡುತ್ತಲಿದ್ದೇನೆ. ಇದರ ಹೊರತು ಹೆಚ್ಚಿನ ಯಾವ ಧ್ಯೇಯವನ್ನು ನಾನು ಸಾಧಿಸಬೇಕಾಗಿದೆ?

**ಯಂ ನ ಪಶ್ಯಂತಿ ದೇವೇಶಂ ದೇವಾ ಅಪಿ ಸವಾಸವಾಃ**
**ಪಶ್ಯಾಮಿ ತಮಹಂ ಸಾಕ್ಷಾತ್ ಮಹಾಭಾಗ್ಯಮಿದಂ ಮಮ ॥**

ಇಂದ್ರಾದಿ ದೇವತೆಗಳು ಕೂಡ ಯಾವನನ್ನು ನೋಡಲಾರರೋ ಅಂಥ ದೇವತೆಗಳ ಒಡೆಯನಾದ ಮಹಾದೇವನನ್ನು ನಾನು ಸಾಕ್ಷಾತ್ ಆಗಿ ಕಾಣುತ್ತಲಿದ್ದೇನೆ. ಇದು ನನ್ನ ಅಹೋಭಾಗ್ಯ. ಮತ್ತು ಮಹಾಭಾಗ್ಯ.

**ಮಹಾದೇವ:-** ದ್ವಿಜೋತ್ತಮ, ನಿನ್ನ ಈ ಮಾತಿನಿಂದ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಏನಾದರೂ ವರವನ್ನು ಕೊಡಬೇಕು ಎಂದು ನನಗೆ ಅಪೇಕ್ಷೆಯಾಗಿದೆ. ಮಹಾನುಭಾವ. ಯಾವುದಾದರೂ ಒಂದು ವರವನ್ನು ಕೇಳಿಕೋ.

**ಪ್ರಜಾಬ್ರಾಹ್ಮಣ:-** ಭಗವನ್, ದೇವದುರ್ಲಭನಾದ ನೀನು ನನಗೆ ಸಾಕ್ಷಾತ್ಕಾರ ಗೋಚರನಾಗಿರುವೆ. ಇನ್ನು ಬೇರೆ ವರಗಳು ಏಕೆ? ಆದರೂ ನೀನು ವರವನ್ನು ಕೊಡಲು ಬಯಸಿದೆ. ಆದ್ದರಿಂದ ಒಂದು ವರವನ್ನು ಕೇಳುತ್ತೇನೆ. ಪ್ರಶ್ನೆಯನ್ನು ಮಾಡುತ್ತೇನೆ. ಉತ್ತರಿಸು. ನಾನು ಪೂರ್ವಜನ್ಮದಲ್ಲಿ ಏನು ಆಗಿದ್ದೆ? ಯಾವ ಕಾರ್ಯವನ್ನು ಮಾಡಿದ್ದೆ? ಈ ಸಂಸಾರವೆಂಬ ಸಮುದ್ರದಲ್ಲಿ ಹೇಗೆ ಬಂದು ಬಿದ್ದೆ? ಹಿಂದಿನ ನನ್ನ ಯಾವ ಕರ್ಮಗಳ ಪ್ರಭಾವದಿಂದ ನನಗೆ ಈ ಬ್ರಾಹ್ಮಣ ಜನ್ಮ ಬಂದಿದೆ. ಈ ಮನುಷ್ಯ ಜನ್ಮವೆಲ್ಲವೂ ದುಃಖದಾಯಕವೇ. ಈ ಜನ್ಮದಲ್ಲಿ ಮನುಷ್ಯನು ಅನುಭವಿಸುವ ದುಃಖಗಳಿಗೆಲ್ಲ ಜನ್ಮಾಂತರದ ಪಾಪಗಳೇ ಮೂಲ. ನನ್ನ ಹಿಂದಿನ ಜನ್ಮದ ವೃತ್ತಾಂತವನ್ನು ನಾನು ಕೇಳಬೇಕು ಎಂದು ಬಯಸುತ್ತಿದ್ದೇನೆ. ಗರ್ಭವಾಸದಂಥ ದುಃಖವೇ ಇಲ್ಲ ಎಂದು ತಿಳಿದವರು ಹೇಳುತ್ತಾರೆ. ನನ್ನ ತಾಯಿಯ ಗರ್ಭದಲ್ಲಿ ನಾನು ಇಂಥ ಘೋರ ದುಃಖವನ್ನು ಹೇಗೆ ಅನುಭವಿಸಿದೆ? ಜನನ ಮರಣಾದಿ ಜಾಲದ ದುಃಖದಾವಾನಲದಿಂದ ದಂದಹ್ಯಮಾನವಾದ ಈ ಬಾಳಿನ ಬೆಂಗಾಡಿನಲ್ಲಿ ನಾನು ಯಾಕೆ ಬಂದೆ? ಹೇಗೆ ಬಿದ್ದೆ? ಎಲ್ಲವನ್ನು ತಿಳಿಸು.

**ಮಹಾದೇವ:-** ದ್ವಿಜೋತ್ತಮ, ಜನ್ಮಾಂತರದ ಸಮಾಚಾರ ಅತಿ ಗೌಪ್ಯ, ಅದೊಂದು ದೇವರಹಸ್ಯ, ಆ ಗುಟ್ಟನ್ನು ರಟ್ಟು ಮಾಡುವದು ನಮ್ಮ ಕರ್ತವ್ಯವಲ್ಲ. ಆದರೂ ಭಕ್ತನಾದ ನೀನು ಕೇಳಿದ್ದರಿಂದ ನಿನ್ನ ಕಳೆದ ಬಾಳಿನ ವೃತ್ತಾಂತವನ್ನು ಹೇಳುತ್ತೇನೆ ಕೇಳು.

ಹಿಂದಿನ ಜನ್ಮದಲ್ಲಿ ನೀನೊಬ್ಬ ಕಿರಾತಕುಲದಲ್ಲಿ ಹುಟ್ಟಿದ ಕಾಡುಬೇಡನಾಗಿದ್ದೆ. ದಂಡಪಾಣಿ ಎಂದು ನಿನಗೆ ಆಗ ಹೆಸರು ಇದ್ದಿತು. ಆಗ ನಿನಗೆ ವಿವೇಕ ಎಂಬುದೇ ಇರಲಿಲ್ಲ. ಪರಲೋಕದ ಭಯವಂತೂ ಇರಲೇ ಇಲ್ಲ. ದೌಷ್ಟ್ಯ ದುರಭಿಮಾನ ಎರಡೂ ಕೂಡಿದ್ದವು ನಿನ್ನಲ್ಲಿ. ಆಗ ನೀನು ಅತ್ಯಂತ ಕೀಳಾದ ಕಳ್ಳತನವನ್ನೇ ಒಂದು ವೃತ್ತಿಯನ್ನಾಗಿ ಕೈಕೊಂಡೆ. ಚೌರ್ಯದಲ್ಲಿಯೂ ನಿನ್ನ ಚಾತುರ್ಯವು ವ್ಯಕ್ತವಾಗುತ್ತಿತ್ತು. ಎಷ್ಟು ಕಳ್ಳತನ ಮಾಡಿದರೂ

ನೀನು ಒಮ್ಮೆಯೂ ಸಿಕ್ಕುಬೀಳಲಿಲ್ಲ. ದೋಚಿದ ಐಶ್ವರ್ಯವನ್ನೆಲ್ಲ ದಕ್ಕಿಸಿಕೊಂಡು ಬಿಡುತ್ತಿದ್ದೆ. ಇದರಿಂದ ಕೆಲವೆ ದಿನಗಳಲ್ಲಿ ನೀನು ಧಿಡೀರನೇ ಲಕ್ಷ್ಮೀಪತಿಯಾದೆ. ಅನಾಯಾಸವಾಗಿ ನಿನ್ನ ಪದರಿನಲ್ಲಿ ಬಿದ್ದ ಅಪಾರ ಐಶ್ವರ್ಯ ನಿನ್ನ ತಮ್ಮಂದಿರಿಗೂ ತಲೆತಿರುಗಿಸಿತು. ಅವರೆಲ್ಲರೂ ಹಿರಿಯ ಅಣ್ಣನಾದ ನಿನ್ನ ಹಾದಿ ಹಿಡಿದರು. ನಿನ್ನ ಎಲ್ಲ ಸಹೋದರರು ಕಳವು, ಕೊಲೆ, ಸುಲಿಗೆ ಹಿಂಸೆಗಳಲ್ಲಿ ಪಳಗಿದರು. ನಿನಗೆ ಏಳು ಜನ ಅಣ್ಣತಮ್ಮಂದಿರು, ಎಲ್ಲರೂ ಚೋರಕುಲ ಚಕ್ರವರ್ತಿಗಳೇ. ಆ ನಿನ್ನ ಕಳ್ಳಬಂಧುಗಳ ಹೆಸರನ್ನು ಹೇಳುತ್ತೇನೆ ಕೇಳು. ದಂಡಿ, ದಂಡಾಯುಧ, ದತ್ತವಂತ, ದತ್ತಭೂ, ಸುದಂಡ ದಂಡಕೇತು ಎಂಬ ಹೆಸರಿನ ಈ ಆರೂ ಜನ ಸೋದರರು ದಯಾಶೂನ್ಯರು. ದೈತ್ಯಸ್ವಭಾವದವರು. ಇವರೆಲ್ಲರ ಅಣ್ಣನಾದ ದಂಡಪಾಣಿ ಎಂಬ ಹೆಸರಿನ ನೀನು ಹಣದ ಲೋಭದಿಂದ ಅರಣ್ಯದಲ್ಲಿ ಅಡಗಿ ಕುಳಿತು ಸಾವಿರಾರು ಜನರನ್ನು ಸಂಹರಿಸಿದೆ. ಮದ್ಯ, ಮಾಂಸ, ವೇಶ್ಯೆ ಮುಂತಾದ ಎಲ್ಲ ದುರ್ಗಣಗಳೂ ದುಶ್ಚಟಗಳೂ ನಿನ್ನಲ್ಲಿ ತುಂಬಿದ್ದವು. ನಿನ್ನ ಸೋದರರೊಂದಿಗೆ ನೀನು ಆ ದೇಶದ ಒಂದು ಕಗ್ಗಾಡಿನಲ್ಲಿ ಅಡಗಿಕೊಂಡು ಬಂದವರನ್ನೆಲ್ಲ ಹೊಡೆಯುತ್ತಿದ್ದೆ. ಸಿಕ್ಕವರನ್ನೆಲ್ಲ ಕಡಿಯುತ್ತಿದ್ದೆ. ನಿನ್ನ ಹೆದರಿಕೆಯಿಂದ ಎಲ್ಲ ವ್ಯಾಪಾರಸ್ಥರೂ ಯಾತ್ರಿಕರೂ ದೇಶಾಂತರ ಗ್ರಾಮಾಂತರ ಪ್ರಯಾಣವನ್ನೇ ರದ್ದುಪಡಿಸಿದರು. ನೀನು ನಿನ್ನ ಬಂಧುಗಳೊಂದಿಗೆ ಈ ಚೌರ್ಯರೂಪವಾದ ಘೋರ ಕೃತ್ಯಕ್ಕೆ ಇಳಿದ ಬಳಿಕ ಯಾರ ಧನವೂ ಅವರ ಸ್ವಂತ ಧನವಾಗಿ ಉಳಿಯಲಿಲ್ಲ. ಯಾರ ಮನೆಯೂ ಅವರ ಸ್ವಗೃಹವಾಗಿ ಉಳಿಯಲಿಲ್ಲ. ನೀವು ಎಲ್ಲವನ್ನೂ ದೋಚಿದಿರಿ. ಎಲ್ಲ ಹೊಡೆದು ದಕ್ಕಿಸಿಕೊಂಡಿರಿ ಹೀಗೆ ನೀನು ನಿನ್ನ ಸೋದರರು ಕಳ್ಳತನವನ್ನೇ ನಿಮ್ಮ ಕಸಬನ್ನಾಗಿ ಮಾಡಿಕೊಂಡ ಬಳಿಕ ನಿಮ್ಮ ಕುಕೃತ್ಯದಿಂದ ಆ ಪರಿಸರ ಪ್ರಾಂತ ಎಲ್ಲವೂ ಉಧ್ವಸ್ತವಾಯಿತು.

ಒಂದು ದಿನ ನೀನು ನಿನ್ನ ಸಹೋದರರೊಂದಿಗೆ ಆ ಗೊಂಡಾರಣ್ಯದ ದಟ್ಟವಾದ ಕಾಡಿನ ಗೂಢವಾದ ಗರ್ಬಾಗಾರದಂತಿರುವ ಒಳ ಪ್ರಾಂತದಲ್ಲಿ ಪ್ರವೇಶಿಸಿದೆ. ಬೆಂಗಾಡಿನಲ್ಲಿ ಬಳಸು ದಾರಿಯನ್ನು ಸುತ್ತಿ ಸುತ್ತಿ ಬಳಲಿ ಬೆಂಡಾದ ನೀನು ಅಲ್ಲಿಯೇ ಇರುವ ಒಂದು ತಿಳಿನೀರಿನ ಕೊಳಕ್ಕೆ ಮೀಯಲಿಕ್ಕೆಂದು ಬಂದೆ. ಅಲ್ಲಿ ಆ ಹೊಕ್ಕರಣಿಯಲ್ಲಿ ಹೊಕ್ಕು. ಮೈ ತೊಳೆದು ದಂಡೆಯ ಮೇಲಿರುವ ತಾವರೆ ದಂಟುಗಳನ್ನು ನೀವೆಲ್ಲರೂ ಮುರಿದು ತಿಂದಿರಿ ನೀರು ಕುಡಿದಿರಿ. ಅದೇ ಆಗ ಬಿರಿದ ಎಷ್ಟೋ ತಾವರೆ ಹೂಗಳು, ಮೊಗ್ಗುಗಳು, ದಂಟುಗಳು, ನಿಮ್ಮ ಹಸಿದ ಹೊಟ್ಟೆ ಸೇರಿದವು. ನೀರು ಕುಡಿದು ದಂಡೆಯ ಮೇಲೆ ಕೈಗೆ ಸಿಕ್ಕ ಕುಡಿ ಮಿಡಿ ಚಿಗುರು ಹೀಚು ಕಸಕು ಕಾಯಿ ಹಣ್ಣು ಮುಂತಾದುವುಗಳನ್ನು ತಿಂದು ಯಥೇಚ್ಛ ಜಲಪಾನ ಮಾಡಿ ನೀವೆಲ್ಲರೂ ತೃಪ್ತಿಯಿಂದ ತಣಿವುಗೊಂಡು ತೀರದ ಮಳಲ ರಾಶಿಯಮೇಲೆ ಕುಳಿತುಕೊಂಡಾಗ ಸರ್ವವೇದ ಎಂಬ ಒಬ್ಬ ವನಚರನಾದ ತಾಪಸ ವಿಪ್ರನು ಅಲ್ಲಿಗೆ ಆಗಮಿಸಿದ. ಅವನು ಕೂಡ ಆ ಜಲಾಶಯದ ವಿಮಲ ಸಲಿಲದಲ್ಲಿ ಸ್ನಾನ ಮಾಡಿದ. ಆಗ ದೇವರ ಪೂಜೆಗೆ ಕುಳಿತುಕೊಂಡ. ನಿನ್ನ ಬಳಿಯಲ್ಲಿ ತಾವರೆ ಹೂಗಳು ಇದ್ದುದನ್ನು ನೋಡಿದ ಅವನ ಬಳಿಯಲ್ಲಿ ಹೂ ಇಲ್ಲದ್ದರಿಂದ ಆ ಸರ್ವವೇದನು ಬಾಯಿ ತೆರೆದು ನಿನ್ನನ್ನು ಒಂದು ಹೊಂದಾವರೆ ಹೂವನ್ನು ಕೇಳಿದ. ಸುದೈವದಿಂದ ನಿನಗೆ ಆಗ ಸದ್ಬುದ್ಧಿ ಉದಿಸಿತು. ಆನಂದದಿಂದ ನೀನು ನಿನ್ನ ಬಳಿಯಿರುವ ಒಂದು ಅಂದವಾದ ಕಮಲ ಕುಸುಮವನ್ನು ಆ ವಿಪ್ರೋತ್ತಮನ ಹರಿ ಪೂಜೆಗಾಗಿ ನೀಡಿದೆ. ಅದರಿಂದ ಮುದಿತ ಮಾನಸನಾದ ಆ ತಪಸ್ವಿಯು ನೀನು ಕೊಟ್ಟ ಪದ್ಮ ಪುಷ್ಪವನ್ನು ಪರಮಾತ್ಮನ ಪಾದ ಸನ್ನಿಧಿಯಲ್ಲಿ ಏರಿಸಿ ಇರಿಸಿ

ಪೂಜೆ ಮಾಡಿದ. ಅವನು ಮಾಡುವ ಆ ವಿಷ್ಣು ಪೂಜೆಯನ್ನು ನೀನು ಅಲ್ಲಿಯೇ ನಿಂತು ಪ್ರಸನ್ನ ಮನಸ್ಸಿನಿಂದ ನೋಡಿದೆ. ನೀನು ಕೊಟ್ಟ ಹೂ ಪರಮಾತ್ಮನ ಮುಡಿಯ ಮೇಲೆ ಏರಿದ್ದನ್ನು ಕಂಡು ಧನ್ಯತೆ ಎನಿಸಿತು. ನೀನು ನಸುನಗುತ್ತ ಆ ವಿಷ್ಣು ಪೂಜೆಯನ್ನು ಭಕ್ತಿಯಿಂದ ನೋಡಿದ್ದಲ್ಲದೇ ಭಕ್ತಿಯಿಂದ ವಂದಿಸಿದೆ ಆ ಸರ್ವವೇದ ಪ್ರತಿಪಾದ್ಯನಾದ ಪುರುಷೋತ್ತಮನನ್ನು. ಚತುರ್ವಿಧ ಪುರುಷಾರ್ಥಗಳನ್ನು ನೀಡುವ ವಿಷ್ಣುವಿನ ಪುಷ್ಪಾರ್ಚನೆಯನ್ನು ಕಣ್ಣು ತುಂಬ ನೋಡಿದೆ. ಭಕ್ತಿಯಿಂದ ನಮಸ್ಕಾರ ಮಾಡಿದೆ. ಅದರಿಂದ ನಿನ್ನ ಪಾಪವೆಲ್ಲವೂ ನಷ್ಟವಾದವು. ನೀನು ಶುದ್ಧಾತ್ಮನಾದೆ.

ಕೆಲವು ಕಾಲದ ನಂತರ ನೀನು ಅದೇ ಘೋರಾರಣ್ಯದಲ್ಲಿ ಮರಣವನ್ನು ಹೊಂದಿದೆ. ಮರಣಾನಂತರ ಬಹುಕಾಲದವರೆಗೆ ನೀನು ಶ್ರೀಪತಿಯ ಅನುಗ್ರಹದಿಂದ ಬಗೆಬಗೆಯ ಸುಖಸೌಭಾಗ್ಯವನ್ನು ಅನುಭವಿಸಿದೆ. ಈಗ ಅದೇ ಪುಣ್ಯದಿಂದ ನೀನು ಪರಿಶುದ್ಧವಾದ ಬ್ರಾಹ್ಮಣ ಕುಲದಲ್ಲಿ ಜನಿಸಿರುವೆ. ಮತ್ತ ಈ ವಿಪ್ರಜನ್ಮದಲ್ಲಿ ನಿನಗೆ ನಿಶ್ಚಲವಾದ ಹರಿಭಕ್ತಿಯು ಉದಿಸಿದೆ. ನೀನು ಈಗ ಹಗಲಿರುಳೂ ಬಿಟ್ಟೂ ಬಿಡದೇ ಒಂದು ಕ್ಷಣವನ್ನೂ ವ್ಯರ್ಥಕಳೆಯದೇ ಶ್ರೀಹರಿಯನ್ನು ಆರಾಧಿಸಿರುವೆ. ನೀನು ಮಾಡಿದ ಆ ಪುಣ್ಯದ ಪ್ರಭಾವದ ಪರಿಣಾಮವಾಗಿಯೇ ನಿನಗೆ ನನ್ನ ದರ್ಶನವಾಗಿದೆ. ನಿನ್ನ ಜನ್ಮಾಂತರದ ಸಮಾಚಾರವನ್ನೆಲ್ಲ ತಿಳಿಸಿದ್ದೇನೆ, ಹಿಂದೆ ಹರಿಪೂಜೆಗೆ ನೀಡಿದ ಪುಷ್ಪದಿಂದಲೇ ನಿನ್ನ ಪಾಪವೆಲ್ಲವೂ ಪ್ರಕ್ಷಾಲಿತವಾಗಿದೆ. ಭಗವದನುಗ್ರಹದಿಂದಲೇ ನಿನಗೆ ದಿವ್ಯಜ್ಞಾನೋದಯವಾಗಿದೆ. ಆ ಜ್ಞಾನದಿಂದ ನೀನು ಖಂಡಿತವಾಗಿಯೂ ಮೋಕ್ಷವನ್ನು ಪಡೆಯುವೆ ನೀನು ಈಗ ಮುಕ್ತನಾದಂತೆಯೆ. ಇನ್ನು ನೀನು ಆನಂದದಿಂದ ನಿನ್ನ ಮನೆಗೆ ಹೋಗು.

**ವೇದವ್ಯಾಸ:-** ಹೀಗೆ ಹೇಳಿ ಆ ಬ್ರಾಹ್ಮಣನು ಅಲ್ಲಿಂದ ಹೊರಟು ಹೋದ. ಅನಂತರ ಆ ಪ್ರಜಾ ಬ್ರಾಹ್ಮಣನು ತನಗೆ ತನ್ನ ಜನ್ಮಾಂತರ ಸಮಾಚಾರವನ್ನೆಲ್ಲ ತಿಳಿಸಿದ ಪರಮೇಶ್ವರನಿಗೆ ಸಾಷ್ಟಾಂಗ ವಂದನೆಗೈದು ಪೂಜೆಯನ್ನು ಸಲ್ಲಿಸಿದ. ಕೃತಾರ್ಥತೆಯ ಬುದ್ಧಿಯಿಂದ ತನ್ನ ಮನೆಗೆ ಹೋದ. ಮೂರು ದಿನ ಅತ್ಯಂತ ಭಕ್ತಿಯಿಂದ ವಿಕಸಿತವಾದ ಕಮಲ ಕುಸುಮಗಳಿಂದಲೂ ಹಾಗೂ ಬೇರೆ ಬೇರೆ ಬಗೆಯ ಹೂಗಳಿಂದಲೂ ಶ್ರೀಹರಿಯ ಪುಷ್ಪಾರ್ಚನೆಯನ್ನು ನೆರವೇರಿಸಿದ. ಅದರಿಂದ ಅವನಿಗೆ ದಿವ್ಯಜ್ಞಾನೋದಯವಾಗಿ ಶ್ರೀಹರಿಯ ಪ್ರಸಾದದಿಂದ ಮೋಕ್ಷವನ್ನು ಹೊಂದಿದ.

ಹೀಗೆ ಪರರ ಇಚ್ಛೆಯಿಂದಲಾದರೂ ಕಮಲ ಪುಷ್ಪವನ್ನು ಶ್ರೀಹರಿಗೆ ಸಮರ್ಪಿಸಿದವರು ಮುಕ್ತಿಯನ್ನು ಹೊಂದುತ್ತಾರೆ. ಇನ್ನು ಭಕ್ತಿಯಿಂದ ಪರಮಾತ್ಮನಿಗೆ ಪದ್ಮಪುಷ್ಪದಿಂದ ಪೂಜೆ ಮಾಡಿದರೆ ಎಂಥ ಪುಣ್ಯ ಫಲ ಪ್ರಾಪ್ತಿ ಆಗಬೇಡ.

**ಸತ್ಯಂ ಸತ್ಯಂ ಪುನಃಸತ್ಯಂ ಸತ್ಯಮೇವ ಮಯೋಚ್ಯತೇ ।**
**ಕಮಲೈರ್ಹರಿಮಭ್ಯರ್ಚ್ಯ ಪ್ರಾಪ್ಯತೇ ಪರಮ ಪದಂ ॥**

ಕಮಲ ಹೂಗಳಿಂದ ಹರಿಯ ಪೂಜೆಯನ್ನು ಮಾಡಿದವರಿಗೆ ಶ್ರೀವಿಷ್ಣುವಿನ ಪರಮಪದ ಪ್ರಾಪ್ತಿ ಆಗುವದು ಸತ್ಯ ಸತ್ಯ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ ಪ್ರಜಾ ಬ್ರಾಹ್ಮಣರ ಬೇಡರ ಕುಲದಲ್ಲಿ ಉತ್ಪತ್ತಿ ಮತ್ತು ಮುಕ್ತಿಎಂಬ ಹದಿಮೂರನೇಯ ಅಧ್ಯಾಯ ಮುಗಿದುದು*

**ವೇದವ್ಯಾಸ:-** ದ್ವಿಜಶ್ರೇಷ್ಠ, ಮಾರ್ಗಶೀರ್ಷ ಮಾಸದಲ್ಲಿ ಲಕ್ಷ್ಮೀದೇವಿಯೊಂದಿಗೆ ಒಡಗೂಡಿದ ನಾರಾಯಣ ದೇವರನ್ನು ವೈಷ್ಣವನಾದವನು ಭಕ್ತಿಯಿಂದ ಪೂಜಿಸಬೇಕು. ಈ ಹರಿಪೂಜೆಯನ್ನು ಪತಿತರ ಮನೆಯಲ್ಲಿ, ಮ್ಲೇಂಛರ ದೇಶದಲ್ಲಿ ದುರ್ಗಂಧ ವಾಸನೆ ಬರುವಲ್ಲಿ, ನಾಸ್ತಿಕರ ಸಮೀಪದಲ್ಲಿ, ಸುಳ್ಳು ಮಾತನಾಡುವವರ ಸಮೀಪದಲ್ಲಿ ಮಾಡಬಾರದು. ಇದರಂತೆ ಹೊಡೆದಾಡುವವರ ಹಾಗೂ ಆಳುವವರ ಹಾಸ್ಯ ಮಾಡುವವರ ಕಪಟಿಗಳ ಮನೆ ಅಥವಾ ಸಮೀಪದಲ್ಲಿ ಹರಿ ಪೂಜೆಯನ್ನು ಮಾಡಬಾರದು.

ಶ್ರೀಹರಿಯನ್ನು ಪೂಜೆ ಮಾಡುವ ಕಾಲದಲ್ಲಿ ಬೇರೆ ಕಡೆಗೆ ಮನಸ್ಸನ್ನು ತೊಡಗಿಸಬಾರದು. ''ಅಯ್ಯೋ ಅಪ್ಪಾ, ಅಕಟ, ಕಟ'' ಎಂದು ಮುಂತಾದ ದುಃಖೋದ್ಗಾರವನ್ನೂ ನಿಟ್ಟುಸಿರನ್ನೂ ಕೌತುಕ ಚಾಂಚಲ್ಯವನ್ನೂ ನಾಸ್ತಿಕರೊಡನೆ ಹರಟೆಯನ್ನೂ ಪೂಜೆಯ ಕಾಲದಲ್ಲಿ ಮಾಡಬಾರದು. ಮನಸ್ಸನ್ನು ಧೃಡವಾಗಿ ಭಗವಂತನಲ್ಲಿ ನೆಟ್ಟು ಅನನ್ಯ ಭಕ್ತಿಯಿಂದ ಕೃಷ್ಣನ್ನು ಪೂಜಿಸಬೇಕು. ಪೂಜೆಯ ಕಾಲದಲ್ಲಿ ಮನಸ್ಸು ಶುದ್ಧವಿರಬೇಕು. ಮನಃಶುದ್ಧಿ ಇಲ್ಲದಿದ್ದರೆ ಎಷ್ಟು ಮುಳುಗು ಹಾಕಿದರೂ ಅವನು ಚಂಡಾಲ ನಿದ್ದಂತೆಯೇ. ಭಕ್ತಿಯಿಲ್ಲದೆ ಮಾಡಿದ ಉಗ್ರ ತಪಸ್ಸು, ನಿರರ್ಥಕ. ಅದರಿಂದ ಮೈ ಒಣಗುವುದಷ್ಟೆ ಫಲ. ಭಕ್ತಿಯಿಲ್ಲದೆ ಮೇರು ಪರ್ವತದಷ್ಟು ಬಂಗಾರವನ್ನು ದಾನಕೊಟ್ಟರೂ ಅದರಿಂದ ಪುಣ್ಯವಿಲ್ಲ. ಕೈಯಲ್ಲಿಯ ಬಂಗಾರವನ್ನು ಕಳಕೊಂಡಷ್ಟೆ ಆಗುವುದು. ಮಾರ್ಗಶೀರ್ಷ ಮಾಸದಲ್ಲಿ ವಿಷ್ಣುಭಕ್ತರಿಗೆ ಭಗವಂತನಿಗೆ ಸಮರ್ಪಿತವಾದ ಶಾಕ, ಪಾಕ, ಕಿತ್ತಳೆ ಮೊದಲಾದ ಹಣ್ಣುಗಳನ್ನು ಮತ್ತು ನೂತನವಾದ ಧಾನ್ಯ ಪಕ್ವಾನ್ನ ಮುಂತಾದವುಗಳನ್ನು ದಾನ ನೀಡದರೆ ಶ್ರೀಹರಿಯ ಪ್ರೀತಿ ಉಂಟಾಗುವುದು.

ಪುಷ್ಯ ಮಾಸದಲ್ಲಿ ಕಬ್ಬಿನ ರಸದಿಂದ ದೇವರಿಗೆ ಅಭಿಷೇಕ ಮಾಡಬೇಕು. ಕಬ್ಬಿನ ರಸವನ್ನು ಅದರಲ್ಲಿ ಪಕ್ವಾನ್ನಗಳನ್ನು ದೇವರಿಗೆ ಸಮರ್ಪಿಸಬೇಕು. ಮೊಸರು ಅನ್ನ, ಸಕ್ಕರೆ ಹಾಲುಕೂಡಿದ ಅನ್ನ, ಹಾಗೂ ಕಾಲಪ್ರಾಪ್ತವಾದ ಹಣ್ಣು ಕಾಯಿಗಳನ್ನು ದೇವರಿಗೆ ನಿವೇದನೆ ಮಾಡಿ ಜ್ಞಾನಿಗಳಿಗೆ ನೀಡಬೇಕು. ದೇವರಿಗೆ ಹಳೆಯ ಬಟ್ಟೆಯನ್ನು ಬದಲಿಸಿ ಹೊಸ ಬಟ್ಟೆಯನ್ನು ಹೊದಿಸಬೇಕು. ಬಡವರಿಗೆ ಬೆಚ್ಚಗಿನ ಬಟ್ಟೆಗಳನ್ನು ದಾನ ಕೊಡಬೇಕು. ಪುಷ್ಯ ಮಾಸದ ಸಂಕ್ರಾಂತಿಯ ದಿನ ಶ್ರೀಹರಿಯ ಪೂಜೆ ಮಾಡಿ ನೂತನ ವಸ್ತ್ರಗಳನ್ನು ಬಡವರಿಗೆ ದಾನ ನೀಡಬೇಕು. ಪುಷ್ಯ ಮಾಸದಲ್ಲಿ ದೇವರ ಮಂಟಪ, ಪೀಠ ಮುಂತಾದವುಗಳಿಗೆ ಹತ್ತು ಬಗೆಯ ಬಣ್ಣಗಳನ್ನು ಹಚ್ಚಿ ಅಲಂಕರಿಸಬೇಕು. ದೇವರ ಎದುರು ಶಂಖಧ್ವನಿಯನ್ನು ಮಾಡಬೇಕು. ಗರುಡನ ಮೂರ್ತಿಯನ್ನು ಮೇಲೆ ಕೂಡಿಸಿದ ಗಂಟೆಯನ್ನು ದೇವರ ಎದುರು ಬಾರಿಸಬೇಕು. ಪೂಜಾ ಕಾಲದಲ್ಲಿ ತಂಬೂರಿ, ತಬಲ, ಜಾಗಟೆ, ನಗಾರಿ, ಡಮರು, ಡಿಂಡಿಮ, ಕೊಳಲು, ತಾಳ, ಕಾಳಿ ಮುಂತಾದ ವಾದ್ಯಗಳನ್ನು ಬಾರಿಸಿದವರು ಪಂಚಮಹಾಪಾಪಗಳಿಂದ ಮುಕ್ತರಾಗುವರು. ಅದರಂತೆ ದೇವರ ಮುಂಭಾಗದಲ್ಲಿ ಮುಖವಾದ್ಯ, ಸಂಗೀತ, ಸ್ತೋತ್ರಪಾಠ, ಪಾರಾಯಣ, ಮುಂತಾದ ಸಾಹಿತ್ಯ ಸಂಗೀತ ಸೇವೆಯನ್ನು ಸಲ್ಲಿಸಿದವರು ಶ್ರೀಹರಿಯ ಪರಮಾನುಗ್ರಹಕ್ಕೆ ಪಾತ್ರರಾಗುವರು. ಸಂಸಾರವೆಂಬ ಸಮುದ್ರವನ್ನು ಲೀಲೆಯಿಂದಲೇ ಭಗವದನುಗ್ರಹದಿಂದ ದಾಟಿ ಮುಕ್ತಿಮಂದಿರದಲ್ಲಿ ವಿಹರಿಸುವರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*

*ಭಗವತ್ ಪೂಜೆಯ ಮಹಿಮೆ ಎಂಬ ಹದಿನಾಲ್ಕನೇಯ ಅಧ್ಯಾಯ ಮುಗಿದುದು*

## ರಾಮನಾಮದ ಮಹಿಮೆ

ಅಧ್ಯಾಯ - ೧೫

## ರಾಮನಾಮ ಪಠಿಸುವ ಗಿಳಿಯ ಕಥೆ

**ವ್ಯಾಸ:-** ವಿಷ್ಣುವಿನ ನಾಮವನ್ನು ಸ್ಮರಿಸುವವರಿಗೆ ಅಶುಭ ಉಂಟಾಗುವುದಿಲ್ಲ. ಈ ಜಗತ್ತಿನಲ್ಲಿ ಯಾವ ಕರ್ಮವನ್ನು ಮಾಡಿದರೂ ಪಾಪವು ಅಲ್ಪ ಸ್ವಲ್ಪ ಪ್ರಮಾಣದಲ್ಲಿ ತಗಲುವುದು ನಿಶ್ಚಿತ. ಯಾವುದೇ ಪಾಪದ ಲೇಪವು ಎಂದೂ ಆಗದಿರುವ ಪುಣ್ಯಕರ್ಮ ಎಂದರೆ ವಿಷ್ಣುವಿನ ನಾಮಸ್ಮರಣ ಮಾತ್ರ. ಈ ಹರಿಯ ನಾಮಸ್ಮರಣವನ್ನು ಕೂತಾಗ, ನಿಂತಾಗ ನಡೆದಾಡುವಾಗ ಮಾತನಾಡುವಾಗ, ಮಲಗಿದಾಗ, ಊಟ ಮಾಡುವಾಗ ಯಾವಾಗಾದರೂ ಮಾಡಬಹುದು. ಶ್ರೀಹರಿಯ ನಾಮಸ್ಮರಣಕ್ಕೆ ಕಾಲ ನಿರ್ಬಂಧವಾಗಲಿ, ಸ್ಥಳ ನಿರ್ಬಂಧವಾಗಲಿ, ದೇಶ ನಿರ್ಬಂಧವಾಗಲೀ, ಇರುವದಿಲ್ಲ. ಈ ನಾಮಸ್ಮರಣೆಯ ಮಹಾತ್ಮೆಯನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಕೃತಯುಗದಲ್ಲಿ ಪರಶು ಎಂಬ ಒಬ್ಬ ವೈಶ್ಯನು ಇರುತ್ತಿದ್ದ. ಸಕಲ ಸದ್ಗುಣಗಳು ನೆಲಿಸುವ ನಿಲಯದಂತಿರುವ ಆ ವೈಶ್ಯ ನಿಜವಾಗಿಯೂ ಆ ವೈಶ್ಯರ ಕುಲಕ್ಕೆ ರತ್ನದಂತೆ ಇದ್ದ. ಆದರೆ ಆ ಪರಶುವಿಗೆ ಪ್ರಾಯದ ವಯಸ್ಸಿನಲ್ಲಿಯೇ ದಮ್ಮು, ಕೆಮ್ಮಿನ ರೋಗ ಅಂಟಿಕೊಂಡಿತು. ಅದರಿಂದಾಗಿ ಅವನು ಚಿಕ್ಕವಯಸ್ಸಿನಲ್ಲಿಯೇ ಮರಣ ಹೊಂದಿದ. ಅವನ ಹೆಂಡತಿಯಾದ ಜೀವಂತಿ ಎಂಬ ಮಹಿಳೆಗೆ ಆಗ ಒಳ್ಳೆ ನವತಾರುಣ್ಯ. ಅಂಗಾಂಗಗಳಲ್ಲಿ ಲಾವಣ್ಯ ಲೀಲಾ ಲಾಸ್ಯ ತರುಣರ ಎದೆಯನ್ನು ಸೂರೆಗೊಳ್ಳುತ್ತಿತ್ತು. ಪತಿ ಮೃತನಾದ ಬಳಿಕ ಅವಳು ತನ್ನ ತಂದೆಯ ಬಳಿಗೆ ಹೋದಳು. ಅವಳಿಗೆ ಗಂಡ ಮರಣ ಹೊಂದಿದ ದುಃಖವೇ ಆಗಿರಲಿಲ್ಲ. ತಾರುಣ್ಯದ ಮದ, ಲಾವಣ್ಯದ ಗರ್ವ ಎರಡೂ ಅವಳಲ್ಲಿ ಒಗ್ಗೂಡಿ, ಅವಳ ಮತಿಭ್ರಮಣವನ್ನೇ ಉಂಟು ಮಾಡಿದ್ದವು. ಅವಳ ಬಂಧು ಬಳಗದವರು ಬಗೆಬಗೆಯಿಂದ ಹಿತನುಡಿಯನ್ನು ಬೋಧಿಸಿದರು. ಆ ಹಿತೋಪದೇಶಕ್ಕೆ ಅವಳು ಕಿವಿಗೊಡಲೇ ಇಲ್ಲ. ಕಾಮ ಕುಣಿಸಿದಂತೆ ಹರೆಯದ ಹೊಂಗನಸುಗಳು ಹೇಳಿದಂತೆ ಅವಳು ಹದಿಬದೆಯ ಹಾದಿ ಬಿಟ್ಟು ಬೀದಿಗೆ ಇಳಿದಳು. ಜಾರ ಪುರುಷರ ಮರುಳು ಗೊಳಿಸುವ ಮಾತುಗಳಿಗೆ ಮನ ಸೋತು ತನ್ನ ಸತೀತ್ವವನ್ನೇ ಬಲಿಗೊಟ್ಟು ಅಡ್ಡದಾರಿ ಹಿಡಿದಳು. ವಿಟ ಪುರುಷರೊಡನೆ ಸ್ವಚ್ಛಂದ ವಿಹಾರ ವಿಲಾಸಗಳಿಗೆ ಮನೆಮಾರು ನೀತಿ ರೀತಿ ಎಲ್ಲವನ್ನೂ ಮರೆತಳು. ಕಂಡ ಕಾಮುಕ ಪುರುಷರೊಡನೆ ಸ್ವಚ್ಛಂದ ವಿಹಾರದಲ್ಲಿ ಲಾಲಸಳಾಗಿ ಅಲೆದಾಡಿದಳು.

ಧರ್ಮಾತ್ಮನಾದ ಅವಳ ತಂದೆ ಮಗಳ ಈ ಶೀಲಭ್ರಂಶವನ್ನು ಕಂಡು ಕುಪಿತನಾಗಿ ಹೇಳಿದ.

**ತಂದೆ:-** ಪಾಪಿಷ್ಠೆಯೇ, ಪವಿತ್ರವಾದ ನಮ್ಮ ವಂಶದಲ್ಲಿ ಹುಟ್ಟಿ ಇಂಥ ಘೋರ ಪಾಪವನ್ನು ಹೇಗೆ ಮಾಡುತ್ತಲಿರುವೆ? ನೀನು ಇಂಥ ವ್ಯಭಿಚಾರಾದಿ ಅನಾಚಾರ ಕೃತ್ಯಗಳನ್ನೆ ಸಗುವುದಾದರೆ ನನ್ನ ಮನೆಗೆ ಬರಬೇಡ. ಈ ಮನೆಯಲ್ಲಿ ಊಟ ಹುಟ್ಟಲಾರದು. ಈಗಲೇ ಈ ಮನೆಯನ್ನು ಬಿಟ್ಟು ಹೋಗು.

ತಂದೆಯ ಈ ನಿರ್ಭರ್ತ್ಸನೆಯನ್ನು ಕೇಳಿ ಬ್ರಹ್ಮಾಂಡ ಕೋಪ ಬಂದಿತು. ಆ ಜೀವಂತಿಗೆ. ಸಿಟ್ಟಿನ ಭರದಲ್ಲಿ ಅವಳು ಹುಟ್ಟಿದ ಮನೆಯನ್ನು ಬಿಟ್ಟು ಹೊರನಡೆದಳು. ನಾಚಿಕೆ ಬಿಟ್ಟು ಹೊರ ನಡೆದಳು. ವೇಶ್ಯಾವೃತ್ತಿಯನ್ನೇ ಅವಲಂಬಿಸದಳು. ಕಾಡು, ಬೇಡ, ಬಿಲ್ಲ, ಚಂಡಾಲ, ಮುಂತಾದ ಕಂಡ ಕಂಡ ಕಾಮಿ ಪುರುಷರೊಡನೆ ಸ್ವಚ್ಛಂದ ಕ್ರೀಡಾ ಲೋಲಳಾಗಿ ವೇಶ್ಯಾ ಜೀವನವನ್ನು ನಡೆಸಿದಳು.

ಒಂದು ದಿನ ಓರ್ವ ಬೇಡನು ಅವಳ ಮನೆಗೆ ಮಾರಾಟಕ್ಕಾಗಿ ಒಂದು ಗಿಳಿಯನ್ನು ಕರೆದುಕೊಂಡು ಬಂದ. ಅತ್ಯಂತ ಸುಂದರವಾಗಿದ್ದಿತು ಆ ಗಿಳಿ. ಮರಿ ಇಂದ್ರಚಾಪವೇ ಇದ್ದಂತೆ ಇರುವ ಆ ಲೀಲಾ ಶುಕವನ್ನು ಈ ಜೀವಂತಿಯು ಆ ಬೇಡನಿಗೆ ಬೇಡಿದಷ್ಟು ಕೊಟ್ಟು ಕೊಂಡಳು. ಅದಕ್ಕೆ ಬೇಕಾದ ಆಹಾರವನ್ನು ಕೊಟ್ಟು ಆ ಶುಕಬಾಲಕನನ್ನು ಅಕ್ಕರೆಯಿಂದ ಪೋಷಿಸಿದಳು. ಅದೇ ತನ್ನ ಮಗ ಎಂದು ಭಾವಿಸಿ ಪ್ರೀತಿಯಿಂದ ಅದನ್ನು ಬೆಳಸಿ ದೊಡ್ಡದನ್ನಾಗಿ ಮಾಡಿದಳು.

ಆ ಹಕ್ಕಿಯು ಕೂಡ ಆ ಜೀವಂತಿಯ ಆಜ್ಞೆಯಂತೆ ಪ್ರೀತಿಯಿಂದಲೇ ಎಲ್ಲರೊಡನೆ ವ್ಯವಹರಿಸುತ್ತಿತ್ತು. ಆ ವೇಶ್ಯೆಯು ಆ ಗಿಳಿಗೆ ರಾಮ, ರಾಮ ಎಂದು ನುಡಿಯಲಿಕ್ಕೆ ಕಲಿಸಿದಳು. ಮತ್ತು ತನಗೆ ಅವಕಾಶ ಸಿಕ್ಕದಾಗಲೆಲ್ಲ ಹಗಲು ರಾತ್ರಿ ಆ ಗಿಳಿಯ ಮುಂದೆ ಕುಳಿತು ರಾಮ ನಾಮವನ್ನು ತಾನು ಉಚ್ಚರಿಸುತ್ತಲಿದ್ದಳು. ಅದನ್ನು ಗಿಳಿಯು ಮಧುರವಾಗಿ ಪುನಃ ಪುನಃ ತಾನು ಉಚ್ಚರಿಸುತ್ತಲಿತ್ತು. ಹೀಗೆ ನಿರಂತರವಾಗಿ ಬಹುದಿನ ಸಾಗಿತು. ಆ ಗಿಣಿ ಗಣಿಕೆಯರ ರಾಮನಾಮದ ಪಠಣದ ಕಾರ್ಯಕ್ರಮ. ರಾಮನ ನಾಮೋಚ್ಚಾರಣೆಯ ಮಹಿಮೆಯಿಂದ ಅವರಿಬ್ಬರ ಪಾಪಗಳು ಕರಗಿ ಹೋದವು.

ಹೀಗೆಯೇ ಹಲವಾರು ವರ್ಷಗಳು ಉರುಳಿದ ಬಳಿಕ ಆ ಬೆಲೆವೆಣ್ಣು ಕೊನೆಯ ಉಸಿರನ್ನು ಎಳೆದಳು. ಆಗ ಆ ಗಿಳಿಯು ಬಾಳಿನ ಪಂಜರದಿಂದ ಹೊರಗೆ ಹಾರಿ ಹೋಯಿತು. ಹೀಗೆ ಏಕಕಾಲದಲ್ಲಿಯೇ ಆ ವೇಶ್ಯೆ ಹಾಗೂ ಗಿಳಿ ಎರಡೂ ಮರಣ ಹೊಂದಿದವು.

ಕೂಡಲೇ ಯಮಧರ್ಮ ಅವರಿಬ್ಬರನ್ನೂ ಹಿಡಿದು ತರಲಿಕ್ಕಾಗಿ ಚಂಡ ಮೊದಲಾದ ತನ್ನ ಕ್ರೂರರಾದ ಕಿಂಕರರನ್ನು ಕೊಟ್ಟು ಕಳಿಸಿದ. ಇತ್ತ ವೈಕುಂಠ ಲೋಕದಿಂದ ವಿಷ್ಣುದೂತರು ಅವರಿಬ್ಬರನ್ನು ಒಯ್ಯಲು ಅಲ್ಲಿಗೆ ಬಂದರು. ಅವರು ಬರುವಷ್ಟರಲ್ಲಿ ಯಮದೂತರು ಹಾದಿ ಬಿಟ್ಟ ಹೆಣ್ಣು ಹಾಗೂ ಹಕ್ಕಿಯನ್ನು ಮೃತ್ಯುಪಾಶದಿಂದ ಬಿಗಿದು ಒಗೆದಿದ್ದರು. ಅದನ್ನು ಕಂಡು ಪಿತ್ತ ನೆತ್ತಿಗೇರಿತು ವಿಷ್ಣುದೂತರಿಗೆ. ಆರಕ್ತನಯನರಾಗಿ ನುಡಿದರು ವಿಷ್ಣುದೂತರು ಯಮದೂತರಿಗೆ.

**ವಿಷ್ಣುದೂತರು:-** ಶ್ರೀಹರಿಯ ಭಕ್ತರನ್ನು ಕೂಡ ಯಮದೂತರು ದಂಡಿಸುತ್ತಿದ್ದಾರೆ. ಇದು ಆಶ್ಚರ್ಯದ ವಿಷಯ.

ಹೀಗೆ ನುಡಿದ ಆ ವಿಷ್ಣುದೂತರು ತಮ್ಮ ಕೈಯಲ್ಲಿರುವ ಚಕ್ರದ ಧಾರೆಯಿಂದ ಅವರಿಬ್ಬರಿಗೂ ಬಿಗಿದ ಮೃತ್ಯುಪಾಶವನ್ನು ಹರಿದೊಗೆದರು. ಇದನ್ನು ನೋಡಿ ಯಮ ದೂತರಿಗೆ ತಡೆಯಲಾಗದಷ್ಟು ಸಿಟ್ಟು ಬಂದಿತು. ಆಗ ಅವರು ಬೆಂಕಿಯಂತೆ ಉರಿದೆದ್ದು ಒಮ್ಮೆಲೆ ಬೆಂಕಿಯ ಮಳೆಯನ್ನೇ ಸುರಿಸತೊಡಗಿದರು. ಮತ್ತು ಆ ಯಮದೂತರಲ್ಲಿ ಪ್ರಮುಖನಾದ ಚಂಡ ಎಂಬುವವನು ಆ ವಿಷ್ಣುದೂತರನ್ನು ಕುರಿತು ಮಾತನಾಡಿದ.

ಈ ಪಾಪಿಗಳಾದ ಗಿಳಿ ಹಾಗೂ ಜೀವಂತಿಯರನ್ನು ನಾನು ಚೆನ್ನಾಗಿ ಬಲ್ಲೆ. ಇಂಥ ಮಹಾಪಾಪಿಷ್ಠಳಾದ ಹೆಣ್ಣನ್ನು ಒಯ್ಯಲು ನೀವು ಇಲ್ಲಿ ಬಂದಿದ್ದನ್ನು ನೋಡಿ ನಮಗೆ ಅತ್ಯಾಶ್ಚರ್ಯವಾಯಿತು. ನಿಮಗೆ ಇವರಿಬ್ಬರನ್ನು ವೈಕುಂಠಕ್ಕೆ ಒಯ್ಯಬೇಕು ಎಂದು ಆಗ್ರಹವಿದ್ದರೆ ನಮ್ಮೊಡನೆ ಯುದ್ಧಕ್ಕೆ ಬನ್ನಿರಿ. ಆ ಯುದ್ಧದಲ್ಲಿಯೇ ಇವರು ನರಕಕ್ಕೆ ಯೋಗ್ಯರೋ ವೈಕುಂಠಕ್ಕೆ ಯೋಗ್ಯರೋ ನಿರ್ಣಯವಾಗಿ ಹೋಗಲಿ. ಹೀಗೆ ನುಡಿದು ಆ ಯಮಕಿಂಕರರು ಸಿಂಹನಾದ ಮಾಡಿದರು. ಶಂಖಗಳನ್ನು ಊದಿದರು. ಬಿಲ್ಲುಗಳನ್ನು ಠೇಂಕರಿಸಿದರು. ಗುರಿ ಇಟ್ಟರು ಬಾಣ ಬಿಟ್ಟರು.

ವಿಷ್ಣುದೂತರು ಏನು ದುರ್ಬಲರೆ? ಅವರು ಅಸ್ತ್ರ ಹಿಡಿದರು. ಕೆಲವರು ಶೂಲವನ್ನು ತೂರಿದರು. ಹಲವರು ಶಕ್ತಿ ಆಯುಧವನ್ನು ಎಸೆದರು. ಹಲವರು ಚಕ್ರಗಳನ್ನು ಪ್ರಯೋಗಿಸಿದರು. ಹಲವರು ಬಿಲ್ಲುಬಾಣಗಳನ್ನು ಈಡಾಡಿ ವಿಷ್ಣುದೂತರನ್ನು ಗಾಯಗೊಳಿಸಲು ಪ್ರಯತ್ನಿಸಿದರು.

ಆದರೆ ಇದರಿಂದ ಆ ಹರಿಯ ಕಿಂಕರರು ಗಾಯಗೊಳ್ಳಲೂ ಇಲ್ಲ. ಗಾಬರಿಯಾಗಲೂ ಇಲ್ಲ. ಯಮಭಟರು ತಮ್ಮ ಮೇಲೆ ತೂರಿ ತೂರಿ ಒಗೆದ ಶಸ್ತ್ರಾಸ್ತ್ರಗಳನ್ನೆಲ್ಲ ತಮ್ಮ ಕೈಯಲ್ಲಿರುವ ಗದಾಪ್ರಹಾರದಿಂದ ಹೊಡೆದು ಒಡೆದು ಪುಡಿ ಪುಡಿ ಮಾಡಿದರು. ಈ ಭಗವದ್ಭಕ್ತರ ಸುದರ್ಶನ ಚಕ್ರದ ಧಾರೆಯಿಂದ ಹಲವರ ಕಾಲು ಕತ್ತರಿಸಿದವು. ಕೆಲವರ ಕೈ ಕಡಿದು ಬಿದ್ದವು. ಇನ್ನೂ ಅನೇಕ ಅನೇಕ ಯಮದೂತರ ಎದೆ ಸೀಳಿದವು. ತಲೆ ಸಿಡಿದವು. ಹಲವರ ಕಾಲು ಮುರಿದವು. ಕೆಲವರು ತೊಡೆ ಒಡೆದು ಬಿದ್ದರು. ಇದರಿಂದ ಗಾಬರಿಯಾದ ಯಮದೂತರು ಆ ಸಮರ ಭೂಮಿಯನ್ನು ಬಿಟ್ಟು ಓಡಿ ಹೋದರು.

ಇದನ್ನು ನೋಡಿ ಆ ಯಮದೂತರ ಮುಂದಾಳು ಎನಿಸಿದ ಚಂಡನು ಕೈಯಲ್ಲಿ ಕಬ್ಬಿಣದ ಸರಳಿಯನ್ನು ಹಿಡಿದುಕೊಂಡು ಬಂದು ವಿಷ್ಣುವಿನ ಕಿಂಕರರಿಗೆ ಘೋರ ಪೆಟ್ಟುಗಳನ್ನು ಹಾಕಿದ. ಅದನ್ನು ಕಂಡು ಭಗವದ್ದೂತರು ತಮ್ಮಲ್ಲಿದ್ದ ಹದನವಾದ ಆಯುಧಗಳ ಮಳೆಗರೆದು ಚಂಡವಿಕ್ರಮನಾದ ಆ ಚಂಡನನ್ನು ಹೊಡೆದರು. ಅದರಿಂದ ರೊಚ್ಚಿಗೆದ್ದ ಚಂಡನು ಕೈಯಲ್ಲಿ ಕಬ್ಬಿಣದ ಹಾರೆಯನ್ನು ತೆಗೆದುಕೊಂಡು ಎಲ್ಲ ವಿಷ್ಣುದೂತರನ್ನು ಬೇರೆ ಬೇರೆಯಾಗಿಯೇ ಪ್ರಹರಿಸಿದ. ಅವರ ಮೈಯಿಂದ ಧಾರಾಕಾರವಾಗಿ ರಕ್ತವು ಸುರಿಯತೊಡಗಿತು ಚಂಡನ ಈ ಪ್ರಚಂಡವಾದ ಪ್ರಹಾರವನ್ನು ತಾಳಲಾರದೆ ವಿಷ್ಣುದೂತರು ಸುಪ್ರಕಾಶನ ಹಿಂಬದಿಯಲ್ಲಿ ಬಂದು ನಿಂತುಕೊಂಡರು. ಆಗ ಸುಪ್ರಕಾಶ ಎಂಬ ವಿಷ್ಣುಪಾರ್ಷದನು ಕ್ರುದ್ಧನಾಗಿ ಯಮದೂತರನ್ನು ಹಣಿಯಲು ಪ್ರಾರಂಭಿಸಿದ. ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಕ್ರೋಧದಿಂದ ಜಪಾ ಕುಸುಮದಂತೆ ಕೆಂಪಡರಿದ ಕಣ್ಣುಳ್ಳವನಾಗಿ ತನ್ನ ಘೋರವಾದ ಗದೆಯನ್ನು ಎತ್ತಿ ಚಂಡನ ಮೇಲೆ ಅಪ್ಪಳಿಸಿದ. ಅದರಿಂದ ಚಂಡ ನೆತ್ತರಕಾರಿ ನೆಲದ ಮೇಲೆ ಮೂರ್ಛಿತನಾಗಿ ಬಿದ್ದ. ಆಗ ಯಮಭಟರು ಹಾಹಾಕಾರ ಮಾಡುತ್ತ ಚಂಡನನ್ನು ಹಾಗೆಯೇ ಮೂರ್ಛಾವಸ್ಥೆಯಲ್ಲಿಯೇ ಎತ್ತಿಕೊಂಡು ತಮ್ಮ ಯಮಪುರಿಗೆ ಅಳುತ್ತ ಕರೆಯುತ್ತ ಗೋಗರೆಯುತ್ತ ಧಾವಿಸಿ ಓಡಿ ಹೋದರು. ಅಲ್ಲಿ ಹೋಗಿ ಯಮನ ಮುಂದೆ ದುಃಖೋದ್ರೇಕದಿಂದ ದೂರಿದರು.

**ಯಮದೂತರು:-** ಪ್ರಭು, ನಾವು ನಿನ್ನ ಆಜ್ಞೆಯನ್ನು ಪಾಲಿಸ ಹೋಗಿ ಇಂಥ ದುರ್ದೆಶೆಗೆ ಈಡಾದೆವು. ನೋಡು, ನಮ್ಮ ಬವಣೆಯನ್ನು, ಮಹಾಪಾಪಿಗಳಿಬ್ಬರು ಕೇವಲ

'ರಾಮ' ಎಂಬ ಎರಡು ಅಕ್ಷರಗಳನ್ನು ಉಚ್ಚರಿಸಿದ ಮಾತ್ರಕ್ಕೆ ಶ್ರೀಹರಿಯ ಪುರಕ್ಕೇ ತೆರಳಿದರು. ನಿನ್ನಿಂದ ದಂಡಿಸಲಿಕ್ಕೆ ಯೋಗ್ಯರಾದ ಪಾಪಿಗಳೂ ಕೂಡ ವೈಕುಂಠಕ್ಕೆ ಹೋಗುವದಾದರೆ ನಿನ್ನ ಪ್ರಭುತ್ವ ಏನು ಉಳಿಯಿತು? ನಿನ್ನ ಅಧಿಕಾರವಾದರೂ ಏನು ಇದ್ದಂತಾಯಿತು ! ವಿಷ್ಣುದೂತರು ನಮ್ಮನ್ನು ಸೋಲಿಸಿದ್ದರೂ ಆ ಸೋಲು ನಮಗಲ್ಲ. ನಿನ್ನದೇ ಸೋಲು, ನಿನಗೇ ಅವಮಾನ.

**ಯಮ:-** ದೂತರೆ, ರಾಮ ಎಂಬ ಪವಿತ್ರವಾದ ಹೆಸರನ್ನು ಉಚ್ಚರಿಸಿದವರು ನನಗೆ ಎಂದಿಗೂ ದಂಡನೀಯರಲ್ಲ. ರಾಮನಾಮವನ್ನು ಪಠಿಸಿದ ಜೀವಂತಿ ಮತ್ತು ಆ ಗಿಳಿ ಇಬ್ಬರೂ ವಿಷ್ಣುವಿನ ಭಕ್ತರೇ ಸರಿ.

ರಾಮನಾಮ ಸ್ಮರಣೆಯಿಂದ ನಾಶವಾಗದ ಪಾಪವೇ ಈ ಜಗತ್ತಿನಲ್ಲಿ ಇರುವದಿಲ್ಲ. ಆದುದರಿಂದ ನಿಮಗೆ ನಾನು ಕೆಲವು ಮಾತುಗಳನ್ನು ಹೇಳುತ್ತೇನೆ ಕೇಳಿರಿ.

**ಯೇ ಮಾನವಾಃ ಪ್ರತಿದಿನಂ ಮಧುಸೂದನಸ್ಯ ।**
**ನಾಮಾನಿ ಘೋರದುರಿತೌಘ ವಿನಾಶನಾನಿ ॥**
**ಭಕ್ತ್ಯಾ ಸ್ಮರಂತಿ ವಿಬುಧಪ್ರವರಾರ್ಚಿತಸ್ಯ ।**
**ತೇ ಪಾಪಿನೋಽಪಿ ಹಿ ಭಟಾ ಮಮ ನೈವ ದಂಡ್ಯಾಃ ॥**

ಯಾವ ಜನರು ಪ್ರತಿದಿನವೂ ಪಾಪ ಪರಿಹಾರಕವಾದ ಶ್ರೀಹರಿಯ ನಾಮಗಳನ್ನು ಭಕ್ತಿಯಿಂದ ಸ್ಮರಿಸುವರೋ ಅವರು ಎಂಥ ಪಾಪಿಗಳಾದರೂ ನನ್ನ ದಂಡಶಿಕ್ಷೆಗಳಿಗೆ ಅರ್ಹರಲ್ಲ.

**ದಾಮೋದರೇಶ್ವರ ಮುಖಾಮರ ವೃಂದ ಸೇವ್ಯ**
**ಶ್ರೀವಾಸುದೇವ ಪುರುಷೋತ್ತಮ ಮಾಧವೇತಿ ।**
**ಯೇಷಾಂ ಭವಂತಿ ವದನೇಷು ಸದೈವ ಶಬ್ದಾಃ**
**ದೂತಾ ನಮಾಮ್ಯಹಮಪಿ ಪ್ರತಿವಾಸರಂ ತಾನ್ ॥**

ದೂತರೇ! ಮಹಾದೇವರೇ ಮೊದಲಾದ ದೇವತೆಗಳ ಸಮೂಹದಿಂದ ಸೇವಿಸಲ್ಪಡುವ ಶ್ರೀವಾಸುದೇವ, ಪುರುಷೋತ್ತಮ, ಮಾಧವ, ದಾಮೋದರ ಮುಂತಾದ ಶಬ್ದಗಳು ಯಾವಾಗಲೂ ಯಾರ ಮುಖದಲ್ಲಿ ಇರುವವೋ, ಅಂಥ ಮಹಾಪುರುಷರನ್ನು ನಾನು ಪ್ರತಿದಿನವೂ ನಮಸ್ಕರಿಸುತ್ತೇನೆ.

**ನಾರಾಯಣಸ್ಯ ಜಗದೇಕಪತೇರ್ಮುರಾರೇಃ**
**ರರ್ಚಾಸು ಚಿತ್ತಮತಿಹಾರ್ದಿ ನೃಣಾಂ ಚ ಯೇಷಾಂ ।**
**ತೇಷಾಮಹಂ ಚ ಸತತಂ ಸುಭಟಾ ಹ್ಯಧೀನೋ**
**ಯೇ ತೇ ಪ್ರಫುಲ್ಲಕಮಲೇಕ್ಷಣರೂಪಭಾಜಃ ॥**

ಜಗತ್ತಿಗೆಲ್ಲ ಏಕ ಮಾತ್ರ ಸ್ವಾಮಿಯಾದ ಗುಣಪರಿಪೂರ್ಣನಾದ ನಾರಾಯಣನ ಮಾಹಾತ್ಮ್ಯಚಿಂತನದಲ್ಲಿಯೇ ಹೃತ್ಪೂರ್ವಕವಾಗಿ ಯಾರ ಮನಸ್ಸು ಆಸಕ್ತವಾಗಿದೆಯೋ, ಮತ್ತು ಯಾರು ಶ್ರೀಹರಿಯಲ್ಲಿ ಅತ್ಯರ್ಥಭಕ್ತಿಯನ್ನು ಮಾಡಿ ಅವನ ಅತ್ಯರ್ಥ ಪ್ರಸಾದವನ್ನು ಹೊಂದಿ ಆ ಭಗವಂತನ ಸಾರೂಪವನ್ನು ಹೊಂದಿರುವರೋ, ಅಂತ ಭಗವದ್ಭಕ್ತರಿಗೆ ನಾನೂ ಸಹ ಅಧೀನನಾಗಿರುತ್ತೇನೆ.

**ಯೇ ವಿಷ್ಣು ಪೂಜನರತಾಃ ಹರಿಭಕ್ತ ಭಕ್ತಾಃ**
**ಏಕಾದಶೀ ವ್ರತರತಾಃ ಕಪಟೈರ್ವಿಹೀನಾಃ ।**
**ಯೇ ವಿಷ್ಣುಪಾದಸಲಿಲಂ ಶಿರಸಾ ವಹಂತಿ**
**ತೇ ಪಾಪಿನೋಽಪಿ ನ ಭಟಾ ಮಮ ದಂಡನೀಯಾಃ ॥**

ಭಟರೇ, ಯಾರು ಮಹಾವಿಷ್ಣುವಿನ ಪೂಜೆಯಲ್ಲಿಯೇ ಆಸಕ್ತರೋ, ಯಾರು ಹರಿಯ ಭಕ್ತರ ಭಕ್ತರೂ ಆಗಿರುವರೋ, ಏಕಾದಶೀ ವ್ರತವನ್ನು ಪಾಲಿಸುತ್ತ ಇರುವರೋ ಮತ್ತು ಯಾರಲ್ಲಿ ಮೋಸ, ಕಪಟ ಇಲ್ಲವೋ, ಯಾರು ಶ್ರೀವಿಷ್ಣುವಿನ ಪಾದವನ್ನು ತೊಳೆದು ತೀರ್ಥವನ್ನು ತಲೆಯ ಮೇಲೆ ಧರಿಸುವರೋ, ಅಂಥವರು ಎಷ್ಟೇ ಪಾಪಮಾಡಿರಲಿ ಅವರನ್ನು ಎಂದಿಗೂ ದಂಡಿಸತಕ್ಕದ್ದಲ್ಲ.

**ಯೇ ಭುಂಜತೇ ಭಗವತೋ ಮಧುಸೂದನಸ್ಯ**
**ನೈವೇದ್ಯ ಶೇಷ ಮಖಿಲೌಘವಿನಾಶಕಾರಿ ।**
**ಯೇ ಕರ್ಣಯೋಶ್ಚ ಶಿರಸಿ ಚ್ಛದನಂ ತುಲಸ್ಯಾಃ**
**ನಿತ್ಯಂ ವಹಂತಿ ಚ ಭಟಾಃ ಪ್ರಣಮಾಮ್ಯಹಂ ತಾನ್ ॥**

ನನ್ನ ಭಟರೇ, ಎಲ್ಲ ಪಾಪಗಳನ್ನು ನಾಶಮಾಡುವ ಮಧುಸೂದನನ ನೈವೇದ್ಯ ಶೇಷವನ್ನು ಯಾರು ತಿನ್ನುತ್ತಾರೋ, ಮತ್ತು ಯಾರು ಎರಡೂ ಕಿವಿಗಳಲ್ಲಿಯೂ ತಲೆಯ ಮೇಲೂ ಶ್ರೀಹರಿಗೆ ಸಮರ್ಪಿತವಾದ ನಿರ್ಮಾಲ್ಯ ತುಳಸಿಯನ್ನು ಯಾವಾಗಲೂ ಧರಿಸುವರೋ ಅಂಥ ವಿಷ್ಣು ಭಕ್ತರನ್ನು ನಾನು ಪ್ರತಿದಿನವೂ ವಂದಿಸುತ್ತೇನೆ.

**ಯೇ ಸತ್ಯವಾಕ್ಯಕಥನೇಷು ಸದಾಽನುರಕ್ತಾಃ**
**ಲೋಕಪ್ರಿಯಾಶ್ಚ ಶರಣಾಗತಲೋಕಪಾಲಾಃ ।**
**ಪಶ್ಯಂತಿ ಯೇ ಚ ಸತತಂ ವಿಷವತ್ ಪರಸ್ವಂ**
**ತೇ ಮಾನವಾ ಮಮ ಭಟಾ ನ ಹಿ ದಂಡನೀಯಾಃ ॥**

ಯಾರು ನಿಜವನ್ನು ನುಡಿಯುತ್ತಾ ನಿರಂತರವೂ ಸತ್ಯನಿಷ್ಠರಾಗಿರುವರೋ, ಯಾರು ಮೊರೆಹೊಕ್ಕವರನ್ನು ಕಾಪಾಡುತ್ತ ಲೋಕಪ್ರಿಯರಾಗಿರುವರೋ, ಹಾಗೂ ಯಾರ ಹೆರವರ ಹಣವನ್ನು ಹಾಲಾಹಲದಂತೆ ಹೇಯವೆಂದು ಬಗೆಯುವರೋ, ಅಂಥ ಮಾನವರು ದೂತರೇ ! ಎಂದೂ ನನ್ನ ದಂಡನೆಗೆ ಗುರಿಯಾಗಲಾರರು.

**ಯೇ ಚಾನ್ನದಾನನಿರತಾಃ ಸಲಿಲಪ್ರದಾಶ್ಚ**
**ಭೂಮಿಪ್ರದಾನಿಖಿಲಲೋಕ ಹಿತೈಷಿಣಶ್ಚ ।**
**ಯೇ ವೃತ್ತಿಹೀನ ಜನತೃಪ್ತಿಕರಾಃ ಪ್ರಶಾಂತಾ**
**ದೂತಾ ನ ತೇ ಖಲು ಕದಾಽಪಿ ಚ ದಂಡನೀಯಾಃ ॥**

ಯಾರು ಯಾವಾಗಲೂ ಅನ್ನದಾನ ಮಾಡುವದರಲ್ಲಿಯೇ ನಿರತರಾಗಿರುವರೋ ಹಾಗೂ ಯಾರು ಭೂದಾನ, ಜಲದಾನ, ಮುಂತಾದವುಗಳನ್ನು ಮಾಡುವರೋ, ಉಪಜೀವನಕ್ಕೆ ಯಾವ ಸಾಧನವೂ ಇಲ್ಲದ ಬಡವರಿಗೆ ವೃತ್ತಿ, ದತ್ತಿ, ಮುಂತಾದವುಗಳನ್ನು ಹಾಕಿಕೊಟ್ಟು ತೃಪ್ತಿಪಡಿಸುವರೋ, ಲೋಕಕಲ್ಯಾಣಕಾಂಕ್ಷಿಗಳಾದ ಅಂಥ ಶಾಂತ ಸ್ವಭಾವದ ಸಜ್ಜನರನ್ನು ನನ್ನ ದೂತರಾದ ನೀವು ಎಂದೂ ದಂಡಶಿಕ್ಷಾದಿಗಳಿಂದ ಹಿಂಸಿಸತಕ್ಕದ್ದಲ್ಲ.

**ಯೇ ಜ್ಞಾತಿಪೋಷರತಾಃ ಪ್ರಿಯವಾದಿನಶ್ಚ ।**
**ಯೇ ದಂಭಕೋಪಮದಮತ್ಸರ ಹೀನ ಚಿತ್ತಾಃ ॥**
**ಯೇ ಪಾಪದೃಷ್ಟಿರಹಿತಾಃ ವಿಜಿತೇಂದ್ರಿಯಾಶ್ಚ ।**
**ತೇಷಾಮಹಂ ನ ವಿದಧಾಮಿ ಕದಾಽಪಿ ಚರ್ಚಾಮ್ ॥**

ಯಾರು ಆಪ್ತರು ಇಷ್ಟರು, ಜ್ಞಾತಿಗಳೂ ಮೊದಲಾದವರ ಪೋಷಣವನ್ನು ಆಸ್ಥೆಯಿಂದ ಮಾಡುವರೋ ಪಾಪದೃಷ್ಟಿರಹಿತರೋ, ಇಂದ್ರಿಯಗಳನ್ನು ಗೆದ್ದಿರುವರೋ, ದಂಭ, ಕೋಪ, ಮದ, ಮತ್ಸರ, ಮುಂತಾದ ದುರ್ಗುಣಗಳು ಯಾರ ಹೃದಯದಲ್ಲಿ ಹೊಕ್ಕಿಲ್ಲವೋ ಯಾರು ಯಾವಾಗಲೂ ಸತ್ಯ ಹಾಗೂ ಪಥ್ಯವಾದ ಪ್ರಿಯಮಾತುಗಳನ್ನೇ ನುಡಿಯುವರೋ, ಇಂಥವರ ತಂಟೆಗೇ ನಾನು ಹೋಗುವದಿಲ್ಲ.

**ವೇದವ್ಯಾಸ:-** ಹೀಗೆ ಯಮದೇವರು ತಿಳಿಸಿ ಹೇಳಿದ ಬಳಿಕ ಆ ಯಮದೂತರು ಶ್ರೀಹರಿಯ ಅಸಾಧಾರಣವಾದ ಪ್ರಭಾವವನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡರು. ವಿಷ್ಣುವಿನ ಎಲ್ಲ ಹೆಸರುಗಳೂ ಪರಮ ಪವಿತ್ರ ಮತ್ತು ಸರ್ವದೇವತೆಗಳಿಂದಲೂ ಸರ್ವದಾ ಸಂಸ್ಮರಣೀಯ ಆಗಿರುತ್ತವೆ. ಆ ವಿಷ್ಣುವಿನ ಎಲ್ಲ ನಾಮಗಳಿಗಿಂತ ರಾಮ ಎಂಬ ನಾಮವು ಅತ್ಯಂತ ಶ್ರೇಷ್ಠ. ''ರಾಮ'' ಎನ್ನುವ ಎರಡು ಅಕ್ಷರಗಳ ಈ ಜೋಡಿಯು ಎಲ್ಲ ಮಂತ್ರಗಳಿಂದ ಮಿಗಿಲು, ಈ ರಾಮ ಶಬ್ದದ ಉಚ್ಚಾರ ಮಾತ್ರದಿಂದಲೇ ಎಂಥ ಪಾಪಿಯೂ ಸಹ ಪರಮ ಪದವನ್ನು ಐದುತ್ತಾನೆ. ಈ ರಾಮನಾಮದ ಮಹಾಮಹಿಮೆಯನ್ನು **''ಮಹೇಶ ಏವ ಜಾನಾತಿ, ನಾನ್ಯೋ ಜಾನಾತಿ ಜೈಮಿನೇ''!**

ಪರಮೇಶ್ವರನೊಬ್ಬನೇ ಚೆನ್ನಾಗಿ ತಿಳಿದು ಕೊಂಡಿದ್ದಾನೆ. ಬೇರಾರಿಗೂ ಅದರ ಮಹಿಮೆಯು ಸರಿಯಾಗಿ ತಿಳಿದಿಲ್ಲ. ವಿಷ್ಣುವಿನ ಸಹಸ್ರನಾಮಗಳ ಪಠನದಿಂದ ಬರುವ ಫಲವು ''ರಾಮ'' ಎಂಬ ಎರಡಕ್ಷರಗಳ ಹೆಸರನ್ನು ನೆನೆಸಿದ ಮಾತ್ರಕ್ಕೆ ದೊರಕುವದು.

**ಅಹೋ ಚಿತ್ರಂ ಮನುಷ್ಯಾಣಾಂ ಚರಿತ್ರಮಿದಮುಚ್ಯತೇ ।**
**ರಾಮೇತಿ ಮುಕ್ತಿದಂ ನಾಮ ನ ಸ್ಮರಂತಿ ದುರಾಶಯಾಃ ॥**

ಮನುಷ್ಯರ ಚರ್ಯೆ, ಚರಿತ್ರೆಗಳೇ ವಿಚಿತ್ರ, ಮೋಕ್ಷವನ್ನೇ ಕೊಡುವ 'ರಾಮ' ಎರಡರಕ್ಷರದ ಒಂದು ಶಬ್ದವನ್ನು ದುರ್ಬುದ್ಧಿಯಿಂದ ಪಠಿಸುವುದಿಲ್ಲ.

**ವಕ್ತುಂ ಶ್ರಮೋ ನ ಚಾಲ್ಪೋಽಪಿ ಶ್ರೋತುಮತ್ಯಂತ ಸುಂದರಮ್ ।**
**ತಥಾಽಪಿ ರಾಮ ರಾಮೇತಿ ನ ವದಂತಿ ದುರಾಶಯಾಃ ॥**

'ರಾಮ' ಎಂಬ ಎರಡು ಅಕ್ಷರಗಳನ್ನು ಉಚ್ಚರಿಸಲು ಯಾರಿಗೂ ಅತ್ಯಲ್ಪ ಶ್ರಮವೂ ಆಗುವುದಿಲ್ಲ. ಕೇಳಲೂ ಅತಿ ಮಧುರ ಈ 'ರಾಮ' ಶಬ್ದ ಇಷ್ಟಾದರೂ ದುರ್ಬುದ್ಧಿಯ ದುರುಳರು ರಾಮ ರಾಮ ಎಂದು ಬಾಯಿಂದ ಹೇಳುವುದಿಲ್ಲ.

ಮೋಕ್ಷವು ಈ ಜಗತ್ತಿನಲ್ಲಿ ಅತ್ಯಂತ ದುರ್ಲಭ. ಅಂಥ ಮೋಕ್ಷವು ಕೇವಲ ರಾಮನಾಮದಿಂದಲೇ ದೊರಕುವಾಗ ಬೇರೆ ಕರ್ಮಗಳು ಏಕೆ?

ಶ್ರಾದ್ಧೇ ಚ ತರ್ಪಣೇ ಚೈವ ಬಲಿದಾನೇ ತಥೋತ್ಸವೇ ।
ಯಜ್ಞೇ ದಾನೇ ವ್ರತೇ ಚೈವ ದೇವತಾರಾಧನೇಽಪಿ ಚ ॥

ಅನ್ಯೇಷ್ವಪಿ ಚ ಕಾರ್ಯೇಷು ವೈದಿಕೇಷು ವಿಚಕ್ಷಣಃ ।
ಸ್ಮರೇದ್ಯಸ್ತತ್ಫಲಪ್ರೇಪ್ಸೂ ರಾಮ ರಾಮೇತಿ ಭಕ್ತಿತಃ ॥

ಪಿತೃಗಳನ್ನುದ್ದೇಶಿಸಿ ಮಾಡುವ ಶ್ರಾದ್ಧ, ತರ್ಪಣ, ಹಾಗೂ ದೇವತೆಗಳನ್ನುದ್ದೇಶಿಸಿ ಮಾಡುವ ವ್ರತ, ಬಲಿದಾನ, ಉತ್ಸವ, ಯಜ್ಞ, ಆರಾಧನೆ, ಇನ್ನಿತರ ವೇದೋಕ್ತವಾದ ಅನುಷ್ಠಾನಕಾಲದಲ್ಲಿ ಅವರ ಪೂರ್ತಿ ಫಲ ದೊರಕಬೇಕಾದರೆ ರಾಮ, ರಾಮ ಎಂದು ಭಕ್ತಿಯಿಂದ ಸ್ಮರಣೆ ಮಾಡಬೇಕು.

**''ಓಂ ನಮೋ ರಾಮಾಯ''** ಎಂಬ ಓಂಕಾರ ಪೂರ್ವಕವಾದ ರಾಮಷಡಕ್ಷರ ಮಂತ್ರವನ್ನು ಜಪಿಸಿ ಈ ಶ್ರೀರಾಮ ಮಂತ್ರದಿಂದಲೇ ಪೂಜೆ ಮಾಡುವವನು ಶ್ರೀಹರಿಯ ಪ್ರಸಾದದಿಂದ ತನ್ನ ಸಕಲ ಕಾಮನೆಗಳನ್ನೂ ಹೊಂದುತ್ತಾನೆ. ಮರಣಕಾಲದಲ್ಲಿ ರಾಮ ರಾಮ ಎಂದು ನುಡಿದರೆ ಮಹಾಪಾಪಿಷ್ಠನೂ ಮೋಕ್ಷವನ್ನು ಪಡೆಯುತ್ತಾನೆ. ಅರಣ್ಯ ಸಂಚಾರದಲ್ಲಿ, ಭೀಕರವಾದ ಸ್ಮಶಾನದಲ್ಲಿ, ರಾಜರ ಮನೆಯ ಮುಂದೆ, ಕೋಟೆ ದುರ್ಗಗಳಲ್ಲಿ, ಪರದೇಶದಲ್ಲಿ, ಕಳ್ಳಕಾಕರ ಭಯ ಪ್ರಾಪ್ತವಾದಾಗ, ಕೆಟ್ಟ ಕನಸು ಕಂಡಾಗ, ಗ್ರಹಗಳ ಪೀಡೆ ಒದಗಿದಾಗ, ಉತ್ಪಾತ, ಭೂಕಂಪ, ಹಾಗೂ ಉಲ್ಬಣವಾದ ರೋಗಗಳ ಭಯವು ಒದಗಿ ಬಂದಾಗಲೂ ಮನುಷ್ಯನು ರಾಮನಾಮವನ್ನು ಭಕ್ತಿಯಿಂದ ಸ್ಮರಿಸಬೇಕು. ಅದರಿಂದ ಮಾನವರ ಭಯಾಪಾಯಗಳೆಲ್ಲ ದೂರವಾಗಿ ಅವರ ವಿಘ್ನವಿಡ್ಡೂರಗಳೆಲ್ಲ ಕಳೆದು ಹೋಗಿ ಶುಭೋದಯಕ್ಕೆ ನಾಂದಿ ಆಗುವುದು. ರಾಮ ಎಂಬ ಈ ನಾಮವು ಎಲ್ಲ ಅಶುಭಗಳನ್ನೂ ನಿವಾರಿಸುವದು. ಈ ರಾಮನಾಮವು ಮಾನವರ ಮನೋರಥಗಳನ್ನೆಲ್ಲ ಈಡೇರಿಸಿ ಕೊನೆಗೆ ಮೋಕ್ಷವನ್ನೂ ಕರುಣಿಸುವುದು.

ಕೋಟಿಜನ್ಮದ ತನ್ನ ಪಾಪರಾಶಿಯೆಲ್ಲವೂ ಕೂಡಲೇ ಧ್ವಂಸವಾಗಿ ಹೋಗಬೇಕು ಎಂದು ಮತ್ತು ತನಗೆ ಈ ಭೂಲೋಕದಲ್ಲಿಯೇ ಸಕಲವಿಧವಾದ ಸುಖಸೌಭಾಗ್ಯ ಸಂಪದಗಳು ದೊರಕಬೇಕು ಎಂದು ಯಾರು ಬಯಸುವರೋ, ಅವರು ಈ ಭೂಲೋಕದಲ್ಲಿ ಮಹಾವಿಷ್ಣುವಿನ ರಾಮ ಎಂಬ ನಾಮವನ್ನು ಭಕ್ತಿಯಿಂದ ಸತತವೂ ಪಠಿಸುತ್ತ ಇರಬೇಕು. ಮೋಕ್ಷವನ್ನೇ ಕೊಡುವ ಈ ಮಧುರವಾದ ರಾಮನಾಮಕ್ಕೆ ಇಹಲೋಕದಲ್ಲಿನ ಸುಖಸಂಪದಗಳನ್ನು ನೀಡುವುದು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ ರಾಮನಾಮದ ಮಹಿಮೆ ರಾಮನಾಮ ಪಠಿಸುವ ಗಿಳಿಯ ಕಥೆ ಎಂಬ ಹದಿನೈದನೇಯ ಅಧ್ಯಾಯ ಮುಗಿದುದು*

—o—

**ವ್ಯಾಸ:-** ದ್ವಿಜಶ್ರೇಷ್ಠ, ಪರಬ್ರಹ್ಮನಾದ ಮಹಾವಿಷ್ಣುವಿನ ಇನ್ನೂ ಹೆಚ್ಚಿನ ಮಹಿಮೆಯನ್ನು ಹೇಳುತ್ತೇನೆ ಕೇಳು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ ಯಾರೇ ಆಗಲಿ, ಶ್ರೀಹರಿಯಲ್ಲಿ ಭಕ್ತಿ ಮಾಡುತ್ತಲಿದ್ದರೆ ಕೃತಾರ್ಥರು, ಅಂಥವರ ಜನ್ಮಸಾರ್ಥಕ. ಇದರಲ್ಲಿ ಸಂದೇಹವಿಲ್ಲ.

**ಹರೇರಭಕ್ತೋ ವಿಪ್ರೋಽಪಿ ವಿಜ್ಞೇಯಃ ಶ್ವಪಚಾಧಮಃ ।**
**ಹರಿಭಕ್ತಃ ಶ್ವಪಾಕೋಽಪಿ ವಿಜ್ಞೇಯೋ ಬ್ರಾಹ್ಮಣಾಧಿಕಃ ॥**

ಹರಿಯಲ್ಲಿ ಭಕ್ತಿ ಮಾಡದ ಬ್ರಾಹ್ಮಣನು ಸಹ ಹರಿಭಕ್ತನಾದ ಚಂಡಾಲನಿಗಿಂತ ಅಧಮ ಎಂದು ತಿಳಿಯಬೇಕು. ಹರಿಯಲ್ಲಿ ಭಕ್ತಿ ಮಾಡುವ ಚಂಡಾಲನೂ ಕೂಡ ಅಭಕ್ತನಾದ ಬ್ರಾಹ್ಮಣನಿಗಿಂತ ಶ್ರೇಷ್ಠನೆಂದು ಅರಿಯಬೇಕು.

**ಸ ಕಥಂ ಬ್ರಾಹ್ಮಣೋ ಯಸ್ತು ಹರಿಭಕ್ತಿ ವಿವರ್ಜಿತಃ ।**
**ಸ ಕಥಂ ಶ್ವಪಚೋ ಯಸ್ತು ಭಗವದ್ಭಕ್ತಿಮಾನಸಃ ॥**

ಹರಿಯಲ್ಲಿ ಭಕ್ತಿಯಿಲ್ಲದಿರುವ ಬ್ರಾಹ್ಮಣ ಎಂಥ ಬ್ರಾಹ್ಮಣ ! ಭಗವಂತನಲ್ಲಿ ಮನಃಪೂರ್ವಕವಾಗಿ ಭಕ್ತಿ ಮಾಡುವ ಚಾಂಡಾಲ ಹೇಗೆ ಚಾಂಡಾಲ ಎನ್ನಿಸುತ್ತಾನೆ?

**ಅವ್ಯಾಜೇನ ಯದಾ ವಿಷ್ಣುಃ ಶ್ವಪಾಕೇನಾಪಿಪೂಜ್ಯತೇ ।**
**ತದಾ ಪಶ್ಯೇತ್ತಮಪ್ಯೇವಂ ಚತುರ್ವೇದಿದ್ವಿಜಾಧಿಕಂ ॥**

ಅವ್ಯಾಜವಾದ ಭಕ್ತಿಯಿಂದ ಚಂಡಾಲನು ವಿಷ್ಣುವನ್ನು ಪೂಜಿಸಿದರೆ, ಅವನು ನಾಲ್ಕು ವೇದ ಓದಿದ ಬ್ರಾಹ್ಮಣನಿಗಿಂತ ಅಧಿಕ ಎಂದು ತಿಳಿಯಬೇಕು.

ಪೂರ್ವಕಾಲದಲ್ಲಿ ದ್ವಾಪರಯುಗದಲ್ಲಿ ಚಕ್ರಿಕ ಎಂಬ ಓರ್ವ ಜಾತಿಹೀನನಾದ ಬೇಡನು ಇದ್ದ. ತಾಯಿ ತಂದೆಗಳನ್ನು ಪರದೇವತೆಯೆಂದು ಸರ್ವದಾ ಆರಾಧಿಸುವ ಆ ಚಕ್ರಿಕ ದಯಾ ಸಹಿತ, ದಂಭರಹಿತ, ಎಂದಿಗೂ ಯಾವ ಪ್ರಾಣಿಯನ್ನೂ ಅವನು ಹಿಂಸಿಸುತ್ತಿರಲಿಲ್ಲ. ಅದರಿಂದ ಎಲ್ಲ ಜನರ ಅನುರಾಗ ಅವನ ಮೇಲೆ. ಅವನು ಮೋಕ್ಷವನ್ನು ಕೊಡುವ ವೇದಾಂತ ಶಾಸ್ತ್ರವನ್ನು ಎಂದೂ ಕಿವಿಯಿಂದ ಕೇಳಲಿಲ್ಲ. ಶಿಷ್ಟ ವಿಶಿಷ್ಟ ವೈಷ್ಣವರೊಡನೆ ಮಾತನ್ನೂ ಎಂದೂ ಆಡಿರಲಿಲ್ಲ. ಆದರೂ ಅವನ ಮನಸ್ಸಿನಲ್ಲಿ ಹರಿಭಕ್ತಿಯು ಉತ್ಪನ್ನವಾಗಿತ್ತು. ಎಂದೂ ಹರಿದಾಡದ ಭಗವನ್ನಿಷ್ಠೆ ಅವನಲ್ಲಿ ಅದ್ಹೇಗೋ ಮೂಡಿತ್ತು. ಸ್ಥಿರತರವಾದ ಭಕ್ತಿಭರದಿಂದ ಅವನು ನಿರಂತರವೂ ಹರೇ, ಕೇಶವ, ವಾಸುದೇವ, ಜನಾರ್ದನ, ಗೋವಿಂದ ಎಂದು ಮುಂತಾಗಿ ಭಗನ್ನಾಮಗಳನ್ನು ಉಚ್ಚರಿಸುತ್ತಲಿದ್ದ. ಹಗಲಿರುಳೂ ಹರಿನಾಮಗಳನ್ನೇ ಸ್ಮರಿಸುತ್ತಿದ್ದ. ಕಾಡಿನಲ್ಲಿ ಯಾವುದಾದರೂ ಸವಿಹಣ್ಣು ದೊರೆತರೆ ಮೊದಲು ಅದನ್ನು ತನ್ನ ಬಾಯಿಯಿಂದ ಕಚ್ಚಿ ತಿಂದು ರುಚಿ ನೋಡುತ್ತಿದ್ದ.ಸಿಹಿಯಾಗಿದ್ದರೆ ಮಾತ್ರ ಬಾಯಿಯಿಂದ ಹೊರತೆಗೆದು ಶ್ರೀಹರಿಗೆ ಭಕ್ತಿಯಿಂದ ನೈವೇದ್ಯವೆಂದರ್ಪಿಸಿ ಬಿಡುತ್ತಿದ್ದ.

**ಉಚ್ಛಿಷ್ಟಂ ವಾಽಪ್ಯನುಚ್ಛಿಷ್ಟಂ ದ್ವಯಮೇವ ನ ವೇತ್ತಿ ಸಃ ।**
**ನಿಜಜಾತಿಸ್ವಭಾವೋ ಹಿ ಸತತಂ ಮೂರ್ಧ್ನಿ ವರ್ತತೇ ॥**

ಇದು ಉಚ್ಛಿಷ್ಟವೋ, ಶಿಷ್ಟವೋ ಎಂಜಲವೋ, ಮೀಸಲವೋ ಯಾವುದೂ ಅವನಿಗೆ ಗೊತ್ತಿರಲಿಲ್ಲ ತಮ್ಮ ತಮ್ಮ ಜಾತಿಯ ಸ್ವಭಾವವು ಎಲ್ಲರ ತಲೆಯ ಮೇಲೆ ಇರುತ್ತದೆ. ಒಂದು ದಿನ ಅವನು ಕಾಡಿಗೆ ಹೋಗಿದ್ದ. ಒಳ್ಳೇ ಪಕ್ವವಾದ ಹಣ್ಣನ್ನು ತರಬೇಕು ಎಂದು ಆ ಕಗ್ಗಾಡಿನ ಗೂಢವನಾಂತರದಲ್ಲಿ ಎಲ್ಲೆಡೆಗೂ ಅಂಡಲೆದ. ಅಲ್ಲಿ ಮೊರಟೆ ಗಿಡದ ಒಂದು ಕೊಂಬೆಯ ತುದಿಯಲ್ಲಿ ಪಕ್ವವಾದ ಹಣ್ಣು ತೂಗಾಡುತ್ತಿದ್ದುದನ್ನು ಕಂಡ. ಆದರೆ ಅದೊಂದು ಹೆಮ್ಮರ, ಬಾನುದ್ದ ಬೆಳೆದ ಮೊರಟೆಗಿಡದ ಎತ್ತರ ಕೊಂಬೆಯಲ್ಲಿ ತೂಗುತ್ತಿದ್ದ ಆ ಹಣ್ಣು ಕೈಗೆ ಎಟಕುತ್ತಿರಲಿಲ್ಲ. ಆದರೂ ಚಕ್ರಿಕನು ಕಷ್ಟಪಟ್ಟು ಮರವನ್ನು ಹತ್ತಿ ಪ್ರಿಯಾಲ ವೃಕ್ಷದ ಆ ಫಲವನ್ನು ತನ್ನ ಕೈಯಿಂದ ಹರಿದ. ತನ್ನ ಪದ್ಧತಿಯಂತೆ ಬಾಯೊಳಗೆ ಹಾಕಿದ ಗಡಿಬಿಡಿಯಲ್ಲಿ ಆ ಕಾಯಿಯು ಬೇಡನ ಮುಖದ ಅಂಗಳದಿಂದ ಸ್ವಲ್ಪ ಮುಂದೆ ಜಾರಿ ಗಂಟಲಕ್ಕೆ ಹೋಯಿತು. ಅದು ಪೂರ್ತಿ ತನ್ನ ಗಂಟಲದ ಒಳಗೆ ಇಳಿದು ಹೊಟ್ಟೆ ಸೇರಬಾರದು. ಎಂದು ಚಕ್ರಕನು ಕೂಡಲೇ ತನ್ನ ಗಂಟಲನ್ನು ಬಲಗೈಯಿಂದ ಒತ್ತಿ ಹಿಡಿದುಕೊಂಡ. ಹರಿಭಕ್ತಿ ಪರಾಯಣನಾದ ಚಕ್ರಕ ತನ್ನ ಮನಸ್ಸಿನಲ್ಲಿ ವಿಚಾರಿಸಿದ. ''ಈ ಹಣ್ಣನ್ನು ಶ್ರೀಹರಿಗೆ ಸಮರ್ಪಣೆ ಮಾಡದಿದ್ದರೆ ಈ ಪ್ರಪಂಚದಲ್ಲೇ ನನ್ನಂಥ ಪಾಪಿ ಯಾರು? ಈ ಹಣ್ಣಿನ ರುಚಿ ನೋಡಿ ಸಿಹಿ ಇದ್ದರೆ ಶ್ರೀಹರಿಗೆ ಸಮರ್ಪಿಸಬೇಕೆಂದು ಪರೀಕ್ಷಿಸಲು ನಾನಿದನ್ನು ಬಾಯಲ್ಲಿ ಹಾಕಿದೆ. ನನ್ನ ದುರ್ದೈವದಿಂದ ನಾಲಿಗೆಯ ಅಂಗಳದಿಂದ ಕೊಂಚ ಹಿಂಜರಿದು ಗಂಟಲಕ್ಕೆ ಅಡರಿದೆ. ಇದನ್ನು ಹರಿಗೆ ಸಮರ್ಪಣ ಮಾಡದೇ ಹಾಗೆಯೇ ನನ್ನ ಗಂಟಲಲ್ಲಿ ಇಳಿಯಗೊಟ್ಟರೆ ಅಥವಾ ಹೊಟ್ಟೆಯಲ್ಲಿ ಹೋಗಲು ಬಿಟ್ಟರೆ ನಾನು ಮಹಾಪಾಪಿಯೆನಿಸುವೆನು. ಶ್ರೀಹರಿಗೆ ನಿವೇದಿತವಾಗದ್ದನ್ನು ತಿಂದ ಮಹಾಪಾಪವು ನನಗೆ ತಗಲುವುದು. ಆದುದರಿಂದ ಹೇಗಾದರೂ ಮಾಡಿ ನಾನು ಇದನ್ನು ನನ್ನ ಗಂಟಲಿನಿಂದ ಹೊರಕ್ಕೆ ತೆಗೆಯಬೇಕು.'' ಹೀಗೆಲ್ಲ ಯೋಚಿಸಿ ಚಕ್ರಿಕನು ತನ್ನ ಗಂಟಲದ ತುದಿಯತ್ತ ಉರುಳಿದ ಆ ಪ್ರಿಯಾಲ ಫಲ ಮೊರಟೆಕಾಯಿಯನ್ನು ತನ್ನ ಗಂಟಲಿನಿಂದ ಹೊರಗೆ ತೆಗೆಯಲು ಪ್ರಯತ್ನಿಸಿದ. ಕುತ್ತಿಗೆಯ ಹಿಂಬದಿಯಲ್ಲಿ ಕೈಯಿಂದ ಗುದ್ದಿಕೊಂಡ. ಮುಖದಿಂದ ಕೆಮ್ಮಿ, ಕ್ಯಾಕರಿಸಿ, ಉಗುಳಲು ಪ್ರಯತ್ನಿಸಿದ. ಏನಾದರೂ ಗಂಟಲಲ್ಲಿ ಸಿಕ್ಕ ಆ ಕಾಯಿ ಬಾಯಿಂದ ಹೊರಗೆ ಬರಲಿಲ್ಲ. ಹರಿಗೆ ಸಮರ್ಪಣೆ ಮಾಡದಿರುವ ಆ ಕಾಯಿಯನ್ನು ಈ ಚಕ್ರಕನು ಗಂಟಲ ಒಳಗೆ ಇಳಿಯಲು ಬಿಡಲಿಲ್ಲ. ಹೀಗಾಗಿ ಅದು ಕಂಠನಾಲದ ತುದಿಯಲ್ಲಿ ನಾಲಗೆಯ ಹಿಂಬದಿಯಲ್ಲಿಯೇ ಕುಳಿತುಕೊಂಡಿತು.

ಆಗ ಆ ಚಕ್ರಕನು ಒಂದು ಕೈಯಿಂದ ಕೊಡಲಿಯನ್ನು ಎತ್ತಿ ಗಂಟಲಿನ ಮುಂಭಾಗದಲ್ಲಿ ಕೊಯ್ದು, ಕಡಿದು ಆ ಹಣ್ಣನ್ನು ಹೊರತೆಗೆದ. ಅದನ್ನು ದೇವರ ಸನ್ನಿಧಿಗೆ ತಂದು ಭಗವಂತನನ್ನು ಹೃದಯದಲ್ಲಿ ಸ್ಮರಿಸುತ್ತ, ನಾಲಿಗೆಯಿಂದ ಅವನ ನಾಮವನ್ನು ಉಚ್ಚರಿಸುತ್ತ ನೈವೇದ್ಯ ಇಟ್ಟು ಸಮರ್ಪಣೆಗೈದ. ಕೊರಳಲ್ಲಿ ಕತ್ತರಿಸಿದ್ದರಿಂದ ನೆತ್ತರ ಪುಟಿದು ಕೋಡಿಯಾಗಿ ಹರಿದು ಅವನ ಮೈಯೆಲ್ಲವೂ ರಕ್ತಸಿಕ್ತವಾಗಿತ್ತು. ಬಾಧೆ ತಾಳಲಾರದೇ ದೇವರ ಮುಂದೆ ಬಿದ್ದ. ತಕ್ಷಣದಲ್ಲಿ ಪ್ರಾಣಪಕ್ಷಿ ಹಾರಿತು.

ಮಹಾವಿಷ್ಣುವಿನ ದೃಷ್ಟಿಗದು ಗೋಚರವಾಯಿತು. ಮನದಲ್ಲಿಯೇ ಶ್ರೀಹರಿ ಸೊಂದುಕೊಂಡ "ಇವನಂಥ ಭಕ್ತ ಇನ್ನೊಬ್ಬನಿಲ್ಲ. ತನ್ನ ಕುತ್ತಿಗೆ ಕೊಯ್ದು ನನಗೆ ಫಲವನ್ನು ಸಮರ್ಪಣೆ ಮಾಡಿದ್ದಾನೆ. ಇಂಥ ಭಕ್ತಿಯ ಪರಾಕಾಷ್ಠೆಯನ್ನು ತಲುಪಿದ ಹಾಗೂ ನನಗಾಗಿ ಆತ್ಮಾಹುತಿಯನ್ನೇ ನೀಡಿದ ಈ ಭಕ್ತ ಶ್ರೇಷ್ಠನಿಗೆ ನಾನು ಎಂಥ ಅನುಗ್ರಹ ಮಾಡಲಿ? ಏನು ಕೊಟ್ಟರೆ ಇವನ ಋಣ ತೀರುವುದು?"

ಹೀಗೆ ಯೋಚಿಸಿ ಗರುಡಧ್ವಜನಾದ ಶ್ರೀಹರಿಯು ತನ್ನ ಕಮಲಕೋಮಲವಾದ ಕರತಲದಿಂದ ಆ ಬೇಡನ ತಲೆಯನ್ನು ಮುಟ್ಟಿದ. ಭಗವಂತನ ಹಸ್ತಸ್ಪರ್ಶದಿಂದ ಆ ಚಕ್ರಕಕಿರಾತ ಮತ್ತೆ ಬದುಕಿದ.

ನಾರಾಯಣನ ನಾಮ ಸ್ಮರಣೆಯನ್ನು ಮಾಡುತ್ತಲೇ ಎದ್ದು ಕುಳಿತ. ಅದನ್ನು ಕಂಡು ಪರಿತೋಷಗೊಂಡ ಆ ಪುಂಡರೀಕಾಕ್ಷ ತಾನುಟ್ಟ ಪೀತಾಂಬರದ ಸೆರಗಿನಿಂದಲೇ ಆ ಬೇಡನ ಮೈಗೆ ಮೆತ್ತಿದ ಮಣ್ಣನ್ನು ಕೊಡವಿದ. ಧೂಳಿಯನ್ನು ಒರೆಸಿದ ಪುನರ್ಜನ್ಮ ಪಡೆದ ಆ ಚಕ್ರಕನಿಗೆ ತನ್ನ ಕೊಡಲಿಯ ಪ್ರಹಾರದಿಂದ ಆದ ಗಾಯವೆಲ್ಲವೂ ಮಾಯವಾಗಿ ಸಾವು ನೋವು ಎಲ್ಲ ಮರೆತು ಹೋಯಿತು. ಅವನು ಉಲ್ಲಾಸದಿಂದ ನಾರಾಯಣನ ಸ್ತೋತ್ರ ಮಾಡಲು ಉಪಕ್ರಮಿಸಿದ.

**ಗೋವಿಂದ ಕೇಶವ ಹರೇ ಜಗದೀಶ ವಿಷ್ಣೋ**
**ಜಾನಾಮಿ ಯದ್ಯಪಿ ನ ತೇ ಸ್ತುತಿಯೋಗ್ಯ ವಾಕ್ಯಮ್ ॥**
**ಸ್ತೋತುಂ ತಥಾऽಪಿ ರಸನಾ ಮಮ ವಾಂಛತಿ ತ್ವಾಂ**
**ಸ್ವಾಮಿನ್ ಪ್ರಸೀದ ಹರ ದೋಷಮಿಮಂ ಪ್ರವೃದ್ಧಮ್ ॥**

ಗೋವಿಂದ, ಕೇಶವ, ಹರಿ, ಜಗದೀಶ, ವಿಷ್ಣು, ನಿನ್ನನ್ನು ಸ್ತೋತ್ರ ಮಾಡಲು ಯೋಗ್ಯವಾದ ವಾಕ್ಯ, ಉಚಿತವಾದ ಪದಪಂಕ್ತಿಗಳನ್ನು ನಾನು ಅರಿಯೆ. ಆದರೆ ನನ್ನ ನಾಲಿಗೆ ಮಾತ್ರ ನಿನ್ನನ್ನು ಸುತ್ತಿಸಲು ತವಕಿಸುತ್ತದೆ. ಈ ನನ್ನ ಜಿಹ್ವಾ ಚಾಪಲ್ಯವನ್ನು ಕ್ಷಮಿಸು. ಅದರಿಂದ ನನಗೆ ಬರಲಿರುವ ಪಾಪವನ್ನು ಪರಿಹರಿಸು.

**ಜಾನಾತಿ ದೇವ ಭವತೋ ಭುವನೈಕನಾಥ**
**ಭಕ್ತೈವಯದ್ಯಪಿ ನೃಣಾಂ ಭವಬಂಧನಾಶಃ ।**
**ಏಕಾಂತ ಪಾಪಶಬರಾನ್ವಯಲಬ್ಧ ಜನ್ಮಾ**
**ವಿಷ್ಣೋಸ್ತಥಾऽಪಿ ಭಗವಾನ್ ಮಯಿ ಸುಪ್ರಸನ್ನಃ ॥**

ಮಹಾಪಾಪಿಷ್ಠರಾದ ಬೇಡರ ವಂಶದಲ್ಲಿ ಹುಟ್ಟಿದ ಈ ಚಕ್ರಿಕಕಿರಾತನಿಗೆ ಭಗವನ್ ಮಹಾವಿಷ್ಣುವೇ, ನೀನು ಪ್ರಸನ್ನನಾಗಿ ದರ್ಶನವನ್ನು ಕರುಣಿಸಿದೆ. ಇದರಿಂದ, ಲೋಕಸ್ವಾಮಿಯಾದ ನಿನ್ನಲ್ಲಿ ಭಕ್ತಿ ಮಾತ್ರದಿಂದಲೇ ಮಾನವರ ಸಂಸಾರ ಬಂಧವು ನಷ್ಟವಾಗಿ ಹೋಗುವುದು ಎಂಬ ಅಂಶವನ್ನು ಪ್ರತ್ಯಕ್ಷವಾಗಿಯೇ ಈಗ ನಾನು ತಿಳಿಯುತ್ತಲಿದ್ದೇನೆ.

**ಯಸ್ಯ ಪ್ರಭೋ ತವಮನೋಜ್ಞಕರಾರವಿಂದ**
**ಸ್ಪರ್ಶಂ ಚತುರ್ಮುಖ ಮುಖಾ ಅಪಿ ದೇವವೃಂದಾಃ**

**ನ ಪ್ರಾಪ್ನುವಂತಿ ವಿದಿತಸ್ಯ ಮಯಾಽದ್ಯ ಲಬ್ಧಂ**
**ತ್ವತ್ತೋ ನ ಕೋಽಪಿ ಸದಯೋಂಜಸೇವಕೇಷು ॥**

ಪ್ರಭು, ನಿನ್ನ ಮನೋಹರವಾದ ಹಸ್ತಕಮಲದ ಸ್ಪರ್ಶವನ್ನು ಬ್ರಹ್ಮಾದಿ ದೇವತೆಗಳೂ ಕೂಡ ಪಡೆಯಲಾರದೋ, ಅಂಥ ನಿನ್ನ ಹಸ್ತಸ್ಪರ್ಶವು ನನ್ನಿಂದ ಹೊಂದಲ್ಪಟ್ಟಿತು. ನಿಜಭಕ್ತರ ಮೇಲೆ ನಿನ್ನಗಿಂತ ಹೆಚ್ಚು ದಯಾಪರಿಪೂರ್ಣರು ಬೇರೆ ಯಾರೂ ಇಲ್ಲ.

**ಯೇನ ತ್ವಯಾ ವಿನಿಹತಸ್ತ್ರಿದಶಾದ್ಯ ವೈರಿಃ**
**ಕಂಸಾಸುರೋ ನಿಮಿಸುತಃ ಕೃತ ಸರ್ವಪಾಪಃ ।**
**ಸೇಂದ್ರಾಮರಪ್ರಕರ ಮರ್ತ್ಯ ಹಿತಾಯ ಪೂರ್ವಂ**
**ತಸ್ಮೈ ನಮಃ ಪರಮ ಮಂಗಲದಾಯ ತುಭ್ಯಮ್ ॥**

ದೇವತೆಗಳ ಪ್ರಥಮ ವೈರಿಯಾದ ಕಾಲನೇಮಿಯ ಮಗನಾದ ಕಂಸನು ಎಲ್ಲ ಪಾಪಗಳನ್ನು ಮಾಡಿದ್ದರಿಂದ ನಿನ್ನಿಂದ ಕೊಲ್ಲಲ್ಪಟ್ಟ. ಇಂದ್ರನೇ ಮೊದಲಾದ ದೇವತೆಗಳಿಗೂ ಮಾನವರಿಗೂ ಮೊದಲಿನಿಂದಲೂ ಕಲ್ಯಾಣವನ್ನುಂಟು ಮಾಡುತ್ತಲಿದ್ದ ಎಲ್ಲರಿಗೂ ಮಂಗಳಪ್ರದವಾದ ನಿನಗೆ ನನ್ನ ನಮಸ್ಕಾರ.

**ಯೇನ ತ್ವಯಾಽತಿ ಬಲಿನಾ ಯಮಲಾರ್ಜುನೌ ತೌ**
**ದೇವೋತ್ತಮೇನ ನಿಹತೌ ವಸುದೇವಜೇನ ।**
**ದುಷ್ಟಶ್ಚ ಕಾಲಯವನೋ ಯುಧಿ ಧೇನುಕಶ್ಚ**
**ತಸ್ಮೈ ನಮೋಽಸ್ತು ನವಮೇನಿಭಾಯ ತುಭ್ಯಂ ॥**

ಅತಿ ಬಲಿಷ್ಠನಾದ ಹಾಗೂ ದೇವೋತ್ತಮನಾದ ವಸುದೇವಕುಮಾರನಾದ ನಿನ್ನಿಂದ ಯಮಲಾರ್ಜುನರು ಸಂಹರಿಸಲ್ಪಟ್ಟರೋ, ಮತ್ತು ದುಷ್ಟನಾದ ಕಾಲಯವನ ಧೇನುಕ ನಿಗ್ರಹಿಸಲ್ಪಟ್ಟರೋ, ಅಂಥ ನೂತನ ಮೋಡದಂತೆ ಕಪ್ಪು ಬಣ್ಣದಿಂದೊಪ್ಪುವ ನಿನಗೆ ನನ್ನ ನಮಸ್ಕಾರ.

**ಪಾರಿಜಾತೋ ಹೃತೋ ಯೇನ ಜಿತಶ್ಚಾಖಂಡಲಸ್ತ್ವಯಾ**
**ಲೀಲಾಜಿತ ಮಹೇಶಾಯ ತಸ್ಮೈ ತುಭ್ಯಂ ನಮೋ ನಮಃ ॥**

ಇಂದ್ರನನ್ನು ಗೆದ್ದು ಪಾರಿಜಾತ ವೃಕ್ಷವನ್ನು ಸ್ವರ್ಗದಿಂದ ಭೂಲೋಕಕ್ಕೆ ತಂದ ಹಾಗೂ ಪರಮೇಶ್ವರನನ್ನು ಕೂಡ ಲೀಲೆಯಿಂದಲೇ ಜಯಿಸಿದ ನಿನಗೆ ಮತ್ತೆ ಮತ್ತೆ ನನ್ನ ನಮಸ್ಕಾರ.

ಹೀಗೆ ಚಕ್ರಿಕ ಬೇಡನು ಸ್ತೋತ್ರ ಮಾಡಿದ್ದನ್ನು ಕೇಳಿ ಆ ಲಕ್ಷ್ಮೀಪತಿಯು ಸಂತುಷ್ಟನಾಗಿ ಬೇಕಾದ ವರ ಬೇಡಲು ಅವನಿಗೆ ಹೇಳಿದ. ಆಗ ಆ ಬೇಡನು ಕೈ ಜೋಡಿಸಿ ಕೇಳಿದ.

**ಚಕ್ರಿಕ:-** ಕೃಪಾಮಯನಾದ ಪರಬ್ರಹ್ಮನೇ, ನಿನ್ನನ್ನು ನಾನು ಸಾಕ್ಷಾತ್ತಾಗಿ ಈ ಕಣ್ಣಿನಿಂದ ನೋಡುತ್ತಲಿದ್ದೇನೆ. ಇನ್ನು ಬೇರೆ ಯಾವ ವರವನ್ನು ನಾನು ಕೇಳಲಿ? ಸ್ವಾಮಿ, ಇಂದಿನವರೆಗೆ ನಾನು ನಿನ್ನನ್ನು ಧ್ಯಾನಿಸಲಿಲ್ಲ. ನಿನ್ನ ಮೂರ್ತಿಯನ್ನು ಪೂಜಿಸಲಿಲ್ಲ. ನಿನಗೆ ಧೂಪ, ದೀಪ, ಪುಷ್ಪ, ನೈವೇದ್ಯ, ಮಂಗಳಾರತಿ ಮೊದಲಾದವುಗಳಿಂದ ಪೂಜೆಯನ್ನು ಮಾಡಲಿಲ್ಲ. ನಾಮಗಳನ್ನು ನೆನೆಯಲಿಲ್ಲ. ಪಾದೋದಕವನ್ನು ಶಿರದಲ್ಲಿ ಧರಿಸಲಿಲ್ಲ. ನೈವೇದ್ಯವನ್ನು ಭುಜಿಸಲಿಲ್ಲ. ವ್ರತಗಳನ್ನು ಕೈಗೊಳ್ಳಲಿಲ್ಲ. ಆದರೂ ಇಂದು

ನೀನು ನನಗೆ ನಿನ್ನ ಪ್ರತ್ಯಕ್ಷ ದರ್ಶನವನ್ನು ಕರುಣಿಸಿರುವೆ. ಇದು ವರವಲ್ಲವೆ? ಯಾವ ಧರ್ಮ ಕರ್ಮಗಳನ್ನೂ ಮಾಡಲು ಅಧಿಕಾರವಿಲ್ಲದ, ಎಲ್ಲ ಶಿಷ್ಟ ವಿಶಿಷ್ಟರಿಂದ ಬಹಿಷ್ಕೃತವಾದ ಕಾಡುಬೇಡರ ಕುಲದಲ್ಲಿ ನಾನು ಜನಿಸಿದ್ದೇನೆ. ಆದರೂ ದೇವಾಧಿದೇವತೆಗಳಿಗೂ ದುರ್ಲಭವಾದ ನಿನ್ನ ದಿವ್ಯಸ್ವರೂಪದರ್ಶನ ಹಾಗೂ ಪಾದಸ್ಪರ್ಶನಗಳನ್ನು ಪಡೆದು ಧನ್ಯನಾದೆ. ಇದಕ್ಕಿಂತ ಈ ಜಗತ್ತಿನಲ್ಲಿ ನನಗೆ ವರಣೀಯವಾದದ್ದೂ ಅಪೇಕ್ಷಣೀಯವಾದುದೂ ಯಾವುದೂ ಇಲ್ಲ. ಆದರೂ ನೀನು ಒತ್ತಾಯಿಸುತ್ತಿರುವದರಿಂದ ವರವೊಂದನ್ನು ಬೇಡುವೆ ಕರುಣಿಸು.

''ನಿನ್ನ ಅನುಗ್ರಹದಿಂದ ನನ್ನ ಮನಸ್ಸು ಯಾವಾಗಲೂ ನಿನ್ನಲೇ ನೆಟ್ಟಿರಲಿ.''

ಚಕ್ರಿಕ ಕಿರಾತನ ಈ ನಿಸ್ಪೃಹಬಾವನೆ, ಹರಿಭಕ್ತಿಗಳನ್ನು ನೋಡಿ ಪರಮಪ್ರೀತನಾದ ನಾರಾಯಣ, ಅವನನ್ನು ತನ್ನ ನಾಕೂ ತೋಳುಗಳಿಂದ ಭರದಿಂದ ಬಿಗಿದಪ್ಪಿದ. ವಾತ್ಸಲ್ಯರಸವನ್ನು ಸೂಸುತ್ತ ನುಡಿದ.

**ಶ್ರೀಹರಿ:-** ವತ್ಸ, ಚಕ್ರಿಕ, ನಿನ್ನ ಭಕ್ತಿಯಿಂದ ನಾನು ಪರಮ ಪರಿತುಷ್ಟನಾಗಿರುತ್ತೇನೆ. ನಿನ್ನ ಅಪೇಕ್ಷೆಯಂತೆ ನಿನಗೆ ನನ್ನಲ್ಲಿ ಹುಟ್ಟಿದ ಈ ಪರಮ ಭಕ್ತಿಯು ಅವಿಚ್ಛಿನ್ನವಾಗಿ ಸಂತತವಾಗಿ ವರ್ಧಿಸುತ್ತ ಇರಲಿ.

ಹೀಗೆ ಅನುಗ್ರಹಿಸಿ ಭಗವಾನ್ ನಾರಾಯಣನು ಅಲ್ಲಿಂದ ಅದೃಶ್ಯನಾದ. ಭಕ್ತಾಗ್ರೇಸರನಾದ ಚಕ್ರಿಕ ಬೇಡನು ಪರಮಸಂತುಷ್ಟನಾಗಿ ಮನೆಗೆ ಬಂದ. ಶ್ರೀಹರಿಯ ದರ್ಶನವಾದ ಬಳಿಕ ಅವರಲ್ಲಿ ಸಂಸಾರದ ಬಗ್ಗೆಯೇ ಅಸಾರತಾಭಾವ ಉದಿಸಿತ್ತು. ವಿಷಯಗಳಲ್ಲಿ ವೈರಾಗ್ಯ ತಲೆದೋರಿತ್ತು. ಮುಂದೆ ಅವನು ಮನೆ ಮಾರು ತೊರೆದ. ಮಡದಿ ಮಕ್ಕಳನ್ನು ಬಿಟ್ಟ. ದ್ವಾರಕಾ ಪಟ್ಟಣಕ್ಕೆ ನಡೆದ. ಆ ಕ್ಷೇತ್ರದಲ್ಲಿ ನೆಲೆನಿಂತು ಬದುಕಿರುವ ವರೆಗೂ ಭಗವಂತನ ಧ್ಯಾನೋಪಾಸನಾರೂಪವಾದ ತಪೋನುಷ್ಠಾನವನ್ನು ಆಚರಿಸಿದ. ಆಯುಷ್ಯ ಮುಗಿದ ಬಳಿಕ ಮರಣಹೊಂದಿ ದೇವ ದುರ್ಲಭವಾದ ಮೋಕ್ಷ ಹೊಂದಿದ.

**ತಸ್ಮಾತ್ ಭಕ್ತವಶೋ ದೇವೋ ಭಕ್ತಿಮಾತ್ರೇಣ ತುಷ್ಯತಿ ।**
**ನ ಚ ಸ್ತೋತ್ರೈರ್ನ ವಿತ್ತೈಶ್ಚ ನ ತಪೋಭಿರ್ಜಪೇನ ವಾ ॥**

ಭಗವಾನ್ ಮಹಾವಿಷ್ಣುವು ಭಕ್ತಿ ಮಾತ್ರದಿಂದಲೇ ತುಷ್ಟನಾಗುತ್ತಾನೆ. ಭಕ್ತರ ಕೈಗೊಂಬೆ ಆ ಶ್ರೀಹರಿ. ಅವನು ಯಾವ ಮಂತ್ರ, ಸ್ತೋತ್ರ, ದ್ರವ್ಯ, ತಪ, ಜಪ ಮುಂತಾದವುಗಳಿಂದ ಸಂತುಷ್ಟನಾಗುವುದಿಲ್ಲ. ಭಗವಂತನನ್ನು ಒಲಿಸಲು ಭಕ್ತಿವೊಂದೇ ಮುಖ್ಯಸಾಧನ.

**ಫಲಂ ಯದ್ಯಪಿ ಚೋಚ್ಛಿಷ್ಟಂ ದತ್ತಂ ತೇನ ದ್ವಿಜೋತ್ತಮ ।**
**ತಥಾऽಪಿ ತುಷ್ಟವಾನ್ ವಿಷ್ಣುರ್ಜ್ಞಾತ್ವಾ ಭಕ್ತಿಮುಚಂಚಲಾಂ ॥**

ಚಕ್ರಿಕ ಬೇಡನು ಶ್ರೀಹರಿಗೆ ತಾನು ಕಚ್ಚಿತಿಂದು ಎಂಜಲಾದ ಉಚ್ಛಿಷ್ಟ ಫಲವನ್ನು ನೀಡುತ್ತಲಿದ್ದ. ಆದರೂ ಅವನ ಸ್ಥಿರವಾದ ಭಕ್ತಿಯನ್ನು ತಿಳಿದು ಅವನ ಮೇಲೆ ಶ್ರೀಹರಿ ಸುಪ್ರಸನ್ನನಾದ.

**ಯೇ ಭಜಂತಿ ದೃಢಯಾ ಕಿಲ ಭಕ್ತ್ಯಾ**
**ವಾಸುದೇವಚರಾಂಬುಜ ಯುಗ್ಮಮ್ ।**
**ವಾಸವಾರಿ ವಿಬುಧಪ್ರವರೇಜ್ಯಂ**
**ತೇ ವ್ರಜಂತಿ ಮನುಜಾಃ ಕಿಲ ಮೋಕ್ಷಮ್ ।**

ಯಾರು ಇಂದ್ರಾದಿ ದೇವತೆಗಳಿಂದ ಪೂಜಿಸಲ್ಪಡುವ ವಾಸುದೇವನ ಅಡಿದಾವರೆಯ ಜೋಡಿಯನ್ನು ದೃಢತರವಾದ ಭಕ್ತಿಯಿಂದ ಪೂಜಿಸುವರೋ ಅಂಥ ಮನುಷ್ಯರು ಮೋಕ್ಷವನ್ನು ಹೊಂದುತ್ತಾರೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಚಕ್ರಿಕ ಬೇಡನ ಆಖ್ಯಾನ ಎಂಬ ಹದಿನಾರನೇಯ ಅಧ್ಯಾಯ ಮುಗಿದುದು*



## ವೇಶ್ಯಾಲಂಪಟನಾದ ಭದ್ರತನು ಬ್ರಾಹ್ಮಣನ ವೃತ್ತಾಂತ

ಅಧ್ಯಾಯ - ೧೭

**ಜೈಮಿನಿ:-** ಗುರುಗಳೇ, ನಮಗೆ ಇನ್ನು ಆ ಲಕ್ಷ್ಮೀಪತಿಯ ಮಹಿಮೆಗಳನ್ನು ಹೇಳಿರಿ. ಹರಿಕಥೆಯ ಸುಧೆಯ ಸವಿಯನ್ನು ಸವಿದವರಿಗೆ ತೃಪ್ತಿಯೆಂಬುದುಂಟೆ?

**ವ್ಯಾಸ:-** ವತ್ಸ ಜೈಮಿನಿ, ಚತುರ್ವರ್ಗ ಫಲನೀಡುವ ಲಕ್ಷ್ಮೀಪತಿಯ ಮಾಹಾತ್ಮ್ಯವನ್ನು ಸಂಕ್ಷಿಪ್ತವಾಗಿ ಹೇಳುತ್ತೇನೆ ಕೇಳು. ಭಕ್ತಿಯಿಂದ ಒಂದು ದಿನವಾದರೂ ವಿಷ್ಣುವಿನ ಪೂಜೆ ಮಾಡಿದರೆ ಅವನ ಕೋಟಿಜನ್ಮದ ಪಾಪಗಳನ್ನೆಲ್ಲ ಅಳಿಸಿ ಹಾಕುತ್ತಾನೆ ಸ್ವಯಂ ಶ್ರೀಹರಿ.

**ಪುಣ್ಯಾತ್ಮಾ ಸ ಕಥಂ ಮರ್ತ್ಯೋ ಯೇನ ನಾರಾಧಿತೋ ಹರಿಃ ।**
**ಸ ಕಥಂ ಪಾತಕೀ ಯಸ್ಯ ಭಕ್ತಿರ್ನಾರಾಯಣೇ ಪ್ರಭೌ ॥**

ಯಾರು ಶ್ರೀಹರಿಯನ್ನು ಆರಾಧಿಸುವದಿಲ್ಲವೋ ಅವನು ಹೇಗೆ ಪುಣ್ಯಾತ್ಮನಾಕಿಗುತ್ತಾನೆ? ಯಾರಿಗೆ ಪ್ರಭು ನಾರಾಯಣನಲ್ಲಿ ಭಕ್ತಿಯಿದೆಯೋ ಅವನು ಪ್ರಾತ ಹೇಗೆ? ಈ ವಿಷಯದಲ್ಲಿ ಉಪಾಖ್ಯಾನವೊಂದನ್ನು ಹೇಳುವೆ ಕೇಳು.

ಪೂರ್ವಕಾಲದಲ್ಲಿ ಪುರುಷೋತ್ತಮ ಎಂಬ ಶ್ರೇಷ್ಠವಾದ ನಗರ. ಎಲ್ಲ ದೇವತೆಗಳಿಗೂ ಅದು ನೆಲೆ. ಎಲ್ಲ ತೀರ್ಥಗಳ ಮೇಲಿನ ಸ್ಥಳ ಅದಕ್ಕೆ ಕಾರಣ. ಆ ರಮಣೀಯವಾದ ಪಟ್ಟಣದಲ್ಲಿ ಸಾಕ್ಷಾತ್ ಕೇಶವನು ವಾಸಿಸಿದ್ದ. ಅಲ್ಲಿ ಹಿಂದೆ ಒಬ್ಬ ಬ್ರಾಹ್ಮಣ. ಭದ್ರತನು ಎಂದು ಅವನ ಹೆಸರು. ನೋಡಲು ಸುಂದರ ಮತ್ತು ಯಾವಾಗಲೂ ಪ್ರಿಯವಾದಿ. ಅವನಾಡುವ ಮಾತೆಲ್ಲ ಮಧುರ ಪ್ರಿಯಕರ. ಪವಿತ್ರಕುಲದಲ್ಲಿ ಅವನ ಹುಟ್ಟು. ಅವನು ಪ್ರಾಯಕ್ಕೆ ಬಂದಾಗ ದಾರಿ ತಪ್ಪಿದ. ಪರನಾರಿಯರ ಬೆನ್ನು ಹತ್ತಿದ. ಅಧ್ಯಯನ, ಅಧ್ಯಾಪನ ಎಲ್ಲವನ್ನೂ ತೊರೆದ. ಸಜ್ಜನರ ಸಹವಾಸ ಬಿಟ್ಟ. ಪಾಖಂಡಿಗಳ ಜೊತೆಗೆ ಸ್ನೇಹ ಅವನಿಗೆ ಕುದುರಿತು. ಹೆರವರ ಹಣವನ್ನು ಎತ್ತಿ ಹಾಕಿದ. ಧರ್ಮವನ್ನು

ನಿಂದಿಸಿದ. ಬ್ರಾಹ್ಮಣರ ಆಚಾರ-ವಿಚಾರಗಳನ್ನೆಲ್ಲ ಬಿಟ್ಟುಬಿಟ್ಟ. ಗುರುಗಳ ಸೇವೆ ಅತಿಥಿಗಳ ಪೂಜೆ, ಸತ್ಯಭಾಷಣ, ಪುಣ್ಯಕರ್ಮ, ಎಲ್ಲವನ್ನೂ ಪರಿತ್ಯಜಿಸಿದ.

ಒಂದು ದಿನ ಭದ್ರತನುವಿನ ತಂದೆಯ ಶ್ರಾದ್ಧದಿನ ಬಂದಿತು. ಅವನಿಗೆ ಶ್ರಾದ್ಧ ಮಾಡುವ ಇಚ್ಛೆ ಇರಲಿಲ್ಲ. ಆದರೂ ಜನರ ನಿಂದೆಗೆ ಹೆದರಿ ತಂದೆಯ ಶ್ರಾದವನ್ನು ಪೂರೈಸಿದ. ಭಕ್ತಿಯಿಲ್ಲದೇ ಮಾಡಿದ. ವಿಧಿಪೂರ್ವಕ ಮಾಡಿದ.

ಅಂದು ರಾತ್ರಿ ಎಂದಿನಂತೆ ಅವನು ವೇಶ್ಯೆಯ ಮನೆಗೆ ಹೋದ. ಅವಳಿಗೆ ಹೇಳಿದ.

**ಭದ್ರತನು:-** ಸುಂದರಿ, ಇಂದು ನನ್ನ ತಂದೆಯ ಶ್ರಾದ್ಧ ಇಂದು ಸ್ತ್ರೀಸಂಗ ನಿಷಿದ್ಧ. ಅದರಲ್ಲಿಯೂ ವೇಶ್ಯೆಯ ಸಹವಾಸ ಅಕ್ಷಮ್ಯ ಅಪರಾಧ. ಆದರೂ ನಿನ್ನ ಮೇಲಿನ ಪ್ರೀತಿಯಿಂದ ನಾನು ಇಲ್ಲಿಗೆ ಧಾವಿಸಿ ಬಂದಿದ್ದೇನೆ. ಸ್ವಲ್ಪ ಹೊರಗೆ ನೋಡು. ಈಗ ಅಪರಾತ್ರಿಯ ಸಮಯ. ಎಂಥ ಭೀಕರವಾದ ಅಂಧಕಾರವು ಭೂಮ್ಯಾಕಾಶಗಳನ್ನು ತುಂಬಿದೆ. ಮಳೆಯಾಗಿ ದಾರಿ ಕೆಸರಿನಿಂದ ನಡೆಯಲು ಬಾರದಂತಿದೆ. ಆದರೂ ನಿನ್ನ ಸೌಂದರ್ಯದಿಂದ ನಾನು ಇಲ್ಲಿಗೆ ಎಳೆಯಲ್ಪಟ್ಟು ಬಂದಿರುವೆ. ಗಾಢಾಂಧಕಾರದಲ್ಲಿ ದಾರಿಯೇ ತೋರುತ್ತಿರಲಿಲ್ಲವಾದರೂ ಕಾಮ ದಾರಿ ತೋರಿದ. ಪ್ರೇಮ ಬೆಳಕು ಬೀರಿತು. ನಿನ್ನ ಮೇಲಿನ ಪ್ರೀತಿ ಇಲ್ಲಿನ ವರೆಗೆ ಸೆಳೆತಂದು ಮುಟ್ಟಿಸಿತು. ನಿನ್ನನ್ನು ನೋಡದೇ ನಾನು ಒಂದು ಕ್ಷಣವೂ ಬದುಕಿ ಇರಲಾರೆ. ತೀರ್ಥದ ನೀರಿನಲ್ಲಿ ಸ್ನಾನ ಮಾಡಿದರೆ ಏನು ಫಲ? ನಿನ್ನ ಪ್ರೇಮ ತೀರ್ಥದಲ್ಲಿ ಸ್ನಾನಗೈಯಲು ಆತುರನಾಗಿ ಬಂದಿದ್ದೇನೆ. ಸ್ವರ್ಗದಲ್ಲಿ ಸುಖ ನೀಡುವ ದೇವತೆಗಳನ್ನು ಆರಾಧಿಸಿ ಏನು ಫಲ, ಬದುಕಿರುವಾಗಲೇ ಸ್ವರ್ಗಸುಖ ನೀಡುವ ನೀನಿರುವಾಗ? ನನಗೆ ಶ್ರಾದ್ಧದಲ್ಲಿ ಅಲ್ಪವೂ ಶ್ರದ್ಧೆಯಿಲ್ಲ. ಅಪಕೀರ್ತಿ ಬರುತ್ತದೆಯೆಂದು ಮನೆಯಲ್ಲಿ ಇಂದು ಶ್ರದ್ಧೆಯಿಲ್ಲದಿದ್ದರೂ ಶ್ರಾದ್ಧ ಮಾಡಿದೆ. ಜಪ, ಹೋಮ, ನೆರವೇರಿಸಿದೆ. ನನ್ನ ಜಪ, ನೀನೇ. ತಪ ನೀನೇ. ನೀತಿ ನಿಯಮ ಎಲ್ಲ ನೀನೇ. ನೀನೇ ನನ್ನ ಸರ್ವಸ್ವ. ನಾನು ನಿನ್ನ ಅಜ್ಞಾಧಾರಿ. ನಿನ್ನ ಅಪ್ಪಣೆಯೇನು? ಹೇಳುವಂಥವಳಾಗು.

**ವೇಶ್ಯಾ:-** ದುರ್ಬುದ್ಧಿಯೇ, ನಿನ್ನಿಂದ ನಿನ್ನ ತಂದೆ ಮಗನಿದ್ದೂ ಅಪುತ್ರನೇ ಆದಂತಾಯಿತು. ತಂದೆಯ ಶ್ರಾದ್ಧದ ಒಂದು ದಿನವೂ ಸ್ತ್ರೀಸಂಗವನ್ನು ಬಿಡಲಾರದವ ನೀನು ! ಪಿತೃದಿನದಲ್ಲಿ ಕ್ರೀಡಾಲೋಲನಾದ ಮಾನವನ ಶ್ರಾದ್ಧದ ಪುಣ್ಯವನ್ನೆಲ್ಲ ರಾಕ್ಷಸರು ಸ್ವೀಕರಿಸುತ್ತಾರೆ. ನೀನು ನನ್ನ ಮೇಲೆ ಮಾಡುವ ಈ ವಿಲಕ್ಷಣವಾದ ಪ್ರೀತಿಯನ್ನು ಶ್ರೀವಿಷ್ಣುವಿನಲ್ಲಿಟ್ಟಿದ್ದರೆ? ನಿನ್ನ ಜನ್ಮವೇ ಉದ್ಧಾರವಾಗುತ್ತಿತ್ತು. ಮಾನವನ ಈ ದೇಹ ನೀರಿನ ಮೇಲಿನ ಗುಳ್ಳೆಯಂತೆ ಕ್ಷಣಿಕ, ಅಶ್ವಾಶ್ವತ. ಈ ಹೇಯವಾದ ಹೆಣ್ಣಿನ ದೇಹದ ಮೇಲಿನ ಮೋಹದಿಂದ ಇಂಥ ಘೋರ ಪಾಪವನ್ನು ಏಕೆ ಮಾಡುತ್ತಲಿರುವೆ?

ಹೀಗೆ ಸುಮಧ್ಯಮಾ ಎಂಬ ವೇಶ್ಯೆಯು ಆ ಭದ್ರತನುವನ್ನು ಚೆನ್ನಾಗಿ ಜರಿದು, ಹೀಗಳೆದು ಬುದ್ಧಿ ಹೇಳಿದಳು. ಬಳಿಕ ಅವನಲ್ಲಿ ಮೆಲ್ಲಮೆಲ್ಲನೇ ವಿವೇಕೋದಯ ವಾಯಿತು. ಮನಸ್ಸಿನಲ್ಲಿ ಅವನು ನುಡಿದ. ''ಅಯ್ಯೋ ! ಪಾಪಿಷ್ಠನಾದ ನನಗೆ ಧಿಕ್ಕಾರವಿರಲಿ. ನಾನು ಮಹಾಪಾಪಿ. ಒಬ್ಬ ವೇಶ್ಯೆಗಿರುವಷ್ಟೂ ತಿಳುವಳಿಕೆ, ವಿವೇಕ ನನ್ನಲ್ಲಿಲ್ಲ. ಶುದ್ಧವಾದ ಬ್ರಾಹ್ಮಣ ಕುಲದಲ್ಲಿ ಹುಟ್ಟಿ ಆತ್ಮಘಾತಕವಾದ ಪಾಪಕೃತ್ಯಗಳನ್ನು ಈ ವರೆಗೆ ಪ್ರತಿನಿತ್ಯವೂ ನಾನು ಮಾಡಿದೆ. ಆದರೆ ಆತ್ಮೋದ್ಧಾರ ಮಾಡುವ ಜಪ, ತಪ, ಹೋಮ, ವೇದಾಧ್ಯಯನ,

ಅತಿಥಿಪೂಜೆ ಗುರು ಭಕ್ತಿ ತಂದೆತಾಯಿಗಳ ಸೇವೆ ಹರಿಪೂಜೆ ಯಾವುದನ್ನೂ ನಾನು ಮಾಡಲಿಲ್ಲ. ನನಗೆ ಇನ್ನೇನು ಗತಿ?

ಹೀಗೆಲ್ಲ ಯೋಚಿಸಿ ದಿಗ್ಭ್ರಾಂತನಾದ ಆ ಭದ್ರತನು ಬ್ರಾಹ್ಮಣನು ಸುಮಧ್ಯಮಾ ವೇಶ್ಯೆಯ ಮನೆಯಿಂದ ಹೊರಬಿದ್ದ. ನೇರವಾಗಿ ಮಾರ್ಕಂಡೇಯ ಮುನಿಗಳ ಆಶ್ರಮಕ್ಕೆ ಬಂದ. ಸಾಷ್ಟಾಂಗ ವಂದನೆಗೈದು ಮುನಿಗಳೆದುರು ಕೈಜೋಡಿಸಿ ಸ್ತೋತ್ರ ಮಾಡಿದ.

**ನಮೋ ಮೃಕಂಡುಪುತ್ರಾಯ ಸರ್ವಲೋಕಹಿತೈಷಿಣೇ ।**
**ಜ್ಞಾನಾರ್ಣವಾಯ ವೈ ತುಭ್ಯಂ ನಿರ್ವಿಕಾರಾಯ ತೇ ನಮಃ ॥**

ಎಲ್ಲ ಲೋಕಗಳಿಗೂ, ಸಕಲ ಜನರಿಗೂ ಹಿತವನ್ನೇ ಬಯಸುವ ಮೃಕಂಡ ಮುನಿಯ ಪುತ್ರರಿಗೆ ನಮಸ್ಕಾರಗಳು. ನೀವು ಒಂದು ತಿಳಿವಿನ ತೋಯನಿಧಿ. ಕಾಮ ಕ್ರೋಧಾದಿ ವಿಕಾರಗಳು ನಿಮ್ಮಲ್ಲಿ ಇನಿತೂ ಇಲ್ಲ. ಆದುದರಿಂದ ನನ್ನ ನಮಸ್ಕಾರ.

ಭದ್ರತನುವಿನ ಈ ಸ್ತೋತ್ರದಿಂದ ಪ್ರೀತರಾದರು ಮಾರ್ಕಂಡೇಯರು. ಬಯಸಿದ ವರ ಬೇಡು ಎಂದರು. ಅವರಿಗೆ ಬಾಗಿ ಕೈ ಜೋಡಿಸಿ ಬಿನ್ನವಿಸಿದ ಆ ಭದ್ರತನು.

**ಭದ್ರತನು:-** ಪೂಜ್ಯರೇ, ನಾನೊಬ್ಬ ಪಾಪಿಷ್ಠ ಬ್ರಾಹ್ಮಣ. ನಾನು ಈ ಜನ್ಮದಲ್ಲಿ ಸಾಧಿಸಿದ್ದು, ಪರಹಿಂಸೆ, ಪರಸ್ತ್ರೀ, ಪರದ್ರವ್ಯ, ಈ ಮೂರು ಮಾತ್ರ. ಬೆಟ್ಟದಷ್ಟು ಪಾಪ ಮಾಡಿದ್ದೇನೆ. ಸಾಸಿವೆಯಷ್ಟು ಕೂಡ ಪುಣ್ಯ ಮಾಡಲಿಲ್ಲ. ಈ ಸಂಸಾರ ಒಂದು ಘೋರ ಸಾಗರ. ಇದನ್ನು ದಾಟುವುದು ದುಸ್ತರ, ನಾನೋ ಮಹಾಪಾಪಿ. ನನ್ನ ಉದ್ಧಾರದ ಹಾದಿ ಯಾವುದು? ಮುಂದೆ ನನ್ನ ಗತಿಯೇನು?

**ಮಾರ್ಕಂಡೇಯ:-** ನೀನು ಪಾಪಿಯಾದರೂ ಪುಣ್ಯಾತ್ಮನೇ ಸರಿ. ಈಗಾದರೂ ನಿನಗೆ ಸದ್ಬುದ್ಧಿ ಉದಯಿಸಿತಲ್ಲವೆ? ಆದುದರಿಂದ ನೀನು ಪಕ್ಕಾ ಪಾಪಿಯಲ್ಲ. ನಿಜವಾದ ಪಾಪಿಗೆ ಸದ್ಬುದ್ಧಿ ಎಂದಿಗೂ ಹುಟ್ಟುವುದೇ ಇಲ್ಲ. ಪುಣ್ಯಾತ್ಮರಿಗೆ ಪುಣ್ಯ ದೃಷ್ಟಿಯೇ ಪ್ರತಿದಿನವೂ ಬೆಳೆಯುವುದು. ಪಾಪಿಗಳಿಗೆ ಪಾಪದೃಷ್ಟಿಯೇ ಬೆಳೆಯುವುದು. ನೀನು ಪಾಪಿಯಾದರೂ ನಿನ್ನ ಪಾಪದೃಷ್ಟಿ ಈಗ ಅಳಿದಿದೆ. ಪುಣ್ಯ ದೃಷ್ಟಿ ಬೆಳೆದಿದೆ. ಆದುದರಿಂದ ನಿನ್ನ ಮೇಲೆ ಶ್ರೀಹರಿಯು ಕರುಣೋನ್ಮುಖನಾದಂತೆ ತೋರುತ್ತದೆ.

**ಪಾಪಂ ಕೃತ್ವಾಽಪಿಯೋ ಮರ್ತ್ಯಃ ಪಾಪಾದ್ ಭೂಯೋ ನಿವರ್ತತೇ ।**
**ತಮುತ್ತಮಂ ನರಂ ಪ್ರಾಹುಃ ಪೂರ್ವಜನ್ಮಾರ್ಚಿತಾಚ್ಯುತಮ್ ॥**

ಪಾಪವನ್ನು ಮಾಡಿದ ಬಳಿಕವೂ ಮತ್ತೆ ಹೊಸ ಪಾಪವನ್ನು ಮಾಡುವುದರಿಂದ ಯಾವ ಮನುಷ್ಯನು ಹಿಂದೆಗೆಯುವನೋ ಅವನು ಸಜ್ಜನನೇ ಸರಿ. ಜನ್ಮಾಂತರದಲ್ಲಿ ಶ್ರೀಹರಿಯ ಪೂಜೆ ಮಾಡಿದ್ದರೆ ಮಾತ್ರ ಈ ಜನ್ಮದಲ್ಲಿ ಪಾಪಕೃತ್ಯಗಳಿಂದ ನಿವೃತ್ತಿ ಅಥವಾ ಪರಾಙ್ಮುಖತೆ ಉಂಟಾಗುವದು. ಶ್ರೀಹರಿಯು ಪಾಪಾಚಾರದಲ್ಲಿ ನಿರತನಾದ ಭಕ್ತನನ್ನು ಸದ್ಬುದ್ಧಿಯನ್ನಿತ್ತು ಉದ್ಧರಿಸುವನು. ಆದುದರಿಂದ ನಿನಗೂ ಸಹ ಶ್ರೀಹರಿಯ ದಯೆಯಿಂದ ಸದ್ಬುದ್ಧಿ, ಸದ್ಗತಿಗಳು ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲ. ನೀನು ಕೇಳಿದ ಪ್ರಶ್ನೆಗಳಿಗೆಲ್ಲ ಉತ್ತರ ಹೇಳಲು ನನಗೆ ಈಗ ಸಮಯವಿಲ್ಲ. ದೇವರ ಪೂಜೆ, ಪಾಠ, ಪ್ರವಚನ, ಹೋಮ, ಹವನಾದಿ ಅನೇಕ ನಿತ್ಯದ ಕಾರ್ಯಕಲಾಪಗಳು ನನ್ನನ್ನು ಕಾಯುತ್ತಿವೆ. ನಾನೀಗಲೇ ಹೋಗಬೇಕು.

ಆದರೆ ಇಲ್ಲಿಯೇ ಸಮೀಪದ ಒಂದು ಆಶ್ರಮದಲ್ಲಿ ದಾಂತ ಎಂಬ ಒಬ್ಬ ತಪಸ್ವಿಯು ಇರುತ್ತಾನೆ. ಅವನು ಎಲ್ಲವನ್ನೂ ಬಲ್ಲ ವಿದ್ವಾನ್ ಬ್ರಾಹ್ಮಣೋತ್ತಮ. ನೀನು ಅವನ ಆಶ್ರಮಕ್ಕೆ ಹೋಗು. ಅವನು ನಿನಗೆ ಮಾರ್ಗದರ್ಶನ ಮಾಡುತ್ತಾನೆ.

ಮಾರ್ಕಂಡೇಯರ ಉಪದೇಶ ಹಾಗೂ ಆದೇಶದಂತೆ ಆ ಭದ್ರತನು ಎಂಬ ಬ್ರಾಹ್ಮಣ ದಾಂತ ಮುನಿಗಳ ಆಶ್ರಮಕ್ಕೆ ತೆರಳಿದ. ಪವಿತ್ರವಿದ್ದಷ್ಟು ಸುಂದರವೂ ಆಗಿದ್ದಿತು. ಆ ದಾಂತ ಮುನಿಗಳ ಶಾಂತ ಆಶ್ರಮ. ಆಶ್ರಮದ ಅಂಗಳದ ತುಂಬ ಆಶ್ವತ್ಥಮರಗಳ ದಟ್ಟ ನೆರಳು. ಸುತ್ತಲೂ ಸಂಪಿಗೆ ಮರಗಳ ಸೌರಭದ ಸೊಂಪು. ಮಧ್ಯಮಧ್ಯದಲ್ಲಿ ಬಕುಲಪುಷ್ಪಗಳ ಸುಗಂಧದ ಕಂಪು. ಇವಲ್ಲದೇ ಇನ್ನೂ ಬಗೆಬಗೆಯ ಸುಂದರವಾದ ಹೂವುಗಳ ಹಂದರಗಳು ಪರಿಮಳದ ಸಂದೇಶ ಹೊತ್ತು ನಿಂತಿದ್ದವು. ಅಲ್ಲಿಯ ಅನೇಕ ಲತಾಕುಂಜ ನಿಕುಂಜಗಳ ಮೇಲೆ ಅರೆಬಿರಿದ ಹೂಗಳ ಬಂಡನುಂಡು ಗುಂಜಾರವಗೈಯುವ ಭೃಂಗಗಳ ಝೇಂಕಾರ ಇಂಪಾಗಿ ಕೇಳಿ ಬರುತ್ತಿತ್ತು. ಸುಗಂಧದ ಭಾರದಿಂದ ಮಾರುತನು ಕೂಡ ಅಲ್ಲಿ ಮಂದ ಮಂದವಾಗಿ ಸ್ಪಂದಿಸುತ್ತಿದ್ದ. ಅದರಿಂದ ಅಲ್ಲಿಯ ಎಲ್ಲ ತಿಳಿಗೊಳಗಳಲ್ಲಿ ನೀರು ತಣ್ಣಗಿದ್ದು ಸೂಸುವ ಗಾಳಿಯ ಕಂಪಿಗೆ ತಂಪೆರೆಯುತ್ತಿದ್ದವು. ಆಶ್ರಮದ ಅಂಗಳದ ಹೊರಗಿನ ಪರಿಸರದ ಪ್ರಾಂತದಲ್ಲಿ ನೂರಾರು ಕ್ರೂರ ಪ್ರಾಣಿಗಳು ಘೋರ ಶ್ವಾಪದಗಳು ಆದರೂ ಅವುಗಳ ಬಳಿಯೇ ಹಸು, ಕರು, ಚಿಗರೆ, ಎತ್ತು, ನವಿಲು ಮುಂತಾದ ಸೌಮ್ಯ ಪ್ರಾಣಿಗಳು ಯಾವ ಭಯವೂ ಇಲ್ಲದೇ ನಿರಾತಂಕವಾಗಿ ಓಡಾಡುತ್ತಿದ್ದವು. ಮುನಿಯ ಅನೇಕ ಜನ ಶಿಷ್ಯರು ಅಲ್ಲಿ ಪಾಠ ಪ್ರವಚನಾದಿ ಕಾರ್ಯಗಳಲ್ಲಿ ತನ್ಮಯರಾಗಿದ್ದರು.

ಇಂಥ ರಮಣೀಯತಮವಾದ ಪುಣ್ಯಾರಣ್ಯದ ಪಾವನ ಆಶ್ರಮದಲ್ಲಿ ಆಸನದ ಮೇಲೆ ಆಸೀನರಾದ ದಾಂತ ಮುನಿಗಳ ಬಳಿಗೆ ಹೋದ. ಈ ಭದ್ರತನು ಬ್ರಾಹ್ಮಣ ಭಕ್ತಿಯಿಂದ ವಂದಿಸಿದ ಅವರ ಚರಣಗಳಿಗೆ. ಅನಂತರ ಅವನನ್ನು ನೋಡಿ ದ್ವಿಜೋತ್ತಮರಾದ ಆ ದಾಂತರು ಮಾತನಾಡಿದರು.

**ದಾಂತ:-** ಭದ್ರನೇ, ನೀನು ಯಾರು? ಇಲ್ಲಿಗೆ ಏಕೆ ಬಂದೆ? ಏನ್ನು ಕಾರ್ಯ? ನನ್ನನ್ನು ಏಕೆ ಸ್ತೋತ್ರ ಮಾಡುತ್ತಲಿರುವೆ? ಇದೆಲ್ಲ ಹೇಳು.

**ಭದ್ರತನು:-** ಪೂಜ್ಯರೇ, ನಾನೊಬ್ಬ ಆಚಾರಭ್ರಷ್ಟ ಬ್ರಾಹ್ಮಣ. ಜಾತಿಯಿಂದ ಬ್ರಾಹ್ಮಣನಾಗಿದ್ದರೂ ನನ್ನಲ್ಲಿ ಬ್ರಾಹ್ಮಣನಿಗೆ ಉಚಿತವಾದ ಜ್ಞಾನವಾಗಲೀ ಕರ್ಮವಾಗಲೀ, ಸದಾಚಾರವಾಗಲೀ, ಒಂದೂ ಇಲ್ಲ. ನನ್ನ ಹೆಸರು ಭದ್ರತನು. ಪಾಪದ ಪ್ರಕಾರಗಳನ್ನೆಲ್ಲ ಮಾಡಿ ನೋಡಿ ಬಿಟ್ಟಿದ್ದೇನೆ. ಇಂಥ ಪಾಪಿಯಾದ ನನ್ನ ಉದ್ಧಾರ ಈ ಸಂಸಾರದ ಪಾಪಕೂಪದಿಂದ ಹೇಗೆ ಆದೀತು? ಇದನ್ನು ತಾವು ನನಗೆ ಹೇಳಿರಿ. ತಾವು ಎಲ್ಲವನ್ನೂ ಬಲ ಸರ್ವಜ್ಞ ಸಮ್ಮೀತರು. ತಾವು ಒಬ್ಬರೇ ನನಗೆ ಮಾರ್ಗದರ್ಶನ ಮಾಡಬಲ್ಲ ತಪೋವಿಭೂತಿಗಳು.

**ದಾಂತ:-** ಬ್ರಾಹ್ಮಣ, ನಿನ್ನ ಸಂಸಾರಪಾಶದ ಹುರಿಯು ಹರಿಯುವ ಪರಿಯನ್ನು ಹೇಳುತ್ತೇನೆ ಕೇಳು. ನಾಸ್ತಿಕರ ಸಹವಾಸವನ್ನು ಬಿಡು, ಸಜ್ಜನರ ಸಹವಾಸ ಮಾಡು. ಕಾಮ, ಕ್ರೋಧ, ಯೋಗ, ಲೋಭ, ಗರ್ವ, ಅಸೂಯ, ಸುಳ್ಳು ಹೆರವರ ಹಿಂಸೆ ಮುಂತಾದವುಗಳನ್ನೆಲ್ಲ ತ್ಯಜಿಸು. ಶ್ರೀಹರಿಯನ್ನು ಯಾವಾಗಲೂ ಭಜಿಸು. ವಿಷ್ಣುವಿನ

ನಾಮಗಳನ್ನು ನೆನೆ. ವಿಷ್ಣು ಮಂದಿರದಲ್ಲಿ ಕಸಗುಡಿಸು. ನೆಲ ಸಾರಿಸು. ರಂಗವಲ್ಲಿಯನ್ನು ಬರೆ. ಗುಡಿಗೆ ಬರುವ ದಾರಿಯನ್ನು ಸ್ವಚ್ಛಗೊಳಿಸಿ ಅಲ್ಲಲ್ಲಿ ದೀಪಗಳನ್ನು ಇರಿಸು. ದೇವಾಲಯದಲ್ಲಿ ದೇವರ ಎದುರು ದೀಪಗಳನ್ನು ಉರಿಸು, ಬ್ರಾಹ್ಮಣರನ್ನು ಸೇವಿಸು. ಜ್ಞಾನಿಗಳನ್ನು ಪೋಷಿಸು. ಹಸಿದವರಿಗೆ ಅನ್ನ, ನೀರಡಿಸಿದವರಿಗೆ ನೀರು, ಬಡವರಿಗೆ ದಾನ, ದೀನರಿಗೆ ಬಟ್ಟೆ ಬರೆ, ಭಿಕ್ಷುಕರಿಗೆ ಹಣ, ಅರ್ಚಕರಿಗೆ ದಕ್ಷಿಣೆಗಳನ್ನು ನೀಡು. ಮನೆಯಲ್ಲಿ ಅನುದಿನವೂ ಪಂಚ ಮಹಾಯಜ್ಞಗಳನ್ನು ಮಾಡು. ಹರಿಯ ಕಥೆಯನ್ನು ಕೇಳು. ಮಂತ್ರಗಳನ್ನು ಜಪಿಸು. ಅದರಲ್ಲಿಯೂ "**ಓಂ ನಮೋ ಭಗವತೇ ವಾಸುದೇವಾಯ**" ಎಂಬ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಪ್ರತಿದಿನವೂ ತಪ್ಪದೇ ಅನ್ನು. ಇದರಿಂದ ನಿನಗೆ ದಿವ್ಯಜ್ಞಾನ ಉಂಟಾಗುವುದು, ಅಜ್ಞಾನದಿಂದ ಮೋಕ್ಷವು ದೊರೆಯುವುದು.

**ಭದ್ರತನು:-** ಪೂಜ್ಯರೇ, ತಾವು ನನಗೆ ಸೂತ್ರರೂಪವಾಗಿ ಕರ್ತವ್ಯಕರ್ಮಗಳನ್ನು ಬೋಧಿಸಿದಿರಿ. ಅವುಗಳ ವಿವರವನ್ನು ದಯವಿಟ್ಟು ತಿಳಿಸಿರಿ. ಮೋಹವೆಂದರೆ ಏನು? ಡಂಭ ಮತ್ಸರ ಎಂದು ಯಾವುದಕ್ಕೆ ಎನ್ನುವರು? ಯಾವುದ ಸತ್ಯ, ಯಾವುದು ಅಸತ್ಯ. ಹಿಂಸೆಯೆಂದರೆ ಯಾವುದು? ದಯೆ, ಶಾಂತಿ, ಜಯ ಇವುಗಳ ಸ್ವರೂಪವೇನು? ಸಮದೃಷ್ಟಿ ಎಂದು ಯಾವುದಕ್ಕೆ ಅನ್ನುವರು? ಶ್ರೀಹರಿಯ ಪೂಜೆಯ ರೀತಿ ಯಾವುದು? ಪಂಚಮಹಾಯಜ್ಞಗಳೆಂದರೆ ಯಾವುದು? ದ್ವಾದಶಾಕ್ಷರ ಮಂತ್ರ ಎಂದರೆ ಯಾವುದು? ಪಾಖಂಡಿಗಳು ಎಂದರೆ ಯಾರು? ಇವೆಲ್ಲವನ್ನು ನನಗೆ ವಿವರವಾಗಿ ತಿಳಿಸಿರಿ.

**ದಾಂತ:-** ವೇದೋಕ್ತ ಕರ್ಮಗಳನ್ನು ಬಿಟ್ಟು ಮನಸ್ಸಿಗೆ ಬಂದ ಕರ್ಮವನ್ನು ಮಾಡುತ್ತ ತಮ್ಮ ವರ್ಣಾಶ್ರಮೋಚಿತವಾದ ಆಚಾರ ವಿಚಾರವನ್ನು ಬಿಟ್ಟವರು ಪಾಖಂಡರು ಎನಿಸುತ್ತಾರೆ. ವೇದ ಸಮ್ಮತವಾದ ಸದಾಚಾರವನ್ನು ಅನುಷ್ಠಾನ ಮಾಡುತ್ತ ಪಾಪಕೃತ್ಯಗಳಿಂದ ಪರಾಙ್ಮುಖರಾಗಿ ಯಾವುದೇ ದುರಾಶೆ ಮನದಲ್ಲಿರದೇ ಯದೃಚ್ಛಾಲಾಭ ಸಂತುಷ್ಟಿಯುಳ್ಳವರು ಸಜ್ಜನರು ಎಂದು ಕರೆಯಲ್ಪಡುತ್ತಾರೆ. ಆದರೆ ಯಾವಾಗಲೂ ಹಣಗಳಿಸುವುದು ಹೆಣ್ಣಿನ ಸಹವಾಸಕ್ಕೆಳಿಸುವುದು, ಇದಕ್ಕೆ ಕಾಮ ಎಂದು ಕರೆಯುತ್ತಾರೆ. ತನ್ನ ನಿಂದೆ ಅಥವಾ ಅಪಮಾನವನ್ನು ಕೇಳಿದಾಗ ಮನುಷ್ಯನ ಹೃದಯಕ್ಕೆ ಉಂಟಾಗುವ ತಾಪಕ್ಕೆ ಕೋಪ ಎನ್ನುವರು. ಅದು ಸರ್ವಧರ್ಮಕ್ಕೂ ಘಾತಕ. ಹೆರವರ ಹಣವನ್ನು ನೋಡಿ ಅದನ್ನು ತೆಗೆದುಕೊಳ್ಳಬೇಕು, ಎಂದು ಮನಸ್ಸಿನಲ್ಲಿ ಹುಟ್ಟುವ ಇಚ್ಛೆಗೆ ಲೋಭ ಎಂದು ಕರೆಯುತ್ತಾರೆ. ನನ್ನ ಹೆಂಡತಿ, ನನ್ನ ಮನೆ, ನನ್ನ ಮಗ, ನನ್ನ ಮಗಳು, ನನ್ನ ತಾಯಿ, ನನ್ನ ತಂದೆ ಎಂದು ಮುಂತಾಗಿ ಪರಿವಾರ ಜನರ ಮೇಲೆ ಹುಟ್ಟುವ ಪ್ರೀತಿಗೆ ಮೋಹ ಎನ್ನುತ್ತಾರೆ. ನಾನು ದೊಡ್ಡ ಮನುಷ್ಯ, ಶ್ರೀಮಂತ, ನನ್ನ ಸಮಾನರು ಈ ಭೂಲೋಕದಲ್ಲಿ ಯಾರೂ ಇಲ್ಲ. ಹೀಗೆ ಮನಸ್ಸಿನಲ್ಲಿ ಹುಟ್ಟುವ ಅಹಂಭಾವಕ್ಕೆ ಮದ ಎನ್ನುತ್ತಾರೆ. ಎಲ್ಲ ಜನರಿಗೂ ಹಿತವಾಗುವಂತೆ ಇದ್ದುದಿದ್ದಂತೆ ಹೇಳುವದು ಸತ್ಯ ಎನ್ನುವರು. ಇದರ ವಿರುದ್ಧವಾದುದೇ ಅಸತ್ಯ. ಇನ್ನೊಬ್ಬರ ಐಶ್ವರ್ಯ, ಮಡದಿ ಮಕ್ಕಳು ಮನೆ ಯಾವಾಗ ನಾಶವಾದೀತು ಎಂದು ಮನಸ್ಸಿನಲ್ಲಿ ಯೋಚಿಸುವುದೇ ಹಿಂಸೆ. ಪ್ರಯತ್ನವನ್ನು ಮಾಡಿಯಾದರೂ ಪರರ ದುಃಖವನ್ನು ಪರಿಹರಿಸಬೇಕು ಎಂದು ಮನಸ್ಸಿನಲ್ಲಿ ಹುಟ್ಟಿದ ಇಚ್ಛೆಯೇ ದಯಾ ಎನಿಸುತ್ತದೆ. ಕುತ್ಸಿತವಲ್ಲದ ಒಳ್ಳೇ ಕಾರ್ಯವನ್ನು ಮಾಡಿದಾಗ ಮನಸ್ಸಿಗೆ ಆಗುವ ತೃಪ್ತಿ

ಅಥವಾ ಸಂತೋಷಕ್ಕೆ ಶಾಂತಿ ಎನ್ನುವರು. ಸುಖ ದುಃಖಗಳಲ್ಲಿ ಸಮಾಧಾನದಿಂದ ಸಂತುಷ್ಟನಾಗಿ ಇರುವ ಮನಃಸ್ಥಿತಿಗೆ ದಮ ಎಂದು ಹೆಸರು. ನೈವೇದ್ಯ, ಗಂಧ, ಹೂ ತುಳಸಿ ಮೊದಲಾದವುಗಳಿಂದ ಮಾಡುವ ಭಕ್ತಿಯುಕ್ತವಾದ ಶ್ರೀಹರಿಯ ಅರ್ಚನೆಗೆ ಪೂಜೆ ಎನ್ನುವರು. ಬ್ರಹ್ಮಯಜ್ಞ, ಮನುಷ್ಯಯಜ್ಞ, ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಎಂದು ಐದು ಬಗೆಯಾದ ಯಜ್ಞಗಳು ಗೃಹಸ್ಥನಿಗೆ ಪ್ರತಿದಿನವೂ ಅವಶ್ಯ ಕರ್ತವ್ಯವಾಗಿದೆ. ಬ್ರಹ್ಮಯಜ್ಞ ಎಂರೆ ತನ್ನ ಶಾಖೆಯಾದ ವೇದದ ಹಾಗು ವೇದಾಂತ ಅಧ್ಯಯನ, ದೇವಯಜ್ಞ ಎಂದರೆ ಪಿತೃಗಳನ್ನು ಉದ್ದೇಶಿಸಿ ನೀರಿನಿಂದ ತರ್ಪಣ ಕೊಡುವುದು. ಮೃತದಿನದಲ್ಲಿ ಶ್ರಾದ್ಧ ಮಾಡುವುದು. ಮನುಷ್ಯಯಜ್ಞ ಎಂದರೆ ಬಂದ ಅತಿಥಿಗಳಿಗೆ ತೃಪ್ತಿಯಾಗುವಂತೆ ಊಟಕ್ಕೆ ಹಾಕುವುದು. ಭೂತಯಜ್ಞ ಎಂದರೆ ವೈಶ್ವ ದೇವವನ್ನು ಮಾಡಿ ಅಶ್ವಭ್ಯಃ ಅಶ್ವಪಾಕೇಭ್ಯಃ ಎಂದು ಅನ್ನ ಪಿಂಡದಿಂದ ಬಲಿಯನ್ನು ನೀಡುವುದು. ಇವು ಐದು ಗೃಹಸ್ಥರು ಮಾಡಬೇಕಾದ ಪಂಚ ಮಹಾಯಜ್ಞ ಎಂದು ಕರೆಯಲ್ಪಡುತ್ತದೆ. ದ್ವಾದಶಾಕ್ಷರ ಮಂತ್ರ ಎಂದರೆ ಓಂಕಾರ ಘಟಿತವಾದ **'ಓಂ ನಮೋ ಭಗವತೇ ವಾಸುದೇವಾಯ'** ಎಂಬ ಮಂತ್ರ. ನೀನು ಪ್ರಶ್ನೆ ಕೇಳಿದ ಎಲ್ಲ ವಿಷಯಗಳಿಗೂ ನಾನು ಉತ್ತರಿಸಿದಂತಾಗಿದೆ.

ಹೀಗೆ ದಾಂತಮುನಿಯಿಂದ ಉಪದೇಶಿಸಲ್ಪಟ್ಟ ಆ ಭದ್ರತನು ಬ್ರಾಹ್ಮಣನು ಅದೇ ಕ್ಷೇತ್ರದಲ್ಲಿ ದಾಂತಮುನಿ ಹೇಳಿದಂತೆ ಶಾಂತನೂ ದಾಂತನೂ ಉಪರತನೂ ಆಗಿ ವಿಧಿಪೂರ್ವಕವಾಗಿ ಶ್ರೀಹರಿಯ ಪೂಜೆಯನ್ನು ಭಕ್ತಿಪೂರ್ವಕವಾಗಿ ಮಾಡಿದ. ಅವನ ಈ ಭಕ್ತಿಯುಕ್ತವಾದ ಪೂಜೆ, ಪರ್ಯುಪಾಸನೆ ಹಾಗೂ ಪ್ರಾರ್ಥನೆಯನ್ನು ಕೇಳಿ ಶ್ರೀಹರಿಯು ಅವನಿಗೆ ಪ್ರತ್ಯಕ್ಷ ಗೋಚರನಾದ. ಆಗ ಕೋಟಿ ಸೂರ್ಯರು ಒಮ್ಮೆಲೇ ಉದಿಸಿ ಭದ್ರತನುವಿನ ಕಣ್ಣು ಮುಂದೆ ನಿಂತಂತಾಯಿತು. ಆಶ್ಚರ್ಯದಿಂದ ಅವನು ವಿಸ್ಫಾರಿತ ನೇತ್ರನಾಗಿ ಆ ತೇಜೋನಿಧಿಯ ಮುಖ ಮಂಡಲವನ್ನು ನೋಡಲಾರದೇ, ಆ ಕಮಲಾನಾಥನ ಪಾದ ಕಮಲಗಳಿಗೆ ವಂದಿಸಿದ. ಭಕ್ತಿಯಿಂದ ಕೈಜೋಡಿಸಿ ಗದ್ಗದಿತ ಕಂಠದಿಂದ ಶ್ರೀಹರಿಯ ಸ್ತೋತ್ರ ಮಾಡಿ ತಾನು ಮಾಡಿದ ಅಪರಾಧಗಳಿಗೆಲ್ಲ ಕ್ಷಮೆಯನ್ನು ಕೇಳಿದ. ಸ್ವಾಮಿ, ಶ್ರೀಹರಿ, ನಾನು ಲೆಕ್ಕವಿಲ್ಲದಷ್ಟು ಪಾಪಗಳನ್ನು ಮಾಡಿದ್ದೆ. ಆದರೂ ನೀನು ನಿನ್ನ ಕೃಪಾದೃಷ್ಟಿಯನ್ನು ನನ್ನ ಮೇಲೆ ಹರಿಸಿದ್ದರಿಂದ ನಾನೂ ಒಬ್ಬ ನಿನ್ನ ಭಕ್ತನಾದೆ. ನಿನ್ನ ಅನುಗ್ರಹದ ಪ್ರಭಾವದಿಂದ ಪರಮನೀಚನೂ ಮಹಾಪಾಪಿಷ್ಠನೂ ಆದ ನಾನು ದಿವ್ಯವಾದ ವಿಮಾನವನ್ನು ಏರಿ ನಿನ್ನ ದೇವ ದುರ್ಲಭವಾದ ಶ್ರೇಷ್ಠ ಸ್ಥಾನಕ್ಕೆ ಪ್ರಯಾಣವನ್ನು ಮಾಡುತ್ತೇನೆ.

ಪ್ರಭು, ನಿನ್ನ ಪಾದತೊಳೆದ ತೀರ್ಥೋದಕದ ಮಹಿಮೆಯನ್ನು ಪಾಪಿಷ್ಠನಾದ ಕನಿಕ ಬೇಡನು ಚೆನ್ನಾಗಿ ಬಲ್ಲ. ನೀನು ನಿಂತ ದೇವ ಮಂದಿರವನ್ನು ಗುಡಿಸಿ ಸ್ವಚ್ಛ ಮಾಡುವುದರ ಫಲವನ್ನು ಯಜ್ಞಧ್ವಜರಾಜನು ಬಲ್ಲ. ನಿನ್ನ ದೇವಾಲಯಕ್ಕಾಗಿ ನೆಲ ಕಲ್ಲುಗಳ ಸಾರಣೆ ಕಾರಣೆ ಮಾಡುವವರ ಫಲವನ್ನು ಯಜ್ಞಮಾಲಿ ಹಾಗೂ ಸುಮಾಲಿ ಎಂಬ ಅಣ್ಣತಮ್ಮಂದಿರು ಬಲ್ಲರು.

ಪರಮೇಶ್ವರ, ನಿನ್ನ ದಯಾಗುಣವನ್ನು ಎಷ್ಟೆಂದು ಬಣ್ಣಿಸಲಿ. ನಿನ್ನನ್ನು ಬಾಣದಿಂದ ಹೊಡೆದ ಬೇಡನು ಕೂಡ ಪರಮ ಪದವನ್ನು ಹೊಂದಿದ. ನಿನ್ನನ್ನು ನಿಂದೆ ಮಾಡಿಯೂ

ಶಿಶುಪಾಲ ಮೋಕ್ಷ ಹೊಂದಿದ. ಲಕ್ಷ್ಮೀ ಶ್ಯಾಮಸುಂದರನಾದ ನಿನ್ನ ಉತ್ತುಂಗದಲ್ಲಿ ಮೋಡದಲ್ಲಿ ಮಿಂಚಿನಂತೆ ಹೊಳೆಯುತ್ತಿರುತ್ತಾಳೆ. ಬ್ರಹ್ಮಾದಿ ದೇವತೆಗಳು ಕೂಡ ನಿನ್ನ ಮಹಿಮೆಯ ಅಂತಪಾರವನ್ನು ಕಾಣಲಾರವು. ಅಂಥ ನಿನಗೆ ನನ್ನ ನಮಸ್ಕಾರ. ಅನಾಥರ ದುಃಖಿತರ ಯೋಗಿಗಳ ಹಾಗೂ ಭಕ್ತರ ದುಃಖವನ್ನು ಪರಿಹರಿಸುವ ಜಗದೀಶನೇ ನಿನಗೆ ನನ್ನ ನಮಸ್ಕಾರ. ನಿನ್ನಲ್ಲಿಯೇ ನನ್ನ ಮನಸು ಯಾವಾಗಲೂ ಆಸಕ್ತವಾಗಿರಲಿ.

**ಯೂನಾಂ ಚಿತ್ತಂ ಯಥಾ ಸ್ತ್ರೀಷು**
**ಲುಬ್ಧಾನಾಂಚ ಯಥಾ ಧನೇ ।**
**ಕ್ಷುಧಾತುರಿಂಣಾಂ ಯಥಾ ಚಾನ್ನೇ ।**
**ತಥಾ ತ್ವಯಿ ಮಮಾಸ್ತು ವೈ ॥**

ತರುಣರ ಚಿತ್ತವು ತರುಣಿಯರ ಮೇಲೆ ಇರುವಂತೆ ಜಿಪುಣನ ಚಿತ್ತ ದ್ರವ್ಯದ ಮೇಲೆ ಇರುವಂತೆ, ಹಸಿದವನ ಚಿತ್ತ ಅನ್ನದ ಮೇಲೆ ಇರುವಂತೆ ನನ್ನ ಚಿತ್ತ ನಿನ್ನಲ್ಲಿ ಇರಲಿ, ಬುದ್ಧಿ ಶೂನ್ಯನಾದ ನಾನು ಮಾಡಿದ ಅಪೇಯ ಪಾನ, ಗುರು ಸ್ತ್ರೀ ಗಮನ, ಶಿಶುಹತ್ಯೆ, ವಿಶ್ವಾಸ ಘಾತ, ಸಜ್ಜನರ ನಿಂದೆ ಮುಂತಾದ ದುಷ್ಕೃತ್ಯದಿಂದ ನನಗೆ ಬಂದ ಪಾಪವೆಲ್ಲವೂ ನಿನ್ನಿಂದ ಕ್ಷಮಿಸಲ್ಪಟ್ಟು ಕ್ಷಯವನ್ನು ಹೊಂದಲಿ. ಇದರಂತೆ ದಾರಿಯಲ್ಲಿ ದೇವಾಲಯದಲ್ಲಿ ದನದ ಕೊಟ್ಟಿಗೆಯಲ್ಲಿ ಮಲ ಮೂತ್ರ ವಿಸರ್ಜನ ಮಾಡಿದ ಪಾಪವು ನಾಶವಾಗಲಿ. ಏಕಾದಶಿ ಭೋಜನ, ದಶಮಿ ದ್ವಾದಶಿ ಎರಡನೆಯ ಸಲ ಭೋಜನ, ಸುಳ್ಳುಸಾಕ್ಷಿ, ವಾಸ್ತು ಮಾಡದೇ ಇರುವ ಮನೆಯಲ್ಲಿ ಭೋಜನ, ಕರಾರು ಮಾಡಿ ಹಣ ತೆಗೆದುಕೊಂಡು ಯಾಜ್ಞಿಕ ಮಾಡಿಸಿದ ಪಾಪ, ಪುರಾಣ ಪ್ರವಚನ ಮಧ್ಯದಲ್ಲಿ ವಿಘ್ನ ಒಡ್ಡಿದ ಪಾಪ, ಅರಳೆ ಗಿಡ, ನೆಲ್ಲೀ ಗಿಡಗಳನ್ನು ಕಡಿದ ಪಾಪ ಮುಂತಾದ ಸರ್ವ ಪಾತಕಗಳೆಲ್ಲವೂ ನಾಶವಾಗಲಿ.

ಇದರಂತೆ ನಾನು ಮಾಡಿದ ಹಾಲು, ಮೊಸರು, ತುಪ್ಪದ ವ್ಯಾಪಾರ, ಬೇಡ ಬಂದವರನ್ನು ಸಿಟ್ಟಿನಿಂದ ನೋಡುವುದು. ಆಶೆಹೊತ್ತಿಸಿ ವಚನ ಕೊಟ್ಟು ಕೊಡದೇ ಇರುವುದು. ನೀರು ಕುಡಿಯುವ ಹುಲ್ಲು ತಿನ್ನುವ ಗೋವುಗಳನ್ನು ತಡೆಯುವುದು, ಬದುಕಲು ದಾರಿ ಮಾಡಿ ಕೊಟ್ಟ ದಾನಿಗಳನ್ನು ಕಾರ್ಯವಾದ ಬಳಿಕ ತಿರಸ್ಕರಿಸುವುದು ಇವೇ ಮೊದಲಾದ ದುರ್ವ್ಯಾಪಾರಗಳಿಂದ ನನಗೆ ಬಂದ ಪಾಪವೆಲ್ಲವೂ ಕ್ಷಮಾನಿಧಿಯಾದ ನಿನ್ನ ದಯೆಯಿಂದ ನಾಶವಾಗಿದೆ. ಅಥವಾ ನನ್ನ ಪಾಪ ಕ್ಷಯಕ್ಕಾಗಿ ನಿನ್ನನ್ನು ಬೇಡಿಕೊಳ್ಳುವ ಕಾರಣವೇ ಇಲ್ಲ. ನೀನು ನನಗೆ ದರ್ಶನ ಕೊಟ್ಟೆ. ಅದರಿಂದಲೇ ನನ್ನ ಪಾಪ ರಾಶಿಯ ಮೇಲೆ ದಾರುಣವಾದ ಬೆಂಕಿಯನ್ನೂ ಇಟ್ಟೆ. ನನ್ನ ಪಾಪಗಳೆಲ್ಲವೂ ಒಂದೂ ಉಳಿಯದಂತೆ ಇಂದು ಅಳಿದು ಹೋಗಿವೆ. ಆದುದರಿಂದ ನಾನು ಇಂದು ಧನ್ಯ. ಈಗ ಕೃತಾರ್ಥ ಸ್ವಾಮಿ. ನಿನಗೆ ನನ್ನ ನಮೋ ನಮಃ ನಮೋ ನಮಃ

ಹೀಗೆ ಹೇಳಿ ಆ ಭದ್ರಕನು ಬ್ರಾಹ್ಮಣ ಭಗವಂತನ ಚಾರು ಚರಣಗಳ ಮೇಲೆ ತನ್ನ ದೇಹವನ್ನು ಈಡಾಡಿದ. ಅವನ ಈ ಪ್ರಾರ್ಥನೆಯಿಂದ ಸಂತುಷ್ಟನಾದ ಶ್ರೀಹರಿಯು ಪ್ರಸನ್ನನಾಗಿ ಆ ಭದ್ರತನುವಿಗೆ ಕೇಳಿದ.

**ಶ್ರೀಹರಿ:-** ಬ್ರಾಹ್ಮಣ, ಏಳು ಏಳು ನಾನು ನಿನ್ನ ಭಕ್ತಿಯಿಂದ ಸಂತುಷ್ಟ. ನೀನು

ಹೇಳಿದ ಭಕ್ತಿಯುಕ್ತವಾದ ಈ ಸ್ತೋತ್ರಗಳಿಂದ ಪರಮಪ್ರೀತ. ನಿನಗೆ ಏನು ಬೇಕು ಹೇಳು. ವರವನ್ನು ಕೇಳು, ನಾನು ನೀಡುತ್ತೇನೆ.

**ಭದ್ರತನು:-** ಪರಮೇಶ್ವರ ನನಗೆ ಜನ್ಮ ಜನ್ಮಾಂತರದಲ್ಲಿ ನಿನ್ನ ಪಾದಾರವಿಂದದಲ್ಲಿ ಅವಿಚ್ಛಿನ್ನವಾದ ಭಕ್ತಿಯು ಇರಲಿ.

**ಶ್ರೀಹರಿ:-** ವಿಪ್ರ, ನಾನು ನಿನಗೆ ಈ ವರವನ್ನು ಕೊಟ್ಟಿದ್ದೇನೆ. ನಾನು ನಿನ್ನ ಜೊತೆಗೆ ಸಖ್ಯವನ್ನು ವಿಶೇಷಾನುಗ್ರಹಕ್ಕಾಗಿ ಬೆಳೆಸುತ್ತೇನೆ.

ಹೀಗೆ ಹೇಳಿ ಆ ಭಕ್ತವತ್ಸಲನಾದ ನಾರಾಯಣನು ಆ ತನ್ನ ಭಕ್ತನಿಗೆ ತನ್ನ ಕೊರಳಲ್ಲಿಯ ತುಳಸಿಯ ಮಾಲೆಯನ್ನು ಕೊಟ್ಟ. ಮತ್ತು ತನ್ನ ನಾಲ್ಕೂ ಬಾಹುಗಳನ್ನು ಬಾಚಿ ಭರದಿಂದ ಬಿಗಿದಪ್ಪಿದ. ಹೀಗೆ ಭದ್ರತನು ಬ್ರಾಹ್ಮಣನ ಜೊತೆಗೆ ಸ್ನೇಹವನ್ನು ಬೆಳೆಸಿದ.

ಹೀಗೆ ಶ್ರೀಹರಿಯು ಭದ್ರತನುವಿನೊಂದಿಗೆ ಗಾಢ ಸ್ನೇಹವನ್ನು ಬೆಳೆಸಿದ. ಮತ್ತು ಪ್ರತಿದಿನವೂ ಆ ಪುರುಷೋತ್ತಮ ಕ್ಷೇತ್ರದಲ್ಲಿ ಶ್ರೀಹರಿಯು ಆ ಬ್ರಾಹ್ಮಣನೊಂದಿಗೆ ಚೆಂಡಾಟವನ್ನು ಆಡುತ್ತಲಿದ್ದ.

ಒಂದು ದಿನ ಆ ಭದ್ರತನು ಬ್ರಾಹ್ಮಣ ಏಕೋ ಬಹಳ ದುರ್ಬಲನೂ ಖಿನ್ನನೂ ಆಗಿ ಕಂಡು ಬಂದ. ತನ್ನ ಮಿತ್ರನಿಗೆ ಮುಖದ ಮೇಲೆ ತೋರಿ ಬಂದ, ಈ ವಿಷಾದ ಛಾಯೆಯನ್ನು ಕಂಡು ಕೃಷ್ಣನ ಕರುಳು ಚುರುಕ್ ಎಂದಿತು.

ಆಗ ಅವನು ತನ್ನ ಮಿತ್ರನಾದ ಆ ಭದ್ರತನು ಬ್ರಾಹ್ಮಣನನ್ನು ಕೈ ಹಿಡಿದು, ಕೇಳಿದ. ''ಪ್ರಿಯ ಮಿತ್ರ, ನೀನು ಇಷ್ಟೇಕೆ ದುರ್ಬಲನಾಗಿರುವೆ? ನಿನ್ನ ಧನವನ್ನೆಲ್ಲ ಯಾರಾದರೂ ಕಸಿದುಕೊಂಡರೆ? ಏಕೆ ಇಷ್ಟು ಸೊರಗಿದೆ? ಮುಖವೇಕೆ ಬಾಡಿದೆ? ಮನಸ್ಸಿನಲ್ಲಿ ನಿನಗಿದ್ದ ಚಿಂತೆಯಾದರೂ ಏನು? ಅದನ್ನೆಲ್ಲ ನನಗೆ ಹೇಳು.

**ಭದ್ರತನು:-** ಜಗನ್ನಾಥ, ನನ್ನ ಮೇಲೆ ನಿನ್ನ ಪ್ರೀತಿಯು ಇದೇ ರೀತಿಯಾಗಿ ನಿರಂತರ ಉಳಿಯಲಿ ಮತ್ತು ಬೆಳೆಯಲಿ ಎಂದು ಪ್ರತಿನಿತ್ಯವೂ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದೆ. ಆದರಿಂದ ನನ್ನ ದೇಹವು ಒಣಗುತ್ತಲಿದೆ.

**ಭಗವಂತ:-** ಗೆಳೆಯ, ನಾನು ನಿನ್ನ ಮೇಲೆ ಪ್ರೀತಿ ಮಾಡುವಷ್ಟು ಬೇರೆ ಯಾರ ಮೇಲೆಯೂ ಮಾಡುವುದಿಲ್ಲ. ನಿನ್ನ ವಿಷಯದಲ್ಲಿ ನಾನು ಯಾವಾಗಲೂ ಸುಪ್ರಸನ್ನ. ಅಂದ ಬಳಿಕ ಮತ್ತೇಕೆ ಈ ತಪಸ್ಸು? ವ್ಯರ್ಥವಾಗಿ ಏಕೆ ಮಾಡುವೆ ಈ ಕಾಯ ಶೋಷಣೆಯನ್ನು? ನೀನು ಹೀಗೆ ಬಡಕಲ ಮೈಯವನಾಗಿ ಸೊರಗಿ ಸೋತುಹೋದುದನ್ನು ನೋಡಿ ನನಗೆ ಬಹಳ ವ್ಯಥೆಯಾಗಿದೆ. ಇನ್ನು ಮೇಲೆ ಇಂದಿನಿಂದ ನೀನು ದೇಹ ದಂಡನೆಯನ್ನು ಸುತರಾಂ ಮಾಡಕೂಡದು.

ಹೀಗೆ ಹೇಳಿ ಕೃಷ್ಣ ಪರಮಾತ್ಮ ತಾನು ಉಟ್ಟ ವಸ್ತ್ರ, ತೊಟ್ಟ ಆಭರಣಗಳನ್ನೆಲ್ಲ ತೆಗೆದು ತನ್ನ ಕೈಯಿಂದಲೇ ಆ ಭದ್ರತನುವಿಗೆ ಉಡಿಸಿ ತೊಡಿಸಿದ. ತನ್ನ ತಲೆಯ ಮೇಲಿನ ಕಿರೀಟವನ್ನು ತೆಗೆದು ಅವನ ಮಸ್ತಕದ ಮೇಲೆ ಇರಿಸಿದ. ಕೊರಳೊಳಗಿನ ಬಂಗಾರದ ಹಾರವನ್ನು ತೆಗೆದು ಅವನ ಕೊರಳೊಳಗೆ ಹಾಕಿದ.

ಹೀಗೆ ಶ್ರೀಹರಿ ಕೊಟ್ಟ ವಸ್ತ್ರಾಭರಣಗಳಿಂದ ಭೂಷಿತನಾಗಿ ಆ ಭದ್ರತನು ಬ್ರಾಹ್ಮಣ ಕೃಷ್ಣನೊಡನೆ ಚೆಂಡಿನ ಆಟವನ್ನು ಪ್ರತಿದಿನವೂ ಆಡುತ್ತಲಿದ್ದ.

ಒಂದು ದಿನ ಆ ಭದ್ರತನು ಬ್ರಾಹ್ಮಣ ದಿವ್ಯವಾದ ವಸ್ತ್ರಾಭರಣಗಳಿಂದ ಶೃಂಗಾರಿತನಾಗಿ ಬಾಯ್ತುಂಬ ಎಲೆಯಡಿಕೆಯನ್ನು ಜಗಿಯುತ್ತ ಮಂದಹಾಸ ಮಾಡುತ್ತ ನಿಂತುಕೊಂಡಾಗ ಅವನ ಗುರು ದಾಂತ ಮುನಿಯು ಬಂದ.ಶಿಷ್ಯನಾದ ಭದ್ರತನು ಬ್ರಾಹ್ಮಣನನ್ನು ನೋಡಿದ. ಇವನನ್ನು ಕಂಡ ಕೂಡಲೇ ಕೋಪದಿಂದ ಕೆರಳಿ ಕಂಡವಾಗಿ ಚಂಡಕೋಪನಾದ ಆ ಮುನಿ ನುಡಿದ.

**ದಾಂತ:-** ಶಿಷ್ಯನಾದ ಭದ್ರತನುವೇ ನಿನಗೆ ಇನ್ನೂ ಪಾಪದೃಷ್ಟಿಯು ಹೋಗಲೇ ಇಲ್ಲ. ಈ ನಿನ್ನ ಶೃಂಗಾರ, ತಾಂಬೂಲಚರ್ವಣ ನೋಡಿ ಎಲ್ಲರೂ ನಿನ್ನನ್ನು ನಿಂದಿಸುತ್ತಿದ್ದಾರೆ. ನಾನು ನಿನ್ನನ್ನು ಶಿಷ್ಯನನ್ನಾಗಿ ಮಾಡಿಕೊಂಡಿದ್ದೇನೆ. ನಿನ್ನ ನಿಂದೆ ನನ್ನ ನಿಂದೆಯಾದಂತೆಯೇ ಸರಿ ಗರ್ವಿಷ್ಠ, ಶೀಲಭ್ರಷ್ಟ, ದಯಾಶೂನ್ಯ ಪಾಪಕೃತ್ಯಗೈದವ ಹಾಗೂ ಗುರುಗಳ ಕೀರ್ತಿಯನ್ನು ನಾಶಪಡಿಸುವವರು ಇವರು ಐವರು ಜಗತ್ತಿನಲ್ಲಿ ರುತ್ಸಿತ ಶಿಷ್ಯರು ಎನಿಸುತ್ತಾರೆ. ಮತ್ತು ಗುರುಗಳಲ್ಲಿ ಭಕ್ತಿ ಇಲ್ಲದವ, ಬಹಳ ಮಾತನಾಡುವವ. ಚಂಚಲ ಮನಸ್ಸಿನವ, ಹಿಂದೆ ಗುರುನಿಂದೆಯ ಮಾಡುವವ, ಈ ನಾಲ್ವರು ಶಿಷ್ಯಾಧಮರು ಎಂದು ಕರೆಯಲ್ಪಡುತ್ತಾರೆ. ಆದುದರಿಂದ ಗುರುಗಳು ಶಿಷ್ಯನ ಹಿಂದಿನ ಚರಿತ್ರವನ್ನು ನೋಡಿಯೇ ಅವನ ಗುರುತ್ವವನ್ನು ಸ್ವೀಕರಿಸಬೇಕು. ದುಷ್ಟ ಶಿಷ್ಯನಲ್ಲಿ ಇಟ್ಟ ವಿದ್ಯೆ ಗುರುವಿನ ಕೀರ್ತಿಯ ಕಲ್ಪವಲ್ಲರಿಗೇ ಕೊಡಲಿಯ ಏಟು ಹಾಕುತ್ತದೆ. ಪಾಪಿಗಳಿಗೆ ಪುಣ್ಯಕರ್ಮಗಳು ರುಚಿಸುವುದಿಲ್ಲ. ನೊಣಗಳಿಗೆ ಸುವಾಸನೆಯ ಚಂದನ ಸೇರುವುದಿಲ್ಲ. ಕತ್ತೆಯು ಮೃಷ್ಟಾನ್ನ ಚಿಂತೆಯನ್ನೇ ಮಾಡುವುದಿಲ್ಲ. ಆದುದರಿಂದ ಶಿಷ್ಯರನ್ನು ಮಾಡಿಕೊಳ್ಳುವಾಗ ಚೆನ್ನಾಗಿ ಪರೀಕ್ಷಿಸಬೇಕು ಎಂದು ಹಿರಿಯರ ಮಾತು. ನಿನ್ನನ್ನು ಶಿಷ್ಯನನ್ನಾಗಿ ಮಾಡಿಕೊಂಡು ನಾನು ಪಶ್ಚಾತ್ತಾಪಪಡುವಂತಾಗಿದೆ.

**ಭದ್ರತನು:-** ಗುರುಗಳೇ, ನಾನು ನಿಜವನ್ನೇ ಹೇಳುತ್ತೇನೆ. ತಮ್ಮ ಅನುಗ್ರಹದಿಂದ ನನ್ನ ಮನೋರಥಗಳೆಲ್ಲವೂ ಪೂರ್ಣವಾಗಿದೆ. ಸಿದ್ಧಿಯನ್ನೂ ನಾನು ಪಡೆದಿದ್ದೇನೆ. ನಾನು ವೇದ ಶಾಸ್ತ್ರಗಳಲ್ಲಿ ತಮ್ಮಂತೆ ಮಹಾ ಪಂಡಿತನು ಆಗಿರಲಿಕ್ಕಿಲ್ಲ. ಆದರೆ ತಮಗೆ ಅಪಕೀರ್ತಿ ತರುವ ಯಾವ ಕಾರ್ಯವನ್ನು ನಾನು ಮಾಡುವುದಿಲ್ಲ.

**ದಾಂತ:-** ವತ್ಸ, ನಿನ್ನ ಅಪೇಕ್ಷೆ ಏನು ಇದ್ದೀತು? ಯಾವುದರ ಸಿದ್ಧಿ ನಿನಗೆ ಪ್ರಾಪ್ತವಾಗಿದೆ ? ನೀನು ಇಷ್ಟು ಬೇಗ ನಿನ್ನ ತಪಸ್ಸಿಗೆ ಉದ್ಯಾಪನೆಯನ್ನು ಹೇಗೆ ಮಾಡಿದೆ? ನಿನ್ನ ವರ್ಣಾಶ್ರಮ ಧರ್ಮಕ್ಕೆ ಉಚಿತವಾದ ಜಪ ತಪೋನುಷ್ಠಾನಗಳನ್ನೆಲ್ಲ ಏಕೆ ತೊರೆದು ಬಿಟ್ಟೆ?

**ಭದ್ರತನು:-** ಗುರುಗಳೇ ನಾನು ಐದು ದಿವಸಗಳವರೆಗೆ ನೀವು ಹೇಳಿದ ಧೃಡತರವಾದ ಮನಸ್ಸಿನಿಂದ ಹಾಗೂ ಅತ್ಯಂತ ಭಕ್ತ್ಯುದ್ರೇಕದಿಂದ ಭಗವಂತನ ಪೂಜಾ ಸೇವಾ ರೂಪವಾದ ತಪಸ್ಸನ್ನು ಮಾಡಿದೆ. ಅಷ್ಟರಿಂದಲೇ ಪ್ರೀತನಾದ ಭಗವಂತ ನನಗೆ ಪ್ರತ್ಯಕ್ಷನಾಗಿ ಸಂದರ್ಶನವನ್ನು ನೀಡಿದ. ಹಾಗೂ ಭಕ್ತನಾದ ನನ್ನನ್ನು ತನ್ನ ಮಿತ್ರ ಎಂದು ಮನ್ನಿಸಿ ತಾನು ಹೊದ್ದುಕೊಂಡ ವಸ್ತ್ರ, ಎರಡು ಬಂಗಾರದ ಕಲಶ, ತನ್ನ ಕೈಯಲ್ಲಿನ ಕಡಗ,

ತಲೆಯ ಮೇಲಿನ ಕಿರೀಟ, ಕೊರಳಲ್ಲಿಯ ಮುತ್ತಿನಸರ, ಕಾಲಲ್ಲಿಯ ಪೈಜಣ ಇವಿಷ್ಟನ್ನೂ ತನ್ನ ಕೈಯಿಂದಲೇ ತನ್ನ ದೇಹದಿಂದ ತೆಗೆದು ನನಗೆ ಇಡಿಸಿ, ಉಡಿಸಿ ತೊಡಿಸಿ ಹೋಗಿದ್ದಾನೆ. ತಪಸ್ಸು ಮಾಡಿ ದೇಹವನ್ನು ಒಣಗಿಸಬೇಡ ಎಂದೂ ಹೇಳಿದ್ದಾನೆ. ನನ್ನ ಜೊತೆಗೆ, ನನ್ನಂಥ ಪಾಮರನ ಜೊತೆಗೆ ಮಿತ್ರತ್ವವನ್ನು ಬೆಳೆಸಿದ್ದಾನೆ. ಪ್ರತಿದಿನವೂ ನಾವಿಬ್ಬರೂ ಕೂಡಿ ಈ ಪುರುಷೋತ್ತಮ ಕ್ಷೇತ್ರದಲ್ಲಿ ಚೆಂಡಿನಾಟವನ್ನು ಆಡುತ್ತೇವೆ. ಈ ಎಲ್ಲ ನನ್ನ ಮಾತು ನಿಮಗೆ ನಿಜ ಎನಿಸಲಿಕ್ಕಿಲ್ಲ. ಆದರೆ ನಾನು ತಮ್ಮನ್ನು ನನ್ನ ಗುರು ಎಂದು ಗುಟ್ಟಿನ ಮಾತನ್ನೇ ತಮ್ಮ ಎದುರು ಹೇಳಿದ್ದೇನೆ.

**ದಾಂತ:-** ಶಿಷ್ಯ, ನಾನು ಏಳು ಸಾವಿರ ವರ್ಷಗಳಿಂದ ನಾರಾಯಣನ ಆರಾಧನೆಯನ್ನು ಭಕ್ತಿಯಿಂದ ಆಚರಿಸುತ್ತಲೇ ಇದ್ದೇನೆ. ಇಷ್ಟಾದರೂ ನನಗೆ ಆ ಮುಕುಂದನು ಒಂದು ಸಲವಾದರೂ ಸಂದರ್ಶನವನ್ನು ನೀಡಲಿಲ್ಲ. ನೀನು ಐದೇ ದಿನ ಭಗವಂತನ ಆರಾಧನೆಗೈದು ದೇವ ದುರ್ಲಭವಾದ ಆ ದಾಮೋದರನ ಸಾಕ್ಷಾತ್ ದರ್ಶನವನ್ನು ಹೇಗೆ ಪಡೆದೆ? ನಿಜವಾಗಿಯೂ ನೀನು ಧನ್ಯ. ಕೃತಕೃತ್ಯ. ಆದರೆ ಶಿಷ್ಯೋತ್ತಮ. ನನಗೆ ಒಂದು ಸಂದೇಹ. ಶ್ರೀಹರಿಯು ನಿನ್ನೊಡನೆ ಸ್ನೇಹ ಸಖ್ಯವನ್ನು ಬೆಳೆಸಿದ್ದಾನೆ. ನಿನಗೂ ನನಗೂ ಪುರಾತನ ಕಾಲದಿಂದ ಸ್ನೇಹಸಖ್ಯವಿರುತ್ತದೆ. ಅಂದ ಬಳಿಕ ನನಗೆ ಇನ್ನೂವರೆಗೆ ಆ ದೇವದರ್ಶನ ಏಕೆ ಆಗಲೊಲ್ಲದು?

ದಾಂತ ಗುರುವಿನ ಈ ಮಾತನ್ನು ಕೇಳಿ ಪರಮಾಶ್ಚರ್ಯವಾಯಿತು ಭದ್ರತನುವಿಗೆ. ಗುರುವಿನ ಪ್ರಶ್ನೆಗೆ ಉತ್ತರ ಹೇಳಲಿಕ್ಕೆ ಆಗಲಿಲ್ಲ. ಅವನು ಹಾಗೆಯೇ ಮೌನವಾಗಿಯೇ ವನಾಂತರದಲ್ಲಿರುವ ತನ್ನ ಆಶ್ರಮಕ್ಕೆ ತೆರಳಿದ.

ಮತ್ತೊಂದು ದಿನ ಕೃಷ್ಣ ಪರಮಾತ್ಮ ತನ್ನ ಈ ಮನುಷ್ಯ ಮಿತ್ರನೊಂದಿಗೆ ಕ್ರೀಡೆಗಾಗಿ ಬಂದಿದ್ದ. ಇಬ್ಬರೂ ಕೂಡಿ ಚೆಂಡಿನ ಆಟ ಆಡಿದರು. ಆಗ ಭದ್ರತನು ಆ ಭಗವಂತನನ್ನು ವಿನಯದಿಂದ ಬಾಗಿ ವಂದಿಸಿ ಕೇಳಿದ.

**ಭದ್ರತನು:-** ದೇವೇಂದ್ರ, ನನ್ನ ಗುರು ನಿನ್ನ ದರ್ಶನವನ್ನು ಬಹುಕಾಲದಿಂದ ಬಯಸುತ್ತಿದ್ದಾನೆ. ಅವನೂ ನಿನ್ನ ಏಕಾಂತ ಭಕ್ತ. ಅವನಿಗೆ ನೀನು ದಯಮಾಡಿ ದರ್ಶನವನ್ನು ನೀಡು. ಈ ವಿಷಯದಲ್ಲಿ ನಿನ್ನ ಅಪ್ಪಣೆಯನ್ನು ತಿಳಿಸು.

**ಕೃಷ್ಣ:-** ಭದ್ರತನು, ನಾನು ಈ ಜನ್ಮದಲ್ಲಿ ನೀನು ಐದು ದಿನ ಮಾತ್ರ ಮಾಡಿದ ಪೂಜೆಯಿಂದ ಒಲಿದು ನಿನಗೆ ಸಂದರ್ಶನ ನೀಡಿಲ್ಲ. ನೀನು ಹಿಂದೆ ಅನೇಕ ಜನ್ಮಗಳಲ್ಲಿ ಅತ್ಯಂತ ಭಕ್ತಿಯಿಂದ ವಿರಕ್ತ ಭಕ್ತನಾಗಿ ನನ್ನ ಪೂಜೆಯನ್ನು ಮಾಡಿದೆ. ಆದುದರಿಂದ ನಾನು ನಿನ್ನ ಈ ಜನ್ಮದ ಅಲ್ಪತರವಾದ ಸಾಧನದಿಂದ ಪ್ರತ್ಯಕ್ಷ ದರ್ಶನವನ್ನು ನೀಡಿದೆ. ಈ ನಿನ್ನ ಗುರು ಈ ಒಂದೇ ಜನ್ಮದಲ್ಲಿ ನನ್ನನ್ನು ಆರಾಧಿಸಿ ದೇವತೆಗಳಿಗೂ ಕಾಣದ ನನ್ನನ್ನು ಸಾಕ್ಷಾತ್ ಆಗಿ ಕಾಣಲು ಬಯಸುತ್ತಾನೆ. ಇದು ಹೇಗೆ ಸಾಧ್ಯ? ಆದರೆ ಆ ನಿನ್ನ ಗುರುವೂ ಕೂಡ ನನ್ನ ಮಹಾಭಕ್ತನೇ. ಆದುದರಿಂದ ಮುಂದೆ ಎಂದಾದರೂ ಒಂದು ದಿನ ನನ್ನ ಸಂದರ್ಶನ ನಿಶ್ಚಿತವಾಗಿಯೂ ಆಗುವುದು.

ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿ ಆ ಭದ್ರತನು ಬ್ರಾಹ್ಮಣ ಹೇಳಿದ "ಪ್ರಭು, ನೀನು ನನ್ನ ಮೇಲೆ ಪೂರ್ಣಾನುಗ್ರಹವನ್ನು ಮಾಡಿದ್ದರೆ, ನಿಜವಾದ ಮಿತ್ರನೆಂದು ನೀನು ಸತ್ಯವಾಗಿಯೂ ಪರಿಗ್ರಹಿಸಿದ್ದಾದರೆ ನನ್ನ ಕಣ್ಣಿನ ಎದುರೇ ನನ್ನ ಗುರುವಿಗೆ ನಿನ್ನ

ದರ್ಶನವನ್ನು ನೀಡು. ಆ ದಾಂತ ಮುನಿ ನನ್ನ ಗುರು. ಆ ಮುನಿಯ ಶಿಷ್ಯನಾದ ನನಗೆ 'ಕೃಷ್ಣನ ದರ್ಶನವನ್ನು ಮಾಡಿಸು. ಅದೇ ನನಗೆ ಗುರುದಕ್ಷಿಣೆ'' ಎಂದು ಹೇಳುತ್ತಲಿದ್ದಾರೆ. ಆದುದರಿಂದ ಸ್ವಾಮಿ ನನಗೆ ದರ್ಶನವಿತ್ತಂತೆ ನನ್ನ ಗುರುವಿಗೆ ನಿನ್ನ ಸಂದರ್ಶನವನ್ನು ಕರುಣಿಸಿ ನನ್ನ ಗುರುದಕ್ಷಿಣೆ ಅವರಿಗೆ ಸರಿಯಾಗಿ ಸಲ್ಲುವಂತೆ ಮಾಡಿ ಗುರುವಿನ ಋಣದಿಂದ ನನ್ನನ್ನು ಪಾರು ಮಾಡು. ನಾನು ನನ್ನ ಗುರುವಿಗೆ ನಿನ್ನ ದರ್ಶನ ಮಾಡಿಸಿ ಭಗವದ್ದರ್ಶನರೂಪವಾದ ಗುರು ದಕ್ಷಿಣೆಯನ್ನು ಕೊಡುತ್ತೇನೆ ಎಂದು ವಚನವಿತ್ತಿದ್ದೇನೆ. ಮಿತ್ರನ ವಚನ ಕಾಪಾಡುವದು ನಿನ್ನ ಕರ್ತವ್ಯವಲ್ಲವೇ?

**ನಾರಾಯಣ:-** ಪ್ರಿಯ ಸಖ, ನೀನು ಗುರುದಕ್ಷಿಣೆಯಾಗಿ ನನ್ನ ದರ್ಶನ ಮಾಡಿಸುತ್ತೇನೆ, ಎಂದು ನಿನ್ನ ಗುರುವಿಗೆ ವಚನ ಕೊಟ್ಟಿದ್ದರೆ ಈಗಲೇ ನಿನ್ನ ಗುರುವನ್ನು ಕರೆದುಕೊಂಡು ಬಾ. ನನ್ನ ದರ್ಶನವನ್ನು ಅವನಿಗೆ ಮಾಡಿಸು. ಕೃಷ್ಣನ ಈ ಮಾತನ್ನು ಕೇಳಿದ ಕೂಡಲೇ ಆನಂದ ಪುಲಕಿತನಾದ ಭದ್ರಕನು ಓಡುತ್ತ ಹೋದ ಗುರುವಿನ ಕುಟೀರಕ್ಕೆ. ಅವಸರದಿಂದ ಅವರನ್ನು ಹೊರಡಿಸಿಕೊಂಡು ಶ್ರೀಹರಿಯ ಚೆಂಡನ್ನು ಆಡುತ್ತ ನಿಂತುಕೊಂಡ ಆ ಪುರುಷೋತ್ತಮ ಕ್ಷೇತ್ರಕ್ಕೆ ಬಂದ. ಭಕ್ತನಿಗಾಗಿ ಕಾಯುತ್ತ ನಿಂತಿದ್ದ ಆ ಶ್ರೀಹರಿ. ದಾಂತ ಗುರುವಿಗೆ ತನ್ನ ದಿವ್ಯ ದರ್ಶನವನ್ನು ಕರುಣಿಸಿದ. ದಾಂತ ಗುರು ತನ್ನ ಅನಿಮಿಷ ನೇತ್ರಗಳಿಂದ ಶಾಂತ ಸುಂದರನಾದ ಆ ಲಕ್ಷ್ಮೀಕಾಂತನನ್ನು ಕಣ್ತುಂಬ ನೋಡಿದ. ಹೃದಯದಲ್ಲಿ ಹಿಗ್ಗಿನ ಬುಗ್ಗೆ ಒಡೆಯಿತು. ಭಕ್ತಿಯ ಚಿಲುಮೆ ಪುಟಿಯಿತು. ಕಣ್ಣಿನಿಂದ ಧಾರಾಕಾರವಾಗಿ ಆನಂದ ಬಾಷ್ಪಕೋಡಿಯಿಟ್ಟು ಹರಿಯಿತು. ಕೂಡಲೇ ಭಕ್ತಿಯಿಂದ ಬಾಗಿದ. ಕೈಗಳನ್ನು ಜೋಡಿಸಿದ. ಗದ್ಗದ ಕಂಠದಿಂದ ಸ್ತುತಿಸಿದ.

**ದಾಂತ:-**

**ದಯಾಳೋ ಕಮಲಾಕಾಂತ ಶರಣಾಗತ ಪಾಲಕ ।**
**ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ನಮೋ ನಮಃ ॥**

ಕರುಣಾಶಾಲಿಯಾದ ಕರುಣಾಪತಿಯೇ ಶರಣಾಗತರನ್ನು ರಕ್ಷಣೆ ಮಾಡುವ ನಿನಗೆ ನನ್ನ ನಮಸ್ಕಾರ. ಮತ್ತೆ ನಮಸ್ಕಾರ ನಮೋ ನಮಃ

ಇಂದು ನನ್ನ ಜನ್ಮ ಸಫಲ. ನನ್ನ ತಪಸ್ಸು ಸಾರ್ಥಕ. ನನ್ನ ಜನ್ಮ ಜನ್ಮಾಂತರದ ಸುಕೃತ ರಾಶಿಯೆಲ್ಲವೂ ಇಂದು ಪರಿಪಕ್ವವಾಗಿದೆ. ನನ್ನನ್ನು ರಕ್ಷಿಸು. ವಾಗೀಶ್ವರಿಗೆ ಪತಿಯಾದ ನಿನ್ನನ್ನು ನಾನೆಂತು ಸ್ತುತಿಸಬಲ್ಲೆ? ಸ್ವಾಮಿ, ನಿನ್ನ ದಾಸರ ದಾಸ ದಾಸನನ್ನಾಗಿ ನನ್ನನ್ನು ಸ್ವೀಕರಿಸು.

ಆಗ ದಯಾ ಪರಿಪೂರ್ಣನಾದ ಆ ಶ್ರೀಕೃಷ್ಣನು ತನ್ನ ಕರ ಕಮಲವನ್ನು ಆ ದಾಂತ ಗುರುವಿನ ಮಸ್ತಕದ ಮೇಲೆ ಇರಿಸಿದ ಮತ್ತು ಹೇಳಿದ ''ನೀನು ನನ್ನ ಭಕ್ತ. ನನ್ನ ಪ್ರಸಾದಿಂದಲೇ ನಿನಗೆ ಈ ಸಾಕ್ಷಾತ್ಕಾರವು ಲಭಿಸಿದೆ. ನಿನಗೆ ಮುಂದೆ ಕಲ್ಯಾಣವಾಗುತ್ತದೆ.

ಹೀಗೆ ಹೇಳಿ ಶ್ರೀಹರಿಯು ಆ ದಾಂತ ವಿಪ್ರನನ್ನು ಆಲಿಂಗಿಸಿಕೊಂಡ. ನಂತರ ಆ ಭದ್ರತನುವನ್ನೂ ಬಿಗಿದಪ್ಪಿದ. ಅನಂತರ ಅಲ್ಲಿಯೇ ಅಂತರ್ಧಾನ ಹೊಂದಿದ.''

ಅನಂತರ ಪುರುಷೋತ್ತಮ ಕ್ಷೇತ್ರದಲ್ಲಿ ದಾಂತ ಮುನಿಯು ಅಹರ್ನಿಶ ಶ್ರೀಹರಿಯ ಆರಾಧನೆಗೈದು ಕೊನೆಗೆ ಮತ್ತೊಮ್ಮೆ ಶ್ರೀಹರಿಯ ಸಂದರ್ಶನವನ್ನು ಪಡೆದು ದೇವದುರ್ಲಭವಾದ ಮೋಕ್ಷವನ್ನು ಹೊಂದಿದ. ಅದರಂತೆ ಆ ಭದ್ರತನು ಬ್ರಾಹ್ಮಣನು

ಕೂಡ ಭಕ್ತಿಯುಕ್ತವಾದ ಶ್ರೀಹರಿಯ ಸಾರ್ವಕಾಲಿಕ ಸೇವೆ, ಆರಾಧನೆ, ಪೂಜೆಗಳಲ್ಲಿಯೇ ಆಸಕ್ತನು ಅನುರಕ್ತನು ಆಗಿ ಕೊನೆಗೆ ಮುಕ್ತಿಯನ್ನು ಐದಿದ.

**ವ್ಯಾಸ:-** ಜೈಮಿನಿಯೇ, ಹೀಗೆ ಶ್ರೀಹರಿಯನ್ನು ಈ ಭೂಲೋಕದಲ್ಲಿ ಅದರಲ್ಲಿಯೂ ಭರತಖಂಡದಲ್ಲಿ ಭಕ್ತಿಯಿಂದ ಕೆಲವು ದಿನಗಳ ಮಟ್ಟಿಗಾದರೂ ಆರಾಧನೆ ಗೈದರೆ ಭಗವಂತನ ಪ್ರೀತಿ ಸಿಗುವುದು. ಆ ಭಕ್ತಿ ಜ್ಞಾನ ವೈರಾಗ್ಯಗಳಿಂದ ಸಹಿತವಾಗಿ ಅತಿಶಯವೂ ಅವಿಚ್ಛಿನ್ನವೂ ದೃಢಕರವೂ ಅವ್ಯಭಿಚರಿತವೂ ಆಗಿದ್ದರೆ ಒಂದೇ ದಿನದ ಕೃಷ್ಣ ಪೂಜೆಯಿಂದಲೂ ಮನುಷ್ಯ ಮೋಕ್ಷವನ್ನು ಹೊಂದುವನು. ಇದು ಕರ್ಮಭೂಮಿ. ಇದು ಸ್ವರ್ಗಕ್ಕಿಂತ ಶ್ರೇಷ್ಠ. ಇಲ್ಲಿ ಮಾಡಿದ ಹರಿ ಪೂಜೆಯಿಂದ ಮೋಕ್ಷವು ಕರತಲಾಮಲಕ ಆಗುವದು. ಅದಕ್ಕಾಗಿಯೇ ಇಂದ್ರಾದಿ ದೇವತೆಗಳು ಕೂಡ ಇಲ್ಲಿಗೆ ಬರಲು ತವಕಿಸುತ್ತಾರೆ. ಎಂದು ಕರ್ಮಭೂಮಿಯಾದ ಭಾರತಕ್ಕೆ ಹೋಗುತ್ತೇವೆ? ಯಾವಾಗ ಅಲ್ಲಿ ಶ್ರೀಹರಿಯನ್ನು ಪೂಜೆ ಮಾಡುತ್ತೇವೆ?'' ಎಂದು ಪರಸ್ಪರವಾಗಿ ಮಾತನಾಡುತ್ತ ಭಾರತ ವರ್ಷಕ್ಕೆ ಇಳಿದು ಬರಲು ಹಾತೊರೆಯುತ್ತಾರೆ. ಇಲ್ಲಿ ಇದ್ದವರೇ ಧನ್ಯ ಎಂದು ಭೂಲೋಕದ ಭಾರತೀಯರನ್ನು ಕೊಂಡಾಡುತ್ತಾರೆ.

**ಅತಿಧನ್ಯಾ ಇಮೇಲೋಕಾ ಅಸ್ಮತ್ತೋಪಿ ಮಹತ್ತರಾಃ ।**
**ದುರ್ಲಭೇ ಭಾರತೇವರ್ಷೇ ಪೂಜಯಂತಿ ಹರಿಂ ಪ್ರಭುಂ ॥**

ಭಾರತದಲ್ಲಿ ಹುಟ್ಟಿದ ಈ ಜನರು ಅತ್ಯಂತ ಧನ್ಯರು. ನಮಗಿಂತ ಇಲ್ಲಿಯ ಜನರು ಭಾಗ್ಯವಂತರು. ಮತ್ತು ಪುಣ್ಯವಂತರು. ಆದುದರಿಂದಲೇ ಇವರು ಭರತಖಂಡದಲ್ಲಿ ಹುಟ್ಟಿ ಶ್ರೀಹರಿಯ ಪೂಜೆಯನ್ನು ಮಾಡುತ್ತಾರೆ.

**ಅಹೋ ಭಾರತವರ್ಷಸ್ಯ ಕಶ್ಯತೋ ಗುಣಭಾಷಣೇ ।**
**ಯತ್ರಾರಾಧ್ಯ ಹರಿಂ ಪೂರ್ವಂ ವಯಂ ದೇವತ್ವಮಾಗಾತಾಃ ॥**

ಈ ಭಾರತ ದೇಶದ ಮಹಿಮೆಯನ್ನು ಕೇಳಲು ಯಾವನು ಸಮರ್ಥನಾಗುತ್ತಾನೆ? ಇದೊಂದು ಅತ್ಯಂತ ಆಶ್ಚರ್ಯಕರವಾದ ದೇಶ. ನಾವೆಲ್ಲರೂ ಮೊದಲು ಇಲ್ಲಿಯೇ ಶ್ರೀಹರಿಯ ಆರಾಧನೆಯನ್ನು ಮಾಡಿ ದೇವತ್ವವನ್ನು ಹೊಂದಿದೆವು.

ಹೀಗೆ ಇಂದ್ರಾದಿ ದೇವತೆಗಳು ಈ ಭರತಖಂಡವನ್ನು ಪ್ರಶಂಸೆ ಮಾಡುತ್ತಾರೆ. ಇಂಥ ಈ ಭಾರತದೇಶದಲ್ಲಿ ಹುಟ್ಟಿಯೂ ಶ್ರೀಹರಿಯ ಆರಾಧನೆ ಪೂಜೆ ಮಾಡದಿದ್ದರೆ ಅವನಂಥ ದುರ್ಭಾಗ್ಯ ಪುರುಷನು ಯಾರು?

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ ವೇಶ್ಯಾಲಂಪಟನಾದ ಭದ್ರತನು ಬ್ರಾಹ್ಮಣನ ವೃತ್ತಾಂತ ಎಂಬ ಹದಿನೇಳನೇಯ ಅಧ್ಯಾಯ ಮುಗಿದುದು*

—o—

**ಜೈಮಿನಿ:-** ಗುರುಗಳೇ ಪುರುಷೋತ್ತಮ ಕ್ಷೇತ್ರವು ಸರ್ವ ತೀರ್ಥಗಳಲ್ಲಿಯೂ ಶ್ರೇಷ್ಠತಮ ಎಂದು ತಾವು ಹೇಳಿದಿರಿ. ಅದರ ಮಹಿಮೆಯನ್ನು ತಾವು ಹೇಳಿರಿ.

**ವೇದವ್ಯಾಸ:-** ಜೈಮಿನಿ, ಆ ಪುರುಷೋತ್ತಮ ಕ್ಷೇತ್ರದ ಮಹಿಮೆಯನ್ನು ಸಂಪೂರ್ಣವಾಗಿ ಯಾರಿಗೂ ಹೇಳಲು ಶಕ್ಯವಿಲ್ಲ ಸಂಕ್ಷಿಪ್ತವಾಗಿ ನಾನು ಹೇಳುತ್ತೇನೆ ಕೇಳು.

ಉಪ್ಪಿನ ಕಡಲಿನ ತಡಿಯಲ್ಲಿ ತಲೆಯೆತ್ತಿ ನಿಂತ ಪುರುಷೋತ್ತಮ ಎಂಬ ಹೆಸರಿನ ಈ ಕ್ಷೇತ್ರವು ಸ್ವರ್ಗಕ್ಕಿಂತ ಶ್ರೇಷ್ಠ. ಪುರುಷೋತ್ತಮನಾದ ಶ್ರೀಹರಿಯು ಅಲ್ಲಿ ಸ್ವಯಂ ಸನ್ನಿಹಿತನಾದುದರಿಂದ ಅದಕ್ಕೆ ಪುರುಷೋತ್ತಮ ಕ್ಷೇತ್ರ ಎಂದು ಹೆಸರು ಬಂದಿದೆ. ಆ ಕ್ಷೇತ್ರದ ಸುತ್ತು ಮುತ್ತಲಿನ ಹತ್ತು ಯೋಜನ ಪ್ರದೇಶವೆಲ್ಲವೂ ಪುರುಷೋತ್ತಮ ಕ್ಷೇತ್ರವೆಂದೇ ಕರೆಯಲ್ಪಡುತ್ತದೆ. ಆ ಕ್ಷೇತ್ರದಲ್ಲಿ ಪ್ರವೇಶ ಮಾಡಿದವರೆಲ್ಲರೂ ಸಾಕ್ಷಾತ್ ವಿಷ್ಣುವಿನ ಮೂರ್ತಿಗಳೇ, ಅವನ ವಿಶೇಷ ಸನ್ನಿಧಾನೋಪೇತರೇ. ಅಲ್ಲಿ ಹೋದಾಗ ಸ್ಪೃಶ್ಯಾಸ್ಪೃಶ್ಯ ವಿಚಾರಣೆಯನ್ನು ಮಾಡಕೂಡದು.

**ಚಾಂಡಾಲೇನಾಪಿ ಸಂಸ್ಪೃಷ್ಟಂ ಗ್ರಾಹ್ಯಂ ತತ್ರಾನ್ನಮಗ್ರಜೈಃ ।**
**ತತ್ರಾನ್ನ ಪಾಚಕಾ ಲಕ್ಷ್ಮೀಃ ಸ್ವಯಂ ಭೋಕ್ತಾ ಜನಾರ್ದನಃ ॥**

ಈ ಪುರುಷೋತ್ತಮ ಕ್ಷೇತ್ರದಲ್ಲಿ ದೇವರಿಗೆ ನಿವೇದಿತವಾದ ಅನ್ನವನ್ನು ಚಾಂಡಾಲರು ಮುಟ್ಟಿದರೂ ಬ್ರಾಹ್ಮಣರು ಸ್ವೀಕರಿಸಬೇಕು. ಯಾಕೆಂದರೆ ಅಲ್ಲಿ ಅಡಿಗೆ ಮಾಡುವವಳು ಮಹಾಲಕ್ಷ್ಮೀದೇವಿ. ಊಟ ಮಾಡುವವ ಸ್ವಯಂ ಜಗದೀಶ್ವರ. ಹರಿಯು ಊಟ ಮಾಡಿದ ಉಚ್ಛಿಷ್ಠ ಅನ್ನವನ್ನು ಅಲ್ಲಿ ಉಂಡವರಿಗೆ ಮುಕ್ತಿಯು ಎಂದೂ ದುರ್ಲಭವಾಗುವುದಿಲ್ಲ. ಅತಿ ದುರ್ಲಭವಾದ ಆ ಪುರುಷೋತ್ತಮನ ನೈವೇದ್ಯದ ಅನ್ನವನ್ನು ಬ್ರಹ್ಮಾದಿದೇವತೆಗಳು ಕೂಡ ಪ್ರತಿನಿತ್ಯವೂ ಬಂದು ಊಟ ಮಾಡುತ್ತಾರೆ. ಮನುಷ್ಯರ ಪಾಡೇನು? ಗಂಗೆಯ ನೀರು ಎಲ್ಲ ಕಡೆ ಪವಿತ್ರವಿದ್ದಂತೆ ಈ ಕ್ಷೇತ್ರದಲ್ಲಿಯ ಅನ್ನವು ಪರಮ ಪವಿತ್ರ. ಈ ಅನ್ನವು ಮಿದುವಾಗಿದ್ದರೂ ಪಾಪದ ಮೊತ್ತವನ್ನು ಕತ್ತರಿಸುವುದರಲ್ಲಿ ಗರಗಸದಂತೆ ಕಠೋರವಾಗಿರುತ್ತದೆ. ಅಂಥ ಅನ್ನದಲ್ಲಿ ಜನ್ಮಾಂತರದ ಪುಣ್ಯವೆಲ್ಲವೂ ಕ್ಷೀಣವಾಗಿ ಪಾಪರಾಶಿ ಪರಿಪಕ್ವವಾದವರಿಗೆ ಮಾತ್ರ ಉಣಬೇಕು ಎನ್ನುವ ಭಕ್ತಿ ಹುಟ್ಟುವುದಿಲ್ಲ. ಈ ಕ್ಷೇತ್ರಕ್ಕೆ ಜಗನ್ನಾಥಪುರಿ ಎಂತಲೂ ಕರೆಯುತ್ತಾರೆ. ಉಪ್ಪಿನ ಸಮುದ್ರದ ತೀರದಲ್ಲಿ ನಿಂತು ಆ ಉಪ್ಪು ನೀರಿನಿಂದಲೇ ಪಿತೃಗಳಿಗೆ ತರ್ಪಣ ನೀಡಿದರೆ ಅವರೆಲ್ಲರೂ ಹರಿಮಂದಿರಕ್ಕೆ ಹೋಗವರು. ಈ ಜಗನ್ನಾಥಪುರಿಯ ಪರಿಸರದಲ್ಲಿರುವ ಇಂದ್ರ, ಪ್ರದ್ಯುಮ್ನ, ಸರೋವರ, ಮಾರ್ಕಂಡೇಯ ತೀರ್ಥ, ರೋಹಿಣೀತೀರ್ಥ ಮುಂತಾದವುಗಳಲ್ಲಿ ಸ್ನಾನಮಾಡಿದವರು, ಮತ್ತು ಈ ಕ್ಷೇತ್ರದ ಕೃಷ್ಣ ಬಲರಾಮ ಹಾಗೂ ಸುಭದ್ರೆಯರನ್ನು ಕಣ್ಣಿನಿಂದ ನೋಡಿದವರು ಮೋಕ್ಷವನ್ನು ಹೊಂದುತ್ತಾರೆ. ಪುರಿಯ ಜಗನ್ನಾಥ ಹಾಗೂ ಬಲರಾಮ ಸುಭದ್ರೆಯರನ್ನು ಕಣ್ಣಿನಿಂದ ಒಮ್ಮೆಯಾದರೂ ನೋಡದ ಮನುಷ್ಯ ಸಾವಿರ ಪುಣ್ಯ ಮಾಡಿದರೂ

ಮುಕ್ತನಾಗಲಾರ. ಫಾಲ್ಗುಣ ಮಾಸದಲ್ಲಿ ಈ ಜಗನ್ನಾಥಸ್ವಾಮಿಯ ಡೋಲೋತ್ಸವವನ್ನು ನೋಡಿದವರು ಹರಿಗೃಹಕ್ಕೆ ಪ್ರಯಾಣಿಸುತ್ತಾರೆ.

ಚೈತ್ರ ವೈಶಾಖ ಶುಕ್ಲ ಏಕಾದಶಿ ಹಾಗೂ ತೃತೀಯಾ ದಿನಗಳಲ್ಲಿ ಜಗನ್ನಾಥ ಸ್ವಾಮಿಯನ್ನು ಸ್ನಾನಮಾಡಿಸುವಾಗ ದರ್ಶನ ತೆಗೆದುಕೊಂಡವರು ಸಂಸಾರ ಸಾಗರದಿಂದ ಮುಕ್ತರಾಗುತ್ತಾರೆ. ಜ್ಯೇಷ್ಠಮಾಸದಲ್ಲಿ ಜಗನ್ನಾಥಸ್ವಾಮಿಯ ದರ್ಶನವನ್ನು ಮಾಡಿಕೊಂಡವರು ಅವನ ಪ್ರೀತಿಪಾತ್ರರಾಗುವರು. ಆಷಾಢ ಮಾಸದಲ್ಲಿ ಆ ಕ್ಷೇತ್ರದಲ್ಲಿ ಇರುವ ಗುಂಡಿಕಾ ಮಂಟಪಕ್ಕೆ ಹೋಗುವ ಕೃಷ್ಣ ಬಲರಾಮರನ್ನು ನೋಡಿದವನು ಮರಳಿ ಸಂಸಾರಕ್ಕೆ ಬರುವುದಿಲ್ಲ. ರಥದಲ್ಲಿ ಕುಳಿತ ಜಗನ್ನಾಥಸ್ವಾಮಿಯನ್ನು ಸುಭದ್ರೆಯನ್ನು ಬಲರಾಮನನ್ನು ನೋಡಿದವರ ಸಂಸಾರ ಬಂಧನದ ಪಾಶಗಳೆಲ್ಲವೂ ಹರಿದು ಹೋಗುವವು. ಗುಂಡಿಕಾ ಮಂಟಪದಲ್ಲಿ ಇರುವ ಜಗನ್ನಾಥನನ್ನು ನೋಡಿದವನು ಇಹಲೋಕದಲ್ಲಿ ಸಕಲಭೋಗ್ಯ ಭಾಗ್ಯಗಳನ್ನು ಹೊಂದಿ ಪರಲೋಕದಲ್ಲಿ ಸ್ವರ್ಗಾವರ್ಗದಲ್ಲಿ ಭಾಗೀದಾರನು ಆಗುತ್ತಾರೆ. ಆದುದರಿಂದ ಈ ಜಗನ್ನಾಥಪುರಿ ಎಂಬ ಪುರುಷೋತ್ತಮ ಕ್ಷೇತ್ರವು ಎಲ್ಲ ಕ್ಷೇತ್ರಗಳಿಗಿಂತ ಶ್ರೇಷ್ಠ. ಎಲ್ಲ ತೀರ್ಥಗಳಿಗಿಂತ ವರಿಷ್ಠ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಪುರುಷೋತ್ತಮ ಕ್ಷೇತ್ರದ ಮಾಹಾತ್ಮ್ಯ ಎಂಬ ಹದಿನೆಂಟನೇಯ ಅಧ್ಯಾಯ ಮುಗಿದುದು*

—o—

## ಉರ್ವೀಶು ಬ್ರಾಹ್ಮಣನ ಕಥಾನಕ

### ಅಧ್ಯಾಯ - ೧೯

**ವೇದವ್ಯಾಸ:-** ನಾರಾಯಣನನ್ನು ನಂಬಿ ಅವನ ಭಕ್ತಿಯಿಂದ ಚರಣಗಳಿಗೆ ಶರಣು ಹೋದ ಮಾನವರಿಗೆ ಅಶುಭ ಎನ್ನುವುದು ಎಂದೂ ಆಗುವುದಿಲ್ಲ. ವಿಷ್ಣುವಿನ ಮಹಾತ್ಮ್ಯವೆನ್ನು ದ್ವೇಷಿಗಳೂ ವೇದಶಾಸ್ತ್ರ ನಿಂದಕರೂ ಆದ ಪಾಖಂಡಿಗಳ ಎದುರು ಹೇಳಬಾರದು. ವೈಷ್ಣವರ ಮುಂದೆ ಮಾತ್ರ ಹೇಳದೇ ಇರಬಾರದು.

ಹಿಂದೆ ತ್ರೇತಾಯುಗದಲ್ಲಿ ಉರ್ವೀಷು ಎಂಬ ಒಬ್ಬ ಬ್ರಾಹ್ಮಣ ಇದ್ದ. ಧರ್ಮನಿಂದೆಯಲ್ಲಿ ಅವನಿಗೆ ವಿಚಿತ್ರ ಆನಂದ. ಪಾಪಕರ್ಮ ಮಾಡಿದರೆ ಅವನಿಗೆ ಸಂಪೂರ್ಣ ಸಂತೃಪ್ತಿ. ಶಕ್ಯವಿದ್ದಷ್ಟು ಬ್ರಾಹ್ಮಣರ ದ್ರವ್ಯವನ್ನೆಲ್ಲ ಅವನು ಅಪಹರಿಸಿದ. ದೊರೆತಷ್ಟು ಗೋಮಾಂಸ ತಿಂದ, ಸಿಕ್ಕದಷ್ಟು ಸೆರೆ ಕುಡಿದ, ಲಭಿಸಿದಷ್ಟು ಪರಸ್ತ್ರೀಯನ್ನು ಭೋಗಿಸಿದ ಆ ಪಟ್ಟಣದಲ್ಲಿರುವ ಎಲ್ಲ ವೇಶ್ಯೆಯರ ಸ್ನೇಹವನ್ನು ಬೆಳೆಸಿಕೊಂಡ. ಅವನ ಬಳಿ ಶರಣು ಬಂದವರಿಗೆ ಮರಣವೇ ಗತಿ. ಮಿತ್ರರನ್ನೂ ಬಿಡಲಿಲ್ಲ. ಜ್ಞಾತಿಗಳನ್ನು ನೋಡಲಿಲ್ಲ. ಎಲ್ಲರಿಗೂ ವಿಶ್ವಾಸಘಾತ ಮಾಡಿ ತನ್ನ ಕೈಯಿಂದಾದಷ್ಟು ಪೀಡೆ ಹಿಂಸೆಯನ್ನು ಕೊಡುತ್ತಲೇ ಇದ್ದ. ಅಪ್ಪಿ ತಪ್ಪಿ ಕೂಡ ಅವನು ಸತ್ಯವನ್ನು ನುಡಿಯುತ್ತಿರಲಿಲ್ಲ. ಶಕ್ಯವಿದ್ದಷ್ಟು ಬ್ರಾಹ್ಮಣರ ಉಪಜೀವನವನ್ನು ಕಸಿದುಕೊಂಡು ವೃತ್ತಿಚ್ಛೇದ ಮಾಡಿದ. ಅಡವು ಇಟ್ಟಿದ್ದನ್ನು ಎಂದೂ ಯಾರಿಗೂ ತಿರುಗಿ ಕೊಡಲಿಲ್ಲ.

ಅವನ ಈ ದುರ್ವ್ಯಾಪಾರ ಹಾಗೂ ದುಷ್ಟತನ ಮತ್ತು ಉಪದ್ರವ, ಉಪದ್ವ್ಯಾಪಗಳಿಂದ ಬೇಸತ್ತ ಅವನ ಜಾತಿಯ ಬಾಂಧವರೆಲ್ಲರೂ ಕೂಡಿ ಕೋಪದಿಂದ ಅವನಿದ್ದಲ್ಲಿಗೆ ಬಂದರು. ಅವನಿಗೆ ಗದರಿಸಿ ಹೇಳಿದರು.

**ಜ್ಞಾತಿಗಳು:-** ಪಾಪಿಯೇ ನಮ್ಮ ಪೂರ್ವಪುರುಷರು ಮಹಾ ಪ್ರಯತ್ನದಿಂದ ಗೌರವ ಘನತೆ ತಂದು ಕೊಟ್ಟಿದ್ದರು. ಆ ಗೌರವಗಳನ್ನೆಲ್ಲ ನೀನು ಮಣ್ಣುಗೂಡಿಸಿದೆ. ಧರ್ಮದ ದಾರಿಯನ್ನು ತೊರೆದೆ, ಪಾಪದ ಪರ್ವತವನ್ನೇ ಎತ್ತಿ ನಿಲ್ಲಿಸಿದೆ, ಕುಲದ ಕೀರ್ತಿಯನ್ನು ಸಂಪೂರ್ಣ ನಾಶಗೊಳಿಸಿದೆ. ಅನೇಕ ಮಹಾಪುರುಷರು ಹುಟ್ಟಿದ ನಮ್ಮ ವಂಶದಲ್ಲಿ ನಿನ್ನಂಥ ನೀಚನು ಹೇಗೆ ಹುಟ್ಟಿದೆ? ಸಮುದ್ರದಲ್ಲಿ ಚಂದ್ರನೂ ಹುಟ್ಟುತ್ತಾನೆ. ವಿಷವೂ ಹುಟ್ಟುತ್ತದೆ. ಕುಪುತ್ರರ ಶಕ್ತಿಯು ಎಣಿಸಲಿಕ್ಕೆ ಬರದು. ಹಿಂದಿನ ಅನೇಕ ಮಹಾಪುರುಷರು ಕೂಡಿ ಗಳಿಸಿದ ಕೀರ್ತಿಯನ್ನೆಲ್ಲ ಕುಪುತ್ರನು ಒಬ್ಬನೇ ಒಂದು ಕ್ಷಣದಲ್ಲಿ ತನ್ನ ದುರ್ನಡತೆಯಿಂದ ಹಾಳು ಮಾಡಿ ಬಿಡುತ್ತಾನೆ. ಒಳ್ಳೆ ಪುತ್ರನು ಹುಟ್ಟಿದರೆ ಅಂಥ ವಂಶವು ಸಹ ಶ್ರೇಷ್ಠ ವಂಶ ಎನಿಸುತ್ತದೆ. ಪಾಪಿ ಹಾಗೂ ಧರ್ಮಭ್ರಷ್ಟನಾದ ಪುತ್ರನು ಹುಟ್ಟಿದರೆ ದೊಡ್ಡ ವಂಶವೂ ಸಹ ಕೀಳು ಕುಲ ಎನಿಸುತ್ತದೆ. ಆದುದರಿಂದ ಪರಮ ನೀಚನಾದ ನಿನ್ನನ್ನು ನಾವೆಲ್ಲರೂ ಬಹಿಷ್ಕರಿಸಿದ್ದೇವೆ. ಇನ್ನೂ ನಮಗೂ ನಿನಗೂ ಸಂಬಂಧವಿಲ್ಲ.

ಹೀಗೆ ಹೇಳಿ ಅವನ ಎಲ್ಲ ಜ್ಞಾತಿ ಬಂಧುಗಳು ಉರ್ವಿಷು ವಿಪ್ರನನ್ನು ಪರಿತ್ಯಜಿಸಿದರು. ಎಲ್ಲ ಬಂಧು-ಬಳಗದವರಿಂದಲೂ ಪೌರ ಜಾನಪದ ಜನರಿಂದಲೂ ಬಹಿಷ್ಕೃತನೂ ತಿರಸ್ಕೃತನೂ ಆದ ಆ ಉರ್ವಿಷು ಬ್ರಾಹ್ಮಣಾಧಮ ಕಳ್ಳತನಕ್ಕೆ ಇಳಿದ. ಕಾಡಿನ ದಾರಿಯಲ್ಲಿ ನಿಂತು ಪ್ರಯಾಣಿಕರನ್ನು ಸುಲಿಯುತ್ತಿದ್ದ. ಇದರಿಂದ ಅವನ ಅಪಕೀರ್ತಿ ಹಿಂಸಾವ್ಯಾಪಾರ ಎಲ್ಲ ಕಡೆಗೂ ಪಸರಿಸಿತು. ಆಗ ಹಳ್ಳಿಯ ಕೆಲವು ಧೈರ್ಯಶಾಲೀ ಶೂರ ಜನರು ಒಂದಾಗಿ ಹೋಗಿ ನಿರ್ದಯನಾಗಿ ಪರಹಿಂಸೆಗೈಯುವ ಈ ಪಾಪಿಯನ್ನು ಹಿಡಿದು ಆ ದೇಶದ ರಾಜನಿಗೆ ಒಪ್ಪಿಸಿದರು.

ಆದರೆ ಆ ದೇಶದ ದೊರೆಯು ಈ ಉರ್ವೀಷುವಿನ ತಂದೆಯ ಭಕ್ತ ಮತ್ತು ಶಿಷ್ಯ. ತಂದೆಯ ಮೇಲಿನ ಗೌರವದಿಂದ ಅವನು ಈ ಕಳ್ಳನನ್ನು ಕೈಗೆ ಸಿಕ್ಕಿದರೂ ದಂಡಿಸದೇ ತನ್ನ ದೇಶ ಬಿಟ್ಟು ಹೊರಗೆ ಹಾಕಿದ.

ಆಗ ಈ ಚೋರ ಶಿಖಾಮಣಿಯು ನಾಡು ಬಿಟ್ಟು ಕಾಡನ್ನೇ ಸೇರಿದ. ಅಲ್ಲಿಯ ಕಳ್ಳರ ಸಂಗಡ ಸ್ನೇಹ ಬೆಳೆಸಿ ಅವರೊಡನೆ ದೊಡ್ಡ ದೊಡ್ಡ ದರೋಡೆ ಲೂಟಿಗಳನ್ನು ಮಾಡಲು ಶುರು ಮಾಡಿದ. ಒಂದು ದಿನ ಅವನು ಒಂದು ಕಗ್ಗಾಡಿನಲ್ಲಿ ಪ್ರಾಂತಸ್ಥರ ದಾರಿ ಕಾಯುತ್ತ ಹೊಂಚು ಹಾಕಿ ಸುಲಿಗೆಯ ಸನ್ನಾಹದಲ್ಲಿ ನಿಂತುಕೊಂಡಿದ್ದ. ಆಗ ಬಹಳ ಹೊತ್ತಾದರೂ ಯಾವ ಪ್ರಯಾಣಿಕರೂ ಈ ಕಳ್ಳರ ಗುಂಪಿನ ಭಯದಿಂದ ಆ ಮಾರ್ಗವಾಗಿ ಬರಲೇ ಇಲ್ಲ. ಆಗ ನಿರಾಶರಾದ ಆ ಎಲ್ಲ ಕಳ್ಳ ಖದೀಮರು ಅದೇ ಕಾಡಿನಲ್ಲಿರುವ ಒಂದು ತೊರೆಯ ತೀರಕ್ಕೆ ಬಂದರು. ವನ ವನ ಅಲೆದಾಡಿ ದಣಿದು ಹೋದ ಎಲ್ಲ ಕಳ್ಳರುಗಳು ಸ್ನಾನಕ್ಕಾಗಿ ಆ ನದಿಗೆ ಇಳಿದರು. ಅಲ್ಲಿ ನದಿಯ ದಂಡೆಯ ಮೇಲೆ ಅನೇಕ ಬ್ರಾಹ್ಮಣರು ದೇವರಪೂಜೆ ಮಾಡುತ್ತ ಕುಳಿತಿದ್ದು ಉರ್ವೀಷು ಬ್ರಾಹ್ಮಣನ ಕಣ್ಣಿಗೆ ಬಿದ್ದಿತು. ಆ ಎಲ್ಲ ಬ್ರಾಹ್ಮಣರು ದೇವರ ಪೂಜೆಗೈದು ತಮ್ಮ ತಮ್ಮಲ್ಲಿ ಕುತೂಹಲದಿಂದ ಮಾತಾಡುತ್ತಿದ್ದರು.

ನಾವು ಈ ಪವಿತ್ರವಾದ ನದೀ ತೀರಕ್ಕೆ ಬಂದ ಬಳಿಕ ಭಗವಂತನ ಪೂಜೆ ಮಾಡುತ್ತ ಈಗ ಕುಳಿತುಕೊಂಡಿದ್ದೇವೆ. ತೀರ್ಥಕ್ಷೇತ್ರಗಳಿಗೆ ಹೋದವರು ತಮಗೆ ಪ್ರಿಯವಾದ ಒಂದೊಂದು ವಸ್ತುವನ್ನು ಬಿಡಬೇಕು ಎಂಬ ನಿಯಮ ಇದೆ. ಅದರಂತೆ ನಾವೂ ಸಹ ಈಗ ನಮಗೆ ಅತ್ಯಂತ

ಪ್ರಿಯವಾದ ಒಂದು ವಸ್ತುವನ್ನು ಪರಮಾತ್ಮನಿಗೆ ಅರ್ಪಿಸೋಣ. ನಂತರ ಪುನಃ ಅದನ್ನು ನಮ್ಮ ಜನ್ಮದಲ್ಲಿಯೇ ಅದನ್ನು ತಿನ್ನುವದಾಗಲೀ, ಬಳಸುವದಾಗಲೀ ಮಾಡಬಾರದು. ಆದುದರಿಂದ ಯಾರು ಯಾರು ಯಾವ ಯಾವ ಪದಾರ್ಥಗಳನ್ನು ದೇವರಿಗೆ ಎಂದು ಬಿಟ್ಟು ನಿಮ್ಮ ಆಯುಷ್ಯದಲ್ಲಿ ತ್ಯಜಿಸುವಿರಿ? ಎಂದು ಒಬ್ಬರಿಗೊಬ್ಬರು ಮಾತನಾಡಿಕೊಂಡರು.

ಅವರಲ್ಲಿ ಒಬ್ಬ ಮುಂದೆ ಬಂದು "ನಾನು ಸಂಪಿಗೆ ಹೂಗಳನ್ನು ದೇವರಿಗಾಗಿ ಬಿಟ್ಟಿದ್ದೇನೆ" ಎಂದನು. ಇನ್ನೊಬ್ಬ ಮುಂದೆ ಬಂದು ನಾನು ಶ್ರೀಹರಿಗಾಗಿ ತಾಂಬೂಲವನ್ನು ಸಮರ್ಪಿಸಿದ್ದೇನೆ. ನಾನಿನ್ನು ಮೇಲೆ ನನ್ನ ಆಯುಷ್ಯದಲ್ಲಿಯೇ ತಾಂಬೂಲವನ್ನು ತಿನ್ನುವುದಿಲ್ಲ ಎಂದ. ಮತ್ತೊಬ್ಬನು ಬಾಳೆಹಣ್ಣನ್ನು ಮಗದೊಬ್ಬ 'ದಾಳಿಂಬರೀ ಹಣ್ಣು' ಬೇರೊಬ್ಬನು ಮಾವಿನಹಣ್ಣು ಹೀಗೆ ಒಬ್ಬೊಬ್ಬರಾಗಿ ಎಲ್ಲ ಋಷಿ ಮುನಿಗಳು ಭಗವಂತನಿಗಾಗಿ ಒಂದೊಂದು ಪದಾರ್ಥಗಳನ್ನು ಬಿಟ್ಟರು.

ಇದನ್ನು ಕಂಡು ತಾನೂ ಏನಾದರೂ ಬಿಟ್ಟು ದೇವರಿಗೆ ಅರ್ಪಿಸಬೇಕೆಂಬ ಆಲೋಚನೆ ಉದಯಿಸಿತು ಉರ್ವೀಷುವಿನಲ್ಲಿ "ಈ ಜಗತ್ತಿನಲ್ಲಿ ಇರುವ ಉಣ್ಣುವ, ತಿನ್ನುವ ಕುಡಿಯುವ ವಸ್ತುಗಳನ್ನಂತೂ ನಾನೆಂದಿಗೂ ಬಿಡಲಾರೆ. ಆದುದರಿಂದ ನಾನು ಏನು ಬಿಡಲಿ? ನಿರಂತರವಾಗಿ ನಾನು ಅಡವಿಯಲ್ಲಿಯೇ ಇರುವವ. ರಾಜ ಹೊರ ಹಾಕಿದ್ದರಿಂದ ಊರೊಳಗೆ ಹೋಗುವಂತಿಲ್ಲ. ದುರ್ಗಮವಾದ ಗೊಂಡಾರಣ್ಯಗಳಲ್ಲಿ ಸಂಚರಿಸುವ ನನಗೆ ಎಂದೂ ಚಕ್ಕಡಿ ಹತ್ತುವ ಸಂದರ್ಭ ಬರುವುದಿಲ್ಲ. ಆದುದರಿಂದ ನಾನು ದೇವರಿಗಾಗಿ ಬಂಡಿಯನ್ನೇ ಕೊಟ್ಟು ಬಿಡುತ್ತೇನೆ. ಅಂತೆಯೇ ನಾನು ಅದರ ಮೇಲೆ ಹತ್ತುವದನ್ನು ಬಿಟ್ಟು ಬಿಡುತ್ತೇನೆ"

ಹೀಗೆ ಮನದಲ್ಲಿ ನಿರ್ಧರಿಸಿ ಆ ಉರ್ವೀಷುವು ಶ್ರೀಹರಿಗೆ ಚಕ್ಕಡಿ (ಬಂಡಿ)ಯನ್ನು ಸಮರ್ಪಿಸಿದ. ಪ್ರತಿಜ್ಞಾಪೂರ್ವಕವಾಗಿ ತಾನು ಬಂಡಿ ಬಳಸುವುದನ್ನು ಬಿಟ್ಟು ಬಿಟ್ಟ. ಆ ನದೀ ತೀರದಲ್ಲಿ ಪೂಜೆ ಮಾಡುತ್ತ ಕುಳಿತ ಆ ಎಲ್ಲ ಬ್ರಾಹ್ಮಣರು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಕಳ್ಳನಾದ ಉರ್ವೀಷುವು ತನ್ನ ಚೋರ ಸಂಗಡಿಗರೊಡನೆ ಅಲ್ಲಿಂದ ಹೊರಟು ಹೋದ.

ಮತ್ತೆ ಒಂದು ದಿನ ಆ ಉರ್ವೀಷುವು ತನ್ನ ಕಳ್ಳ ಗೆಳೆಯರ ಗುಂಪಿನೊಂದಿಗೆ ಕಾಡಿನ ಒಂದು ಇಕ್ಕಟ್ಟಾದ ದಾರಿಯಲ್ಲಿ ದಾರಿಕಾರರನ್ನು ಸುಲಿಯುವ ಉದ್ದೇಶದಿಂದ ಹೊಂಚುಹಾಕಿ ಕುಳಿತಿದ್ದ. ಆ ದಾರಿಯಲ್ಲಿ ಒಬ್ಬ ಬೆಲ್ಲದ ವ್ಯಾಪಾರಿಯು ಒಂದು ಚಕ್ಕಡಿಯಲ್ಲಿ ಬೆಲ್ಲ ಹೇರಿಕೊಂಡು ಹೊರಟಿದ್ದ. ಹೊಂಚು ಹಾಕಿಕೊಂಡು ಕುಳಿತ ಆ ತುಡುಗರು ಬೆಲ್ಲದ ವ್ಯಾಪಾರಿಯ ಮೇಲೆ ಎರಗಿದರು. ಅವನನ್ನು ಹೊಡೆದು, ಬಡಿದು ಅವನ ಬಳಿಯಲ್ಲಿರುವ ಬಟ್ಟೆ, ಬಂಗಾರ ನಗ ನಾಣ್ಯಗಳನ್ನೆಲ್ಲ ಕಸಿದುಕೊಂಡು ತಮ್ಮ ತಮ್ಮಲ್ಲಿಯೇ ಹಂಚಿಕೊಂಡರು. ಉರ್ವೀಷವಿನ ಪಾಲಿಗೆ ಬೆಲ್ಲ ತುಂಬಿದ ಚಕ್ಕಡಿಯು ಬಂದಿತು. ಆ ಬೆಲ್ಲದ ಬಂಡಿಯನ್ನು ಅವರ ಮಿತ್ರ ಚೋರರು ಇವನ ಪಾಲಿಗೆ ಬಿಟು ಹೋದ ಬಳಿಕ ಉರ್ವೀಷುವಿಗೆ ಪರಮಾನಂದವಾಯಿತು. ತನ್ನೊಬ್ಬನ ಪಾಲಿಗೆ ಬಂದ ಆ ಬಂಡಿ ತುಂಬ ಬೆಲ್ಲವನ್ನು ಯಾರಿಗಾದರೂ ಮಾರಿ ಹಣಗಳಿಸಬಹುದೆಂದು ಲೆಕ್ಕಹಾಕಿದ. ಆದರೆ ಅಷ್ಟರಲ್ಲಿ ಅವನಿಗೆ ತಾನು ಇದೀಗ ಕೆಲದಿನಗಳ ಹಿಂದೆ ಬಂಡಿಯನ್ನು ಭಗವಂತನಿಗೆ

ದಾನ ನೀಡಿ ಬಂಡಿಯ ಬಳಕೆಯನ್ನೇ ಸ್ವಯಂಪ್ರೇರಣೆಯಿಂದ ಬಿಟ್ಟಿದ್ದು ನೆನಪಿಗೆ ಬಂದಿತು. ಕೂಡಲೇ ಅವನು ಇದನ್ನು ಯಾರಾದರೂ ಬ್ರಾಹ್ಮಣನಿಗೆ ಕೊಟ್ಟು ಬಿಡಬೇಕು ಎಂದು ನಿರ್ಧರಿಸಿದ. ಆದರಂತೆ ಯೋಗ್ಯನಾದ ಒಬ್ಬ ವಿಪ್ರನನ್ನು ಹುಡುಕಿ ಬೆಲ್ಲದುಂಬಿದ ಆ ಬಂಡಿಯನ್ನು ಇಡಿಯಾಗಿಯೇ ದಾನ ಕೊಟ್ಟು ಕೈ ಮುಗಿದ. ಅವನ ಈ ದಾನದಿಂದ ಶ್ರೀಹರಿಯು ಅವನ ಮೇಲೆ ಪ್ರೀತನಾಗಿ ಅವನ ಹಿಂದಿನ ಪಾಪಗಳನ್ನೆಲ್ಲ ಪರಿಹರಿಸಿದ.

ಬೆಲ್ಲದ ಬಂಡಿಯನ್ನು ದಾನಕೊಟ್ಟು ಆ ಉರ್ವೀಷುವು ಕಾಡಿನಲ್ಲಿರುವ ತನ್ನ ಮನೆಗೆ ತಿರುಗಿ ಹೊರಟಾಗ ಪೌರ ಜನರೆಲ್ಲರೂ ಅವನನ್ನು ನೋಡಿದರು. ಪುರ ಪ್ರವೇಶ ಮಾಡಬಾರದು ಎಂದು ರಾಜಾಜ್ಞೆ ಇದ್ದರೂ ಈ ಕಳ್ಳನು ನಗರದಲ್ಲಿ ಹೊಕ್ಕದ್ದನ್ನು ಕಂಡು ಎಲ್ಲರೂ ಸೇರಿ ಅವನನ್ನ ಕಲ್ಲು ಕಟ್ಟಿಗೆಗಳಿಂದ ಕಠೋರವಾಗಿ ಹೊಡೆದರು. ಬಹುಜನರ ಆ ಪ್ರಹಾರಗಳನ್ನು ತಾಳಲಾರದೇ ಉರ್ವೀಷುವು ಅಲ್ಲಿಯೇ ಮರಣ ಹೊಂದಿದ.

ಕೂಡಲೇ ಬೆಲ್ಲದ ಬಂಡಿಯನ್ನು ಭಗವಂತನಿಗೆ ಭಕ್ತಿಯಿಂದ ಸಮರ್ಪಿಸುವ ಉದ್ದೇಶದಿಂದ ಓರ್ವ ಬಡ ಬ್ರಾಹ್ಮಣನಿಗೆ ನೀಡಿದ್ದರ ಪುಣ್ಯ ಪ್ರಭಾವದಿಂದ ಉರ್ವೀಷುವನ್ನು ಕರೆಯಲು ವೈಕುಂಠ ಲೋಕದಿಂದ ವಿಮಾನವು ಬಂದಿತು. ಬೆಲ್ಲದ ಚಕ್ಕಡಿಯ ದಾನ ಪ್ರಭಾವದಿಂದ ಉರ್ವೀಷುವು ವಿಮಾನಾರೂಢನಾಗಿ ಹರಿ ಸಾನ್ನಿಧ್ಯವನ್ನು ಹೊಂದಿದ.

**ವೇದವ್ಯಾಸ:-** ಯಾವುದಾದರೂ ಉಪಾಯದಿಂದ ಹರಿಯಲ್ಲಿ ಭಕ್ತಿಮಾಡಿದ ಮನುಷ್ಯನು ಹಂಸವು ನೀರಿನಲ್ಲಿ ತೇಲುವಂತೆ ಸಂಸಾರ ಸಾಗರವನ್ನು ಲೀಲೆಯಿಂದ ದಾಟುತ್ತಾನೆ, ಯಾವುದಾದರೊಂದು ವಸ್ತುವನ್ನು ಶ್ರೀಹರಿಯ ಉದ್ದೇಶದಿಂದ ಕೊಟ್ಟು ಅದನ್ನು ತಾನು ಬಿಟ್ಟು ಬಿಡಬೇಕು. ಅದರಿಂದ ಹರಿಪ್ರೀತಿ ಹರಿಪದ ಪ್ರಾಪ್ತಿ ಎರಡೂ ಆಗುತ್ತವೆ.

ತನಗೆ ಒಳ್ಳೇ ಇಷ್ಟವಾದ ವಸ್ತುವನ್ನು ಆಹಾರ ಪದಾರ್ಥಗಳನ್ನು ದೇವರಿಗೆ ಸಮರ್ಪಣೆ ಮಾಡದೇ ತಿನ್ನಬಾರದು. ಶ್ರೀಹರಿಗೆ ಅದನ್ನು ನೈವೇದ್ಯ ತೋರಿಸಿ ತಿಂದರೆ ಮಹಾಪುಣ್ಯ ಪ್ರಾಪ್ತಿ. ಹಾಗೆಯೇ ತಿಂದರೆ ಮಹಾಪಾಪ ಪ್ರಾಪ್ತಿ. ಈ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಸರ್ವಜನಿ ಎಂಬ ಹೆಸರಿನ ಒಬ್ಬ ಶ್ರೇಷ್ಠ ಬ್ರಾಹ್ಮಣ. ಅವನು ಹುಟ್ಟಿದ ವಂಶ ಶುದ್ಧ. ಸ್ವಯಂ ಆ ಬ್ರಾಹ್ಮಣ ಶಾಂತ, ದಾಂತ, ದಯಾಳು, ದೇವ ಬ್ರಾಹ್ಮಣ ಪೂಜಕ. ಜಿತೇಂದ್ರಿಯ, ಸತ್ಯವಾದಿ. ಎಂದೂ ಯಾವ ಪ್ರಾಣಿಯನ್ನೂ ಅವನು ಹಿಂಸಿಸುತ್ತಿರಲಿಲ್ಲ. ಪ್ರತಿದಿನವೂ ದೇವರ ಪೂಜೆ, ದಾನ, ಧ್ಯಾನ, ಮುಂತಾದ ವಿಹಿತಕರ್ಮಗಳನ್ನು ತಪ್ಪದೇ ಆಚರಿಸುತ್ತಿದ್ದ. ಏಕಾದಶೀ ವ್ರತವನ್ನು ಅನೂಚಾನವಾಗಿ ಹರಿಸ್ಮರಣೆಗೈದು ಆಚರಿಸುತ್ತಲಿದ್ದ.

ಒಂದು ದಿನ ಅವನು ತನ್ನ ಕನಸಿನಲ್ಲಿಯೇ ಕೇಶವನನ್ನು ಕಂಡ. ಪೀತಾಂಬರ ಉಟ್ಟು ಕರ್ಣಕುಂಡಲ ಕಿರೀಟಾದಿಗಳನ್ನು ತಲೆಯ ಮೇಲೆ ಇಟ್ಟು ಕೊರಳಲ್ಲಿ ಕೌಸ್ತುಭ, ವನಮಾಲಾ, ವೈಜಯಂತೀಗಳನ್ನು ಹಾಕಿಕೊಂಡು ಚತುರ್ಭುಜನಾಗಿ, ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ ಶ್ರೀಹರಿ ಸಮಸ್ತ ಲಕ್ಷಣಗಳಿಂದ ಒಡಗೂಡಿ ಆ ಸರ್ವಜನಿ ಬ್ರಾಹ್ಮಣನಿಗೆ ಸ್ವಪ್ನ ಸಂದರ್ಶನವನ್ನು ನೀಡಿದ. ಅವನನ್ನು ಕಂಡು ಆ ಬ್ರಾಹ್ಮಣ ಹರ್ಷದಿಂದ ಪುಲಕಿತನಾಗಿ ಕೈ ಮುಗಿದು ಪ್ರಾರ್ಥನೆ ಸಲ್ಲಿಸಿದ.

**ತುಭ್ಯಂ ನಮೋಽಸ್ತು ಜಗತಃ ಸಕಲಸ್ಯ ಭರ್ತ್ರೇ**
**ಸಲ್ಲೋಕಶೋಕಭಯರೋಗವಿನಾಶನಾಯ ।**
**ನಾರಾಯಣಾಯ ಕಮಲಾಹೃದಯ ಪ್ರಿಯಾಯ**
**ಧರ್ಮಾರ್ಥಕಾಮ ಪರಮಾಮೃತದಾಯ ತುಭ್ಯಂ ॥**

ಸಕಲ ಜಗತ್ತನ್ನು ಪೋಷಣ ಮಾಡುವ, ಎಲ್ಲ ಸಜ್ಜನರ ದುಃಖ, ಭಯ, ರೋಗಗಳನ್ನು ಪರಿಹರಿಸುವ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ನೀಡುವ ಲಕ್ಷ್ಮೀ ರಮಣನಾದ ನಾರಾಯಣನೇ ನಿನಗೆ ನನ್ನ ನಮಸ್ಕಾರ.

**ಪಾಪಾನಿಚೈವ ಸಕಲಾನಿ ಮಯಾ ಕೃತಾನಿ ಮತ್ತೇನ ಮೋಹವಶಗೇನ ಸದಾ ಮುರಾರೇ ।**
**ತಸ್ಮಾದ್ ಬಿಭೇಮಿ ಜಗದಂಬುನಿಧೇರ್ಗಭೀರಾತ್ ಮಾಮುದ್ಧರಸ್ವ ನಿಜ ಭಕ್ತಿತರೀಂ ಪ್ರದಾಯ ॥**

ಮುರಾರಿಯೇ, ಮದೋನ್ಮತ್ತನಾದ ನಾನು ಮೋಹವಶನಾಗಿ ಪಾಪ ಎಂದು ಎಷ್ಟು ಇರುವವೋ ಅವೆಲ್ಲವನ್ನೂ ಮಾಡಿಬಿಟ್ಟೆ. ಆದುದರಿಂದ ಈ ಪ್ರಪಂಚದ ಸಾಗರದಿಂದ ಪಾರಾಗುವದು ಹೇಗೆ ಎಂದು ನಿಂತಿದ್ದೇನೆ. ನಿನ್ನ ಭಕ್ತಿಯೆಂಬ ನೌಕೆಯನ್ನು ಕೊಟ್ಟು ನನ್ನನ್ನು ಪಾರುಮಾಡು.

**ಜಾನಾಮಿ ಯದ್ಯಪಿ ಹರೇ ದುರಿತಂ ಮನುಷ್ಯೋ ವ್ಯಾಮೋಹ ಮಾಶು ಚ ಲಭೇ ಭುವಿಕೈಟಭಾರೇ ।**
**ಪಾಪಂ ತಥಾಽಪಿ ಚ ಮುದಾ ಸತತಂ ಕರೋಮಿ ತಸ್ಮಾನ್ನಕೋಽಪ್ಯಹಮಿವಾಸ್ತಿ ಜನೋ ವಿಮೂಢಃ ॥**

ಇದು ಪಾಪದ ಕೆಲಸ, ನಿಷಿದ್ಧ ಕಾರ್ಯ ಎಂದು ನಾನು ಚೆನ್ನಾಗಿಯೇ ತಿಳಿದಿದ್ದೇನೆ. ಆದರೂ ನಾನು ಮನುಷ್ಯನಲ್ಲವೇ, ಮೋಹ ಬಂದು ಬಿಡುವುದು. ತಿಳಿದು ತಿಳಿದೂ ಪಾಪ ಕಾರ್ಯವನ್ನು ಮೋಹದಿಂದ ಮಾಡುತ್ತಲೇ ಇರುತ್ತೇನೆ. ನನ್ನಂಥ ಮೂಢರು ಯಾರೂ ಇರಲಿಕ್ಕಿಲ್ಲ.

**ತ್ವತ್ಪಾದಪದ್ಮ ಯುಗಲಂ ಪರಮಾಮೃತಸ್ಯ**
**ಸ್ಥಾನಂ ವಿಹಾಯ ಮಮಚಿತ್ತಮಧುವ್ರತೋಽಯಂ ।**
**ನಾರೀ ಮುಖಂ ವ್ರಜತಿ ದೇವಮೃತಿಪ್ರದಯತ್**
**ಶ್ಲೇಷ್ಮಪ್ರಕೀರ್ಣ ಮುನಿಶಂ ಕಮಲಭ್ರಮೇಣ ॥**

ಪರಮಾಮೃತ ಎನಿಸಿದ ಮೋಕ್ಷಸುಖವನ್ನು ಕೊಡುವ ನಿನ್ನ ಪಾದವೆಂಬ ಕಮಲವನ್ನು ಬಿಟ್ಟು ನನ್ನ ಮನಸ್ಸೆಂಬ ಭ್ರಮರವು ಮರಣವನ್ನು ಕೊಡುವ ಬಗೆಬಗೆಯ ಹೊಲಸು, ಕೀವು, ರಕ್ತಗಳಿಂದ ತುಂಬಿದ ನಾರಿಯ ಮುಖವನ್ನು ಕಮಲದ ಭ್ರಾಂತಿಯಿಂದ ಹೊಂದುತ್ತದೆ.

**ಪಾಣಿಃ ಪ್ರದಾನರಹಿತೋಽನೃತಭಾಷಿವಕ್ತ್ರಂ ಕರ್ಣೌ ಚ ಪಾಪ ಶ್ರವಮಾಯ ಸದ್ದೈವದಕ್ಷೌ ।**
**ದೋಷಾನಿಮಾನ್ ಮಮ, ಹರೇ ಹರಸೇವಕಸ್ಯ ಯಸ್ಮಾನ್ನು ನಾಥ ಶರಣಾಗತ ದೋಷ ಹಂತಾ ॥**

ಒಡೆಯನೇ, ನನ್ನ ಕೈಗೆ ದಾನಕೊಟ್ಟು ಗೊತ್ತಿಲ್ಲ. ನನ್ನ ಮುಖಕ್ಕೆ ಸತ್ಯ ಮಾತನಾಡಿ ಅಭ್ಯಾಸವಿಲ್ಲ. ಸರ್ವದಾ ಸುಳ್ಳನ್ನೇ ನನ್ನ ಮುಖ ನುಡಿಯುವುದು. ಪಾಪದ ಸುದ್ದಿ ಕೇಳಲು ನನ್ನ ಕಿವಿ ಯಾವಾಗಲೂ ತೆರೆದಿರುತ್ತದೆ. ಹರಿಯೇ ನಿನ್ನ ಸೇವಕನಾದ ನನ್ನ ಈ ಎಲ್ಲ ದೋಷಗಳನ್ನು ನೀನೇ ಪರಿಹರಿಸು. ಶರಣಾಗತರ ದೋಷಗಳನ್ನು ಪರಿಹರಿಸುವ ಕರುಣಾಶಾಲಿಯಾದ ಜಗನ್ನಾಥನಲ್ಲವೇ ನೀನು.

ಹೀಗೆ ಸ್ವಪ್ನದಲ್ಲಿ ಭಗವಂತನನ್ನು ಕೊಂಡಾಡಿದ ಸರ್ವಜನಿ ಬ್ರಾಹ್ಮಣನ ಈ ಸ್ತೋತ್ರದಿಂದ ಪ್ರಸನ್ನನಾಗಿ ಶ್ರೀಹರಿಯು ಹೇಳಿದ.

**ಶ್ರೀಹರಿ:-** ವಿಪ್ರೇಂದ್ರ, ನಿನ್ನ ಭಕ್ತಿಯಿಂದ ನಾನು ಪ್ರಸನ್ನನಾಗಿದ್ದೇನೆ. ನೀನು ಬೇಗನೇ ಭಾಗ್ಯೋದಯವನ್ನು ಕಾಣು. ಹಿಂದೆ ನೀನು ಮಹಾ ಪಾಪಿಷ್ಠನಾಗಿದ್ದರೂ ನಾನು ನಿನ್ನನ್ನು ಉದ್ಧರಿಸಿದೆ. ಆದುದರಿಂದ ನೀನು ನನ್ನ ಭಕ್ತನಾಗಿರುವೆ. ಇನ್ನು ಮೇಲೆ ನಿನಗೆ ಯಾವ ಆಪತ್ತೂ ಬಾರದು.

**ಸರ್ವಜನಿ:-** ವಿಷ್ಣುವೇ, ನಾನು ಹಿಂದೆ ಯಾರು? ಏನು ಆಗಿದ್ದೆ? ಯಾವ ಪಾಪ ಮಾಡಿದೆ? ನೀನು ಹೇಗೆ ನನ್ನನ್ನು ಉದ್ಧಾರ ಮಾಡಿದೆ? ಈಗ ನಾನು ಬ್ರಾಹ್ಮಣನಾಗಿ ಹೇಗೆ ಹುಟ್ಟಿದೆ? ಇದೆಲ್ಲವನ್ನೂ ಹೇಳು.

**ಕೇಶವ:-** ಬ್ರಾಹ್ಮಣೋತ್ತಮ, ನೀನು ಹಿಂದೆ ನಿನ್ನ ಕರ್ಮ ವಿಪಾಕದಿಂದ ಪಕ್ಷಿಗಳ ವಂಶದಲ್ಲಿ ಹುಟ್ಟಿದ್ದೆ. ಹಕ್ಕಿಯಾಗಿ ಹಸಿವೆ, ಬಾಯಾರಿಕೆಗಳಿಂದ ಕಸಿವಿಸಿಗೊಂಡು ಆಚೀಚೆ ಓಡಾಡುತ್ತಿದ್ದೆ. ಕೈಗೆ ಸಿಕ್ಕ ಕ್ರಿಮಿಕೀಟಗಳನ್ನು ಕೊಂದು ತಿನ್ನುತ್ತಿದ್ದೆ. ಹರಿವ ತೊರೆಯ ನೀರನ್ನು ಕುಡಿಯುತ್ತಿದ್ದೆ. ಒಂದು ದಿನ ಕುಲಭದ್ರ ಎಂಬ ಓರ್ವ ಬ್ರಾಹ್ಮಣ ಒಂದು ನದೀ ತೀರದಲ್ಲಿ ನನ್ನ ಪೂಜೆ ಮಾಡಿ ಅನ್ನ ನೈವೇದ್ಯ ತೋರಿಸಿದ. ಪೂಜೆ ಮುಗಿಸಿ ನೈವೇದ್ಯಕ್ಕಿಟ್ಟು ಅನ್ನವನ್ನು ತುಸು ತನ್ನ ಕೈಯಲ್ಲಿ ತೆಗೆದುಕೊಂಡ. ಉಳಿದುದನ್ನು ಅಲ್ಲಿಯೇ ಬಿಟ್ಟು ಮನೆಗೆ ತೆರಳಿದ. ಹಸಿವು, ಬಾಯಾರಿಕೆಗಳಿಂದ ಬಳಲಿ ಬೆಂಡಾದ ನೀನು ಅದನ್ನು ನೋಡಿದೆ ಕೂಡಲೇ ಗಿಡದಿಂದ ಹಾರಿ ಕೆಳಗೆ ಬಂದು ನನಗೆ ನೈವೇದ್ಯವಿಟ್ಟ ಅನ್ನವನ್ನೆಲ್ಲ ತಿಂದೆ, ಅದರಿಂದ ನಿನ್ನ ಪಾಪಗಳೆಲ್ಲವೂ ಕೂಡಲೇ ಪರಿಹೃತ ಆದವು. ಮುಂದೆ ಕೆಲ ದಿನಗಳ ಬಳಿಕ ನೀನು ಮರಳಿ ಬಂದೆ. ನನ್ನ ನೈವೇದ್ಯದ ಅನ್ನದ ಅಗಳನ್ನು ತಿಂದದ್ದರಿಂದ ಈಗ ನೀನು ಪರಿಶುದ್ಧವಾದ ಬ್ರಾಹ್ಮಣ ಕುಲದಲ್ಲಿ ಹುಟ್ಟಿರುವಿ. ನನ್ನಲ್ಲಿ ದೃಢತರವಾದ ಭಕ್ತಿಯೂ ಈಗ ನಿನ್ನಲ್ಲಿ ಹುಟ್ಟಿದೆ. ಈಗ ನನ್ನನ್ನು ಕರ್ಮಯೋಗದಿಂದ ಆರಾಧಿಸಿ, ಜ್ಞಾನ ಪಡೆದು ಮುಂದೆ ನನ್ನ ಪ್ರಸಾದದಿಂದ ನನ್ನ ಸ್ಥಾನವನ್ನು ಹೊಂದುವೆ. ನಾನು ಯಾರ ಮೇಲೆ ತುಷ್ಟನಾಗಿರುವೆನೋ ಅವನು ಪಾಪಾತ್ಮನಾಗಿದ್ದರೂ ಮುಕ್ತಿಯನ್ನು ಹೊಂದುತ್ತಾನೆ. ನಾನು ಯಾರ ಮೇಲೆ ರುಷ್ಟನಾಗಿರುವೆನೋ ಅವನು ಪುಣ್ಯಾತ್ಮನಾಗಿದ್ದರೂ ಅವನಿಗೆ ಪಾಪವೇ ಬರುತ್ತದೆ. ನರಕವೇ ಆಗುತ್ತದೆ.

**ಸರ್ವಜನಿ:-** ಸ್ವಾಮಿ ಹಾಗಾದರೆ ನೀನು ಏನು ಮಾಡಿದರೆ ತುಷ್ಟ ಆಗುವಿ? ಏನು ಮಾಡಿದರೆ ರುಷ್ಟನಾಗುವಿ? ನಿನಗೆ ರೋಷ-ತೋಷಗಳನ್ನುಂಟು ಮಾಡುವ ಕಾರ್ಯಗಳು ಯಾವುವು? ಅದನ್ನು ಹೇಳು.

**ಶ್ರೀಹರಿ:-** ಯಾರು ಎಲ್ಲ ಪ್ರಾಣಿಗಳ ಮೇಲೆ ದಯೆಯನ್ನು ತೋರುವರೋ, ಯಾರ ಮನದಲ್ಲಿ ಅಹಂಕಾರವು ಅಂಕುರಿಸಿರುವದಿಲ್ಲವೋ ಅವನ ಮೇಲೆ ನಾನು ಸಂತುಷ್ಟ

ನಾಗಿರುತ್ತೇನೆ. ಧರ್ಮಕರ್ಮಗಳನ್ನೆಲ್ಲ ಹರಿಪ್ರೀತ್ಯರ್ಥವಾಗಿಯೆ ಮಾಡಿ ನನಗೆ ಯಾರು ಸಮರ್ಪಿಸುವರೋ, ಉಪಕಾರ ಮಾಡದಿರುವವರಿಗೂ ಯಾರ ದಾನ ನೀಡುವರೋ, ಕೊಟ್ಟ ವಚನವನ್ನು ಯಾರು ಪರಿಪಾಲಿಸುವರೋ ಪರಮಾತ್ಮನು ಸರ್ವಪ್ರಾಣಿಗಳಲ್ಲಿ ಇರುತ್ತಾನೆ ಎಂದು ತಿಳಿದು ಯಾರು ಪರರ ಹಿಂಸೆಯನ್ನು ಮಾಡದೇ ಇರುವರೋ, ಯಾರು ಗೋ ಬ್ರಾಹ್ಮಣ ಹಿತೈಷಿಗಳೋ, ಅವರ ಮೇಲೆ ನಾನು ಯಾವಾಗಲೂ ತುಷ್ಟನಾಗಿರುತ್ತೇನೆ.

ಯಾರು ಪರರನ್ನು ಹಿಂಸಿಸುವದರಲ್ಲಿಯೇ ಆಸಕ್ತರೋ, ಎಲ್ಲ ಪ್ರಾಣಿಗಳಲ್ಲೂ ದಯಾ ರಹಿತರೋ, ಅಹಂಕಾರಿಯೋ ಅವನ ಮೇಲೆ ನಾನು ರುಷ್ಟನಾಗಿರುತ್ತೇನೆ. ಸುಳ್ಳು ಮಾತಾಡುವವರು, ಪರನಿಂದೆ ಮಾಡುವವರು, ಪಂಡಿತರ ವೃತ್ತಿಚ್ಛೇದ ಮಾಡುವವರು, ನನ್ನ ಕೋಪಕ್ಕೆ ಗುರಿಯಾಗುತ್ತಾರೆ. ಅಂಥವರನ್ನು ನನ್ನ ಶತ್ರುಗಳೆಂದೇ ನಾನು ತಿಳಿಯುತ್ತೇನೆ. ಯಾವ ತಪ್ಪು ಇಲ್ಲದೇ ತಂದೆ, ತಾಯಿ, ಹೆಂಡತಿ, ಅಣ್ಣ, ತಮ್ಮ, ಅಕ್ಕ ತಂಗಿಯರನ್ನು ಬಿಟ್ಟು ಬಿಡುತ್ತಾನೋ ಅವನು ನನ್ನ ಶತ್ರು. ತಂದೆತಾಯಿಗಳನ್ನು ಬಯ್ಯುವವನು ಗುರು ನಿಂದೆ ಮಾಡುವವನೂ ಉಪವನಗಳನ್ನು ಹಾಳುಗೈಯುವವ ಜಲಾಶಯಗಳನ್ನು ನಾಶಪಡಿಸುವವ, ಪರಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡುವವ, ನನ್ನ ವೈರವನ್ನೇ ಸಂಪಾದಿಸುತ್ತಾನೆ. ದೇವರನ್ನು ದ್ವೇಷ ಮಾಡುವವ ಅನಾಥರ ಹಣವನ್ನು ಎತ್ತಿ ಹಾಕುವ ವಿಶ್ವಾಸಘಾತಕರ ಮೇಲೆ ನಾನು ಯಾವಾಗಲೂ ರುಷ್ಟನಾಗಿರುತ್ತೇನೆ. ಏಕಾದಶಿಯಲ್ಲಿ ಉಣ್ಣುವವರೂ, ವೇದನಿಂದಕರೂ, ನೆಲ್ಲಿಗಿಡ ಕಡಿಯುವರೂ ಶೂದ್ರಸ್ತ್ರೀಯೊಡನೆ ಸಹವಾಸ ಮಾಡುವವರೂ, ಮಿತ್ರದ್ರೋಹಿಗಳೂ ಹಗಲು ಹೊತ್ತು ಕಾಮುಕ ವ್ಯಾಪಾರ ನಡೆಸುವವರೂ, ಅಮಾವಾಸ್ಯೆ ದಿನ ಎರಡು ಹೊತ್ತು ಊಟ, ಮಾಂಸ ಭೋಜನ, ಮೈಥುನ, ತೈಲಭಕ್ಷಣ ಮಾಡುವವರ ಮೇಲೆ ನಾನು ಯಾವಾಗಲೂ ರುಷ್ಟನಾಗಿರುತ್ತೇನೆ. ಮತ್ತು ವಿಷ್ಣುಭಕ್ತರನ್ನು ನಿಂದಿಸುವವರ ಮೇಲೆ ನಾನು ಯಾವಾಗಲೂ ರುಷ್ಟನಾಗಿಯೇ ಇರುತ್ತೇನೆ.

ಹೀಗೆ ಕೇಶವನು ತನಗೆ ರೋಷತೋಷಕರವಾದ ಕಾರ್ಯಕಲಾಪಗಳನ್ನು ತಿಳಿಸಿ ಹೇಳಿ ಅಲ್ಲಿಂದ ಅದೃಶ್ಯನಾದ.

**ವೇದವ್ಯಾಸ:-** ಶ್ರೀಹರಿಯು ಹೇಳಿದಂತೆ ಸರ್ವಜನಿ ಬ್ರಾಹ್ಮಣನು ತನ್ನ ಉಳಿದೆಲ್ಲ ಕಾರ್ಯಗಳನ್ನು ಬಿಟ್ಟು ಅತ್ಯಂತ ಭಕ್ತಿಯಿಂದ ಭಗವಂತನು ಹೇಳಿದ, ಅವನಿಗೆ ಸಂತೋಷಕರವಾದ ಕಾರ್ಯಗಳಲ್ಲಿ ತೊಡಗಿದ.

ಜೈಮಿನಿಯೇ, ಆದುದರಿಂದ ಮನುಷ್ಯನು ದುರ್ಲಭವಾದ ಮಾನವ ಜನ್ಮ ಹೊಂದಿ ಭಕ್ತಿಯಿಂದ ಹರಿಪೂಜೆಯನ್ನು ಮಾಡಬೇಕು. ದುಃಖಪೂರ್ಣವಾದ ಈ ಸಂಸಾರ ಸಮುದ್ರವನ್ನು ಲೀಲೆಯಿಂದ ದಾಟಬೇಕೆಂದು ಯಾರು ಅಪೇಕ್ಷಿಸುವರೋ, ಅವರು ನಿತ್ಯವೂ ಭಕ್ತಿಯಿಂದ ವಾಸುದೇವನ ಪೂಜೆಯನ್ನು ಮಾಡಬೇಕು. ಹಾಗೂ ತಾನು ಮಾಡುವ ಕಾರ್ಯವೆಲ್ಲವೂ ಹರಿಪೂಜೆಯೆಂದು ಭಗವಂತನಿಗೆ ಸಮರ್ಪಣಗೈಯಬೇಕು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಉರ್ವೀಶು ಬ್ರಾಹ್ಮಣನ ಕಥಾನಕ ಎಂಬ ಹತ್ತೊಂಬತ್ತನೇಯ ಅಧ್ಯಾಯ ಮುಗಿದುದು*

—o—

## ದಾನದ ಮಾಹಾತ್ಮ

ಅಧ್ಯಾಯ - ೨೦

**ವೇದವ್ಯಾಸ:-** ಜೈಮಿನಿ ಈಗ ದಾನದ ಮಹಿಮೆಯನ್ನು ಹೇಳುವೆ ಕೇಳು. ದಾನ, ತಪಸ್ಸು, ಇವೆರಡೂ ಶ್ರೀಹರಿಯನ್ನು ಒಲಿಸಿಕೊಳ್ಳಲು ಮುಖ್ಯ ಸಾಧನ. ಅದರಲ್ಲಿ ತಪಸ್ಸಿಗಿಂತ ದಾನವೇ ಶ್ರೇಷ್ಠ.

**ತಪಃ ಕೃತಯುಗೇ ಶ್ರೇಷ್ಠಂ ತ್ರೇತಾಯುಗಂ ಧ್ಯಾನಮೇಽವ ಚ ।**
**ಸಪರ್ಯಾ ದ್ವಾಪರೇ ಶ್ರೇಷ್ಠಾ ದಾನಂ ಶ್ರೇಷ್ಠಾ ಕಲೌ ಯುಗೇ ॥**

ಕೃತಯುಗದಲ್ಲಿ ತಪಸ್ಸು, ತ್ರೇತಾದಲ್ಲಿ ಧ್ಯಾನ, ದ್ವಾಪರದಲ್ಲಿ ಶ್ರೀಹರಿಯ ಪೂಜೆ ಕಲಿಯುಗದಲ್ಲಿ ದಾನ ಶ್ರೇಷ್ಠ. ಆದುದರಿಂದ ಕಲಿಯುಗದಲ್ಲಿ ಕಮಲಾಪತಿಯ ಪ್ರೀತಿ ಸಂಪಾದಿಸಬೇಕಾದರೆ ವಿವೇಕಿಗಳಾದವರು ತಮ್ಮ ಶಕ್ತ್ಯಾನುಸಾರ ದಾನ ನೀಡಬೇಕು. ದಾನಕ್ಕಾಗಿಯೇ ಗಳಿಸಬೇಕು. ಗಳಿಸಿದ ಧನವನ್ನು ದಾನಧರ್ಮದಲ್ಲಿಯೇ ವಿನಿಯೋಗಿಸಬೇಕು.

ಧನವಿದ್ದರೂ ಇನ್ನೊಬ್ಬರಿಗೆ ಕೊಡದೇ, ತಾನೂ ತಿನ್ನದೇ ಇದ್ದರೆ, ಅಂಥವರು ಮಹಾದರಿದ್ರರೆಂದು ತಿಳಿಯಬೇಕು. ದ್ರವ್ಯವು ಯಾರ ಹಿಂದೆ ಬರುತ್ತದೆ? ಮನುಷ್ಯನು ಮರಣ ಹೊಂದಿದ ಬಳಿಕ ಅವನು ಇಲ್ಲಿ ದಾನ ಕೊಟ್ಟಿದ್ದು ಅವನ ಜೊತೆಗೆ ಬರುತ್ತದೆ. ದಾನ ಕೊಟ್ಟು ಇಲ್ಲಿ ಯಾರು ದರಿದ್ರರಾಗುವರೋ ಅವರು ಪರಲೋಕದಲ್ಲಿ ಶಾಶ್ವತ ಸುಖ ಅನುಭವಿಸುತ್ತ ಮಹಾ ಸಂಪತ್ತಿಗೆ ಒಡೆಯರಾಗಿರುವರು. ಜಿಪುಣತನದಿಂದ ಇಲ್ಲಿ ಹಣ ಕೂಡಿಟ್ಟವರು ಕೊನೆಯವರೆಗೂ ಮಹಾದುಃಖ ಅನುಭವಿಸಬೇಕಾಗುವುದು. ಆದುದರಿಂದ ಮನುಷ್ಯನು ಪ್ರತಿದಿನ ಕೈಲಾದಷ್ಟು ದಾನ ಮಾಡುತ್ತಲೇ ಇರಬೇಕು.

ಎಲ್ಲ ದಾನಗಳಲ್ಲಿ ಅನ್ನದಾನ, ಜಲದಾನ ಎರಡು ಅತ್ಯಂತ ಶ್ರೇಷ್ಠ. ಅನ್ನವಿಲ್ಲದೇ ಯಾವ ಪ್ರಾಣಿಯೂ ಬದುಕಲಾರದು. ಆದುದರಿಂದ ಅನ್ನದಾನ ಮಾಡಿದವನಿಗೆ ಪ್ರಾಣದಾನ ಮಾಡಿದಷ್ಟು, ಬುದಕನ್ನೇ ನೀಡಿದಷ್ಟು ಪುಣ್ಯ. ಅಂಥವನಿಗೆ ಸರ್ವಸ್ವದಾನದ ಪುಣ್ಯ ಬರುತ್ತದೆ.

ಅನ್ನದಾನದಷ್ಟೇ ಪುಣ್ಯಪ್ರದ ಜಲದಾನವು ಕೂಡ. ನೀರಿಲ್ಲದೇ ಅನ್ನ ಮನುಷ್ಯನ ಗಂಟಲಲ್ಲಿ ಇಳಿಯಲಾರದು. ಆದುದರಿಂದಲೇ ನೀರನ್ನು ಪ್ರಾಚೀನರು 'ಜೀವನ' ಎಂದು ಕರೆದಿದ್ದಾರೆ. ಆ ಜೀವನವನ್ನು ದಾನ ಮಾಡಿದವ ಜೀವದಾನ ಮಾಡಿದಷ್ಟೇ ಪುಣ್ಯವನ್ನು ಪಡೆಯುತ್ತಾನೆ. ಹಸಿವು, ಬಾಯಾರಿಕೆ, ಇವುಗಳನ್ನು ನೀಗಿಸಿ ಮನುಷ್ಯನಿಗೆ ಜೀವನ ಚೈತನ್ಯವನ್ನು ನೀಡುವ ಅನ್ನದಾನ, ಜಲದಾನಗಳು ಮಾನವ ಮಾಡುವ ಎಲ್ಲ ದಾನಗಳಿಗಿಂತಲೂ ಶ್ರೇಷ್ಠ. ಸದೃಷ್ಟಾಂತವಾಗಿ ಈ ಅನ್ನದಾನ, ಜಲದಾನಗಳ ಮಹಿಮೆಯನ್ನು ಹೇಳುವೆ ಕೇಳು.

ಹಸ್ತಿನಾವತಿ ಪಟ್ಟಣದಲ್ಲಿ ಕುಬೇರನಂತೆ ಐಶ್ವರ್ಯಯುಕ್ತನಾದ ಹರಿಶರ್ಮಾ ಎಂಬ ಬ್ರಾಹ್ಮಣನೊಬ್ಬನಿದ್ದ. ಮತ್ತು ಅದೇ ಪಟ್ಟಣದಲ್ಲಿ ರತಿವಿದಗ್ಧಾ ಎಂಬ ಹೆಸರಿನ ವೇಶ್ಯಾ ಸ್ತ್ರೀ ನೆಲೆಸಿದ್ದಳು. ಸೌಂದರ್ಯದಿಂದ ಅವಳು ದೇವತಾಸ್ತ್ರೀಯರನ್ನೇ ಹೋಲುತ್ತಿದ್ದಳು. ಅತ್ಯಂತ ಸುಂದರ ವನಿತೆಯರ ಲಕ್ಷಣಗಳೆಲ್ಲವೂ ಅವಳಲ್ಲಿ ಇದ್ದುದರಿಂದ ಅವಳೊಬ್ಬ ನೆಲಕ್ಕೆ ಇಳಿದು ಬಂದ ಅಪ್ಸರೆ ಎಂದು ಜನ ಭಾವಿಸಿದ್ದರು. ಅದೇ ನಗರದಲ್ಲಿ ಕ್ಷೇಮಂಕರೀ

ಎಂಬ ಹೆಸರಿನ ಬ್ರಾಹ್ಮಣ ವಿಧವೆಯು ವಾಸ ಮಾಡಿದ್ದಳು. ಆ ಕ್ಷೇಮಂಕರಿಯು ಪತಿ ಮರಣ ಹೊಂದಿದ ಬಳಿಕ ಮತಿಗೆಟ್ಟು ವೇಶ್ಯಾವೃತ್ತಿಗೆ ಇಳಿದಳು. ನಿಷಿದ್ಧ ಕಾರ್ಯವನ್ನು ಅವಿವೇಕದಿಂದ ಮಾಡುತ್ತಲೇ ಇದ್ದಳು. ಕಾಲಕ್ರಮದಿಂದ ರತಿವಿದಗ್ಧಾ ಎಂಬ ಚೆಲುವೆಣ್ಣಿಗೂ, ಕ್ಷೇಮಂಕರೀ ಎಂಬ ಬ್ರಾಹ್ಮಣ ವಿಧವೆಗೂ ಒಳ್ಳೇ ಸಖ್ಯವೇರ್ಪಟ್ಟಿತು. ಇಬ್ಬರ ಬದುಕೂ ಇಳುಕಲಿಗೆ ಬಿದ್ದಿತ್ತು. ತಾಳಗೆಟ್ಟ ಬಾಳಿನಲ್ಲಿ, ಆ ಎರಡೂ ಚೆಲೆವೆಣ್ಣುಗಳು ನಗರದ ತರುಣರನ್ನು ವಂಚಿಸಿ ಧನ ಸಂಚಯ ಮಾಡುತ್ತಲಿದ್ದರು. ಒಂದು ದಿನ ರತಿವಿದಗ್ಧೆಯು ತನ್ನ ಗೆಳತಿಯಾದ ಕ್ಷೇಮಂಕರಿಯನ್ನು ಕುರಿತು ಮಾತನಾಡಿದಳು.

**ರತಿವಿದಗ್ಧಾ:-** ಸಖಿ, ನಾನು ನೀನು ಇಬ್ಬರೂ ಸೇರಿ ಈ ಹಸ್ತಿನಾವತಿಯ ಹರೆಯದ ಹುಡುಗರನ್ನೆಲ್ಲ ಸುಲಿದೆವು. ನಮ್ಮ ಚಂಚಲ ನೋಟದಿಂದ ಅನೇಕ ಪೌರರನ್ನು ವಂಚಿಸಿ ಧನಸಂಚಯ ಮಾಡಿದೆವು. ಆದರೆ ಈಗ ನನ್ನ ಮೈಯನ್ನು ಮುಪ್ಪು ಮೂಸಿದೆ. ಚೆಲುವಿನ ಸೆಲೆ ಬತ್ತಿದೆ. ನನ್ನ ಕಾಯದಲ್ಲಿ ಮೊದಲಿನ ಕಳೆಕಾಂತಿಗಳ ಮಿಂಚು, ಮಾಟ ಉಳಿದಿಲ್ಲ. ಈ ಮುಪ್ಪು ಮುಂದೆ ಬರಲಿರುವ ಮರಣದ ನಾಂದಿ ಇದ್ದಂತೆ. ಮೃತ್ಯುದೇವತೆ ನನ್ನ ಹತ್ತಿರವೇ ತಾಂಡವವಾಡುತ್ತಿದ್ದಾಗ ನಾನು ಬದುಕಿ ಇರುವವರೆಗೂ ಯಾವ ಸಾಧನವನ್ನೂ ಮಾಡಿಕೊಳ್ಳಲಿಲ್ಲ. ಧನವನ್ನು ಮಾತ್ರ ಹೇರಳವಾಗಿ ಗಳಿಸಿದೆ. ನನಗೆ ಮಕ್ಕಳು ಇಲ್ಲ. ಅನ್ಯಾಯ, ಕಪಟ, ವಂಚನೆ, ಮುಂತಾದ ವಾಮಮಾರ್ಗದಿಂದಲೂ ಮೈಮಾರಿ ಹಣ ಗಳಿಸುವ ಕಾಮಮಾರ್ಗದಿಂದಲೂ ನಾನು ಕುಬೇರನಷ್ಟು ಐಶ್ವರ್ಯವನ್ನು ಗಳಿಸಿದ್ದೇನೆ. ಅದರಂತೆ ಆದರ ನೂರುಪಟ್ಟು ಪಾಪರಾಶಿಯನ್ನು ಉಡಿಯಲ್ಲಿ ಕಟ್ಟಿಕೊಂಡಿದ್ದೇನೆ. ನಾನು ಬಿದ್ದ ಮರುದಿನ ನನ್ನಲ್ಲಿದ್ದ ಹಣವನ್ನೆಲ್ಲ ಯಾರೋ ದೋಚಿಕೊಂಡು ಹೋಗುವರು. ನಾನು ಗಳಿಸಿದ ಹಣ ಎಷ್ಟೂ ನನ್ನ ಜೊತೆಗೆ ಬರುವುದಿಲ್ಲ. ಆದರೆ ಆ ಹಣವನ್ನು ಗಳಿಸಲಿಕ್ಕಾಗಿ ಮಾಡಿದ ಪಾಪವು ಮಾತ್ರ ಬೆಟ್ಟದಾಕಾರವಾಗಿ ಬೆಳೆದು ನನ್ನನ್ನು ಜನ್ಮಾಂತರಕ್ಕೂ ಅಟ್ಟಿಸಿ ಬರುವುದು. ಆದುದರಿಂದ ನಾನು ಇಷ್ಟು ದಿನ ನನ್ನ ಸೌಂದರ್ಯದ ಸರಕನ್ನು ಮಾರಾಟ ಮಾಡಿ ಗಳಿಸಿದ ಹಣವನ್ನೆಲ್ಲ ದಾನ ಧರ್ಮ ಮಾಡಿ ಕೈ ತೊಳೆದು ಕೊಳ್ಳಬೇಕೆಂದು ಮಾಡಿದ್ದೇನೆ. ನಿನ್ನ ಅಭಿಪ್ರಾಯವೇನು?

**ಕ್ಷೇಮಂಕರಿ:-** ಪ್ರಿಯಸಖಿ, ನೀನು ಹೇಳಿದ್ದೆಲ್ಲ ನಿಜ. ನೀನು ಇಷ್ಟು ದಿನ ನಿನ್ನ ರೂಪಶ್ರೀಯಿಂದ ಗಳಿಸಿದ ಐಶ್ವರ್ಯವನ್ನೆಲ್ಲ ಯಾರಿಗೂ ಕೊಡದೇ ನಿನ್ನಲ್ಲಿಯೇ ಉಳಿಸಿದೆ ಮತ್ತು ಬೆಳೆಸಿದೆ. ಅದರಿಂದ ಈಗ ನಿನಗೆ ದಾನ ಕೊಡುವ ಸದವಕಾಶ ದೊರೆತಿದೆ. ನೀನು ಜಿಪುಣೆಯಾಗಿ ನಿಪುಣೆಯಾದೆ. ಆದರೆ ನಾನು ಮಾತ್ರ ಮೊದಲಿನಿಂದಲೂ ಧಾರಾಳಿ. ಮೈ ಮಾರಿ ಬಂದ ಹಣವನ್ನು ಕೂಡ ಅಂದಂದೇ ಖರ್ಚು ಮಾಡಿಬಿಟ್ಟೆ. ಕಂಡ ಕಂಡ ಭಂಡ ಜನರಿಗೆಲ್ಲ ಕೊಟ್ಟು ಕೈ ತೊಳೆದುಕೊಂಡೆ. ನಾನು ಕಷ್ಟಪಟ್ಟು ಗಳಿಸಿದ ಐಶ್ವರ್ಯವೆಲ್ಲವೂ ಅಸತ್ಪಾತ್ರರಲ್ಲಿ ವಿನಿಯೋಗವಾಯಿತು. ಸತ್ಪಾತ್ರದಲ್ಲಿ ದಾನ ಮಾಡಲು ನನ್ನಲ್ಲಿ ಏನೂ ಉಳಿದಿಲ್ಲ. ನೀನು ಪುಣ್ಯವಂತೆ. ಈಗ ಹಣವಂತೆ. ದಾನ ಈಗ ನೀಡುವದರಿಂದ ಗುಣವಂತೆ. ನಿನಗೆ ಒಳ್ಳೆ ಬುದ್ಧಿ ಹುಟ್ಟಿದಾಗಲೇ ದಾನ ನೀಡಿ ಬಿಡು. ತಡ ಮಾಡಬೇಡ. ಮನುಷ್ಯನ ಬುದ್ಧಿ ಚಂಚಲ. ಸದ್ಬುದ್ಧಿ ಹುಟ್ಟಿದಾಗಲೇ ಸತ್ಪಾತ್ರದಲ್ಲಿ ದಾನ ಕೊಟ್ಟು ದೇವರು ತನಗೆ ಕೊಟ್ಟ ಅರ್ಥವನ್ನು ಸಾರ್ಥಕ ಪಡಿಸಿಕೊಳ್ಳಬೇಕು.

ಕ್ಷೇಮಂಕರಿಯ ಸಲಹೆಯಂತೆ ಆ ರತಿವಿದಗ್ಧೆಯು ತನ್ನ ಹಣವನ್ನೆಲ್ಲ ದಾನಮಾಡಿದಳು. ನಗರದಲ್ಲಿಯ ಬಡಬಗ್ಗರನ್ನೆಲ್ಲ ಕರೆದು ಸಾಮೂಹಿಕವಾಗಿ ಅನ್ನದಾನ ನಡೆಸಿದಳು. ನಗರದ ಹಾಗೂ ರಾಜ್ಯದ ಎಲ್ಲ ಕಡೆಗೂ ಅನ್ನಛತ್ರಗಳನ್ನು ಇಟ್ಟು ಬಂದವರಿಗೆಲ್ಲ ತಿಂದಷ್ಟು ಊಟ ಬಡಿಸಿದಳು. ಅಲ್ಲಲ್ಲಿ ಅರವಟ್ಟಿಗೆ ಇಡಿಸಿ ಬಾಯಾರಿ ಬಂದವರಿಗೆಲ್ಲ ನೀರು ಕುಡಿಸಿದಳು. ಬೇಡಲು ಬಂದ ಭಿಕ್ಷುಕರಿಗೆ ಹೊಟ್ಟೆ ತುಂಬಿಸಿ ಬಟ್ಟೆ ಬರೆ ಕೊಟ್ಟು ಮೇಲೆ ದಕ್ಷಿಣೆ ಇತ್ತು ತೃಪ್ತಿ ಪಡಿಸಿ ಕಳಿಸಿದಳು. ಇದರಿಂದ ಅವಳು ತನ್ನ ಬದುಕಿನುದ್ದಕ್ಕೂ ಕಾಮ ಮಾರ್ಗ ವಾಮಮಾರ್ಗಗಳಿಂದ ಗಳಿಸಿದ ಹೇರಳ ಹಣವನ್ನೆಲ್ಲ ಧಾರಾಳವಾಗಿ ಖರ್ಚು ಮಾಡಿ ತನ್ನ ಸಂಪತ್ತಿಗೆ ಸಾರ್ಥಕ್ಯವನ್ನು ತಂದುಕೊಟ್ಟಳು.

ಆ ಹಸ್ತಿನಾವತಿ ಪಟ್ಟದಲ್ಲಿಯೇ ನೆಲಸಿದ ಹರಿಶರ್ಮಾ ಎಂಬ ಶ್ರೀಮಂತ ಬ್ರಾಹ್ಮಣ ಅತ್ಯಂತ ಭಗವದ್ಭಕ್ತ. ಪ್ರತಿದಿನವೂ ಭಕ್ತಿಯಿಂದ ಶ್ರೀಮನ್ನಾರಾಯಣನ ಪೂಜೆಯನ್ನು ಮಾಡುತ್ತಿದ್ದ. ಇಂದ್ರಿಯಗಳನ್ನು ಗೆದ್ದಿದ್ದ. ಕಾಮಕ್ರೋಧಗಳನ್ನು ಹಿಡಿತದಲ್ಲಿರಿಸಿಕೊಂಡಿದ್ದ. ಹಿಂಸೆಯನ್ನಂತೂ ಆಯುಷ್ಯದಲ್ಲಿಯೇ ಅವನು ಮಾಡಲಿಲ್ಲ. ಮದ, ಮೋಹಗಳು ಅವನ ಬಳಿಯಲ್ಲಿಯೇ ಸುಳಿಯಲಿಲ್ಲ. ಹರಿಪ್ರೀತಿಗಾಗಿ ಅವನು ಮಹತ್ತರವಾದ ತಪಸ್ಸನ್ನು ಆಚರಿಸಿದ. ಲಕ್ಷ್ಮೀಪತಿಯಾದ ಜನಾರ್ಧನನನ್ನು ಪ್ರತಿದಿನವೂ ಆ ಹರಿಶರ್ಮನು ಗಂಧ, ಪುಷ್ಪ, ಧೂಪ, ದೀಪ ನೈವೇದ್ಯ ಮೊದಲಾದವುಗಳಿಂದ ವಿಧಿಪೂರ್ವಕವಾಗಿ ಅರ್ಚಿಸುತ್ತಿದ್ದ. ಇಷ್ಟೆಲ್ಲ ಸದ್ಗುಣಗಳು ಅವನಲ್ಲಿ ಇದ್ದರೂ ಅವನಲ್ಲಿನ ದೊಡ್ಡದೋಷವೆಂದರೆ ಕಾರ್ಪಣ್ಯ, ಜಿಪುಣತನ, ತಾನು ಕಷ್ಟಪಟ್ಟು ಸಂಪಾದಿಸಿದ ಸಂಪತ್ತಿನಲ್ಲಿ ಕಿಂಚಿತ್ತಾದರೂ ಕರಗಬಾರದು ಎಂದು ಅವನು ಯಾರಿಗೂ ಒಂದು ಒಡಕು ಕಾಸನ್ನೂ ನೀಡುತ್ತಿರಲಿಲ್ಲ. ದಾನ-ಧರ್ಮ ಮಾಡುತ್ತಿರಲಿಲ್ಲ. ಅವನ ಮನೆಯಲ್ಲಿಯೇ ಇರುವ ಇರುವೆ, ಇಲಿಗಳಿಗೂ ಕೂಡ ಉಪವಾಸವೇ ಆಗುತ್ತಿತ್ತು. ತಾನು ಗಳಿಸಿದ್ದನ್ನು ತಾನೊಬ್ಬನೇ ಏಕಾಂತದಲ್ಲಿ ಕುಳಿತು ತಿಂದುಬರುತ್ತಿದ್ದ. ಯಾರಾದರೂ ಗೆಳೆಯರು, ಬ್ರಾಹ್ಮಣರು, ಬಾಂಧವರು ಮನೆಗೆ ಬಂದರೆ ಮಾತನ್ನೂ ಕೂಡ ಆಡುತ್ತಿರಲಿಲ್ಲ. ಮಾತನಾಡಿದರೆ ಹಣವನ್ನು ಕೊಡು ಎಂದು ಎಲ್ಲಿ ಕೇಳುವರೋ ಎಂಬ ಹೆದರಿಕೆಯಿಂದ ಅವನು ಎಲ್ಲರೊಡನೆ ಮಾತುಕತೆಯನ್ನೇ ಬಿಟ್ಟು ಬಿಟ್ಟಿದ್ದ. ದ್ರವ್ಯವನ್ನು ಸಂಪಾದಿಸುವುದೇ ಜೀವನದ ಗುರಿಯೆಂದು ಇಟ್ಟುಕೊಂಡ ಆ ಹರಿಶರ್ಮನು ದಾನವೊಂದು ಬಿಟ್ಟು ಎಲ್ಲ ಶುಷ್ಕ ಧರ್ಮಗಳನ್ನೂ ಆಚರಿಸುತ್ತಿದ್ದ. ನಿತ್ಯ ದೇವರಪೂಜೆ, ಉಪವಾಸ, ವ್ರತ, ಜಪ, ತಪ, ಪ್ರಾರ್ಥನೆ, ಪ್ರದಕ್ಷಿಣಾ, ನಮಸ್ಕಾರ ಮುಂತಾದವುಗಳನ್ನು ಮಾಡಿ ದೇಹ ದಂಡನೆ ಮಾಡುತ್ತಿದ್ದ. ಆದರೆ ಬದುಕಿರುವವರೆಗೂ ಒಬ್ಬ ಬಡವನಿಗೂ ಅನ್ನ ಹಾಕಲಿಲ್ಲ. ಒಬ್ಬ ಬ್ರಾಹ್ಮಣನಿಗೂ ದಕ್ಷಿಣೆ ನೀಡಲಿಲ್ಲ. ಒಬ್ಬ ಯಾತ್ರಿಕನಿಗೂ ಒಂದು ಕಾಸನ್ನೂ ಕೂಡ ಕೊಡಲಿಲ್ಲ.

ಒಂದು ದಿನ ಈ ಹರಿಶರ್ಮಾ ಬ್ರಾಹ್ಮಣ ವೃದ್ಧಾಪ್ಯದಿಂದ ಮರಣಹೊಂದಿದ. ಅದರಂತೆ ರತಿವಿದಗ್ಧಾ ಎಂಬ ವೇಶ್ಯೆಯೂ, ಕ್ಷೇಮಂಕರೀ ಎಂಬ ಬ್ರಾಹ್ಮಣ ವಿಧವೆಯೂ ಕಾಲಪ್ರಾಪ್ತವಾದ ಮರಣವನ್ನು ಹೊಂದಿದರು. ಯಮದೂತರು ಬಂದು ಮೂವರನ್ನೂ ಮೃತ್ಯುಪಾಶದಿಂದ ಸೆಳೆದುಕೊಂಡು ಯಮಧರ್ಮನ ರಾಜಧಾನಿಯಾದ ಸಂಯಮಿನೀಪುರಕ್ಕೆ ತೆಗೆದುಕೊಂಡು ಹೋದರು. ಯಮರಾಜನ ಮುಂದೆ ನಿಲ್ಲಿಸಿದರು. ಆ ಮೂವರನ್ನು ನೋಡಿ

ನಕ್ಕ ಪ್ರೇತರಾಜ. ''ಅವರು ಗತ ಜೀವನದಲ್ಲಿ ಬಾಳಿ ಬದುಕಿದ ಬಗೆಯನ್ನು ವಿವರಿಸಿ ಹೇಳು.'' ಎಂದು ಚಿತ್ರಗುಪ್ತನಿಗೆ ಆದೇಶವಿತ್ತ. ಆ ಮೂವರ ಜೀವನದ ಜಾತಕವನ್ನೆಲ್ಲ ಅರಿತ, ನುರಿತ ಚಿತ್ರಗುಪ್ತ ಆ ಮೂವರ ಬಗೆಗೆ ಯಮಧರ್ಮನನ್ನು ಕುರಿತು ನುಡಿದ.

**ಚಿತ್ರಗುಪ್ತ:-** ಪ್ರಭು, ಈ ಮೂವರೂ ಮಾಡಿದ ಪಾಪ-ಪುಣ್ಯಗಳ ಪಟ್ಟಿ ನನ್ನಲ್ಲಿ ಸಿದ್ಧವಿದೆ. ಇವರಲ್ಲಿಯ ರತಿವಿದಗ್ಧಾ ಎಂಬ ವೇಶ್ಯೆ ಬಹಳ ದುರಾಶೆಯ ಪಿಶಾಚಿ ಆಗಿದ್ದಳು. ಅವಳು ಮಾಡಿದ ಘೋರ ಪಾಪಕೃತ್ಯಗಳು ಲೆಕ್ಕಕ್ಕೆ ತಾಕುವಂತಿಲ್ಲ. ಗಣನೆಯ ಮಿತಿಮೀರಿದೆ. ಅವಳ ಅವಗುಣಗಳು ತನ್ನ ಹರೆಯದ ಸಿರಿ ಇಳಿಯುವವರೆಗೂ ಇವಳು ಅನ್ಯಾಯದಿಂದ ಅಪಾರ ಐಶ್ವರ್ಯವನ್ನು ಸಂಪಾದಿಸಿದಳು. ಆದರೆ ಇವಳು ಮುದುಕಳಾದ ಬಳಿಕ ಮಾತ್ರ ತನ್ನಲ್ಲಿದ್ದ ಸರ್ವಸ್ವವನ್ನೂ ವೆಚ್ಚ ಮಾಡಿ ಅನ್ನದಾನ ಮಾಡಿದಳು. ಮುಂದೆ ಬದುಕಿ ಇರುವವರೆಗೂ ಇವಳು ಮಾಡಿದ ವಿಪುಲವಾದ ಅನ್ನದಾನದ ಪ್ರಭಾವದಿಂದ ಜನ್ಮ ಜನ್ಮಾಂತರದ ಪಾಪರಾಶಿಯಿಂದ ಅವಳು ಮುಕ್ತಳಾದಳು. ಈ ಭೂಮಂಡಲದಲ್ಲಿ ಮಾನವರು ಎಷ್ಟು ಅನ್ನದಾನ ಮಾಡುವರೋ, ಅಷ್ಟು ಅವರ ಬ್ರಹ್ಮಹತ್ಯಾದಿ ಪಾಪಗಳು ನಾಶ ಹೊಂದುತ್ತವೆ. ಅನ್ನ ಇಕ್ಕುವವರಲ್ಲಿ ಇರುವ ಪಾಪಗಳೆಲ್ಲವೂ ಅನ್ನವುಂಡವರಲ್ಲಿ ಹೋಗಿ ಬಿಡುವವು. ಆದುದರಿಂದ ಪಾಪಿಗಳ ಅನ್ನವನ್ನು ವಿವೇಕಿಗಳಾದವರು ಉಣ್ಣುವದಿಲ್ಲ. ಆಶೆಯಿಂದ ಪಾಪಿಯ ಅನ್ನ ತಿಂದವರು ಅನ್ನದಾತನ ಪಾಪಗಳಿಗೆ ಭಾಗೀದಾರರಾಗುವರು. ಈ ವೇಶ್ಯೆಯು ತನ್ನ ಕೊನೆಗಾಲದಲ್ಲಿ ಬಹುದೊಡ್ಡ ಪ್ರಮಾಣದಲ್ಲಿ ಹಸಿದವರಿಗೆಲ್ಲ ತೃಪ್ತಿಯಾಗುವಂತೆ ಅನ್ನದಾನ ಮಾಡಿದಳು. ವಿವಿಧ ಭಕ್ಷ್ಯ, ಭೋಜ್ಯ, ಮೃಷ್ಟಾನ್ನಗಳನ್ನು ತಯಾರಿಸಿ ಅತಿಥಿ, ಅಭ್ಯಾಗತ, ಬ್ರಾಹ್ಮಣ, ಬಡವ, ಬಲ್ಲಿದ ಭಿಕ್ಷುಕ, ಹೀಗೆ ಎಲ್ಲರಿಗೂ ಧಾರಾಳವಾಗಿ ಊಟ ಹಾಕಿದಳು. ಅನ್ನ ಬಡಿಸಿದಳು. ಎಲ್ಲರನ್ನೂ ತೃಪ್ತಿ ಪಡಿಸಿದಳು. ಅಸಂಖ್ಯ ಜನರಿಗೆ ಉಣಿಸಿದಳು. ಎಲ್ಲ ಭಿಕ್ಷುಕ ತಿರುಕ ಬಡ ಬ್ರಾಹ್ಮಣರನ್ನೂ ತಣಿಸಿದಳು. ಇದರಿಂದ ಅವಳ ಹಣವೆಲ್ಲವೂ ಅನ್ನದಾನಾದಿಗಳಿಂದ ಬಡವರಲ್ಲಿ ಹಂಚಿ ಹೋಯಿತು. ಅವಳ ಪಾಪರಾಶಿಯೂ ಎಲ್ಲರಲ್ಲಿ ಹಂಚಿಹೋಯಿತು. ಈಗ ಅವಳ ಪಾಲಿಗೆ ಯಾವ ಪಾಪವೂ ಉಳಿದಿಲ್ಲ. ಅನ್ನದಾನದ ಪುಣ್ಯಮಾತ್ರ ಗಣ್ಯಾಗಣ್ಯವಾಗಿ ಅವಳ ಹೆಸರಿನಲ್ಲಿ ಉಳಿದಿದೆ.

ಬ್ರಾಹ್ಮಣ ವಿಧವೆಯಾದ ಈ ಕ್ಷೇಮಂಕರಿಯು ಉಚ್ಚವಂಶದಲ್ಲಿ ಜನಿಸಿದಳು. ಇವಳ ಗಂಡ ಭದ್ರಕೀರ್ತಿ ಎಂಬ ಬ್ರಾಹ್ಮಣ ಸದಾಚಾರ ಸಂಪನ್ನ. ಆದರೆ ಅವನು ಮರಣಿಸಿದ ಬಳಿಕ ಅವನ ಮಡದಿಯಾದ ಕ್ಷೇಮಂಕರಿಯು ಭಯಂಕರೀ ಆದಳು. ಯೌವನದ ಗರ್ವ, ಸೌಂದರ್ಯದ ಮದ, ವಿಷಯ ವಾಸನೆ ಈ ಮೂರು ಸೇರಿ ಅವಳನ್ನು ದಾರಿ ಬಿಡಿಸಿದವು. ಜಾರಪುರುಷರ ಸಂಗ ಮಾಡಿ ಅವಳು ಪಾಪಕೂಪಕ್ಕೆ ಇಳಿದಳು. ಅವಳು ಮಾಡಿದ ವ್ಯಭಿಚಾರ, ಪಾಪಾಚಾರ, ಅನಾಚಾರಗಳಿಂದ ಪರ್ವತಾಕಾರವಾಗಿ ಬೆಳೆಯಿತು, ಅವಳ ಪಾಪ. ಹೀಗೆ ಆಯುಷ್ಯದ ಉತ್ತರಾರ್ಧದಲ್ಲಿ ಅವಳು ಗಳಿಸಿದ್ದು ಕೇವಲ ಪಾಪರಾಶಿಯನ್ನು ಮಾತ್ರ. ಒಂದು ಪುಣ್ಯ ಕಾರ್ಯವನ್ನೂ ಅವಳು ಬದುಕಿರುವವರೆಗೂ ಮಾಡಲಿಲ್ಲ. ಅವಳ ಬದುಕಿನ ಪೂರ್ವಾರ್ಧದಲ್ಲಿ ಅಂದರೆ ಬಾಲ್ಯದಲ್ಲಿ ಒಂದು ದೊಡ್ಡ ಪುಣ್ಯಕಾರ್ಯ ಅವಳಿಂದ ನಡೆಯಿತು. ಅವಳು ಚಿಕ್ಕ ಬಾಲಿಕೆಯಾಗಿ ಆಟವಾಡುತ್ತಲಿರುವಾಗ ತನ್ನ ಅನೇಕ ಗೆಳತಿಯರಿಂದ ಕೂಡಿಕೊಂಡು ಬೀದಿಯ ಬದಿಯಲ್ಲಿ ಒಂದು ಚಚ್ಚೌಕ ಆಕಾರದ ದೊಡ್ಡ

ತೆಗ್ಗನ್ನು ಮಾಡಿದಳು. ಅದರಲ್ಲಿನ ಮಣ್ಣನ್ನೆಲ್ಲ ಗೆಳೆಯ ಗೆಳತಿಯರಿಂದ ಕೂಡಿಕೊಂಡು ತೆಗೆದು ಮೇಲಕ್ಕೆ ಹಾಕಿ ಆ ತೆಗ್ಗು ತುಸು ಆಳವಾಗುವಂತೆ ಮಾಡಿದಳು. ಸುದೈವದಿಂದ ಅಂದೇ ದೊಡ್ಡ ಮಳೆಯಾಯಿತು. ಇವಳು ಮಾಡಿದ ಆ ತೆಗ್ಗಿನ ತುಂಬ ನೀರು ನಿಂತುಕೊಂಡಿತು. ಮರುದಿನ ಮಧ್ಯಾಹ್ನ ಕಾಲದಲ್ಲಿ ಭಾರೀ ಬಿಸಿಲು, ಆ ಸುಡುವ ಬಿಸಿಲಿನಲ್ಲಿ ಬೆಳಲಿ ಬೆಂಡಾಗಿ ಬಾಯಾರಿಕೆಯಿಂದ ಬಸವಳಿದು ಒಂದು ಹಸು ಅಲ್ಲಿಗೆ ಬಂದಿತು. ಆ ತೆಗ್ಗಿನಲ್ಲಿ ನಿಂತ ನೀರನ್ನು ಯಥೇಚ್ಛವಾಗಿ ಪಾನ ಮಾಡಿತು. ಮುಂದೆ ಅನೇಕ ದನಕರುಗಳೂ, ದಾರಿಕಾರರೂ ಆ ಜಲಾಶಯದ ನೀರನ್ನು ಕುಡಿದು ತಮ್ಮ ತಮ್ಮ ಬಾಯಾರಿಕೆಯನ್ನು ಇಂಗಿಸಿಕೊಂಡರು. ಈ ಜಲದಾನದ ಪುಣ್ಯದಿಂದ ಕ್ಷೇಮಂಕರೀ ಎಂಬ ಬ್ರಾಹ್ಮಣ ವಿಧವೆ ಎಷ್ಟೇ ಘೋರವಾದ ಪಾಪಗಳನ್ನು ಮಾಡಿದ್ದರೂ ಅವೆಲ್ಲವೂ ಅವಳು ಮಾಡಿ ಜಲದಾನದಿಂದ ತೊಳೆದು ಹೋಯಿತು. ಅವಳಲ್ಲಿ ಈಗ ಯಾವ ಪಾಪವೂ ಉಳಿದಿಲ್ಲ. ಪುಣ್ಯವೇ ಪರ್ಯಾಪ್ತ ಪ್ರಮಾಣದಲ್ಲಿ ಅವಳ ಹೆಸರಿನಲ್ಲಿ ಶೇಖರಿತವಾಗಿದೆ. ಇವಳು ಮಹಾ ಪಾಪಿನಿಯಾದರೂ ಜಲದಾನದ ಪುಣ್ಯದಿಂದ ಈಗ ವಿಷ್ಣು ಮಂದಿರಕ್ಕೆ ಹೋಗಲು ಅರ್ಹಳಾಗಿದ್ದಾಳೆ.

**ವೇದವ್ಯಾಸ:-** ಚಿತ್ರಗುಪ್ತನ ಈ ವಾಕ್ಯವನ್ನು ಕೇಳಿ ಯಮಧರ್ಮನು ಆ ಬೆಲೆವೆಣ್ಣಿಗೂ ಆ ಬ್ರಾಹ್ಮಣ ವಿಧವೆಗೂ ಎದ್ದು ಬಂದು ವಂದಿಸಿದ. ಅವರು ಮಾಡಿದ ಪುಣ್ಯಕರ್ಮಕ್ಕಾಗಿ ಅಭಿನಂದಿಸಿದ.

ಬಳಿಕ ಆ ಚಿತ್ರಗುಪ್ತ ಅದೀಗ ಯಮ ಪಟ್ಟಣಕ್ಕೆ ಬಂದ, ಮೂವರಲ್ಲಿ ಇಬ್ಬರ ಸಮಾಚಾರವನ್ನು ಮಾತ್ರ ತಿಳಿಸಿ ಮೂರನೇಯವನಾದ ಹರಿಶರ್ಮನ ಬಗ್ಗೆ ಯಾವ ವಿಶೇಷ ವಿಧಾನವನ್ನು ಮಾಡಲಿಲ್ಲ. ''ಪ್ರಭು, ಈ ಬ್ರಾಹ್ಮಣ ಶ್ರೀಹರಿಯ ಮಹಾಭಕ್ತ. ಪ್ರತಿನಿತ್ಯವೂ ಹರಿಪೂಜೆ, ವ್ರತ, ಉಪವಾಸ, ತೀರ್ಥಕ್ಷೇತ್ರಯಾತ್ರೆ ಭಗವತ್ ಸ್ತೋತ್ರಾದಿಗಳನ್ನು ಮಾಡುತ್ತಲೇ ಇದ್ದ ಇವನಿಗೆ ಗತಿ ಪ್ರದಾತಾ ಆ ಅಚ್ಯುತನೇ.''

ಚಿತ್ರಗುಪ್ತನ ಸಲಹೆಯಂತೆ ಯಮಧರ್ಮನು ದಿವ್ಯವಾದ ರಾಜಹಂಸ ಹಕ್ಕಿಗಳು ಎಳೆಯುವ ಒಂದು ಬಂಗಾರದ ರಥದಲ್ಲಿ ಕುಳ್ಳಿರಿಸಿ ಶ್ರೀಹರಿಯ ಸನ್ನಿಧಾನಕ್ಕೆ ಕೊಟ್ಟು ಕಳಿಸಿದ. ಆ ಬ್ರಾಹ್ಮಣಿ ಹಾಗೂ ಗಣಿಕ ಇಬ್ಬರೂ ಮಹಾವಿಷ್ಣುವಿನ ಸನ್ನಿಧಾನದಲ್ಲಿ ಕೃತಕೃತ್ಯರಾಗಿ ಹರಿಧ್ಯಾನವನ್ನು ಮಾಡುತ್ತ ಆನಂದದಿಂದ ಇದ್ದರು.

ಹರಿಶರ್ಮ ಬ್ರಾಹ್ಮಣನಿಗೂ ಶ್ರೀಹರಿಯು ತನ್ನ ಅವಿಮುಕ್ತ ಸ್ಥಾನದಲ್ಲಿ ತನ್ನ ಎಲ್ಲ ಭೋಗ ಭಾಗ್ಯಗಳನ್ನಿತ್ತು ಕರುಣಿಸಿದ. ಸುಖ ಸೌಲಭ್ಯಗಳನ್ನಿತ್ತ. ಆದರೆ ಊಟವನ್ನು ಮಾತ್ರ ಕೊಡಲಿಲ್ಲ. ಎರಡು ದಿನಗಳಲ್ಲಿ ಹಸಿವೆಯಿಂದ ಕಂಗೆಟ್ಟ ಆ ಹರಿಶರ್ಮ. ಅದರಿಂದ ಅವನು ಕ್ಷುಧಾಕ್ಷುಬ್ಧನಾಗಿ ಶ್ರೀಹರಿಯ ಬಳಿಗೆ ಬಂದು ನಮಸ್ಕರಿಸಿ ಮಾತನಾಡಿದ.

**ಹರಿಶರ್ಮ:-** ಪ್ರಭೋ, ನಾವು ನಿನ್ನ ಸನ್ನಿಧಾನಕ್ಕೆ ಬಂದ ಬಳಿಕ ನನಗೆ ಎಲ್ಲ ವಿಧವಾದ ಭೋಗಭಾಗ್ಯಗಳೂ ಒದಗಿ ಬಂದಿವೆ. ಸುಂದರವಾದ ಸುರತರುಣಿಯರು ನನಗೆ ಗಂಧ-ಚಂದನಗಳನ್ನು ಲೇಪಿಸಿ, ಮಾಲೆ ಹಾಕಿ ಮಂಚದ ಮೇಲೆ ಕುಳ್ಳಿರಿಸಿ ಚಾಮರ ಬೀಸುತ್ತಾರೆ. ನನ್ನ ಎದುರು ಹಾಡು ಹಾಡುತ್ತಾರೆ. ನರ್ತನ ಮಾಡುತ್ತಾರೆ. ಇಂದ್ರಾದಿ ದೇವತೆಗಳೂ ಸಹ ಬಂದು ನನ್ನನ್ನು ಹೊಗಳಿ ಹಾಡುತ್ತಾರೆ. ನನಗೂ ದಿವ್ಯ ಸುಂದರವಾದ ರೂಪ ಬಂದಿದೆ. ಆದರೆ ಇಷ್ಟೆಲ್ಲವನ್ನೂ ನನಗೆ ಕರುಣಿಸಿದ ನೀನು ಆಹಾರವನ್ನು ಮಾತ್ರ

ನೀಡಲೇ ಇಲ್ಲ. ಹಸಿವೆಯ ಉರಿ ನನ್ನ ಶರೀರವನ್ನೇ ಸುಡುತ್ತಲಿದೆ. ಹೊಟ್ಟೆಯಲ್ಲಿ ಹಸಿವೆ ತಾಂಡವವಾಡುವಾಗ ಈ ಹೊರಗಿನ ಭೋಗ, ಭಾಗ್ಯ ಛತ್ರ, ಚಾಮರ, ವ್ಯಜನ, ಪರ್ಯಂಕ, ಸ್ತುತಿಸ್ತೋತ್ರಗಳು ಹೇಗೆ ತೃಪ್ತಿಯನ್ನು ಕೊಡಬಲ್ಲವು? ನಾನು ಬದುಕಿ ಇರುವವರೆಗೂ ನಿನ್ನ ಹೊರತು ಬೇರೊಬ್ಬರನ್ನು ಪೂಜಿಸಲಿಲ್ಲ. ನಿನ್ನ ಪೂಜೆಯನ್ನು ಮಾತ್ರ ಒಂದು ದಿನವೂ ತಪ್ಪಿಸಲಿಲ್ಲ. ಸ್ವಪ್ನದಲ್ಲಿಯೂ ನಾನು ಬೇರೊಬ್ಬರ ಮೇಲೆ ಏನು ಮಾಡಲಿಲ್ಲ. ಇಷ್ಟಾದರೂ ನನಗೇಕೆ ನೀನು ನಿನ್ನ ಈ ಲೋಕದಲ್ಲಿ ಆಹಾರವನ್ನು ಕೊಡುವದಿಲ್ಲ?

**ವಿಷ್ಣು:-** ಇದಕ್ಕೆ ಸರಿಯಾದ ಕಾರಣವು ನಿನಗೆ ತಿಳಿಯಬೇಕಿದ್ದರೆ ನೀನು ಬ್ರಹ್ಮ ಲೋಕಕ್ಕೆ ಹೋಗು. ಬ್ರಹ್ಮದೇವರನ್ನು ಕಾಣು. ಅವರು ನಿನ್ನ ಪ್ರಶ್ನೆಗೆ ಸರಿಯಾಗಿ ಉತ್ತರವನ್ನು ಹೇಳುವರು.

ಪರಬ್ರಹ್ಮನ ಆದೇಶದಂತೆ ಆ ಹರಿಶರ್ಮನು ಬ್ರಹ್ಮದೇವರ ಬಳಿಗೆ ಬಂದ. ಅವರ ಮುಂದೆ ತನ್ನ ದುಃಖವನ್ನು ಹೇಳಿಕೊಂಡ. ಆಗ ಅವನಿಗೆ ಬ್ರಹ್ಮದೇವರು ಹೇಳಿದರು.

**ಬ್ರಹ್ಮ:-** ತಾನು ಗಳಿಸಿದ ಹಣವನ್ನು ತಾನು ತಿನ್ನದೇ ಹೆರವರಿಗೂ ಕೊಡದೇ ಇದ್ದರೆ ಅದು ನಷ್ಟವಾದಂತೆಯೇ. ನೀನು ಹಿಂದಿನ ಜನ್ಮದಲ್ಲಿ ಬೇಕಾದಷ್ಟು ಧನವನ್ನು ಗಳಿಸಿದೆ. ಆದರೆ ಒಂದು ಕಾಸನ್ನೂ ಕೂಡ ದಾನ ಕೊಡಲಿಲ್ಲ. ಹಸಿದು ಬಂದ ಒಬ್ಬನಿಗೂ ಅನ್ನವನ್ನು ನೀಡಲಿಲ್ಲ. ಒಂದು ಸಲವೂ ಅನ್ನದಾನ ಮಾಡಲಿಲ್ಲ. ದಾನ ಒಂದು ಬಿಟ್ಟು ಉಳಿದ ಶುಷ್ಕ ಧರ್ಮಗಳನ್ನು ಆಚರಿಸಿದೆ. ದೇವರ ಪೂಜೆಯನ್ನು ತಪ್ಪದೇ ಮಾಡಿದೆ. ಆ ಪುಣ್ಯ ಕಾರ್ಯದ ಪ್ರಭಾವದಿಂದಲೇ ವಿಷ್ಣುವಿನ ಸಾನ್ನಿಧ್ಯ ದೊರಕಿದೆ. ಆದರೆ ನೀನು ಬೇಕಾದಷ್ಟು ಹಣವಿದ್ದರೂ ಅನ್ನದಾನವನ್ನು ಮಾಡದೇ ಇರುವದರಿಂದ ಹಾಗೆಯೇ ದ್ರವ್ಯ ದಾನವನ್ನು ಸಹ ಮಾಡದೇ ಇರುವದರಿಂದ, ನಿನಗೆ ಇಲ್ಲಿ ಅನ್ನದ ಹೊರತು ಎಲ್ಲ ಸೌಭಾಗ್ಯಗಳು ಪ್ರಾಪ್ತವಾಗಿರುತ್ತವೆ.

**ಬ್ರಾಹ್ಮಣ:-** ಪ್ರಭು, ಹಾಗಾದರೆ ಮಾನವರು ಯಾವ ಯಾವ ದಾನಗಳನ್ನು ನೀಡಬೇಕು ಹೇಳು.

**ಬ್ರಹ್ಮ:-** ದಾನಗಳು ಅಸಂಖ್ಯ. ಎಲ್ಲವನ್ನೂ ಇಲ್ಲಿ ಹೇಳಲಿಕ್ಕೆ ಆಗುವುದಿಲ್ಲ ಸಂಕ್ಷೇಪದಿಂದ ಹೇಳುವೆ ಕೇಳು.

ಎಲ್ಲ ದಾನಗಳಲ್ಲಿಯೂ ಭೂಮಿದಾನ ಸರ್ವಶ್ರೇಷ್ಠ. ಒಂದು ಹಸುವಿನ ಮೈ ದೊಗಲಿನಷ್ಟಾದರೂ ಹೊಲ ಅಥವಾ ನೆಲವನ್ನು ಸದಾಚಾರ ಸಂಪನ್ನನಾದ ಜ್ಞಾನಿಗೆ ದಾನ ಕೊಟ್ಟರೆ ಹದಿನಾಲ್ಕು ಇಂದ್ರರ ಆಳ್ವಿಕೆ ಮುಗಿಯುವರೆಗೆ ಆ ಮನುಷ್ಯನು ಸ್ವರ್ಗಸೌಖ್ಯವನ್ನು ಅನುಭವಿಸುತ್ತಾನೆ. ಇದರಂತೆ ಹಿಂಡುವ ಕರುಸಹಿತವಾದ ಹಸುವು, ಎತ್ತು, ಸುವರ್ಣ, ಬೆಳ್ಳಿ, ಮುತ್ತು, ರತ್ನ, ಕುದುರೆ, ಆನೆ, ತೂಗುಮಂಚ, ಶಾಲಿಗ್ರಾಮ, ಕನ್ಯೆ ಮುಂತಾದವುಗಳ ದಾನದಿಂದ ಮನುಷ್ಯನಿಗೆ ಸ್ವರ್ಗಾಪವರ್ಗಾದಿಗಳು ಲಭಿಸುವವು. ಕನ್ಯೆಯನ್ನು ಶುಲ್ಕ ತೆಗೆದುಕೊಂಡು ಮಾರಾಟ ಮಾಡಿದಂತೆ ಮದುವೆ ಮಾಡಿಕೊಂಡುವವನು ''ಪುರೀಹ್ರದ'' (ಹೇಸಿಗೆಯ ಹೊಂಡ) ಎಂಬ ನರಕದಲ್ಲಿ ಬೀಳುತ್ತಾನೆ. ವಿಧಿಪೂರ್ವಕವಾಗಿ ಕನ್ಯಾದಾನವನ್ನು ಸತ್ಪಾತ್ರನಾದ ವರನಿಗೆ ದಾನಕೊಟ್ಟು ಧಾರೆ ಎರೆದು ವಿವಾಹ ಸಮಾರಂಭ ನೆರವೇರಿಸಿದವನು ಸ್ವರ್ಗದಿಂದ ಮರಳಿ ಭೂಲೋಕಕ್ಕೆ ಬರುವುದೇ ಇಲ್ಲ. ಹೀಗೆ ಪಾದರಕ್ಷೆ, ಕೊಡೆ, ವಸ್ತ್ರ, ಮುಂತಾದವುಗಳನ್ನು ದಾನ ನೀಡಿದವನಿಗೆ ನೂರು ವರ್ಷ

ಇಂದ್ರಲೋಕದಲ್ಲಿ ವಾಸಭಾಗ್ಯ. ಆದರೆ ಈ ಎಲ್ಲ ದಾನದ ಪದಾರ್ಥಗಳು ಹಳತಾಗಿ ಅನುಪಯುಕ್ತವಾಗಿ ಇದ್ದರೆ ಪಾಪವೇ ಬರುವದು.

**ವಸ್ತ್ರಂ ಪುರಾತನಂ ಯಚ್ಛೇತ್ ಧೇನುಂ ಜರತೀಂ ತಥಾ ।**
**ಕನ್ಯಾಂ ರಜಸ್ವಲಾಂ ಯಸ್ತು ಸ ಸದಾ ನರಕಂ ವ್ರಜೇತ್ ॥**

ಜೀರ್ಣವಾದ, ಬಟ್ಟೆ, ಮುದಿಗೋವು, ರಜಸ್ವಲೆಯಾದ ಕನ್ಯೆ. ಈ ಮೂರನ್ನು ದಾನ ನೀಡುವವ ನರಕಕ್ಕೆ ಹೋಗುತ್ತಾನೆ. ಹಾಲು, ಮೊಸರು, ತುಪ್ಪ, ಮಜ್ಜಿಗೆ, ಹೂವು, ಗಂಧ, ಹಾಸಿಗೆ, ತರಕಾರಿ, ದೀಪ, ಮಣಿ, ಆಸನ, ತಾಂಬೂಲ, ವಿದ್ಯೆ, ಪಾಠ ಪ್ರವಚನ, ಪುಸ್ತಕ ಮುಂತಾದ ವಸ್ತುಗಳ ದಾನದಿಂದ ಬ್ರಹ್ಮಹತ್ಯಾದಿ ಪಾಪಗಳೆಲ್ಲ ನಾಶವಾಗಿ ಅದರಿಂದ ವಿಶೇಷ ಪುಣ್ಯಪ್ರಾಪ್ತಿ. ಅದರಿಂದ ಹರಿಪ್ರಸಾದ. ಹರಿಪ್ರಸಾದದಿಂದ ಇಹದಲ್ಲಿ ಭುಕ್ತಿ ಪರದಲ್ಲಿ ಮುಕ್ತಿ. ತಮ್ಮಿಂದ ತಾವೇ ದೊರಕುವವು. ಆದುದರಿಂದ,

**"ತಪಸೋಽಪಿ ಪರಂ ದಾನಂ ನಿರುಕ್ತಂ ತತ್ವದರ್ಶಿಭಿಃ ।"**

ತಪಸ್ಸಿಗಿಂತಲೂ ದಾನವು ಶ್ರೇಷ್ಠವೆಂದು ತತ್ವಜ್ಞಾನಿಗಳ ಹೇಳಿಕೆ. ಎರಡೂ ಮಾಡಿದರೆ ಅತ್ಯುತ್ತಮ. ಅವನಂಥ ಮಹಾಪುರುಷನೇ ಜಗತ್ತಿನಲ್ಲಿ ಬೇರೊಬ್ಬನಿಲ್ಲ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ದಾನದ ಮಾಹಾತ್ಮ ಎಂಬ ಇಪ್ಪತ್ತನೇಯ ಅಧ್ಯಾಯ ಮುಗಿದುದು*



## ಕಾಲು ತೊಳೆದ ನೀರಿನಿಂದ ನಾಯಿಗೆ ಮುಕ್ತಿ

ಅಧ್ಯಾಯ - ೨೧

**ವೇದವ್ಯಾಸ:-** ಬ್ರಹ್ಮದೇವರ ಈ ದಾನಧರ್ಮ ಪ್ರಶಂಸೆಯ ನುಡಿಗಳನ್ನು ಕೇಳಿ ಆ ಹರಿಶರ್ಮ ಮತ್ತೆ ಪ್ರಶ್ನೆ ಕೇಳಿದ.

**ಹರಿಶರ್ಮ:-** ಪ್ರಭು, ತಾವು ಬಗೆಬಗೆಯ ದಾನ ಪ್ರದಾನಗಳ ಮಹಿಮೆಯನ್ನು ಬಣ್ಣಿಸಿದಿರಿ. ಆದರೆ ಈ ಎಲ್ಲ ದಾನಗಳಿಗೆ ಮುಖ್ಯ ಅಧಿಕಾರಿ ಯಾರು? ಇಂಥ ದಾನಗಳನ್ನು ಯಾರಿಗೆ ಕೊಡಬೇಕು?

**ಬ್ರಹ್ಮ:-** ಎಲ್ಲ ಜಾತಿಯ ಜನರಿಗೆ ಬ್ರಾಹ್ಮಣನು ಗುರು. ಅವನಿಗೆ ಭಕ್ತಿಯಿಂದ ದಾನ ನೀಡಬೇಕು.

**ಹರಿಶರ್ಮ:-** ಆ ಬ್ರಾಹ್ಮಣರು ದುರಾಚಾರಿಗಳು, ಪಾತಕಿಗಳು ಆಗಿದ್ದರೆ ಹೇಗೆ.

ಬ್ರಹ್ಮ:-

**ಸ್ತೇಯಾದಿದೋಷತಪ್ತಾ ಯೇ ಬ್ರಾಹ್ಮಣಾ ಬ್ರಾಹ್ಮಣಾಧಮಾಃ**
**ಅಸ್ಮಾಕಂ ದ್ವೇಷಿನಸ್ತೇ ಚ ತೇಭ್ಯೋ ದೇಯಂ ನ ಕಿಂಚನ ॥**

ಕಳವು ಬ್ರಹ್ಮಹತ್ಯೆ ಮೊದಲಾದ ಮಹಾಪಾಪಗಳನ್ನು ಮಾಡಿದ ಘಾತಕಿ ಪಾತಕಿಯಾದ ಬ್ರಾಹ್ಮಣನು ಬ್ರಾಹ್ಮಣಾಧಮ. ಶ್ರೀಹರಿಯ ಆಜ್ಞೆಯಂತೆ ಇರುವ ಶ್ರುತಿ ಸ್ಮೃತಿಗಳಿಗೆ ವಿರುದ್ಧವಾಗಿ ನಡೆಯುವ ಬ್ರಾಹ್ಮಣಾಧಮರು ನಮಗಲ್ಲ, ದೇವತೆಗಳಿಗೂ ದ್ವೇಷಿಗಳು. ಅಂಥವರಿಗೆ ದಾನವನ್ನು ನೀಡಬಾರದು.

ಮಹಾಜ್ಞಾನಿಗಳೂ, ಸದಾಚಾರ ಸಂಪನ್ನರೂ, ಜಿತೇಂದ್ರಿಯರೂ, ಗರ್ವ, ಆಸೆ, ಸ್ವಾರ್ಥ, ಕಾಮ, ಕ್ರೋಧಗಳಿಂದ ವರ್ಜಿತರೂ ಆದ ವಿಪ್ರೋತ್ತಮರನ್ನು ವಿಷ್ಣುವಿನ ಪ್ರತೀಕ ಎಂದು ತಿಳಿದೇ ಪೂಜಿಸಬೇಕು. ಅದರಿಂದ ಮನುಷ್ಯನ ಆಯುಷ್ಯ, ಸಂತಾನ, ಸಂಪತ್ತು, ಕೀರ್ತಿ ಎಲ್ಲವೂ ಅಭಿವೃದ್ಧಿಯನ್ನು ಹೊಂದುತ್ತವೆ. ಬ್ರಾಹ್ಮಣನೇ ಆಗಲೀ, ಗುರುವೇ ಆಗಲೀ, ಹಿರಿಯರೇ ಆಗಲೀ ಎಣ್ಣೆ ಹಚ್ಚಿಕೊಂಡು ನಿಂತಾಗ ನಮಸ್ಕಾರ ಮಾಡಬಾರದು. ಅದರಂತೆ ದೇವರ ಪೂಜೆ ಮಾಡುವಾಗ ಊಟಕ್ಕೆ ಕುಳಿತುಕೊಂಡಾಗ, ಸಾಮಗಾಯನವನ್ನು ಮಾಡುತ್ತಲಿರುವಾಗ ಮತ್ತು ಮಲಮೂತ್ರ ವಿಸರ್ಜನೆ ಮಾಡುವಾಗ, ನೀರಿನಲ್ಲಿ ನಿಂತುಕೊಂಡಾಗ, ಹಾಲು ಕುಡಿಯುವಾಗ ದೇವರ ಗುಡಿಯಲ್ಲಿ ಧ್ಯಾನಾಸಕ್ತನಾದಾಗ ನಮಸ್ಕಾರ ಮಾಡಬಾರದು. ಪಂಡಿತರ ಗುಂಪು ಕೂಡಿದಾಗ ಪ್ರತ್ಯೇಕವಾಗಿ ಒಬ್ಬರಿಗೇ ನಮಸ್ಕರಿಸಬಾರದು. ಆ ಬ್ರಹ್ಮವೃಂದಕ್ಕೆ ನಮಸ್ಕಾರ ಹಾಕಬೇಕು.

ನಮಸ್ಕಾರ ಮಾಡಿದವರಿಗೆ ಪ್ರತಿವಂದನೆಯನ್ನು ಮಾಡಬೇಕು. ಮಾಡದೇ ಇದ್ದವ ಚಾಂಡಾಲನಿಗಿಂತ ಕನಿಷ್ಠ. ಆದರೆ ನಮಸ್ಕಾರ ಮಾಡಿದ ತಮ್ಮ, ಮಗ, ಸೊಸೆ, ಶಿಷ್ಯ, ಸೇವಕ ಹಾಗೂ ವಯಸ್ಸಿನಿಂದ ಚಿಕ್ಕವರು, ಇವರಿಗೆಲ್ಲ ತಿರುಗಿ ನಮಸ್ಕರಿಸಬಾರದು. ಮನೆಗೆ ಬಂದ ಅತಿಥಿಗಳನ್ನು ತಿರಸ್ಕಾರದಿಂದ ಕೆಕ್ಕರಿಸಿ ನೋಡಿದರೆ ನರಕದಲ್ಲಿ ಯಮದೂತರು ಅವನ ಕಣ್ಣಲ್ಲಿ ಸೂಜಿ ಚುಚ್ಚುತ್ತಾರೆ. ಜ್ಞಾನಿಗಳನ್ನು ಧಿಕ್ಕರಿಸಿ ನುಡಿದವನ ಮುಖದಲ್ಲಿ ಯಮಲೋಕದಲ್ಲಿ ಕಾಸಿದ ಕಬ್ಬಿಣ ತುಂಡನ್ನು ಜಡಿಯುತ್ತಾರೆ. ಮನೆಗೆ ಬಂದ ಬ್ರಾಹ್ಮಣರ ಕಾಲುತೊಳೆದ ಆ ನೀರನ್ನು ಒಂದು ಹನಿಯಾದರೂ ತಲೆಗೆ ಪ್ರೋಕ್ಷಣ ಮಾಡಿಕೊಳ್ಳಬೇಕು. ಬ್ರಹ್ಮಾಂಡದಲ್ಲಿರುವ ಎಲ್ಲ ತೀರ್ಥಗಳೂ ವಿಪ್ರಪಾದದಲ್ಲಿ ಸನ್ನಿಹಿತವಾಗಿರುತ್ತವೆ. ವಿಪ್ರಪಾದೋದಕವನ್ನು ತಲೆಯ ಮೇಲೆ ಸಿಂಪಡಿಸಿಕೊಂಡವ ಎಲ್ಲ ತೀರ್ಥಗಳಲ್ಲೂ ಸ್ನಾನ ಮಾಡಿದಂತೆ. ಅವನ ಎಲ್ಲ ಪಾಪಗಳೂ ದಗ್ಧವಾಗಿ ಹೋಗುತ್ತವೆ. ಈ ವಿಷಯದಲ್ಲಿ ಒಂದು ಪ್ರಾಚೀನ ಉಪಾಖ್ಯಾನವನ್ನು ಹೇಳುವೆ ಕೇಳು.

ಪೂರ್ವಕಾಲದಲ್ಲಿ 'ಭದ್ರಕ್ರಿಯ' ಎಂಬ ಯೋಗ್ಯ ಬ್ರಾಹ್ಮಣ ಇದ್ದ. ವೇದ ವೇದಾಂತಗಳಲ್ಲಿ ವಿದ್ವಾಂಸನಾದ ಆ ಭದ್ರಕ್ರಿಯ ಎಂಬ ಬ್ರಾಹ್ಮಣ, ದೇವ ಬ್ರಾಹ್ಮಣರ ಆರಾಧಕ. ತಾಯಿತಂದೆಗಳ ಅವಿಚ್ಛಿನ್ನ ಸೇವಕ. ಒಂದು ದಿನ ಅವನು ಮೈತುಂಬ ಎಣ್ಣೆ ಬಳಿದುಕೊಂಡು ಸರೋವರಕ್ಕೆ ಹೋಗಿ ಸ್ನಾನ ಮಾಡಿದ. ವಿಧಿಪೂರ್ವಕವಾಗಿ ಸಂಧ್ಯಾವಂದನ ಬ್ರಹ್ಮಯಜ್ಞ, ತರ್ಪಣ, ಮುಂತಾದ ತನ್ನ ನಿತ್ಯಾಹ್ನಿಕವನ್ನೆಲ್ಲ ಮುಗಿಸಿಕೊಂಡು ನಾರಾಯಣನ ನಾನಾ ನಾಮಗಳನ್ನು ನೆನೆಯುತ್ತ ತನ್ನ ಮನೆಗೆ ಬಂದ. ಮನೆಯ ಅಂಗಳದ ಹೊರಗೆ ಕಾಲ್ತೊಳೆದುಕೊಂಡು ದೇವರ ಕೋಣೆಯಲ್ಲಿ ಪ್ರವೇಶಿಸಿದ. ಶಾಸ್ತ್ರೋಕ್ತವಾಗಿ ಶ್ರೀಹರಿಗೆ ಷೋಡಶೋಪಚಾರ ಪೂಜೆ ಸಲ್ಲಿಸಿ ನಂತರ ತನ್ನ ಮನೆಯ ಅಂಗಳದ ಒಳಗೆ ಬ್ರಾಹ್ಮಣರನ್ನು ಕರೆದು ಅವರ ಪಾದಪ್ರಕ್ಷಾಲನ ಮಾಡಿದ. ಬ್ರಾಹ್ಮಣರೆಲ್ಲರೂ ಒಳಗೆ ಹೋದ ಬಳಿಕ ಒಂದು ಬೀದಿಯ ನಾಯಿಯು, ನೀರಡಿಸಿ ಬಂದು ಹೊರಗೆ ಹರಿದ ಬ್ರಾಹ್ಮಣರ ಕಾಲ್ತೊಳೆದ ನೀರನ್ನು ಕುಡಿಯಿತು. ಮತ್ತು ಬಿಸಿಲಿನ ಬೇಗೆಯಿಂದ ಬಳಲಿದ ಆ ನಾಯಿಯು ಅಂಗಳದ ಪಾದಪ್ರಕ್ಷಾಲನ ನೀರು ಹರಿದು ಹಸಿಯಾದ ಹೊರ ಭಾಗದ ನೆಲದಲ್ಲಿ ಮಲಗಿಕೊಂಡಿತು. ಆದರೆ ಅದಕ್ಕೆ ಇನ್ನೂ ನೀರಡಿಕೆ

ಶಾಂತವಾಗಿರಲಿಲ್ಲ. ಅದು ಅಂಗಳದ ಒಳಗೆ ಹಾರಿ ಅಲ್ಲಿ ನಿಂತ ನೀರನ್ನು ನೆಕ್ಕಿ ಅಲ್ಲಿಯ ಕೆಸರಿನಲ್ಲಿ ಹೊರಳಾಡಿತು. ಅಂಗಳಕ್ಕೆ ಹಾರಿ ಬಂದ ಆ ನಾಯಿಯನ್ನು ನೋಡಿ ಆ ಬ್ರಾಹ್ಮಣರಿಗೆ ಸಿಟ್ಟು ಬಂದು ಅವರೆಲ್ಲರೂ ಕಲ್ಲಿನಿಂದ ಅದನ್ನು ಹೊಡೆದರು. ಬಹುಜನ ಬ್ರಾಹ್ಮಣರ ಬಲವಾದ ಪ್ರಹಾರಗಳನ್ನು ತಾಳಲಾರದೇ ಆ ನಾಯಿಯು ಅಲ್ಲಿಯೇ ಸತ್ತು ಹೋಯಿತು. ಬ್ರಾಹ್ಮಣರ ಕಾಲು ತೊಳೆದ ನೀರಿನಲ್ಲಿ ಬಿದ್ದು ತೆಗೆದಿದ್ದರಿಂದ ಆ ನಾಯಿಯ ಪಾಪಗಳೆಲ್ಲ ಹೋಗಿ ಕೂಡಲೇ ಅದು ದಿವ್ಯ ದೇವತಾಪುರುಷನಂಥ ದೇಹ ತಳೆದು ಎದ್ದು ನಿಂತಿತು. ಆ ದೈವೀ ಪುರುಷನಿಗೆ ನಮಸ್ಕರಿಸಿ ಭದ್ರಕ್ರಿಯನು ಪ್ರಶ್ನಿಸಿದ.

**ಭದ್ರಕ್ರಿಯ:-** ಪುಣ್ಯಾತ್ಮ, ನೀನು ಯಾರು? ಯಾವ ದುಷ್ಕರ್ಮದಿಂದ ನಿನಗೆ ನಾಯಿಯ ಜನ್ಮ ಬಂದಿತ್ತು? ಇದೆಲ್ಲ ಹೇಳು.

**ದೈವೀಪುರುಷ:-** ವಿಪ್ರೋತ್ತಮರೇ, ಹಿಂದೆ ನಾನೊಬ್ಬ ಸಾರ್ವಭೌಮ ಮಹಾರಾಜ. ಶಂಖ ಎಂದು ನನ್ನ ಹೆಸರು. ನಾನು ಬದುಕಿ ಇರುವವರೆಗೆ ವೈರಿಗಳನ್ನು ಗೆದ್ದು, ಪ್ರಜೆಗಳನ್ನು ಪುತ್ರರಂತೆ ರಕ್ಷಿಸಿದೆ. ದಾನಗಳನ್ನು ನೀಡಿದೆ. ಯಜ್ಞಯಾಗಾದಿಗಳನ್ನು ಮಾಡಿದೆ.

ಒಂದು ದಿನ ನಾನು ನನ್ನ ರಾಜ್ಯದಲ್ಲಿಯ ಗ್ರಾಮಾಂತರ ಸಂಚಾರಕ್ಕೆ ಹೋದಾಗ ಒಂದು ಹೊಲದಲ್ಲಿ ಹಳ್ಳಿಯ ಮುಗ್ಧ ಮಹಿಳೆ ನನ್ನ ಕಣ್ಣಿಗೆ ಬಿದ್ದಳು. ಅವಳ ರೂಪ ನನ್ನ ರಾಣಿ ವಾಸದ ರತಿರಂಭೆಯರನ್ನೆಲ್ಲ ನಾಚಿಸುವಂತಿತ್ತು. ನಿರಾಭರಣ ಸುಂದರಿಯಾದ ಆ ಗ್ರಾಮ ಯುವತಿಯ ಗ್ರಾಮ್ಯ ಸೌಂದರ್ಯವೇ ನನಗೆ ರಮ್ಯ ಎನಿಸಿತು. ನಾನು ಅವಳನ್ನು ಬಲಾತ್ಕಾರದಿಂದ ಎತ್ತಿ ತಂದು ಶೀಲಹರಣ ಮಾಡಿದೆ. ಆದರಿಂದ ನನಗೆ ಘೋರತರವಾದ ಪಾಪ ತಟ್ಟಿತು. ನನ್ನ ಈ ಪಾಪಾಚಾರ, ಹಾಗೂ ಜುಲುಮೆಯ ವ್ಯಭಿಚಾರದ ವಾರ್ತೆ ಎಲ್ಲ ಹಳ್ಳಿ ಹಾಗೂ ಪಟ್ಟಣಗಳಿಗೆ ಮುಟ್ಟಿತು. ಇದನ್ನು ಕೇಳಿ ತಪ್ತರಾದ ಜನತೆ "ಈ ಕಾಮುಕರಾಜನು ಪಟ್ಟದ ಮೇಲೆ ಇರುವವರೆಗೂ ನಮ್ಮ ರಾಜ್ಯದ ಮಹಿಳೆಯರಿಗೆ ಮರ್ಯಾದೆಯಿಂದ ಬಾಳುವದು ಸಾಧ್ಯವಿಲ್ಲ" ಎಂದು ರೊಚ್ಚಿಗೆದ್ದು ಗುಂಪುಗೂಡಿ ಕಲ್ಲು, ಕಟ್ಟಿಗೆ, ಹಿಡಿದುಕೊಂಡು ಅರಮನೆಗೆ ನುಗ್ಗಿದರು. ಸಿಡಿದೆದ್ದ ಆ ಪ್ರಜಾಜನರ ಕೋಪವನ್ನು ಎದುರಿಸಲಾಗದೇ ನಾನು ಅರಮನೆ ಬಿಟ್ಟು ಅಡವಿಗೆ ಓಡಿದೆ. ಅಲ್ಲಿ ಹೊಟ್ಟೆಗೆ ಇಲ್ಲದೇ ಉಪವಾಸ ವನವಾಸದಿಂದ ಕೊನೆಗೊಮ್ಮೆ ಕಾಡಿನಲ್ಲಿಯೇ ಮಡಿದೆ. ಬಹುಕಾಲ ನರಕದಲ್ಲಿ ಯಮಯಾತನೆಯನ್ನು ಅನುಭವಿಸಿದ ನಂತರ ಈ ನಾಯಿಯ ಯೋನಿಯಲ್ಲಿ ಹುಟ್ಟಿ ನಿನ್ನ ಮನೆಯ ಅಂಗಳದಲ್ಲಿ ಬಾಗಿಲು ಕಾಯುತ್ತ ಬಿದ್ದಿರುತ್ತಿದ್ದೆ. ನೀನು ಮಾಡಿದ ಬ್ರಾಹ್ಮಣರ ಪಾದಪ್ರಕ್ಷಾಲನದ ನೀರಿನಲ್ಲಿ ಹೊರಳಾಡಿದ್ದರಿಂದ ನಾನು ನಿಂದ್ಯವಾದ ಆ ನಾಯಿಯ ಯೋನಿಯಿಂದ ಮುಕ್ತನಾದೆ. ದಿವ್ಯವಾದ ದೈವಿಕ ದೇಹ ನನಗೀಗ ಬಂದಿದೆ. ನಿಮ್ಮ ಮನೆಯ ಅಂಗಳದ ಪಾದಪ್ರಕ್ಷಾಲನ ಜಲದಿಂದ ನಾನು ಧಾತದುರಿತನಾಗಿ ಪೂತಾತ್ಮನಾಗಿ ಈಗ ಸ್ವರ್ಗಕ್ಕೆ ಹೊರಟಿರುವೆ.

**ಭದ್ರಕ್ರಿಯ:-** ಶಂಖರಾಜ, ನಿನ್ನ ಈ ಜನ್ಮಾಂತರದ ಕತೆ ಬಹಳ ಕುತೂಹಲಕಾರಿ. ಮನುಷ್ಯನು ದಾನ, ಧರ್ಮ, ಜ್ಞಾನಿಗಳ ಸೇವೆ, ಸದಾಚಾರಿಗಳ ಪಾದಪ್ರಕ್ಷಾಲನ ದೀನ ದರಿದ್ರರಿಗೆ ಸಹಾಯ ಪರೋಪಕಾರ ಮುಂತಾದವುಗಳನ್ನು ಯಾವಾಗಲೂ ಮಾಡುತ್ತಲೇ ಇರಬೇಕು. ನೀತಿ ನಿಯಮನಿಷ್ಠನಾಗಿಯೇ ರಾಜ್ಯವನ್ನು ಶಾಸನ ಮಾಡಬೇಕು. ಭಗವನ್ನಿಷ್ಠನಾಗಿ ದಾನ ಧರ್ಮ ದೇವ ಬ್ರಾಹ್ಮಣ ಸೇವೆಯನ್ನು ಆಚರಿಸಬೇಕು.

**ಬ್ರಹ್ಮ:-** ಹೀಗೆ ಭದ್ರಕ್ರಿಯ ಬ್ರಾಹ್ಮಣನು ರಾಜನೊಡನೆ ಮಾತನಾಡುವಷ್ಟರಲ್ಲಿ ಅವನನ್ನು ಕರೆಯಲು ವೈಕುಂಠಲೋಕದಿಂದ ವಿಮಾನವು ಬಂದು ಕರೆದುಕೊಂಡು ಹೋಯಿತು. ಆದುದರಿಂದ ಹರಿಶರ್ಮನೇ, ನೀನು ಸಹ ಭಗವದಾರಾಧನೆಯನ್ನು ಮಾಡಿ ಜ್ಞಾನಿಗಳ ಸೇವೆಗೈದು ಉದ್ಧಾರ ಹೊಂದು.

**ಹರಿಶರ್ಮ:-** ಬ್ರಹ್ಮದೇವಾ, ನನ್ನ ದೇಹವೆಲ್ಲವೂ ಹಸಿವೆಯ ಉರಿಯಿಂದ ಸುಡುತ್ತಲಿದೆ. ನನ್ನ ಈ ಕ್ಷುಧೆಯ ಶಾಂತಿಯು ಯಾವುದರಿಂದ ಆಗುವುದು?

**ಬ್ರಹ್ಮ:-** ಯಾವ ದೇಹವನ್ನು ಭಕ್ಷ್ಯ ಭೋಜ್ಯಗಳ ಭೋಜನದಿಂದ ಪರಿಪುಷ್ಟಗೊಳಿಸಿದೆಯೋ, ಅದೇ ನಿನ್ನ ಶರೀರದ ಮಾಂಸವನ್ನೇ ನೀನು ತಿನ್ನು.

**ಹರಿಶರ್ಮ:-** ಸ್ವಾಮಿ ಈ ಮಲಮೂತ್ರ ತುಂಬಿದ ದೇಹದ ಮಾಂಸವನ್ನು ನಾನು ಹೇಗೆ ತಿನ್ನಲಿ? ಅದನ್ನು ನೆನೆದರೇ ನನಗೆ ಮೈ ಮುಳ್ಳೇಳುವುದು. ಅಂದ ಬಳಿಕ ಆ ನನ್ನ ದೇಹದ ಮಾಂಸವನ್ನು ನಾನು ತಿನ್ನುವುದೆಂತು? ಇದಕ್ಕೆ ಏನಾದರೂ ಉಪಾಯವಿದ್ದರೆ ದಯವಿಟ್ಟು ನನಗೆ ಹೇಳಿರಿ.

**ಬ್ರಹ್ಮ:-** ನಿನ್ನ ಮಗನಿಗೆ ಅನ್ನದಾನ, ಜಲದಾನ ಮಾಡಲು ಪ್ರೇರಿಸು. ಅದರಿಂದ ನಿನಗೆ ಯಥೇಚ್ಛ ಆಹಾರವು ಇಲ್ಲಿ ದೊರೆಯುವದು.

ಆಗ ಆ ಹರಿಶರ್ಮನು ತನ್ನ ಮಗನ ಸ್ವಪ್ನದಲ್ಲಿ ತನ್ನ ದುರವಸ್ಥೆಯನ್ನೆಲ್ಲ ಹೇಳಿ ಅನ್ನದಾನ, ಜಲದಾನ ಮಾಡಲು ಆದೇಶ ನೀಡಿದ.

ಪಿತೃಭಕ್ತನಾದ ಆ ಹರಿಶರ್ಮನ ಮಗನು ತಂದೆಯ ಈ ಸ್ವಪ್ನ ಸಂದೇಶವನ್ನು ಕೇಳಿ ದೊಡ್ಡ ಪ್ರಮಾಣದಲ್ಲಿಯೇ ಅನ್ನದಾನ ನಡೆಸಿದ. ಗೋದಾನ, ಭೂದಾನ, ಸುವರ್ಣದಾನ ಎಲ್ಲದರ ದಾನಗಳನ್ನು ತಂದೆಯ ಹೆಸರಿನಿಂದ ನೀಡಿದ.

ಇದರಿಂದ ಆ ಹರಿಶರ್ಮನಿಗೆ ತಾನಿದ್ದ ದಿವ್ಯಲೋಕದಲ್ಲಿ ಯಥೇಚ್ಛವಾಗಿ ಅನ್ನಪಾನಾದಿಗಳು ದೊರೆತವು. ಹೀಗೆ ಅಸಂಖ್ಯ ವರ್ಷಗಳವರೆಗೆ ಅಮುಕ್ತ ಸ್ಥಾನದಲ್ಲಿದ್ದು ಮಗನು ಮಾಡಿದ ದಾನದ ಪ್ರಭಾವದಿಂದ ವಿಷ್ಣು ಮಂದಿರಕ್ಕೆ ಪಯಣಿಸಿದ.

ಆದುದರಿಂದ ಪ್ರತಿಯೊಬ್ಬ ಮಾನವನು ಎಲ್ಲ ವಿಧವಾದ ದಾನ ಧರ್ಮಗಳನ್ನು ತನ್ನ ಶಕ್ತ್ಯಾನುಸಾರ ಮಾಡಬೇಕು. ಅದರಿಂದ ನಿರಂತರ ನಾರಾಯಣನ ಸನ್ನಿಧಾನದಲ್ಲಿ ನೆಲೆಸುವ ಮಹಾಭಾಗ್ಯವು ಅಂಥವನಿಗೆ ಲಭಿಸುವುದು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ ಕಾಲು ತೊಳೆದ ನೀರಿನಿಂದ ನಾಯಿಗೆ ಮುಕ್ತಿ ಎಂಬ ಇಪ್ಪತ್ತೊಂದನೇಯ ಅಧ್ಯಾಯ ಮುಗಿದುದು*

—o—

## ಏಕಾದಶಿಯ ಶ್ರೇಷ್ಠತ್ವ

ಅಧ್ಯಾಯ - ೨೨

**ಜೈಮಿನಿ:-** ಏಕಾದಶಿಯು ಎಲ್ಲ ತಿಥಿಗಳಿಗಿಂತ ಏಕೆ ಶ್ರೇಷ್ಠ? ಅದರ ವಿಧಿ ಏನು? ಅದನ್ನು ಯಾವಾಗ ಮಾಡಬೇಕು? ಅದರ ಫಲ ಏನು?

**ವೇದವ್ಯಾಸ:-** ಪೂರ್ವ ಕಾಲದಲ್ಲಿ ಒಂದು ದಿನ ಶ್ರೀಹರಿಯು ಗರುಡಾರೂಢನಾಗಿ ಯಮಲೋಕಕ್ಕೆ ಆಗಮಿಸಿದ. ಅಲ್ಲಿ ತಮ್ಮ ಜನ್ಮಾಂತರದ ದುರಿತ ದುಷ್ಕರ್ಮಗಳಿಂದ ನರಕದಲ್ಲಿ ಬಿದ್ದು ನರಳಿ ನೊಂದು ನವೆದು ನೋವುಗಳಿಂದ ವಿಲಿವಿಲಿ ಒದ್ದಾಡುತ್ತಲಿರುವ ಪಾಪಿ ಜೀವಿಗಳನ್ನು ಕಂಡು ಭಗವಂತನಿಗೆ ಕರುಣೆ ಬಂದಿತು. ದಯಾಸಿಂಧುವಾದ ಆ ಶ್ರೀಹರಿಯು ಎಲ್ಲ ಜನರ ಉದ್ಧಾರಕ್ಕಾಗಿ ಏಕಾದಶಿ ತಿಥಿಯನ್ನು ನಿರ್ಮಾಣ ಮಾಡಿದ. ಅವನ ಆದೇಶದಂತೆ ಅವನ ಮುಖದಿಂದಲೇ ಏಕಾದಶಿಯ ಮಹಿಮೆಯನ್ನು ಕೇಳಿ ಅಂದು ಉಪವಾಸ ಮಾಡಿ ಜಾಗರ ಹರಿಧ್ಯಾನ ಮುಂತಾದ ಏಕಾದಶಿ ವ್ರತದ ವಿಧಿ ವಿಧಾನಗಳನ್ನೆಲ್ಲ ಸರಿಯಾಗಿ ಆಚರಿಸಿ ಪಾಲಿಸಿ ಎಲ್ಲ ಪಾಪಿಗಳೂ ನರಕದಿಂದ ಉದ್ಧೃತರಾಗಿ ಸ್ವರ್ಗಲೋಕಕ್ಕೆ ತೆರಳಿದರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಏಕಾದಶಿಯ ಶ್ರೇಷ್ಠತ್ವ ಎಂಬ ಇಪ್ಪತ್ತೆರಡನೇಯ ಅಧ್ಯಾಯ ಮುಗಿದುದು*



## ಕೋಚರಸ ಎಂಬ ಅರಸ ಮತ್ತು ಅವನ ಪಟ್ಟದರಸಿಯಾದ ಸುಪ್ರಜ್ಞೆಯರ ಪೂರ್ವಜನ್ಮದ ವೃತ್ತಾಂತ

ಅಧ್ಯಾಯ - ೨೩

**ವೇದವ್ಯಾಸ:-** ಪೂರ್ವಕಾಲದಲ್ಲಿ ಕೋಚರಸ ಎಂಬ ಹರಿಭಕ್ತನಾದ ರಾಜನು ಇದ್ದ. ಅವನ ಪಟ್ಟದರಸಿಯಾದ ಸುಪ್ರಜ್ಞೆ ಏಕಾದಶಿ ವ್ರತವನ್ನು ತಪ್ಪದೇ ಪಾಲಿಸುತ್ತಲಿದ್ದಳು. ಅದರಿಂದ ಅವಳಿಗೆ ಜನ್ಮಾಂತರದ ಸ್ಮರಣೆಯು ಉಳಿದಿತ್ತು. ಒಂದು ದಿನ ಆ ಮಹಾರಾಜನು ತನ್ನ ಮಹಿಷಿಯಾದ ಸುಪ್ರಜ್ಞೆಯೊಂದಿಗೆ ದಶಮೀ ದಿನ ಒಪ್ಪತ್ತು ಊಟ ಮಾಡಿ ಏಕಾದಶಿ ಪೂರ್ಣ ಉಪವಾಸವಿದ್ದು ಅಂದು ರಾತ್ರಿ ಜಾಗರವನ್ನು ಮಾಡಲು ಸಿದ್ಧನಾಗಿದ್ದ. ಇದೇ ವೇಳೆಯಲ್ಲಿ ಶೌರಿ ಎಂಬ ಒಬ್ಬ ಬ್ರಾಹ್ಮಣ ಅವನ ಜಾಗರ ಮಂಟಪಕ್ಕೆ ಆಗಮಿಸಿದ. ಅವನಿಗೆ ಅರ್ಘ್ಯಪಾದ್ಯಾದಿಗಳಿಂದ ಪೂಜೆ ಮಾಡಿ ಮಹಾರಾಜ ಹಾಗೂ ಮಹಾರಾಣಿಯರು ಭಗವಂತನ ಗುಣಗಾಯನ ಮಾಡುತ್ತ ಸಂಗೀತ ಸೇವೆ ನೃತ್ಯಸೇವೆಗಳನ್ನು ಸಲ್ಲಿಸಿದರು. ಅದನ್ನು ನೋಡಿ ಸಂತುಷ್ಟನಾದ ಆ ಶೌರಿದ್ವಿಜನು ಆ ರಾಜ ದಂಪತಿಗಳಿಗೆ ನಿಮಗೆ ಇಂಥ ಸದ್ಬುದ್ಧಿಯು ಹುಟ್ಟಲು ಏನು ಕಾರಣ? ಎಂದು ಕೇಳಿದ.

ಆಗ ಆ ಶೌರಿವಿಪ್ರನ ಪ್ರಶ್ನೆಗೆ ಸುಪ್ರಜ್ಞೆಯು ಮಂದಹಾಸ ಮಾಡಿ ನಸುನಗುತ್ತ ಉತ್ತರಕೊಟ್ಟಳು. ''ಪೂಜ್ಯರೇ, ನಾವು ಪೂರ್ವಜನ್ಮದಲ್ಲಿ ಮಹಾಪಾಪಿಗಳು ಆಗಿದ್ದೆವು.

ಏಕಾದಶಿಯ ಪ್ರಭಾವದಿಂದ ಪಾಪದಿಂದ ಮುಕ್ತರಾಗಿ ಇಂಥ ರಾಜಕುಲದಲ್ಲಿ ಜನಿಸಿದ್ದೇವೆ. ನಮಗೆ ಜನ್ಮಾಂತರದ ಸ್ಮರಣೆಯು ಅವಿಕಲವಾಗಿ ಉಳಿದಿರುತ್ತದೆ.

ನಾನು ಹಿಂದಿನ ಜನ್ಮದಲ್ಲಿ ಒಬ್ಬ ವೇಶ್ಯಾಸ್ತ್ರಿ ಆಗಿದ್ದೆ. ಕಾಮ ಕೇಳೀ ಕಲೆಯಲ್ಲಿ ನನ್ನಂಥ ಕುಶಲರು ಅಂದು ಕಾಮಿನೀ ಕುಲದಲ್ಲಿಯೇ ಇರಲಿಲ್ಲ. ಈ ನನ್ನ ಪತಿಯು ನಿತ್ಯೋದಯ ಎಂಬ ಹೆಸರಿನ ದುರಾಚಾರಿ ಶೂದ್ರನಾಗಿದ್ದ. ಮಹಾಕ್ರೂರ. ಪರಸ್ತ್ರೀ, ಪರದ್ರವ್ಯ, ಪರದ್ರೋಹ ಇವು ಮೂರು ಅವನಿಗೆ ಅಂಟಿದ ಮೂರು ವ್ಯಸನಗಳು. ಮಿತ್ರಘಾತಕನೂ ಸೆರೆಗುಡುಕನೂ ಆದ ಇವನನ್ನು ಎಲ್ಲ ಜಾತಿ ಬಾಂಧವರೂ ಮನೆ ಬಿಟ್ಟು ಹೊರಗೆ ಹಾಕಿದರು. ದರಿದ್ರನಾದರೂ ಈ ನಿತ್ಯೋದಯ ಬಹು ಸುಂದರನಾಗಿದ್ದ. ಅವನ ರೂಪದಿಂದ ಮುಗ್ಧಳಾದ ನಾನು ಅವನನ್ನು ಕೂಡಿಕೊಂಡು ರತಿರಸಾಸಕ್ತಳಾಗಿ ಬಹುವರ್ಷ ಬಾಳುವೆ ಮಾಡಿದೆ.

ಮುಂದೆ ನನಗೆ ವಯಸ್ಸು ಆಯಿತು. ರೋಗದಿಂದ ಪೀಡಿತಳಾಗಿ ಒಂದು ಏಕಾದಶಿ ದಿನ ನಾನು ಹಾಸಿಗೆ ಹಿಡಿದಿದ್ದೆ. ಭಯಂಕರ ಜ್ವರದಿಂದ ದೇಹವೆಲ್ಲವೂ ಕಂಪಿಸುತ್ತಿತ್ತು. ಅನ್ನ ನೀರು ಯಾವುದೂ ಒಳಗೆ ಇಳಿಯಲಿಲ್ಲ. ಆಗ ನನ್ನ ಈ ಶೂದ್ರಪತಿಯು ಕೂಡ ನನ್ನ ಮೇಲಿನ ಅತಿ ಪ್ರೀತಿಯಿಂದ ಅನ್ನ ನೀರುಗಳನ್ನು ಬಿಟ್ಟು ಉಪವಾಸವನ್ನೇ ಮಾಡಿದ. ಜ್ವರದ ದಾಹದಿಂದ ಅಂದು ನನಗೆ ನಿದ್ದೆ ಬರಲಿಲ್ಲ. ನನ್ನ ಚಿಂತೆಯಿಂದ ಅವನಿಗೂ ನಿದ್ದೆ ಬಾರದೇ ಇವನಿಗೂ ಜಾಗರವಾಯಿತು. ಅಂದು ರಾತ್ರಿ ನಾನು ಎದ್ದು ದೇವರ ಮುಂದೆ ದೀಪ ಹಚ್ಚಿಟ್ಟು ನಾರಾಯಣ ಹರೇ ಕೃಷ್ಣ ರಕ್ಷ ಮಾಂ ಎಂದು ಒರಲುತ್ತ ಪತಿಯೊಡನೆ ಭಗವನ್ನಾಮಸ್ಮರಣೆಗೈಯುತ್ತಲೇ ಮರಣ ಹೊಂದಿದೆ. ಅದರಿಂದ ಮರಣಾನಂತರ ಯಮಪಟ್ಟಣದಲ್ಲಿ ಯಮದೇವರು ತನ್ನ ಅಸ್ಥಾನದಲ್ಲಿ ನಮಗೆ ಸ್ವಾಗತ ಸತ್ಕಾರ ಮಾಡಿದ. ಮೃಷ್ಟಾನ್ನ ಭೋಜನ ಮಾಡಿಸಿ ನಮ್ಮ ಅಪೇಕ್ಷೆಯಂತೆ ಏಕಾದಶಿ ವ್ರತದ ತ್ಯಾಗಾನುಷ್ಠಾನ ಫಲಗಳಾದ ನರಕ ಹಾಗೂ ಸ್ವರ್ಗಾದಿ ಲೋಕಗಳನ್ನು ತೋರಿಸಿ ಶ್ರೀಹರಿಯ ಸನ್ನಿಧಾನದಲ್ಲಿ ನಮ್ಮನ್ನು ತಲುಪಿಸಿದ. ಅನಂತರ ಆ ಭಗವಂತನ ಅನುಗ್ರಹದಿಂದ ನಾವು ಶುದ್ಧವಾದ ರಾಜವಂಶದಲ್ಲಿ ಜನಿಸಿ, ಈಗಲೂ ಮೋಕ್ಷ ಪ್ರಾಪ್ತಿಗಾಗಿ ಆ ಏಕಾದಶೀ ವ್ರತ ಜಾಗರಾದಿಗಳನ್ನು ವಿಧಿಪೂರ್ವಕವಾಗಿ ಆಚರಿಸುತ್ತಲಿದ್ದೇವೆ.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಕೋಚರಸ ಎಂಬ ಅರಸ ಮತ್ತು ಅವನ ಪಟ್ಟದರಸಿಯಾದ ಸುಪ್ರಜ್ಞೆಯರ ಪೂರ್ವಜನ್ಮದ*
*ವೃತ್ತಾಂತ ಎಂಬ ಇಪ್ಪತ್ತಮೂರನೇಯ ಅಧ್ಯಾಯ ಮುಗಿದುದು*

—o—

**ಜೈಮಿನಿ:**-ಗುರುಗಳೇ ಎಲ್ಲ ಪಾಪಗಳನ್ನು ಪರಿಹರಿಸುವ ತುಳಸಿಯ ಮಹಿಮೆಯನ್ನು ಹೇಳಿರಿ.

**ವೇದವ್ಯಾಸ:**- ಇಂದ್ರಾದಿ ಸರ್ವದೇವತೆಗಳಿಂದಲೂ ಪೂಜಿಸಲ್ಪಡುವ ತುಳಸಿಯು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಚತುರ್ವಿಧ ಪುರುಷಾರ್ಥ ಪ್ರದವಾಗಿರುತ್ತದೆ.

**ಜೈಮಿನಿ:**- ಅತಿಥಿ ಪೂಜೆಯ ಮಹತ್ವವನ್ನು ಹೇಳಿರಿ.

**ವ್ಯಾಸ:**- ಪೂರ್ವಕಾಲದಲ್ಲಿ ಪವಿತ್ರ ಎಂಬ ಒಬ್ಬ ಬ್ರಾಹ್ಮಣ ಆರ್ಯಾವರ್ತದಲ್ಲಿ ಇರುತ್ತಿದ್ದ. ಸದ್ಬುದ್ಧಿಯ ಆ ಸದ್ ಬ್ರಾಹ್ಮಣನಿಗೆ ಬಹುಲಾ ಎಂಬ ಪರಮ ಪತಿವ್ರತೆಯಾದ ದೊಡ್ಡ ಕುಲದಲ್ಲಿ ಹುಟ್ಟಿದ ಮಡದಿಯು ಇದ್ದಳು.

ಅದೇ ಊರಲ್ಲಿ ಅನಾಯಂತ ಪತಿ ಎಂಬ ಬೇರೊಬ್ಬ ಬ್ರಾಹ್ಮಣನು ಇದ್ದ. ಈ ಪವಿತ್ರನಿಗೂ, ಅನಾಯಂತಪತಿಗೂ ಒಳ್ಳೆ ಘನಿಷ್ಠವಾದ ಸ್ನೇಹವು ಬೆಳೆಯಿತು. ಒಂದು ದಿನ ಅವರಿಬ್ಬರೂ ಏಕಾಸನದಲ್ಲಿ ಪ್ರೀತಿಯಿಂದ ಮಂಡಿಸಿದ್ದರು. ಅದೇ ವೇಳೆಯಲ್ಲಿ ಮಹಾತೇಜಸ್ವಿಗಳಾದ ಲೋಮಶ ಮುನಿಗಳು ಅಲ್ಲಿಗೆ ಬಂದರು. ಅವರನ್ನು ಕಂಡ ಕೂಡಲೇ ಇಬ್ಬರೂ ಭಕ್ತಿಯಿಂದ ಅವರ ಪೂಜೆ ಮಾಡಿ ಅತಿಥಿಪೂಜೆಯ ಮಾಹಾತ್ಮ್ಯವನ್ನು ಹೇಳಲು ಕೇಳಿಕೊಂಡರು.

**ಲೋಮಶ:**- ಆಕಸ್ಮಿಕವಾಗಿ ಮನೆಗೆ ಬಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಚಂಡಾಲ ಯಾರೇ ಆಗಲಿ ಸಾಕ್ಷಾತ್ ವಿಷ್ಣು ಪ್ರತೀಕ ಎಂದು ಭಾವಿಸಿ ಅವರಿಗೆ ಸ್ವಾಗತ ಸತ್ಕಾರ ಮಾಡಿ ಇಚ್ಛಾಭೋಜನವನ್ನು ಮಾಡಿಸಬೇಕು. ಅತಿಥಿ ಪೂಜೆ ಮಾಡದಿರುವ ಮನುಷ್ಯನಿಗೆ ಸದ್ಗತಿಯು ಆಗಲಾರದು.

ಹಿಂದೆ ದ್ವಾಪರಯುಗದಲ್ಲಿ ಜ್ಞಾತಿಧರ್ಮ ಎಂಬ ಹೆಸರಿನ ಓರ್ವ ರಾಜನು ತನ್ನ ಪತ್ನಿಯಾದ ಶ್ರೀವಲ್ಲಭೆಯೊಂದಿಗೆ ಸೌರಾಷ್ಟ್ರದೇಶದಲ್ಲಿ ನೆಲೆಸಿದ್ದ. ಆ ಕಾಲದಲ್ಲಿ ಭೀಕರವಾದ ಒಂದು ಕ್ಷಾಮವು ಆ ದೇಶದಲ್ಲಿ ತಲೆದೋರಿತು. ಹನ್ನೆರಡು ವರ್ಷ ಮಳೆಯೇ ಆಗಲಿಲ್ಲ. ಆ ಕಾಲದಲ್ಲಿ ಜ್ಞಾನಭದ್ರ ಎಂಬ ಓರ್ವ ಮಹಾಯೋಗಿಯಿದ್ದ. ಅವನ ಮಡದಿ ಮಕ್ಕಳು ಹಸಿವೆಯಿಂದ ಕಸಿವಿಸಿ ಪಡುತ್ತಿರುವದನ್ನು ಕಂಡು ಮರುಕಗೊಂಡು ಅವನು ಎಲ್ಲಿಯಾದರೂ ಹೋಗಿ ಏನಾದರೂ ಆಹಾರ ಪದಾರ್ಥವನ್ನು ಹುಡುಕಿಕೊಂಡು ಬರಬೇಕು ಎಂದು ಸಂಕಲ್ಪಿಸಿ ಪರ್ವತ ಪ್ರದೇಶಕ್ಕೆ ಹೋದ. ಆ ವನಪ್ರಾಂತದಲ್ಲಿ ಅವನಿಗೆ ಒಂದು ಸೊಂಡಿಗುಂಬಳ ಕಾಯಿಯು ದೊರಕಿತು. ಅದರಿಂದ ಆ ಜ್ಞಾನಭದ್ರನಿಗೆ ಪರಮ ಸಂತೋಷವಾಗಿ ಅದನ್ನು ತೆಗೆದುಕೊಂಡು ತನ್ನ ಮನೆಗೆ ಹೋದ. ಒಮ್ಮೆಲೇ ಅವನು ಮನೆ ಸೇರಿದ ಕೂಡಲೇ ಧಾರಾಕಾರವಾಗಿ ಮಳೆಸುರಿಯಹತ್ತಿತು. ಈ ಸಂದರ್ಭದಲ್ಲಿ ಒಬ್ಬ ವನೇಚರನು ಚಳಿಯಿಂದ ನಡುಗುತ್ತ ಅವರ ಮನೆಗೆ ಬಂದ. ಅವನನ್ನು ನೋಡಿ ಆ ಜ್ಞಾನಭದ್ರಯೋಗಿಯು ಸಂತೋಷದಿಂದ ಸ್ವಾಗತ ಮಾಡಿ ಬಟ್ಟೆಕೊಟ್ಟು ಬೆಚ್ಚಗಿನ ಮನೆಯಲ್ಲಿ ಆಸನದ ಮೇಲೆ ಕೂಡಿಸಿದ. ಅವನ ಹೆಂಡತಿಯು ಆ ಬೂದುಗುಂಬಳದಿಂದ ಮಾಡಿದ ರಸಪಾಕವನ್ನು ಆ ಗೋಪಾಲಕನಿಗೆ ತಂದು ಬಡಿಸಿದಳು.

ಅವನಿಗೆ ಆ ಇಬ್ಬರೂ ದಂಪತಿಗಳು ತಮ್ಮ ತಮ್ಮ ಭಾಗಗಳನ್ನು ಇಡಿಯಾಗಿ ಕೊಟ್ಟು ಸಂತೋಷ ಪಡಿಸಿದರು. ಅದರಿಂದ ತೃಪ್ತನಾಗಿ ಆ ಗೊಲ್ಲ ಅತಿಥಿ ತನ್ನ ಸ್ಥಾನಕ್ಕೆ ಹೊರಟು

ಹೋದ. ಆದರೆ ಇದರಿಂದ ಆ ಜ್ಞಾನಭದ್ರ ದಂಪತಿಗಳಿಗೆ ಮಾತ್ರ ಇಪ್ಪತ್ತೊಂದನೆಯ ದಿನವೂ ಉಪವಾಸವೇ ಆಯಿತು. ಆದರಿಂದ ಅವರಿಬ್ಬರೂ ಕ್ಷುಧಾಪೀಡೆಯಿಂದ ಮರಣ ಹೊಂದಿದರು. ಮುಂದೆ ಅವರೇ ಜ್ಞಾನಧರ್ಮ ಶ್ರೀ ವಲ್ಲಭಾ ಎಂಬ ರಾಜದಂಪತಗಳಾಗಿ ಜನಿಸಿದರು. ಅವರಿಗೆ ಜಾತಿ ಸ್ಮರಣವಿದ್ದಿತು. ಅವರು ಈ ಕ್ಷಾಮಕ್ಕೆ ಅತಿಥಿ ಸೇವೆಯೇ ಪರಿಹಾರಕ ಔಷಧ ಎಂದು ವಿಶೇಷವಾಗಿ ಅತಿಥಿ ಅಗಂತುಕರಿಗೆ ಸಾರ್ವಕಾಲಿಕ ಸಾರ್ವದೇಶಿಕ ಅತಿಥ್ಯವನ್ನು ನೀಡಿದರು. ಆದರಿಂದ ಅವನ ರಾಜ್ಯದಲ್ಲಿ ಸುವೃಷ್ಟಿ ಶಾಂತಿ ಪುಷ್ಟಿ ತುಷ್ಟಿಗಳು ನಿರಂತರವಾಗಿ ನೆಲೆಗೊಂಡವು.

ಹೀಗೆ ಲೋಮಶರು ಅತಿಥಿ ಅಗಂತುಕರ ಪೂಜೆಯ ಮಹಿಮೆಯನ್ನು ಪವಿತ್ರ ಬಹುಲಾದಂಪತಿಗಳಿಗೆ ಹೇಳುತ್ತಲಿರುವಾಗಲೆ ಒಂದು ಕಪ್ಪು ಇಲಿಯು ತನ್ನ ಬಿಲದಿಂದ ಹೊರಬಿದ್ದಿತು. ಅದನ್ನು ನೋಡಿ ಪವಿತ್ರನು ಸಿಟ್ಟಿಗೆದ್ದು ಆಶ್ರಮದ ನೆಲವನ್ನೆಲ್ಲ ಆಗೆದ. ಇಲ್ಲಿಗೆ ಎಂದು ಕಲ್ಲು ಒಗೆದ. ಅದರಿಂದ ಅದು ಒದ್ದಾಡಿ ಅಲ್ಲಿಯೇ ಬಿದ್ದು ಸಾಯತೊಡಗಿತು. ಅದನ್ನು ನೋಡಿ ಪವಿತ್ರನಿಗೆ ಬಹಳ ಪಶ್ಚಾತ್ತಾಪವಾಯಿತು. ಕೂಡಲೇ ಅವನು ತನ್ನ ಕಿವಿಯಲ್ಲಿ ಇಟ್ಟ ತುಳಸೀಪತ್ರವನ್ನು ತೆಗೆದು ಆ ಇಲಿಯ ತಲೆ, ಬಾಯಿ, ಕಿವಿಗಳಿಗೆ ಹಚ್ಚಿದ. ತುಳಸೀ ಪತ್ರ ಸಂಪರ್ಕದಿಂದ ಆ ಮೂಷಕವು ಮುಕ್ತವಾಗಿ ಹರಿಮಂದಿರಕ್ಕೆ ಪಯಣಿಸಿತು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡ*
*ಲೋಮಶ ಬ್ರಾಹ್ಮಣನ ಕಥೆ ಎಂಬ ಇಪ್ಪತ್ತನಾಲ್ಕನೇಯ ಅಧ್ಯಾಯ ಮುಗಿದುದು*



## ಯುಗಧರ್ಮಪುರಾಣ ಮಹಾತ್ಮ್ಯ

ಅಧ್ಯಾಯ - ೨೫

**ವ್ಯಾಸ:-** ಕೃತ, ತ್ರೇತಾ, ದ್ವಾಪರ, ಕಲಿ ಎಂದು ನಾಲ್ಕು ಯುಗಗಳು, ಕೃತಯುಗಕ್ಕೆ ಸತ್ಯಯುಗ ಎಂತಲೂ ಕರೆಯುತ್ತಾರೆ. ಆಗ ಎಲ್ಲ ಜನರೂ ಧರ್ಮಿಷ್ಠರು. ಪರೋಪಕಾರಿಗಳು, ತ್ರೇತಾಯುಗದಲ್ಲಿ ಧರ್ಮ ಒಂದು ಪಾದ ಊನ. ದ್ವಾಪರದಲ್ಲಿ ಎರಡು ಪಾದ ಧರ್ಮ. ಕಲಿಯುಗದಲ್ಲಿ ಒಂದು ಪಾದ ಮಾತ್ರ ಧರ್ಮ. ಅಧರ್ಮ ಮೂರು ಪಾದ. ಜನರೆಲ್ಲರೂ ವಂಚಕರು ಪಾಪಿಗಳು, ಪರಾನ್ನ ಪರಸ್ತ್ರೀಲೋಲಪರು. ಆದರೆ ಈ ಕಲಿಯುಗದಲ್ಲಿ ಕೇವಲ ಹರಿಯ ನಾಮಸ್ಮರಣ ಮಾತ್ರ ಮಾಡಿದರೂ ಸಾಕು ಅವರಿಗೆ ಕಲಿ ಬಾಧಿಸುವದಿಲ್ಲ. ಅತ್ಯಲ್ಪ ಪುಣ್ಯಫಲಪ್ರಾಪ್ತಿ ಆಗುವುದು. ಆದುದರಿಂದ ಮಾನವರು ಅತ್ಯಲ್ಪ ಪುಣ್ಯ ಮಾಡಿ ದೇವರಿಗೆ ಸಮರ್ಪಿಸಿದರೂ ಅಪರಿಮಿತ ಪುಣ್ಯವು ಲಭಿಸುವುದು. ಈ ಗುಹ್ಯತರವಾದ ವ್ಯಾಸಪ್ರೋಕ್ತವಾದ ಪುರಾಣವನ್ನು ಪಠಣ ಶ್ರವಣ ಮಾಡಿದವರು ಮುಕ್ತಿಯನ್ನು ಹೊಂದುವರು.

*ಇತಿ ಪದ್ಮ ಮಹಾಪುರಾಣ ಭಾಗ-೪ರ ಕ್ರಿಯಾಯೋಗಸಾರ ಖಂಡದಲ್ಲಿ*
*ಯುಗಧರ್ಮಪುರಾಣಮಹಾತ್ಮ್ಯ ಎಂಬ ಇಪ್ಪತ್ತೈದನೇಯ ಅಧ್ಯಾಯ ಮುಗಿದುದು*

**ಇತಿ ಪದ್ಮ ಮಹಾಪುರಾಣ ಸಮಾಪ್ತಂ**

*ಸರ್ವೇಜನಾಃ ಸುಖಿನೋ ಭವಂತು*
*ಓಂ ಶಾಂತಿಃ ಶಾಂತಿಃ ಶಾಂತಿಃ*



